

ತಿಂಗಳ ಪತ್ರಿಕೆ

# ಹೊಸತು

ನಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೬ ಜನವರಿ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೪೮೦೯, ೨೨೨೦೩೫೮೦
ಫ್ಯಾಕ್ಸ್: ೩೦೫೭೪೮೦೩೩
e-mail : nkp@bgl.vsnl.net.in
website : www.navakarnatakabooks.com


# ಸಂಪಾದಕೀಯ

'ಹೊಸತು' ಏಳನೆಯ ವರ್ಷದಲ್ಲಿ ಮುನ್ನಡೆಯುತ್ತಿದೆ. ಇದು ಪತ್ರಿಕೆಯ ಆರನೆಯ ವಿಶೇಷ ಸಂಚಿಕೆ. ಇದರೊಟ್ಟಿಗೆ ಈ ಬಾರಿ ಹದಿನೆಂಟು 'ಹೊಸತು ವಾಚಿಕೆ'ಗಳನ್ನೂ ಹೊರತರಲಾಗುತ್ತಿದೆ. ಮೊದಲ ಐದು ವರ್ಷಗಳ ಅರವತ್ತು ಸಂಚಿಕೆಗಳಿಂದ ಆಯ್ದ ಬರಹಗಳನ್ನು ವಿಷಯಾನುಸಾರ ಹೀಗೆ ಸಂಕಲನ ರೂಪದಲ್ಲಿ ಪ್ರಕಟಿಸುತ್ತಿರುವುದು ಓದುಗರಿಗೆ ಹಿಡಿಸುತ್ತದೆಯೆಂಬ ಭಾವನೆ ನಮ್ಮದು. ಪುಸ್ತಕಗಳಲ್ಲಿ ಅಡಕಗೊಳಿಸುವುದರ ಮೂಲಕ ಆಯಾ ಬರಹಗಳನ್ನು ಅಗತ್ಯವಿದ್ದಾಗ ಸುಲಭವಾಗಿ ಗಮನಿಸಲು ಅನುಕೂಲವನ್ನು ಕಲ್ಪಿಸಲಾಗಿದೆ. ಆಸಕ್ತರು ಇದರ ಪೂರ್ಣಪ್ರಯೋಜನ ಪಡೆಯುತ್ತಾರೆಂದು ಆಶಿಸಲಾಗಿದೆ.

ಕರ್ನಾಟಕದ ಏಕೀಕರಣವಾಗಿ ಐವತ್ತು ವರ್ಷಗಳು ಸಂದಿವೆ. ರಾಜ್ಯವು 'ಸುವರ್ಣ ಸಂಭ್ರಮ'ದಲ್ಲಿದೆ. ಅದೆಷ್ಟೋ ಕೋಟಿಗಳನ್ನು ಖರ್ಚು ಮಾಡಿ ಸರ್ಕಾರವು ಕೆಲವು ಯೋಜನೆಗಳನ್ನು ಹಮ್ಮಿಕೊಳ್ಳಲಿದೆಯೆಂದು ವರದಿಯಾಗಿದೆ. ಶಾಶ್ವತವಾಗಿ ನಿಲ್ಲುವಂತಹ ಯಾವುದಾದರೂ ಸಾರ್ವಜನಿಕ ಉಪಯೋಗಿ ಮಾದರಿಗಳಾಗಿ ಅವು ಹೊಮ್ಮಲೆಂದು ಆಶಿಸಬಹುದಾಗಿದೆ. ಯಥಾಪ್ರಕಾರ ಕೆಲವು ಉತ್ಸವಗಳನ್ನು ನಡೆಸಿ ತೃಪ್ತರಾಗುವುದನ್ನು ಬಿಟ್ಟು ಆತ್ಮಾವಲೋಕನದ ಮೂಲಕ ಮುಂದಿನ ಬೆಳವಣಿಗೆಗಳ ಸಾಧ್ಯತೆಗಳನ್ನು ಗುರುತಿಸಿ ಅವುಗಳ ಸಾಫಲ್ಯಕ್ಕಾಗಿ ಶ್ರಮಿಸುವ ಕ್ರಿಯಾಶೀಲತೆ ನಾವಿಂದು ರೂಢಿಸಿಕೊಳ್ಳಬೇಕಾಗಿದೆ. ಈಗಾಗಲೆ ಲಭ್ಯವಿರುವ ಸಾಹಿತ್ಯ ಕೃತಿಗಳನ್ನು ಮತ್ತೆ ಪ್ರಕಟಿಸುವ ಕೆಲಸವನ್ನು ಸುವರ್ಣ ಸಂಭ್ರಮದ ಭಾಗವಾಗಿ ಮಾಡಬೇಕಾಗಿಲ್ಲ. ಅಂತೆಯೇ ಕಾರ್ಯಕ್ರಮಗಳ ಉದ್ಘಾಟನೆ-ಸಮಾರೋಪಗಳಿಗಾಗಿ ಲಕ್ಷಗಟ್ಟಲೆ ಹಣವನ್ನು ಚೆಲ್ಲುವ ಶುದ್ಧ ಮೂರ್ಖತನಕ್ಕೆ ಸುವರ್ಣ ಕರ್ನಾಟಕದಲ್ಲಿ ಅವಕಾಶವಿರಕೂಡದು. ನಮ್ಮ ಐವತ್ತು ವರ್ಷಗಳ ಸಾಧನೆ ಅಷ್ಟೇನೂ ಶೋಭಾಯಮಾನವಾಗಿಲ್ಲವೆಂಬುದು ಶಿಕ್ಷಣ-ಆರೋಗ್ಯ-ಉದ್ಯಮ-ಸಾರಿಗೆ-ಕೃಷಿ-ವಸತಿ-ನೀರಾವರಿ, ಹೀಗೆ ಯಾವ ಕ್ಷೇತ್ರವನ್ನು ವಿಶ್ಲೇಷಿಸಿಕೊಂಡರೂ ಮನದಟ್ಟಾಗುತ್ತದೆ. ರಾಜ್ಯದ ಎಲ್ಲೆಡೆ ರಸ್ತೆಗಳೂ ಹೀನಾಯ ಸ್ಥಿತಿಯಲ್ಲಿವೆ. ಇವೆಲ್ಲಕ್ಕೂ ನಾವು ಬೇಕಾದಷ್ಟು ಹಣ ತೊಡಗಿಸಿದ್ದೇವಾದರೂ ಪರಿಸ್ಥಿತಿ ಹೀಗೇಕಿದೆ ಎಂಬುದು ಅಧಿಕಾರದಲ್ಲಿರುವವರಿಗೆ ತಿಳಿದಿದೆ. ಸಾಮಾನ್ಯವಾಗಿ ಎರಡು ಕಾರಣಗಳನ್ನು ಸುಲಭವಾಗಿ ಗ್ರಹಿಸಬಹುದು : (ಅ) ಯೋಜನೆಗಳನ್ನು ಸಿದ್ಧಪಡಿಸಿ ಆಸ್ಥೆಯಿಂದ ಅನುಷ್ಠಾನಗೊಳಿಸದಿರುವುದು, ಮತ್ತು (ಆ) ಖರ್ಚು ಮಾಡಿದ ಹಣದಲ್ಲಿ ಬಹುಪಾಲನ್ನು ತಿಮಿಂಗಿಲಗಳು ನುಂಗಿ ಹಾಕಿರುವುದು. ಸುವರ್ಣ ಕರ್ನಾಟಕದಲ್ಲಿ ಕನಿಷ್ಠ ಇವೆರಡರ ಪರ್ಯಾಯಕ್ಕೆ ನಿಷ್ಠೆಯಿಂದ ನಡೆದುಕೊಳ್ಳುವುದು ನಮ್ಮ ಸಂಭ್ರಮಕ್ಕೆ ಸಮರ್ಥನೆ ಒದಗಿಸುತ್ತದೆ.

ಸಾಂಸ್ಕೃತಿಕ ಕ್ಷೇತ್ರದಲ್ಲಿ ಕರ್ನಾಟಕವು ಕಳೆದ ಐವತ್ತು ವರ್ಷಗಳಲ್ಲಿ ದಾಪುಗಾಲುಗಳನ್ನಿಟ್ಟದ್ದೆಷ್ಟು, ಅಡಚಣೆಗಳನ್ನು ಎದುರಿಸಿದ್ದೆಷ್ಟು, ಎಂಬಿತ್ಯಾದಿ ಅಂಶಗಳನ್ನು ಕುರಿತಂತೆ ಆಯಾ ಕ್ಷೇತ್ರಗಳಲ್ಲಿ ಪರಿಣತಿ ಹೊಂದಿರುವವರಿಂದ ವಿಮರ್ಶಾ ಲೇಖನಗಳನ್ನು ಪಡೆದು ಈ ಸಂಚಿಕೆಯಲ್ಲಿ ಪ್ರಕಟಿಸಲಾಗಿದೆ. ಈ ಯೋಜನೆಯನ್ನು ಕಾರ್ಯಗತಗೊಳಿಸಲು ಡಾ|| ವಿಜಯಾ ಅವರು ನೀಡಿರುವ ಸಹಕಾರವನ್ನು ಕೃತಜ್ಞತೆಯಿಂದ ನೆನೆಯುತ್ತೇವೆ. ಅಂತೆಯೇ ಪ್ರಜಾಪ್ರಭುತ್ವಕ್ಕೆ ಇಂಬು ಕೊಡುವ ಕೆಲವು ಚಳವಳಿಗಳ ಬಗೆಗಿನ ಚಿಂತನೆಯೂ ಈ ಸಂಚಿಕೆಯಲ್ಲಿದೆ. ಅದನ್ನು ಸಂಯೋಜಿಸಿದ ಶ್ರೀ ರಾಮಲಿಂಗಪ್ಪ ಟಿ. ಬೇಗೂರು ಅವರಿಗೂ ನಮ್ಮ ಕೃತಜ್ಞತೆ ಸಲ್ಲುತ್ತದೆ. ಈ ವಿಷಯಗಳ ಪರಿಧಿಗೆ ಬರುವ ಬೇರೆ ಆಯಾಮಗಳನ್ನು ಮುಂದಿನ ಸಂಚಿಕೆಗಳಲ್ಲಿ ಇನ್ನೂ ವಿಶದವಾಗಿ ಚರ್ಚಿಸಲು ಓದುಗರ ಹಾಗೂ ಲೇಖಕರ ಸಹಕಾರವನ್ನು ನಿರೀಕ್ಷಿಸುತ್ತೇವೆ. ಎಂದಿನಂತೆ ಈ ವರ್ಷದ ಸಂಚಿಕೆಯೂ




**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨



ತಿಂಗಳ ಪತ್ರಿಕೆ
ಹೊಸತು
ನಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

# ಸಂಪಾದಕೀಯ

ಮೌಲಿಕವಾದ ಬರಹಗಳಿಂದ ಹೊರಬರಲು ಸಹಾಯ ನೀಡಿರುವ ನಮ್ಮೆಲ್ಲ ಲೇಖಕರಿಗೆ, ಓದುಗರಿಗೆ, ಜಾಹಿರಾತುದಾರರಿಗೆ ಮತ್ತು ನವಕರ್ನಾಟಕದ ಎಲ್ಲ ಗೆಳೆಯರಿಗೆ 'ಹೊಸತು' ತನ್ನ ವಿನಮ್ರ ವಂದನೆಗಳನ್ನು ಸಲ್ಲಿಸುತ್ತದೆ.

* * *

ಕಳೆದ ವರ್ಷವು ಭಾರತದ ಜನಸಾಮಾನ್ಯರ ಮಟ್ಟಿಗೆ ಬಹಳ ತ್ರಾಸದಾಯಕವಾಗಿತ್ತು. ಸಮುದ್ರ ಮತ್ತು ಭೂಮಿತಾಯಿ ಭಾರಿ ಮುನಿಸಿನಿಂದ ತಮ್ಮ ವಿಸ್ಮಯಕರ ಶಕ್ತಿಯನ್ನು ಪ್ರದರ್ಶಿಸಿ ಸಾವಿರಾರು ಮಂದಿಯನ್ನು ಹತಭಾಗ್ಯರನ್ನಾಗಿಸಿದ್ದು ಯಾರ ನೆನಪಿನಿಂದಲೂ ಅಳಿಸಿಹೋಗುವಂಥದಲ್ಲ. ಅದು ಪ್ರಕೃತಿಯ ವಿಕೋಪದಿಂದ ಉಂಟಾದ ನಷ್ಟ ಮತ್ತು ವ್ಯಸನ. ಇದರ ಜೊತೆ ಸ್ವಯಂ ನಿರ್ಮಿತ ಅಪರಾಧ ಮಾಲೆಯೂ ಇದೆ. ಅದು ಜೀರುಕುಣಿಕೆ. ಅದರೊಳಕ್ಕೆ ತಲೆ ಕೊಟ್ಟು ನಿಂತರೆ ಕುಣಿಕೆ ಬಿಗಿಯುವವರು ಅಪಾರ ಉತ್ಸಾಹದಿಂದ ನಲಿದಾಡುತ್ತಾರೆ. ಪ್ರಕೃತಿ ವಿಕೋಪದ ಪ್ರಭಾವವು ದೇಶದ ಕೆಲವು ಭಾಗಗಳಿಗೆ ತಟ್ಟಿದರೆ ಈ ಕುಣಿಕೆಯಾಟವು ಇಡೀ ದೇಶವನ್ನು ವ್ಯಾಪಿಸಿ ಎಲ್ಲರನ್ನೂ ಅಧೀರರನ್ನಾಗಿಸುತ್ತದೆ. ವರ್ಷಾಂತ್ಯದಲ್ಲಿ ಪ್ರಧಾನಿ ಕೌಲಾಲಂಪುರಕ್ಕೆ ಹೋಗಿ ಆಗ್ನೇಯ ಏಷ್ಯದ ದೇಶಗಳ ನಾಯಕರೊಡನೆ ವಿಚಾರ ವಿನಿಮಯ ನಡೆಸಿದರು. ಆ ಸಂದರ್ಭದಲ್ಲಿ ಬಂದ ಎರಡು ಹೇಳಿಕೆಗಳನ್ನು ಗಮನಿಸಬೇಕು. ಒಂದು, ನಮ್ಮ ಪ್ರಧಾನಿಯದು, ಇನ್ನೊಂದು ಮಲೇಷ್ಯದ ಪ್ರಧಾನಿಯದು. ನಾಗರಿಕ ಮತ್ತು ಮಿಲಿಟರಿ ಪರಮಾಣು ಶಕ್ತಿ ಕೇಂದ್ರಗಳನ್ನು ಬೇರ್ಪಡಿಸುವ ಕ್ರಮ ಈಗಾಗಲೆ ಆರಂಭವಾಗಿದೆಯೆಂದು ನಮ್ಮ ಪ್ರಧಾನಿ ಹೇಳಿದರು. ಈ ಬೇರ್ಪಡಿಸುವಿಕೆಗೆ ಸಾವಿರಾರು ಕೋಟಿ ರೂಪಾಯಿಗಳು ಖರ್ಚಾಗುತ್ತವೆಂದು ಪರಮಾಣು ಶಕ್ತಿ ತಜ್ಞರು, ವಿಶೇಷತಃ ಹಿಂದೆ ಪರಮಾಣು ಶಕ್ತಿ ಆಯೋಗದ ಅಧ್ಯಕ್ಷರಾಗಿದ್ದವರು ಹಾಗೂ ಇಂದು ಅದೇ ಆಯೋಗದ ಮುಂಚೂಣಿಯಲ್ಲಿರುವ ಇತರ ತಜ್ಞರು, ಹೇಳಿದ್ದಾರೆ. ಅದನ್ನು ಮಾಡಬೇಕಾಗಿರುವುದು ಅಮೆರಿಕಾ ಜೊತೆ ಆಗಿರುವ ಒಪ್ಪಂದದ ತಥಾಕಥಿತ ಲಾಭಗಳನ್ನು ಪಡೆಯುವ ಉದ್ದೇಶದಿಂದ. ನಮ್ಮ ನಾಗರಿಕ ಅಣು ಸ್ಥಾವರಗಳಿಗೆ ಅಮೆರಿಕಾ ಮತ್ತು ಇತರ ಕೆಲವು ದೇಶಗಳು ಇಂಧನ ಪೂರೈಸಬೇಕಾದರೆ (ಅದಕ್ಕೆ ನಾವು ಬೇಕಾದಷ್ಟು ಹಣ ಕೊಡುತ್ತೇವೆ, ಯಾವುದೂ ಉಚಿತವಲ್ಲ) ಇಂತಹ ಬೇರ್ಪಡಿಸುವಿಕೆಯು ಅಗತ್ಯವೆನ್ನಲಾಗುತ್ತಿದೆ. ಆದರೆ ಇಂಧನ ಖಂಡಿತ ದೊರೆಯುವುದೆಂಬ ಖಾತ್ರಿ ಏನೂ ಇಲ್ಲ. ಏಕೆಂದರೆ ಅಮೆರಿಕಾದ ಶಾಸಕರು ನೀಡಬೇಕಾದ ಒಪ್ಪಿಗೆಯನ್ನಿನ್ನೂ ನೀಡಿಲ್ಲ, ಮುಂದೆ ನೀಡದೆಯೂ ಇರಬಹುದು. ಕುಣಿಕೆಯನ್ನು ಇನ್ನಷ್ಟು ಭದ್ರಪಡಿಸಿ ಆಮೇಲೆ ಅದನ್ನು ನೀಡಲು ಮುಂದೆ ಬರಬಹುದೆಂಬುದನ್ನು ಊಹಿಸಲಾಗುವುದಿಲ್ಲ. ಹತ್ತಾರು ರೀತಿಗಳಲ್ಲಿ ಸ್ವತಂತ್ರ ಭಾರತವು ಅಮೆರಿಕಾ 'ರೋಗ್' ಸರ್ಕಾರದ ತೆಕ್ಕೆಯಲ್ಲಿ ಸಿಲುಕಿಕೊಂಡು ತನ್ನ ಸಾರ್ವಭೌಮತ್ವದ ಕಳವಿನ ಬಗ್ಗೆ ಅಕ್ಷಮ್ಯವಾಗಿ ನಿರ್ಲಕ್ಷ್ಯದಿಂದ ಇರುವುದಕ್ಕೆ ಇದೊಂದು ಉದಾಹರಣೆ. ಮಲೇಷ್ಯದ ಪ್ರಧಾನಿಯ ಹೇಳಿಕೆಯು ಇದನ್ನೇ ಮಹತ್ವದ ಸ್ವಾಗತಾರ್ಹ ಬೆಳವಣಿಗೆಯೆಂದು ಶ್ಲಾಘಿಸಿದ್ದು. ''ವಿಶ್ವದ ಕೆಲವು ರಾಷ್ಟ್ರಗಳೊಡನೆ, ಪ್ರಮುಖವಾಗಿ ಅಮೆರಿಕಾದೊಡನೆ ಮತ್ತು ನೆರೆಯ ಪಾಕಿಸ್ತಾನದೊಂದಿಗೆ, ಸ್ನೇಹಯುತ ಸಂಬಂಧಗಳನ್ನು ಭಾರತವು ಹೆಚ್ಚಿಸಿಕೊಂಡಿರುವುದರಿಂದ ವಿಶ್ವದ ಶಾಂತಿ ಪ್ರಕ್ರಿಯೆಯಲ್ಲಿ ಉನ್ನತ ಸ್ಥಾನಕ್ಕೇರಲು ಭಾರತಕ್ಕೀಗ ಸಾಧ್ಯವಿದೆ'' ಎಂದು ಅಬ್ದುಲ್ಲ ಅಹ್ಮದ್ ಬದಾವಿ ಹೇಳಿರುವುದನ್ನು ಶಹಭಾಸ್‌ಗಿರಿಯೆಂದು ನಮ್ಮ ಬೆನ್ನು ತಟ್ಟಿಕೊಳ್ಳಬೇಕೋ ಅಥವಾ ತನ್ನಂತೆ ಭಾರತವೂ ಅಮೆರಿಕಾದ ಬಲೆಗೆ ಬೀಳುತ್ತಿರುವುದರಿಂದ ಮಲೇಷ್ಯದ ಪ್ರಧಾನಿ ಸಂತಸದಿಂದಿದ್ದಾರೆಂದು ವ್ಯಾಖ್ಯಾನಿಸಿಕೊಳ್ಳಬೇಕೋ ಎಂಬುದನ್ನು ನಮ್ಮ ದೇಶದ ಜನ ವಿಮರ್ಶೆ ಮಾಡಿಕೊಳ್ಳಬೇಕಾಗಿದೆ. ಕಳೆದ ಐವತ್ತು ವರ್ಷಗಳಲ್ಲಿ, ಅಥವಾ ಭಾರತವು ರಾಜಕೀಯ ಸ್ವಾತಂತ್ರ್ಯ ಗಳಿಸಿದನಂತರ, ಅಮೆರಿಕಾ ವಿಶ್ವದಲ್ಲಿ ಶಾಂತಿಯನ್ನು ಕದಡಿರುವ ನೂರಾರು ಪ್ರಕರಣಗಳಿವೆ, ಆದರೆ ಶಾಂತಿಯನ್ನು ಎತ್ತಿಹಿಡಿದು ಊರ್ಜಿತಗೊಳಿಸಿದ ಒಂದೇ ಒಂದು ನಿದರ್ಶನವೂ ಇಲ್ಲ. ಇತ್ತೀಚೆಗಷ್ಟೆ ಬೆಂಗಳೂರಿಗೆ ಬಂದಿದ್ದ ದಕ್ಷಿಣ ಆಫ್ರಿಕಾದ ಡೆಸ್ಮಂಡ್ ಟುಟು ಇದನ್ನು ವಿಸ್ತಾರವಾಗಿ ಪ್ರತಿಪಾದಿಸಿದ್ದರು. ''ಎಲ್ಲ ದೇಶಗಳವರೂ ತಮ್ಮ ಶತ್ರು ರಾಜ್ಯಗಳಲ್ಲಿ ನಾಯಕತ್ವದ ಬದಲಾವಣೆಯಾಗಬೇಕೆಂದು ತೀರ್ಮಾನಿಸಿ ಸೈನಿಕ ಬಲದಿಂದ ಮಧ್ಯಪ್ರವೇಶ ಮಾಡಹೊರಟರೆ ವಿಶ್ವದಲ್ಲಿ ಪ್ರಕ್ಷುಬ್ಧತೆ ತಾಂಡವವಾಡದೆ ಇದ್ದೀತೆ'' ಎಂದು ಕೇಳಿದ ಅವರು ಇರಾಕ್ ಮುಂತಾದ ಉದಾಹರಣೆಗಳನ್ನು ನೀಡಿದ್ದರು. ಮನಮೋಹನ ಸಿಂಗರು ಮಲೇಷ್ಯಕ್ಕೆ ತೆರಳುವ ಎರಡು ವಾರಗಳ ಮುಂಚೆ ಅಮೆರಿಕಾದ ''ಪ್ರಜಾಪ್ರತಿನಿಧಿ''ಯೊಬ್ಬ ಭಾರತಕ್ಕೆ ಬಂದಿದ್ದುದನ್ನು ನೆನೆಯಬಹುದು. ಆತನ ಹೆಸರು ಡ್ಯಾನ್ ಬರ್ಟನ್. (ಅದನ್ನು ಡ್ಯಾಮ್ ದಿಸ್ ಬರ್ಟನ್ ಎಂದು ಕರೆಯುವುದು ಹೆಚ್ಚು ಔಚಿತ್ಯಪೂರ್ಣ). ಆತ ಪಾಕಿಸ್ತಾನದ ಅಪ್ರತಿಮ ಸಮರ್ಥಕನಂತೆ. ''ಖಲೀಸ್ತಾನ್'' ರಚನೆಯಾಗಬೇಕು ಮತ್ತು ''ಖಲೀಸ್ತಾನಿ''ಗಳ ಮಾನವ ಹಕ್ಕುಗಳನ್ನು ಮಾನ್ಯಮಾಡಬೇಕೆಂದು ಹೇಳುತ್ತಿರುವುದು ಆತನ ರಾಜಕೀಯ ಪ್ರಣಾಲಿಕೆ. ಭಾರತದಲ್ಲಿದ್ದಾಗ ಆತನ ಹಲವು ಅನರ್ಘ್ಯ ರತ್ನಗಳಲ್ಲಿ ''ಕೂಡಲೆ ನಾಗರಿಕ ಮತ್ತು ಮಿಲಿಟರಿ ಪರಮಾಣು ಶಕ್ತಿ ಕೇಂದ್ರಗಳನ್ನು ಬೇರ್ಪಡಿಸಿ'' ಎಂಬುದೂ ಒಂದು. ಅವನು ಹೇಳಿದ, ನಮ್ಮ ಪ್ರಧಾನಿ ಮಾಡಲಾರಂಭಿಸಿದರು ! ನಮ್ಮ ಮಾಧ್ಯಮ ಬಂಧುಗಳು ಕೆಲವರು ಈ ಬರ್ಟನ್ನನನ್ನು ಕೇಳಿದರು : ''ಪಾಕಿಸ್ತಾನದೊಡನೆ ಕಾಶ್ಮೀರ ಪ್ರಶ್ನೆಯನ್ನು ಚರ್ಚಿಸಿ ಸಮಸ್ಯೆ ಪರಿಹರಿಸಲು ಮಧ್ಯಸ್ಥಿಕೆ ವಹಿಸುತ್ತೀರಾ ?'' ಅವರ ಹುಂಬುತನಕ್ಕೇನೆನ್ನಬೇಕು ! ಜಟಿಲಗೊಳಿಸುವುದಲ್ಲವೆ ಅವನ ಕೆಲಸ !!

ಕೌಲಾಲಂಪುರದ ಸಮೀಪದ ಹಾಂಕಾಂಗ್‌ನಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯ ದೊಡ್ಡ ಸಭೆ ಡಿಸೆಂಬರ್ ಮೂರನೆಯ ವಾರದಲ್ಲಿ ನಡೆಯಿತು; ಯಥಾಪ್ರಕಾರ ಗೋಣು ಅಲ್ಲಾಡಿಸುವುದು ಮತ್ತು ಕೈ ತಿರುಚಿಸಿಕೊಳ್ಳುವುದು ನಮ್ಮ ಸಂಪ್ರದಾಯವೆಂಬಂತೆ ಕಂಡುಬಂದಿತಾದರೂ ಸ್ವಲ್ಪ ಸ್ಥೈರ್ಯವನ್ನು ತೋರಿಸಿದ್ದು ಬ್ರೆಜಿಲ್, ದಕ್ಷಿಣ ಆಫ್ರಿಕಾ, ಮುಂತಾದ ದೇಶಗಳ ಒಡನಾಟದಿಂದ. ನಮ್ಮ ದೇಶದ ರೈತರನ್ನು ತೇಲಿಸುತ್ತೇವೋ ಮುಳುಗಿಸುತ್ತೇವೋ ಎಂಬ ಪ್ರಶ್ನೆ ಕೇವಲ ರೈತರ ಸ್ಥಿತಿಗತಿಗಳಿಗೆ ಸಂಬಂಧಿಸಿದ್ದಲ್ಲ, ಅದು ದೇಶವು ಉಳಿಯುತ್ತದೋ ಅಳಿಯುತ್ತದೋ ಎಂಬ ಪ್ರಶ್ನೆ. ಮೂಲಭೂತವಾಗಿ ಇದು ಜಾಗತೀಕರಣದ ಸ್ವಭಾವ ಮತ್ತು ಪರಿಣಾಮದ ವಿಷಯ. ಪ್ರಧಾನಿ ಮನಮೋಹನ ಸಿಂಗ್-ಚಿದಂಬರಂ-ಅಹ್ಲುವಾಲಿಯ ಜಾಗತೀಕರಣದ ಇಂದಿನ ವಂದಿಮಾಗಧ ತ್ರಿಮೂರ್ತಿಗಳು; ಅದಕ್ಕೆ ಮುಂಚೆ ವಾಜಪೇಯಿ ನೇತೃತ್ವದಲ್ಲಿ ಅದಕ್ಕೆ ಅಸಂಖ್ಯ ಭಕ್ತರಿದ್ದರು. ಲಂಡನ್ನಿನ 'ಗಾರ್ಡಿಯನ್' ಪತ್ರಿಕೆಯ ಅರ್ಥಶಾಸ್ತ್ರಜ್ಞ ಲ್ಯಾರಿ ಎಲಿಯಟ್ ಇತ್ತೀಚೆಗೆ ಜಾಗತೀಕರಣದ ಹಾಗೂ ಹಾಂಕಾಂಗ್ ಸಭೆಯ ಹಿನ್ನೆಲೆಯನ್ನು ಸಾರವತ್ತಾಗಿ ಚರ್ಚಿಸುವ ಒಂದು ಲೇಖನವನ್ನು ಪ್ರಕಟಿಸಿದ್ದ. ನಮ್ಮ ಅರ್ಥಶಾಸ್ತ್ರಜ್ಞರು ಆತನ ವಿಮರ್ಶಾ ವಿಧಾನವನ್ನು ಅಳವಡಿಸಿಕೊಂಡು ಭಾರತದ ಸನ್ನಿವೇಶ ಮತ್ತು ಭವಿಷ್ಯವನ್ನು ವಿಶ್ಲೇಷಿಸಿಕೊಟ್ಟರೆ ಉಪಕಾರವಾದೀತು. ಮೆಕ್ಸಿಕೊ ಮತ್ತು ವಿಯೆಟ್ನಾಂಗಳ ಉದಾಹರಣೆ ತೆಗೆದುಕೊಂಡು ಆತ ಅಂಕಿ-ಸಂಖ್ಯೆಗಳ ಸಹಾಯದಿಂದ ಒಂದು ದೃಢವಾದ ಸೂಚನೆ ನೀಡಿದ್ದಾನೆ; ಅದಕ್ಕೆ ಹಾರ್ವರ್ಡ್ ವಿಶ್ವವಿದ್ಯಾಲಯದ ಅರ್ಥಶಾಸ್ತ್ರಜ್ಞ ಡ್ಯಾನಿ ರೋಡ್ರಿಕ್‌ನ ಅಧ್ಯಯನಗಳ ನೆರವು ಪಡೆಯಲಾಗಿದೆ. ಮೆಕ್ಸಿಕೊ ಇರುವುದು ಅದ್ಭುತ ಅಮೆರಿಕಾಕ್ಕೆ ಆತುಕೊಂಡಂತೆ. ಅಲ್ಲಿನ ಲಕ್ಷಾಂತರ ಮಂದಿ ಅಮೆರಿಕಾದಲ್ಲಿ ನೌಕರಿ ಮಾಡುತ್ತಾರೆ. ಅಮೆರಿಕಾದೊಡನೆ ''ಮುಕ್ತ ವ್ಯಾಪಾರ ಒಪ್ಪಂದ'' ಮಾಡಿಕೊಂಡಿರುವ ಈ ದೇಶದಲ್ಲಿ ಅಮೆರಿಕಾ ಬೇಕಾದಷ್ಟು ಬಂಡವಾಳ ಹೂಡಿದೆ. ಒಪ್ಪಂದ ೧೯೯೪ರಿಂದಲೂ ಜಾರಿಯಲ್ಲಿದೆ; ಆದರೆ ಮೆಕ್ಸಿಕೊ ಆರ್ಥಿಕವಾಗಿ ಶೇಕಡ ಒಂದರಷ್ಟು ವಾರ್ಷಿಕ ಅಭಿವೃದ್ಧಿಯನ್ನು

**ಓದುಗರಿಗೆ, ಲೇಖಕರಿಗೆ,**
**ಜಾಹಿರಾತುದಾರರಿಗೆ, ಹಿತೈಷಿಗಳಿಗೆ**
**'ಹೊಸತು' ಬಳಗದ**
**ಹಾಗೂ**
**ನವಕರ್ನಾಟಕ ಪ್ರಕಾಶನದ**
**ಹೊಸವರ್ಷದ ಶುಭಾಶಯಗಳು**



# ಸಂಪಾದಕೀಯ

ಸಹ ಕಂಡಿಲ್ಲ. ಅಲ್ಲಿಯ ದುಡಿಮೆಗಾರರ ಆದಾಯ ತೀವ್ರವಾಗಿ ಕುಸಿಯುತ್ತಾ ಬಂದಿದೆ. ಅದಕ್ಕೆ ವಿರುದ್ಧವಾಗಿ ವಿಯೆಟ್ನಾಂನಲ್ಲಿ ಬಡತನ ಗಮನಾರ್ಹವಾಗಿ ಕಡಿಮೆಯಾಗುತ್ತಾ ಬಂದಿದೆ, ಅಲ್ಲಿ ದುಡಿಯುವವರ ಆದಾಯ ಹೆಚ್ಚುತ್ತಿದೆ ಮತ್ತು ವಾರ್ಷಿಕ ಅಭಿವೃದ್ಧಿ ಶೇ. ೫ನ್ನು ಮೀರಿದೆ. ಈ ದೇಶಕ್ಕೆ ಅಮೆರಿಕಾ ೧೯೯೪ರ ವರೆಗೆ ಆರ್ಥಿಕ ದಿಗ್ಬಂಧನ ಹೇರಿತ್ತು, ವ್ಯಾಪಾರಕ್ಕೆ ಅನೇಕ ನಿರ್ಬಂಧಗಳಿದ್ದುವು ಮತ್ತು ಮೂರು ದಶಕಗಳ ಕಾಲ ಅಮೆರಿಕಾ ಹೇರಿದ್ದ ಆಕ್ರಮಣ ಯುದ್ಧದಿಂದ ತಪ್ತವಾಗಿದ್ದ ದೇಶ ಇದು. ವಿಯೆಟ್ನಾಂ ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರವೂ ಅಲ್ಲ. ರೋಡ್ರಿಕ್‌ನ ವಿಶ್ಲೇಷಣೆಯನ್ನು ಸಮರ್ಥಿಸುವಂತೆ ಕೇಂಬ್ರಿಜ್‌ನ ಅರ್ಥಶಾಸ್ತ್ರಜ್ಞ ಹಾ ಜೂನ್ ಚಾಂಗ್ ಹೇಳುತ್ತಾನೆ: ''ಯಾವ ದೇಶಗಳು ಅಂತರರಾಷ್ಟ್ರೀಯ ಒತ್ತಡಕ್ಕೆ ಮಣಿದು ಅಸನ್ನಿಹಿತವಾದ ಸಂದರ್ಭದಲ್ಲಿ ತಮ್ಮ ಆರ್ಥಿಕತೆಯನ್ನು ಉದಾರೀಕರಣದ ಪದತಲದಲ್ಲಿ ಸಮರ್ಪಿಸಿದುವೋ ಆ ದೇಶಗಳಲ್ಲಿ ಔದ್ಯಮಿಕ ಉದ್ಯಮಗಳು ವಿದೇಶಿ ಪೈಪೋಟಿಯಿಂದಾಗಿ ಹತವಾದವು.''

ಜಾಗತೀಕರಣ ಮತ್ತು ವಿಶ್ವ ವ್ಯಾಪಾರ ಸಂಸ್ಥೆ ಅಮೆರಿಕಾ ತನ್ನ ವಶದಲ್ಲಿಟ್ಟುಕೊಂಡಿರುವ ಜೀರುಕುಣಿಕೆಗಳು. ನಮ್ಮ ದೇಶದ ಶೇ. ಹತ್ತರಷ್ಟು ಮಂದಿಗೆ ಅದು ಸ್ವರ್ಗಾರೋಹಣಕ್ಕೆ ನೂಲಿನ ಏಣಿ; ಆದರೆ ಇತರರಿಗೆ ತೀವ್ರ ಹಿಂಸೆ ನೀಡುವ ಜೀರುಕುಣಿಕೆ. ನಮ್ಮ ಪ್ರಧಾನಿ ಗಣದವರ ಪ್ರಕಾರ ನಮ್ಮದು ''ಅಸನ್ನಿಹಿತ ಸಂದರ್ಭ'' ಅಲ್ಲ; ಏಕೆಂದರೆ ರಿಲೈಯನ್ಸ್ ಇದೆ, ನಾರಾಯಣ ಮೂರ್ತಿ ಇದ್ದಾರೆ, ಪರಮಾಣು ಅಸ್ತ್ರಗಳಿವೆ, ಹೆದ್ದಾರಿಗಳನ್ನು ಮಾಡುತ್ತಿದ್ದೇವೆ, ಬುಷ್ ನೀಡುವ ಅರ್ಹತಾ ಪತ್ರಗಳಿವೆ, ಮತ್ತು ಆರ್ಥಿಕ ಚಿಂತನೆಯನ್ನು ಕಿಂಚಿತ್ತೂ ಮಾಡದ ದೊಡ್ಡ ರಾಜಕೀಯ ಪಕ್ಷಗಳಾದ ಕಾಂಗ್ರೆಸ್ ಹಾಗೂ ಭಾರತೀಯ ಜನತಾ ಪಕ್ಷಗಳಿವೆ! ಭಾರತದ ಜನತೆಗೆ ಹೊಸವರ್ಷದ ಸವಾಲುಗಳಲ್ಲಿ ಇದೇ ಪ್ರಮುಖವಾದ್ದು. ಇದನ್ನೆದುರಿಸಲು ಪಣತೊಟ್ಟರೆ ನಮಗೆ ಹೊಸ ವರ್ಷವು ಶುಭವನ್ನು ತರುತ್ತದೆ, ಮುದವನ್ನೂ ತರುತ್ತದೆ.

* * *

ಇರಾನಿನ ಪರಮಾಣು ಶಕ್ತಿ ಸ್ಥಾವರಗಳ ಬಗ್ಗೆ ಒಂದೊಂದು ಬಾರಿ ಒಂದೊಂದು ವರದಿ ನೀಡಿ ವಾಷಿಂಗ್‌ಟನ್ನಿನ ಪ್ರಭುಗಳ ಮನ ತಣಿಸುವ ಎಲ್ ಬರಾದೈಗೆ ನೊಬೆಲ್ ಶಾಂತಿ ಪಾರಿತೋಷಕ ಕೊಟ್ಟರೆ ಭಾರತದ ಇಂದಿರಾ ಗಾಂಧಿ ಪ್ರಶಸ್ತಿಯನ್ನು ಅಫ್ಘಾನಿಸ್ತಾನದವನೆನ್ನಲಾದ ಕರ್ಜೈಗೆ ನೀಡಿ ಆತನ ಮೇಲೆ ಮರ್ಯಾದೆಯನ್ನು ಹೇರುವ ಹುಚ್ಚುತನ ನಡೆದಿದೆ. ಇಂದಿರಾ ಗಾಂಧಿಯವರನ್ನು ಹೀಗೇಕೆ ಅವಮಾನಿಸಬೇಕಾಗಿತ್ತೆಂಬುದು ನಿಗೂಢವಾಗಿದೆ. ಕರ್ಜೈ ಆ ರಾಷ್ಟ್ರದಲ್ಲಿ ಹೊಂದಿರುವ ಸ್ಥಾನ ನಮ್ಮ ಅನೇಕ ಜಗದ್ಗುರುಗಳ ಸಂಸ್ಥಾನವನ್ನು ಹೋಲುತ್ತದೆ. ಅವರ ಮಠವಷ್ಟೇ ಅವರಿಗೆ ಜಗತ್ತು; ಕರ್ಜೈಗೆ ಕಾಬೂಲಿನಲ್ಲಿ ಕೂಡ ಸ್ವತಂತ್ರ ಓಡಾಟಕ್ಕೆ ಆಸ್ಪದವಿಲ್ಲ. ಅಮೆರಿಕಾದಲ್ಲಿದ್ದ ಈ ವ್ಯಕ್ತಿಯನ್ನು ''ಪ್ರಜಾಪ್ರಭುತ್ವ''ದ ಪ್ರತಿಮೆಯಾಗಿ ಅಮೆರಿಕಾದವರೇ ಅಫ್ಘಾನಿಸ್ತಾನದಲ್ಲಿ ಪ್ರತಿಷ್ಠಾಪಿಸಿದ್ದಾರೆ. ಯಾವ ಸಾಧನೆಗಾಗಿ ಈತನಿಗೆ ಇಂದಿರಾ ಗಾಂಧಿ ಸನ್ಮಾನ ನೀಡಲಾಗಿದೆಯೆಂಬುದು ತಿಳಿಯುತ್ತಿಲ್ಲ. ಅಮೆರಿಕಾದ ಶ್ವೇತ ಭವನದ ಗುಹೆಯಲ್ಲಿ ಮಂದಹಾಸ ಚಿಮ್ಮಿಸುವುದಷ್ಟೇ ಇದರ ಉದ್ದೇಶ ಇದ್ದಂತೆ ತೋರುತ್ತದೆ. ಅಮೆರಿಕಾದ ಅಟ್ಟಹಾಸವನ್ನು ಮೆಟ್ಟಿದ ಸಾಹಸ ಮಾಡಿದ್ದ ಇಂದಿರಾ ಗಾಂಧಿಯೂ ಈ ವ್ಯಂಗ್ಯವನ್ನು ಕಂಡು ನಕ್ಕಿರಬೇಕು! ಕರ್ಜೈ ಬೆಂಗಾವಲಿನಲ್ಲಿ ಆತನ ದೇಶದ ಪುರೋಭಿವೃದ್ಧಿಗಾಗಿ ಒಂದು ರಸ್ತೆ ನಿರ್ಮಾಣ ಮಾಡಹೋಗಿ ನಮ್ಮ ಸೋದರನನ್ನೊಬ್ಬನನ್ನು ಕಳೆದುಕೊಂಡದ್ದಷ್ಟೇ ಅಫ್ಘಾನಿಸ್ತಾನದ ಅಧ್ಯಕ್ಷ ನಮಗೆ ನೀಡಬಹುದಾದ ಬಳುವಳಿ.

ಒಸಾಮನನ್ನು ಬೇಟೆಯಾಡಲು ಲಕ್ಷಗಟ್ಟಲೆ ಬಾಂಬುಗಳನ್ನು ಸುರಿಸಿದ ಅಮೆರಿಕಾ ಮಾಧ್ಯಮಗಳ ಸ್ವಾತಂತ್ರ್ಯದ ಬಗ್ಗೆ ಪುಂಖಾನುಪುಂಖವಾಗಿ ಮಾತನಾಡುವುದುಂಟು. ಬಾಂಬುಗಳು ಉಂಟುಮಾಡಿದ ನಾಶವನ್ನು ಅಮೆರಿಕಾದ ಸೀಯೆನ್ನೆನ್ ಎಂಬ ಸುದ್ದಿಸಂಸ್ಥೆ ವಿಶ್ವದ ಮನೆಮನೆಯೊಳಕ್ಕೆ ಕೊಂಡೊಯ್ಯಿತು. ಇರಾಕಿನಲ್ಲಿ ಧ್ವಂಸ ನಡೆಯುತ್ತಿದ್ದುದನ್ನು ತೋರಿಸುತ್ತಿದ್ದ ಅಲ್-ಜಜ್ಜೀರ ಸುದ್ದಿಸಂಸ್ಥೆಯ ಕಟ್ಟಡವನ್ನು ಧ್ವಂಸಮಾಡಿಬಿಡಬೇಕೆಂದು ಬುಷ್‌ಮನ್ ಬುಷ್ ಆಶಿಸಿದ್ದುದು ಜಗಜ್ಜಾಹೀರಾಗಿದೆ. ಇದು ಮಾನವ ಹಕ್ಕುಗಳ ರಕ್ಷಣೆಯ ವೈಖರಿ, ಮಾಧ್ಯಮ ಸ್ವಾತಂತ್ರ್ಯಕ್ಕೆ ನೀಡಲಾಗಿರುವ ಖಿಲ್ಲತ್ತು, ಎಂಬುದನ್ನು ಮನಗಾಣಬೇಕು. ಹಿಂದೆ ರುಮಾನಿಯಾದ ಅಧ್ಯಕ್ಷ ತನ್ನ ಶೌಚಗೃಹಕ್ಕೆ ಚಿನ್ನದ ಪರಿಕರಗಳನ್ನು ತುಂಬಿಕೊಂಡಿದ್ದನೆಂದು ಸುಳ್ಳು ಪ್ರಚಾರ ಮಾಡಿದ್ದ ದೇಶವು ಇಂದು ಆ ದೇಶದಲ್ಲಿ ರಹಸ್ಯ ಕಾರಾಗೃಹಗಳನ್ನು ನಿರ್ಮಿಸಿಕೊಂಡು ಬೇರೆ ದೇಶಗಳಿಂದ ''ಅಪರಾಧಿ''ಗಳನ್ನು ಕದ್ದು ತಂದು ಅವರಿಗೆ ಅಮಾನವೀಯ ಹಿಂಸೆ ಕೊಡುತ್ತಿದೆ. ಡಿಸೆಂಬರ್ ೧೦ರಂದು ಆಚರಿಸಲಾಗುವ ಮಾನವ ಹಕ್ಕು ದಿನಾಚರಣೆಗೆ ಜಾರ್ಜ್ ಬುಷ್ ಹಾಗೂ ಟೋನಿ ಬ್ಲೇರ್ ಕಾಣಿಕೆ ಇದು. ಇದರಿಂದಲೂ ನಮ್ಮ ದೇಶ ಸಿಟ್ಟಿಗೇಳದಿರುವುದು ಮನಮೋಹನ ಸಿಂಗರ ವಿದೇಶಾಂಗ ವ್ಯವಹಾರ ನಡೆಸುವ ಚಾತುರ್ಯಕ್ಕೆ ನಿದರ್ಶನವಿರಬಹುದೆ? ಕಷ್ಟದ ತೀರ್ಮಾನ ಕೈಗೊಳ್ಳುವ ಅಗತ್ಯ ಬಂದರೆ ಕಣ್ಣುಮುಚ್ಚಿಕೊಳ್ಳುವ ನೀತಿ ಇದು.

ಎಲ್ಲೆಲ್ಲಿ ಮಾನವ ಹಕ್ಕುಗಳ ಅಪಹರಣವಿದೆಯೋ ಅಲ್ಲೆಲ್ಲಾ ಬೇರೆಯವರ ದುಡಿಮೆಯ ಸಂಪತ್ತು ಇಲ್ಲವೆ ಅವರ ಸಂಪನ್ಮೂಲದ ಹರಣವಿರುತ್ತದೆ. ನಮ್ಮ ದೇಶದ ಬಾಲಕಾರ್ಮಿಕರಿಗೆ ಅನ್ವಯವಾಗುವಂತೆ ಇದು ತೈಲಕ್ಕಾಗಿ ಇರಾಕಿನ ವಿನಾಶಕ್ಕೂ ಅನ್ವಯವಾಗುತ್ತದೆ, ಕೇರಳದ ಒಂದು ಹಳ್ಳಿಯಲ್ಲಿ ಜೀವನಾಧಾರವಾದ ನೀರಿಗೂ ಅನ್ವಯವಾಗುತ್ತದೆ. ವಿಶ್ವ ಬ್ಯಾಂಕಿನ ಭಾಷೆಯನ್ನು ಹೆಚ್ಚುಹೆಚ್ಚಾಗಿ ಬಳಸುತ್ತಿರುವ ಮನಮೋಹನ ಸಿಂಗ್ ಇತ್ತೀಚೆಗೆ ಹೇಳಿದರು, ಜನ ನೀರಿಗೆ ಹಣ ಕೊಡಬೇಕಾಗಿಬರುತ್ತದೆ, ಅದು ಸಹಜ, ಎಂದು. ಅಂದರೆ, ನೀರಿನ ಸೆಲೆಗಳನ್ನು ವಿದೇಶಿ ಮಾಲಿಕರಿಗೆ ಬಿಟ್ಟುಕೊಡುವ ಹುನ್ನಾರ ನಡೆಯುತ್ತಿದೆ, ಎಂದರ್ಥ. ಆಮೇಲೆ ಹಳ್ಳಿಗಳಲ್ಲಿ ಗದ್ದೆಗೆ ನೀರು ಹಾಯಿಸಲು ಹಣ, ಕುಡಿಯುವ ನೀರಿಗೆ ಹಣ, ಎಮ್ಮೆ ಮೈ ತೊಳೆಯಲು ಹಣ, ಹೀಗೆ ಸಾಗುತ್ತದೆ ದ್ರೋಹದ ಸರಮಾಲೆ. ಮಹಿಳೆಯರ ವಿರುದ್ಧದ ಪ್ರಭುತ್ವದ ಹಿಂಸೆಯನ್ನು ಪ್ರತಿಭಟಿಸಲು ಇಂದು ಮಣಿಪುರದ ಇಂಫಾಲಿನಲ್ಲಿ ಮೆರವಣಿಗೆ ನಡೆಯುವಂತೆ ನಾಳೆ ಎಲ್ಲೆಡೆ ನೀರಿಗಾಗಿ ಪ್ರತಿಭಟಿಸುವವರ ಮೇಲೆ ಲಾಠಿಪ್ರಹಾರ ನಡೆಯುತ್ತದೆ. ಕುದುರೆಮುಖದ ಅರಣ್ಯವಾಸಿಗಳನ್ನು ಎತ್ತಂಗಡಿ ಮಾಡಿಸುವಂತೆ ಆಗ ಹಳ್ಳಿಗಳ ಜನರನ್ನು ಎಲ್ಲಿಗೆ ಓಡಿಸುವುದು? ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವದ ಭವಿಷ್ಯ ಇಂತಹ ನೂರಾರು ಸಂಗತಿಗಳನ್ನು ಆಶ್ರಯಿಸಿದೆ. ವಿದ್ಯಾಲಯಗಳು, ನ್ಯಾಯಾಲಯಗಳು, ಇವಕ್ಕೆಲ್ಲಾ ಪರಿಹಾರ ನೀಡುವುದಿಲ್ಲ. ಈಗಿರುವ ದುರವಸ್ಥೆಯನ್ನು ಇನ್ನೂ ಐನೂರು ವರ್ಷ ಹಾಗೇ ಉಳಿಸಿಕೊಳ್ಳಲು ಹೆಣಗುವವರು ಸಹ ಇವಕ್ಕೆ ಪರಿಹಾರ ನೀಡುವುದಿಲ್ಲ. ಭೂತಕಾಲವನ್ನು ಸಿಂಹಾಸನದ ಮೇಲಿರಿಸಲು ತುದಿಗಾಲಲ್ಲಿ ನಿಂತವರೂ ಅದನ್ನು ಮಾಡುವುದಿಲ್ಲ. ಅದನ್ನು ಮಾಡಬೇಕಾದವರು ನಾವು, ಜನ. ೨೦೦೬ರಲ್ಲಿ ಹೆಚ್ಚಲಿರುವ ಒತ್ತಡಗಳಿಗೆ ಸ್ಪಂದಿಸಬೇಕಾದವರೂ ನಾವೇ, ಜನ.

* * *

೨೦೦೫ ಮುಕ್ತಾಯಗೊಳ್ಳುವ ದಿನಗಳು ಹತ್ತಿರ ಸುಳಿಯುತ್ತಿದ್ದಂತೆ ಎಂತೆಂತಹ ಸುದ್ದಿಗಳು ಬಂದಿವೆ! ''ಇದನ್ನು ನಂಬುತ್ತೀರಾ'' ಎಂಬ ಶೀರ್ಷಿಕೆ ನೀಡಿ ಅವುಗಳನ್ನು ಪಟ್ಟಿ ಮಾಡಿದರೆ ನಮ್ಮ ಪ್ರಜಾಪ್ರಭುತ್ವದ ಸಂಸ್ಕೃತಿ ಎಷ್ಟು ತಳ ಮುಟ್ಟಿದೆಯೆಂದು ಖಂಡಿತವಾಗಿಯೂ ವಿಪರೀತವಾಗಿ ಘಾಸಿಗೊಳ್ಳಬೇಕಾಗುತ್ತದೆ. ಸಂಸ್ಕೃತಿಯ ಪ್ರಜಾಪ್ರಭುತ್ವೀಕರಣವಾಗಬೇಕೆನ್ನುತ್ತಿರುವಾಗ ಪ್ರಜಾಪ್ರಭುತ್ವದ ಸಂಸ್ಕೃತಿಯು ಲಾಗ ಹಾಕುತ್ತಿರುವುದು ಆಘಾತಕರವಾಗಿದೆ. ಪಟ್ಟಿಯ ತುಣುಕುಗಳು :

- ಉಮಾಭಾರತಿಯವರ ಮಧ್ಯಪ್ರದೇಶದ ನಿಮ್ರಿ ಎಂಬ ಗ್ರಾಮದಲ್ಲಿ ಅತ್ಯಾಚಾರಕ್ಕೊಳಗಾದ ಕಮಲಾಬಾಯಿ ಎಂಬ ಆದಿವಾಸಿ ಹೆಂಗಸೊಬ್ಬಳು ಆ ಬಗ್ಗೆ ದೂರು ನೀಡಿದ್ದಕ್ಕೆ ನಾಲ್ಕು 'ರಘುವಂಶಿ' ಎಂಬ ಹೆಸರಿನವರು ಅವಳ ಬಲಗೈಯ್ಯನ್ನು ಕತ್ತರಿಸಿಹಾಕಿದ್ದಾರೆ. ಅವಳಿಗೆ ೨೭,೦೦೦ ರೂಪಾಯಿಗಳ ಪರಿಹಾರ ನೀಡಲಾಗಿದೆ. ಶ್ರೀರಾಮಚಂದ್ರನ ರಘುವಂಶಕ್ಕೆ ಎಂತಹ ಕೀರ್ತಿ ಮತ್ತು ನಮ್ಮ ದೇಶದ ಸಂಸ್ಕೃತಿಗೆ ಎಂತಹ ಪ್ರತೀಕ!
- 'ಜನಸೇವೆ' ಮಾಡಲೆಂದೇ ಜನಪ್ರತಿನಿಧಿಗಳಾಗಿ ಪಾರ್ಲಿಮೆಂಟಿಗೆ ಹೋಗಿರುವವರ ಪೈಕಿ 'ಭಾರತೀಯ ಸಂಸ್ಕೃತಿಯ ಅಂಗರಕ್ಷಕ'ರು ತಾವೆನ್ನುವವರೂ ಸೇರಿದಂತೆ ಕೆಲವರು ಪಾರ್ಲಿಮೆಂಟಿನಲ್ಲಿ ಒಂದಷ್ಟು ಪ್ರಶ್ನೆಗಳನ್ನು ಕೇಳಲು ಇಂತಿಷ್ಟೆಂದು ಹಣ ವಸೂಲು ಮಾಡಿಕೊಂಡಿದ್ದಾರೆ. ಹಿಂದೆ ರಾಜರು ಅಕ್ಷರ ಲಕ್ಷ

೧೧ನೇ ಪುಟಕ್ಕೆ










# ಪರಿವಿಡಿ

# ಪರಿವಿಡಿ



---

**ಮುಖಚಿತ್ರ :** ಕಂಪ್ಯೂಟರ್ ಕಲೆ
**ಚಿತ್ರ :** ಕೆ. ಎನ್. ಲಕ್ಷ್ಮಿ
**ಛಾಯಾಚಿತ್ರ :** ಕೆ. ಪಿ. ಸ್ವಾಮಿ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಒಳಚಿತ್ರಗಳು :** ಸೃಜನ್, ವೇಲ್, ಶ್ರೀಹರಿ, ವಿವೇಕಾನಂದ, ಮೋನಪ್ಪ, ವಿಜಯಾನಂದ, ಬಿ. ವಿಲ್ಸನ್, ಜಿ.ಎಂ.ಬೊಮ್ನಳ್ಳಿ, ಹರಿಣಿ, ಎನ್.ಆರ್. ಬೊಮ್ನಳ್ಳಿ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ





















## ಡಿಸೆಂಬರ್ ಸಂಚಿಕೆ

ಮನಸೂರೆಗೊಂಡ ಸಂಚಿಕೆ. ಸುಂದರ ಮುಖಪುಟ ಹೊತ್ತ ಡಿಸೆಂಬರ್ ಸಂಚಿಕೆ ಆಕರ್ಷಕವಾಗಿತ್ತು. ಅನೇಕ ಅರ್ಥಪೂರ್ಣ ಲೇಖನಗಳು ಹಾಗೂ ಕವನ-ಕತೆಗಳು ಮನಸೂರೆಗೊಂಡವು.

'ಹೊಸತು' ಪ್ರತಿ ಪುಟಪುಟಗಳೂ ನವ್ಯ. ಡಾ|| ವಿ. ಕೆ. ದ್ಯಾವನಗೌಡ್ರರವರ ಗದಗ ಜಿಲ್ಲೆಯ ಪ್ರಾಚೀನ ವಿಭಾಗಗಳು, ಇತಿಹಾಸ ನೆನಪಿಸಿತು. ಸಂಗ್ರಹ ಯೋಗ್ಯ.

ಲಕ್ಷ್ಮೇಶ್ವರ — **ಬಸವರಾಜ್ ಶಿ. ಬಾಳೇಶ್ವರ ಮಠ**

**ಅಸಮರ್ಪಕ 'ಮರುಓದು' (ಡಿಸೆಂಬರ್ ಸಂಚಿಕೆ)**

'ಬಾಲಕರಿಲ್ಲದ ಬಾಲೀದ್ಯಾತರ ಜನ್ಮ' ತ್ರಿಪದಿಯಲ್ಲಿನ ಬಾಲಕರು = ಗಂಡುಮಕ್ಕಳು ಎಂಬ ಅರ್ಥವನ್ನು ಲೇಖಕರು ಆರೋಪಿಸುತ್ತಾರೆ. ಆದರೆ, ಕಿಟ್ಟೆಲ್ ಪದಕೋಶ ಅಥವಾ ಇನ್ನಾವುದೇ ಪದಕೋಶ ಹೇಳುವಂತೆ ಬಾಲಕರು = ಮಕ್ಕಳು ಎಂಬರ್ಥವೇ ಸರಿ. ಮಕ್ಕಳಿಲ್ಲದ ದುಃಖವನ್ನು ಹೇಳುವ ತ್ರಿಪದಿ ಇದಾಗಿದೆ. 'ಹತ್ತು ಗಂಡು ಹಡೆದು ಒಂದೂ ಹೆಣ್ಣು ಹಡೆಯದಿದ್ದರೆ ಆಕೆ ಬಂಜೆ' ಎಂಬ ತ್ರಿಪದಿಗಳೂ ನಮ್ಮಲ್ಲಿವೆ, ಹೆಣ್ಣು ಮಗುವಿನ ಸೌಂದರ್ಯ ಬಣ್ಣಿಸುವ ತ್ರಿಪದಿಗಳೂ ಕನ್ನಡ ಪರಂಪರೆಯಲ್ಲಿವೆ. ಆಧುನಿಕ ಬದುಕಿನ ಮಾರುಕಟ್ಟೆ ಸಂಸ್ಕೃತಿಯು ಹೆಣ್ಣನ್ನು ಹತ್ಯೆ ಮಾಡುತ್ತಿದೆಯೇ ಹೊರತು, ನಮ್ಮ ಜಾನಪದ ಪರಂಪರೆಯ ಹೆಂಗಸರು ಹಾಡಿರುವ ತ್ರಿಪದಿಗಳು ಹೀಗೆ ಜೀವ ವಿರೋಧಿಯಾಗಿಲ್ಲ. ತ್ರಿಪದಿಯ ರಚನೆಯ ಕಾಲ ಘಟ್ಟವನ್ನು ಈ ಕಾಲದೊಂದಿಗೆ ಸಮೀಕರಿಸುವ ಭರದಲ್ಲಿ ಲೇಖಕರು ವಿಪರೀತ ಅರ್ಥ ಹೇರಿದ್ದಾರೆ. ಅಲ್ಲದೆ, ಗಂಡು ಮಗು ಎಂಬರ್ಥವಾಗಿದ್ದರೆ ಬಾಲಕನಿಲ್ಲದ ಎಂದಿರುತ್ತಿತ್ತೇ ಹೊರತು ಬಾಲಕರಿಲ್ಲದ ಎಂದಿರುತ್ತಿರಲಿಲ್ಲ.

ಬಸವಣ್ಣನ ಕಾಲದಲ್ಲಿ ಬ್ರಾಹ್ಮಣರೂ ಕೂಡ ಮಾಂಸಾಹಾರಿಗಳಾಗಿದ್ದರು. ಈ ಬಗ್ಗೆ ಕಾಳವ್ವೆ ಮತ್ತು ಹಾವಿನಹಾಳ ಕಲ್ಲಯ್ಯನ ವಚನಗಳನ್ನೂ, ಡಾ|| ಬಿ. ವಿ. ವೀರಭದ್ರಪ್ಪನವರ ಲೇಖನವನ್ನೂ, ಮನುಸ್ಮೃತಿಯನ್ನೂ ಅವಲೋಕಿಸಬಹುದು. ಇವುಗಳನ್ನೆಲ್ಲಾ ಸರಿಯಾಗಿ ವಿವೇಚಿಸದೆ, ಬಸವಣ್ಣ ಶ್ರಮಜೀವಿ ಮಾಂಸಾಹಾರಿಗಳ ಬಗ್ಗೆ ಹೇಳಿರಲಿಕ್ಕಿಲ್ಲ, ನರಬಲಿ ಕೊಡುವ, ಯಜ್ಞ ಮಾಡುವ ವೈದಿಕರ ಬಗ್ಗೆ ಹೇಳಿರಬಹುದು ಎಂದೆಲ್ಲಾ ಬೀಸು ಹೇಳಿಕೆ ಕೊಟ್ಟು ಪ್ರಗತಿಪರರು ಎಂದು ಸುಲಭದಲ್ಲಿ ಹೇಳಿಸಿಕೊಳ್ಳುವ ಚಟ ಇತ್ತೀಚೆಗೆ ಹೆಚ್ಚುತ್ತಿದೆ. ಪ್ರಾಣಿಹಿಂಸೆಯ ಆಧಿಕ್ಯದ ವಿರುದ್ಧ ಬೌದ್ಧ, ಜೈನ, ವೀರಶೈವರು ಸಸ್ಯಾಹಾರವನ್ನೂ ಪ್ರತಿಪಾದಿಸಿದರು.

ಇನ್ನೊಂದು ಮಾತು : ಈ ಟಿಪ್ಪಣಿ ಈಗಾಗಲೇ 'ಅಗ್ನಿ' ಹಾಗೂ 'ಗೌರಿ ಲಂಕೇಶ'ಗಳಲ್ಲಿ ಪ್ರಕಟವಾಗಿದೆ. 'ಹೊಸತು' ಮತ್ತೆ ಇದನ್ನು ಪ್ರಕಟಿಸುವ ಅಗತ್ಯವಿತ್ತೇ? ಇದರ ಬದಲು ಕನ್ನಡದ ಹಳೆಯ ಲೇಖಕರಾದ ಕಪಟರಾಳ ಕೃಷ್ಣರಾವ್, ಉತ್ತಂಗಿ ಚೆನ್ನಪ್ಪ ಮೊದಲಾದ ಪ್ರಾಜ್ಞರ ಲೇಖನಗಳನ್ನು ಮರುಪ್ರಕಟಿಸಿದರೆ (ಇವರುಗಳು ವಚನಗಳ ಬಗ್ಗೆ ವಿಶಿಷ್ಟ ಚರ್ಚೆ ನಡೆಸಿದ್ದಾರೆ) ಈ ತಲೆಮಾರಿನ ಆಸಕ್ತರಿಗೆ ಹೆಚ್ಚು ಉಪಯುಕ್ತ.

ವಡ್ಡಿನಕೊಪ್ಪ — **ಡಾ|| ಸತ್ಯಲೀಲಾ**

[ಅದು ಬೇರೆಡೆ ಪ್ರಕಟವಾಗಿದ್ದಿತೆಂಬುದು ನಮ್ಮ ಗಮನಕ್ಕೆ ಬಂದಿದ್ದಿದ್ದರೆ ಅದನ್ನು ಮತ್ತೆ ಪ್ರಕಟಿಸುತ್ತಿರಲಿಲ್ಲ. ಪ್ರಮಾದಕ್ಕೆ ವಿಷಾದಿಸುತ್ತೇವೆ.] **– ಸಂಪಾದಕ**

'ಹೊಸತು'ವಿನಿಂದ ನಿಜಕ್ಕೂ ನೆಮ್ಮದಿಯ ನಾಳೆ ನಮ್ಮದಾಗಿದೆ, ಏಕೆಂದರೆ ವೈಚಾರಿಕ ಲೇಖನಗಳನ್ನು ಪ್ರಕಟಿಸುತ್ತಿರುವುದು ಸಂತಸವಾಗಿದೆ, ಇದರ ಜೊತೆಗೆ ಮುಖಪುಟ ವಿನ್ಯಾಸ ಕೂಡ ಬಹಳ ಅಂದವಾಗಿದೆ : ಹಕ್ಕಿ ಕೂಡ ತನ್ನ ನೆಮ್ಮದಿಯ ದಿನವನ್ನು ಹುಡುಕುತ್ತಿದೆ.

ಹೂವಿನಹಡಗಲಿ — **ಪಿ. ಕರಿಬಸಪ್ಪ**




**ಉನ್ನತ ಶಿಕ್ಷಣದ ದ್ವಂದ್ವಗಳು**

'ಹೊಸತು' ಕರ್ನಾಟಕ, ಕನ್ನಡ, ಕನ್ನಡಿಗರ ಹಿತ ದೃಷ್ಟಿಯನ್ನಿಟ್ಟುಕೊಂಡು ತನ್ನೆಲ್ಲ ದುರ್ಗಮ ದಾರಿಯನ್ನು ದಾಟಿ ಏಳನೆಯ ಸಂಪುಟದ ನಾಲ್ಕನೆಯ ಸಂಚಿಕೆಯನ್ನು ವಿತರಿಸಿ ಐದನೆಯದಕ್ಕೆ ಸಜ್ಜಾಗಿರುವುದು ಹೆಮ್ಮೆಯ ವಿಷಯ. ಮತೀಯತೆ-ಸಾಮರಸ್ಯಗಳು ಒಂದೇ ನೆಲೆಯಲ್ಲಿ ಪರಸ್ಪರವಾಗಿ ಬಾಳಲಾರವು. ಇವುಗಳ ಮೂಲ ಸಮಾಜದಲ್ಲಿದ್ದರೂ ಮಾನವನ ಪ್ರವೃತ್ತಿಗಳಲ್ಲಿ ಎಲ್ಲೋ ಒಂದು ಮೂಲೆಯಲ್ಲಿ ಇವುಗಳ ಬೀಜವಿದ್ದು ಎರಡರಲ್ಲಿ ಯಾವುದಕ್ಕೆ ವ್ಯಕ್ತಿ ಪ್ರಾಧಾನ್ಯತೆ ಕೊಡುವನೋ ಅದೇ ಹೆಮ್ಮರವಾಗಿ ಬೆಳೆಯಬಲ್ಲದು ಎನಿಸುತ್ತದೆ. ಈ ಕುರಿತು ವಿಚಾರಗಳನ್ನು ಹಂಚಿಕೊಳ್ಳುವ ಅಗತ್ಯವಿದೆ.

ಅಫಜಲಪುರ — **ಡಿ. ಎಂ. ನದಾಫ್**

ಡಾ|| ಎಚ್. ಎನ್. ಮಂಜುರಾಜು ಅವರು 'ಮರದೊಳಗಿನ ಕಿಚ್ಚು'ವಿನಲ್ಲಿ ಉನ್ನತ ಶಿಕ್ಷಣದ ಬಹುಪಾಲು ವಿದ್ಯಾರ್ಥಿಗಳನ್ನೊಳಗೊಂಡ ಪದವಿ ಕಾಲೇಜುಗಳ ಆಡಳಿತಾತ್ಮಕ ವಿಷಯದಲ್ಲಿ ಸರ್ಕಾರದ ರೀತಿನೀತಿಗಳು ಅನೇಕ ಗೊಂದಲ ದ್ವಂದ್ವಗಳಿಂದ ಕೂಡಿರುವುದನ್ನು ಎಳೆಎಳೆಯಾಗಿ ಬಿಡಿಸಿಟ್ಟಿದ್ದಾರೆ. ಪದವಿ ಕಾಲೇಜುಗಳ ಪ್ರಿನ್ಸಿಪಾಲ್ ಹುದ್ದೆಗೆ ಆಡಳಿತಾತ್ಮಕ ಅನುಭವವನ್ನು ಹೊಂದಿರಬೇಕಾಗುತ್ತದೆ. ಇದು ಸಾಮಾನ್ಯವಾಗಿ ಸೇವಾ ಹಿರಿತನದಿಂದ ಲಭ್ಯ. ಆದರೆ ಡಾಕ್ಟರೇಟ್ ಪದವಿ ಸಂಶೋಧನಾ ಮೂಲದ್ದು. ಪ್ರಿನ್ಸಿಪಾಲ್ ಹುದ್ದೆ, ಡಾಕ್ಟರೇಟ್ ಪದವಿ ಇವೆರಡಕ್ಕೂ ಥಳಕುಹಾಕುವುದು ಸರಿಯಲ್ಲ. ಇಂತಹ ಶುಷ್ಕ ನಿಯಮಾವಳಿಗಳಿಂದ ಪದವಿ ಕಾಲೇಜುಗಳ ಆಡಳಿತಕ್ಕಾಗಲಿ, ವಿದ್ಯಾರ್ಥಿಗಳಿಗಾಗಲಿ ಯಾವುದೇ ಪ್ರಯೋಜನವಿಲ್ಲ.

ಹೆಬ್ಬಾಳು ಕೊಪ್ಪಲು — **ಪ್ರೊ|| ಎಚ್. ಆರ್. ಸಿದ್ದೇಗೌಡ**

ಕೆ. ಸಿದ್ರಾಮ ಅವರ 'ವರ್ಷದ ಮೊದಲ ಮಳೆ' ಎಂಬ ಕಥೆಯನ್ನು ಮನಸಾರೆ ಓದಿದೆ. ವಾಸ್ತವವಾಗಿ ಈ ಕಥೆಯು ದಲಿತ ಜನಾಂಗದ ಬದಲಾದ ಜೀವನ ಶೈಲಿ, ದಲಿತರ ಈ ಬದಲಾವಣೆಯನ್ನು ಸಹಿಸದ ಶ್ರೀಮಂತ ವರ್ಗದ ಹೊಟ್ಟೆಕಿಚ್ಚುತನ ಮತ್ತು ಸ್ಥಿತ್ಯಂತರ ಬದುಕಿನಲ್ಲಿ ಶ್ರೀಮಂತವರ್ಗ ದಲಿತರನ್ನು ಅರಸುವ ಅನಿವಾರ್ಯತೆ... ಮುಂತಾದವುಗಳ ಕಡೆಗೆ ನಮ್ಮ ಗಮನವನ್ನು ಸೆಳೆಯುತ್ತದೆಯಾದರೂ ಕಥೆಯ ಘಟನೆ, ಸನ್ನಿವೇಶ, ಪಾತ್ರ ನಿರೂಪಣೆಯ ಕ್ರಮದಲ್ಲಿ ಹೊಸತನವಾಗಲಿ, ಸ್ವಂತಿಕೆಯಾಗಲಿ ಎದ್ದುಕಾಣುವುದಿಲ್ಲ. ಕಥೆಯ ಉದ್ದಕ್ಕೂ ದಲಿತ ಅಥವಾ ದಲಿತ ಸಂವೇದನೆಯಿರುವ ಕಥೆಗಳ ಪಡಿನೆರಳು ಕಂಡುಬರುತ್ತದೆ. ಇದನ್ನು ಚೆನ್ನ, ಚಾಮ, ಶಂಭ, ಬೆಳ್ಳಿ ಪಾತ್ರಗಳ ಮೂಲಕ, ಭೂಮಿಕನಸು, ದಲಿತ ಸಂಘಟನೆ ಮುಂತಾದ ಪ್ರಸ್ತಾಪಗಳ ಮೂಲಕವೂ ಗುರುತಿಸಬಹುದು. ಒಟ್ಟಾರೆ ಕಥೆಯ ವಸ್ತು 'ಮಳೆ'ಯಾದರೂ ಅದರ ಹರವನ್ನು ಬೇರೆ ಕಡೆಗೆ ತಿರುಗಿಸಬಹುದಿತ್ತೇನೋ!?

ಸಾಲಹಳ್ಳಿ — **ಡಾ|| ಎಸ್ಸಾರ್ ರಾಮರಥ**

'ಹೊಸತು' ಒಂದಲ್ಲಾ ಒಂದು ರೀತಿಯ ಸಾಹಿತ್ಯಿಕ, ಸಾಮಾಜಿಕ ಕಳಕಳಿಯನ್ನೊಳಗೊಂಡ ಲೇಖನಗಳ ಗುಚ್ಛ ನೀಡುತ್ತಿದೆ. ಸದಾ ಹೊಸತನ್ನೇ ಬಯಸುವ 'ಹೊಸತು' ಓದುಗರಿಗಾಗಿ ಯಾವುದಾದರೂ ಪ್ರಶ್ನೋತ್ತರ ಅಂಕಣವನ್ನು ಪ್ರಾರಂಭಿಸಲಿ.

ಮೈಸೂರು — **ಕಾಳೀಹುಂಡಿ ಕೆ. ವಿ. ಶಿವಕುಮಾರ್**

**ಸಂಪಾದಕೀಯ**

ಪ್ರಜಾಪ್ರಭುತ್ವದ ಮೂಲ ನೆಲೆ, ಸಮಾನತೆ ಮತ್ತು ವ್ಯಕ್ತಿ ಸ್ವಾತಂತ್ರ್ಯದ ತವರೂರು, ಎಂದು ಕರೆಸಿಕೊಂಡ ಫ್ರಾನ್ಸ್ ದೇಶದಲ್ಲಿ ಕಳೆದ ಕೆಲವು ದಿನಗಳಲ್ಲಿ ಉಂಟಾದ ಅಶಾಂತಿ, ಹಿಂಸಾಚಾರ ಮತ್ತು ತಳಮಳಗಳಿಗೆ ಕಾರಣ ಹಾಗೂ ಸ್ವರೂಪದ ಬಗ್ಗೆ ಸಂಪಾದಕೀಯದಲ್ಲಿ ಅತ್ಯಂತ ಪರಿಣಾಮಕಾರಿಯಾಗಿ ವಿವರಿಸಲಾಗಿದೆ. ಯೂರೋಪು ಹಾಗೂ ಇತರ ಪಾಶ್ಚಿಮಾತ್ಯ ದೇಶಗಳು ಅತ್ಯಂತ ಶ್ರೀಮಂತ ಪ್ರದೇಶಗಳನ್ನು ಸಾಮಾಜಿಕವಾಗಿ, ರಾಜಕೀಯ ಹಾಗೂ ಮಾನಸಿಕವಾಗಿ ಹಿಂಸಿಸಿ, ಸಂಪತ್ತನ್ನು ಸೂರೆಗೊಂಡು ಅಲ್ಲಿನ ಜನತೆಯನ್ನು ತಮ್ಮ ಬೆಳವಣಿಗೆ ಮತ್ತು ಅಭಿವೃದ್ಧಿಗಾಗಿ ಬಳಸಿಕೊಂಡು ಶೋಷಿಸಿದ ಪರಿಣಾಮವನ್ನು ಇಲ್ಲಿನ ಹಿಂಸಾಚಾರದಲ್ಲಿ ಕಾಣಬಹುದಾಗಿದೆ. ಹೊಸತನವಿಲ್ಲದ ದುಡಿಮೆ, ಅವಕಾಶಗಳಿಲ್ಲದ ಬದುಕು, ಸಮಾನತೆ ಇಲ್ಲದ ಸಮಾಜ ಹಾಗೂ ಸವಲತ್ತುಗಳಿಲ್ಲದ

ಸ್ಥಿತಿಗಳಿಂದಾಗಿ ದುಡಿಯುವ ವರ್ಗ ಪ್ರತಿಭಟಿಸಲು ಪ್ರಾರಂಭಿಸಿದರೆ ವ್ಯವಸ್ಥೆಯಲ್ಲಿ ಅವ್ಯವಸ್ಥೆಗಳು ಉಂಟಾಗಿ ದೇಶದ ಪರಿಸ್ಥಿತಿಯಲ್ಲಿ ಬಿಗಡಾಯಿಸಬಹುದಾದ ಪರಿಣಾಮವನ್ನು ಫ್ರಾನ್ಸ್ ದೇಶದಿಂದ ಪ್ರತಿಯೊಂದು ದೇಶವು ಪಾಠ ಕಲಿಯಬೇಕಾಗಿದೆ. ದೇಶದ ರಾಜಕೀಯ, ಆರ್ಥಿಕ ಹಾಗೂ ಔದ್ಯೋಗಿಕ ಬೆಳವಣಿಗೆಯೊಂದಿಗೆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ವಿಕಾಸವು ಆಗ ಬೇಕಾಗಿದೆ. ಅಂಕಿಅಂಶಗಳು, ವಿನೂತನ ಜೀವನಶೈಲಿ, ಫ್ಯಾಶನ್ ಪೆರೇಡಗಳು ಹಾಗೂ ಮುಕ್ತ ಜೀವನಶೈಲಿ ಯಿಂದ ಬಡತನದ ನಿರ್ಮೂಲನ ಅಸಾಧ್ಯ ಎಂಬುದರ ಪಾಠವನ್ನು ಇಲ್ಲಿನ ಹಿಂಸಾಚಾರ ತಿಳಿಸಿದೆ. ನಿಮ್ಮ ಮಾತುಗಳಂತೆ ಪ್ರತಿಯೊಂದು ದೇಶವೂ ಸಹ ಈ ತಿಳುವಳಿಕೆಯಿಂದ ಭವಿಷ್ಯವನ್ನು ರೂಪಿಸಬೇಕಾಗಿದೆ.

ಬೆಂಗಳೂರು **ನರೇಂದ್ರ ಸಿರಕಜೆ**

### 'ಮೋರೆ'ಗೆ ಮಸಿ, ಬೆಳಗಾಂ ಬಿಸಿ

ಮೊದಲಿಂದಲೂ ಮಹಾರಾಷ್ಟ್ರ ಎರಡು ಕಾರಣಕ್ಕೆ ಜಗತ್ಪ್ರಸಿದ್ಧಿ ಪಡೆದಿದೆ. ಮೊದಲನೆಯದು ಶಿವಸೇನೆ ಎಂಬ ಧರ್ಮಾಂಧ ವಾನರ ಸೇನೆಯ ಆಟಾಟೋಪ ಮತ್ತು ಎರಡನೆಯದಾಗಿ ಎಂಇಎಸ್ ಎಂಬ ಭಾಷಾಂಧ ಭಸ್ಮಾಸುರರ ಕಿರಾತಕ ಪಡೆ. ಬೆಳಗಾವಿ ಯಾವ ರಾಜ್ಯಕ್ಕೆ ಸೇರಬೇಕೆಂಬುದು ಮಹಾಜನ ವರದಿಯ ಮೂಲಕ ಈಗಾಗಲೇ ಇತ್ಯರ್ಥವಾಗಿದೆ. ಆದರೂ ಈ ಗಡಿವಿವಾದ ವೆಂಬ ಹಳೆಯ ಗಾಯಕ್ಕೆ ಆಗಾಗ ಉಪ್ಪು ಸವರಿ ಗಾಯ ವಾಸಿಯಾಗದಂತೆ ನೋಡಿಕೊಳ್ಳುವ ಎಂಇಎಸ್ ಭಾಷಾಂಧರ ಕಣ್ಣಿಗೆ ಜನರ ಬೇರಾವ ಸಮಸ್ಯೆಗಳೂ ಕಾಣುತ್ತಲೇ ಇಲ್ಲ. ಆಗಾಗ ತಂಟೆ ತಕರಾರು ಹಬ್ಬಿಸಿ, ಬೆಳಗಾವಿಯಲ್ಲಿ ಅನ್ಯೋನ್ಯವಾಗಿ ಹೊಂದಿಕೊಂಡು ಬದುಕುತ್ತಿರುವ ಲಕ್ಷಾಂತರ ಕನ್ನಡಿಗ ಮತ್ತು ಮರಾಠರ ಮನಸ್ಸಲ್ಲಿ ಭಾಷಾದ್ವೇಷದ ಕಿಡಿ ಹೊತ್ತಿಸಿ ಕೈಕಾಸಿಕೊಳ್ಳುವ ಈ ರಾಜಕೀಯ ಹುನ್ನಾರಗಳು ಕೊನೆಗೂ ಬಲಿ ತೆಗೆದುಕೊಳ್ಳುವುದು ಜನಸಾಮಾನ್ಯರ ಬದುಕನ್ನು ಮತ್ತು ಎರಡೂ ರಾಜ್ಯಗಳ ನೆಮ್ಮದಿಯನ್ನು.

ದಶಕಗಳ ಹಿಂದೆ ಆರ್.ಎಸ್.ಎನ್. ಗೌಡರ ಕನ್ನಡ ರಣಧೀರರ ಪಡೆಯು ಇದ್ದಕ್ಕಿದ್ದಂತೆ ಕನ್ನಡಿಗರ ಹೋರಾಟದ ಮುಂಚೂಣಿಗೆ ಬಂದು ಹಲವಾರು ಹುಂಬ ತನದ ಕೆಲಸಗಳಿಂದ ಮನೆಮಾತಾಯಿತು. ಯಾವಾಗ ಸಂಸದನನ್ನು ಅಪಹರಿಸಿ ಸಾಹಸವಾದಕ್ಕೆ ಕೈಹಾಕಿತೋ ಇಡೀ ಆಳುವ ವರ್ಗ ಮತ್ತು ಪೊಲೀಸ್ ವ್ಯವಸ್ಥೆ ಈ ಗೌಡರ ಪಡೆಯ ಮೇಲೆ ಮುರುಕೊಂಡು ಬಿದ್ದು ನೆಲಸಮ ಮಾಡಿ ಕಾರ್ಯಕರ್ತರನ್ನು ದಿಕ್ಕಾಪಾಲಾಗಿಸಿ ಗೌಡರಿಂದ ತಪ್ಪೊಪ್ಪಿಗೆ ಬರೆಸಿಕೊಂಡು ಮೂಲೆ ಗುಂಪಾಗಿಸಿತು. ಈಗ ಕರ್ನಾಟಕ ರಕ್ಷಣಾ ವೇದಿಕೆಯೂ ಸಹ ಅದೇ ಹಾದಿಯನ್ನು ಹಿಡಿದಂತಿದೆ. ಯಾವುದೇ ತತ್ವ, ಸಿದ್ಧಾಂತ ಮತ್ತು ಸಂಘಟನಾತ್ಮಕ ವಿವೇಚನೆಗಳಿಲ್ಲದೆಯೇ ಕೇವಲ ಭಾಷಾಂಧತೆಯ ಮೇಲೆ ಕಾರ್ಯಾಚರಣೆ ಗಿಳಿಯುವ ಯಾವುದೇ ಸಂಘವೂ ತುಂಬಾ ದಿನ ಬಾಳಿ ಬದುಕಿಲ್ಲ. ಆದರೆ ಕೆಲವು ನಾಯಕರು ಮಾತ್ರ ಕನ್ನಡದ ಹೆಸರಲ್ಲಿ ಆಸ್ತಿ ಅಂತಸ್ತು ಮತ್ತು ಸರಕಾರಿ ಸವಲತ್ತುಗಳ ಫಲಾನುಭವಿಗಳಾಗಿದ್ದು, ಅವರ ಭಾಷಾಂಧ ಭಾವನೆ ಗಳಿಗೆ, ಹುಂಬತನದ ಕಾರ್ಯಾಚರಣೆಗಳಿಗೆ ಕೈಕಾಲು, ಬಾಯಿಗಳಾಗಿದ್ದ ಕನ್ನಡದ ಕಾರ್ಯಕರ್ತರು ವ್ಯವಸ್ಥೆಯ ದೌರ್ಜನ್ಯಕ್ಕೆ ಸಿಕ್ಕು ಭ್ರಮನಿರಸರಾಗಿದ್ದಾರೆ. ರಕ್ಷಣಾ ವೇದಿಕೆಯ ಶ್ರೀ ನಾರಾಯಣಗೌಡ ಮತ್ತು ಕನ್ನಡಾಭಿಮಾನಿ ಗಳ ಪಡೆ ಭಾಷಾಂಧತೆಯನ್ನು ತೊರೆದು ವಿಚಾರವಾದವನ್ನು ಬೆಳೆಸಿಕೊಂಡು ಕರ್ನಾಟಕದ ಸರ್ವತೋಮುಖ ಅಭಿವೃದ್ಧಿಗೆ ಮಾರಕವಾಗಿರುವವರ ವಿರುದ್ಧ ಸಂಘಟನಾತ್ಮಕ, ತಾತ್ವಿಕ ಹೋರಾಟಕ್ಕೆ ಮುಂದಾಗಬೇಕಾದ ಅಗತ್ಯವಿದ್ದು, ಮತ್ತೊಬ್ಬ ಆರ್.ಎಸ್.ಎನ್. ಗೌಡರ ಉದಯ ಮತ್ತು ಅಂತ್ಯ ಬೇಕಾಗಿಲ್ಲವೆಂಬುದು ಕನ್ನಡಿಗರ ಬಯಕೆ.

ಬೆಳಗಾಂ ಮೇಯರ್ ಕರ್ನಾಟಕ ವಿರೋಧಿ ನಿರ್ಣಯ ಮಂಡಿಸಿ ಕರ್ನಾಟಕಕ್ಕೆ ಸವಾಲು ಹಾಕಿದ ತಕ್ಷಣ, ಬೆಳಗಾಂ ಮಹಾನಗರ ಪಾಲಿಕೆಯನ್ನೇ ಬರಕಾಸ್ತ ಮಾಡಬೇಕಾದ ಮುಖ್ಯಮಂತ್ರಿಗಳು ಸಮಸ್ಯೆ ಉಲ್ಬಣ ಗೊಳ್ಳುವವರೆಗೂ ಸುಮ್ಮನಿದ್ದದ್ದು ಯಾಕೆ? ತಮ್ಮ ಗುಪ್ತಚರ ದಳದ ಮೂಲಕ ರಕ್ಷಣಾ ವೇದಿಕೆಯವರು ಮೇಯರ್ ಮೋರೆಯವರನ್ನು ತದುಕಲು ಹುಡುಕು ತ್ತಿದ್ದಾರೆಂದು ಅರಿವಿದ್ದೂ ಧರಂಸಿಂಗ್ ಮೌನವಾಗಿದ್ದು ಏನನ್ನು ತೋರಿಸುತ್ತದೆ? ಇಷ್ಟೆಲ್ಲಾ ಆದ ನಂತರ ಧರಂ 'ಇದೊಂದು ದುರದೃಷ್ಟಕರ ಘಟನೆ' ಎಂದು ಹೇಳಿಕೆ ನೀಡಿ ಕೈತೊಳೆದುಕೊಂಡರು. ಈ ಎಲ್ಲ ರಾಜಕೀಯ ಕುತಂತ್ರ ಗಳನ್ನು ಕೆಲವು ಕನ್ನಡ ನಾಯಕರು, ಬುದ್ಧಿಜೀವಿಗಳು ಸರಕಾರದ ವೈಫಲ್ಯಗಳನ್ನು ಬಿಟ್ಟು ಇದ್ದಕ್ಕಿದ್ದಂತೆ ಭಾಷಾ ಭಾವತೀವ್ರತೆಗೊಳಗಾಗಿ ಚರ್ಚೆಗಳಲ್ಲಿ, ಖಂಡನಾ ಸಭೆಗಳಲ್ಲಿ, ಪತ್ರಿಕಾ ಹೇಳಿಕೆಗಳಲ್ಲಿ ಪ್ರತಿಕೃತಿ ದಹನಗಳಲ್ಲಿ ತುಂಬಾ ಬ್ಯುಸಿಯಾಗಿದ್ದು ಜನಸಾಮಾನ್ಯರು ಕಕ್ಕಾಬಿಕ್ಕಿ ಯಾಗಿ ಗೊಂದಲಕ್ಕೊಳಗಾಗಿದ್ದಾರೆ.

ಬೆಂಗಳೂರು **ಎಸ್. ಶಶಿಕಾಂತ ಯಡಹಳ್ಳಿ**

---

**ಸಂಪಾದಕೀಯ... ೭ನೇ ಪುಟದಿಂದ**

ಕೊಡುತ್ತಿದ್ದರಂತೆ, ಕವಿಗಳಿಗೆ. ನಮ್ಮ ಕೆಲವು ಕವಿಗಳು ಬೇರೆಯವರ ಪುಸ್ತಕಕ್ಕೆ ಮುನ್ನುಡಿ ಬರೆದುಕೊಡಲು ಇಷ್ಟು ಪದಗಳಿಗೆ ಇಷ್ಟು ಹಣ ಎಂದು ಲೆಕ್ಕ ಇಡುತ್ತಾರಂತೆ. ಪಾರ್ಲಿಮೆಂಟ್ ಸದಸ್ಯರು ಒಂದು ಪ್ರಶ್ನೆಯ ಇಷ್ಟು ಪದಗಳಿಗೆ ಇಷ್ಟು ಸಾವಿರ ಎಂದು ಲೆಕ್ಕಿಗರಾಗುವುದು ಹೊಸ ಸಂಸ್ಕೃತಿ.

* ಬೆಳಗಾವಿಯ ಮೋರೆಯವರ ಮೋರೆಗೆ ಮಸಿ ಬಳಿದ ವೀರರ ಕೆಚ್ಚೆದೆ ಹಾಗೂ ಕನ್ನಡದ ಬಗೆಗಿನ ಅವರ ಬದ್ಧತೆಯನ್ನು ಶ್ಲಾಘಿಸಿ ಕರ್ನಾಟಕದ ಕಣ್ಮಣಿಗಳು, ನಾಡೋಜರು, ಹರ್ಷ ವ್ಯಕ್ತಪಡಿಸಿದ್ದಾರೆ. ಮೋರೆಗೆ ಮಸಿಯ ಬದಲು ಸುಗಂಧ ಪೂಸಬೇಕಿತ್ತೆ, ಎಂದು ಆಲಂಕಾರಿಕ ಶಬ್ದಪ್ರಯೋಗ ಸಹ ನಡೆದಿದೆ. ಅದರಿಂದಲ್ಲವೆ ಕನ್ನಡ ಮತ್ತು ಕನ್ನಡ ನಾಡು ಶೋಭಿಸುವುದು?
* ಮಸಿ ಬಳಿಯುವ ಕನ್ನಡ ಪ್ರೇಮಿಗಳೂ ಗಮನಿಸದ ದುರಂತ ಸ್ವಾರಸ್ಯ ನಮ್ಮ ಕೆಲವು ಇಂಗ್ಲಿಷ್ ದಿನಪತ್ರಿಕೆಗಳಲ್ಲಿ ಕಾಣಬರುತ್ತದೆ. ಕನ್ನಡವನ್ನು ದಿವ್ಯ ನಿರ್ಲಕ್ಷ್ಯಕ್ಕೆ ಗುರಿ ಮಾಡುವ ನವ ಯುವಕ-ಯುವತಿಯರು ಅಂತಹ ಪತ್ರಿಕೆಗಳಲ್ಲಿದ್ದುಕೊಂಡು 'ಜನಮನ' ರೂಪಿಸುತ್ತಾರೆಂದು ತೋರುತ್ತದೆ. ಮಾನ್ಯ ಎಚ್. ಜಿ. ಸೋಮಶೇಖರ ರಾವ್ ಅವರ ''ಭ್ರಮಣ'' ಎಂಬ ಕೃತಿಯನ್ನು ನಮ್ಮ ಒಂದು ಇಂಗ್ಲಿಷ್ ಪತ್ರಿಕೆಯು ಸತತವಾಗಿ ಮೂರು ದಿನ ''ಬ್ರಾಹ್ಮಣ'' ಎಂದು ಅಚ್ಚುಮಾಡಿತ್ತು. ಕನ್ನಡವು ನಮ್ಮ ನಾಡಿನಲ್ಲಿ ಚಿರವಾಗಿ ಬಾಳುತ್ತದೆಂಬುದಕ್ಕೆ ಇನ್ನು ಬೇರೆ ಪುರಾವೆ ಏಕೆ ಬೇಕು!
* ನಾರಾಯಣಮೂರ್ತಿಯವರು ಒಂದು ರಾಜಿನಾಮೆ ಪತ್ರ ಕೊಟ್ಟರೆ ನಮ್ಮ ದೇಶದ ಪ್ರಧಾನಿಯವರು ಕೌಲಾಲುಂಪುರದ 'ಜಾಗೃತ' ಉದ್ಯಮಿಗಳ ಆತಂಕದ ಪ್ರಶ್ನೆಗೆ ಉತ್ತರ ನೀಡಬೇಕಾಗುತ್ತದೆ. 'ಮೂರ್ತಿ ಪ್ರಭಾವ' ಗಾಢವಾದ್ದು!
* ಸೂರ್ಯನು ಗ್ರಹವೋ ನಕ್ಷತ್ರವೋ ಎಂಬುದನ್ನು ಸರಿಯಾಗಿ ಹೇಳಿದರೆ ಅಮಿತಾಭ ಬಚ್ಚನ್ ಒಂದು ಕೋಟಿ ರೂಪಾಯಿ ಕೊಡುತ್ತಾರೆ. ಜ್ಞಾನದ ಸಾಗರ ತುಂಬಿ ಬರುತ್ತಿದೆಯಲ್ಲವೆ? ಮಕ್ಕಳಿಗೆ ಎಂತಹ ಆದರ್ಶದ ಹಾದಿ!
* ಎಂದೂ ನೈಸಾಗಿ ವ್ಯವಹರಿಸದಿದ್ದ ನೈಸ್ ಕಂಪನಿಗಾಗಿ ಸರ್ಕಾರವು ರೈತರಿಂದ ವಶ ಪಡಿಸಿಕೊಂಡಿದ್ದ ಭೂಮಿಯ ಸ್ವಲ್ಪ ಭಾಗವನ್ನು ಹೆದ್ದಾರಿ ನಿರ್ಮಾಣದ ಸಲುವಾಗಿ ಕಂಪನಿಯು ಹಣ ಎತ್ತಲು ಪರಭಾರೆ ಮಾಡಬಹುದೆಂಬ ತೀರ್ಮಾನವು ಜಮೀನು ಕಳೆದುಕೊಂಡ ರೈತರಿಗೆ ಹಾಲುಣಿಸುವ ಕೆಲಸವೇ ಇರಬೇಕಲ್ಲವೆ?
* ಕ್ರಿಕೆಟ್ ಕಂಟ್ರೋಲ್ ಬೋರ್ಡ್‌ಗಾಗಿ ಆಟವಾಡುವ ಶ್ರೀಮಂತ ಯುವಕರಿಗೆ ತರಬೇತುದಾರನಾಗಿ ಆಸ್ಟ್ರೇಲಿಯದ ಚಾಪೆಲ್‌ನನ್ನು ನೇಮಿಸಿಕೊಂಡರೆ ಹಾಕಿ ಬೋರ್ಡ್‌ನವರು ಹಿಂದೆ ಬಿದ್ದಾರೆ? ಅವರೂ ವಿದೇಶಿ ಬಿಳಿಯನೊಬ್ಬನನ್ನು ನೇಮಿಸಿ ಕೊಳ್ಳಬೇಕಂತೆ. ಆದರೆ ಈ ತಂಡದ ಸೋಲುವ ಅಧೀರತೆಗೆ ಪರಿಹಾರವಿನ್ನೂ ಸಿಕ್ಕಿಲ್ಲ. ಧ್ಯಾನ್‌ಚಂದ್ ನಾಡಿನಲ್ಲಿ ಎಂತಹ ವಿಪರ್ಯಾಸ!

* * *

ನಮ್ಮ ಕತೆ ಇದಾದರೆ ಚೀಣಾದ ಕತೆ ಕಡಿಮೆಯೇನಲ್ಲ. ಆ ದೇಶವನ್ನು ಮಾದರಿ ಯಾಗಿ ಹೆಸರಿಸುವ ಮಂದಿ ಹೆಚ್ಚುತ್ತಿದ್ದಾರೆ. ಅಲ್ಲಿಯ ತಂತ್ರಜ್ಞಾನ, ಕೌಶಲ್ಯ, ವಿದೇಶಿ ಬಂಡವಾಳಕ್ಕೆ ನೀಡಲಾಗುವ ಆಹ್ವಾನ, ಸಮಾಜವಾದಿ ಮುಕ್ತ ಮಾರುಕಟ್ಟೆಯೆಂಬ ಐತಿಹ್ಯ, ಅಂತರರಾಷ್ಟ್ರೀಯವಾಗಿ ಯಾವ ನಿಲುವೂ ತೆಗೆದುಕೊಳ್ಳದಿರುವ ಜಾಣತನ, ಇವೆಲ್ಲಾ ಮೆಚ್ಚುಗೆಗೆ ಪಾತ್ರವಾಗುತ್ತಿದೆ. ಮೆಚ್ಚಬಾರದೆಂಬ ಆಗ್ರಹವೇನೂ ಇಲ್ಲ. ಆದರೆ ಆ ದೇಶದ ತಂತ್ರಜ್ಞಾನವು ಎಲ್ಲಿ ವಿಜೃಂಭಿಸುತ್ತಿದೆ ಮತ್ತು ಜನಗಳ ಪ್ರಾಣಕ್ಕೆ ಬೆಲೆ ಎಷ್ಟು ಎಂಬ ಪ್ರಶ್ನೆಗಳು ಅಪ್ರಾಸಂಗಿಕವಲ್ಲ. ಇತ್ತೀಚೆಗೆ ಮಾನ್ಯ ಶ್ರೀ ಜಿ. ಶ್ರೀನಿವಾಸರಾಜು ಅವರ ಮೂಕನಾಟಕಗಳ ಇಂಗ್ಲಿಷ್ ಆವೃತ್ತಿ ಪ್ರಕಟವಾದಾಗ ಕೇಳಿಬಂದ ಒಂದು ಮಾತಿದು: ''ರಾಜು ಅವರು ಭಸ್ನಾಲಾ ಕವಿತೆ ಬರೆದರು, ಕಲ್ಲಿದ್ದಲು ಗಣಿಯ ದುರಂತದ ಹಿನ್ನೆಲೆಯಲ್ಲಿ. ಆದರೆ ಚೀಣಾದಲ್ಲಿ ಕವಿಗಳು ಅಂತಹ ದುರಂತಗಳ ಬಗ್ಗೆ ಕವನ ಬರೆಯುತ್ತಿಲ್ಲ. ಏಕೆಂದರೆ ದುರಂತಗಳಿರುವಷ್ಟು ಕವಿಗಳಿಲ್ಲವಲ್ಲ!''

೨೦೦೫ರಲ್ಲಿ ಯಾವೊಂದು ತಿಂಗಳಲ್ಲೂ ಚೀಣಾದ ಕಲ್ಲಿದ್ದಲು ಗಣಿಗಳಲ್ಲಿ ದುರಂತ ಸಾವುಗಳಾಗಲಿಲ್ಲವೆಂದು ಹೇಳಲಾಗದಂತಿರುವುದು ನಿಜ. ೨೦೦೬ರಲ್ಲಿ ಯಾವ ದೇಶದಲ್ಲೂ ಅಂತಹ ದುರಂತಗಳಾಗದಿರಲೆಂದು ಆಶಿಸೋಣ.

# ಅಹಿಂಸಾ ಮಾರ್ಗ

ಗಾಂಧೀಜಿ ಸ್ವಾತಂತ್ರ್ಯ ಚಳುವಳಿಯ ನಾಯಕರು ಹಾಗೂ ದಾರ್ಶನಿಕರು. ಅವರು ಬಳಸಿದ ವಿಶಿಷ್ಟವಾದ 'ಅಹಿಂಸಾತ್ಮಕ ಮಾರ್ಗ' ಜನಪ್ರಿಯ ಮತ್ತು ಹಲವರಿಂದ ಟೀಕೆಗೊಳಗಾದ ಮಾರ್ಗ. ಈ ಮಾರ್ಗ ಭಾರತದ ಒಂದು ತಲೆಮಾರಿನ ಜನರನ್ನು ನಿಷ್ಕ್ರಿಯರನ್ನಾಗಿ ಮಾಡಿತು ಎಂಬುದು ಗಾಂಧೀಜಿ ಮೇಲಿರುವ ಒಂದು ಟೀಕೆ. ಹಾಗಾದರೆ ಅಹಿಂಸಾ ಮಾರ್ಗದ ಹೋರಾಟ ಆ ಕಾಲಕ್ಕೆ ಉಪಯುಕ್ತ, ಸಮಯೋಚಿತ ಹಾಗೂ ಪ್ರಾಯೋಗಿಕವಾಗಿರಲಿಲ್ಲವೆ ?

ವೈಯಕ್ತಿಕವಾಗಿ ಗಾಂಧೀಜಿಯವರಿಗೆ 'ಅಹಿಂಸಾ' ಒಂದು ಮೌಲ್ಯ ಹಾಗೂ ಆದರ್ಶ. ಆದರೆ 'ಅಹಿಂಸಾತ್ಮಕ ಚಳುವಳಿ' ಒಂದು ರಾಜಕೀಯ ಚಳುವಳಿ. ಬ್ರಿಟಿಷರು ತಾವು ಸುಸಂಸ್ಕೃತರು ಹಾಗೂ ಪ್ರಜಾಪ್ರಭುತ್ವದ ರಕ್ಷಕರೆಂದು ಹೇಳಿಕೊಳ್ಳುತ್ತಿದ್ದರು. ಬ್ರಿಟನ್‌ನಲ್ಲಿ ಅಗ ಇದ್ದ ಸರ್ಕಾರ ಪ್ರಜಾಪ್ರಭುತ್ವ ವ್ಯವಸ್ಥೆ. ಆದರೆ ಭಾರತದಲ್ಲಿ ಅವರು ಸ್ಥಾಪಿಸಿದ ಆಡಳಿತ ವ್ಯವಸ್ಥೆ ಪ್ರಜಾಪ್ರಭುತ್ವವೂ ಅಲ್ಲ, ಸರ್ವಾಧಿಕಾರವೂ ಅಲ್ಲ. ಅದು ಅರೆ ಪ್ರಜಾಪ್ರಭುತ್ವ ಮತ್ತು ಅರೆ ಸರ್ವಾಧಿಕಾರಿ ಮಾದರಿಯದು. ಈ ವ್ಯವಸ್ಥೆಯಲ್ಲಿ ಸ್ವಲ್ಪ ಮಟ್ಟಿನ ಮಾತನಾಡುವ, ಬರೆಯುವ, ಭಾಷಣ ಮಾಡುವ ಮತ್ತು ಸಂಘಟನೆಗಳನ್ನು ಕಟ್ಟಿಕೊಳ್ಳುವ ಹಕ್ಕುಗಳು ಜನರಿಗಿದ್ದವು. 'ಹಿಂಸಾಮಾರ್ಗ'ದ ಮೂಲಕ ಬೃಹತ್ ಬ್ರಿಟನ್‌ನ್ನು ಎದುರಿಸಿದ್ದರೆ ಭೀಕರ ಪ್ರತಿಹಿಂಸೆಯಿಂದ ಬ್ರಿಟನ್ ಪ್ರತಿಭಟನೆಯನ್ನು ದಮನ ಮಾಡುತಿತ್ತು, ಬೇರೆಡೆಗಳಲ್ಲಿ ಮಾಡಿತ್ತು ಕೂಡ. ಬಡ ಗ್ರಾಮೀಣ ಭಾರತದ ವಾಸ್ತವಿಕ ಚಿತ್ರಣ ಪಡೆದಿದ್ದ ಗಾಂಧೀಜಿ ತಮಗೆ ಪ್ರಿಯವಾದ 'ಅಹಿಂಸಾತ್ಮಕ ಚಳುವಳಿಯ' ಮಾರ್ಗವನ್ನು ಭಾರತೀಯರಿಗೆ ಪರಿಚಯಿಸಿದರು. ದೈತ್ಯಶಕ್ತಿಯಾಗಿದ್ದ ಬ್ರಿಟನ್ ಎದುರು ನಿರಾಯುಧರೂ ಶಾಂತಿಪ್ರಿಯರೂ ಆದ ಸತ್ಯಾಗ್ರಹಿಗಳು ಅಂಜದೆ, ಅಳುಕದೆ ನಿಂತು ಅಹಿಂಸಾತ್ಮಕವಾಗಿ ಅವರನ್ನು ಎದುರಿಸಿ ಅವರ ಚಿತ್ರಹಿಂಸೆಯನ್ನು ಸಹಿಸಿ, ಬ್ರಿಟಿಷರ ನೈತಿಕ ದಿವಾಳಿತನವನ್ನು ಪ್ರಪಂಚಕ್ಕೆಲ್ಲಾ ತೋರಿಸುವುದು ಹಾಗೂ ಅವರ ಮನಃ ಪರಿವರ್ತನೆ ಮಾಡುವುದು ಅಹಿಂಸಾತ್ಮಕ ಹೋರಾಟದ ಗುರಿಯಾಗಿತ್ತು. ಇಂತಹ ಸಂದರ್ಭದಲ್ಲಿ ಬ್ರಿಟನ್‌ನಲ್ಲಿದ್ದ ಪ್ರಜಾಪ್ರಭುತ್ವ ಸರ್ಕಾರ ವಿಶ್ವದ ಜನಾಭಿಪ್ರಾಯವನ್ನು ಎದುರಿಸಬೇಕಾಗುತ್ತಿತ್ತು. ಈ 'ಅಹಿಂಸಾ ಮಾರ್ಗ'ದ ಹೋರಾಟ ಅರೆ ಪ್ರಜಾಪ್ರಭುತ್ವವಾದಿ ಹಾಗೂ ಅರೆ ಸರ್ವಾಧಿಕಾರಿ ವ್ಯವಸ್ಥೆಯಲ್ಲಿ ಹೆಚ್ಚು ಪರಿಣಾಮಕಾರಿಯೇ ಹೊರತು ಹಿಟ್ಲರನ ಜರ್ಮನಿ ಅಥವಾ ಝಾರನ ರಷ್ಯಾದಲ್ಲಿ ಅಲ್ಲ. ಗಾಂಧೀಜಿಯವರ ಹಿಂದಿದ್ದ ಬೃಹತ್ ಶಕ್ತಿಯೆಂದರೆ ಮುಗ್ಧರು, ಅನಕ್ಷರಸ್ಥರು, ಬಡವರೂ ಆದ ರೈತರು, ಕೂಲಿಕಾರ್ಮಿಕರು, ಆದಿವಾಸಿಗಳು ಹಾಗೂ ಮಹಿಳೆಯರು. ಇಂತಹ ನಿರಾಯುಧರಾದ ಜನಸಾಮಾನ್ಯರನ್ನು ಬಲಿಷ್ಠ ಬ್ರಿಟನ್‌ನೊಂದಿಗೆ ಹೋರಾಡಲು ಸಿದ್ಧಗೊಳಿಸಬೇಕಾದರೆ ಅದು ಅಹಿಂಸಾ ಮಾರ್ಗದಿಂದ ಮಾತ್ರ ಸಾಧ್ಯ. ಪ್ರಪಂಚದ ಯಾವ ಸರ್ಕಾರವೂ ತನ್ನ ವಿರುದ್ಧ 'ಹಿಂಸೆ'ಯನ್ನು ಸಹಿಸುವುದಿಲ್ಲ. ಅದರ ನೆಪದಲ್ಲಿ ಭೀಕರ ಪ್ರತಿಹಿಂಸೆ ಬಳಸಿ ಚಳುವಳಿಯನ್ನು ಹತ್ತಿಕ್ಕಿ ತನ್ನ ಕೆಲಸವನ್ನು ಸಮರ್ಥಿಸಿಕೊಳ್ಳುತ್ತದೆ. ತನ್ನ ದೈನಂದಿನ ಜೀವನ ನಿರ್ವಹಣೆಗೆ ಹೋರಾಟ ಮಾಡುವ ಜನಸಾಮಾನ್ಯರು ಹಿಂಸಾತ್ಮಕ ಚಳುವಳಿಗಳಲ್ಲಿ ತೊಡಗಿಕೊಳ್ಳಲು ಹೆದರುತ್ತಾರೆ. ಯಾಕೆಂದರೆ ಹಿಂಸಾತ್ಮಕ ಚಳುವಳಿಯಲ್ಲಿ ಭಾಗವಹಿಸಿದರೆ ತೆರಬೇಕಾದ ಬೆಲೆ ಮರಣದಂಡನೆ, ಜೀವಾವಧಿ ಶಿಕ್ಷೆ, ಇತ್ಯಾದಿ. ಆದರೆ ಅಹಿಂಸಾತ್ಮಕ ಚಳುವಳಿಗಳಲ್ಲಿ 'ಜನಸಾಮಾನ್ಯ'ರು ಧೈರ್ಯದಿಂದಲೇ ಭಾಗವಹಿಸುತ್ತಾರೆ. ಗಾಂಧೀಜಿಯವರ ಚಳುವಳಿಯಲ್ಲಿ ಮಹಿಳೆಯರು ದೊಡ್ಡ ಸಂಖ್ಯೆಯಲ್ಲಿ ಧೈರ್ಯದಿಂದ ಭಾಗವಹಿಸಿದ್ದೆ ಇದಕ್ಕೆ ಉದಾಹರಣೆ. ಅಹಿಂಸಾತ್ಮಕ ಚಳುವಳಿಗಳು ಬ್ರಿಟಿಷರ ಸರ್ಕಾರವನ್ನು ಹಲವು ಬಾರಿ ಇಕ್ಕಟ್ಟಿಗೆ ಸಿಲುಕಿಸುತ್ತಿದ್ದವು. ಶಾಂತ ರೀತಿಯಲ್ಲಿ ಮಾಡುವ ಪ್ರತಿಭಟನೆಯನ್ನು ನಿಗ್ರಹಿಸುವುದು ತುಂಬ ಕಷ್ಟ. ಅಹಿಂಸಾತ್ಮಕ ಚಳುವಳಿಗಾರರ ಮೇಲೆ ಹಿಂಸೆ ಪ್ರಯೋಗಿಸಿದ್ದರೆ ಬ್ರಿಟಿಷರು ತಮ್ಮ 'ನಾಗರಿಕ' ಮುಖವಾಡವನ್ನು ತೊರೆಯಬೇಕಾಗುತ್ತಿತ್ತು. ಇಂತಹ ಚಳುವಳಿಗಳನ್ನು ನಿಗ್ರಹಿಸದಿದ್ದರೆ ಸರ್ಕಾರ ಬಲವಿದ್ದೂ ಸೋತಂತೆ. ಆಗ ಸತ್ಯಾಗ್ರಹಿಗಳ ನೈತಿಕ ಬಲ ಹೆಚ್ಚುತ್ತದೆ. ಬ್ರಿಟಿಷರು ''ಏನೂ ಮಾಡುವಂತಿಲ್ಲ, ಮಾಡದಿರುವಂತಿಲ್ಲ'' ಎಂಬ ಇಕ್ಕಟ್ಟಿಗೆ ಸಿಲುಕಿದ್ದರು.

ಈ ಅಹಿಂಸಾತ್ಮಕ ಚಳುವಳಿಯ ಉತ್ತಮ ಉದಾಹರಣೆ ಧರ್ಸಾನಾ ಸತ್ಯಾಗ್ರಹ. ಮಹಾತ್ಮರು ಏಪ್ರಿಲ್ ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹ ಪ್ರಾರಂಭಿಸಿದರು. ಅದರ ಅಂಗವಾಗಿ ಮೇ ತಿಂಗಳಲ್ಲಿ ಧರ್ಸಾನಾ ಸತ್ಯಾಗ್ರಹ ಮಾಡಲಾಯಿತು. ಮುಂಬಯಿಗೆ ೧೫೦ ಮೈಲಿ ದೂರದಲ್ಲಿರುವ ಧರ್ಸಾನಾ ಎಂಬಲ್ಲಿ ಒಂದು ಸರ್ಕಾರಿ ಉಪ್ಪಿನ ಕೋಠಿ ಇತ್ತು. ಅಲ್ಲಿ ಚಳುವಳಿ ಹೂಡಲು ಹೊರಟಾಗ ಮೇ ೫ರಂದು ಗಾಂಧಿಯವರನ್ನು ಸರ್ಕಾರ ಬಂಧಿಸಿತು. ನಂತರ ಮೇ ೨೧ರಂದು ಧರ್ಸಾನಾದಲ್ಲಿ ಎರಡೂವರೆ ಸಾವಿರ ಸತ್ಯಾಗ್ರಹಿಗಳು ಸೇರಿದರು. ಅವರನ್ನು ಎದುರಿಸಲು ನಾಲ್ಕು ನೂರು ಪೊಲೀಸರು. ಪೊಲೀಸರ ಮುಖ್ಯ ಆಯುಧ, ಕೊನೆಯಲ್ಲಿ ಕಬ್ಬಿಣದ ಬಳೆ ಹೂಡಿದ ಐದು ಅಡಿ ಉದ್ದದ ಲಾಠಿ. ಕೋಠಿಯೊಳಕ್ಕೆ ಸತ್ಯಾಗ್ರಹಿಗಳು ಬಾರದಂತೆ ಸುತ್ತಲೂ ಮುಳ್ಳುತಂತಿ ಬೇಲಿ ಇತ್ತು. ಆಗ ಆಯ್ದ ಸತ್ಯಾಗ್ರಹಿಗಳು ಬೇಲಿಯ ಬಳಿ ಬರುತ್ತಿದ್ದರು. ಪೊಲೀಸರು ಲಾಠಿಯಿಂದ ನಿರಾಯುಧ ಸತ್ಯಾಗ್ರಹಿಗಳ ತಲೆ ಮತ್ತು ಭುಜಗಳ ಮೇಲೆ ಎರಗುತ್ತಿದ್ದರು. ಲಾಠಿಯ ಹೊಡೆತದ ಶಬ್ದ ಮತ್ತು ಪ್ರೇಕ್ಷಕರ ನಿಟ್ಟುಸಿರು ಬಿಟ್ಟರೆ ಬಡಿತದಿಂದ ಚೀರಿದವರಿಲ್ಲ. ಏಟು ತಿಂದು ಉರುಳುವವರೆಗೆ ತಲೆಯೆತ್ತಿ ಎದೆ ಚಾಚಿ ಮುನ್ನಡೆಯುತ್ತಿದ್ದ ಸತ್ಯಾಗ್ರಹಿಗಳಿಂದ ನೆಲವೆಲ್ಲಾ ನೆತ್ತರು. ಆದರೂ ಬೀಳುವ ಏಟಿಗೆ ತಡೆಯಾಗಿ ಕೈಯೆತ್ತುವವರಿಲ್ಲ. ಹೀಗೆ ೩೨೦ ಜನ ನೆಲದ ಮೇಲೆ ಬಿದ್ದಿದ್ದರು.

ಅಮೆರಿಕಾದ ಯುನೈಟೆಡ್ ಪ್ರೆಸ್ ಪ್ರತಿನಿಧಿ ವೆಬ್ ಮಿಲ್ಲರ್ ಈ ಘಟನೆಯ ಬಗ್ಗೆ ಹೀಗೆ ಹೇಳುತ್ತಾರೆ : 'ಹದಿನೆಂಟು ವರ್ಷಗಳ ಅವಧಿಯಲ್ಲಿ ಇಪ್ಪತ್ತಾರು ದೇಶಗಳಿಂದ ವರದಿ ಮಾಡಿರುವ ನಾನು ಅಸಂಖ್ಯಾತ ಗಲಭೆಗಳು, ಬೀದಿ ಕದನಗಳು, ದಂಗೆಗಳನ್ನು ಕಂಡಿದ್ದೇನೆ. ಆದರೆ ಧರ್ಸಾನಾದಲ್ಲಿ ಕಂಡಂತಹ ಬೀಭತ್ಸ ದೃಶ್ಯಗಳನ್ನು ಕಂಡಿಲ್ಲ.... ಕೆಲವೊಮ್ಮೆ ದೃಶ್ಯಗಳು ಎಷ್ಟು ಸಂಕಟಕರವಾಗಿದ್ದುವೆಂದರೆ ನೋಡಲಾರದೆ ನಾನು ಬೇರೆಡೆ ತಿರುಗುತ್ತಿದ್ದೆ.'' ಮರುದಿನವೇ ಈ ಸುದ್ದಿ ಜಗತ್ತಿನ ೧,೩೫೦ ಪತ್ರಿಕೆಗಳಲ್ಲಿ ಪ್ರಕಟವಾಯಿತು. ಇದರಿಂದ ಬ್ರಿಟಿಷರ ರಾಕ್ಷಸಿ ವೃತ್ತಿ ಜಗಜ್ಜಾಹೀರಾಯಿತು. ಒಂದು ಸೈನ್ಯ ಮಾಡಲಾರದಷ್ಟು ಬ್ರಿಟಿಷರ ಮಾನಹಾನಿಯನ್ನು ಕೆಲವೇ ಕೆಲವು ಸತ್ಯಾಗ್ರಹಿಗಳು ಮಾಡಿದ್ದರು. ಬ್ರಿಟಿಷರ 'ನಾಗರಿಕ' ಮುಖವಾಡ ಜಗತ್ತಿನೆದುರು ಕಳಚಿತು.

ಅಹಿಂಸಾತ್ಮಕ ಹೋರಾಟಗಾರರು ಅಕಸ್ಮಾತ್ ಹಿಂಸೆಗಿಳಿದಾಗ ಗಾಂಧೀಜಿ ತಮ್ಮ ಆಂದೋಲನವನ್ನು ಹಿಂತೆಗೆದುಕೊಳ್ಳುತ್ತಿದ್ದರು. ಯಾಕೆಂದರೆ ಇಲ್ಲದಿದ್ದರೆ ಆಗ ಸರ್ಕಾರಕ್ಕೊಂದು ಭೀಕರ ಪ್ರತಿಹಿಂಸೆ ಬಳಸಿ ಸತ್ಯಾಗ್ರಹಿಗಳನ್ನು ದಮನಿಸಲು ಅವಕಾಶ ಸಿಗುತ್ತಿತ್ತು. ಸರ್ಕಾರಕ್ಕೂ ತನ್ನ ಕ್ರಮ ಸಮರ್ಥಿಸಲು ಅವಕಾಶ ಸಿಗುತ್ತಿತ್ತು. ನಿರಾಯುಧ ಸತ್ಯಾಗ್ರಹಿಗಳಾದ ರೈತರು, ಕಾರ್ಮಿಕರು ಮತ್ತು ಮಹಿಳೆಯರನ್ನು ಸರ್ಕಾರದ 'ಪ್ರತಿಹಿಂಸೆ'ಯಿಂದ ರಕ್ಷಿಸಲು ಗಾಂಧೀಜಿ ಕೆಲ ವೇಳೆ ಆಂದೋಲನವನ್ನು ಹಿಂತೆಗೆದುಕೊಳ್ಳುತ್ತಿದ್ದರು. ಗಾಂಧೀಜಿಯವರಿಗೆ 'ಗುರಿ' ಮಾತ್ರ ಮುಖ್ಯವಲ್ಲ, ಗುರಿಮುಟ್ಟಲು ಬಳಸುವ 'ಮಾರ್ಗ' ಕೂಡ ಮುಖ್ಯ. ಇಂದಿಗೂ ಭಾರತೀಯ ಪ್ರಜಾತಂತ್ರ ವ್ಯವಸ್ಥೆಯಲ್ಲಿ 'ಗುರಿ' ಸಾಧನೆಗೆ 'ಅಹಿಂಸಾ ಮಾರ್ಗ' ಉತ್ತಮ ಮಾದರಿ. ಆದರೆ ನೈತಿಕ ಹಿನ್ನೆಲೆಯಿಲ್ಲದ ನಾಯಕತ್ವ ಕ್ಷುಲ್ಲಕ ಕಾರಣಗಳಿಗೆ ಪದೇ ಪದೇ ಈ ಮಾರ್ಗವನ್ನು ಬಳಸಿ ಇದರ ಹಿರಿಮೆಯನ್ನು ಹಾಳುಮಾಡಿದೆ.

ಡಾ|| ರಾಮದಾಸಪ್ರಭು ಸಿಂಗನಕೋಡಿ
ಚೇರ್ಕಾಡಿ - ೫೭೬ ೨೧೫
ಉಡುಪಿ ಜಿಲ್ಲೆ

## ದಿಗಿಲು

ಪಾರಿವಾಳಗಳ ದೊಡ್ಡ ಹಿಂಡು
ಒಮ್ಮೆಲೇ ಮುಗಿಲಿಗೇರಿತು
ಸರ್ಕಾರಿ ಮ್ಯೂಸಿಯವ್ ಬಳಿಯೇ
ನಾಲ್ಕು ನಾಡ ಬಾಂಬ್‌ಗಳು
ಸ್ಫೋಟಗೊಂಡಿದ್ದವು
ಅವಕ್ಕೀಗ ಅಚ್ಚರಿ, ದಿಗಿಲು
ಇಷ್ಟು ದಿನ ಸುರಕ್ಷಿತ ಎಂದುಕೊಂಡಿದ್ದ
ತಮ್ಮ ತಾಣಕ್ಕೆ ಏನಾಯಿತು
ಅಂತ.

ಕೆ. ಎಸ್. ರವಿಕುಮಾರ್, ಹಾಸನ

# ಕರ್ನಾಟಕದ ಅಭಿವೃದ್ಧಿ 50 ವರ್ಷಗಳ ಹಾಡು-ಪಾಡು

**ಡಾ|| ಟಿ. ಆರ್. ಚಂದ್ರಶೇಖರ**

## ೧.೧ ಪ್ರಸ್ತಾವನೆ

ಒಂದು ನಾಡಿಗೆ ಸಂಬಂಧಿಸಿದಂತೆ ೫೦ ವರ್ಷವು ದೀರ್ಘಾವಧಿಯೂ ಅಲ್ಲ, ಅಲ್ಪಾವಧಿಯೂ ಅಲ್ಲ. ಅದೊಂದು ಸಂಧಿಕಾಲ. ಸಾಮಾಜಿಕವಾಗಿ ದೀರ್ಘ ಮತ್ತು ಅಲ್ಪಕಾಲವೆಂಬ ಸಂಗತಿಗಳು ಸಾಪೇಕ್ಷ. ಕಾಲದ ಹರವಿನ ವರ್ಗೀಕರಣವು ಸಂದರ್ಭವನ್ನು ಅವಲಂಬಿಸಿಕೊಂಡಿರುತ್ತದೆ. ಕರ್ನಾಟಕದ ಸಂದರ್ಭದಲ್ಲಿ ಕಳೆದ ೫೦ ವರ್ಷ ತುಂಬಾ ಮುಖ್ಯವಾದ ಕಾಲ ಘಟ್ಟವಾಗಿದೆ. ಏಕೆಂದರೆ, ನಾಡು ಉದಯವಾದ ೧೯೫೬ರಲ್ಲಿ ನಮ್ಮ ಎದುರಿಗೆ ಯಾವ ಪ್ರಶ್ನೆಗಳಿದ್ದವೋ ಅದಕ್ಕಿಂತ ಭಿನ್ನವಾದ ಪ್ರಶ್ನೆಗಳು ಇಂದು ನಮ್ಮನ್ನು ಕಾಡುತ್ತಿವೆ. ಏಕೀಕರಣದ ಆಶಯವು ಇಂದು ಪ್ರಶ್ನೆಗೆ ಒಳಗಾಗುತ್ತಿದೆ. ಆದ್ದರಿಂದ ೫೦ ವರ್ಷವು ನಾಡಿಗೆ ತುಂಬುತ್ತಿರುವ ಕಾಲಘಟ್ಟವು ತುಂಬಾ ಮುಖ್ಯವಾಗಿದೆ. ಸಾಮಾನ್ಯವಾಗಿ ಇಂತಹ ಸಂದರ್ಭವನ್ನು ಸಂಭ್ರಮ-ವೈಭವದಿಂದ ಆಚರಿಸುವುದು ವಾಡಿಕೆಯಲ್ಲಿದೆ. ನಾಡಿನ ಸಿದ್ಧಿ-ಸಾಧನೆಗಳನ್ನು ಗುಡ್ಡೆಹಾಕುವ, ಹಾಡಿ-ಹೊಗಳುವ ಪರಿ ಕಂಡುಬರುತ್ತದೆ. ಹಾರ-ತುರಾಯಿಗಳು ಮತ್ತು ಬಾಜಾ-ಭಜಂತ್ರಿಗಳು ಮೆರೆದಾಡುತ್ತವೆ. ಸನ್ಮಾನ-ಸಮಾವೇಶ, ಅಭಿನಂದನೆ-ಅಭಿವಂದನೆಗಳು ಸಾಕು ಬೇಕೆನಿಸುವಷ್ಟು ಇರುತ್ತದೆ. ಇದು ಉತ್ಸವದ ಬಗೆ.

ಇದಕ್ಕೆ ಭಿನ್ನವಾದ ಬಗೆಯೊಂದಿದೆ. ಈ ೫೦ ವರ್ಷಗಳ ಅವಧಿಯನ್ನು ಆತ್ಮಾವಲೋಕನದ ಪರಿಯಲ್ಲಿ ಪರಿಭಾವಿಸಿಕೊಳ್ಳುವ ಬಗೆ ಇದು. ನಾಡಿನ ಮುತ್ಸದ್ದಿಗಳಿಗೆ, ವಿದ್ವಾಂಸರಿಗೆ, ಸಾಹಿತಿಗಳಿಗೆ, ಸಾಮಾಜಿಕರಿಗೆ ಇದೊಂದು ಆತ್ಮ ನಿರೀಕ್ಷಣೆಯ ಸಂದರ್ಭ. ಉತ್ಸವ-ದಿಬ್ಬಣ- ಭಾವಾವೇಶಗಳು ಬೇಕು, ನಿಜ. ಆದರೆ ಉತ್ತರದಾಯಿತ್ವದ ಬಗ್ಗೆಯೂ ಯೋಚಿಸುವ ಅಗತ್ಯವಿದೆ. ಮೊದಲನೆಯ ಬಗೆಯು ಸುಲಭದ ದಾರಿ. ಎರಡನೆಯದು ಕಷ್ಟದ ದಾರಿ. ನಮ್ಮನ್ನು ನಾವು ಎದುರಿಗಿಟ್ಟುಕೊಂಡು ಪರೀಕ್ಷೆಗೆ- ಮೌಲ್ಯಮಾಪನಕ್ಕೆ ಒಳಪಡಿಸಿಕೊಳ್ಳುವುದಿದೆಯಲ್ಲಾ ಅದು ತಿಳಿದುಕೊಂಡಿರುವಷ್ಟು ಸರಳವಾದ ಸಂಗತಿಯಲ್ಲ.

ಪ್ರಸ್ತುತ ಅಧ್ಯಯನ ಪ್ರಬಂಧದಲ್ಲಿ ಕರ್ನಾಟಕವು ಕಳೆದ ೫೦ ವರ್ಷಗಳ ಕಾಲಾವಧಿಯಲ್ಲಿ ಅನುಭವಿಸಿದ ಸೋಲು-ಗೆಲುವುಗಳು ಮತ್ತು ಎದುರಿಸಿದ ಏಳು-ಬೀಳುಗಳನ್ನು ಆತ್ಮಾವಲೋಕನ ಪರಿಯಲ್ಲಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ಅಂಕಿ-ಅಂಶಗಳೇ ನಿಕಷವಲ್ಲ. ಅವುಗಳ ಅಡಿಯಲ್ಲಿ ಪ್ರಚ್ಛನ್ನವಾಗಿ ಅಡಗಿರುವ ರಾಜಕೀಯ-ಸಾಮಾಜಿಕ ಸಂಗತಿಗಳನ್ನು ಚರ್ಚೆಯ ಮುಂಚೂಣಿಗೆ ತರುವ ಉದ್ದೇಶವಿದೆ.

ಪ್ರಸ್ತುತ ಅಧ್ಯಯನ ಪ್ರಬಂಧದಲ್ಲಿ ಕರ್ನಾಟಕವು ಕಳೆದ ೫೦ ವರ್ಷಗಳ ಕಾಲಾವಧಿಯಲ್ಲಿ ಅನುಭವಿಸಿದ ಸೋಲು-ಗೆಲುವುಗಳು ಮತ್ತು ಎದುರಿಸಿದ ಏಳು-ಬೀಳುಗಳನ್ನು ಆತ್ಮಾವಲೋಕನ ಪರಿಯಲ್ಲಿ ಪರಿಶೀಲಿಸಲು ಪ್ರಯತ್ನಿಸಲಾಗಿದೆ. ಇಲ್ಲಿ ಅಂಕಿ-ಅಂಶಗಳೇ ನಿಕಷವಲ್ಲ. ಅವುಗಳ ಅಡಿಯಲ್ಲಿ ಪ್ರಚ್ಛನ್ನವಾಗಿ ಅಡಗಿರುವ ರಾಜಕೀಯ-ಸಾಮಾಜಿಕ ಸಂಗತಿಗಳನ್ನು ಚರ್ಚೆಯ ಮುಂಚೂಣಿಗೆ ತರುವ ಉದ್ದೇಶವಿದೆ.

ಈ ಪ್ರಬಂಧವನ್ನು ರೂಪಿಸಿರುವ ಸೈದ್ಧಾಂತಿಕ ಸಂಗತಿಗಳನ್ನು ಇಲ್ಲಿ ಉಲ್ಲೇಖಿಸುವುದು ಅಗತ್ಯ. ಅಭಿವೃದ್ಧಿಯನ್ನು ಇಲ್ಲಿ ಅಖಂಡ ಪ್ರಕ್ರಿಯೆಯಾಗಿ ಪರಿಭಾವಿಸಿಕೊಂಡಿಲ್ಲ. ಆದ್ದರಿಂದ ಕರ್ನಾಟಕದ ಅಭಿವೃದ್ಧಿಯ ಖಂಡ ಸ್ವರೂಪಿ ನೆಲೆಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಜಾತಿಭೇದದ ನೆಲೆಯಿಂದ ಅಭಿವೃದ್ಧಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಲಿಂಗ ಸಂಬಂಧಗಳ ಚೌಕಟ್ಟಿನಲ್ಲಿ ನಾಡಿನ ಅಭಿವೃದ್ಧಿಯನ್ನು ಇಲ್ಲಿ ಪೃಥಕ್ಕರಿಸಲಾಗಿದೆ. ಪ್ರಾದೇಶಿಕವಾಗಿ ಅಭಿವೃದ್ಧಿಯ ಹರವನ್ನು ಪರಾಮರ್ಶೆಗೆ ಒಳಪಡಿಸಲಾಗಿದೆ. ವರಮಾನ ವರ್ಧನೆ ಹಾಗೂ ಜನರ ಧಾರಣ ಶಕ್ತಿಯ ಸಂವರ್ಧನೆಗಳನ್ನು ಇಲ್ಲಿ ಮುಖಾಮುಖಿಯಾಗಿಸಲಾಗಿದೆ. ಕೃಷಿ, ಉದ್ದಿಮೆ, ಸಾರಿಗೆ, ವ್ಯಾಪಾರ, ವಾಣಿಜ್ಯ ಮುಂತಾದ ಸಂಗತಿಗಳು ಅಭಿವೃದ್ಧಿಗೆ ಎಷ್ಟು ಮುಖ್ಯವೋ ಅಷ್ಟೇ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಆಹಾರ ಭದ್ರತೆ ಮುಂತಾದವುಗಳು ಮುಖ್ಯವೆಂದು ಇಲ್ಲಿ ಪ್ರತಿಪಾದಿಸಲಾಗಿದೆ. ಅಭಿವೃದ್ಧಿಯೆನ್ನುವುದು ಕೇವಲ ಬಂಡವಾಳಕ್ಕೆ ಸೀಮಿತವಾದ ಸಂಗತಿಯಲ್ಲ. ಕಳೆದ ೫೦ ವರ್ಷಗಳ ಕಾಲಖಂಡದಲ್ಲಿ ಅಭಿವೃದ್ಧಿಯು ಮಹಿಳೆಯರು ಮತ್ತು ದಲಿತರನ್ನು ಒಳಗೊಂಡಂತೆ ಜನರಿಗೆ ಅಭಿಮುಖವಾಗಿದೆಯೋ ಅಥವಾ ವಿಮುಖವಾಗಿದೆಯೋ ಎಂಬುದನ್ನು ಇಲ್ಲಿ ಮುಖ್ಯ ಪ್ರಶ್ನೆಯನ್ನಾಗಿ ಪರಿಗಣಿಸಲಾಗಿದೆ. ಅಭಿವೃದ್ಧಿಯು ಜನರಿಗೆ ಆಹಾರವಾಗಿ, ಆರೋಗ್ಯವಾಗಿ, ಆಶ್ರಯವಾಗಿ, ಅಕ್ಷರವಾಗಿ ಒದಗುತ್ತಿದೆಯೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದ ೫.೨೭ ಕೋಟಿ ಜನರನ್ನು ಅದು ಒಳಗೊಂಡಿದೆಯೆ ಎಂಬ ಪ್ರಶ್ನೆ ಇಲ್ಲಿ ತುಂಬಾ ಮುಖ್ಯವಾಗುತ್ತದೆ.

ಪ್ರಸ್ತಾವನೆಯನ್ನು ಸೇರಿಸಿಕೊಂಡು ಐದು ಭಾಗಗಳಲ್ಲಿ ಪ್ರಸ್ತುತ ಪ್ರಬಂಧವನ್ನು ಕಟ್ಟಲಾಗಿದೆ. ಪ್ರಸ್ತಾವನೆ ನಂತರ ಬರುವ ಎರಡನೆಯ ಭಾಗದಲ್ಲಿ ಅಭಿವೃದ್ಧಿಯ ಎತ್ತರ-ಬಿತ್ತರಗಳನ್ನು ವಿವಿಧ ಮಾನದಂಡಗಳ ಮೂಲಕ ಗುರುತಿಸಲಾಗಿದೆ. ಅಂಕಿ-ಅಂಶಗಳು ೧೯೬೧ರಿಂದ ೨೦೦೧ರ ಅವಧಿಗೆ ದೊರೆಯುತ್ತವೆ. ಈ ಕಾಲಘಟ್ಟಗಳಿಗೆ ಸಂಬಂಧಿಸಿದಂತೆ ಅಂಕಿ-ಅಂಶಗಳನ್ನು ಇಲ್ಲಿ ಬಳಸಲಾಗಿದೆ.

ಮೂರನೆಯ ಪ್ರಧಾನ ಭಾಗದಲ್ಲಿ ಅಭಿವೃದ್ಧಿಯ ಖಂಡರೂಪಿ ನೆಲೆಗಳನ್ನು ಜಾತಿಭೇದ, ಲಿಂಗ ಸಂಬಂಧಗಳು ಮತ್ತು ಪ್ರಾದೇಶಿಕ ವಿಸ್ತೃತತೆ ಚೌಕಟ್ಟಿನಲ್ಲಿ ವಿಶ್ಲೇಷಿಸಲಾಗಿದೆ. ನಾಲ್ಕನೆಯ



ಭಾಗದಲ್ಲಿ 'ಸ್ವಾತಂತ್ರ್ಯವಾಗಿ ಅಭಿವೃದ್ಧಿ' ಎಂಬ ಅಮರ್ತ್ಯ ಸೇನ್ ಅವರ ವಿಚಾರಗಳನ್ನು ಕರ್ನಾಟಕಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ.

ಕೊನೆಯ ಭಾಗದಲ್ಲಿ ಅಧ್ಯಯನದ ಸಾರಾಂಶವನ್ನು ನೀಡುವುದರ ಜೊತೆಗೆ ಕರ್ನಾಟಕದ ಅಭಿವೃದ್ಧಿಯ ಪಥ ಮುಂದಿನ ವರ್ಷಗಳಲ್ಲಿ ಯಾವುದಿರಬಹುದು ಎಂಬುದನ್ನು ಹಾಗೂ ನಾಡಿನ ಅಭಿವೃದ್ಧಿಗೆ ಸಂಬಂಧಿಸಿದಂತೆ ಯಾವ ಕಾರ್ಯತಂತ್ರವನ್ನು ಅಳವಡಿಸಿಕೊಳ್ಳಬೇಕು ಎಂಬ ಸಂಗತಿಯನ್ನು ನೀಡಲಾಗಿದೆ.

ಭಾಗ – ೨

### ೨.೧ ಅಭಿವೃದ್ಧಿಯ ಚಾಚು ಮತ್ತು ಹರವು

ಪ್ರಸ್ತುತ ಭಾಗದಲ್ಲಿ ಕರ್ನಾಟಕವು ಕಳೆದ ೫೦ ವರ್ಷಗಳಲ್ಲಿ ಸಾಧಿಸಿಕೊಂಡಿರುವ ಅಭಿವೃದ್ಧಿಯ ಎತ್ತರ-ಬಿತ್ತರಗಳನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ತಮಿಳುನಾಡು ಮತ್ತು ಕೇರಳ ರಾಜ್ಯಗಳು ಸಾಧಿಸಿಕೊಂಡಿರುವ ಅಭಿವೃದ್ಧಿಯಲ್ಲಿ ಸಮಾಜ ವಿಜ್ಞಾನಿಗಳು 'ಮಾದರಿ'ಯನ್ನು ಕಂಡುಕೊಂಡಿದ್ದಾರೆ.

ಕರ್ನಾಟಕವು ಸಾಧಿಸಿಕೊಂಡಿರುವ ಅಭಿವೃದ್ಧಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಲ್ಲಿಯೂ ನಮಗೆ 'ಮಾದರಿ'ಯೊಂದು ಕಂಡುಬರುತ್ತದೆ. ಈ ಹಿನ್ನೆಲೆಯಲ್ಲಿ ಕರ್ನಾಟಕವನ್ನು 'ಮಧ್ಯಮಗತಿ ಸಮಾಜ'ವೆಂದೂ, 'ಮಧ್ಯಮಗತಿ ಆರ್ಥಿಕತೆ'ಯೆಂದೂ ವಿವರಿಸಬಹುದಾಗಿದೆ. ಪ್ರಖ್ಯಾತ ಸಮಾಜಶಾಸ್ತ್ರಜ್ಞ ಎಂ. ಎನ್. ಶ್ರೀನಿವಾಸ್, ಕರ್ನಾಟಕ ಅಧ್ಯಯನದಲ್ಲಿ ಕಳೆದ ಮೂರು-ನಾಲ್ಕು ದಶಕಗಳಿಂದ ತೊಡಗಿರುವ ಕರ್ನಾಟಕ ತಜ್ಞ ಜೇಮ್ಸ್ ಮೇನರ್, ಹಾಗೂ ವಿನೋದ್ ವ್ಯಾಸುಲು ಮತ್ತು ಆರ್. ಎಲ್. ಎಮ್. ಪಾಟೀಲ್ ಮುಂತಾದವರು ಕರ್ನಾಟಕವನ್ನು ಮಧ್ಯಮಗತಿ ಸಮಾಜವೆಂದು ಕರೆದಿದ್ದಾರೆ. ಈ ಮಧ್ಯಮ ಗತಿಯು ಆರ್ಥಿಕತೆ ಮತ್ತು ರಾಜಕಾರಣಕ್ಕೂ ಅನ್ವಯವಾಗುವ ಸಂಗತಿಯಾಗಿದೆ.

ಬಿಹಾರ, ಮಧ್ಯ ಪ್ರದೇಶ, ರಾಜಸ್ಥಾನ ಮತ್ತು ಉತ್ತರ ಪ್ರದೇಶ (ಬಿಮಾರು) ರಾಜ್ಯಗಳಂತೆ ಕರ್ನಾಟಕವು ದುಃಸ್ಥಿತಿಯನ್ನು ಎದುರಿಸುತ್ತಿಲ್ಲ. ಹಾಗೆಯೇ ಪಂಜಾಬ್, ಹರಿಯಾಣ, ಮಹಾರಾಷ್ಟ್ರ, ಗುಜರಾತ್ ರಾಜ್ಯಗಳಂತೆ ಅಭಿವೃದ್ಧಿಯ ಔನ್ನತ್ಯವನ್ನು ಮೆರೆಯುತ್ತಿಲ್ಲ. ಇವೆರಡೂ ಗುಂಪುಗಳ ಅಭಿವೃದ್ಧಿಯ ಅನುಭವಗಳಿಗಿಂತ ಕರ್ನಾಟಕದ ಅಭಿವೃದ್ಧಿ ಸ್ವರೂಪ ಭಿನ್ನವಾಗಿದೆ. ರಾಜ್ಯದ ಅಭಿವೃದ್ಧಿಯ ಸ್ವರೂಪದಲ್ಲಿ ಅದ್ಭುತವಾದುದೇನಿಲ್ಲ. ಅದೇ ರೀತಿ ಅದರ ಸಾಧನೆಯು ಅಲ್ಲಗಳೆಯುವಂತಹದ್ದೇನಲ್ಲ. ಉಗ್ರ, ತೀವ್ರ ಎಂಬ ವಿಶೇಷಣಗಳನ್ನು ಇಲ್ಲಿ ಬಳಸಲು ಅವಕಾಶವಿಲ್ಲ. ಅದೇ ರೀತಿ ಅದನ್ನು ಯಥಾಸ್ಥಿತಿವಾದಿಯೆಂದೂ ಹೇಳಲು ಸಾಧ್ಯವಿಲ್ಲ. ನಮ್ಮ ಸಮಾಜ, ಆರ್ಥಿಕತೆ, ರಾಜಕಾರಣದ ಮೂಲಗುಣವೆಂದರೆ ಬದಲಾವಣೆ – ಅಭಿವೃದ್ಧಿಗಳನ್ನು ಸಾವಕಾಶವಾಗಿ ಮತ್ತು ಸತತವಾಗಿ ಧಾರಣೆ ಮಾಡಿಕೊಳ್ಳುವಂತಹದ್ದಾಗಿದೆ.

ಕೃಷಿಯಲ್ಲಿ ತಮಿಳುನಾಡು, ಆಂಧ್ರ, ಪಂಜಾಬುಗಳಂತೆ ಕರ್ನಾಟಕವು ತೀವ್ರಗತಿಯ 'ಹಸಿರುಕ್ರಾಂತಿ'ಯನ್ನೇನೂ ಸಾಧಿಸಿಕೊಂಡಿಲ್ಲ. ಆದರೆ ರಾಜ್ಯದ ಕೃಷಿ ವಿಶ್ವವಿದ್ಯಾಲಯಗಳ ಬೆಂಬಲದಿಂದ ಹಾಗೂ ಜನರ ಕರ್ತೃತ್ವ ಶಕ್ತಿಯಿಂದ ಒಣಭೂಮಿ ಬೇಸಾಯದಲ್ಲಿ ಕರ್ನಾಟಕವು ಸಾಕಷ್ಟು ಅಭಿವೃದ್ಧಿ ಸಾಧಿಸಿಕೊಂಡಿದೆ.

ಇಂದಿಗೂ ರಾಜ್ಯವು ಉದಯವಾಗಿ ೫೦ ವರ್ಷಗಳ ನಂತರವೂ ರಾಜ್ಯದಲ್ಲಿ ನೀರಾವರಿ ಪ್ರದೇಶದ ಪ್ರಮಾಣ ಶೇ. ೩೦ ದಾಟಿಲ್ಲ. ಸಾಗುವಳಿ ಪ್ರದೇಶದಲ್ಲಿ ಶೇ. ೭೦ರಷ್ಟು ಒಣ ಬೇಸಾಯವಿದೆ. ರಾಷ್ಟ್ರದಲ್ಲಿ ಒಣಬೇಸಾಯದ ವಿಸ್ತೀರ್ಣದಲ್ಲಿ ಮೂರನೆಯ ಸ್ಥಾನದಲ್ಲಿ ರಾಜ್ಯವಿದೆ. ಈ ಎಲ್ಲ ಇತಿಮಿತಿಗಳ ನಡುವೆ ಅದು ಆಹಾರದಲ್ಲಿ ಸ್ವಾವಲಂಬಿಯಾಗಿದೆ. ಸತತವಾಗಿ ಮೂರು-ನಾಲ್ಕು ವರ್ಷಗಳು ಸಂಭವಿಸಿದ ಬರಗಾಲವನ್ನು ಸಮರ್ಥವಾಗಿ ರಾಜ್ಯ ಎದುರಿಸಿದೆ. ಕೃಷಿಗೆ ಸಂಬಂಧಿಸಿದಂತೆ ಕರ್ನಾಟಕದ ಸಾಧನೆಯು ನಿಜಕ್ಕೂ ಅದ್ಭುತವಾದುದು. ಇದರ ಕೀರ್ತಿ ನಾಡಿನ ಸರಿಸುಮಾರು ೧೫೦ ಲಕ್ಷ ಕೃಷಿ ದುಡಿಮೆಗಾರರಿಗೆ ಸಲ್ಲಬೇಕು.

ಉದ್ದಿಮೆಗಳಿಗೆ ಸಂಬಂಧಿಸಿದಂತೆ ಒಂದು ಕಾಲಕ್ಕೆ ರಾಷ್ಟ್ರದಲ್ಲಿ ರಾಜ್ಯಕ್ಕೆ ಉನ್ನತ ಸ್ಥಾನವಿತ್ತು. ರಾಜ್ಯದ ಉದ್ದಿಮೆ ವಲಯದ ಬೆಳವಣಿಗೆಯು ಸರಿಸುಮಾರು ೧೯೮೫ರಿಂದೀಚೆಗೆ ಸ್ಥಗಿತ ಗತಿಯಲ್ಲಿ ನಡೆದಿದೆ. ಅದನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಪ್ರಮಾಣ ಹಾಗೂ ಅದರಿಂದ ಪ್ರಾಪ್ತವಾಗುತ್ತಿರುವ ಉತ್ಪತ್ತಿ ಪ್ರಮಾಣವು ಕಳೆದ ೨೦ ವರ್ಷಗಳಿಂದ ಸ್ಥಿರವಾಗಿಬಿಟ್ಟಿದೆ. ಇದೀಗ ತೃತೀಯ ವಲಯದ ಸೇವಾ ಚಟುವಟಿಕೆಗಳು ಆಸ್ಫೋಟಕಾರಿ ಗತಿಯಲ್ಲಿ ಬೆಳೆಯುತ್ತಿವೆ. ಮಾಹಿತಿ ತಂತ್ರಜ್ಞಾನ, ಜೈವಿಕ ವಿಜ್ಞಾನ, ವಿದ್ಯುನ್ಮಾನ, ಮಾಧ್ಯಮ ಮುಂತಾದ ಸೇವಾ ಚಟುವಟಿಕೆಗಳಲ್ಲಿ ನಾಗಾಲೋಟದ ಪ್ರಗತಿ ಕಂಡುಬಂದಿದೆ.

### ೨.೨ ಅಭಿವೃದ್ಧಿಯ ಸೀಮಿತ ವ್ಯಾಪ್ತಿ

ಕೊಲಿನ್ ಕ್ಲಾರ್ಕ್, ಸೈಮನ್ ಕುಜ್ನೆಟ್ಸ್ ಮುಂತಾದ ತಜ್ಞರು ಅಭಿವೃದ್ಧಿಯನ್ನು ವರಮಾನ

ಹಾಗೂ ದುಡಿಮೆಗಾರರ ವಲಯವಾರು ಸಂರಚನೆಯಲ್ಲಿ ಉಂಟಾಗುವ ಬದಲಾವಣೆಗಳಲ್ಲಿ ಪರಿಭಾವಿಸಿಕೊಳ್ಳುತ್ತಾರೆ. ಮೂರು ವಲಯಗಳ ನಡುವೆ ರಾಜ್ಯದ ವರಮಾನ ಹಾಗೂ ದುಡಿಮೆಗಾರರ ಹಂಚಿಕೆಯ ಸಾಪೇಕ್ಷ ಪ್ರಮಾಣಗಳಲ್ಲಿನ ಬದಲಾವಣೆಯಲ್ಲಿ ಅಭಿವೃದ್ಧಿಯನ್ನು ಗುರುತಿಸಲಾಗುತ್ತದೆ. ಪ್ರಾಥಮಿಕ ವಲಯದಿಂದ ಪ್ರಾಪ್ತವಾಗುವ ವರಮಾನದ ಪ್ರಮಾಣ ಹಾಗೂ ಅದನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಪ್ರಮಾಣವು ಕಡಿಮೆಯಾಗುತ್ತಾ ನಡೆದು ದ್ವಿತೀಯ ವಲಯ, ತದನಂತರ ತೃತೀಯ ವಲಯಗಳು ಕ್ರಮವಾಗಿ ಪ್ರಾಧಾನ್ಯತೆ ಪಡೆಯುವ ಪರಿಯನ್ನು ಅಭಿವೃದ್ಧಿಯೆಂದು ಹೇಳಬಹುದು. ಕರ್ನಾಟಕ ರಾಜ್ಯದ ರಾಚನಿಕ ಸ್ವರೂಪದಲ್ಲಿ ಉಂಟಾದ ಬದಲಾವಣೆಗಳನ್ನು **ಕೋಷ್ಟಕ-೧**ರಲ್ಲಿ ತೋರಿಸಲಾಗಿದೆ. ಇದು ಅನೇಕ ದೃಷ್ಟಿಗಳಿಂದ ಕುತೂಹಲಕಾರಿಯಾಗಿದೆ. ವರಮಾನದ ರಚನೆಯಲ್ಲಿ ಅರ್ಥಶಾಸ್ತ್ರಜ್ಞರು ಸೈದ್ಧಾಂತಿಕವಾಗಿ ಏನನ್ನು ನಿರೀಕ್ಷಿಸುತ್ತಿದ್ದಾರೋ ಅಂತಹ ಬದಲಾವಣೆ ಕಳೆದ ೫೦ ವರ್ಷಗಳ ಕಾಲಾವಧಿಯಲ್ಲಿ ಉಂಟಾಗಿದೆ. ಪ್ರಾಥಮಿಕ ವಲಯ (ಪ್ರಾ.ವ.)ದಿಂದ ಪ್ರಾಪ್ತವಾಗುವ ವರಮಾನದ ಪ್ರಮಾಣವು ೧೯೬೦-೬೧ರಲ್ಲಿ ಶೇ. ೬೭.೫೬ರಷ್ಟಿದ್ದುದು ೨೦೦೦-೦೧ರಲ್ಲಿ ಶೇ. ೨೭.೯೭ಕ್ಕೆ ಇಳಿದಿದೆ. ತೃತೀಯ ವಲಯದ ಕಾಣಿಕೆಯು ಇದೇ ಅವಧಿಯಲ್ಲಿ ಶೇ. ೨೬.೦೮ರಿಂದ ಶೇ. ೪೯.೯೧ಕ್ಕೆ ಏರಿಕೆಯಾಗಿದೆ. ಇದು ಅಭಿವೃದ್ಧಿ ಕುರಿತ ಸಮೀಕರಣವಾದಿ ನಿಯಮಕ್ಕೆ ಅನುಗುಣವಾಗಿ ನಡೆದಿದೆ. ಕುತೂಹಲದ ಸಂಗತಿಯೆಂದರೆ ಇಂತಹ ಬದಲಾವಣೆಯು ದುಡಿಮೆಗಾರರ ಸಂರಚನೆಯಲ್ಲಿ ಉಂಟಾಗಿಲ್ಲ. ಇಂದಿಗೂ ಕರ್ನಾಟಕವು ದುಡಿಮೆಗಾರರ ಅವಲಂಬನೆ ದೃಷ್ಟಿಯಿಂದ 'ಪ್ರಾಥಮಿಕ ವಲಯ ಪ್ರಧಾನ' ಆರ್ಥಿಕತೆಯಾಗಿದೆ. ರಾಜ್ಯದಲ್ಲಿ ಒಟ್ಟು ದುಡಿಮೆಗಾರರಲ್ಲಿ ಶೇ. ೭೫ರಷ್ಟು ಮಂದಿ ೧೯೬೧ರಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿದ್ದರು. ಅವರ ಪ್ರಮಾಣ ೧೯೯೧ರಲ್ಲಿ ಶೇ. ೬೭ಕ್ಕೆ ಇಳಿದಿದೆ. ತೃತೀಯ ವಲಯವನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಪ್ರಮಾಣವು ಇದೇ ಅವಧಿಯಲ್ಲಿ ಶೇ. ೧೪.೧೩ರಿಂದ ಶೇ. ೨೧.೯೩ಕ್ಕೆ ಏರಿದೆ. ವರಮಾನಕ್ಕೆ ಸಂಬಂಧಿಸಿದಂತೆ ರಾಚನಿಕ ಬದಲಾವಣೆ ನಡೆದಿದೆ. ಆದರೆ ದುಡಿಮೆಗಾರರಿಗೆ ಸಂಬಂಧಿಸಿದಂತೆ ಬದಲಾವಣೆ ತುಂಬಾ ಮಂದಗತಿಯಲ್ಲಿ ನಡೆದಿದೆ. ಪ್ರಾಥಮಿಕ ವಲಯದಲ್ಲಿ ಉತ್ಪತ್ತಿಯಾಗುವ ವರಮಾನದ ಪ್ರಮಾಣ ಕಡಿಮೆಯಾಗಿದೆ. ಆದರೆ ಅದನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರ ಪ್ರಮಾಣವು ಇನ್ನೂ ಅಗಾಧವಾಗಿದೆ. ಇದರಿಂದ ಉಂಟಾಗಿರುವ ವಿಕೃತಿಯನ್ನು ಗುರುತಿಸುವ ಅಗತ್ಯವಿದೆ. ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ರಾಜ್ಯದ ಅಭಿವೃದ್ಧಿಗೆ ಸಂಬಂಧಿಸಿದ ಬಹುಮುಖ್ಯ ವಿಕೃತಿಯನ್ನು ಕುರಿತಂತೆ ಚರ್ಚಿಸುವುದು ಅಪೇಕ್ಷಣೀಯ.

### ೨.೩ ಆರೋಹಣವಾದಿ ಅಸಮಾನತೆ

ಜೆನ್ ಬ್ರಮೆನ್‌ರ ಪರಿಭಾಷೆಯಲ್ಲಿ ಹೇಳುವುದಾದರೆ ಕರ್ನಾಟಕದ ಅಭಿವೃದ್ಧಿಯು ಆರೋಹಣವಾದಿ ಅಸಮಾನತೆಯನ್ನು ಅನುಭವಿಸುತ್ತಿದೆ. ನಾಡು ಉದಯವಾದ ಸಂದರ್ಭದಲ್ಲಿ ಒಟ್ಟು ದುಡಿಮೆಗಾರರಲ್ಲಿ ಶೇ. ೭೫ರಷ್ಟು ಮಂದಿ ರಾಜ್ಯದ ವರಮಾನದ ಶೇ. ೬೧.೫೬ರಷ್ಟನ್ನು ಅನುಭವಿಸುತ್ತಿದ್ದರು. ಆದರೆ ಇಂದು ಶೇ. ೬೭ರಷ್ಟು ದುಡಿಮೆಗಾರರು ಕೇವಲ ಶೇ. ೩೫ರಷ್ಟು ವರಮಾನವನ್ನು ಪಡೆಯುತ್ತಿದ್ದಾರೆ. ಇದಕ್ಕೆ ಪ್ರತಿಯಾಗಿ ತೃತೀಯ ವಲಯದಲ್ಲಿ ೧೯೬೧ರಲ್ಲಿ ಒಟ್ಟು ದುಡಿಮೆಗಾರರಲ್ಲಿ ಶೇ. ೧೪ರಷ್ಟು ಮಂದಿ ರಾಜ್ಯದ ಒಟ್ಟು ವರಮಾನದ ಶೇ. ೨೬ರಷ್ಟನ್ನು ತಮ್ಮದಾಗಿಸಿಕೊಂಡಿದ್ದರೆ ಇಂದು ಕೇವಲ ಶೇ. ೨೨ರಷ್ಟು ದುಡಿಮೆಗಾರರು ರಾಜ್ಯದ ವರಮಾನದ ಶೇ. ೪೦ರಷ್ಟನ್ನು ನುಂಗಿ ನೊಣೆಯುತ್ತಿದ್ದಾರೆ. ಪಿರಮಿಡ್ಡಿನೋಪಾದಿಯಲ್ಲಿರುವ ಸಾಮಾಜಿಕ ರಚನೆಯ ತುದಿಯಲ್ಲಿರುವ ಜನರ ವರಮಾನವು ಯಾವ ಗತಿಯಲ್ಲಿ ಬೆಳೆಯುತ್ತಿದೆಯೋ ಅದೇ ವೇಗದಲ್ಲಿ ಸಾಮಾಜಿಕ ರಚನೆಯ ಅಡಿಪಾಯದಲ್ಲಿರುವ ಜನರ ಬಡತನವು ಕಡಿಮೆಯಾಗುತ್ತಿಲ್ಲ. ಇದನ್ನು ಜೆನ್ ಬ್ರಮೆನ್ 'ಆರೋಹಣವಾದಿ ಅಸಮಾನತೆ' ಎಂದು ಕರೆದಿದ್ದಾರೆ.

**ವರಮಾನ ಮತ್ತು ದುಡಿಮೆಗಾರರ ರಾಚನಿಕ ಸ್ವರೂಪ : ಕರ್ನಾಟಕ**

**ಕೋಷ್ಟಕ-೧** (ಶೇಕಡ)

| ವಲಯಗಳು | ೧೯೬೦/೧ | ೧೯೭೦/೧ | ೧೯೮೦/೧ | ೧೯೯೦/೯೧ | ೨೦೦೦/೦೧ |
|---|---|---|---|---|---|
| ಪ್ರಾಥಮಿಕ (ವ) | ೬೧.೫೬ | ೫೨.೭೨ | ೪೫.೮೧ | ೩೪.೯೫ | ೨೭.೯೭ |
| ವಲಯ (ದು) | ೭೫.೧೪ | ೭೧.೩೪ | ೭೧.೦೮ | ೬೭.೩೭ | |
| ದ್ವಿತೀಯ (ವ) | ೧೨.೩೬ | ೨೦.೭೩ | ೨೧.೧೨ | ೨೫.೨೮ | ೨೫.೦೬ |
| ವಲಯ (ದು) | ೧೦.೭೩ | ೧೧.೯೯ | ೧೩.೫೨ | ೧೦.೭೦ | |
| ತೃತೀಯ (ವ) | ೨೬.೦೮ | ೨೬.೫೫ | ೩೩.೦೭ | ೩೯.೭೭ | ೪೯.೯೭ |
| ವಲಯ (ದು) | ೧೪.೧೩ | ೧೬.೬೭ | ೧೫.೪೦ | ೨೧.೯೩ | |

ಆಕರ : ೧. ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು. ವಿವಿಧ ವರ್ಷದ ಪ್ರಕಟಣೆಗಳು. ೨. ಜನಗಣತಿ ವರದಿಗಳು (ವಿವಿಧ ವರ್ಷದ ವರದಿಗಳು)
ವ = ರಾಜ್ಯ ನಿವ್ವಳ ದೇಶೀಯ ಉತ್ಪನ್ನ, ದು = ದುಡಿಮೆಗಾರರು

ಪ್ರಾಥಮಿಕ ವಲಯದಲ್ಲಿ ತಲಾ ಉತ್ಪನ್ನದ ಪ್ರಮಾಣವು ಅತ್ಯಂತ ಕೆಳಮಟ್ಟದಲ್ಲಿರುತ್ತದೆ. ಕಾರಣಗಳನ್ನು ವಿವರಿಸುವ ಅಗತ್ಯವಿಲ್ಲ. ಈ ವಲಯದಲ್ಲಿ ವರಮಾನದ ಗಾತ್ರ ಕಡಿಮೆ. ಆದರೆ ಅದನ್ನು ಹಂಚಿಕೊಳ್ಳಬೇಕಾದವರ ಸಂಖ್ಯೆ ಅಗಾಧ. ಸಹಜವಾಗಿ ತಲಾ ಉತ್ಪನ್ನ ಕೆಳಮಟ್ಟದಲ್ಲಿರುತ್ತದೆ. ಆದರೆ ತೃತೀಯ ವಲಯದಲ್ಲಿ ಪ್ರಾಪ್ತವಾಗುವ ವರಮಾನದ ಗಾತ್ರ ಬೃಹತ್ತಾಗಿರುತ್ತದೆ. ಅದನ್ನು ಹಂಚಿಕೊಳ್ಳಬೇಕಾದ ದುಡಿಮೆಗಾರರ ಸಂಖ್ಯೆ ಕಡಿಮೆಯಿರುತ್ತದೆ. ಇದರಿಂದಾಗಿ ಇಲ್ಲಿ ತಲಾ ಉತ್ಪನ್ನವು ಉನ್ನತ ಮಟ್ಟದಲ್ಲಿರುತ್ತದೆ.

ಈ ಬಗೆಯ ರಾಚನಿಕ ವಿಕೃತಿಯ ಮೂಲದಲ್ಲಿರುವ ಇನ್ನೊಂದು ಕುತೂಹಲಕಾರಿ ಸಂಗತಿಯನ್ನು ಪ್ರಸ್ತಾಪಿಸಬೇಕಾಗುತ್ತದೆ. ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರರಲ್ಲಿ ಸಾಪೇಕ್ಷವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದವರ ಪ್ರಮಾಣ ಅಧಿಕವಾಗಿ ಇರುತ್ತದೆ. ಹಿಂದುಳಿದ ಪ್ರದೇಶಕ್ಕೆ ಸೇರಿದ ದುಡಿಮೆಗಾರರ ಪ್ರಮಾಣವು ಸಾಪೇಕ್ಷವಾಗಿ ಅಧಿಕವಾಗಿರುತ್ತದೆ. ಲಿಂಗದ ದೃಷ್ಟಿಯಿಂದ ಇಲ್ಲಿ ಮಹಿಳೆಯರ ಪ್ರಮಾಣವು ಸಾಕಷ್ಟಿರುತ್ತದೆ.

ಜಾತಿ, ವರ್ಗ, ಲಿಂಗ ಮತ್ತು ಪ್ರದೇಶದ ದೃಷ್ಟಿಯಿಂದ ಯಾರು ವಂಚಿತರಾಗಿದ್ದಾರೋ, ಯಾರು ಸಮಾಜದ ಅಂಚಿನಲ್ಲಿದ್ದಾರೋ, ಯಾರು ಅಧೀನ ಸ್ಥಿತಿಯಲ್ಲಿದ್ದಾರೋ ಅವರು ಹೆಚ್ಚಿನ ಪ್ರಮಾಣದಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ಸ್ಥಿತಿಯಿದೆ. ಉದಾಹರಣೆಗೆ ೧೯೯೧ರಲ್ಲಿ ರಾಜ್ಯದ ಪ್ರಾಥಮಿಕ ವಲಯದಲ್ಲಿದ್ದ ಒಟ್ಟು ದುಡಿಮೆಗಾರರ ಸಂಖ್ಯೆ ೧೧೬.೪೮ ಲಕ್ಷ. ರಾಜ್ಯದ ಒಟ್ಟು ದುಡಿಮೆಗಾರರಲ್ಲಿ ಪ.ಜಾ. ಮತ್ತು ಪ.ಪಂ.ಗಳಿಗೆ ಸೇರಿದ ದುಡಿಮೆಗಾರರ ಪ್ರಮಾಣ ಶೇ. ೨೨.೪೬ ಆದರೆ ಪ್ರಾಥಮಿಕ ವಲಯದಲ್ಲಿನ ದುಡಿಮೆಗಾರರಲ್ಲಿ ಇವರ ಪ್ರಮಾಣ ಶೇ. ೨೬.೭೩. ರಾಜ್ಯದ ಒಟ್ಟು ದುಡಿಮೆಗಾರರಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ದುಡಿಮೆಗಾರರ ಪ್ರಮಾಣ ಶೇ. ೧೯. ಆದರೆ ಪ್ರಾಥಮಿಕ ವಲಯದಲ್ಲಿರುವ ದುಡಿಮೆಗಾರರಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ದುಡಿಮೆಗಾರರ ಪ್ರಮಾಣ ಶೇ. ೨೨.೫೬. ರಾಜ್ಯದ ಒಟ್ಟು ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಕೇವಲ ಶೇ. ೨೮.೯೫. ಆದರೆ ಪ್ರಾಥಮಿಕ ವಲಯದ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ಶೇ. ೩೩.೯೦. ಇದರ ತಥ್ಯ ಇಷ್ಟು: ಪ್ರಾಥಮಿಕ ವಲಯದ ಒಟ್ಟು ದುಡಿಮೆಗಾರರಲ್ಲಿ ವಂಚಿತರ, ದಲಿತರ, ಮಹಿಳೆಯರ, ಅಂಚಿನಲ್ಲಿರುವವರ ಪ್ರಮಾಣ ಅಧಿಕವಾಗಿದೆ. ತೃತೀಯ ವಲಯದಲ್ಲಿ ಉಳ್ಳವರ ಪ್ರಮಾಣ ಅಧಿಕವಾಗಿದೆ. ಉನ್ನತ ಜಾತಿಗಳ ಪ್ರಾತಿನಿಧ್ಯ ಪ್ರಧಾನವಾಗಿದೆ. ಅದು ಪುರುಷಶಾಹಿಯಿಂದ ಮೆರೆಯುತ್ತಿದೆ.

ಕಳೆದ ೫೦ ವರ್ಷಗಳಲ್ಲಿ ಕರ್ನಾಟಕವು ಅನುಭವಿಸಿದ ಮಧ್ಯಮಗತಿ ಅಭಿವೃದ್ಧಿಯು ಸಮಾಜದಲ್ಲಿ ಬೇರು ಬಿಟ್ಟಿರುವ ಸಾಮಾಜಿಕ ಅಸಮಾನತೆಯನ್ನು ಊರ್ಜಿತಗೊಳಿಸುವಂತೆ ಕಾಣುತ್ತಿದೆ. ಸಮಸ್ಯೆಗಳನ್ನು ಅಭಿವೃದ್ಧಿಯ ನೆಲೆಯಿಂದ ನೋಡಲಾಗುತ್ತಿದೆಯೆ ವಿನಾ ದುಃಸ್ಥಿತಿಯ ನೆಲೆಯಿಂದ ನೋಡುತ್ತಿಲ್ಲ. ಸಮಾಜದ ಅಂಚಿನಲ್ಲಿರುವ ವಂಚಿತರ ನೆಲೆಯಿಂದ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಪ್ರಯತ್ನ ಕಾಣುತ್ತಿಲ್ಲ. ದಲಿತರನ್ನು, ಮಹಿಳೆಯರನ್ನು, ಹಿಂದುಳಿದ ವರ್ಗವನ್ನು ಎಲ್ಲಿಯವರೆಗೆ ಫಲಾನುಭವಿಗಳು – ಪರಾವಲಂಬಿಗಳೆಂದು ಪರಿಗಣಿಸಲಾಗುತ್ತದೋ ಮತ್ತು ಅವರನ್ನು ಎಲ್ಲಿಯವರೆಗೆ ಅಭಿವೃದ್ಧಿಯ ಕರ್ತೃಗಳೆಂದು ಪರಿಗಣಿಸಲಾಗುವುದಿಲ್ಲವೋ ಅಲ್ಲಿಯವರೆಗೆ ನಾಡು ಅಭಿವೃದ್ಧಿಯಾಗುತ್ತಿರುತ್ತದೆ. ಆದರೆ ಮಹಿಳೆಯರು, ದಲಿತರು, ಹಿಂದುಳಿದವರು, ಅಲ್ಪಸಂಖ್ಯಾತರನ್ನು ಒಳಗೊಂಡ ನಾಡವರು ದುಃಸ್ಥಿತಿಯಿಂದ ನರಳುತ್ತಿರುತ್ತಾರೆ.

## ಭಾಗ – ೩

### ೩.೧ ಅಭಿವೃದ್ಧಿಯ ಖಂಡರೂಪಿ ದರ್ಶನ

ಅರ್ಥಶಾಸ್ತ್ರದಲ್ಲಿ ಅಭಿವೃದ್ಧಿಯನ್ನು ಅಖಂಡ ಪ್ರಕ್ರಿಯೆಯಾಗಿ ಪರಿಭಾವಿಸಿಕೊಂಡು ಬರಲಾಗಿದೆ. ಇವತ್ತಿಗೂ ಅದೇ ನಂಬಿಕೆ ಮುಂದುವರಿದಿದೆ. ಅಭಿವೃದ್ಧಿಯೆನ್ನುವುದು, ಅಂದರೆ ವರಮಾನ ಮತ್ತು ಉತ್ಪನ್ನದ ವರ್ಧನೆಯು, ತನ್ನಷ್ಟಕ್ಕೆ ತಾನೆ ಸಮಾಜದಲ್ಲಿ ಎಲ್ಲರನ್ನೂ ಒಳಗೊಳ್ಳುತ್ತಿದೆ ಎಂದು ಭಾವಿಸಲಾಗಿದೆ. ಆದ್ದರಿಂದ ಅಭಿವೃದ್ಧಿಯೆಂದರೆ ಜನರ ಕಲ್ಯಾಣವೆಂದರೆ ವರಮಾನದ ವರ್ಧನೆ. ಅದು ಜಾತಿ, ವರ್ಗ, ಲಿಂಗ ಮತ್ತು ಪ್ರದೇಶ ಸಂಬಂಧಿ ತಾರತಮ್ಯ ಮಾಡುವುದಿಲ್ಲವೆಂದು ಪ್ರತಿಪಾದಿಸಲಾಗಿದೆ. ಒಂದು ವೇಳೆ ತಾರತಮ್ಯಗಳು ಕಂಡುಬಂದರೆ ಅವು ತಾತ್ಪೂರ್ತಿಕವಾದ ವಿಕಾರಗಳು. ಅಂತಿಮವಾಗಿ ಅವು ಎಲ್ಲರನ್ನೂ ತಲುಪುತ್ತವೆ ಮತ್ತು ಅದು ಎಲ್ಲರಿಗೂ ಒಳ್ಳೆಯದನ್ನು ಮಾಡುತ್ತದೆ ಎಂದು ನಂಬಲಾಗಿದೆ. ಎಲ್ಲರನ್ನು ಒಳಗೊಳ್ಳುವ ಪ್ರಕ್ರಿಯೆಯು ಕೇವಲ ಕಾಲಕ್ಕೆ ಸಂಬಂಧಿಸಿದ

**"ಹೊನ್ನಿನ ಕಳಸದಲ್ಲಿ, ಚಿನ್ನದ ಕಲಶದಲ್ಲಿ, ಮಾಹಿತಿಯ ಕುಶಲತೆಯಲ್ಲಿ, ಜೈವಿಕದ ಮಮತೆಯಲ್ಲಿ, ಭಾರತದ ಕೀರ್ತಿ ಪತಾಕೆಯನ್ನು ಮುಗಿಲೆತ್ತರಕ್ಕೆ ಕೊಂಡೊಯ್ದಿಹ ಚೆಲುವ ನಾಡಿದು ಕರ್ನಾಟಕ"**

ಕರುನಾಡ ಸಿರಿನುಡಿ – ಕನ್ನಡ
ಕಸ್ತೂರಿ ಪರಿಮಳದ ಕುಡಿ – ಕನ್ನಡ ನುಡಿ
ಹಾಲ್ಜೇನಿನ ಮಧುರ ಝರಿ - ಕನ್ನಡ ನಾಣ್ಣುಡಿ

ಸುಮಾರು 2000 ವರ್ಷಗಳ ಇತಿಹಾಸವಿರುವ ಕನ್ನಡ ಭಾಷೆ, ಸಾಹಿತ್ಯ ಅನನ್ಯ ಮತ್ತು ಅನುಕರಣೀಯ. ಇಂದು ಕೂಡ ಕರ್ನಾಟಕ ಸಮಗ್ರ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ಆಟೋಮೊಬೈಲ್ ಉದ್ಯಮ, ಸಿದ್ಧ ಉಡುಪು, ಆಭರಣಗಳು, ಕ್ರೀಡೆ, ಪುಷ್ಪೋದ್ಯಮದಂತಹ ಪ್ರಾಮುಖ್ಯ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯೂ ಶ್ಲಾಘನೀಯ, ಕರ್ನಾಟಕ ಭಾರತಕ್ಕಷ್ಟೇ ಮಾತ್ರವಲ್ಲ ಇಡೀ ವಿಶ್ವಕ್ಕೆ ಮಾದರಿ.

ಅಪಾರ ಕೀರ್ತಿ ಗಳಿಸಿ ಮೆರೆವ ಭವ್ಯನಾಡಿಗೆ... ಈಗ ಸುವರ್ಣ ಸಂಭ್ರಮ

ಸುವರ್ಣ ಕರ್ನಾಟಕದ ವರ್ಷ : 2006



ಕರ್ನಾಟಕ ವಾರ್ತೆ

ಸಂಗತಿಯಾಗಿದೆ. ಇದನ್ನು ಅರ್ಥವಿಜ್ಞಾನಿಗಳು 'ಟ್ರಿಕಲ್‌ಡೌನ್ ಥಿಯರಿ' ಎಂದು ಕರೆದಿದ್ದಾರೆ. ಹರ್ಬಟ್ ಸ್ಪೆನ್ಸರ್‌ನ ಸಾಮಾಜಿಕ ಡಾರ್ವಿನ್‌ವಾದವನ್ನು ಆಧರಿಸಿ ಅಭಿವೃದ್ಧಿ ಸಿದ್ಧಾಂತಗಳನ್ನು ಕಟ್ಟಿಕೊಂಡು ಬರಲಾಗಿದೆ. ಹಾಗೆ ನೋಡಿದರೆ ಸಮಾಜ ವಿಜ್ಞಾನಗಳಿಗೆ ಅಧ್ಯಯನ ಮಾದರಿಗಳು ಎಲ್ಲಿಂದ ಬಂದವೆಂದರೆ ಅವು ಭೌತವಿಜ್ಞಾನದಿಂದ – ಜೈವಿಕ ವಿಜ್ಞಾನದಿಂದ ಬಂದಿದ್ದಾವೆ. ಇಲ್ಲಿ ಮಾಹಿತಿ, ಪರಿವೀಕ್ಷಣೆ, ಪ್ರಯೋಗ, ವಸ್ತುನಿಷ್ಠತೆ, ಸಮೀಕರಣ, ಕಾರಣ-ಪರಿಣಾಮ ಸಂಬಂಧ ಮುಂತಾದ ಉಪಾಧಿಗಳು ಮುಖ್ಯವಾಗಿವೆ. ಸಾಮಾಜಿಕ ಸಂಗತಿಗಳಾದ ಜಾತಿ, ವರ್ಗ, ಲಿಂಗ, ಪ್ರದೇಶ, ಅಲ್ಪಸಂಖ್ಯಾತರು ಮುಖ್ಯ ಸಂಗತಿಗಳಾಗುವುದಿಲ್ಲ. ಬಂಡವಾಳ ಹೂಡಿಕೆಯನ್ನು ಅಧಿಕಗೊಳಿಸುವುದರ ಮೂಲಕ ಬಡತನವನ್ನು ನಿವಾರಿಸಬಹುದು, ಅಭಿವೃದ್ಧಿಯನ್ನು ಸಾಧಿಸಿಕೊಳ್ಳಬಹುದು ಎಂಬ ಸಮೀಕರಣ ರೀತಿಯ ಸಿದ್ಧಾಂತಗಳು ಅರ್ಥಶಾಸ್ತ್ರದಲ್ಲಿ ರೂಪುಗೊಂಡಿದ್ದಾವೆ. ಬರಗಾಲ, ಹಸಿವು, ಆಹಾರ ಅಭದ್ರತೆ ಮುಂತಾದವುಗಳನ್ನು ನೀರಾವರಿ ಯೋಜನೆಗಳ ಮೂಲಕ, ಹಸಿರುಕ್ರಾಂತಿ ಮೂಲಕ ನಿವಾರಿಸಬಹುದು ಎಂಬುದು ಇಲ್ಲಿನ ಬಲವಾದ ನಂಬಿಕೆಯಾಗಿದೆ. ಪ್ರಯೋಗಾಲಯಗಳಲ್ಲಿ ಪ್ರಯೋಗಗಳ ಮೂಲಕ, ಕಾರ್ಯಾಚರಣೆಯಲ್ಲಿ ಭಾಗವಹಿಸುವ ಸಂಗತಿಗಳನ್ನು ನಿಯಂತ್ರಿಸುವುದರ ಮೂಲಕ ಒಂದು ಕ್ರಿಯೆಗೆ ಸಂಬಂಧಿಸಿದಂತೆ ನಿಶ್ಚಿತ ಫಲಿತಾಂಶ ಪಡೆಯುವ ಕ್ರಮದಂತೆ ಅಭಿವೃದ್ಧಿಯನ್ನು ನಿರ್ಧರಿಸುವ ಸಂಗತಿಗಳನ್ನು ಅಗತ್ಯಕ್ಕೆ ತಕ್ಕಂತೆ ನಿಯಂತ್ರಿಸುವ-ನಿರ್ವಹಿಸುವ ಮೂಲಕ ಅಭಿವೃದ್ಧಿಗೆ ಸಂಬಂಧಿಸಿದಂತೆ ನಿಶ್ಚಿತ ಪರಿಣಾಮಗಳನ್ನು ಪಡೆಯಲು ಸಾಧ್ಯ ಎಂಬ ನಂಬಿಕೆ ನೆಲೆಗೊಂಡಿತು.

ಕರ್ನಾಟಕದ ಅಭಿವೃದ್ಧಿಯ ಅನುಭವವು ಮೇಲೆ ವಿವರಿಸಿದ ಕ್ರಮಕ್ಕಿಂತ ಭಿನ್ನವಾಗಿಲ್ಲ. ಉತ್ಪಾದನೆ-ವರಮಾನಗಳ ಪ್ರಮಾಣವನ್ನು ಹೆಚ್ಚಿಸಿಬಿಟ್ಟರೆ ಬಡತನ, ನಿರುದ್ಯೋಗ ನಿವಾರಣೆಯಾಗಿಬಿಡುತ್ತವೆ ಎಂಬ ನಂಬಿಕೆಯ ಮೇಲೆ ಕರ್ನಾಟಕವು ಕಳೆದ ೫೦ ವರ್ಷಗಳಿಂದ ಅಭಿವೃದ್ಧಿಯನ್ನು ನಿರ್ವಹಿಸಿಕೊಂಡು ಬಂದಿದೆ. ಅನಕ್ಷರತೆಯನ್ನು ಹೋಗಲಾಡಿಸುವುದು ಹೇಗೆ? ಹೇಗೆ ಅಂದರೆ "ಶಾಲೆಗಳನ್ನು ತೆರೆಯುವುದರ ಮೂಲಕ, ಶಿಕ್ಷಕರನ್ನು ನೇಮಿಸುವುದರ ಮೂಲಕ, ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವುದರ ಮೂಲಕ" ಎಂದು ಕರ್ನಾಟಕ ಅನುಸರಿಸಿಕೊಂಡು ಬಂದಿರುವ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಹೇಳೀತು! ಇದೊಂದು ಮುಗ್ಧ-ಸರಳೀಕೃತ ನಂಬಿಕೆ ಎಂಬುದನ್ನು ಮುಂದಿನ ಚರ್ಚೆಯಲ್ಲಿ ತೋರಿಸಲಾಗಿದೆ.

ಅಭಿವೃದ್ಧಿಯ ಖಂಡರೂಪಿ ನೆಲೆಗಳನ್ನು ಮೂರು ವಿಷಯಗಳಿಗೆ ಸಂಬಂಧಿಸಿದಂತೆ ಇಲ್ಲಿ ಚರ್ಚಿಸಲಾಗಿದೆ. ಜಾತಿ ಸಂಬಂಧಗಳನ್ನು ಕುರಿತಂತೆ ಅಭಿವೃದ್ಧಿಯು ಹೇಗೆ ಶಿಷ್ಟಕ್ಕೆ ಅಭಿಮುಖವಾಗಿ ಮತ್ತು ಪರಿಶಿಷ್ಟಕ್ಕೆ ವಿಮುಖವಾಗಿ ಪ್ರವಹಿಸುತ್ತಿದೆ ಎಂಬುದನ್ನು, ಲಿಂಗ ಸಂಬಂಧಗಳಲ್ಲಿ ಪುರುಷರನ್ನು ಪ್ರಧಾನರನ್ನಾಗಿ ಮಹಿಳೆಯನ್ನು ಅಧೀನರನ್ನಾಗಿ ಮಾಡಿರುವ ಪರಿಯನ್ನು ಮತ್ತು ಪ್ರದೇಶಗಳಿಗೆ ಸಂಬಂಧಿಸಿದಂತೆ ಸಂಪನ್ಮೂಲ ಹಾಗೂ ಚಾರಿತ್ರಿಕವಾಗಿ ಪ್ರಶಸ್ತವಾದ ಪ್ರದೇಶಗಳಲ್ಲಿ ಮಡುಗಟ್ಟಿಕೊಂಡಿರುವ ಸ್ವರೂಪವನ್ನು ಇಲ್ಲಿ ಚರ್ಚಿಸಲಾಗಿದೆ.

**೩.೨ ಅಭಿವೃದ್ಧಿಯ ಶಿಷ್ಟ-ಪರಿಶಿಷ್ಟ ನೆಲೆಗಳು**

ಶಿಷ್ಟ-ಪರಿಶಿಷ್ಟ ಎಂಬ ವರ್ಗೀಕರಣ ಕುರಿತ ಚರ್ಚೆಗಳು ಕೇವಲ ಸಾಂಸ್ಕೃತಿಕ ಮತ್ತು ಸಾಮಾಜಿಕ ನೆಲೆಗೆ ಮೀಸಲಾಗಿಬಿಟ್ಟಿವೆ. ಅಭಿವೃದ್ಧಿಗೆ ಸಂಬಂಧಿಸಿದಂತೆ ಪ್ರಸ್ತುತ ಭಾಗದಲ್ಲಿ ಶಿಷ್ಟ-ಪರಿಶಿಷ್ಟ ನೆಲೆಗಳನ್ನು ಚರ್ಚಿಸಲಾಗಿದೆ.

ಅಕ್ಷರ ಸಂಸ್ಕೃತಿಯನ್ನು ಅಖಂಡ ನೆಲೆಯಲ್ಲಿ ಚರ್ಚಿಸಿದರೆ ಅದಕ್ಕೆ ಸಂಬಂಧಿಸಿದ ಶಿಷ್ಟ-ಪರಿಶಿಷ್ಟ ನೆಲೆಗಳು ಗೋಚರಿಸುವುದಿಲ್ಲ. ರಾಜ್ಯದ ಒಟ್ಟು ಜನಸಂಖ್ಯೆಯ ಸಾಕ್ಷರತೆ ೨೦೦೧ ರಲ್ಲಿ ಶೇ. ೬೭.೦೪ ಇತ್ತು. ಆದರೆ ಪರಿಶಿಷ್ಟರ (ಪ.ಜಾ.+ಪ.ಪಂ.) ಸಾಕ್ಷರತೆಯ ಶೇ. ೫೧.೫೫ ಮತ್ತು ಶಿಷ್ಟರ ಸಾಕ್ಷರತೆ ಶೇ. ೭೧.೪೫. ಇಲ್ಲಿ ಶಿಷ್ಟ ಮತ್ತು ಪರಿಶಿಷ್ಟರ ನಡುವಿನ ಸಾಕ್ಷರತಾ ಅಂತರ ಶೇ. ೧೯.೯೦ ಅಂಶಗಳಷ್ಟಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ೧೯೬೦-೬೧ರಲ್ಲಿ ಶೇ. ೧೪.೦೩. ಇಂದು ೨೦೦೧ರಲ್ಲಿ ಅವರ ಪ್ರಮಾಣ ಶೇ. ೨೨.೮೧. ಆದರೆ ೨೦೦೧ರಲ್ಲಿ ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ಪರಿಶಿಷ್ಟರ ಪ್ರಮಾಣ ಕೇವಲ ಶೇ. ೧೭.೦೬. ಅನಕ್ಷರಸ್ಥರಲ್ಲಿ ಮಾತ್ರ ಅವರ ಪ್ರಮಾಣ ಶೇ. ೩೨.೬೦. ಇಂದು ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಎಷ್ಟಿದೆಯೋ ಅದಕ್ಕಿಂತ ಹೆಚ್ಚು ಅನಕ್ಷರಸ್ಥರಿಗೆ ಸಂಬಂಧಿಸಿದಂತೆ ಇದೆ. ಕುತೂಹಲದ ಸಂಗತಿಯೆಂದರೆ ಅನಕ್ಷರಸ್ಥರಲ್ಲಿ ಪರಿಶಿಷ್ಟರ ಪಾಲು ೧೯೯೧ರಲ್ಲಿ ಶೇ. ೨೮.೩೮ರಷ್ಟಿದ್ದುದು ೨೦೦೧ರಲ್ಲಿ ಶೇ. ೩೨.೬ಕ್ಕೇರಿದೆ. ಇದೇ ಅವಧಿಯಲ್ಲಿ ಅನಕ್ಷರಸ್ಥರಲ್ಲಿ ಶಿಷ್ಟರ ಪಾಲು ಶೇ. ೭೧.೬೨ರಿಂದ ೬೭.೪೦ಕ್ಕೆ ಇಳಿದಿದೆ.

ಸಾಕ್ಷರತೆಯನ್ನು ಅಮರ್ತ್ಯ ಸೇನ್‌ರ ಪರಿಭಾಷೆ ಪ್ರಕಾರ ಅಭಿವೃದ್ಧಿಯ ಸೂಚಿಯನ್ನಾಗಿ ಮತ್ತು ಅನಕ್ಷರತೆಯನ್ನು ದುಃಸ್ಥಿತಿಯ ಸೂಚಿಯನ್ನಾಗಿ ಪರಿಭಾವಿಸಿಕೊಂಡರೆ ಕರ್ನಾಟಕದಲ್ಲಿ ಪರಿಶಿಷ್ಟರು ತಾರತಮ್ಯ-ದುಃಸ್ಥಿತಿಯಿಂದ ನರಳುತ್ತಿರುವುದು ಮತ್ತು ಶಿಷ್ಟರು ಅಕ್ಷರ ಸಂಪತ್ತನ್ನು ಗುತ್ತಿಗೆ ಹಿಡಿದಿರುವುದು ಸ್ಪಷ್ಟವಾಗುತ್ತದೆ.

ದುಡಿಮೆಗೆ ಸಂಬಂಧಿಸಿದಂತೆಯೂ ಶಿಷ್ಟ-ಪರಿಶಿಷ್ಟರ ನಡುವೆ ತೀವ್ರ ಅಂತರವಿರುವುದನ್ನು ಗುರುತಿಸಬಹುದಾಗಿದೆ. ಉದಾಹರಣೆಗೆ, ೧೯೯೧ರಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ಶಿಷ್ಟ ದುಡಿಮೆಗಾರರ ಪ್ರಮಾಣ ಶೇ. ೬೨.೬೪ ರಷ್ಟಿದ್ದರೆ ಪರಿಶಿಷ್ಟರಲ್ಲಿ ಅವಲಂಬನೆ ಶೇ. ೮೦.೨೨ರಷ್ಟಿದೆ. ಆದರೆ ತೃತೀಯ ವಲಯವನ್ನು ಅವಲಂಬಿಸಿಕೊಂಡಿರುವ ಶಿಷ್ಟರ ಪ್ರಮಾಣ ಶೇ. ೨೨.೧೪ರಷ್ಟಿದ್ದರೆ ಪರಿಶಿಷ್ಟರಲ್ಲಿ ಅದು ಕೇವಲ ಶೇ. ೧೦.೨೦. ಇದೇ ರೀತಿ ರಾಜ್ಯದ ಒಟ್ಟು ದಿನಗೂಲಿ ದುಡಿಮೆಗಾರರಲ್ಲಿ ಶಿಷ್ಟರ ಪ್ರಮಾಣ ೨೦೦೧ರಲ್ಲಿ ಶೇ. ೫೭.೬೫ರಷ್ಟಿದ್ದರೆ ಪರಿಶಿಷ್ಟರ ಪ್ರಮಾಣ ಶೇ. ೪೨.೩೫. ರಾಜ್ಯದ ಜನಸಂಖ್ಯೆಯಲ್ಲಿ ಪರಿಶಿಷ್ಟರ ಪ್ರಮಾಣ ಎಷ್ಟಿದೆಯೋ ಅದಕ್ಕಿಂತ ಹೆಚ್ಚಿನ ಪ್ರಮಾಣ ದಿನಗೂಲಿ ದುಡಿಮೆಗಾರರಿಗೆ ಸಂಬಂಧಿಸಿದಂತೆ ಇದೆ. ದಿನಗೂಲಿ ದುಡಿಮೆಗಾರರಿಗೆ ಸಂಬಂಧಿಸಿದಂತೆ – ಕೂಲಿಗೆ ಸಂಬಂಧಿಸಿದಂತೆ ಇವರಿಗೆ ಆಯ್ಕೆಗಳಿಲ್ಲ. ಆಯ್ಕೆಯಿಲ್ಲದ ಬದುಕನ್ನು ಪರಿಶಿಷ್ಟ ದುಡಿಮೆಗಾರರು ಬದುಕುತ್ತಿದ್ದಾರೆ.

ರಾಜ್ಯವು ಉದಯವಾಗುವ ಸಂದರ್ಭದಲ್ಲಿ ಏಕೀಕರಣದ ಬಗ್ಗೆ ಮಾತನಾಡಲಾಗುತ್ತಿತ್ತು. ಅದಕ್ಕಾಗಿ ಹೋರಾಟ ನಡೆಸಲಾಯಿತು. ಆದರೆ ಅಭಿವೃದ್ಧಿಗೆ ಸಂಬಂಧಿಸಿದಂತೆ ಕಳೆದ ೫೦ ವರ್ಷಗಳಲ್ಲಿ ವಿಷಮತೆಯನ್ನು ಹೋಗಲಾಡಿಸುವುದು ಸಾಧ್ಯವಾಗಿಲ್ಲ. ಇಂದು ಪರಿಶಿಷ್ಟರ ಜನಸಂಖ್ಯೆ ೧೨೦ ಲಕ್ಷವನ್ನು ಮೀರಿದೆ. ಇಷ್ಟೊಂದು ದೊಡ್ಡ ಸಮುದಾಯವನ್ನು ಅರ್ಥಪೂರ್ಣವಾಗಿ ಅಭಿವೃದ್ಧಿಯ ವ್ಯಾಪ್ತಿಯಲ್ಲಿ ತರಲು ನಾಡಿಗೆ ಸಾಧ್ಯವಾಗಿಲ್ಲ. ಇದರ ಬಗ್ಗೆ ಮುಂದೆ ಹೆಚ್ಚಿನ ಚರ್ಚೆಯಿದೆ.

**೩.೩ ಆರೋಗ್ಯ ಸಂಬಂಧಿ ಜಾತಿವಾರು ಅಸಮಾನತೆ**

ಆರೋಗ್ಯ ಸೂಚಿಗಳಿಗೆ ಸಂಬಂಧಿಸಿದಂತೆ ವಿವಿಧ ಜಾತಿ ವರ್ಗಗಳ ನಡುವೆ ಅಸಮಾನತೆಯಿರುವುದನ್ನು ಕೋಷ್ಟಕ-೨ರಲ್ಲಿ ತೋರಿಸಿದೆ. ಅಭಿವೃದ್ಧಿಯು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನರಿಗೆ ಆರೋಗ್ಯವಾಗಿ ಪರಿವರ್ತನೆಯಾಗದಿರುವ ಸ್ಥಿತಿಯನ್ನು ಕೋಷ್ಟಕವು ತೋರಿಸುತ್ತದೆ. ವಿಶ್ವ ಆರೋಗ್ಯ ಸಂಸ್ಥೆಯ ಮಾನದಂಡವಾದ ೨ ಎಸ್.ಡಿ. ಅಪೌಷ್ಟಿಕತೆ ಮಾಪನದಲ್ಲಿ ಶೇ. ೫೫ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಕ್ಕಳು ಕರ್ನಾಟಕದಲ್ಲಿ ಅಪೌಷ್ಟಿಕತೆಯಿಂದ ನರಳುತ್ತಿದ್ದರೆ ಶಿಷ್ಟರಿಗೆ ಸಂಬಂಧಿಸಿದಂತೆ ಅಪೌಷ್ಟಿಕತೆ ಎದುರಿಸುತ್ತಿರುವ ಮಕ್ಕಳ ಪ್ರಮಾಣ ಕೇವಲ ಶೇ. ೪೦.

**ಆರೋಗ್ಯ ಸಂಬಂಧಿ ಅಸಮಾನತೆ : ಕರ್ನಾಟಕ : ೧೯೯೮-೯೯**

**ಕೋಷ್ಟಕ-೨**

| ಜಾತಿವಾರು ವರ್ಗೀಕರಣ | ವಯೋಮಾನುವಾರು ತೂಕ ೨ ಎಸ್.ಡಿ. ಗಿಂತ ಕೆಳಮಟ್ಟ (ಶೇಕಡ) | ಶಿಶುಮರಣ ಪ್ರಮಾಣ (ಪ್ರತಿಸಾವಿರ ಜನನಕ್ಕೆ) | ೫ ವರ್ಷ ವಯಸ್ಸಿನೊಳಗಣ ಮಕ್ಕಳ ಮರಣ ಪ್ರಮಾಣ (ಪ್ರತಿಸಾವಿರ ಜನನಕ್ಕೆ) |
|---|---|---|---|
| ಪ.ಜಾ. | ೫೫.೮೦ | ೭೦ | ೧೦೫ |
| ಪ.ಪಂ. | ೫೫.೭೦ | ೮೫ | ೧೨೦ |
| ಓಬಿಸಿ | ೪೦.೦೦ | ೬೦ | ೭೮ |
| ಇತರೆ | ೪೧.೩೦ | ೫೬ | ೭೦ |

ಟಿಪ್ಪಣಿ : ವಿಶ್ವ ಆರೋಗ್ಯ ಸಂಸ್ಥೆಯು ನಿಗದಿಪಡಿಸಿರುವ ಆದರ್ಶ ಎರಡು ಸ್ಟಾಂಡರ್ಡ್ ಡಿವಿಯೇಷನ್‌ಗಿಂತ ಕಡಿಮೆ ಅಪೌಷ್ಟಿಕತೆಯಿಂದ ನರಳುತ್ತಿರುವ ಮಕ್ಕಳನ್ನು ಇಲ್ಲಿ ತೋರಿಸಲಾಗಿದೆ.

ಆಕರ : ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆ ೨ರಿಂದ ಮಾಹಿತಿ ಸಂಗ್ರಹಿಸಲಾಗಿದೆ.

ಅದೇ ರೀತಿ ಶಿಶುಮರಣ ಹಾಗೂ ಐದು ವರ್ಷದೊಳಗಿನ ಮಕ್ಕಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆಯೂ ಶಿಷ್ಟ ಮತ್ತು ಪರಿಶಿಷ್ಟರ ನಡುವೆ ತೀವ್ರ ಅಂತರವಿರುವುದು ತಿಳಿಯುತ್ತದೆ. ಅಭಿವೃದ್ಧಿ ಕುರಿತ ಸಿದ್ಧಾಂತಕ್ಕೆ ಸಂಬಂಧಿಸಿದಂತೆ ಶಿಷ್ಟ ಮತ್ತು ಪರಿಶಿಷ್ಟರ ನಡುವಿನ ಅಸಮಾನತೆಯ ಇಂಪ್ಲಿಕೇಶನ್ ಏನು? ಈ ಬಗ್ಗೆ ಮುಂದೆ ಚರ್ಚಿಸಲಾಗಿದೆ.

**೩.೪ ಅಭಿವೃದ್ಧಿಯ ಲಿಂಗ ಸಂಬಂಧಿ ಆಯಾಮಗಳು**

ಅಭಿವೃದ್ಧಿಯನ್ನು ಕುರಿತ ಪಠ್ಯಗಳಲ್ಲಿ ಲಿಂಗ ಸಂಬಂಧಗಳನ್ನು ಕುರಿತಂತೆ ಚರ್ಚೆ ಕಂಡು ಬರುವುದಿಲ್ಲ. ನಮ್ಮ ದೇಶದ-ಕರ್ನಾಟಕದ ವಿಶ್ವವಿದ್ಯಾಲಯಗಳ ಅಭಿವೃದ್ಧಿ ಸಂಬಂಧಿ ಪಠ್ಯಕ್ರಮದಲ್ಲೂ ಲಿಂಗ ಸಂಬಂಧಗಳನ್ನು ಕುರಿತ ಚರ್ಚೆಗೆ ಅವಕಾಶಗಳಿಲ್ಲ. ಏಕೆಂದರೆ, ಅಭಿವೃದ್ಧಿಯನ್ನು ಕುರಿತ ಸಿದ್ಧಾಂತಗಳನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ಕಟ್ಟಿಕೊಂಡು ಬರಲಾಗಿದೆ. ಲಿಂಗ ನಿರಪೇಕ್ಷತೆಯು ಅಭಿವೃದ್ಧಿ ಸಿದ್ಧಾಂತಗಳ ಅವಿಭಾಜ್ಯ-ಅಂತರ್ಗತ ಭಾಗವೇ ಆಗಿಬಿಟ್ಟಿದೆ.

ಸರ್ಕಾರದ ಬಜೆಟ್‌ಗಳಲ್ಲಿ, ಅವು ವಾರ್ಷಿಕವಾಗಿ ಮಂಡಿಸುವ ಆರ್ಥಿಕ ಸಮೀಕ್ಷೆಗಳಲ್ಲಿ, ಅಭಿವೃದ್ಧಿ ಯೋಜನೆಗಳಲ್ಲಿ ಲಿಂಗ ಸಂಬಂಧಗಳು ಪ್ರಧಾನ ಸಂಗತಿಗಳಾಗುವುದಿಲ್ಲ. ಕರ್ನಾಟಕದ ಅಭಿವೃದ್ಧಿಯ ಅನುಭವಗಳು ಮೇಲೆ ವಿವರಿಸಿದ ಪರಿಗಿಂತ ಭಿನ್ನವಾಗಿರಲು ಸಾಧ್ಯವಿಲ್ಲ.

ಇಂದು ಅಭಿವೃದ್ಧಿಯ ಅಖಂಡ-ಲಿಂಗ ನಿರಪೇಕ್ಷ ಪ್ರತಿಪಾದನೆಗಳು ಸ್ತ್ರೀವಾದಿಗಳಿಂದ ತೀವ್ರ ಟೀಕೆಗೆ ಗುರಿಯಾಗಿವೆ. ಮಹಿಳೆಯರನ್ನು ಅನುಬಂಧದಂತೆ, ಜನ ಸಂಖ್ಯಾವಾಚಿಯಾಗಿ, ಫಲಾನುಭವಿಯಾಗಿ ಪರಿಭಾವಿಸಿಕೊಳ್ಳುವ ಅಭಿವೃದ್ಧಿ ಸಿದ್ಧಾಂತಗಳನ್ನು ಸ್ತ್ರೀವಾದಿಗಳು ಪ್ರಶ್ನಿಸುತ್ತಿದ್ದಾರೆ. ಲಿಂಗ ಸಂಬಂಧಗಳ ಪ್ರಶ್ನೆಯನ್ನು ಇಂದು ಸುಲಭವಾಗಿ ಅಭಿವೃದ್ಧಿ ಸಿದ್ಧಾಂತಗಳು ತಳ್ಳಿಹಾಕಲು ಸಾಧ್ಯವಿಲ್ಲ. ಆದರೆ ಸರ್ಕಾರಗಳು ಇಂದು ಸ್ತ್ರೀವಾದಿ ಅಜೆಂಡಾವನ್ನು ಎತ್ತಿಹಾಕಿಕೊಂಡುಬಿಟ್ಟಿವೆ. ಕರ್ನಾಟಕದಲ್ಲಿ ಕಳೆದ ಹತ್ತಾರು ವರ್ಷಗಳಿಂದ ಸ್ತ್ರೀ ಶಕ್ತಿ, ಮಹಿಳೆಯರ ಸ್ವಸಹಾಯ ಗುಂಪುಗಳು, ಮಹಿಳೆಯರ ಅಭಿವೃದ್ಧಿ ಮುಂತಾದ ಸಂಗತಿಗಳ ಬಗ್ಗೆ ಸರ್ಕಾರದ ಮಟ್ಟದಲ್ಲಿ ಚರ್ಚೆಗಳು ನಡೆಯುತ್ತಾ ಬಂದಿವೆ. ಸ್ತ್ರೀವಾದವನ್ನು ಸರ್ಕಾರವು ಎತ್ತಿಹಾಕಿಕೊಂಡ ಪರಿಣಾಮವಾಗಿ ಸಶಕ್ತೀಕರಣವೆಂಬ ಸಿದ್ಧಾಂತವು ನಿಸ್ಸಾರಗೊಂಡುಬಿಟ್ಟಿದೆ. ಮಹಿಳೆಯರ ಅಭಿವೃದ್ಧಿಯನ್ನು ಸರ್ಕಾರವು ತನ್ನ ಅಭಿವೃದ್ಧಿ ಕಾರ್ಯಕ್ರಮದ ಪುರವಣಿಯನ್ನಾಗಿ ಮಾಡಿಕೊಂಡುಬಿಟ್ಟಿದೆ. ಅದು ಸ್ತ್ರೀಶಕ್ತಿಯ ಬಗ್ಗೆ-ಮಹಿಳೆಯರ ಸ್ವಸಹಾಯ ಗುಂಪುಗಳ ಬಗ್ಗೆ ಮಾತನಾಡುತ್ತದೆ ವಿನಾ ಮಹಿಳೆಯರ ಆಸ್ತಿ ಹಕ್ಕಿನ ಬಗ್ಗೆ, ಲಿಂಗ ಸಂಬಂಧಿ ಶ್ರಮವಿಭಜನೆ ಬಗ್ಗೆ, ಗೃಹವಾರ್ತೆಯನ್ನು ಪುರುಷರ ಜೊತೆ ಹಂಚಿಕೊಳ್ಳುವ ಬಗ್ಗೆ, ಕೌಟುಂಬಿಕ ಹಿಂಸೆಯ ಬಗ್ಗೆ, ಸಾಮಾಜಿಕ ತಾರತಮ್ಯದ ಬಗ್ಗೆ ಅದು ಚಕಾರವೆತ್ತುವುದಿಲ್ಲ.




ಕಳೆದ ೫೦ ವರ್ಷಗಳ ಕರ್ನಾಟಕದ ಅಭಿವೃದ್ಧಿಯನ್ನು ಲಿಂಗ ಸಂಬಂಧಿ ನೆಲೆಯಿಂದ ಪೃಥಕ್ಕರಿಸಿದಾಗ ನಮಗೆ ಪ್ರೋತ್ಸಾಹದಾಯಕ ಚಿತ್ರವೇನೂ ದೊರೆಯುವುದಿಲ್ಲ. ಉದಾಹರಣೆಗೆ, ೨೦೦೧ರಲ್ಲಿ ಕಾಣೆಯಾದ ಮಹಿಳೆಯರ ಸಂಖ್ಯೆ ಸುಮಾರು ೯.೭೯ ಲಕ್ಷ. ಲಿಂಗ ಅನುಪಾತವು ಕ್ರಮಬದ್ಧವಾಗಿ ಎಷ್ಟಿರಬೇಕಿತ್ತೋ ಅಷ್ಟಿದ್ದಿದ್ದರೆ ಕರ್ನಾಟಕದ ಮಹಿಳೆಯರ ಸಂಖ್ಯೆ ೨೦೦೧ರಲ್ಲಿ ೨೫೮.೭೭ ಲಕ್ಷ ಇರುವುದಕ್ಕೆ ಪ್ರತಿಯಾಗಿ ೨೬೮.೫೬ ಲಕ್ಷ ಇರಬೇಕಾಗಿತ್ತು. ಲಿಂಗ ಅನುಪಾತವು ಸಾವಿರಕ್ಕಿಂತ ಕಡಿಮೆಯಿರುವುದನ್ನು ಅಮರ್ತ್ಯ ಸೇನ್ ಲಿಂಗ ಅಸಮಾನತೆಯ ಸೂಚಿಯಾಗಿ ಬಳಸುತ್ತಾರೆ. ಕರ್ನಾಟಕದಲ್ಲಿ ೦-೬ ವರ್ಷ ವಯೋಮಾನದ ಮಕ್ಕಳ ಲಿಂಗ ಅನುಪಾತವು ೧೯೯೧ರಲ್ಲಿ ೯೬೦ ಇದ್ದುದು ೨೦೦೧ರಲ್ಲಿ ೯೪೯ಕ್ಕೆ ಕುಸಿದಿದೆ. ಇದು ಅತ್ಯಂತ ಆತಂಕಕಾರಿ ಸಂಗತಿಯಾಗಿದೆ. ಲಿಂಗ ತಾರತಮ್ಯವೆಂಬುದು ಇಂದು ಹೆಣ್ಣು ಭ್ರೂಣಹತ್ಯೆಯವರೆಗೆ ಹಬ್ಬಿಬಿಟ್ಟಿದೆ. ಹೆಣ್ಣು ಭ್ರೂಣಹತ್ಯೆಯ ಮತ್ತು ಹೆಣ್ಣು ಶಿಶುಗಳ ಪರಿಪಾಲನೆಯಲ್ಲಿನ ಅಲಕ್ಷ್ಯದಿಂದಾಗಿ ಜನಸಂಖ್ಯೆಯಲ್ಲಿ ಅವರ ಪ್ರಮಾಣ ಕಡಿಮೆಯಾಗುತ್ತಾ ನಡೆದಿದೆ.

**೩.೫ ಅಭಿವೃದ್ಧಿಯ ಪ್ರಾದೇಶಿಕ ವಿಸ್ತೃತತೆ**

ಕರ್ನಾಟಕವು ತನ್ನ ಏಕೀಕರಣದ ಸುವರ್ಣ ವರ್ಷವನ್ನು ಆಚರಿಸಲು ಸಜ್ಜಾಗುತ್ತಿರುವ ಸಂದರ್ಭದಲ್ಲಿ ನಾವು ಚರ್ಚೆ ಮಾಡಲೇಬೇಕಾದ ಸಂಗತಿಯೆಂದರೆ ಅದು ಕಳೆದ ೫ ದಶಕಗಳ ಕಾಲಾವಧಿಯಲ್ಲಿ ಸಾಧಿಸಿಕೊಂಡ ಅಭಿವೃದ್ಧಿಯ ಪ್ರಾದೇಶಿಕ ವ್ಯಾಪ್ತಿ. ಏಕೆಂದರೆ, ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆಯ ಸಮಸ್ಯೆಯು ಭೂತಾಕಾರದಂತೆ ಇಂದು ಕರ್ನಾಟಕವನ್ನು ಕಾಡುತ್ತಿದೆ. ನಮ್ಮ ನಾಡು ಉದಯವಾದ ೧೯೫೬ರಲ್ಲಿ ಕರ್ನಾಟಕದ ಬಗ್ಗೆ ಕೃಷ್ಣಕುಮಾರ ಕಲ್ಲೂರ ಎಂಬ ವಿದ್ವಾಂಸರು ಬರೆದಿರುವ ಮಾತುಗಳನ್ನು ಇಲ್ಲಿ ನೆನಪಿಸಿಕೊಳ್ಳುವುದು ಅತ್ಯಂತ ಸೂಕ್ತ.

''...ಸಂಯುಕ್ತ ಕರ್ನಾಟಕದ ಬೇಡಿಕೆ ಹೊರಹೊರಗೆ ಭಾಷಾತ್ಮಕವಾಗಿದ್ದರೂ, ನಿಜವಾಗಿ ಅದು ಆರ್ಥಿಕ ದೃಷ್ಟಿಯಲ್ಲಿ ಹಿಂದುಳಿದವರ ಕೂಗಾಗಿತ್ತು. ಆದುದರಿಂದ ಈಗ ಒಂದಾಗಿರುವ ಸಂಯುಕ್ತ ಕರ್ನಾಟಕ ಹಿಂದುಳಿದ ಪ್ರದೇಶಗಳದೇ ಒಂದು ಸಂಯುಕ್ತ ರಾಜ್ಯವೆಂತಲೂ, ಭಾಷೆ ಒಂದಾಗಿರುವುದು ಒಂದು ಹೆಚ್ಚಿನ ಅನುಕೂಲವೆಂದೂ ಭಾವಿಸಿಕೊಳ್ಳಬೇಕು. ಆದುದರಿಂದ ಭಾಷೆ, ಸಾಹಿತ್ಯಗಳ ಬೆಳವಣಿಗೆಗಿಂತಲೂ, ಹಿಂದುಳಿದ ಪ್ರದೇಶಗಳ ಆರ್ಥಿಕ ಬೆಳವಣಿಗೆಯೇ ಕರ್ನಾಟಕ ರಾಜ್ಯದ ಗುರಿ ಎಂದು ಬಗೆಯಬೇಕು. ಈ ವಿಷಯದಲ್ಲಿ ಮೈಸೂರು ಸಂಸ್ಥಾನದಲ್ಲೂ, ಬೆಂಗಳೂರು, ಮೈಸೂರು ಪರಿಸರದಲ್ಲಿ ಮಾತ್ರ ಸಾಕಷ್ಟು ಬೆಳವಣಿಗೆಯಾಗಿದೆಯೇ ಹೊರತು, ಮಿಕ್ಕ ಹಲಭಾಗ ಸಾಕಷ್ಟು ಹಿಂದುಳಿದಿದೆ. ಇದನ್ನೆಲ್ಲಾ ನೋಡಿದರೆ, ನಿಜ ಕರ್ನಾಟಕ ಕೊಡಗು, ಕನ್ನಡ ಜಿಲ್ಲೆ, ಶಿವಮೊಗ್ಗ, ಚಿತ್ರದುರ್ಗ, ಬಿಜಾಪುರ, ಗುಲಬರ್ಗಾ ಪ್ರದೇಶದಲ್ಲಿ ಇರುವುದಲ್ಲದೆ ಬೆಂಗಳೂರು-ಮಂಗಳೂರು- ಮೈಸೂರು ನಗರಗಳಲ್ಲಿಲ್ಲ ಎಂಬುದು ತಿಳಿಯುತ್ತದೆ. ಇದನ್ನು ಮನದಟ್ಟಾಗುವಂತೆ ಅರಿತಾಗ ಮಾತ್ರ ನಾವು ನಮ್ಮ ನಾಡಿಗೆ...'' (ಮೈಸೂರು ರಾಜ್ಯ, ೧೯೫೬, ಕರ್ನಾಟಕ ಸರ್ಕಾರ).

ಕೃಷ್ಣಕುಮಾರ ಕಲ್ಲೂರ ಅವರು ೧೯೫೬ರಲ್ಲಿ ಬರೆದ ಮಾತುಗಳನ್ನು ೨೦೦೬ರಲ್ಲೂ ನಾವು ಮಾತನಾಡಬೇಕಾದ ಪ್ರಮೇಯ ಉಂಟಾಗಿದೆ. ಕಳೆದ ೫೦ ವರ್ಷಗಳಲ್ಲಿ ಏನೂ ಆಗಲಿಲ್ಲವೆ ಎಂದರೆ ಬಹಳಷ್ಟು ಆಗಿದೆ. ಆದರೆ ಇಡೀ ನಾಡನ್ನು, ನಾಡವರನ್ನು ಒಳಗೊಳ್ಳುವಂತೆ, ೫.೨೭ ಕೋಟಿ ಜನರಿಗೆ ಅಭಿಮುಖವಾಗುವಂತೆ ಕರ್ನಾಟಕದ ಅಭಿವೃದ್ಧಿ ನಡೆಯಲಿಲ್ಲ ಎಂಬುದನ್ನು ಅತ್ಯಂತ ವಿಷಾದದಿಂದ ಹೇಳಬೇಕಾಗುತ್ತದೆ. ಕಲ್ಲೂರ ಅವರು ವ್ಯಕ್ತಪಡಿಸಿರುವ ಅಪಾಯ ಇಂದು ಸಂಭವಿಸಿಬಿಟ್ಟಿದೆ. ನಾಡು ಬೆಂಗಳೂರು-ಮೈಸೂರುಗಳಿಗೆ ಅಭಿಮುಖವಾಗಿ ಬೆಳೆಯುತ್ತಿದೆಯೆ ವಿನಾ ಜೇವರ್ಗಿಗೆ, ದೇವದುರ್ಗಕ್ಕೆ, ಯಲಬುರ್ಗಾಕ್ಕೆ, ಶಿರಗುಪ್ಪಾಕ್ಕೆ, ಸಿಂದಗಿಗೆ ಅಭಿಮುಖವಾಗಿ ಬೆಳೆಯುತ್ತಿಲ್ಲ. ನಾಡಿನ ಅನೇಕ ಭಾಗಗಳು ೧೯೫೬ಕ್ಕೆ ಪೂರ್ವದಲ್ಲಿ ಬೊಂಬಾಯಿ ಕಡೆಗೆ, ಮದರಾಸಿನ ಕಡೆಗೆ, ಹೈದರಾಬಾದಿನ ಕಡೆಗೆ ಮುಖ ಮಾಡಿಕೊಂಡಿದ್ದನ್ನು ಸರಿಪಡಿಸುವ ಸಲುವಾಗಿ ಏಕೀಕರಣ ಹೋರಾಟ ನಡೆಸಲಾಯಿತು. ಆದರೆ ಇಂದು ಏನಾಗಿದೆ? ಬೆಂಗಳೂರು ನಾಡಿಗೆ - ನಾಡವರಿಗೆ ಅಭಿಮುಖವಾಗುವುದಕ್ಕೆ ಪ್ರತಿಯಾಗಿ ಸಿಂಗಪುರದ ಕಡೆಗೆ, ಬಿಲ್ ಗೇಟ್ಸ್ ಕಡೆಗೆ, ಯೂರೋಪಿನ ಕಡೆಗೆ ಮುಖ ಮಾಡಿಕೊಂಡಿದೆ.

ಪ್ರಾದೇಶಿಕ ಅಸಮಾನತೆ ಎಂಬುದು ಕೇವಲ ಹೈದರಾಬಾದ್-ಕರ್ನಾಟಕ ಪ್ರದೇಶದವರ, ಉತ್ತರ ಕರ್ನಾಟಕದವರ ಕೂಗಲ್ಲ. ಅದು ೫.೨೭ ಕೋಟಿ ಜನರ ಕೂಗಾಗಬೇಕಾದ ಅಗತ್ಯವಾಗಿದೆ. ಕರ್ನಾಟಕದಲ್ಲಿರುವ ಒಟ್ಟು ೧೫೧ ಲಕ್ಷ ಅನಕ್ಷರಸ್ಥರಲ್ಲಿ ಶೇ. ೨೪ರಷ್ಟು ಹೈದರಾಬಾದ್-ಕರ್ನಾಟಕ ಪ್ರದೇಶದ ಜಿಲ್ಲೆಗಳಲ್ಲಿ ಇದ್ದಾರೆ. ರಾಜ್ಯದ ಒಟ್ಟು ಅಕ್ಷರಸ್ಥರಲ್ಲಿ ಉತ್ತರ ಕರ್ನಾಟಕದ ಪಾಲು ಶೇ. ೩೭.೯೨ ಆದರೆ ಅನಕ್ಷರಸ್ಥರಲ್ಲಿ ಅದರ ಪಾಲು ಶೇ. ೫೦.

**ಆಯ್ದ ಸೂಚಿಗಳು**

* ಕರ್ನಾಟಕ ರಾಜ್ಯದ ಒಟ್ಟು ವರಮಾನ ರೂ. ೫೬೧೧.೪೮ ಕೋಟಿಯಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದ ಪಾಲು ೧೯೮೦-೮೧ರಲ್ಲಿ ಶೇ. ೧೬.೧೫ ರಷ್ಟಿತ್ತು. ಆದರೆ ೧೯೯೩-೯೪ರಲ್ಲಿ ಶೇ. ೧೩.೭೯ಕ್ಕೆ ಮತ್ತು ೧೯೯೯-೨೦೦೦ ದಲ್ಲಿ ಶೇ. ೧೧.೫೦ಕ್ಕೆ ಅದು ಕುಸಿದಿದೆ. ಪ್ರಾದೇಶಿಕ ಅಸಮಾನತೆಯು ತೀವ್ರಗೊಳ್ಳುತ್ತ ನಡೆದಿರುವುದನ್ನು ಇದು ಸೂಚಿಸುತ್ತದೆ.
* 'ಕೂಲಿಯಿದ್ದರೆ ಕೂಳು' ಎಂಬ ಸ್ಥಿತಿಯಲ್ಲಿರುವ ದಿನಗೂಲಿ ದುಡಿಮೆಗಾರರು ರಾಜ್ಯದಲ್ಲಿ ೨೦೦೧ರಲ್ಲಿ ೬೦.೪೧ ಲಕ್ಷ ಇದ್ದಾರೆ. ಇವರಲ್ಲಿ ಶೇ. ೫೯ರಷ್ಟು ಪಾಲು ಉತ್ತರ ಕರ್ನಾಟಕ ಪ್ರದೇಶದ್ದಾಗಿದೆ. ಜನಸಂಖ್ಯೆಯಲ್ಲಿ ಉತ್ತರ ಕರ್ನಾಟಕದ ಪಾಲು ಕೇವಲ ಶೇ. ೪೩. ಆದರೆ ದಿನಗೂಲಿ ದುಡಿಮೆಗಾರರಲ್ಲಿ ಮಾತ್ರ ಇದರ ಪಾಲು ಶೇ. ೫೯.
* ರಾಜ್ಯಮಟ್ಟದಲ್ಲಿ ಒಟ್ಟು ದುಡಿಮೆಗಾರರಲ್ಲಿ ದಿನಗೂಲಿ ದುಡಿಮೆಗಾರರ ಪ್ರಮಾಣ ಕೇವಲ ಶೇ. ೨೬.೭೯. ದಕ್ಷಿಣ ಕರ್ನಾಟಕದಲ್ಲಿ ಇವರ ಪ್ರಮಾಣ ಶೇ. ೧೯.೩೭. ಆದರೆ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಇವರ ಪ್ರಮಾಣ ಶೇ. ೪೦.೫೯.
* ಡಿ. ಎಂ. ನಂಜುಂಡಪ್ಪ ವರದಿಯ ಪ್ರಕಾರ ರಾಜ್ಯದಲ್ಲಿ ಅತ್ಯಂತ ಹಿಂದುಳಿದ ೩೯ ತಾಲ್ಲೂಕುಗಳ ಪೈಕಿ ಹೈದರಾಬಾದ್-ಕರ್ನಾಟಕ ಪ್ರದೇಶದ ಪಾಲು ಶೇ. ೫೩.೮೫ (೨೧ ತಾಲ್ಲೂಕುಗಳು). ಆದರೆ ರಾಜ್ಯದ ಮುಂದುವರಿದ ೬೧ ತಾಲ್ಲೂಕುಗಳ ಪೈಕಿ ಹೈದರಾಬಾದ್-ಕರ್ನಾಟಕದ ಪಾಲು ಶೇ. ೫.
* ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿನ ಒಟ್ಟು ತಾಲ್ಲೂಕುಗಳ ಸಂಖ್ಯೆ ೩೧. ಅವುಗಳಲ್ಲಿ ಮುಂದುವರಿದ ತಾಲ್ಲೂಕುಗಳ ಸಂಖ್ಯೆ ಕೇವಲ ೩ (ಶೇ. ೯.೬೮). ಆದರೆ ಹಿಂದುಳಿದ ತಾಲ್ಲೂಕುಗಳ ಸಂಖ್ಯೆ ೨೮ (ಶೇ. ೯೦.೩೨). ಇಡೀ ರಾಜ್ಯದ ಒಟ್ಟು ತಾಲ್ಲೂಕುಗಳಾದ ೧೭೫ ರಲ್ಲಿ ಮುಂದುವರಿದ ತಾಲ್ಲೂಕುಗಳ ಪ್ರಮಾಣ ಶೇ. ೬೫.೧೪ ಮತ್ತು ಹಿಂದುಳಿದ ತಾಲ್ಲೂಕುಗಳ ಪ್ರಮಾಣ ಶೇ. ೩೪.೮೬.
* ಕರ್ನಾಟಕದಲ್ಲಿ ೧೯೫೭-೫೮ರಲ್ಲಿ ನೀರಾವರಿ ಪ್ರದೇಶದ ವಿಸ್ತೀರ್ಣ ೭.೫೯ ಲಕ್ಷ ಹೆಕ್ಟೇರುಗಳು. ಇದರಲ್ಲಿ ಉತ್ತರ ಕರ್ನಾಟಕದ ಪಾಲು ಶೇ. ೨೯ ರಷ್ಟಿದ್ದರೆ ದಕ್ಷಿಣ

ಕರ್ನಾಟಕದ ಪಾಲು ಶೇ. ೭೧ರಷ್ಟಿತ್ತು. ಆದರೆ ೨೦೦೨-೦೩ರಲ್ಲಿ ಒಟ್ಟು ನೀರಾವರಿ ಪ್ರದೇಶ ರಾಜ್ಯದಲ್ಲಿ ೨೫.೫೦ ಲಕ್ಷ ಹೆಕ್ಟೇರ್‌ನಷ್ಟಿದೆ. ಇದರಲ್ಲಿ ಉತ್ತರ ಕರ್ನಾಟಕದ ಪಾಲು ಶೇ. ೫೫.೭೧ ರಷ್ಟಿದ್ದರೆ, ದಕ್ಷಿಣ ಕರ್ನಾಟಕದ ಪಾಲು ಶೇ. ೪೪.೨೯ರಷ್ಟಿದೆ. ಇದು ಆರೋಗ್ಯಕರ ಬೆಳವಣಿಗೆಯಾಗಿದೆ. ಆದರೆ ನಾವು ಗಮನಿಸಬೇಕಾದ ಸಂಗತಿ ಯೆಂದರೆ ಇಷ್ಟಾದರೂ ಇಂದು ದಕ್ಷಿಣ ಕರ್ನಾಟಕದಲ್ಲಿ ಒಟ್ಟು ಸಾಗುವಳಿ ಪ್ರದೇಶದಲ್ಲಿ ಶೇ. ೨೮.೦೫ರಷ್ಟು ನೀರಾವರಿ ಸೌಲಭ್ಯ ಪಡೆಯುತ್ತಿದ್ದರೆ ಉತ್ತರ ಕರ್ನಾಟಕದಲ್ಲಿ ನೀರಾವರಿ ಸೌಲಭ್ಯ ಪಡೆಯುತ್ತಿರುವ ಪ್ರದೇಶದ ಪ್ರಮಾಣ ಕೇವಲ ಶೇ. ೨೨.೮೮.

ಅಭಿವೃದ್ಧಿಗೆ ಸಂಬಂಧಿಸಿದ ಇಂತಹ ಪ್ರಾದೇಶಿಕ ಅಸಮಾನತೆಯ ಗತಿ ಮತ್ತು ಗಾತ್ರವನ್ನು ಗುರುತಿಸುವುದಕ್ಕಿಂತ ಅದರ ಹಿಂದಿನ ಕಾರಣಗಳನ್ನು ಹಿಡಿದಿಡುವುದು ತುಂಬಾ ಮುಖ್ಯ. ರಾಜ್ಯ ಸರ್ಕಾರದ ಮಲತಾಯಿ ಧೋರಣೆಯನ್ನು ಇದಕ್ಕೆ ಕಾರಣ ಮಾಡುವ ಒಂದು ಜನಪ್ರಿಯ ವಾದವಿದೆ. ಇದು ಸ್ವಲ್ಪಮಟ್ಟಿಗೆ ನಿಜವಿರಬಹುದು. ಇಲ್ಲಿ ನಾವು ಕೇಳಿಕೊಳ್ಳಬೇಕಾದ ಪ್ರಶ್ನೆಯೆಂದರೆ ಅಭಿವೃದ್ಧಿಯಲ್ಲಿ ಹಿಂದುಳಿದಿರುವ ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳ ಬಗ್ಗೆ ಮಲತಾಯಿ ಧೋರಣೆ ತಳೆದು ರಾಜ್ಯ ಸರ್ಕಾರವು ಬದುಕಿದ್ದಾದರೂ ಹೇಗೆ ? ಈ ಜಿಲ್ಲೆಗಳ ಉತ್ಪಾದನಾ ಸಂಬಂಧ, ಸಾಮಾಜಿಕ ಸ್ವರೂಪ ಹಾಗೂ ರಾಜಕಾರಣ ಗಳಲ್ಲಿ ನಾವು ಅದರ ಹಿಂದುಳಿದಿರುವಿಕೆಯ ನೆಲೆಯನ್ನು ಗುರುತಿಸುವ ಅಗತ್ಯವಿದೆ. ಈ ಜಿಲ್ಲೆಗಳಿಗೆ ವಿಶಿಷ್ಟವಾದ ಸಂಗತಿಗಳಲ್ಲಿ ಅವುಗಳ ಹಿಂದುಳಿದಿರುವಿಕೆಯ ಸಂಕೀರ್ಣತೆಯನ್ನು ಹಿಡಿದಿಡಬೇಕಾಗಿದೆ. ಯಾಕೆ ಈ ಜಿಲ್ಲೆಗಳಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಸಂಖ್ಯೆ ಅಪಾರವಾಗಿದೆ ? ಈ ಜಿಲ್ಲೆಗಳಲ್ಲಿ ಮಾತ್ರ ಯಾಕೆ ನಮಗೆ ದುಡಿಮೆಗಾರರ ವಲಸೆ ಪ್ರವೃತ್ತಿ ಕಂಡುಬರುತ್ತದೆ ? ಯಾಕೆ ಈ ಜಿಲ್ಲೆಗಳಲ್ಲಿ ಮಾತ್ರ ಸಾಕ್ಷರತೆ ಪ್ರಮಾಣ ಕೆಳಮಟ್ಟದಲ್ಲಿದೆ ? ಇವುಗಳಿಗೆ ಉತ್ತರ ಕಂಡುಕೊಂಡರೆ ನಮಗೆ ಪ್ರಾದೇಶಿಕ ಅಸಮಾನತೆಯ ತಳಬುಡ ಅರ್ಥವಾಗುತ್ತದೆ. ಈ ಜಿಲ್ಲೆಗಳ ಯಾವ ಜನಪ್ರತಿನಿಧಿಯೂ ದುಡಿಮೆಗಾರರ ವಲಸೆ ಬಗ್ಗೆ ಮಾತನಾಡುವುದಿಲ್ಲ. ಜೇವರ್ಗಿ ತಾಲ್ಲೂಕಿನ ಸಾಕ್ಷರತೆ ಪ್ರಮಾಣ ಯಾಕೆ ಇಡೀ ರಾಜ್ಯದಲ್ಲಿ ಕಡಿಮೆಯಿದೆ ಎಂಬುದರ ಬಗ್ಗೆ ಆ ತಾಲ್ಲೂಕಿನ ಶಾಸಕರು ತಲೆಕೆಡಿಸಿಕೊಂಡಿಲ್ಲ. ಈ ಸಮಸ್ಯೆಗಳ ಬಗ್ಗೆ, ಸಂಗತಿಗಳ ಬಗ್ಗೆ ಮಾತನಾಡದೆಯೂ ಅಲ್ಲಿನ ಶಾಸಕರಾಗುವುದು ಅವರಿಗೆ ಸಾಧ್ಯವಾಗಿದೆ. ಇದು ಎಲ್ಲಿಯವರೆಗೆ ಬದಲಾಗುವುದಿಲ್ಲವೋ ಅಲ್ಲಿಯವರೆಗೆ ಅಭಿವೃದ್ಧಿ ಸಂಬಂಧಿ ಪ್ರಾದೇಶಿಕ ಅಸಮಾನತೆ ಸಮಸ್ಯೆ ಬಗೆಹರಿಯುವುದಿಲ್ಲ. ಮಲತಾಯಿ ಧೋರಣೆ ಬಗ್ಗೆ ಆಕ್ರೋಶ ವ್ಯಕ್ತಪಡಿಸುವುದಕ್ಕೆ ಪ್ರತಿಯಾಗಿ ಸರ್ಕಾರಕ್ಕೆ ಮಲತಾಯಿ ಧೋರಣೆ ತಳೆಯುವುದು ಹೇಗೆ ಸಾಧ್ಯವಾಯಿತು ಎಂಬುದನ್ನು ನಾವು ಇಂದು ಅರ್ಥಮಾಡಿಕೊಳ್ಳಬೇಕಾಗಿದೆ.

ಡಿ. ಎಂ. ನಂಜುಂಡಪ್ಪ ವರದಿಯ ರೂ. ೧೬,೦೦೦ ಕೋಟಿ ವಿಶೇಷ ಅಭಿವೃದ್ಧಿ ಯೋಜನೆ ಬಗ್ಗೆ ಎಲ್ಲರೂ ಮಾತನಾಡುತ್ತಾರೆ. ಸಮಸ್ಯೆಯು ಬಂಡವಾಳದ್ದಲ್ಲ ಎಂಬುದನ್ನು ಇನ್ನಾದರೂ ನಾವು ಅರ್ಥಮಾಡಿಕೊಳ್ಳಬೇಕು. ಉತ್ಪಾದನಾ ಸಂಬಂಧಗಳ ನೆಲೆಯಿಂದ, ಜಾತಿ ರಚನೆಯ ನೆಲೆಯಿಂದ, ಲಿಂಗ ಸಂಬಂಧಗಳ ನೆಲೆಯಿಂದ ಅಭಿವೃದ್ಧಿಯನ್ನು, ಪ್ರಾದೇಶಿಕ ಅಸಮಾನತೆಯನ್ನು ಪರಿಶೀಲಿಸಬೇಕಾಗುತ್ತದೆ. ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಪ್ರಾದೇಶಿಕ ಅಸಮಾನತೆಯ ವಸ್ತುಸ್ಥಿತಿಯನ್ನು ತಿಳಿಯುವ ಅಗತ್ಯವಿದೆ.

### ಭಾಗ – ೪

### ಸ್ವಾತಂತ್ರ್ಯವಾಗಿ ಅಭಿವೃದ್ಧಿ

ಅಮರ್ತ್ಯ ಸೇನ್ ಅವರು ಅಭಿವೃದ್ಧಿಯನ್ನು ಸ್ವಾತಂತ್ರ್ಯದ ಪರಿಭಾಷೆಯಲ್ಲಿ ಮಾನವ ಹಕ್ಕುಗಳ ಚೌಕಟ್ಟಿನಿಂದ ನಿರ್ವಚಿಸಲು ಪ್ರಯತ್ನಿಸುತ್ತಿದ್ದಾರೆ. ಅವರ ಇತ್ತೀಚಿಗಿನ ಗ್ರಂಥದ ಹೆಸರು 'ಸ್ವಾತಂತ್ರ್ಯವಾಗಿ ಅಭಿವೃದ್ಧಿ' (ಡೆವಲಪ್‌ಮೆಂಟ್ ಆ್ಯಸ್ ಫ್ರೀಡಮ್). ಆಡಂ ಸ್ಮಿತ್‌ನ ಕಾಲದಿಂದಲೂ ಅಭಿವೃದ್ಧಿಯನ್ನು ವರಮಾನದ ವರ್ಧನೆಯೆಂದೂ, ಕೈಗಾರಿಕೀಕರಣವೆಂದೂ, ಸಾಮಾಜಿಕ ಆಧುನಿಕೀಕರಣವೆಂದೂ ನಿರ್ವಚಿಸಿಕೊಂಡು ಬರಲಾಗಿದೆ. ಸೇನ್ ಪ್ರಕಾರ ಇವೆಲ್ಲವೂ ಅಭಿವೃದ್ಧಿಯ ಸಾಧನಗಳು ಮಾತ್ರ. ಆದರೆ ಅದರ ಸಾಧ್ಯ ಜನರ ಧಾರಣಶಕ್ತಿಯ ಸಂವರ್ಧನೆ. ಬದುಕನ್ನು ತಮ್ಮ ಅಪೇಕ್ಷೆಗೆ ಅನುಗುಣವಾಗಿ ಕಟ್ಟಿಕೊಳ್ಳಲು ಜನರಿಗೆ ಅವಕಾಶವಿರಬೇಕು. ಈ ಅವಕಾಶಗಳ ಕೊರತೆಯನ್ನು ಸೇನ್ ದುಃಸ್ಥಿತಿಯೆಂದು ಕರೆಯುತ್ತಾರೆ. ಅವಕಾಶಗಳಲ್ಲಿ ಆಯ್ಕೆಯ ಸ್ವಾತಂತ್ರ್ಯ ಇಲ್ಲದಿದ್ದರೆ ಅದು ದುಃಸ್ಥಿತಿ. ಮಾಹಿತಿ ಕ್ರಾಂತಿ ಕರ್ನಾಟಕದಲ್ಲಿ ನಡೆಯುತ್ತಿದೆ. ಆದರೆ ಜೇವರ್ಗಿಯ, ಶಿರಗುಪ್ಪದ, ದೇವದುರ್ಗದ ನಿರಕ್ಷರಕುಕ್ಷಿಗಳಿಗೆ ಮಾಹಿತಿಕ್ರಾಂತಿಯ ಅವಕಾಶವನ್ನು ಆಯ್ಕೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಹಿಂದುಳಿದ ಜಿಲ್ಲೆಗಳ ಲಕ್ಷಾಂತರ ದುಡಿಯುವ ಮಹಿಳೆಯರಿಗೆ ಸ್ಥಳೀಯವಾಗಿ ದೊರೆಯುವ ದಿನಗೂಲಿ ರೂ. ೧೫.೨೦. ಅದನ್ನು ಅವರು ಒಪ್ಪಿಕೊಳ್ಳಬೇಕು. ಇಲ್ಲದಿದ್ದರೆ ಉಪವಾಸ. ಇಲ್ಲಿ ವಿಕಲ್ಪಗಳೇ ಇಲ್ಲ. ಇದು ದುಃಸ್ಥಿತಿ. ಗಂಡನು ಕುಡುಕನಾಗಿರಲಿ, ರೋಗಿಷ್ಠನಾಗಿರಲಿ, ಹೆಂಡತಿಯನ್ನು ಹಿಂಸಿಸಲಿ, ಅವನ ಹೆಂಡತಿಯಾದವಳು ಅವನನ್ನು ಗಂಡನೆಂದು, ಪರದೈವವೆಂದು ನಂಬಿ ಬದುಕಬೇಕು. ಅವಳಿಗೆ ವಿಕಲ್ಪಗಳಿಲ್ಲ. ಇದು ದುಃಸ್ಥಿತಿ. ಬಡತನದಿಂದ, ಹಸಿವಿನಿಂದ, ಅನಕ್ಷರತೆಯಿಂದ, ಅಸ್ವಸ್ಥತೆಯಿಂದ, ಹಿಂಸೆಯಿಂದ ಬಿಡುಗಡೆ ಪಡೆಯುವುದು ಅಭಿವೃದ್ಧಿ. ಇದು ಸಶಕ್ತೀಕರಣ. ಅಭಿವೃದ್ಧಿಯನ್ನು ಸಾಧನಗಳ ನೆಲೆಯಿಂದ ಪರಿಭಾವಿಸಿಕೊಳ್ಳುವುದಕ್ಕೆ ಪ್ರತಿಯಾಗಿ ಅಮರ್ತ್ಯ ಸೇನ್ ಅದರ ಸಾಧ್ಯಗಳ ನೆಲೆಯಿಂದ ಪರಿಭಾವಿಸಿಕೊಳ್ಳುತ್ತಾರೆ. ವರಮಾನ, ಉತ್ಪನ್ನ, ಬಂಡವಾಳಗಳು ಆರೋಗ್ಯವಾಗಿ, ಅಕ್ಷರವಾಗಿ, ಆಶ್ರಯವಾಗಿ, ಆಹಾರವಾಗಿ ಒದಗುವುದನ್ನು ಅಭಿವೃದ್ಧಿಯೆಂದು ಕರೆಯುತ್ತಾರೆ. ಸ್ವಾತಂತ್ರ್ಯವೆಂಬುದು ಅಭಿವೃದ್ಧಿಯೂ ಹೌದು ಮತ್ತು ಅದನ್ನು ಮಾಪನ ಮಾಡುವ ಮಾನದಂಡವೂ ಹೌದು. ಸ್ವಾತಂತ್ರ್ಯವನ್ನು ಸೇನ್ ನಿರ್ಬಂಧ-ನಿಯಂತ್ರಣಗಳಲ್ಲಿನ ಸ್ಥಿತಿಯೆಂದು ಪರಿಭಾವಿಸುವುದಕ್ಕೆ ಪ್ರತಿಯಾಗಿ ಸಾಧಿಸಿಕೊಳ್ಳಲು ಅಗತ್ಯವಾದ ಸಾಮರ್ಥ್ಯವಾಗಿ ಪರಿಭಾವಿಸಿಕೊಳ್ಳುತ್ತಾರೆ. ನಿರ್ಬಂಧಗಳು - ನಿಯಂತ್ರಣಗಳು ಇಲ್ಲದ ಸ್ಥಿತಿಯನ್ನು ಉದಾರವಾದವೆಂದೂ, ಜಾಗತೀ ಕರಣವೆಂದೂ ಕರೆಯಲಾಗುತ್ತಿದೆ. ಇವೆಲ್ಲವೂ ಅಭಿವೃದ್ಧಿಗೆ ಅಗತ್ಯ. ಆದರೆ ಅವೇ ಅಭಿವೃದ್ಧಿ ಯಲ್ಲ. ತಮಗೆ ಅಗತ್ಯವಿರುವುದನ್ನು ಸಾಧಿಸಿಕೊಳ್ಳಲು ಜನರಲ್ಲಿರುವ ಸಾಮರ್ಥ್ಯವನ್ನು ಅಮರ್ತ್ಯ ಸೇನ್ ಸ್ವಾತಂತ್ರ್ಯವೆನ್ನುತ್ತಾರೆ. ಈ ಸಾಮರ್ಥ್ಯ ಮತ್ತು ಸ್ವಾತಂತ್ರ್ಯಗಳನ್ನು ಕೂಡಿಸಿ ಅವರು ಧಾರಣಶಕ್ತಿ (ಕೆಪಬಿಲಿಟಿ) ಎಂದು ಕರೆಯುತ್ತಾರೆ. ಈ ಧಾರಣಶಕ್ತಿಯ ಸಂವರ್ಧನೆಯೇ ಅಭಿವೃದ್ಧಿ. ಅದರ ಕೊರತೆಯೇ ದುಃಸ್ಥಿತಿ. ಅದರಿಂದ ವಂಚಿತರಾದವರೆ ಬಡವರು. ಕಳೆದ ೫೦ ವರ್ಷಗಳ ಕಾಲಾವಧಿಯಲ್ಲಿ ಧಾರಣಶಕ್ತಿಯಿಂದ ವಂಚಿತರಾದವರು ಯಾರು ಮತ್ತು ಅದರಿಂದ ಧನ್ಯರಾದವರು ಯಾರು ಎಂಬುದನ್ನು ನಾವು ವಿಶ್ಲೇಷಿಸಬಹುದು. ಸ್ವಾತಂತ್ರ್ಯವೆಂಬುದು ಅಖಂಡವಾದ ಸಂಗತಿಯೇನಲ್ಲ. ಮಹಿಳೆಯೊಬ್ಬಳಿಗೆ ತನ್ನ ಊರು ಬಿಟ್ಟು ಬೇರೊಂದು ಊರಿಗೆ ದುಡಿಯಲು ಹೋದರೆ ಕೂಲಿ ರೂ. ೨೦ಕ್ಕೆ ಪ್ರತಿಯಾಗಿ ರೂ. ೪೦ ದೊರೆಯುತ್ತದೆ. ಆದರೆ ಸಂಚಾರ ಸಂಬಂಧಿ ಸಂಕೋಲೆಯಿಂದಾಗಿ, ಗೃಹವಾರ್ತೆಯ ಜವಾಬುದಾರಿಯಿಂದಾಗಿ, ಅನಕ್ಷರತೆಯಿಂದಾಗಿ ಅದನ್ನು ಪಡೆಯಲು ಮಹಿಳೆಯೊಬ್ಬಳಿಗೆ ಸಾಧ್ಯವಿಲ್ಲವಾದರೆ ಅದು ದುಃಸ್ಥಿತಿ. ಅಲ್ಲಿ ಸ್ವಾತಂತ್ರ್ಯವಿಲ್ಲ. ಈ ಬಗೆಯಲ್ಲಿ ಕರ್ನಾಟಕದ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಪರಿ ಕಂಡುಬರುತ್ತಿಲ್ಲ. ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಅಭಿವೃದ್ಧಿಯನ್ನು ನಾವು ಪರಿಭಾವಿಸಿಕೊಳ್ಳುವ ಕ್ರಮದಲ್ಲಿ ಬದಲಾವಣೆ ತರಬೇಕಾಗಿದೆ. ಬದುಕನ್ನು ಕಟ್ಟಿಕೊಳ್ಳಲು ಅಗತ್ಯವಾದ ಅವಕಾಶಗಳ ವ್ಯಾಪ್ತಿ ವರ್ಧಿಸಬೇಕು. ವರ್ಧನೆಯಾದ ಅವಕಾಶಗಳಲ್ಲಿ ವಿಕಲ್ಪಗಳಿಗೆ ಎಣೆಯಿರಬೇಕು. ಇಂದಿಗೂ ಕರ್ನಾಟಕದಲ್ಲಿ ಯಾಕೆ ಲಕ್ಷಾಂತರ ದಲಿತರು ಗ್ರಾಮಗಳ ರಾಡಿನೀರು ಹರಿದುಹೋಗಿ ನಿಲ್ಲುವ ಊರಾಚೆಯಲ್ಲಿ, ಜನರು ಕಸ, ಗೊಬ್ಬರ ಹಾಕುವ ಸ್ಥಳಗಳಲ್ಲಿ ಮನೆ ಕಟ್ಟಿಕೊಳ್ಳುವ ಪರಿಸ್ಥಿತಿಯಿದೆ ? ಸರೀಕರಿಗೆ ಸಮನಾಗಿ ಊರ ಮಧ್ಯದಲ್ಲಿ ಅವರಿಗೆ ಮನೆ ಕಟ್ಟಿಕೊಳ್ಳಲು ಸಾಧ್ಯವಾಗುತ್ತಿಲ್ಲ, ಏಕೆ ? ಇಲ್ಲಿ ಸ್ವಾತಂತ್ರ್ಯದ ದಮನವಾಗಿದೆ. ಇಲ್ಲಿ ಅಭಿವೃದ್ಧಿಗೆ ಅವಕಾಶವಿಲ್ಲವಾಗಿದೆ. ಈ ಹಿಂದೆ ಹೇಳಿರುವ ಕರ್ನಾಟಕದ ಹಿಂದುಳಿದ ಏಳು ಜಿಲ್ಲೆಗಳಲ್ಲಿ ನೀವು ಯಾವ ಪ್ರಾಥಮಿಕ ಶಾಲೆಗಳಿಗೆ ಭೇಟಿಕೊಟ್ಟರೂ, ಮೊದಲನೆಯ ತರಗತಿಯಲ್ಲಿ ನೂರು ಮಕ್ಕಳಿದ್ದರೆ ಏಳನೆಯ ತರಗತಿಯಲ್ಲಿ ೫೦ಕ್ಕಿಂತ ಕಡಿಮೆ ಮಕ್ಕಳಿರುತ್ತಾರೆ. ಹಾಗಾದರೆ ಉಳಿದ ೫೦ ಮಕ್ಕಳು ಎಲ್ಲಿ ಹೋದರು ? ಅವರಲ್ಲಿ ಬಹುಪಾಲು ಮಕ್ಕಳು ಪ.ಜಾ., ಪ.ಪಂ., ಓಬಿಸಿ, ಅಲ್ಪಸಂಖ್ಯಾತ ಗುಂಪುಗಳಿಗೆ ಸೇರಿದವರಾಗಿರುತ್ತಾರೆ. ಶಾಲೆಯನ್ನು ಮಧ್ಯದಲ್ಲಿ ಬಿಟ್ಟ ಮಕ್ಕಳಲ್ಲಿ ಶೇ. ೫೦ರಷ್ಟು ಬಾಲಕಿಯರಿರುತ್ತಾರೆ. ಇಲ್ಲಿ ಪ್ರಾಥಮಿಕ ಶಾಲೆ ಶ್ರೇಣಿಯಲ್ಲಿ ಮೇಲೆ ಹೋದಂತೆ ಉನ್ನತ ಶಾಲೆ-ವರ್ಗದವರ ಪ್ರಮಾಣ ಅಧಿಕವಿರುತ್ತದೆ. ಕೆಳಗಡೆ ವಂಚಿತರ, ಪರಿಶಿಷ್ಟರ, ಬಾಲಕಿಯರ ಪ್ರಮಾಣ ಅಧಿಕವಿರುತ್ತದೆ. ಈ ಶ್ರೇಣೀಕರಣದಲ್ಲಿ ತುದಿ ಸೀಮಿತವಾಗಿರುತ್ತದೆ. ಬುಡ ವಿಸ್ತೃತವಾಗಿ ಇರುತ್ತದೆ. ತುದಿಯಲ್ಲಿ ಉನ್ನತ ಜಾತಿ, ವರ್ಗದವರಿದ್ದರೆ ಬುಡದಲ್ಲಿ ವಂಚಿತರು ಇರುತ್ತಾರೆ. ಇದನ್ನೇ ಜೆನ್ ಬ್ರಮೆನ್ ಅವರು 'ಆರೋಹಣವಾದಿ ಅಸಮಾನತೆ'ಯೆಂದು ಕರೆದಿದ್ದಾರೆ. ಪಿರಮಿಡ್ಡಿನ ತುದಿಯಲ್ಲಿ ಸ್ವಾತಂತ್ರ್ಯವಿದ್ದರೆ ಬುಡದಲ್ಲಿ ದುಃಸ್ಥಿತಿಯಿದೆ. ಸ್ವಾತಂತ್ರ್ಯವು ತುದಿಯಲ್ಲಿ ಯಾವ ಗತಿಯಲ್ಲಿ ವರ್ಧನೆಯಾಗುತ್ತಿದೆಯೋ ಅದೇ ಗತಿಯಲ್ಲಿ ಬುಡದಲ್ಲಿ ಬಡತನವು ಕಡಿಮೆಯಾಗುತ್ತಿಲ್ಲ. ಕಳೆದ ೫೦ ವರ್ಷಗಳಲ್ಲಿ ಕರ್ನಾಟಕವು ಸಾಧಿಸಿಕೊಂಡಿದ್ದು ಆರೋಹಣವಾದಿ ಅಸಮಾನತೆ. ಇದನ್ನು ಸರಿಪಡಿಸುವ ಬಗ್ಗೆ ಇಂದು ಚರ್ಚೆಯಾಗಬೇಕು. ಸುವರ್ಣ ಮಹೋತ್ಸವದ ಸುವರ್ಣ ಶಪಥವು ಇದಾಗಬೇಕು.

### ಭಾಗ – ೫

ಕಳೆದ ೫೦ ವರ್ಷಗಳ ಕಾಲಾವಧಿಯಲ್ಲಿ ವರಮಾನದ ವರ್ಧನೆಯ ದೃಷ್ಟಿಯಿಂದ

ಅಭಿವೃದ್ಧಿಯಾಗಿದೆ. ಕೈಗಾರಿಕೀಕರಣವಾಗಿದೆ. ಸಮಾಜವು ಆಧುನೀಕರಣಗೊಳ್ಳುತ್ತಿದೆ. ಉತ್ಪಾದನೆ ಏರುಮುಖಿಯಾಗಿದೆ. ರಾಜ್ಯವು ಆಹಾರ ಭದ್ರತೆಯನ್ನು ಸಾಧಿಸಿಕೊಂಡಿದೆ. ರಾಷ್ಟ್ರಮಟ್ಟದ ಸಾಕ್ಷರತೆ ಪ್ರಮಾಣಕ್ಕಿಂತ ತುಸು ಹೆಚ್ಚಿನ ಸಾಕ್ಷರತೆಯನ್ನು ರಾಜ್ಯ ಸಾಧಿಸಿಕೊಂಡಿದೆ. ಕೃಷಿಯ ಅವಲಂಬನೆಯು ವರಮಾನದ ದೃಷ್ಟಿಯಿಂದ ಕಡಿಮೆಯಾಗಿದೆ. ರಸ್ತೆಗಳ ಉದ್ದ ಹಾಗೂ ಗುಣಮಟ್ಟ ಉತ್ತಮವಾಗಿದೆ. ಬ್ಯಾಂಕುಗಳು ಎಲ್ಲ ಕಡೆ ಕಾರ್ಯಾರಂಭ ಮಾಡಿವೆ. ಶಾಲಾ-ಕಾಲೇಜುಗಳು ನಗರಗಳಲ್ಲಿ ಜಗಮಗಿಸುತ್ತಿವೆ. ಬೆಂಗಳೂರು ಸಿಂಗಪುರವಾಗುತ್ತಿದೆ. ಅಂತಾರಾಷ್ಟ್ರೀಯ ವಿಮಾನ ನಿಲ್ದಾಣ ಸಿದ್ಧವಾಗುತ್ತಿದೆ. ಗುಲಬರ್ಗಾದಲ್ಲೂ ವಿಮಾನ ನಿಲ್ದಾಣ ಬೇಕೆಂದು ಶಾಸಕರು ಒತ್ತಾಯಿಸುತ್ತಿದ್ದಾರೆ. ಇವೆಲ್ಲ ಅಭಿವೃದ್ಧಿಯೆನ್ನುವುದಾದರೆ ಅದು ಅಭಿವೃದ್ಧಿ. ಅದರ ಮೆರೆದಾಟವೇ ಸುವರ್ಣ ಮಹೋತ್ಸವವೆನ್ನುವುದಾದರೆ ಇನ್ನು ಒಂದು ವರ್ಷ ಕರ್ನಾಟಕದಲ್ಲಿ ಬಾಜಾ-ಭಜಂತ್ರಿಗೆ, ಹಾರ-ತುರಾಯಿಗಳಿಗೆ ಬರವಿಲ್ಲ.

ಒಣಭೂಮಿ ಬೇಸಾಯದ ರೈತ ಸಮುದಾಯದ ಅಳಲು ಮುಗಿಲು ಮುಟ್ಟುತ್ತಿದೆ. ಶಾಲೆ ಸೇರದ ಮಕ್ಕಳ ಪ್ರಮಾಣ ಹಿಂದುಳಿದ ಜಿಲ್ಲೆಗಳಲ್ಲಿ ಅಧಿಕವಾಗಿದೆ. ಸುಮಾರು ೯ ಲಕ್ಷ ಹೆಣ್ಣು ಮಕ್ಕಳು ಕಾಣೆಯಾಗಿದ್ದಾರೆ. ಹೆಣ್ಣುಮಕ್ಕಳು ಹುಟ್ಟುವುದೇ ಇಂದು ದುರ್ಲಭವಾಗುತ್ತಿದೆ. ರಾಜ್ಯದಲ್ಲಿ ೧೫೧ ಲಕ್ಷ ಅನಕ್ಷರಸ್ಥರಿದ್ದಾರೆ. ಸುಮಾರು ೬೦ ಲಕ್ಷ ದಿನಗೂಲಿ ದುಡಿಮೆಗಾರರು 'ಕೂಲಿಯಿದ್ದರೆ ಕೂಳು' ಎನ್ನುವ ಬದುಕು ದೂಡುತ್ತಿದ್ದಾರೆ. ಅಭಿವೃದ್ಧಿಗೆ ಪರಿಶಿಷ್ಟರ ಕಾಣಿಕೆ ಅಪಾರವಾಗಿದೆ. ಆದರೆ ಅದರಿಂದ ಪರಿಶಿಷ್ಟರಿಗೆ ದೊರಕುತ್ತಿರುವ ಫಲ ನಿಕೃಷ್ಟವಾಗಿದೆ. ಸಮಾಜ ವಿಜ್ಞಾನಿಗಳು ಗುರುತಿಸುವಂತೆ ಇಲ್ಲಿ ಬದಲಾವಣೆಗಳಾಗುತ್ತಿವೆ. ರಾಜ್ಯದಲ್ಲಿ ಅಭಿವೃದ್ಧಿಯಾಗುತ್ತಿದೆ. ಅದು ಪಿರಮಿಡ್ಡಿನ ಮೇಲುಭಾಗದಲ್ಲಿ ಮಡುಗಟ್ಟಿಕೊಳ್ಳುತ್ತಿದೆ. ವಿಶಾಲವಾದ ಬುಡಮಟ್ಟದಲ್ಲಿ ದುಃಸ್ಥಿತಿ ತೀವ್ರವಾಗಿದೆ. ಇದೇ 'ಆರೋಹಣವಾದಿ ಅಸಮಾನತೆ'.

ಈ ಪ್ರಬಂಧದಲ್ಲಿ ನಮ್ಮ ಅಭಿವೃದ್ಧಿ ಕಾರ್ಯತಂತ್ರ ಇನ್ನು ಮುಂದೆ ಯಾವುದಿರಬೇಕು ಎಂಬುದರ ಬಗ್ಗೆ ನೇರವಾಗಿ ಏನನ್ನೂ ಹೇಳಿಲ್ಲ. ಆದರೆ ಅದು ಪ್ರಚ್ಛನ್ನವಾಗಿ ಇಲ್ಲಿ ಕೆಲಸ ಮಾಡಿದೆ. ಸಮಾಜದಲ್ಲಿ ವಂಚಿತರಾರಿದ್ದಾರೆ, ಅಲಕ್ಷಿತರಾರಿದ್ದಾರೆ, ಅಂಚಿನಲ್ಲಿರುವವರು ಯಾರಿದ್ದಾರೆ, ಅವರ ಪದತಲದಿಂದ ಅಭಿವೃದ್ಧಿಯನ್ನು ಪರಿಭಾವಿಸಿಕೊಳ್ಳುವ ಅಗತ್ಯವಿದೆ. ರಾಜ್ಯವು ಆಹಾರ ಭದ್ರತೆಯಿಂದ ಕಂಗೊಳಿಸುತ್ತಿರಬಹುದು. ಅದು ಜನರ ಆಹಾರ ಭದ್ರತೆಯಾಗಿ ಪರಿವರ್ತನೆಯಾಗುವ ಅಗತ್ಯವಿದೆ. ಇನ್ನು ಮುಂದೆ ನಮ್ಮ ಅಭಿವೃದ್ಧಿ ಕಾರ್ಯತಂತ್ರವು ಅದರ ವ್ಯಾಪ್ತಿ ಮತ್ತು ಹರವನ್ನು ವಿಸ್ತೃತಗೊಳಿಸುವ ಸ್ವರೂಪದಲ್ಲಿರಬೇಕು. ಅಭಿವೃದ್ಧಿಯ ಮೂಲ ದ್ರವ್ಯ ಹಾಗೂ ಅದರ ಗುರಿ ಜನರ ಧಾರಣಶಕ್ತಿಯ ವರ್ಧನೆಯಾಗಿರಬೇಕು. ಅಭಿವೃದ್ಧಿಯ ಕಾರ್ಯತಂತ್ರ ಲಿಂಗಸ್ಪಂದಿಯಾಗಬೇಕಾಗುತ್ತದೆ. ಹಿಂದುಳಿದ ಪ್ರದೇಶಗಳಲ್ಲಿನ ಹಿಂದುಳಿದ ಜನರ ಬಗ್ಗೆ ಗಮನಹರಿಸಬೇಕಾಗುತ್ತದೆ.

ನೀರಾವರಿ ಬಗ್ಗೆ, ನೀರಾವರಿ ಯೋಜನೆಗಳ ಬಗ್ಗೆ ಕಳೆದ ೫೦ ವರ್ಷಗಳಿಂದ ನಾವು ಹೆಣಗಾಡಿದ್ದೇವೆ. ಅದು ಇನ್ನು ಸಾಕು. ಒಣಭೂಮಿ ಬೇಸಾಯದಲ್ಲಿ ನಿರತರಾಗಿರುವ ರೈತಾಪಿಗಳು ಇನ್ನು ಮುಂದೆ ನಮ್ಮ ಅಭಿವೃದ್ಧಿ ಕಾರ್ಯತಂತ್ರದ ಗುರಿಯಾಗಬೇಕು. ಇಂಗ್ಲಿಷ್ ಅನ್ನು ನಮ್ಮ ಮಕ್ಕಳು ಯಾವ ತರಗತಿಯಿಂದ ಕಲಿಯಬೇಕು ಎಂಬುದಕ್ಕಿಂತ ನಮ್ಮ ಗಮನ ಇನ್ನು ಮುಂದೆ ಪ್ರಾಥಮಿಕ ಶಾಲೆಗಳ, ಅದರಲ್ಲೂ ಗ್ರಾಮಾಂತರ ಪ್ರದೇಶದಲ್ಲಿರುವ ಶಾಲೆಗಳ, ಗುಣಮಟ್ಟದ ಬಗ್ಗೆ ಹೆಚ್ಚು ಇರಬೇಕಾಗುತ್ತದೆ. 'ಎಲ್ಲರಿಗೂ ಆರೋಗ್ಯ' ಎಂಬ ಘೋಷಣೆ ಸರಿಯಿರಬಹುದು. ಆದರೆ ಆರೋಗ್ಯ ಭಾಗ್ಯದಿಂದ ವಂಚಿತರಾಗಿರುವ ಜನರು ನಮ್ಮ ಆರೋಗ್ಯ ನೀತಿಯ ಮೂಲದ್ರವ್ಯವಾಗಬೇಕು. ಕಳೆದ ೫೦ ವರ್ಷಗಳ ನಮ್ಮ ಅಭಿವೃದ್ಧಿಯ ಅನುಭವಗಳ ಮೌಲ್ಯಮಾಪನಕ್ಕೆ ಮತ್ತು ಅದರ ಆಧಾರದ ಮೇಲೆ ಮುಂದಿನ ಅಭಿವೃದ್ಧಿಯ ಕಾರ್ಯತಂತ್ರ ಯಾವುದಿರಬೇಕು ಎಂಬುದರ ಬಗ್ಗೆ ಚಿಂತನೆ ನಡೆಸಲು ಸುವರ್ಣ ಮಹೋತ್ಸವವು ಅನುವು ಮಾಡಿಕೊಡಬೇಕು. ಅಭಿವೃದ್ಧಿ ಕುರಿತಂತೆ ಆತ್ಮಾವಲೋಕನ ನಡೆಯಬೇಕು. ಅದರ ಆಧಾರದ ಮೇಲೆ ಮುಂದಿನ ಅಭಿವೃದ್ಧಿಯ ಕಾರ್ಯತಂತ್ರ ರೂಪುಗೊಳ್ಳಬೇಕು. ಮಧ್ಯಮಗತಿ ಅಭಿವೃದ್ಧಿಯನ್ನು ನಾವು ಮುಂದೆ ಧೃತಗತಿ ಮಾಡುತ್ತೇವೆಯೋ ಇಲ್ಲವೋ ಅದು ಮುಖ್ಯವಲ್ಲ. ಆದರೆ ಅದು ಜನಮುಖಿಯಾಗುತ್ತದೆಯೋ - ಸಮಾಜಮುಖಿಯಾಗುತ್ತದೆಯೋ ಇಲ್ಲವೋ ಎಂಬುದು ಮುಖ್ಯವಾಗಬೇಕು.

**ಡಾ॥ ಟಿ. ಆರ್. ಚಂದ್ರಶೇಖರ**
ಪ್ರಾಧ್ಯಾಪಕ, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಸ್ವಾತಂತ್ರ್ಯ

ಸಿಂಪಿಗನನ್ನು ಅವನ ಕೆಲಸದ ಸಹಾಯಕ ಕೇಳಿದ :
ಯಜಮಾನರೆ, ಸ್ವಾತಂತ್ರ್ಯ, ಸ್ವಾತಂತ್ರ್ಯ ಎನ್ನುತ್ತಾರಲ್ಲ
ಏನು ಹಾಗೆಂದರೆ ?
ಹೊಲಗದ್ದೆಗಳಲ್ಲಿ ಜಿಗಿದಾಡುವ ಕರುವೆ ?
ಸೂರ್ಯನಲ್ಲಿ ತನ್ನ ಗೂಡುಕಟ್ಟಲು ಮೇಲೆ
ಹಾರುವ ಹಕ್ಕಿಯೆ ?
ಸಿಳ್ಳು ಹಾಕುತ್ತ ಉತ್ತರದಿಕ್ಕಿಗೋಡುವ ರೈಲು ಗಾಡಿಯೆ ?
ಕತ್ತಲೆಯಲ್ಲಿ ಹಾದಿ ಹೋಕರು ಹಂಬಲಿಸುವ
ಬೀದಿ ದೀಪವೆ ?

ನಿಶ್ಚಿಂತ ನಿದ್ದೆಯೆ ? ಅಥವಾ
ಉದ್ದಾನುದ್ದ ಬಟ್ಟೆಯಿಂದ, ನಿರಂತರ
ತಿರುಗುವ ರಾಟೆಯಿಂದ
ನಿರ್ದಯ ಸೂಜಿಯಿಂದ ನನ್ನ ಬಿಡುಗಡೆಯೆ ?
ಸಿಂಪಿಗ ಉತ್ತರಿಸಿದ :
ಸ್ವಾತಂತ್ರ್ಯ ಹಸಿದವರಿಗೆ ಅನ್ನ
ಬಾಯಾರಿದವನಿಗೆ ನೀರು
ಚಳಿಯಲ್ಲಿ ಬಿದ್ದುಕೊಂಡವನಿಗೆ ಅಂಗಿ
ಹಾಸಿಗೆ ದಣಿದವನಿಗೆ.

ಅದು ಕವಿಗೆ ಶಬ್ದ
ಬೇಟೆಗಾರನಿಗೆ ಬಾಣ
ಒಬ್ಬಂಟಿಯಾದವನಿಗೆ ಸಂಘ-ಸಮಾಜ
ಬೆದರಿ ಬೆಚ್ಚಿದವನಿಗೆ ಧೈರ್ಯ
ಷಂಡನಿಗೆ ಸಾವು.
ಮದುವೆಯಾದವನಿಗೆ ಕುಟುಂಬವನ್ನು
ನೆಲೆಗೊಳಿಸುವ ಮಗ.
ವಾಸ್ತವಿಕವಾಗಿ ಇವೆಲ್ಲ ಸ್ವಾತಂತ್ರ್ಯ.

ಅರಿವಿಲ್ಲದವನಿಗೆ ಜ್ಞಾನ
ಜಾಣನಿಗೆ ಕ್ರಿಯೆ
ಕ್ರಿಯಾಶೀಲನಿಗೆ ಸ್ವಾರ್ಥತ್ಯಾಗ
ಹುತಾತ್ಮನಿಗೆ ಅವನ ಪ್ರಾಣ
ಇವು ಸ್ವಾತಂತ್ರ್ಯ.

ಆದರೆ
ಹೊಲಿಗೆಯನ್ನು ಬಿಟ್ಟವನು ತನ್ನ
ಕನಸು ಕಳೆದುಕೊಳ್ಳುತ್ತಾನೆ.
ಹೊಲಿಯುವ ಸೂಜಿಯ ಹೊಳೆಯುವ ಮೊನೆಯಲ್ಲಿದೆ
ಸ್ವಾತಂತ್ರ್ಯ.
ಅದು ಬಿತ್ತಿದವನ ಸುಗ್ಗಿಯ ಧಾನ್ಯ
ಬೆವರು ಹರಿಸಿದವನಿಗೆ ರೊಟ್ಟಿ
ಹೊಲಿದವನಿಗಾಗಿ ತಯಾರಾದ ಅಂಗಿ.

ನಂತರ ಯಜಮಾನ ತನ್ನ ಹೊಲಿಗೆಯ ಯಂತ್ರವನ್ನು
ಪುನಃ ಸುರು ಮಾಡಿದ.
ತನ್ನ ಸಂಶಯಗಳನ್ನು ನಿವಾರಿಸಿಕೊಂಡ ಶಿಷ್ಯ
ಸೂಜಿಯಲ್ಲಿ ದಾರ ಪೋಣಿಸತೊಡಗಿದ.

ಮಲಯಾಳಂ ಮೂಲ : ಬಾಲಚಂದ್ರನ್ ಚುಲ್ಲಿಕ್ಕಾಡ್
ಕನ್ನಡ ಭಾವಾನುವಾದ : ಚೆನ್ನವೀರ ಕಣವಿ
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭

# ವಿಜ್ಞಾನ ಮತ್ತು ಮತಧರ್ಮ ಒಂದೇ ನಾಣ್ಯದ ಎರಡು ಮುಖಗಳಲ್ಲ



**– ಡಾ|| ರೊದ್ದಂ ನರಸಿಂಹ**

***ಡಾ||*** ರೊದ್ದಂ ನರಸಿಂಹ ಅವರು ವಿಜ್ಞಾನ ಮತ್ತು ತಂತ್ರಜ್ಞಾನ ಎರಡರಲ್ಲೂ ಸಮಾನ ಆಸಕ್ತಿ ಬೆಳೆಸಿಕೊಂಡವರು. ಅದರಲ್ಲಿ ಅಪಾರ ಸಾಧನೆ ಮಾಡಿ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾನ್ಯತೆ ಪಡೆದವರು. ಆಚಾರ್ಯ ಪಾಠಶಾಲೆಯಲ್ಲಿ ಪ್ರೌಢ ವಿದ್ಯಾಭ್ಯಾಸದ ನಂತರ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ, ನಂತರ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಉನ್ನತ ವ್ಯಾಸಂಗ ಮಾಡಿದರು. ಬಳಿಕ ತಂತ್ರಜ್ಞಾನ ಹಾಗೂ ವಿಜ್ಞಾನಗಳ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ವಿಶ್ವದಲ್ಲೇ ಪ್ರಸಿದ್ಧಿ ಪಡೆದಿರುವ ಅಮೆರಿಕಾದ ಕ್ಯಾಲ್‌ಟೆಕ್ (ಕ್ಯಾಲಿಫೋರ್ನಿಯಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ)ನಲ್ಲಿ ೧೯೫೦ರ ದಶಕದಲ್ಲಿ ವ್ಯಾಸಂಗ ಮಾಡಿ ಪಿಎಚ್. ಡಿ. ಪದವಿ ಗಳಿಸಿದರು. ಅಂದಿನ ದಿನಗಳಲ್ಲಿ ಹಿಂದೂಸ್ಥಾನದ ಕೇವಲ ಬೆರಳೆಣಿಕೆಯಷ್ಟೇ ಮಂದಿ ಕ್ಯಾಲ್‌ಟೆಕ್ ನಂತಹ ಸಂಸ್ಥೆಗಳಲ್ಲಿ ವ್ಯಾಸಂಗ ನಡೆಸುವ ಅವಕಾಶ ಹೊಂದಿದ್ದರು. ರೊದ್ದಂ ಅವರನ್ನು ಅಮೆರಿಕಾದ ಅತ್ಯಂತ ಶ್ರೀಮಂತ ಕಾರ್ಪೊರೇಶನ್‌ಗಳು ತಮ್ಮವರನ್ನಾಗಿ ಮಾಡಿಕೊಳ್ಳುವ ಆಸಕ್ತಿಯನ್ನು ತೋರಿದರೂ, ರೊದ್ದಂ ಅವರು ೧೯೬೨ರಲ್ಲಿ ಭಾರತಕ್ಕೆ ಮರಳಿಬಂದರು. ಭಾರತವೇ ತನ್ನ ನೆಲೆ, ತನ್ನ ಸಂಶೋಧನಾರಂಗ, ಎಂದು ನಂಬಿದವರು. ಭಾರತಕ್ಕೆ ರೊದ್ದಂ ಅವರ ಕೊಡುಗೆ ಅಪಾರ. ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ಅಧ್ಯಾಪಕರಾಗಿ ಹಲವಾರು ವಿಭಾಗಗಳ ಮುನ್ನಡೆಗೆ ಕಾರಣಕರ್ತರಾದವರು. ವಾತಾವರಣದ ಅಧ್ಯಯನದ ಪ್ರಾಮುಖ್ಯತೆಯನ್ನು ಮನಗಂಡು ಅಲ್ಲಿಯೇ ಸೆಂಟರ್ ಫಾರ್ ಅಟ್‌ಮಾಸ್ಫಿಯರಿಕ್ ಸೈನ್ಸಸ್‌ನ ಸ್ಥಾಪನೆ ಮಾಡಿದವರು. ವೈಮಾನಿಕ ಶಾಸ್ತ್ರಕ್ಕೆ ಸಂಬಂಧಿಸಿದ ತಂತ್ರಜ್ಞಾನ, ಅದಕ್ಕೆ ಪೂರಕವಾದ ದ್ರವಚಲನಶಾಸ್ತ್ರ ಇವೆಲ್ಲದರಲ್ಲಿ ವಿಶ್ವಮಾನ್ಯತೆ ಪಡೆದವರು. ಈ ಮಾನ್ಯತೆಯ ಗುರುತಾಗಿ ಲಂಡನ್‌ನ ರಾಯಲ್ ಸೊಸೈಟಿಯ ಫೆಲೋಶಿಪ್, ಅಮೆರಿಕಾದ ರಾಷ್ಟ್ರೀಯ ವಿಜ್ಞಾನ ಮತ್ತು ಇಂಜಿನಿಯರಿಂಗ್ ಅಕಾಡೆಮಿಗಳ ಸದಸ್ಯತ್ವ ಪಡೆದವರು. ೧೯೮೦-೯೦ರ ದಶಕಗಳಲ್ಲಿ ನ್ಯಾಷನಲ್ ಏರೊನಾಟಿಕ್ಸ್‌ನ ನಿರ್ದೇಶಕರಾಗಿ ಆ ಸಂಸ್ಥೆಯ ಅಭಿವೃದ್ಧಿಗೆ ಕಾರಣರಾದವರು. 'ಹೊಸತು'ಗಾಗಿ ಸಂದರ್ಶನಕ್ಕೆ ಒಪ್ಪಿದ್ದು ಅವರ ಸೌಜನ್ಯದ ಕುರುಹು. ರಾಷ್ಟ್ರೀಯ ಅಂತರರಾಷ್ಟ್ರೀಯ ಉನ್ನತ ಪ್ರಶಸ್ತಿಗಳನ್ನು ಪಡೆದಿರುವ ರೊದ್ದಂ ನರಸಿಂಹ ಅವರು ವಿಜ್ಞಾನ-ಸಂಸ್ಕೃತಿ, ಆದರಲ್ಲೂ ಭಾರತೀಯ ವಿಜ್ಞಾನ ಪರಂಪರೆಯಲ್ಲಿ, ಮೂಲಭೂತ ಸಂಶೋಧನೆಯಲ್ಲಿ ಆಸಕ್ತರಾಗಿ ಇರುವವರು. ಪ್ರಸ್ತುತ ಅವರು ಜವಾಹರ್‌ಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್‌ಡ್ ಸೈಂಟಿಫಿಕ್ ರಿಸರ್ಚ್ ಸಂಸ್ಥೆಯ ಇಂಜಿನಿಯರಿಂಗ್ ವಿಭಾಗವೊಂದರ ಮುಖ್ಯಸ್ಥರಾಗಿದ್ದಾರೆ. ಇದಕ್ಕೆ ಮುನ್ನ ಬೆಂಗಳೂರಿನ ಎನ್‌ಐಎಎಸ್ ಸಂಸ್ಥೆಯ ಮುಖ್ಯಸ್ಥರಾಗಿದ್ದರು. ಈ ಕಾಲದಲ್ಲಿ ಮುಖ್ಯವಾಗಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಕುರಿತಾದ ಇತಿಹಾಸದ ಅಧ್ಯಯನ ನಡೆಸಿ ಈ ದಿಕ್ಕಿನಲ್ಲಿ ವಿಶೇಷ ಬೆಳವಣಿಗೆಗೆ ಕಾರಣರಾದರು.

ಭಾರತದ ವೈಜ್ಞಾನಿಕ ಹಾಗೂ ತಂತ್ರಜ್ಞಾನಗಳಿಗೆ ಸಂಬಂಧಿಸಿದ ಹಲವಾರು ಸಲಹಾ ಸಮಿತಿಗಳ ಸದಸ್ಯರೂ ಅಧ್ಯಕ್ಷರೂ ಆಗಿ ಭಾರತೀಯ ವಿಜ್ಞಾನ ತಂತ್ರಜ್ಞಾನದ ಮುನ್ನಡೆಗೆ ಅವರು ಸಲ್ಲಿಸುತ್ತಿರುವ ಸೇವೆ ಗುರುತರವಾದದ್ದು.

'ಹೊಸತು' ಜನವರಿ ೨೦೦೬ರ ಸಂಚಿಕೆಗಾಗಿ ಡಾ|| ರೊದ್ದಂ ನರಸಿಂಹ ಅವರನ್ನು ಸಂದರ್ಶಿಸುವ ಸಲುವಾಗಿ ೨೦೦೫ರ ಅಕ್ಟೋಬರ್ ೮ರಂದು ಡಾ|| ಜಿ. ರಾಮಕೃಷ್ಣ, ಡಾ|| ಎನ್. ಸುಕುಮಾರ್ (ನಿವೃತ್ತ ಗಣಿತಶಾಸ್ತ್ರ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ) ಮತ್ತು ಶ್ರೀ ಕೆ. ಪಿ. ಸ್ವಾಮಿ, ಡಾ|| ರೊದ್ದಂ ಅವರೊಡನೆ ಸುಮಾರು ಮೂರು ಗಂಟೆಗಳ ಕಾಲ ಆತ್ಮೀಯ ಸಂಭಾಷಣೆ ನಡೆಸಿದರು. ಅದಕ್ಕೆ ಅವಕಾಶ ಮಾಡಿಕೊಟ್ಟ ಮಾನ್ಯ ಪ್ರಾಧ್ಯಾಪಕ-ಸಂಶೋಧಕ-ತಂತ್ರಜ್ಞಾನ ವಿಶಾರದರಾದ ಡಾ|| ರೊದ್ದಂ ನರಸಿಂಹ ಅವರಿಗೆ 'ಹೊಸತು' ಕೃತಜ್ಞತೆ ಸಲ್ಲಿಸುತ್ತದೆ. ಸಂದರ್ಶನ ಲೇಖನವನ್ನು ಸಿದ್ಧಪಡಿಸಿದವರು ಜಿ. ರಾಮಕೃಷ್ಣ.

**ಹೊಸತು :** ನೀವು ವಿಜ್ಞಾನ ಮತ್ತು ತಂತ್ರಜ್ಞಾನಗಳೆರಡರಲ್ಲೂ ಸಮಾನ ಆಸಕ್ತಿ ಬೆಳೆಸಿಕೊಂಡವರು, ಅದರಲ್ಲಿ ಅಪಾರ ಸಾಧನೆ ಮಾಡಿರುವವರು. ಆಚಾರ್ಯ ಪಾಠಶಾಲಾ ಪ್ರೌಢಶಾಲೆಯಲ್ಲಿ ಓದಿದವರು ನೀವು. ಎಲ್ಲಿ ಓದುತ್ತೀರಿ ಎಂಬುದಕ್ಕಿಂತ ಯಾರು ಮತ್ತು ಹೇಗೆ ಓದುತ್ತಾರೆಂಬುದು ಮುಖ್ಯವೆಂದು ನಿಮ್ಮಂಥವರನ್ನು ನೋಡಿ ನಾವು ಹೇಳುವುದುಂಟು. ಎಲ್ಲ ಶಾಲೆಗಳ ಬಗೆಗೂ ಈಗ ಹಾಗೆ ಹೇಳಲು ಸಾಧ್ಯವಿಲ್ಲದಿರಬಹುದು, ಅದು ಬೇರೆ ವಿಷಯ. ವೈಜ್ಞಾನಿಕ ಸಂಶೋಧನೆ, ವಿಜ್ಞಾನದ ಬೋಧನೆ, ಭಾರತೀಯ ವಿಜ್ಞಾನದ ಪರಂಪರೆ, ತಂತ್ರಜ್ಞಾನದ ಇತಿಹಾಸ, ಮುಂತಾದವುಗಳಲ್ಲಿ ನೀವು ಪಾರಂಗತರು. ಅಕ್ಷರ ಪ್ರಕಾಶನದಲ್ಲಿ ನಿಮ್ಮ ಒಂದು ಪುಸ್ತಕವೂ ಹೊರಬಂದಿದೆ. ಸೇಜ್ ಪ್ರಕಾಶನದ ಇನ್ನೊಂದು ಪುಸ್ತಕದಲ್ಲಿ ವಿಜ್ಞಾನದಿಂದ ತಂತ್ರಜ್ಞಾನದ ಆವಿಷ್ಕಾರವಾಗುವಂತೆ ತಂತ್ರಜ್ಞಾನದಿಂದ ವಿಜ್ಞಾನ ಕುಮ್ಮಕ್ಕು ದೊರೆಯುತ್ತದೆಂದು ಪ್ರತಿಪಾದಿಸಿದ್ದೀರಿ. ಇದಕ್ಕೆಲ್ಲಾ ಪ್ರೇರಣೆಗಳು ಯಾವುವು ?

**ಡಾ|| ರೊದ್ದಂ ನರಸಿಂಹ :** ವಿಜ್ಞಾನ ಮತ್ತು ತಂತ್ರಜ್ಞಾನ ಒಂದು ಜುಗಲಬಂದಿ ಇದ್ದಂತೆ. ಸದಾ ಅವುಗಳ ನಡುವೆ ಸಂವಾದ ನಡೆಯುತ್ತಿರುತ್ತದೆ. ಅದಿರಲಿ, ವಿಜ್ಞಾನಕ್ಕೆ ನನ್ನ ಪ್ರವೇಶದ ಪ್ರಾರಂಭ ನಮ್ಮ ಮನೆಯಲ್ಲೇ ಆಗಿದ್ದು, ನಮ್ಮ ತಂದೆ ವಿಜ್ಞಾನದಲ್ಲಿ ಪದವಿ ಪಡೆದನಂತರ ಖ್ಯಾತ ಭೌತ ವಿಜ್ಞಾನಿ ಮೇಘನಾದ ಸಹಾ ಅವರಲ್ಲಿ ವ್ಯಾಸಂಗ ಮುಂದುವರೆಸಲು ಅಲಹಾಬಾದ್‌ಗೆ ಹೋಗಿದ್ದರು. ಸ್ನಾತಕೋತ್ತರ ಪದವಿ ಪಡೆದುಬಂದು ಬೆಂಗಳೂರಿನ

ಸೆಂಟ್ರಲ್ ಕಾಲೇಜಿನಲ್ಲಿ ಅಧ್ಯಾಪಕರಾದರು. ಅವರು ಕನ್ನಡದಲ್ಲಿ ಸಾಕಷ್ಟು ಬರೆದಿದ್ದಾರೆ. ವಿಜ್ಞಾನದ ಬಗ್ಗೆ ಈ ರೀತಿಯ ಕೃಷಿ ಮಾಡಿದವರಲ್ಲಿ ಅವರು ಮೊದಲ ಸಾಲಲ್ಲಿ ನಿಲ್ಲುತ್ತಾರೆ. ಅವರು ನನಗೆ ವಿಜ್ಞಾನ ಬೋಧಿಸಿದ್ದು ತೀರಾ ಕಡಿಮೆ, ಆದರೆ ಮೇಲ್ಪಂಕ್ತಿ ಹಾಕಿಕೊಟ್ಟವರು ಅವರೇ. ವಿಜ್ಞಾನದಲ್ಲಿ ಆಧುನಿಕತೆ, ಸಾಮಾಜಿಕವಾಗಿ ಉದಾರತೆ ಮತ್ತು ಸಾಂಸ್ಕೃತಿಕವಾಗಿ ಸಾಂಪ್ರದಾಯಿಕತೆ, ಇವು ಅವರ ವ್ಯಕ್ತಿತ್ವದ ಲಕ್ಷಣಗಳು. ಎಲ್ಲದಕ್ಕಿಂತಲೂ ಹೆಚ್ಚಾಗಿ ಹೆಮ್ಮೆಯಿಂದಿರುವುದನ್ನು ಅವರು ಕಲಿಸಿದರು. ನಮ್ಮ ತಾಯಿ ಚಿಕ್ಕವಯಸ್ಸಿನಲ್ಲೇ ಶಾಲೆ ಬಿಟ್ಟವರು, ಆದರೆ ಓದಿನಲ್ಲಿ ವ್ಯಾಪಕತೆ ಇತ್ತು. ಅವರದೂ ಹೆಮ್ಮೆಯ ವ್ಯಕ್ತಿತ್ವವೇ. ದೇವರಲ್ಲಿ ಎರಡನ್ನು ಮಾತ್ರ ಪ್ರಾರ್ಥಿಸಲು ಅವರು ಕಲಿಸಿದರು : ಬುದ್ಧಿವಂತಿಕೆ ಮತ್ತು ಜ್ಞಾನ.

ನಮ್ಮ ಶಾಲೆಗೆ ಒಮ್ಮೆ ನೊಬೆಲ್ ಪ್ರಶಸ್ತಿ ವಿಜೇತ ಸಿ. ವಿ. ರಾಮನ್ ಅವರನ್ನು ಕರೆಸಿದ್ದರು. ಆಗ್ಗೆ ಭಾರತೀಯ ವಿಜ್ಞಾನದಲ್ಲಿ ಅವರು ದಿಗ್ಗಜರು. ಹಾಸ್ಯಭರಿತವಾದ ಅವರ ವಿದ್ವತ್ಪೂರ್ಣ ಉಪನ್ಯಾಸವು ನಮ್ಮನ್ನು ನಿಬ್ಬೆರಗಾಗಿಸಿತು. ಅವರನ್ನು ಕರೆಸಿದ್ದ ಕೆ. ವಿ. ಆರ್. ಎಂಬ ಉಪಾಧ್ಯಾಯರು ಪ್ರಾಮಾಣಿಕವಾಗಿ ಸ್ಪಷ್ಟವಾಗಿ ಬರೆಯುವುದಕ್ಕೆ ಒತ್ತುಕೊಡುತ್ತಿದ್ದರು. ಅವರ ವಾತ್ಸಲ್ಯ ಮತ್ತು ನನ್ನ ಗೌರವ ಹೀಗೆ ಬೆಳೆದದ್ದು. ಇನ್ನೊಬ್ಬರು ಶ್ರೀ ಬಿ. ಎಲ್. ಅಶ್ವತ್ಥನಾರಾಯಣರಾವ್. ಬಹಳ ಸ್ನೇಹಪರರು. ಕಾಫಿ-ತಿಂಡಿ ಕೊಡಿಸಿ ದೀರ್ಘ ಸಂಭಾಷಣೆಗಳಲ್ಲಿ ನನ್ನಂತಹ ಕೆಲವು ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದರು. ಅವರು ಒಮ್ಮೆ ಕೊಟ್ಟ ಎರಡು ಪುಸ್ತಕಗಳು ನನಗೆ ದಾರಿದೀಪಗಳಾದುವು. ಒಂದು, ಮಹಾನ್ ವಿಜ್ಞಾನಿಗಳ ಜೀವನ, ಪಾಶ್ಚಾತ್ಯ ವಿಜ್ಞಾನದ ಬಗ್ಗೆ ಕಣ್ಣು ತೆರೆಸಿತು; ಇನ್ನೊಂದು ಆಲೀಸ್ ಇನ್ ವಂಡರ್‌ಲ್ಯಾಂಡ್‌ನ ಕನ್ನಡ ರೂಪಾಂತರ, ನನಗೆ ಅಚ್ಚುಮೆಚ್ಚಾದ್ದು. ಎರಡೂ ನನ್ನ ಮೇಲೆ ಗಾಢ ಪ್ರಭಾವ ಬೀರುತ್ತವೆಂದು ಶ್ರೀ ಬಿ. ಎಲ್. ಎ. ಅವರಿಗೆ ತಿಳಿದದ್ದು ಹೇಗೆಂಬ ಕುತೂಹಲ ನನ್ನದು.

೧೯೪೯ರಲ್ಲಿ ವಿಶ್ವವಿದ್ಯಾಲಯ ಸೇರುವಾಗ ಭೌತಶಾಸ್ತ್ರ ಕಲಿಯಬೇಕೆಂಬ ಆಶಯವಿತ್ತು. ಆದರೆ ಅಂದಿನ ಸನ್ನಿವೇಶವು ನನ್ನನ್ನು ಮೆಕ್ಯಾನಿಕಲ್ ಇಂಜಿನಿಯರಿಂಗ್‌ಗೆ ಸೆಳೆಯಿತು. ಆ ವರ್ಷದಲ್ಲಿ ಮೊದಲ ಬಾರಿಗೆ ನಾನು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಗೆ ಭೇಟಿ ನೀಡಿದೆ. ಸಾರ್ವಜನಿಕರಿಗೆ ಮುಕ್ತ ಅವಕಾಶ ಇರುವ ಸಂದರ್ಭ ಅದಾಗಿತ್ತು. ವೈಮಾನಿಕ ತಂತ್ರಜ್ಞಾನ ವಿಭಾಗ ಆಗತಾನೆ ಆರಂಭಗೊಂಡಿತ್ತು. ಎರಡನೇ ಮಹಾಯುದ್ಧದಲ್ಲಿ ಖ್ಯಾತಿ ಗಳಿಸಿದ್ದ ಸ್ಪಿಟ್‌ಫೈರ್ ವಿಮಾನವೊಂದನ್ನು ಅಲ್ಲಿ ಪ್ರದರ್ಶನಕ್ಕಿಡಲಾಗಿತ್ತು. ಅದೇ, ವಿಮಾನವೊಂದರೊಡನೆ ನನ್ನ ಪ್ರಥಮ ಮುಖಾಮುಖಿ. ಹೊಸ ವಿಶ್ವವೊಂದು ನನ್ನ ಮುಂದೆ ತೆರೆದುಕೊಂಡಿತು. ಹೊರಗಡೆ ನೋಡಲು ಅದು ನವಿರಾಗಿತ್ತಾದರೂ ಒಳಗೆ ಅದೆಷ್ಟು ಸಂಕೀರ್ಣತೆ! ಕೇಬಲ್‌ಗಳು, ಪೈಪ್‌ಗಳು, ನಾಲೆಗಳು, ವಾಲ್ವ್‌ಗಳು, ಎಲ್ಲಾ ಒಂದು ಅರಣ್ಯ ಎನಿಸಿತು. ಇಂತಹ ವಿಸ್ಮಯಕರ ತಂತ್ರಜ್ಞಾನವನ್ನು ಮೈಗೂಡಿಸಿಕೊಂಡಿದ್ದವರು ಎಷ್ಟು ಅದ್ಭುತ ಸಾಹಸಿಗಳು ಎಂದುಕೊಂಡೆ. ನನ್ನ ಮುಂದಿನ ಆಯ್ಕೆಗೆ ಇದು ನಾಂದಿಯಾಯಿತು. ಇಂಜಿನಿಯರಿಂಗ್ ಪದವಿ ಪಡೆದ ನಂತರ ವೈಮಾನಿಕ ಶಾಸ್ತ್ರ (ಏರೊನಾಟಿಕ್ಸ್) ಅಭ್ಯಾಸ ಮಾಡಲು ಆಶಿಸಿದೆ. ನನ್ನ ತಂದೆಯವರ ಸಲಹೆಯಂತೆ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಅವರ ಸ್ನೇಹಿತರೊಬ್ಬರನ್ನು ಭೇಟಿಯಾದೆ. ಈ ಆಯ್ಕೆ ಮೂರ್ಖತನದ್ದೆಂದು ಅವರು ಹೀಗಳೆದರು; ರೈಲ್ವೆಗೋ ಬರ್ಮಾ ಶೆಲ್ ಕಂಪನಿಗೋ ಸೇರುವುದು ಉತ್ತಮವೆಂದರು. ನನ್ನ ತಂದೆ ಮಾತ್ರ ಯಾವ ಅಳುಕೂ ಇಲ್ಲದೆ ನನಗೆ ಇಷ್ಟವಾದುದನ್ನು ಆರಿಸಿಕೊಳ್ಳಬೇಕೆಂದು ಹೇಳಿಬಿಟ್ಟರು.

ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಸೇರಿದಾಗ ಪ್ರೊ|| ಸತೀಶ್ ಧಾವನ್ ನವವಿಶ್ವದ ಹೊಸಗಾಳಿಯನ್ನು ಹರಿಬಿಟ್ಟು ವಾತಾವರಣವನ್ನು ಪುಲಕಿತಗೊಳಿಸಿದ್ದುದು ಕಾಣಬಂತು. ಕ್ಯಾಲಿಫೋರ್ನಿಯಾ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಯಿಂದ (ಕ್ಯಾಲ್‌ಟೆಕ್) ಪಿಎಚ್. ಡಿ. ಪಡೆದು ಬಂದಿದ್ದ ಇವರು ಅನೌಪಚಾರಿಕತೆಗೆ ಹೆಸರಾದವರು. ಆದರೆ ಕೆಲಸವನ್ನು ಗಂಭೀರವಾಗಿ ತೆಗೆದುಕೊಳ್ಳುತ್ತಿದ್ದವರು. ಅವರ ಪ್ರಯೋಗಶಾಲೆಯಲ್ಲಿದ್ದ ಹತ್ತಾರು ಉಪಕರಣಗಳು ಮೈನವಿರೇಳಿಸುವಂತಿದ್ದವು. ರಾಷ್ಟ್ರೀಯ ಬದ್ಧತೆಯು ಅವರ ವೈಜ್ಞಾನಿಕ ಸಂಶೋಧನೆಯನ್ನು ಆವರಿಸಿತ್ತು; ಆದರೆ ಸಾಮಾನ್ಯ ಉಪಕರಣಗಳಿಂದ ಸಹ ಸಂಶೋಧನೆ ಮುಂದುವರಿಸಬಹುದೆಂಬುದನ್ನು ಅವರು ನನಗೆ ತೋರಿಸಿಕೊಟ್ಟರು. ಆಗಲೇ ನಮ್ಮ ಒಂದು ಪ್ರಬಂಧವು ಜರ್ನಲ್ ಆಫ್ ಫ್ಲೂಯಿಡ್ ಮೆಕ್ಯಾನಿಕ್ಸ್‌ನಲ್ಲಿ ಪ್ರಕಟವಾಯಿತು. ಎರಡು ವರ್ಷದ ನಂತರ ಕ್ಯಾಲ್ಟೆಕ್‌ನಲ್ಲಿ ಹೆಚ್ಚಿನದನ್ನು ಕಲಿಯಲು ತೆರಳಬೇಕೆಂಬ ಸಲಹೆ ಅವರಿಂದ ಬಂತು. ಅಚ್ಚರಿಯೆನಿಸಬಹುದೇನೋ, ಆದರೆ ನನಗೇನೂ ವಿದೇಶಕ್ಕೆ ಹೋಗುವ ಹಂಬಲವಿರಲಿಲ್ಲ. ಎಲ್ಲರ 'ಫ್ಯಾಶನ್' ನನ್ನದೂ ಆಗಬೇಕೆ ಎನ್ನುವ ಭಾವನೆ ಒಂದೆಡೆ, ಮತ್ತೊಂದೆಡೆ ಭಾರತದಲ್ಲಿ ಉಳಿದು ಸಂಶೋಧನೆ ಮಾಡುವವರ ಬಗ್ಗೆ ನನ್ನ ಕೆಲವು ಪ್ರತಿಭಾವಂತ ಮಿತ್ರರ ಮೆಚ್ಚುಗೆ. ಆದರೂ ಕ್ಯಾಲ್ಟೆಕ್‌ಗೆ ಹೋಗಿ ಹ್ಯಾನ್ಸ್ ಲೀಪ್‌ಮನ್ ಬಳಿ ಕೆಲಸ ಮಾಡಿದೆ. ೧೯೫೦ರ ದಶಕದಲ್ಲಿ ಬೆಂಗಳೂರು ಮತ್ತು ಪ್ಯಾಸದೀನ ಎಂದರೆ ವೈಜ್ಞಾನಿಕವಾಗಿ, ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಎರಡು ವಿಭಿನ್ನ ಧ್ರುವಗಳಿದ್ದಂತೆ. ಆಗ್ಗೆ ಕ್ಯಾಲ್ಟೆಕ್‌ನಲ್ಲಿರುತ್ತಿದ್ದ ಭಾರತೀಯರ ಸಂಖ್ಯೆ ಮೂರೋ ನಾಲ್ಕೋ, ಅಷ್ಟೆ. ಡಾ|| ಎಸ್. ಆರ್. ವಳ್ಳೂರಿ ಅಲ್ಲಿ ಅಧ್ಯಾಪಕರಾಗಿದ್ದರು ಮತ್ತು ಆಮೇಲೆ ಬೆಂಗಳೂರಿನಲ್ಲಿ ರಾಷ್ಟ್ರೀಯ ವೈಮಾನಿಕ ಸಂಶೋಧನಾ ಸಂಸ್ಥೆಯ (ಎನ್. ಎ. ಎಲ್.) ನಿರ್ದೇಶಕರಾಗಿದ್ದರು. ಕ್ಯಾಲ್ಟೆಕ್‌ನಲ್ಲಿದ್ದ ಐದು ವರ್ಷಗಳಲ್ಲಿ ನನ್ನ ಜ್ಞಾನ ದಿಗಂತ ಅಪಾರವಾಗಿ ವಿಸ್ತರಿಸಿತು. ಲೀಪ್‌ಮನ್ ಮತ್ತು ಕ್ಯಾಲ್‌ಟೆಕ್ ತಮ್ಮ ಸ್ನೇಹವಲಯಕ್ಕೆ ನನ್ನನ್ನು ಬಿಟ್ಟುಕೊಂಡು ಅಂತರರಾಷ್ಟ್ರೀಯ ವಿಜ್ಞಾನದ ಕ್ಷೇತ್ರದಲ್ಲಿ ಅತಿನೂತನ ಸಂಶೋಧನೆಗಳತ್ತ ನನ್ನ ದೃಷ್ಟಿ ಹರಿಸಿದರು. ೧೯೬೨ರಲ್ಲಿ ಭಾರತಕ್ಕೆ ಮರಳಿಬಂದೆ. ಆಮೇಲೆ ಆಗಾಗ್ಗೆ ವಿದೇಶಗಳಿಗೆ ಹೋಗಿರುವುದುಂಟು, ಆದರೆ ಇದೇ ನನ್ನ ನೆಲೆ, ನನ್ನ ಸಂಶೋಧನಾ ರಂಗ.

**ಹೊ :** ಅಂದರೆ ಈಗ ೪೦ ವರ್ಷಗಳಿಗೂ ಹೆಚ್ಚಾಗಿ ನಿಮ್ಮ ಕಾರ್ಯಕ್ಷೇತ್ರದಲ್ಲಿ ಶ್ರಮಿಸಿ ಕೀರ್ತಿ ಗಳಿಸಿದ್ದೀರಿ. ನಿಮ್ಮ ಕೆಲಸ ಸಾರ್ಥಕವೆನಿಸಿದೆಯೆ ?

ನ : ಖಂಡಿತವಾಗಿಯೂ ಅನಿಸಿದೆ. ನನಗೆ ಉತ್ತಮ ಅಧ್ಯಾಪಕರು ದೊರೆತರು,



*ಡಾ|| ಸಂಪತ್ತುಮಾರ್, ಡಾ|| ಜಿ. ರಾಮಕೃಷ್ಣ, ಡಾ|| ರೊದ್ದಂ ನರಸಿಂಹ*

ಹೊಸ ಜ್ಞಾನದ್ವಾರಗಳನ್ನು ತೆರೆದು ಅಮೋಘವಾದ ನೂತನ ವಿಶ್ವದ ದರ್ಶನ ಮಾಡಿಸಿದರು. ಸಾಮಾನ್ಯವಾಗಿ ಎಲ್ಲರೂ ಮಾಡುತ್ತಿದ್ದುದನ್ನೇ ಮಾಡದೆ ನಾನು ಆಯ್ದುಕೊಂಡ ಕ್ಷೇತ್ರದಲ್ಲಿ ಮೈಮರೆತು ಕೆಲಸಮಾಡುವುದು ಯಾವಾಗಲೂ ಆನಂದ ತಂದಿದೆ. ನಾನು ಕ್ಯಾಲ್ಟೆಕ್ ಬಿಟ್ಟು ಹೊರಟಾಗ ಎಷ್ಟೋ ಮಂದಿ ಭಾವಿಸುತ್ತಿದ್ದುದುಂಟು : ಈತ ಭಾರತದಲ್ಲಿ ಬಹಳ ದಿನ ಉಳಿಯುವುದಿಲ್ಲವೆಂದು. ಕೆಲವರು ಆ ಬಗ್ಗೆ ಪಣ ತೊಡಲು ಸಹ ಸಿದ್ಧರಿದ್ದರು. ಅದು ನನ್ನ ಮನಸ್ಸಿಗೆ ನೋವನ್ನುಂಟು ಮಾಡುತ್ತಿತ್ತು; ಏಕೆಂದರೆ, ಭಾರತಕ್ಕೆ ಹಿಂದಿರುಗುವುದು ಖಚಿತವೆಂದು ನನಗೆ ಮೊದಲಿನಿಂದಲೂ ತಿಳಿದಿತ್ತು. ಬೋಯಿಂಗ್ ಮುಂತಾದ ಕಂಪನಿಗಳು ನನ್ನಂಥವರಿಗೆ ಕೆಲಸ ಕೊಡಲು ತುದಿಗಾಲ ಮೇಲೆ ನಿಂತಿರುತ್ತವೆ. ನನಗೂ ಆಹ್ವಾನ ಬಂದಿತ್ತು. ಅದನ್ನು ನಿರಾಕರಿಸಿ ಬಂದೆ. ನನಗೆ ಮುಂಚೆ ಡಾ|| ಧಾವನ್ ಸಹ ಹಾಗೆಯೇ ಮಾಡಿದ್ದರು. ನಮ್ಮ ದೇಶದಲ್ಲಿ ಸಂಶೋಧನೆ ಕಷ್ಟಕರ, ಆದರೆ ಅಸಾಧ್ಯವಲ್ಲ. ಭಾರತದಲ್ಲಿದ್ದು ಕೊಂಡು ಮೌಲಿಕ ಸಂಶೋಧನೆ ಸಾಧ್ಯವೆಂಬುದನ್ನು ತೋರಿಸಿ ಕೊಡುವುದು ನನ್ನ ಆಸೆಯಾಗಿತ್ತು. ಆಗ್ಗೆ ಅದು ಕಠಿಣವಾಗಿತ್ತು. ಅಂತರರಾಷ್ಟ್ರೀಯ ಮಟ್ಟದಲ್ಲಿ ಗುಣಾತ್ಮಕವಾದುದನ್ನು ಮಾಡುವುದು ಮುಖ್ಯ. ಹಾಗೆ ಸಂಶೋಧನೆಯಲ್ಲಿ ತೊಡಗಿಕೊಂಡಿದ್ದವರ ಸಂಖ್ಯೆಯೂ ಕಡಿಮೆ. ಆದರೂ ಕ್ರಮೇಣ ಅದನ್ನು ಮಾಡಿ ತೋರಿಸಲು ಸಾಧ್ಯವಾಯಿತು. ಆ ದೃಷ್ಟಿಯಿಂದ ನನ್ನ ನಲವತ್ತು ವರ್ಷಗಳ ಕೆಲಸ ನನಗೆ ಸಂತೋಷ ನೀಡಿದೆ, ತೃಪ್ತಿ ತಂದಿದೆ.

ಕಡಿಮೆ ಮಂದಿ ಇದ್ದಾಗ ಒಂದು ಅನುಕೂಲವಿದೆ; ನೀವೇ ಮೊದಲಿಗರಾಗಬಹುದು, ಸ್ವತಂತ್ರವಾಗಿ ನಿಮ್ಮ ಹಾದಿಯನ್ನು ಅರಸಬಹುದು. ನಮ್ಮದು ಅಮೆರಿಕಾ ಮಾದರಿಯದಲ್ಲ. ಅಲ್ಲಿ ಹಣ ಸುರಿಯುತ್ತಾರೆ. ಒಂದು ಉದಾಹರಣೆ ನೋಡಿ. ನಾನು ಕ್ಯಾಲ್ಟೆಕ್‌ನಲ್ಲಿದ್ದಾಗ ರಷ್ಯಾ ಸ್ಪುಟ್ನಿಕ್ ಹಾರಿಸಿತು. ನಂಬುವುದೇ ಕಷ್ಟವಾಗಿತ್ತು ಅಮೆರಿಕನ್ನರಿಗೆ. ಸಂಜೆಯ ನಂತರ ಆಕಾಶದಲ್ಲಿ ಅದನ್ನು ಕಾಣಲು ನಾವು ಬಹಳ ಮಂದಿ ಜಮಾಯಿಸುತ್ತಿದ್ದೆವು. ಅದಾದನಂತರ ಅಮೆರಿಕಾದಲ್ಲಿ ಒಂದು ಪ್ರಮುಖ ಬದಲಾವಣೆಯಾಯಿತು : ವೈಮಾನಿಕ ಸಂಶೋಧನೆಗೆ ಕೇವಲ ಹತ್ತು ಲಕ್ಷ ಡಾಲರ್, ಆದರೆ ಅಂತರಿಕ್ಷ ತಂತ್ರಜ್ಞಾನ ಸಂಶೋಧನೆಗೆ ಲೆಕ್ಕವಿಲ್ಲದಷ್ಟು ಹಣ. ನಮ್ಮದು ಎಲ್ಲ ಕ್ಷೇತ್ರಗಳಲ್ಲೂ ಕಡಿಮೆ ಮೊತ್ತದ ಹೂಡಿಕೆಯೇ. ನಮಗೆ ಇಂಥದನ್ನು ಮಾಡಬೇಕೆಂಬುದರ ಬಗ್ಗೆ ಖಚಿತತೆ ಇತ್ತು; ನಿಧಾನವಾಗಿಯೇ ಆದರೂ ನಾವದನ್ನು ಮಾಡಬಲ್ಲೆವೆಂಬ ಭರವಸೆ ಇತ್ತು. ಮುಗ್ಗಟ್ಟುಗಳು ಆಗಲೂ ಇದ್ದುವು, ಈಗಲೂ ಇವೆ. ಒಂದು ಯೋಜನೆಗೆ ಮೊದಲು ಒಪ್ಪಿಗೆ ಪಡೆಯಬೇಕು, ಆಮೇಲೆ ಉಪಕರಣಗಳನ್ನು ಹೊಂದಿಸಿಕೊಳ್ಳಬೇಕು, ಹೀಗೆ ಅನೇಕ ಹಂತಗಳಿವೆ. ಅದರಲ್ಲಿ ಸಾಕಷ್ಟು ಸಮಯ ವ್ಯರ್ಥವಾಗುತ್ತದೆ. ನಾನು ಸಂಶೋಧನೆ ಕೈಗೊಳ್ಳುವಾಗ ಎರಡು ನಿರ್ಧಾರಗಳನ್ನು ಮಾಡಿದೆ : (೧) ಅಮೆರಿಕಾದಲ್ಲಿ ನಡೆಯುವ ಸಂಶೋಧನೆಯ ಮಾದರಿ ನಮ್ಮದಲ್ಲ; ಅವರೊಡನೆ ಸ್ಪರ್ಧಿಸುವುದು ಶಕ್ಯವಲ್ಲ. (೨) ಒಟ್ಟಿಗೆ ಎರಡು-ಮೂರು ಪ್ರಶ್ನೆಗಳನ್ನು ಕೈಗೆತ್ತಿಕೊಂಡು ಸಂಶೋಧನೆಯಲ್ಲಿ ನಿರತನಾಗುವುದು, ಅಮೆರಿಕಾದವರು ಮಾಡದಿರುವುದನ್ನು ಮಾಡಲು ಹೊರಡುವುದು.

**ಹೊ** : ನಮ್ಮ ದೇಶದಲ್ಲಿ ವೈಜ್ಞಾನಿಕ ಸಂಶೋಧನೆಯು ಹೊರಗಿನವರಿಂದ ನಿಗದಿತವಾಗುತ್ತಿದೆಯೆ ? ಅದೊಂದು ಫ್ಯಾಶನ್ ಆಗಿಬಿಡುವ ಸಂಭವ ಉಂಟೆ ?

**ನ** : ತಳಮಟ್ಟದ ವಿಜ್ಞಾನದ ಕ್ಷೇತ್ರಗಳಲ್ಲಿ ಹಾಗಾಗಬಹುದು. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೈಗೆತ್ತಿಕೊಳ್ಳಲಾದ ಸಮಸ್ಯೆಗಳನ್ನು ಇಲ್ಲೂ ಸಂಶೋಧನೆಯ ವಿಷಯ ಮಾಡಿಕೊಂಡಿರಬಹುದು. ಅಂದರೆ, ಅತ್ಯಾಧುನಿಕವಾದ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗುತ್ತದೆ; ಯಾವುದು ಎಲ್ಲರ ಮನಸ್ಸುಗಳನ್ನೂ ಆವರಿಸಿ, ಮುಂದಿನ ಘಟ್ಟಕ್ಕೆ ಒಯ್ಯಬಹುದೋ ಅಂಥದನ್ನು. ನಾನು ಸಂಶೋಧನೆ ಆರಂಭಿಸಿದಾಗ ಎಲ್ಲರೂ ಕೈಗೆತ್ತಿಕೊಳ್ಳುತ್ತಿದ್ದ ಕೆಲವು ಪ್ರಶ್ನೆಗಳಿದ್ದುವು, ಆದರೆ ನಾನು ಆಯ್ಕೆಮಾಡಿಕೊಂಡವು ಆ ಧಾರೆಗೆ ಸೇರಿರಲಿಲ್ಲ. ಮೊದಲ ಯೋಜನೆಯ ಸಂಶೋಧನೆ ಆರಂಭಿಸಿದಾಗ ಯಾರೂ ಅದನ್ನು ಗಮನಿಸಲಿಲ್ಲ. ನಮಗೆ ಅದು ಸ್ವಲ್ಪ ಹತಾಶೆಯನ್ನುಂಟುಮಾಡಿತು. ಆದರೆ ವ್ಯವಸ್ಥಿತವಾಗಿ ಕೆಲಸ ಮುಂದುವರಿಸಿದ ಫಲವಾಗಿ ಹತ್ತು ವರ್ಷಗಳ ನಂತರ ಎಲ್ಲರೂ ಅವಾಕ್ಕಾಗಿ ಅದನ್ನು ನೋಡಲಾರಂಭಿಸಿದರು.

**ಹೊ** : ಗಾಳಿ ಸುರಂಗ ಇತ್ಯಾದಿ ಸಂಶೋಧನೆಗಳೂ ಆ ಕಾಲದವೇನು ?

**ನ**.: ಅದು ಮತ್ತು ಸೂಕ್ಷ್ಮ ಅಳತೆಗಳನ್ನು ಮಾಡುವ ವಿಧಾನದಲ್ಲಿ ನಮ್ಮ ಕ್ರಮ. ಇದು ಸಾಧ್ಯವೇ, ಇದು ಆಗಿರಲಿಕ್ಕಿಲ್ಲ, ಎಂಬ ಸಂಶಯ ಅವರದು. ಅದಕ್ಕೆ ಅವನ್ನು ಕಣ್ಣಿಗೆ ಕಾಣುವಂತೆ ಅವರ ಮುಂದಿಟ್ಟೆವು, ಪ್ರಯೋಗಗಳನ್ನು ಅವರೆದುರಿಗೇ ಮಾಡಿ

ತೋರಿಸಿದೆವು. ಒಂದು ಉದಾಹರಣೆ ನೋಡಿ : ಬೋಯಿಂಗ್ ವಿಮಾನಗಳ ರೆಕ್ಕೆಗಳು ಏಕೋ ಏನೋ ನಿರೀಕ್ಷೆಯಂತೆ ಕೆಲಸ ಮಾಡುತ್ತಿರಲಿಲ್ಲ. ಸಮಸ್ಯೆಗೆ ಪರಿಹಾರ ಪಡೆಯಲು ನಮ್ಮನ್ನು ಸಂಪರ್ಕಿಸಬಹುದಲ್ಲಾ ಎಂಬ ಸಲಹೆ ಅವರ ಮುಂದೆ ಬಂದಿತು. ೧೯೭೦ರ ದಶಕದಲ್ಲಿ ನಮ್ಮ ಕ್ಷೇತ್ರದ ಉದ್ದಾಮ ಸಂಶೋಧಕರು ಬೇರೆ ಬೇರೆ ಕಡೆಗಳಿಂದ ಬಂದು ನಮ್ಮ ಕೆಲಸ ನೋಡಿದ್ದುದರ ಪರಿಣಾಮ ಅದು.

**ಹೊ :** ಈ ರೀತಿಯ ಮಹತ್ವದ ಸಂಶೋಧನೆಗಳು ವಿದೇಶಿ ಅವಶ್ಯಕತೆಗಳನ್ನು ಪೂರೈಸುತ್ತವೆಯೋ, ನಮ್ಮ ದೇಶದಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಗುವಂತಹವೊ ?

**ನ :** ಎರಡೂ ಬಗೆಯವಾಗಿರುತ್ತವೆ. ನಮ್ಮ ದೇಶದ ಸಂದರ್ಭದಲ್ಲಿ ಯಾವುದೂ ನಿರರ್ಥಕವಾಗಬೇಕಾಗಿಲ್ಲ. ಹಾಗಿರುವುದರಿಂದಲೇ ನಮ್ಮೆಲ್ಲ ಸಂಶೋಧನಾ ಚಟುವಟಿಕೆಗಳೂ ನಮಗೆ ತೃಪ್ತಿಯನ್ನುಂಟುಮಾಡುವುವು.

**ಹೊ :** ವಿದೇಶಗಳ ಸಂಶೋಧನಾ ಯೋಜನೆಯನ್ನು ಕೈಗೆತ್ತಿಕೊಂಡಾಗ ಅಡಚಣೆಗಳು ಏನೂ ಇರುವುದಿಲ್ಲವೆ ? ಉದಾಹರಣೆಗೆ, ಬೌದ್ಧಿಕ ಆಸ್ತಿಯ ಹಕ್ಕುಗಳನ್ನು ಆ ಹಿನ್ನೆಲೆಯಲ್ಲಿ ಹೇಗೆ ನಿಭಾಯಿಸುತ್ತೀರಿ ? ಏಕೆಂದರೆ ಹಣ ಅವರಿಂದ ಬಂದಿರುತ್ತದೆ.

**ನ :** ನನ್ನ ಅನುಭವವನ್ನು ತೆಗೆದುಕೊಂಡರೆ ಅದನ್ನು ಯಶಸ್ವಿಯಾಗಿ ನಿಭಾಯಿಸಿ ದ್ದೇವೆಂಬ ಅಭಿಪ್ರಾಯ ಸರಿಯೆನಿಸುತ್ತದೆ. ಇವುಗಳಲ್ಲಿ ಪೂರ್ವನಿರ್ಧಾರಿತ ಒಪ್ಪಂದ ಗಳಿರುತ್ತವೆ. ಸಂಶೋಧನೆಯ ಫಲದಲ್ಲಿ ಯಾರದು ಎಷ್ಟು ಎಂಬುದು ಅಲ್ಲಿ ಉಲ್ಲೇಖವಾಗಿರುತ್ತದೆ. ಉದಾಹರಣೆಗೆ, ಬೋಯಿಂಗ್ ಜೊತೆಯ ಒಪ್ಪಂದ ನೋಡಿ. ಸಂಶೋಧನೆಯಿಂದ ನಮಗೆ ತಿಳಿದುಬಂದ ಅಂಶಗಳನ್ನು ಪ್ರಕಟಿಸಲು ಅವಕಾಶವಿದ್ದಿತು. ಯಾವುದು ನೇರವಾಗಿ ಅವರಿಗೆ ಪ್ರಸ್ತುತವಾಗುವಂಥದಿರುತ್ತಿತ್ತೋ ಅದನ್ನು ಪ್ರಕಟಿಸು ವಂತಿರಲಿಲ್ಲ. ಇದು ತಾತ್ವಿಕವಾದ ಒಂದು ಒಪ್ಪಂದ, ಅದಕ್ಕೆ ಇಬ್ಬರೂ ಬಾಧ್ಯರು. ನಾವು ಏನನ್ನು ಪ್ರಕಟಿಸುತ್ತೇವೆಂಬುದನ್ನು ಅವರಿಗೆ ತಿಳಿಸಬೇಕೆಂಬ ನಿರೀಕ್ಷೆ ಇರುತ್ತಿತ್ತು, ಅಷ್ಟೆ.

**ಹೊ :** ಆ ಜ್ಞಾನವನ್ನು ನಮ್ಮಲ್ಲಿ ಉಪಯೋಗಿಸಲು ಏನಾದರೂ ಅಡ್ಡಿಯುಂಟೆ ?

**ನ :** ಇಲ್ಲ. ನಾವು ರಚಿಸಿದ ಮಾದರಿಗಳನ್ನು ನಾವು ಅಳವಡಿಸಿಕೊಳ್ಳುವ ಅವಕಾಶವಿತ್ತು.

**ಹೊ :** ಈ ರೀತಿಯ ಸಂಶೋಧನೆಗಳನ್ನು, ಅಂದರೆ ವಿದೇಶಿ ಯೋಜನೆಗಳಡಿಯ ವನ್ನು, ನಿರೋಧಿಸಬೇಕೆನ್ನುತ್ತೀರಾ ?

**ನ :** ಇಲ್ಲ, ಆದರೆ ನಮ್ಮ ಆಯ್ಕೆ ಬಿಗಿಯಾಗಿರಬೇಕು. ಯಾವುದನ್ನು ಒಪ್ಪಿ ಸಂಶೋಧನೆ ಮಾಡಬೇಕು, ಯಾವುದು ಮಾಡಬಾರದು, ಎಂಬುದರ ತಿಳುವಳಿಕೆ ಅಗತ್ಯ. ಆದರೆ ಸಾರಾಸಗಟಾಗಿ ನಿಷೇಧಿಸುವುದು ಸರಿಯಲ್ಲ. ಎಚ್ಚರದಿಂದ ನಾವು ಆಯ್ಕೆಮಾಡಿಕೊಳ್ಳ ಬೇಕು, ಇಲ್ಲದಿದ್ದರೆ ಕೇವಲ ಬೇರೆಯವರ ಯೋಜನೆಗಳಷ್ಟೇ ಜಾರಿಯಾಗಿಬಿಡುತ್ತವೆ.

**ಹೊ :** ನಮ್ಮ ವಿಜ್ಞಾನಿಗಳು ಈ ಆಯ್ಕೆಯಲ್ಲಿ ವಿವೇಕಶಾಲಿಗಳಾಗಿರುತ್ತಾರೆ, ಅಲ್ಲವೆ ?

**ನ :** ಎಲ್ಲರೂ ಅಲ್ಲದಿರಬಹುದು. ಆದರೆ ಯಾವುದೂ ಕೇವಲ ವೈಯಕ್ತಿಕ ಆಯ್ಕೆ ಆಗಿರುವುದಿಲ್ಲ.

**ಹೊ :** ಈ ವಿಷಯದಲ್ಲಿ ರಾಜಕೀಯ ಹತೋಟಿಗಳೇನಾದರೂ ಇವೆಯೆ ?

**ನ :** ಹಿಂದೆ ಇತ್ತು, ಈಗ ಕಡಿಮೆ. ಒಂದು ಕಾಲದಲ್ಲಿ ಕೆಲವು ವಿದೇಶಿ ಸಂಸ್ಥೆಗಳು ಹೇಳಿದ್ದುಂಟು, ನಿಮಗೆ ಬೇಕಾದ ಸಂಶೋಧನೆ ನೀವು ಮಾಡಿಕೊಳ್ಳಿ, ಅದಕ್ಕೆ ನಾವು ಹಣ ಕೊಡುತ್ತೇವೆ, ಎಂದು. ಆದರೆ ನಮ್ಮ ಸರ್ಕಾರ ಹೇಳಿತು, ಅದೆಲ್ಲಾ ಆಗದು, ಎಂದು. ಅಮೆರಿಕಾ ಎಂದರೆ ಆಗ ಏನೋ ಭೀತಿ, ಸಂಕೋಚ.

**ಹೊ :** ಸರ್ಕಾರವು ನಿಮ್ಮ ಜೊತೆ ಚರ್ಚಿಸಿ ಅಂತಹ ಯೋಜನೆಗಳನ್ನು ನಿರಾಕರಿಸಿತೋ ಅಥವಾ...

**ನ :** ಅದು ಆಗಿನ ಸರ್ಕಾರದ ನಿಯಮ. ಅವರಲ್ಲೇಕೆ ಹೋಗಬೇಕು, ನಾವೇ ಸಂಶೋಧನೆಗೆ ಆರ್ಥಿಕ ಬೆಂಬಲ ನೀಡುತ್ತೇವೆ, ಎನ್ನುತ್ತಿದ್ದರು. ಆದರೆ ನೀಡಲಿಲ್ಲ, ಅದು ಬೇರೆ ಮಾತು.

**ಹೊ :** ಈಗಿನ ವಾತಾವರಣ ಹೇಗಿದೆ ? ಯಾರೋ ಯುವ ವಿಜ್ಞಾನಿ ಸಂಶೋಧನೆಯಲ್ಲಿ ತೊಡಗಬೇಕೆಂದರೆ ತೊಡಕೇನಾದರೂ ಇದೆಯೆ ?




**ನ :** ಹಣದ್ದೇ ತೊಡಕು. ಉಪಕರಣಗಳು ಹಣವಿಲ್ಲದೆ ಲಭ್ಯವಾಗುವುದಿಲ್ಲ.

**ಹೊ :** ಅಥವಾ, ಯುವಕರಿಗೆ ವಿದೇಶಗಳಿಗೆ ಹೋಗುವ ಗೀಳು ಹೆಚ್ಚಾಗಿರುವುದರಿಂದ ಇಂತಹ ಕಾರಣಗಳನ್ನು ಮುಂದೊಡ್ಡುತ್ತಾರೊ ? ಅವರ ಸಬೂಬು ಹೀಗಿರುತ್ತದೆ : ಒಂದು ರಾಸಾಯನಿಕ ಬೇಕಾದರೆ ಅಲ್ಲಿ ಹತ್ತು ನಿಮಿಷಗಳಲ್ಲಿ ಪಡೆಯಬಹುದು, ಅದಕ್ಕೆ ಇಲ್ಲಿ ಹತ್ತು ತಿಂಗಳಾಗುತ್ತದೆ. ಆ ವೇಳೆಗೆ ಅದೇ ಸಂಶೋಧನೆ ಬೇರೆಲ್ಲೋ ನಡೆದು ಹೋಗಿರುತ್ತದೆ...

**ನ :** ಭಾಗಶಃ ಅದು ನಿಜ. ಆದರೆ ಸತತವಾಗಿ ದೂರುತ್ತಾ ಬಂದಿದ್ದರಿಂದ ಈಗ ಸ್ವಲ್ಪ ವಾಸಿ. ಎಲ್ಲದರಲ್ಲೂ ಏನೋ ಭಾನಸ ಪ್ರವೃತ್ತಿ, ಅಡಚಣೆ. ಇನ್ನೊಂದು ಕಾರಣ, ನಮ್ಮ ಆರ್ಥಿಕ ನೀತಿ. ೧೯೯೦ಕ್ಕೆ ಮುಂಚೆ ನಾವೇನನ್ನು ಆಮದು ಮಾಡಿಕೊಳ್ಳಬೇಕಾದರೂ ಅದಕ್ಕೆ ಪರವಾನಗಿ ಪಡೆಯ ಬೇಕಿತ್ತು : ಡೈರೆಕ್ಟರ್ ಜನರಲ್ ಆಫ್ ಟ್ರೇಡ್ ಅಂಡ್ ಡೆವಲಪ್‌ಮೆಂಟ್ ಎಂಬ ಪೆಡಂಭೂತದಿಂದ. ಅವರಿಗೆ ನಮ್ಮ ಸಂಶೋಧನೆಯ ಬಗ್ಗೆ ಎಲ್ಲಿಯ ಕಾಳಜಿ ? ಪ್ರತಿಯೊಂದಕ್ಕೂ ನಾವು ಅವರ ಮುಂದೆ ವಾದ ಮಂಡಿಸಬೇಕಾಗುತ್ತಿತ್ತು. ಈಗ ಅಂತಹ ನಿರ್ಬಂಧಗಳಿಲ್ಲ. ಹಣವಿದ್ದರೆ ಏನನ್ನು ಬೇಕಾದರೂ ತರಿಸಬಹುದು. ಆದರೂ ಒಂದು ಮುಗ್ಗಟ್ಟಿದೆ. ನಮಗೆ ಯಾವುದೋ ರಾಸಾಯನಿಕ ಬೇಕಾಗಿದೆ ಎಂದುಕೊಳ್ಳಿ. ಎಷ್ಟು ಬೇಕು ? ಎಲ್ಲೋ ಸ್ವಲ್ಪ. ಅಷ್ಟು ಕಡಿಮೆ ಪ್ರಮಾಣದ್ದನ್ನು ಸರಬರಾಜು ಮಾಡಲು ವಿದೇಶದವರಿಗೆ ಆಸಕ್ತಿ ಇರುವುದಿಲ್ಲ. ಆದ್ದರಿಂದ ಅಂಥವೆಲ್ಲಾ ನಮ್ಮಲ್ಲೇ ಇರುವಂತಿದ್ದರೆ ಸುಲಭ. ಒಟ್ಟಿನಲ್ಲಿ ಇಂದಿನ ಸನ್ನಿವೇಶ ಎಷ್ಟೋ ಸುಗಮವಾಗಿದೆ ಎನ್ನಬಹುದು. ಆದ್ದರಿಂದ ನಮ್ಮಲ್ಲಿ ಸಂಶೋಧನೆಗೆ ವಿಪುಲ ಸಾಧ್ಯತೆಗಳಿವೆ. ಅಮೆರಿಕಾ ದೊಡನೆ ಸ್ಪರ್ಧೆಗಿಳಿಯಬಾರದು, ಅಷ್ಟೆ. ಅವರು ಮಾಡುತ್ತಿರುವ ಕ್ಷೇತ್ರ ನಮ್ಮದೂ ಆದರೆ ಸ್ವಲ್ಪ ಕಷ್ಟ. ಅದನ್ನು ಡಾ॥ ಸಿ. ಎನ್. ಆರ್. ರಾವ್ ಅಂಥವರು ಮಾಡಬಲ್ಲರು. ನಮ್ಮ ಕ್ಷೇತ್ರದಲ್ಲಿ ನಾವೂ ಮಾಡುತ್ತೇವೆ. ಆದರೆ ಮುಖ್ಯವಾಗಿ ಗಮನಿಸಬೇಕಾದ್ದು ಇದು : ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಅನೇಕ ಕ್ಷೇತ್ರಗಳಿವೆ, ಅಲ್ಲಿ ನೂತನವಾದ ಹಾಗೂ ಮೂಲಭೂತವಾದ ಸ್ವಾರಸ್ಯಕರ ಸಂಶೋಧನಾ ಕೆಲಸ ಸಾಧ್ಯವಿದೆ. ಉದಾಹರಣೆಗೆ, ವಾಯುಗುಣದ ಪ್ರಶ್ನೆ ನೋಡಿ. ವಾತಾವರಣದ ಅಧ್ಯಯನ ಬಹಳ ಉಪಯುಕ್ತ; ಅಷ್ಟೇ ಅಲ್ಲ, ಅದು ಪ್ರಶಸ್ತವಾದ ಮತ್ತು ಪ್ರಸ್ತುತವಾದ ವಿಜ್ಞಾನವಾಗಬಲ್ಲದು. ಇದು ಅಗ್ರಸ್ಥಾನೀಯ ವಿಜ್ಞಾನವೂ ಹೌದು, ಪ್ರಸ್ತುತವೂ ಹೌದು. 'ಫ್ರಂಟ್‌ಲೈನ್ ಸೈನ್ಸ್' ಎನಿಸಿಕೊಳ್ಳಲು ಅದು ಯೋಗ್ಯವಾಗಿದೆ. ಅಂತಹ ಪ್ರಶ್ನೆಗಳನ್ನು ನಾವು ಕೈಗೆತ್ತಿಕೊಳ್ಳಬೇಕು.

**ಹೊ :** ನೆಹರು ಕಾಲದಿಂದ ವಿಜ್ಞಾನಿಗಳೆಂದರೆ ಒಂದು ರೀತಿಯ ದೈವೀಪುರುಷರು ಎಂಬ ಭಾವನೆ ಬೆಳೆದುಬಿಟ್ಟಿದೆ.

**ನ :** ಇದ್ದಿರಬಹುದು, ಆದರೆ ಈಗ ಅಂತಹ ಭಾವನೆಗಳು ಕಡಿಮೆ.

**ಹೊ :** ಖ್ಯಾತರಾದ ಸಿ. ವಿ. ರಾಮನ್, ಜೆ. ಸಿ. ಬೋಸ್ ಮುಂತಾದವರ ಕಾಲದಲ್ಲಿ 'ಸ್ವಗೃಹದಲ್ಲಿ ಪೋಷಿಸಿದ ವಿಜ್ಞಾನ' ಎಂಬ ಹೆಮ್ಮೆ ಇರುತ್ತಿತ್ತು. ಅವರ ಉಪಕರಣಗಳನ್ನು ಸಹ ಅವರೇ ನಿರ್ಮಿಸಿಕೊಳ್ಳುತ್ತಿದ್ದುದುಂಟು. ಈಗಿನ ಸಂದರ್ಭದಲ್ಲಿ ಏನು ಹೇಳಬಹುದು ?

**ನ :** ವಿಜ್ಞಾನದಲ್ಲಿ ಸಂಶೋಧನಾ ವಿಧಾನ ಬಹಳ ಬದಲಾಗಿದೆ. ವೈಯ್ಯಕ್ತಿಕ ನೆಲೆಗಿಂತಲೂ ಸಂಘಟಿತ ನೆಲೆ ಈಗ ಪ್ರಮುಖವಾಗಿದೆ. ರದರ್‌ಫರ್ಡ್ ಕಾಲದಲ್ಲಿ ಕೇಂಬ್ರಿಜ್ ''ದಾರ ಮತ್ತು ಮೊಹರು ಹಾಕಲು ಅರಗು'' ಎಂಬಷ್ಟು ಸರಳ ವಿಧಾನ ಅನುಸರಿಸುತ್ತಿತ್ತು. ಎರಡನೆ ಮಹಾಯುದ್ಧದಲ್ಲಿ ವಿಜ್ಞಾನದ ಮಹತ್ವದ ಕೊಡುಗೆ ಯಿಂದಾಗಿ ಸಂಶೋಧನೆಗಳಿಗೆ ಹೇರಳ ಹಣವನ್ನು ತೊಡಗಿಸಲು ಯೂರೋಪ್ ಆರಂಭಿಸಿತು. ಅಮೆರಿಕಾ ಇನ್ನೂ ಮುಂಚೆಯೇ ಅದನ್ನು ಮಾಡಿತ್ತು. ಭಾರತದಲ್ಲೂ ಅದೇ ಉದ್ದೇಶವಿತ್ತಾದರೂ ಯೂರೋಪು ೧೦೦ ರೂ. ತೊಡಗಿಸಿದೆಡೆ ನಾವು ೫೦ ಪೈಸೆಯಷ್ಟನ್ನು ಮಾತ್ರ ತೊಡಗಿಸಿದ್ದೇವೆ. ಹಳೆಯ ವಿಧಾನಗಳನ್ನು ಅನುಸರಿಸಿ ಹೊಸ ಸಂಶೋಧನೆ ಕ್ಲಿಷ್ಟವಾಗುತ್ತಿದೆ. ಅಸಾಧ್ಯವಲ್ಲದಿರಬಹುದು, ಆದರೆ ಕ್ಲಿಷ್ಟ. ಅತ್ಯಾಧುನಿಕ ಸಂಶೋಧನೆ ಬೇಕಾದರೆ ಹೆಚ್ಚು ಹಣ ತೊಡಗಿಸುವುದು ಅನಿವಾರ್ಯ.

**ಹೊ :** ರದರ್‌ಫರ್ಡ್ ಕಾಲದಲ್ಲೇ ಕ್ಯಾವೆಂಡಿಷ್ ಪ್ರಯೋಗಾಲಯವನ್ನು ಸ್ಥಾಪಿಸಲಾಗಿತ್ತಲ್ಲ !

ನ : ಹೌದು, ಆದರೆ ಹಣ ಭಾರಿ ಮೊತ್ತದ್ದಾಗಿರಲಿಲ್ಲ. ಮಹತ್ತಾದ ಪ್ರಶ್ನೆಗಳಿಗೆ ಕಡಿಮೆ ಹಣದಿಂದ ಉತ್ತರ ಕಂಡುಹಿಡಿಯುವುದು ಬ್ರಿಟನ್ನಿನ ಹೆಮ್ಮೆಯಾಗಿತ್ತು.

**ಹೊ** : ಭಾರತೀಯ ವಿಜ್ಞಾನಿಗಳ ಕೊಡುಗೆಯನ್ನು ಗಮನದಲ್ಲಿರಿಸಿಕೊಂಡು ಒಂದು ತುಲನಾತ್ಮಕ ದೃಷ್ಟಿಯಿಂದ ಏನು ಹೇಳಬಹುದು ?

ನ : ನಾವು ಗಳಿಸಿರುವುದು ಅಗಾಧವಲ್ಲವೆಂಬುದು ಸ್ಪಷ್ಟ. ನಮ್ಮ ವಿಜ್ಞಾನಿಗಳ ಸಂಶೋಧನಾ ಲೇಖನಗಳನ್ನು ಇತರರು ಹೆಸರಿಸುವುದು ಬಹಳ ಕಡಿಮೆ. ನಮ್ಮ ಪ್ರಕಟನೆಗಳು ಬಹಳವಿಲ್ಲ.

### ನಮ್ಮ ದೇಶದಲ್ಲಿ ಸಂಶೋಧನೆಗೆ ವಿಪುಲ ಅವಕಾಶಗಳಿವೆ

**ಹೊ** : ಅದಕ್ಕೆ ಕಾರಣ ನಾವು ಅನಭಿವೃದ್ಧ ದೇಶದವರೆಂದಿರಬಹುದೆ? ಅಥವಾ ಲೇಖನಗಳ ಗುಣಮಟ್ಟ ಕಾರಣವೊ ?

ನ: ಎರಡೂ ಇವೆ. ನಮ್ಮಂತಹ ದೇಶದವರಿಗೆ ಸುಲಭವಾಗಿ ಮನ್ನಣೆ ದೊರೆಯುವುದಿಲ್ಲ. ಆದರೂ ನಮ್ಮ ಪ್ರಕಟಣೆಗಳು ವಿರಳವೆಂಬುದನ್ನು ಒಪ್ಪಬೇಕು. ಅವರದು ನೂರಿದ್ದರೆ ನಮ್ಮದು ಎರಡು. ನಾವು ತೊಡಗಿಸುವ ಹಣದ ದೃಷ್ಟಿಯಿಂದ ನೋಡಿದರೆ ಅಂತರರಾಷ್ಟ್ರೀಯವಾಗಿ ಇದು ಕಡಿಮೆಯೇನಲ್ಲ. ಅಲ್ಲದೆ ನಮ್ಮಲ್ಲಿ ಸಂಶೋಧನೆಯನ್ನು ಗಂಭೀರವಾಗಿ ತೆಗೆದುಕೊಂಡಿರುವ ವಿಜ್ಞಾನಿಗಳ ಸಂಖ್ಯೆ ಬೃಹತ್ತಾದುದಲ್ಲ. ವಿಜ್ಞಾನದಲ್ಲಿ ಪದವಿ ಪಡೆದವರೆಲ್ಲಾ ವಿಜ್ಞಾನಿಗಳಲ್ಲ. ನಮ್ಮ ವಿಜ್ಞಾನ ಸಮುದಾಯ ಕಿರಿದಾದದ್ದು. ''ಇಷ್ಟೊಂದು ಹಣ ಕೊಟ್ಟಿದ್ದೇವೆ, ನೀವು ಮಾಡಿದ್ದು ಇಷ್ಟು ಕಡಿಮೆಯೇ'', ಎಂದು ವಿಜ್ಞಾನಿಗಳನ್ನು ಕೇಳುವ ಹಂತದಲ್ಲಿ ನಾವಿಲ್ಲ.

**ಹೊ** : ಕೃಷಿ ಕ್ಷೇತ್ರ ನೋಡಿ. ಇತ್ತೀಚೆಗೆ ಒಂದು ಪತ್ರಿಕೆ ಈ ಪ್ರಶ್ನೆಯನ್ನು ಕೇಳಿತ್ತು: ನಾವು ಸಂಶೋಧನೆಗೆಂದು ಇಷ್ಟು ಖರ್ಚು ಮಾಡುತ್ತೇವೆ; ಆದರೆ ಒಂದು ಸಾಮಾನ್ಯ ರೋಗಕ್ಕೂ ಪರಿಹಾರ ದಕ್ಕಿಲ್ಲವಲ್ಲ, ಎಂದು.

ನ : ಅದು ಭಾಗಶಃ ಸರಿಯಿರಬಹುದು. ಆದರೆ ಸಾಮಾನ್ಯೀಕರಿಸಿ ಹೇಳುವುದಾದರೆ, ಪಶ್ಚಿಮದ ರಾಷ್ಟ್ರಗಳಿಗೆ ಹೋಲಿಸಿದಾಗ ನಾವು ತೊಡಗಿಸಿರುವ ಹಣ ಕಿಂಚಿತ್ತಾದ್ದು. ಒಂದು ಬಹುರಾಷ್ಟ್ರೀಯ ಕಂಪನಿಯು ಸಂಶೋಧನೆಗೆ ತೊಡಗಿಸುವ ಮೊತ್ತವು ನಾವು ಎಲ್ಲ ವಿಭಾಗಗಳ ಸಂಶೋಧನೆಗೆ ತೆಗೆದಿಡುವ ಹಣಕ್ಕೆ ಸಮನಾಗಿರುತ್ತದೆ! ಅದನ್ನು ಗಮನಕ್ಕೆ ತಂದುಕೊಂಡರೆ ನಮ್ಮ ದೇಶದ ಕೊಡುಗೆ ಅಲ್ಪವೆನಿಸುವುದಿಲ್ಲ. ವಿಶ್ವದ ವಿಜ್ಞಾನ ಸಂಶೋಧಕರು ತಮ್ಮ ಪ್ರಬಂಧಗಳಲ್ಲಿ ಹೆಸರಿಸುವ ಸಂಶೋಧನೆಗಳಲ್ಲಿ ಭಾರತದ್ದು ಶೇ. ಒಂದು ಮಾತ್ರ. ಅಂದರೆ, ನಾವು ೨೨ನೆಯ ಸ್ಥಾನದಲ್ಲಿದ್ದೇವೆ. ಕಳೆದೆರಡು ದಶಕಗಳಲ್ಲಿ ಚೀಣಾ ಮತ್ತು ಕೊರಿಯಾ ಅಪಾರ ಸಾಧನೆ ಮಾಡಿವೆ. ೧೯೮೦ರಲ್ಲಿ ದಕ್ಷಿಣ ಕೊರಿಯಾ ವಿಜ್ಞಾನದ ಭೂಪಟದಲ್ಲಿ ಎಲ್ಲಿತ್ತು ಮತ್ತು ಈಗೆಲ್ಲಿದೆ !

**ಹೊ** : ಈ ಹಿನ್ನೆಲೆಯಲ್ಲಿ ನಮ್ಮ ದೇಶವು ಮಹಾನ್ ಶಕ್ತಿಯಾಗಿ ಗುರುತಿಸಲ್ಪಡಬೇಕೆನ್ನುವ ಕನಸು ಎಷ್ಟು ಸಮಂಜಸ ?

ನ : ಈಗಿನ್ನೂ ನಾವು ಮಹಾನ್ ಶಕ್ತಿಯಲ್ಲ, ಆದರೆ ಆಗುವ ಸಾಧ್ಯತೆ ಸಾಕಷ್ಟಿದೆ. ನಮ್ಮ ಆರ್ಥಿಕತೆ ಶೇ. ೭ ಅಥವಾ ೮ರ ಮಟ್ಟದಲ್ಲಿ ವೃದ್ಧಿಯಾಗುತ್ತಿದೆ. ಇದನ್ನು ಹಾಗೇ ಬೆಳೆಸಿಕೊಂಡರೆ ಎರಡು-ಮೂರು ದಶಕಗಳಲ್ಲಿ ನಾವು ಅತಿಹೆಚ್ಚಿನ ಆರ್ಥಿಕತೆ ಹೊಂದಿರುವ ದೇಶವಾಗುತ್ತೇವೆ. ಡಾಲರಿನೊಡನೆ ತುಲನೆ ಮಾಡಿ ನಮ್ಮ ರೂಪಾಯಿಯ ಮಾಪನೆ ಮಾಡಿದರೆ ಇದು ಅರ್ಥವಾಗುವುದಿಲ್ಲ. ಅಲ್ಲಿ ಒಂದು ಡಾಲರಿಗೆ ದೊರಕುವುದನ್ನು ಪಡೆಯಲು ನಾವೆಷ್ಟು ಹಣ ಕೊಡುತ್ತೇವೆಂಬುದು ಮುಖ್ಯ. ಅಮೆರಿಕಾ,



## ಹೊಸ ಹುಟ್ಟಿನ ಹಾಡು

**ಕ**ಸಿ ಗುಲಾಬಿಯ ರಾಜಶಿಶು
ನಾಟಿ ಗುಲಾಬಿಯ ಸ್ತನದಾಯಿನಿ ದಾದಿ
ಪುಷ್ಪಪಾಲಕನ ಕುಶಲ ಕಲೆ
ಹರಿತ ಶಸ್ತ್ರವ್ರಣಕೆ ಪ್ರೀತಿ ಲೇಪ

ನಾಟಿ ಗುಲಾಬಿಗೆ ಪುತ್ರಶೋಕ
ತನ್ನೊಡಲ ಚಿಗುರುಗಳ
ಚಿವುಟಿ ಬಿಸುಡಿದೆ ಆ ಕೈ

ಕಸಿ ಗುಲಾಬಿಗೆ ತಾಯಿಲ್ಲದ ತಲ್ಲಣ
ತನ್ನ ತಲೆ ಕತ್ತರಿಸಿ
ಯಾವುದೋ ಮುದಿಗಿಡಕೆ
ಅಂಟಿಸಿದೆ ಆ ಕೈ

ಶಪಿಸುತ್ತಿದೆ ನಾಟಿ ಗುಲಾಬಿ
ನಾ ನೆಲದೊಡಲಿಂದ ಮೊಗೆದ ರಸ
ನನ್ನ ಚಿಗುರಿಗೇ ಸಿಗದ ಹಾಗೆ
ಕುಡಿದು ಸೊಕ್ಕುವ ಸಾವೇ
ಒಣಗು

ಬುಡದಿಂದ ಚಿಗುರಿಸುತ್ತೇನೆ
ನನ್ನದೇ ಸಂತಾನ
ಸೆಟೆಯುತ್ತಿದೆ ಕಸಿಯ ಕೂಸು
ಉಪವಾಸ ಸಾಯುತ್ತೇನೆ ಮಲತಾಯೇ
ನಿನ್ನ ಹಾಲನೊಲ್ಲೆ

ನಾಟಿ ಗುಲಾಬಿಗೆ ಬೇರುಂಟು ಎಲೆಯಿಲ್ಲ
ಕಸಿ ಗುಲಾಬಿಗೆ ಎಲೆಯುಂಟು ಬೇರಿಲ್ಲ

ಮಣ್ಣು ಹಾಡಿತು ನೀರು ಹಾಡಿತು
ಗಾಳಿ ಹಾಡಿತು ಬಿಸಿಲು ಹಾಡಿತು
ಆಕಾಶ ಹಾಡಿತು
ಹುಟ್ಟುಸಾವಿನ ಹಾಡು
ಕೆಳೆ ಹಗೆಯ ಹಾಡು
ಬಾಳಿ ಬಾಳಿಸುವ ಪ್ರೀತಿಯ ಹಾಡು

ಯಾಕೀ ಸಾವ ಕೊಲುವ ಕಲಹ
ಎಲೆ ಎಲೇ ಗಿಡವೇ
ಬೇರೆ ಬೇರೇ
ಸುಖವಿಲ್ಲ ನಾಟಿ ಗುಲಾಬೀ
ನಿನ್ನೊಡಲ ಚಿಗುರು ಚಿಗುರಿಸಿದರೂ
ಚಿವುಟಿ ಬಿಸುಡುತ್ತದೆ
ಪುಷ್ಪ ಪಾಲಕನ ಆ ಕೈ

ಹಿತವಿಲ್ಲ ಕಸಿಯ ಕೂಸೇ
ಉಣ್ಣದೇ ಹಟ ಮಾಡಿ ಸತ್ತರೆ
ಕತ್ತರಿಸಿ ಮತ್ತೊಂದು ಕುಡಿ
ಮತ್ತೆ ಮತ್ತೆ ಕಸಿ ಕಟ್ಟುತ್ತಲೇ ಇರುತ್ತೆ
ಆ ಕೈ

ಊಡದೇ ಉಣ್ಣದೇ ಸತ್ತು ಕೊಲುವಿರಿ
ನೀವು
ಬೆಲೆಯಿಲ್ಲ ಬೇರಿಗೂ
ಬೇರು ಮೊಗೆದ ನೀರಿಗೂ
ಎಲೆ ಎಲೆ ಕುಡಿದ ಬಿಸಿಲ ಹಾಲಿಗೂ
ಪುಷ್ಪಪಾಲಕನ ಕುಶಲ ಕಲೆಗೂ

ಹಾಡುತ್ತಲೇ ಇವೆ
ಮಣ್ಣು ನೀರು ಬಿಸಿಲು ಗಾಳಿ ಬಾನು
ನಿರಂತರ
ಸಾವ ಕೊಲುವ ಯುದ್ಧಕ್ಕೆ ಪ್ರತಿಹಾಡು
ಊಡಿ ಉಂಡು ಬಾಳಿಸುವ ಹಾಡು

ಬೇರಿನಲಿ ನೀರಾಗಿ
ಎಲೆಯಲ್ಲಿ ಹಸಿರಾಗಿ
ಮೊಗ್ಗೆಯಲಿ ರಹಸ್ಯವಾಗಿ
ಹೂವಿನಲಿ ನಿಬ್ಬೆರಗು ರಂಗಾಗಿ
ಅರಳಿದ ಗಳಿಗೆ

ನಾಟಿ ಗುಲಾಬಿಯ ಪುತ್ರಶೋಕವೂ
ಕಸಿ ಗುಲಾಬಿಯ ತಬ್ಬಲಿತನವೂ
ಹೊಸ ಹೂವಾಗಿ
ಸಾವಿರದ ಬಣ್ಣಗಳಲ್ಲಿ ಅರಳಿದವು.

ಸ. ಉಷಾ, ಕನ್ನಡ ಪ್ರಾಧ್ಯಾಪಕರು, ಹೊಯ್ಸಳೇಶ್ವರ ಕಾಲೇಜು, ಅರಸೀಕೆರೆ - ೫೭೩ ೧೦೩

ಜಪಾನ್ ಮತ್ತು ಚೀನಾ ಬಿಟ್ಟರೆ ನಮ್ಮದೇ ಅಧಿಕ ಶಕ್ತಿಯ ಆರ್ಥಿಕತೆ. ಮೂರು ದಶಕಗಳ ಹಿಂದೆ ಇದು ಸಾಧ್ಯವೆಂದು ನಂಬುವಂತಿರಲಿಲ್ಲ. ಪಶ್ಚಿಮದ ರಾಷ್ಟ್ರಗಳ ಆರ್ಥಿಕತೆ ಶೇ. ೨-೩ರಷ್ಟು ವೃದ್ಧಿಯಾಗುತ್ತಿದ್ದರೆ ನಮ್ಮದು ಶೇ. ೭-೮ರಷ್ಟು ಎಂಬುದನ್ನು ಗಮನಿಸಬೇಕು.

**ಹೊ :** ಆ ದೇಶಗಳು ಪರಾಕಾಷ್ಠೆಯನ್ನು ಮುಟ್ಟಿರುವುದರಿಂದ ವೃದ್ಧಿ ಕಡಿಮೆ ದರದಲ್ಲಿ ಆಗುತ್ತಿರಬೇಕಲ್ಲವೆ ?

ನ : ಹೌದು, ಆದರೆ ನಾವು ಅವರನ್ನು ಹಿಂದಕ್ಕೆ ಹಾಕಿ ಮುನ್ನಡೆಯಬಲ್ಲೆವು. ಯಾವುದೇ ಯೂರೋಪಿನ ರಾಷ್ಟ್ರದ ಆರ್ಥಿಕತೆಗಿಂತಲೂ ನಮ್ಮದು ಈಗಲೂ ದೊಡ್ಡದು. ಆದ್ದರಿಂದ ನಮಗೆ ಮನಸ್ಸಿದ್ದರೆ ನಾವು ಮಹಾನ್ ಶಕ್ತಿಯಾಗಬಲ್ಲೆವು. ನಾವೇಕಾಗ ಬೇಕೆಂಬ ಪ್ರಶ್ನೆ ಕೆಲವರದು. ಅವರಿಗೆ ಈ 'ಮಹಾನ್ ಶಕ್ತಿ' ಎಂಬ ಪದ ಸರಿಕಾಣುವುದಿಲ್ಲ. ಹಾಗಾಗುವುದೆಂದರೆ ಬೇರೆ ದೇಶಗಳನ್ನು ನಾವು ಸ್ವಾಧೀನ ಪಡಿಸಿಕೊಳ್ಳಬೇಕೆಂದಲ್ಲ, ಹೆಚ್ಚು ಶ್ರೀಮಂತವಾಗುವುದು ಎಂದರ್ಥ. ಇನ್ನು ೩೦ ವರ್ಷಕ್ಕೆ ನಾವೇನಾಗಬೇಕೆಂಬ ಕಾಳಜಿಯೇ ಇಲ್ಲದಿದ್ದರೆ ಹೇಗೆ? ಪಾಶ್ಚಿಮಾತ್ಯ ದೇಶಗಳು ಸದಾ ನಾಳಿನ ಬಗ್ಗೆ ಆಲೋಚಿಸುತ್ತಿರುತ್ತವೆ. ಭಾರತ ಮೊದಲನೆಯ ಅಥವಾ ಎರಡನೆಯ ಸ್ಥಾನ ಆಕ್ರಮಿಸದಿದ್ದರೆ ಮೂರನೆಯ ಸ್ಥಾನದಲ್ಲಾದರೂ ಇರಲು ಶಕ್ಯವಿದೆ. ನಮ್ಮ ರಾಜಕೀಯ ವ್ಯವಸ್ಥೆ ಅದಕ್ಕೆ ಸಜ್ಜಾಗಬೇಕು, ಅಷ್ಟೆ. ಆರ್ಥಿಕವಾಗಿ ೨೫೦ ವರ್ಷಗಳ ಕಾಲ ನಾವು ಬಲಹೀನರಾಗಿದ್ದೆವು. ಆದರೆ ಅದಕ್ಕೆ ಮುಂಚೆ ೧೭೦೦ರ ಸುಮಾರಿನಲ್ಲಿ ವಿಶ್ವದ ಸರಕುಗಳ ಭೀಮಪಾಲು ಭಾರತ ಮತ್ತು ಚೀನಾದ್ದಾಗಿತ್ತು, ಸುಮಾರು ಶೇ. ೬೦ರಷ್ಟು. ಅದರಲ್ಲಿ ಶೇ. ೨೫ ಭಾರತದ್ದು. ಆಗ್ಗೆ ಯೂರೋಪಿನಿಂದ ನಮಗೇನೂ ಬೇಕಾಗಿರಲಿಲ್ಲ; ಅವರಿಗೆ ನಮ್ಮಿಂದ ಬೇಕಿತ್ತು. ಯೂರೋಪಿಯನ್ನರು ಸಾಂಬಾರ ಪದಾರ್ಥಗಳಿಗಾಗಿ ಭಾರತಕ್ಕೆ ಬಂದರೆಂಬ ಇತಿಹಾಸದ ಪಾಠಗಳೆಲ್ಲಾ ಕೇವಲ ಕಗ್ಗ. ನಮ್ಮಲ್ಲಿ ಆಗ್ಗೆ ಔದ್ಯಮಿಕ ಸಿದ್ಧವಸ್ತುಗಳಿದ್ದವು. ಉದಾಹರಣೆಗೆ, ಹತ್ತಿ ಮತ್ತು ರೇಷ್ಮೆ ಬಟ್ಟೆಗಳು. ಅವನ್ನು ಕಂಡು ಯೂರೋಪಿಯನ್ನರು ದಂಗಾಗಿಬಿಟ್ಟರು. ಔದ್ಯಮಿಕ ಕ್ರಾಂತಿಯ ನಂತರದ ಯೂರೋಪಿನ ಕತೆಯೇ ಬೇರೆ. ಆಗ ಜಾಗತಿಕ ಉತ್ಪನ್ನದಲ್ಲಿ ನಮ್ಮ ಪಾಲು ಕುಸಿಯಿತು. ಅದು ಹಾಗೇ ಮುಂದುವರೆಯಿತು. ಹದಿನೆಂಟನೆಯ ಶತಮಾನದಲ್ಲಿ ನಾವು ಕಳೆದುಕೊಂಡ ಸ್ಥಾನವನ್ನು ಈಗ ಮತ್ತೆ ಪಡೆಯುವ ಹಂತದಲ್ಲಿ ನಾವಿದ್ದೇವೆ.

**ಹೊ :** ಹಾಗಾದರೆ ನಮ್ಮ ಔದ್ಯಮಿಕ ಕ್ಷೇತ್ರದ ಸ್ಥಿತಿಗತಿ ಆಶಾದಾಯಕವಾಗಿದೆ ಎನ್ನಬಹುದೆ ?

ನ : ಇಲ್ಲ, ಅದೇ ನಮಗಿರುವ ಸಂಕಟ. ಭಾರತವು ಔದ್ಯಮಿಕ ಸಿದ್ಧವಸ್ತುಗಳನ್ನು ಉತ್ಪಾದಿಸಲು ಸಾಮರ್ಥ್ಯ ಹೊಂದಿಲ್ಲವೆಂಬ ತಪ್ಪು ಕಲ್ಪನೆ ಇದೆ.

**ಹೊ :** ಸಾಮರ್ಥ್ಯ ಇರಬಹುದು, ಆದರೆ ಅದನ್ನು ರೂಢಿಸಿಕೊಂಡಿದ್ದೇವೆಯೆ ? ಔದ್ಯಮಿಕ ಉತ್ಪಾದನೆ ಕುಸಿಯುತ್ತಿದೆ. ಸೇವಾಕ್ಷೇತ್ರದಲ್ಲಿ ಗಳಿಸುತ್ತಿರುವ ಆದಾಯದಿಂದಾಗಿ ನಮ್ಮ ಶ್ರೀಮಂತಿಕೆ ಹೆಚ್ಚಿರುವಂತೆ ಭಾಸವಾಗುತ್ತಿದೆ. ಆದರೆ ಆ ಕ್ಷೇತ್ರವೆಂದೂ ದೇಶದ ಆರ್ಥಿಕತೆಯ ಬೆನ್ನೆಲುಬಾಗಲಾರದು. ನಮ್ಮ ಔದ್ಯಮಿಕ ಉತ್ಪಾದನೆ ಹೆಚ್ಚಿದ ಹೊರತು ನಮಗೆ ಸ್ಥಿರತೆ ಇರುವುದಿಲ್ಲ. ದೂರದರ್ಶಿತ್ವವನ್ನು ಕಳೆದುಕೊಂಡು ನಾವು ಕಂಗಾಲಾಗುವತ್ತ ಹೊರಟಂತಿದೆ.

ನ : ಅದು ವಾಸ್ತವಿಕವಾದ ಚಿತ್ರ. ನಾವು ಔದ್ಯಮಿಕ ವಲಯವನ್ನು ಉಪೇಕ್ಷಿಸಿದ್ದೇ ತಪ್ಪು. ಸಂಪನ್ಮೂಲಗಳು ನಮ್ಮ ಅನುಕೂಲಕ್ಕಿವೆಯಾದ್ದರಿಂದ ಈ ಕ್ಷೇತ್ರದಲ್ಲಿ ಹಿಂದೇಟು ಹಾಕಬೇಕಾಗಿಲ್ಲ. ನಮ್ಮ ಆರ್ಥಿಕ ತತ್ತ್ವಗಳಲ್ಲಿ ಬದಲಾವಣೆ ಉಂಟಾಗಿದೆ, ವಿಶೇಷತಃ ೧೯೯೦ರಿಂದೀಚೆಗೆ. ಅದನ್ನು ತಪ್ಪಿಸಲಾಗುವುದಿಲ್ಲ. ನಮ್ಮ ಜೀವನ ಶೈಲಿ, ದುಡಿಮೆಗಾರರ ಅಭ್ಯಾಸಗಳು, ಶಿಸ್ತು, ಎಲ್ಲಾ ಹೊಸದಾಗಿ ರೂಪುಗೊಳ್ಳುತ್ತವೆ. ''ಇಂದು ಇಷ್ಟು ವಸ್ತುಗಳನ್ನು ಸರಬರಾಜು ಮಾಡು'' ಎಂದರೆ ನಾವು ಸಬೂಬು ಹೇಳುತ್ತಾ ಕೂರುವಂತಿಲ್ಲ. ಅದೇ ಅಭಿವೃದ್ಧಿಯ ಸೂತ್ರ. ಚೀನಾದಲ್ಲಿ ಮಾಡುತ್ತಿರುವಂತೆ ನಾವೇಕೆ ಮಾಡಲಾಗುವುದಿಲ್ಲ? ಮಾಡಬೇಕು. ಕೆಲವರು ಹೇಳುತ್ತಾರೆ, ಚೀನಾ ವಿಶ್ವದ ಕಾರ್ಯಾಗಾರ ಮತ್ತು ಭಾರತ ವಿಶ್ವದ ಹಿಂಬದಿಯ ಬೆಂಬಲಿಗ ಕಚೇರಿ, ಎಂದು. ಹಾಗಾಗಬಾರದು.

**ಹೊ :** ಅಂದರೆ, ದುಡಿಮೆಯಲ್ಲಿ ಮಾತ್ರ ಮುಂದಾದರೆ ಸಾಕೆ? ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ರೂಢಿಸಿಕೊಳ್ಳುವುದೂ ಅಗತ್ಯವಲ್ಲವೆ ?

ನ : ಅದು ಅಗತ್ಯವೆಂಬುದರಲ್ಲಿ ಎರಡು ಮಾತಿಲ್ಲ. ನಾನು ಹೇಳುತ್ತಿರುವುದು ಉತ್ಪಾದನೆಯ ಬಗ್ಗೆ. ಚಿಕ್ಕ ವಸ್ತುವಾಗಲಿ ದೊಡ್ಡ ವಸ್ತುವಾಗಲಿ, ಚೀನಾ ಎಲ್ಲವನ್ನೂ ಅಗಾಧ ಪ್ರಮಾಣದಲ್ಲಿ ಉತ್ಪಾದಿಸುತ್ತಿದೆ.

**ಹೊ :** ''ಚಿಕ್ಕದು ಸೊಗಸು'' ಎಂಬುದು ಅವರಿಗೆ ಸೊಗಸುವುದಿಲ್ಲ!



ನ : ನಾವಿನ್ನೂ ಗುಡಿ ಕೈಗಾರಿಕೆ, ಕೈಮಗ್ಗದ ಬಟ್ಟೆ, ಮುಂತಾದುವನ್ನು ಮಹಾತಂತ್ರ ಎಂಬಂತೆ ಅವನ್ನೇ ಉಚ್ಚರಿಸುತ್ತಾ ಉಳಿದಿದ್ದೇವೆ. ಸಮಾಜ ಎಲ್ಲಿ ಕದಲುತ್ತದೋ ಎಂಬ ಅಂಜಿಕೆ ನಮ್ಮದು. ಅಂಜಿಕೆ ಬಿಟ್ಟು ಮುನ್ನುಗ್ಗಬೇಕಾದ ಅಗತ್ಯವಿದೆ.

**ಹೊ :** ಈ ಪರಿಪ್ರೇಕ್ಷ್ಯದಲ್ಲಿ ಹೊಸ ಉದ್ಯೋಗಗಳೂ ಸೃಷ್ಟಿಯಾಗುತ್ತವೆಯಲ್ಲವೆ ?

ನ : ಹೌದು, ಅದ್ಭುತವಾದ ಬೆಳವಣಿಗೆ ಸಾಧ್ಯ. ೧೯೭೦ರ ದಶಕದಲ್ಲಿ ಗಣಕ ಯಂತ್ರಗಳು ಬಂದಾಗ ಅದರಿಂದ ಉದ್ಯೋಗ ನಷ್ಟವಾಗುತ್ತದೆಂದು ಭಾವಿಸಲಾಗಿತ್ತು. ಆದರೆ ಆಗಿರುವುದೇನು ?

**ಹೊ :** ಸ್ವತಃ ನಿಮ್ಮ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಸಹ ಅದರ ಬಗ್ಗೆ ಶಂಕೆ ಆವರಿಸಿತ್ತು. ಟೆಕ್ಸಾಸ್ ಇನ್‌ಸ್ಟ್ರುಮೆಂಟ್ಸ್‌ನವರು ಸೆಟಲೈಟ್ ಸಂಪರ್ಕ ಹೊಂದಿದರೆ ನಮ್ಮ ರಹಸ್ಯಗಳನ್ನೆಲ್ಲಾ ಕದ್ದೊಯ್ಯುತ್ತಾರೆಂಬ ಕೂಗು ಕೇಳಿಬಂದಿತ್ತು. ಅದು ಇಂದಿನ ಇ-ಮೇಲ್‌ಗಿಂತ ಭಿನ್ನವಾಗಿಯೇನೂ ಇರಲಿಲ್ಲ.

ನ : ಕುರುಡು ಭೀತಿಯಿಂದ ನಾವು ಮುನ್ನಡೆಯಲಾರೆವು. ವರ್ತಮಾನದ ಎಲ್ಲ ಸಂಗತಿಗಳನ್ನೂ ಅರಿಯಬೇಕು, ಮುಂದಕ್ಕೆ ಹೆಜ್ಜೆ ಹಾಕಬೇಕು. ಹೊಸಹೊಸ ಆವಿಷ್ಕಾರಗಳನ್ನು ಸ್ವಾಗತಿಸಿ ಸ್ವಾಧೀನಪಡಿಸಿಕೊಳ್ಳಬೇಕು. ಹಾಗೆ ಮಾಡಬಲ್ಲೆವೆಂಬ ಗಾಢ ನಂಬಿಕೆ ಬೇಕು. ಅದಿದ್ದರೆ ನಾವೇಕೆ ಹಿಂದುಳಿದವರಾಗಿರುತ್ತೇವೆ ?

### ಕಚ್ಚಾ ಪದಾರ್ಥಗಳ ಮೌಲ್ಯವರ್ಧನೆ ನಮ್ಮಲ್ಲಾಗಬೇಕು

**ಹೊ :** ಆದರೆ ಪ್ರಶ್ನೆ ಸ್ವಲ್ಪ ತೊಡಕಿನದು. ನಮ್ಮ ಕಚ್ಚಾ ಪದಾರ್ಥಗಳನ್ನು ಬಳಸಿ ಔದ್ಯಮಿಕ ಸಿದ್ಧವಸ್ತುಗಳನ್ನು ಉತ್ಪಾದಿಸುವುದು ಮುಖ್ಯ. ಅದಕ್ಕೆ ತಂತ್ರಜ್ಞಾನವಿದೆ, ದುಡಿಯುವ ಕೈಗಳಿವೆ. ಆದರೂ ಕಚ್ಚಾ ಪದಾರ್ಥಗಳನ್ನು ಮೌಲ್ಯವರ್ಧನೆ ಮಾಡದೆ ಮಾರುತ್ತೇವೆ. ಈಚೆಗೆ ಒರಿಸ್ಸಾ ಮಾಡಿಕೊಂಡ ಒಪ್ಪಂದದಂತೆ ಕಬ್ಬಿಣದ ಅದಿರನ್ನು ರಫ್ತು ಮಾಡುತ್ತೇವೆ : ೪೦,೦೦೦ ಕೋಟಿ ರೂಪಾಯಿಗಳ ಮೌಲ್ಯದ್ದು. ಇದಕ್ಕಿಂತಲೂ ದೊಡ್ಡ ಮೂರ್ಖತನ ಉಂಟೆ ?

ನ : ಅದು ಮುಖ್ಯವಾದ ಸಂಗತಿ. ನಾವೇಕೆ ಮೌಲ್ಯವರ್ಧನೆಯ ರೂಪದ ಉತ್ಪಾದನೆಯಲ್ಲಿ ತೊಡಗುವುದಿಲ್ಲ? ದಕ್ಷಿಣ ಕೊರಿಯಾ, ಜಪಾನ್, ನೋಡಿ. ಅವರಿಗೆ ಕಚ್ಚಾ ಸಾಮಗ್ರಿ, ತೈಲ, ಕಲ್ಲಿದ್ದಲು, ಎಲ್ಲಾ ಆಮದಾಗಬೇಕು; ಆದರೂ ಉಕ್ಕು ತಯಾರಿಸಿ ಮಾರುತ್ತಾರೆ. ಕೇವಲ ಕಚ್ಚಾ ಸಾಮಗ್ರಿಯಿಂದ ಮೌಲ್ಯ ಬರುವುದಿಲ್ಲ. ಅದನ್ನು ನಮ್ಮ ಜ್ಞಾನದಿಂದ ಪರಿವರ್ತಿಸಿದಾಗ ಮೌಲ್ಯ ತುಂಬಿಬರುತ್ತದೆ.

**ಹೊ :** ಉಕ್ಕು ತಯಾರಿಕೆಯು ನಮ್ಮ ಪ್ರಾಚೀನ ಹಾಗೂ ಆಧುನಿಕ ಪರಂಪರೆಯಲ್ಲಿದೆ, ಅದಕ್ಕೆ ತಂತ್ರಜ್ಞಾನವಿದೆ.

ನ : ಹಾಗಿರುವಾಗ ಸಮಸ್ಯೆ ಏನು? ಯಾರಿಗೆ ಅಧಿಕ ಉಕ್ಕು ತಯಾರಿಕೆಯ ಸಾಮರ್ಥ್ಯವಿತ್ತೋ ಅವರಿಗೆ ಅಡಚಣೆ ಒಡ್ಡಿದೆವು. ೧೯೫೭ರ ನಂತರದಲ್ಲಿ ಟಾಟಾ ಕಂಪನಿಗೆ ಆ ಸಾಮರ್ಥ್ಯವಿತ್ತು, ಆಶಯವೂ ಇತ್ತು.

**ಹೊ :** ಉಕ್ಕಿನ ಉತ್ಪಾದನೆ ಸಾರ್ವಜನಿಕ ಕ್ಷೇತ್ರದಲ್ಲಿರಬೇಕೆಂಬ ಸೂತ್ರ ನಮ್ಮದಾಗಿತ್ತು.

ನ : ಸೂತ್ರವನ್ನು ರೂಪಿಸುವಾಗ ಒಂದಂಶವನ್ನು ಮರೆಯಬಾರದು. ಸಾರ್ವಜನಿಕ ಕ್ಷೇತ್ರಕ್ಕೆ ತನ್ನದೇ ಆದ ಎಲ್ಲೆಗಳಿವೆ. ಲಾಭಾಂಶದ ಹೆಚ್ಚಳಕ್ಕಾಗಿ ಉಕ್ಕಿನ ಬೆಲೆಯನ್ನು ಮೇಲ್ಮಟ್ಟದಲ್ಲಿರಿಸಲಾಯಿತು. ಟಾಟಾ ಕಂಪನಿಯು ಇನ್ನೂ ಕಡಿಮೆ ಬೆಲೆಯಲ್ಲಿ ಉತ್ಪಾದಿಸುತ್ತಿತ್ತು, ಆದ್ದರಿಂದ ಅವರಿಗೆ ಲಾಭ ಹೆಚ್ಚಾಗುವ ಸಂಭವವಿತ್ತು. ಅದನ್ನು ತಡೆಯಲು ಹೊಸ ನೀತಿ ಬಂದಿತು. ಇದೇ ಸಾರ್ವಜನಿಕ ಮಾಲಿಕತ್ವ. ಮಾರ್ಕ್ಸ್‌ವಾದಿಗಳ ನಿಲುವು, ಇವೆಲ್ಲಾ ಪ್ರಶ್ನಾರ್ಹಕ್ಕೆ ಒಳಪಡುವುದು. ಗಡಸುತನವನ್ನು ಕೈಬಿಟ್ಟರೆ ಸಾರ್ವಜನಿಕ ಕ್ಷೇತ್ರವು ಇನ್ನೂ ಹೆಚ್ಚು ಯಶಸ್ವಿಯಾಗಲು ಸಾಧ್ಯ. ಇಲ್ಲಿದೆ ಒಂದು ಸಂಗತಿಯೆಂದರೆ

ಪ್ರತಿಯೊಂದು ಕಾಸಿನ ಲೆಕ್ಕವನ್ನೂ ಇಡಬೇಕು, ಏಕೆಂದರೆ ಅದು ಸಾರ್ವಜನಿಕರದ್ದು. ಟಾಟಾ ಕಂಪನಿಗೆ ಆ ಒತ್ತಾಯವಿಲ್ಲ; ಬಂಡವಾಳ ತೊಡಗಿಸಲು ಅಥವಾ ಖರ್ಚುಮಾಡಲು ಯಾರ ಅಣತಿಯೂ ಬೇಕಿಲ್ಲ. ಅಂದರೆ, ಎಲ್ಲವೂ ಖಾಸಗಿ ಕ್ಷೇತ್ರಕ್ಕೆ ಮೀಸಲಾಗಬೇಕೆಂದು ಅದರರ್ಥವಲ್ಲ.

**ಹೊ :** ಭಾರತೀಯ ವಿಜ್ಞಾನ ಸಂಸ್ಥೆ ಸಾರ್ವಜನಿಕ ಕ್ಷೇತ್ರದಲ್ಲಿದೆಯಲ್ಲವೆ ?

ನ : ಹೌದು, ಆದರೆ ಅದರ ಕಲ್ಪನೆ ಸರ್ಕಾರದ್ದಲ್ಲ – ಅದು ಜೆ. ಎನ್. ಟಾಟಾ ಅವರದ್ದು. ಬ್ರಿಟಿಷರು ಅದಕ್ಕೆ ವಿರೋಧವಿದ್ದರು. ನಾವು ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಪರಿಣತಿ ಸಾಧಿಸಿದರೆ ನಮಗೆ ಬೇಕಾದ ಸಿದ್ಧವಸ್ತುಗಳನ್ನು ನಾವೇ ತಯಾರಿಸಿಕೊಂಡು ಅವರ ಲಾಭಕ್ಕೆ ಸಂಚು ಒಡ್ಡುತ್ತೇವೆಂಬ ಆತಂಕ ಅವರದು. ಅಧೀನ ರಾಷ್ಟ್ರವು ಹೀಗೆ ಸ್ವತಂತ್ರವಾಗುವುದು ಅವರಿಗೆ ಬೇಕಿರಲಿಲ್ಲ. ಹೇಗೂ ಇರಲಿ, ಈಗಂತೂ ನಮ್ಮ ಸಂಸ್ಥೆಗೆ ಸರ್ಕಾರದ ಹಣವೇ ಮೂಲಬಲ.

**ಹೊ :** ಇನ್ನೆರಡು ಇಂತಹ ಸಂಸ್ಥೆಗಳನ್ನು ಆರಂಭಿಸುವ ಯೋಜನೆ ಪ್ರಕಟವಾಗಿದೆ. ಅವೂ ಸಾರ್ವಜನಿಕ ಕ್ಷೇತ್ರದವೇ ಆಗಿರುತ್ತವಲ್ಲವೆ ?

ನ : ಹೌದು. ಕಳೆದ ನೂರು ವರ್ಷಗಳಿಂದ ಏಕಪ್ರಕಾರವಾಗಿ ತನ್ನ ಶ್ರೇಷ್ಠತೆಯನ್ನು ಉಳಿಸಿಕೊಂಡುಬಂದಿದೆ, ಈ ಸಂಸ್ಥೆ. ಖಾಸಗಿಯಾಗಿ ಆರಂಭವಾಗಿ ಆಮೇಲೆ ಸರ್ಕಾರದ ಪೋಷಣೆಯಲ್ಲಿ ಬೆಳೆದ ಇನ್ನೊಂದು ಸಂಸ್ಥೆ ಮುಂಬಯಿಯ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್. ಸರ್ಕಾರ ಅಂಥದನ್ನು ಆರಂಭಿಸಬೇಕಾದರೆ ಹತ್ತಾರು ನಿರ್ಬಂಧಗಳು ಅಡ್ಡಬರುತ್ತವೆ. ಡಾ|| ಹೋಮಿ ಭಾಭಾ ಈ ಯೋಜನೆಯನ್ನು ಜೆ. ಆರ್. ಡಿ. ಟಾಟಾ ಅವರ ಮನವೊಲಿಸಿ ಆರಂಭಿಸಲು ಕಾರಣರಾದರು. ಈಗ ಅದು ಸರ್ಕಾರದ ಹಣದಿಂದ ನಡೆಯುತ್ತಿದೆ. ಈ ಸಂಸ್ಥೆಗಳಿಗೆ ಪೂರ್ಣ ಸ್ವಾಯತ್ತತೆ ಇದೆ. ಸರ್ಕಾರದ ಹಣದಿಂದ ಖಾಸಗಿ ಸ್ವಾಯತ್ತ ಸಂಸ್ಥೆಗಳಂತೆ ನಡೆಯುವುದು ಇವುಗಳ ವೈಶಿಷ್ಟ್ಯ. ಸರ್ಕಾರದ ಅಡ್ಡಗಾಲಿನಿಂದ ಮುಕ್ತವಾಗಿ ಕೆಲಸ ಮಾಡಲು ಸಾಧ್ಯವಿರುವುದರಿಂದ ಉತ್ತಮವಾಗಿ ಕಾರ್ಯನಿರ್ವಹಣೆ ಸಾಧ್ಯವಾಗಿದೆ. ಒಂದು ಉದಾಹರಣೆ ನೋಡಿ: ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಹೊಸದೊಂದು ಶೈಕ್ಷಣಿಕ ಕಾರ್ಯಕ್ರಮ ಆಯೋಜಿಸಹೊರಟಾಗ ಒಮ್ಮೆ ವಿಭಾಗಗಳ ಮುಖ್ಯಸ್ಥರ ಸಭೆಯಲ್ಲಿ ಅದಕ್ಕೆ ಸ್ವಲ್ಪ ವಿರೋಧ ಬಂದಿತು. ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಒಪ್ಪಿಗೆಯಿದ್ದರೆ ಅದನ್ನು ಆರಂಭಿಸಬಹುದೆಂಬ ನಿರ್ಣಯ ಕೈಗೊಂಡು ಸಂಸ್ಥೆಯ ಪರಿಷತ್ತಿಗೆ ಅದನ್ನು ಶಿಫಾರಸು ಮಾಡಲಾಯಿತು. ಆಗ ಸೆನೆಟ್‌ನಲ್ಲಿ ಬಂದ ಅಭಿಪ್ರಾಯವೇನು ಗೊತ್ತೆ? ನಮ್ಮಲ್ಲಿ ಪರಿಣತರಿರುವಾಗ ಅದಕ್ಕೆ ವಿ. ವಿ. ಧನಸಹಾಯ ಆಯೋಗದ 'ಅಸ್ತು' ಏಕೆ ಬೇಕು, ಆ ಕೋರ್ಸನ್ನು ಆರಂಭಿಸೋಣ, ಎಂದು. ಆಯೋಗದ ಅಧ್ಯಕ್ಷರು ಸ್ವತಃ ಸೆನೆಟ್‌ನ ಸದಸ್ಯರಾಗಿದ್ದರು. ಸ್ವಾಯತ್ತತೆಯು ಶೀಘ್ರಗತಿಯಲ್ಲಿ ಮುಂದುವರಿಯಲು ಸಹಾಯ ಮಾಡುತ್ತದೆಂಬುದು ಸ್ಪಷ್ಟ. ಆದರೆ ಇದನ್ನು ಮುಂದಿಟ್ಟು ಎಲ್ಲ ಖಾಸಗಿ ಸಂಸ್ಥೆಗಳೂ ಶ್ರೇಷ್ಠವಾಗಿರುತ್ತವೆಂದು ಹೇಳಲಾಗದು. ಸರ್ಕಾರಿ ಸಂಸ್ಥೆಗಳ ಬಗೆಗೂ ಅದು ಅನ್ವಯವಾಗುತ್ತದೆ. ವ್ಯಾಪಾರೀಕರಣದ ಪಿಡುಗು ಶಿಕ್ಷಣ ಕ್ಷೇತ್ರವನ್ನು ಆವರಿಸಿರುವಾಗ ಈ ಮಾತು ಇನ್ನೂ ಹೆಚ್ಚು ಅರ್ಥ ಪಡೆಯುತ್ತದೆ.

**ಹೊ :** ಆಕ್ಸ್‌ಫರ್ಡ್-ಕೇಂಬ್ರಿಜ್‌ಗಳು ಸಹ ದುಃಸ್ಥಿತಿಯಲ್ಲಿವೆಯೆಂದು ವರದಿಯಾಗಿದೆ. ಈಗ ಅಲ್ಲೂ ವ್ಯಾಪಾರೀಕರಣದ ಛಾಯೆ ದಟ್ಟವಾಗಿದೆ.

ಇನ್ನೊಂದು ಪ್ರಶ್ನೆಗೆ ಬರೋಣ: ಭಾರತೀಯ ವಿಜ್ಞಾನದ ಇತಿಹಾಸ ಹಲವು ಶತಮಾನಗಳದ್ದು. ಅದನ್ನು ನೋಡಿದಾಗ ನಮ್ಮಲ್ಲಿ ವಿಜ್ಞಾನದ ಸಮುದಾಯವೊಂದಿತ್ತು ಎಂದು ಹೇಳಲಾಗುತ್ತದೆಯೆ ?

ನ : ಹೌದು, ಧಾರಾಳವಾಗಿ ಹೇಳಬಹುದು. ನಮ್ಮ ಗಣಿತಶಾಸ್ತ್ರಜ್ಞರ ಉದಾಹರಣೆ ನೋಡಿ. ಅವರೆಲ್ಲಾ ದೇಶದ ನಾನಾ ಭಾಗಗಳವರು, ಆದರೆ ಒಬ್ಬರಿಗೊಬ್ಬರು ಅಪರಿಚಿತರಲ್ಲ. ಪರಸ್ಪರ ಜ್ಞಾನದ ಕೊಡು-ಕೊಳುವಿಕೆ ಅನೂಚಾನವಾಗಿ ನಡೆದುಬಂದಿದೆ. ಆರ್ಯಭಟ, ಭಾಸ್ಕರ, ಬ್ರಹ್ಮಗುಪ್ತ ಅವರೆಲ್ಲಾ ಒಬ್ಬರನ್ನೊಬ್ಬರು ಉದ್ಧರಿಸುತ್ತಾರೆ, ಟೀಕಿಸುತ್ತಾರೆ. ಒಂದು ರೀತಿ ಅವರೆಲ್ಲರೂ ಸ್ವಾಯತ್ತ ಸಮುದಾಯವೊಂದಕ್ಕೆ ಸೇರಿದವರು. ಒಂದು ಸಾವಿರ ವರ್ಷಗಳ ಕಾಲ ಹೀಗೆ ಹರಿದುಬಂದಿದೆ ನಮ್ಮ ಗಣಿತ ಶಾಸ್ತ್ರದ ಜ್ಞಾನನದಿ. ಸುಮಾರು ಕ್ರಿ.ಶ. ೪೦೦ರಲ್ಲಿ ನಮ್ಮಲ್ಲಿದ್ದ ಈ ಕ್ಷೇತ್ರದ ಜ್ಞಾನ ಗ್ರೀಸ್‌ನಿಂದ ಬಂದಿದ್ದಲ್ಲ. ಅದು ಇಲ್ಲೇ ಹುಟ್ಟಿ ಬೆಳೆದದ್ದು. ಪ್ರಪಂಚದ ಬೇರೆ

ಬೆಳವಣಿಗೆಗಳಿಗೆ ಸಮನಾಗಿ ಇದು ಕ್ರಿ.ಶ. ೧೫೦೦ರ ನಂತರ ಬೆಳೆಯಲಿಲ್ಲ, ಎಲ್ಲೋ ಕೇರಳದಲ್ಲಿ ಸೀಮಿತ ಗೊಂಡಿತು ಮತ್ತು ಅದ್ಭುತವಾದ ಅಭಿವೃದ್ಧಿ ಕಾಣಬರಲಿಲ್ಲ.

**ಹೊ :** ನಮ್ಮ ಗಣಿತ ಶಾಸ್ತ್ರಜ್ಞರಾಗಲಿ, ಬೇರೆ ವಿಜ್ಞಾನಿಗಳಾಗಲಿ, ಸಮಾಜದ ಇನ್ನಿತರ ಚಟುವಟಿಕೆಗಳೊಡನೆ ಪರಸ್ಪರ ಪೂರಕವಾಗುವಂತೆ ತಮ್ಮ ಕೆಲಸಗಳನ್ನು ನಿಯಮಗೊಳಿಸಿಕೊಂಡರೆ ? ಸಮಾಜದಲ್ಲಿ ಅವರ ಬೆಂಬಲಿಗರು ಯಾರು ?

**ನ :** ಗಣಿತಶಾಸ್ತ್ರವನ್ನು ಬೇರೆಯವರು ಬಳಸಿಕೊಂಡರು, ಆದರೆ ಕಡಿಮೆ ಪ್ರಮಾಣದಲ್ಲಿ. ಖಗೋಲವಿಜ್ಞಾನವನ್ನು ಜ್ಯೋತಿಷಿಗಳು ಬಳಸಿಕೊಂಡರು. ಮಹಾವೀರಾಚಾರ್ಯ ನಂಥವರು ಬೇರೆ ಬೇರೆ ಪ್ರಕಾರಗಳ ಜ್ಞಾನವನ್ನು ಬೆಳೆಸಿದರು. ವಿಜ್ಞಾನವು ಸಂಗೀತದಲ್ಲಿ ಸಹ ಅಳವಡಿಕೆಗೆ ಬರುತ್ತದೆ ಎಂಬುದನ್ನು ಕಂಡುಕೊಳ್ಳಲಾಗಿತ್ತು. ಆದರೆ ಗಣಿತಶಾಸ್ತ್ರದಿಂದ ತಂತ್ರಜ್ಞಾನವು ವಿಕಾಸವಾಗಲಿಲ್ಲವೆಂಬುದು ನಿಜ. ಆದರೆ ಆರ್ಯಭಟನು ಗಣಿತ, ಖಗೋಲವಿಜ್ಞಾನ, ಇವನ್ನು ಜ್ಯೋತಿಷಕ್ಕೆ ಗಂಟುಹಾಕಲಿಲ್ಲ. ಜ್ಯೋತಿಷವನ್ನು ವೃತ್ತಿ ಮಾಡಿಕೊಂಡವರು ಬೇರೆ.

**ಹೊ :** ವರಾಹಮಿಹಿರ ಎರಡಕ್ಕೂ ಗಂಟುಹಾಕಿದವರಲ್ಲಿ ಮೊದಲಿಗನಿರಬೇಕು.

**ನ :** ಶಾಸ್ತ್ರಜ್ಞಾನವು ನಮ್ಮಲ್ಲಿ ಒಂದು ಚಿಕ್ಕ ಬಣದಲ್ಲಿ ಮಾತ್ರವೇ ಉಳಿಯಿತು, ಬಹುಭಾಗದ ಜನರನ್ನು ಅದು ಮುಟ್ಟಲಿಲ್ಲ. ಅದಕ್ಕೆ ಜಾತಿ ವಿಂಗಡಣೆಯೂ ಒಂದು ಕಾರಣ, ಆದರೆ ಅದೊಂದೇ ಕಾರಣವಲ್ಲ. ಬೌದ್ಧಿಕ ಆಸ್ತಿಯ ಹಕ್ಕು ನಮ್ಮ ದೇಶಕ್ಕೆ ಹೊಸತಲ್ಲ. ಜ್ಞಾನವನ್ನು ತಮ್ಮತಮ್ಮಲ್ಲೇ ಉಳಿಸಿಕೊಳ್ಳುವ ಪ್ರವೃತ್ತಿ ಮೊದಲಿನಿಂದಲೂ ಕಂಡುಬಂದಿದೆ. ಸಂಗೀತದಲ್ಲಿ ಘರಾನಾ ಸಂಪ್ರದಾಯ ಇದ್ದಂತೆ. ಈಗಿನ ಸನ್ನಿವೇಶ ಭಿನ್ನವಾದ್ದು: ಇಷ್ಟು ಜ್ಞಾನ ಪಡೆಯಲು ಇಷ್ಟು ದುಡ್ಡು ಎಂಬುದು ಈಗಿನ ಸೂತ್ರ. ಅದನ್ನು ಯಾರು ಬೇಕಾದರೂ ಪಡೆಯಲಡ್ಡಿಯಿಲ್ಲ. ಜ್ಞಾನವನ್ನು ಹಣಕ್ಕೆ ಕ್ರಯ ಮಾಡುವ ಪದ್ಧತಿ ನಮಗೆ ಹೊಸದು.

**ಹೊ :** ನಮ್ಮಲ್ಲಿ ವಿಜ್ಞಾನದ ಹಾದಿಗೆ ಬಂದ ಅಡಚಣೆಗಳನ್ನು ಕುರಿತಂತೆ ನೀವು ಪ್ರಫುಲ್ಲ ಚಂದ್ರ ರೇ ಅವರ ವ್ಯಾಖ್ಯಾನವನ್ನು ಅಂಗೀಕರಿಸುವುದಿಲ್ಲ (ಅವರ ಪ್ರಕಾರ ಜಾತಿಯ ಉಪದ್ರವ ಮತ್ತು ಸುತ್ತಣ ಪ್ರಪಂಚದ ಅಸ್ತಿತ್ವವನ್ನು ನಿರಾಕರಿಸುವ ತತ್ತ್ವಶಾಸ್ತ್ರ ಒಂದು ಬಗೆಯ ಮುಖ್ಯಕಾರಣ). ನಿಮ್ಮ ಅಭಿಪ್ರಾಯದಲ್ಲಿ ಯಾವುದು ಕಾರಣ ?

**ನ :** ವೈಜ್ಞಾನಿಕ ದೃಷ್ಟಿಯೆಂಬುದು ಕಾಲದಿಂದ ಕಾಲಕ್ಕೆ ವ್ಯತ್ಯಾಸಗೊಳ್ಳುತ್ತಿರುತ್ತದೆ. ಜಾತಿಯು ಕಾರಣವೇ ಅಲ್ಲವೆಂದಲ್ಲ, ಆದರೆ ಅದೊಂದೇ ಕಾರಣವಲ್ಲ. ನಮ್ಮ ಇತಿಹಾಸದಲ್ಲಿ ಜಾತಿಗಳು ಇಲ್ಲದಿದ್ದುದು ಯಾವಾಗ ? ಅವು ಬಂದ ನಂತರವೂ ವಿಜ್ಞಾನ ಬೆಳೆಯುತ್ತಾ ಬಂದಿತಲ್ಲವೆ? ಆದ್ದರಿಂದ ಜಾತಿಯಲ್ಲದೆ ಬೇರೆ ಕಾರಣಗಳೂ ಇರಬೇಕೆಂಬುದು ನಿಜ. ನಮ್ಮ ಪ್ರಮಾಣಶಾಸ್ತ್ರದ ವಿಧಾನದಲ್ಲಿ ಕೂಡ ವಿಜ್ಞಾನದ ಹಾದಿಯ ಕುರುಹು ದೊರೆಯುತ್ತದೆ. ಸಮಸ್ಯೆಯೊಂದನ್ನು ವಿಶ್ಲೇಷಿಸುವ ನಮ್ಮ ವಿಧಾನ ಪ್ರಾಚೀನ ಗ್ರೀಕರ ವಿಧಾನದಂತಲ್ಲ. ಅವರು ಮೊದಲಿಗೆ ಯಾವುದೋ ಸರಳ ಸತ್ಯ, ಸರಳ ನಿಯಮ, ಕಂಡುಕೊಳ್ಳುತ್ತಾರೆ. ತರ್ಕ ಅಲ್ಲಿಂದ ಮುಂದಕ್ಕೆ ಮತ್ತು ಅದರ ಆಧಾರದ ಮೇಲೆ. ನಮ್ಮ ಪ್ರಾಚೀನರ ವಿಧಾನ ಅದಲ್ಲ. ಅವರು ನಿಯಮವನ್ನು ಅರಸಲು ಆರಂಭಿಸುತ್ತಾರೆ. ವಿಶ್ವದಲ್ಲಿ ಒಂದು ನಿಯಮವಿದೆ; ಆಕಾಶಕಾಯಗಳ ಚಲನೆ ಸಹ ಆ ನಿಯಮದಡಿಯಲ್ಲಿ ಬರುತ್ತದೆ. ಇದು ಅನ್ವೇಷಿಸಬೇಕಾದ್ದು, ಮೊದಲೇ ಸತ್ಯವೆಂದು ಕೊಟ್ಟಿರುವಂತಹ ಪ್ರಮೇಯವಲ್ಲ. ನಾನು ಬಹುವಾಗಿ ಮೆಚ್ಚುವ ನೀಲಕಂಠ ಹೇಳುವಂತೆ, ''ಏತತ್ಸರ್ವಂ ಯುಕ್ತಿಮೂಲಂ, ನ ಆಗಮಮೂಲಮ್.'' ನ್ಯೂಟನ್ನನಂತೆ ಮೂರು ನಿಯಮಗಳನ್ನು ಹೇಳಿ, ನಂತರ ಅದರ ಅನ್ವಯದಿಂದ ವ್ಯಾಖ್ಯಾನಿಸುವುದು ನಮ್ಮ ಪದ್ಧತಿಯಾಗಲಿಲ್ಲ. ಸುಮಾರು ಕ್ರಿ.ಶ. ೧೦೦೦ದಲ್ಲಿ ಬೇರೆಡೆ ಇದ್ದ ಜ್ಞಾನಕ್ಕಿಂತ ನಮ್ಮಲ್ಲಿ ಹೆಚ್ಚು ಇದ್ದಿತು. ಅದೇ ಒಂದು ಅಡ್ಡಿಯನ್ನೊಡ್ಡಿತೇನೋ! ಏಕೆಂದರೆ, ವಿಜ್ಞಾನದ ಪ್ರಪಂಚದಲ್ಲಿ ಕಂಡುಬರುತ್ತಿದ್ದ ಅದ್ಭುತ ದಾಪುಗಾಲುಗಳತ್ತ ನಮ್ಮ ಗಮನ ಹರಿಯಲಿಲ್ಲ, ಆಸಕ್ತಿ ಬೆಳೆಯಲಿಲ್ಲ. ಯೂರೋಪಿನಲ್ಲಿ ನಿಜವಾದ ಅದ್ಭುತಗಳು ನ್ಯೂಟನ್ ಬಂದುಹೋದ ನೂರು ವರ್ಷಗಳ ನಂತರ ಘಟಿಸಿದ್ದು. ಭಾರತದಲ್ಲಿ ಅದರತ್ತ ಗಮನ ಹರಿಸಿದವರಲ್ಲಿ ರಾಜಾ ರಾಮಮೋಹನ ರಾಯ್ ಪ್ರಮುಖರು. ಸಾಮಾಜಿಕ ಸಂರಚನೆಯು ವಿಜ್ಞಾನಕ್ಕೆ ಅಡ್ಡಿಯೊಡ್ಡಿದ್ದು ನಮ್ಮ ದೇಶದಲ್ಲಿ ಮಾತ್ರವೇ ಅಲ್ಲವೆಂಬುದನ್ನು ಮರೆಯಬಾರದು.



**ಹೊ :** ಹಾಗೆ ನೋಡಿದರೆ, ಪ್ರಾಚೀನ ಶುಲ್ಬಸೂತ್ರಗಳಲ್ಲಿರುವ ಗಣಿತ, ತ್ರಿಕೋನಮಿತಿ ಮುಂತಾದ ಜ್ಞಾನದ ಪ್ರವರ್ತಕರು ಬೌದ್ಧಿಕ ವಲಯದಿಂದ ಬಂದವರಲ್ಲ, ಸ್ವತಃ ಇಟ್ಟಿಗೆ ಕೆಲಸ ಮಾಡುತ್ತಿದ್ದವರು ಅವರು. ಈಚೆಗೆ ಸ್ವದೇಶಿ ವಿಜ್ಞಾನ ಸಮ್ಮೇಳನ ಜರುಗಿತು ಮತ್ತು ಅದರಲ್ಲಿ ನೀವು ಭಾಗವಹಿಸಿದ್ದಿರಿ. ಅಲ್ಲಿ ಈ ವಿಷಯಗಳ ಚರ್ಚೆ ನಡೆಯಿತೆ ?

**ನ :** ಇಲ್ಲ, ಇದೆಲ್ಲಾ ಚರ್ಚೆಗೆ ಬರಲಿಲ್ಲ. ವಿಜ್ಞಾನದ ಇತಿಹಾಸ ಅಲ್ಲಿಯ ವಿಷಯವಾಗಿರಲಿಲ್ಲ, ಸಮಕಾಲೀನ ವಿಜ್ಞಾನ-ತಂತ್ರಜ್ಞಾನಗಳ ಚರ್ಚೆ ಅಲ್ಲಿ ನಡೆಯಿತು.

**ಹೊ :** ಇನ್ನೊಂದು ಪ್ರಶ್ನೆ: ಕನ್ನಡದಲ್ಲಿ ವಿಜ್ಞಾನದ ಬೋಧನೆ ಸಾಧ್ಯವೇ ಮತ್ತು ಅದು ಅವಶ್ಯಕವೇ ?

**ನ :** ಸಾಧ್ಯ, ಆದರೆ ಮುಖ್ಯವಾದ ಪ್ರಶ್ನೆ ಅದಲ್ಲ. ವಿಜ್ಞಾನದ ಪ್ರಸರಣಕ್ಕೆ ಮತ್ತು ವೃದ್ಧಿಗೆ ನಾವು ಮಾಡಬೇಕಾದ್ದೇನೆಂಬುದು ನಿಜವಾದ ಪ್ರಶ್ನೆ. ಇಂದಿನ ಸಂದರ್ಭದಲ್ಲಿ ವಿಜ್ಞಾನದ ಜ್ಞಾನಕ್ಕೆ ಇಂಗ್ಲಿಷ್ ಬೇಕು. ಮೊದಲ ಹಂತದಲ್ಲಿ ಎಲ್ಲವನ್ನೂ ಕನ್ನಡದಲ್ಲಿ ಹೇಳಬೇಕು, ಆದರೆ ಅದರಿಂದಲೇ ಇಡೀ ಜೀವನ ಸಾಧ್ಯವಲ್ಲ. ಇದು ರಾಷ್ಟ್ರೀಯತೆಯ ಪ್ರಶ್ನೆಯಲ್ಲ, ಕಾರ್ಯತಂತ್ರದ ಪ್ರಶ್ನೆ. ೧೯೨೦-೩೦ರ ದಶಕದಲ್ಲಿ ವಿಜ್ಞಾನಕ್ಕೆ ಜರ್ಮನಿ ಕೇಂದ್ರಸ್ಥಾನವಾಗಿತ್ತು. ಯೂರೋಪಿನಲ್ಲಿ ಆಗ ಎಲ್ಲರೂ ಜರ್ಮನ್ ಕಲಿಯಬೇಕಾಗಿತ್ತು. ವಿದ್ಯಾರ್ಥಿಯಾಗಿದ್ದಾಗ ನಾನೂ ಕಲಿತಿದ್ದೆ.

**ಹೊ :** ಗೋಟಿಂಗೆನ್ ಆಗ್ಗೆ ಅತ್ಯಂತ ಪ್ರಮುಖ ವಿಜ್ಞಾನ ಕೇಂದ್ರವಾಗಿತ್ತು. ಅಲ್ಲಿಯ ಹೊಟೇಲ್‌ಗಳ ಮೇಜುಗಳ ಮೇಲೆಲ್ಲಾ ವಿದ್ಯಾರ್ಥಿಗಳು ಸಮೀಕರಣಗಳನ್ನು ಬರೆದಿರುತ್ತಿದ್ದರಂತೆ, ಹೌದೆ ?

**ನ :** ಈಗಲೂ ಅಲ್ಲಿಯ ಬೀದಿಗಳಿಗೆ ವಿಜ್ಞಾನಿಗಳ ಹೆಸರುಗಳಿವೆ.

**ಹೊ :** ಆರಂಭದ ಹಂತದಲ್ಲಿ ಕಲಿಕೆಗೆ ಮಾತೃಭಾಷೆಯು ಸುಲಭ ಸಾಧನ. ಅಲ್ಲದೆ ಅತಿಸಾಮಾನ್ಯರನ್ನೂ ಒಳಗೊಂಡಂತೆ ವಿದ್ಯೆಯು ಎಲ್ಲರನ್ನೂ ಮುಟ್ಟಬೇಕು.

**ನ :** ಅದನ್ನು ಎಲ್ಲರೂ ಒಪ್ಪಬೇಕಾದ್ದೆ. ಎಲ್ಲಕ್ಕಿಂತ ಮುಖ್ಯವಾದ್ದು, ನಾವು ವಿಜ್ಞಾನ ಕಲಿಸುವಾಗ ಅದನ್ನು ನಮ್ಮ ಪರಂಪರೆಗೆ ಹೊಂದಿಸಿ ಹೇಳಬೇಕು. ಪರಂಪರೆಯನ್ನು ವಿಮರ್ಶಿಸಿ; ಆದರೆ ಅದರ ಬಗ್ಗೆ ಅವಜ್ಞೆ ಬೇಡ. ಆಧುನಿಕ ವಿಜ್ಞಾನದ ಬೆಳವಣಿಗೆಯನ್ನು ನಾವು ಆ ಹಿನ್ನೆಲೆಯಲ್ಲಿ ನೋಡುವುದೊಳ್ಳೆಯದು. ವಿಶ್ವದ ಬಗ್ಗೆ ನಮ್ಮವರ ಆಲೋಚನೆಗಳೇನಾಗಿತ್ತು? ಇಂದು ಆರ್ಯಭಟನೇನಾದರೂ ಬಂದರೆ ಅವನಿಗೆ ಅತ್ಯಂತ ಅಚ್ಚರಿಯ ಸಂಗತಿ ಏನಾಗಿರುತ್ತದೆ? ಆ ಪ್ರಶ್ನೆಯನ್ನು ಕೇಳಿಕೊಂಡು ವಿಶ್ವದ ವಿಸ್ಮಯಗಳನ್ನು ಅರಿಯಲು ಮುಂದಾಗಬೇಕು. ನ್ಯೂಟನ್ ಏನಾದರೂ ಕ್ರಿ.ಶ. ೧೦೦೦ದಲ್ಲಿ ಕೇರಳಕ್ಕೆ ಬಂದಿದ್ದಿದ್ದರೆ ಅವನಿಗೇನು ಆಶ್ಚರ್ಯ ಉಂಟಾಗುತಿತ್ತು? ಹಾಗೆ ನಮ್ಮವರ ಯೋಚನಾ ವಿಧಾನ ತಿಳಿದರೆ ಆಧುನಿಕ ವಿಜ್ಞಾನದಲ್ಲಿ ಅದ್ಭುತವಾದ್ದೇನು ಎಂಬುದರ ಅರಿವು ಚೆನ್ನಾಗಿ ಆಗುತ್ತದೆ. ಇಂಗ್ಲಿಷ್ ಬೋಧಿಸುವಾಗ ಸಹ ಪ್ರಾಥಮಿಕ ಹಂತದಲ್ಲಿ ನಾವು ಕುತೂಹಲ ಕೆರಳಿಸುವ ಮಾರ್ಗ ಅನುಸರಿಸುತ್ತಿಲ್ಲ. ಇವೆಲ್ಲಾ ಕೇವಲ ಪುಸ್ತಕಗಳ ಸಾಮಗ್ರಿ ಎನ್ನುವಂತೆ ಪ್ರಜ್ಞೆಯಲ್ಲಿ ಅಚ್ಚೊತ್ತಿಬಿಡುತ್ತೇವೆ. ಅದು ಬೌದ್ಧಿಕ ವಿಕಾಸಕ್ಕೆ ಸರಿಯಾದ ಮಾರ್ಗವಲ್ಲ.

**ಹೊ :** ವಿಜ್ಞಾನದ ಶಿಕ್ಷಣದಲ್ಲಿ ಗುಣಮಟ್ಟ ಕುಸಿಯುತ್ತಿದೆಯೆಂಬ ಆಕ್ಷೇಪವಿದೆ. ಎಷ್ಟೋ ವಿದ್ಯಾರ್ಥಿಗಳಿಗೆ ಕಲಿಯಲು ಬೇಕಾದ ಕನಿಷ್ಠ ಸೌಲಭ್ಯಗಳಿಲ್ಲ, ಪ್ರಯೋಗಾಲಯಗಳಿಲ್ಲ. ಕೆಲವರಿಗೆ ಉಂಟು, ಆದರೆ ಬಹುಮಂದಿಗೆ ಇಲ್ಲ. ಈ ಅಸಮಾನತೆಗೆ ಕೊನೆಯುಂಟೆ ?

**ನ :** ಕನ್ನಡದಲ್ಲಿರಲಿ, ಇಂಗ್ಲಿಷಿನಲ್ಲಿರಲಿ, ಶಿಕ್ಷಣವು ಉತ್ತಮ ಮಟ್ಟದ್ದಾಗಿರಲೇಬೇಕು. ಪ್ರತಿಕೂಲಗಳನ್ನು ತೊಡೆದುಹಾಕಬೇಕು. ನಾವು ಮಾಧ್ಯಮಗಳನ್ನು ಸರಿಯಾಗಿ ಬಳಸಿಕೊಂಡಿಲ್ಲ. ನೂರು ಟಿ.ವಿ. ಚಾನೆಲ್‌ಗಳಲ್ಲಿ ಒಂದಾದರೂ ಪೂರ್ತಿಯಾಗಿ ಶಿಕ್ಷಣಕ್ಕೆಂದು ಮೀಸಲಾಗಿಲ್ಲ. ಇರುವ ಸ್ವಲ್ಪವೂ ಆಕರ್ಷಕವಾಗಿಲ್ಲ. ಯುಜಿಸಿ ಕಾರ್ಯಕ್ರಮಗಳಿವೆ. ಆದರೆ ಸಮರ್ಪಕವೆನಿಸುವುದಿಲ್ಲ. ಎಷ್ಟೊಂದು ವೈವಿಧ್ಯವನ್ನು ನಾವು ಅಳವಡಿಸಿಕೊಳ್ಳಬೇಕು! ಕನ್ನಡ ಬಾರದಿರುವವರಿಗೆ ಅದನ್ನು ಹೇಳಿಕೊಡಲು ಕೂಡ ಒಂದು ಚಾನೆಲ್ ಇಲ್ಲವಲ್ಲ! ಶಿಕ್ಷಣದಲ್ಲಿ ಸಂಗೀತಕ್ಕೆ ನಾವು ಸ್ಥಾನ ಕಲ್ಪಿಸಿಕೊಂಡಿಲ್ಲ. ಇವೆಲ್ಲಾ ಕೊರತೆಗಳು. ಭಾರತವು ವಿಶಾಲವಾದ, ವೈವಿಧ್ಯಮಯವಾದ ದೇಶ. ಇಡೀ

ದೇಶಕ್ಕೆ ಯಾವೊಂದು ಸೂತ್ರವನ್ನೂ ಸಾರಾಸಗಟಾಗಿ ಅನ್ವಯ ಮಾಡಲಾಗದು. ಸಮಾನರೂಪದ ಗುಣಮಟ್ಟ ಸಾಧ್ಯವಿಲ್ಲದಿದ್ದರೂ ಕನಿಷ್ಠ ಸಮಾನ ಅವಕಾಶಗಳು, ಸೌಲಭ್ಯಗಳು ಇರಬೇಕು. ವ್ಯಾಪಾರೀಕರಣದ ಭರಾಟೆಯಲ್ಲಿ ಇದು ಇಲ್ಲವಾಗಿದೆ. ಕನಿಷ್ಠ ಸೌಲಭ್ಯವಿಲ್ಲದ ಸಂಸ್ಥೆಗಳ ಮನ್ನಣೆ ರದ್ದುಗೊಳಿಸಬೇಕು. ಜೊತೆಗೆ, ವಿಜ್ಞಾನದ ಅಧ್ಯಯನವನ್ನು ವಿಶಾಲ ತಳಹದಿಯ ಮೇಲೆ ಮಾಡುವಂತಿರಬೇಕು, ಸಂಕೀರ್ಣ ಶಿಸ್ತುಗಳು ಬೇಕು. ಕಾನೂನು, ಧರ್ಮಶಾಸ್ತ್ರ, ಭಾಷೆ, ವಿಜ್ಞಾನ ಹೀಗೆ ವಿವಿಧ ವಿಷಯಗಳ ವ್ಯಾಸಂಗ ಸಾಧ್ಯವಾಗಬೇಕು; ಕೇವಲ ಸಾಂಪ್ರದಾಯಿಕ ವಿಷಯಗಳನ್ನು (ಉದಾ : ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ) ಒಟ್ಟುಮಾಡುವುದನ್ನು ನಿಲ್ಲಿಸಬೇಕು. ಸೃಷ್ಟ್ಯಾತ್ಮಕ ಬೌದ್ಧಿಕ ಬೆಳವಣಿಗೆಗೆ ಇದು ಅವಶ್ಯಕ. ಆರಂಭದಲ್ಲೇ ವಿದ್ಯಾರ್ಥಿಯು ತನ್ನ ಭವಿಷ್ಯವನ್ನು ತೀರಾ ಮೊಟಕುಗೊಳಿಸಿಕೊಳ್ಳುವಂತೆ ಮಾಡುವುದು ಸರಿಯಲ್ಲ. ನಮ್ಮಲ್ಲಿ ಐ.ಐ.ಟಿ. ಗಳಂತಹ ಉಚ್ಚ ಶಿಕ್ಷಣ ಸಂಸ್ಥೆಗಳಲ್ಲೂ ಒಂದು ರೀತಿಯ ಗಡಸುತನದ ಬಾಧೆ ವಿಪರೀತವಾಗಿದೆ.

**ಹೊ :** ಇನ್ನು ಕೊನೆಯ ಪ್ರಶ್ನೆಗೆ ಬರೋಣ: ವಿಶ್ವವನ್ನು ತಿಳಿಯಲು ವಿಜ್ಞಾನವೊಂದೇ ಸಾಧನವಲ್ಲವೆಂಬ ಅಭಿಪ್ರಾಯವೊಂದಿದೆ. ಯಾವ ಶಿಸ್ತಿನಿಂದ ಬಂದರೂ ಜ್ಞಾನದ ಮೌಲ್ಯ ಒಂದೇ ತೆರನಾದ್ದೆಂದು ಅವರ ವಾದ. ವಿಜ್ಞಾನ ಮತ್ತು ಮತಧರ್ಮ, ಎರಡೂ ಜ್ಞಾನದ ಆಕರಗಳು; ಅವು ಈಗೀಗ ಪ್ರತ್ಯೇಕತೆ ಕಳೆದುಕೊಂಡು ಒಂದಾಗುತ್ತಿವೆ, ಎನ್ನುತ್ತಾರೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು ?

**ನ :** ಅವೆರಡೂ ಖಂಡಿತ ಒಂದೇ ಅಲ್ಲ. ಯಾವುದಕ್ಕೆ ಉತ್ತರ ಕೊಡಲು ಸಾಧ್ಯವೋ ಅಂಥದನ್ನು ಮಾತ್ರವೇ ವಿಜ್ಞಾನವು ಕೈಗೆತ್ತಿಕೊಳ್ಳುತ್ತದೆ. ವಿಜ್ಞಾನದ ತೀರ್ಮಾನಗಳು ಎಂದಿಗೂ ಅಂತಿಮವಲ್ಲ; ಅವು ಆಯಾ ಹಂತದ ಸತ್ಯಗಳು. ನಾಳೆ ಅವು ಬದಲಾಗಬಾರದೆಂದೇನೂ ಇಲ್ಲ. ಮತಧರ್ಮಗಳು ಇಂತಹ ನಿಲುವನ್ನು ಅಂಗೀಕರಿಸಲು ಸಿದ್ಧವಿವೆಯೇ ? ಸ್ಪಷ್ಟವಾದ ಪ್ರಮಾಣ (ಅಥವಾ ಪುರಾವೆ) ದೊರೆಯುವವರೆಗೂ ವಿಜ್ಞಾನವು ನಿರ್ಧಾರಕ್ಕೆ ಬರುವುದಿಲ್ಲ. ಮತಧರ್ಮಗಳು ಹಾಗೆ ಮಾಡಿಯಾವೆ ? ವಿಜ್ಞಾನವು ಸದಾ ಚಲನಶೀಲವಾದ್ದು, ಆದರೆ ಮತಧರ್ಮಗಳು ಹಾಗಲ್ಲ. ನಾವೆಲ್ಲಾ ಎಷ್ಟೊಂದು ಕ್ಷೇತ್ರಗಳಲ್ಲಿ ಕಾರ್ಯೋನ್ಮುಖರಾಗಿದ್ದೇವೆ! ರಾಜ್ಯಶಾಸ್ತ್ರ, ಸಮಾಜಶಾಸ್ತ್ರ, ಅರ್ಥಶಾಸ್ತ್ರ, ಜೊತೆಗೆ ಪ್ರಕೃತಿ ವಿಜ್ಞಾನ ಮತ್ತು ಭೌತಿಕ ವಿಜ್ಞಾನದ ವಿಭಾಗಗಳು. ಇವುಗಳಲ್ಲಿ ಒಂದೊಂದೇ ಅಭಿಪ್ರಾಯ ಮೂಡಲು ಸಾಧ್ಯವೇ ? ಆದರೆ ಮತಧರ್ಮಗಳಲ್ಲಿ ಅದು ಮೂಲಭೂತವಾದ ಅಗತ್ಯ. ಜೀವನದ ಎಲ್ಲ ನಡತೆಗಳೂ ವೈಜ್ಞಾನಿಕವಲ್ಲ; ಆದಾಗ್ಯೂ ಅವನ್ನು ಸ್ವೀಕರಿಸುತ್ತೇವೆ. ಆಹಾರ, ಬಟ್ಟೆ, ನಂಬಿಕೆ ಇತ್ಯಾದಿಗಳನ್ನು ಸದಾ ವಿಜ್ಞಾನದ ಒರೆಗಲ್ಲಿನಲ್ಲಿ ನಾವು ಪರೀಕ್ಷಿಸಹೋಗುವುದಿಲ್ಲ. ಇನ್ನೂ ಅನೇಕ ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿರುತ್ತವೆ. ಮೂಲತಃ ವಿಜ್ಞಾನವು ತನ್ನದೇ ಮೌಲ್ಯಗಳನ್ನು ಹೊಂದಿದೆ. ಅವು ಮತಧರ್ಮದ ಮೌಲ್ಯಗಳಾಗಿರಬೇಕಾಗಿಲ್ಲ. ಒಟ್ಟನಲ್ಲಿ, ವಿಜ್ಞಾನ ಮತ್ತು ಮತಧರ್ಮಗಳ ನಡುವೆ ಭಿನ್ನತೆ ಇದೆ,



ಸಂಘರ್ಷವಿದೆ. ಸದಾಕಾಲವೂ ಬೌದ್ಧಿಕವಾಗಿ ಅದು ಮುಂದುವರಿಯುತ್ತದೆ. ವಿಜ್ಞಾನವು ಯಾವುದಕ್ಕೆ ಪ್ರಮಾಣವಿಲ್ಲವೆನ್ನುತ್ತದೋ ಅಂಥದನ್ನು ಮತಧರ್ಮವು ಸಿದ್ಧಾಂತವೆಂದು ಪ್ರತಿಪಾದಿಸುತ್ತದೆ. ಆದ್ದರಿಂದ ವಿಜ್ಞಾನ ಮತ್ತು ಮತಧರ್ಮ ಒಂದೇ ನಾಣ್ಯದ ಎರಡು ಮುಖಗಳು ಎನ್ನುವುದು ಸುಳ್ಳು. ಮತಧರ್ಮವು ಸನಾತನ, ಸಾರ್ವಕಾಲಿಕ; ವಿಜ್ಞಾನ ಹಾಗಲ್ಲ, ಅದು ಆಯಾ ಕಾಲದ್ದು. ಸತ್ಯದ ಆವಿಷ್ಕಾರವು ವಿಜ್ಞಾನದಿಂದ ಪೂರ್ಣಪ್ರಮಾಣದಲ್ಲಿ ಆಗಿಲ್ಲ, ಸದ್ಯದಲ್ಲೇ ಆಗುವಂತೆಯೂ ಇಲ್ಲ; ಆದರೆ ಸತ್ಯದ ಅರಸುವಿಕೆಗೆ ವಿಜ್ಞಾನಕ್ಕಿಂತಲೂ ಉತ್ತಮವಾದ ಬೇರೊಂದು ಸಾಧನವಿಲ್ಲವೆಂಬುದೂ ಅಷ್ಟೇ ನಿಜ. ಪಾರಮಾರ್ಥಿಕ ಸತ್ಯ ಯಾವುದು ? ನಮಗೆ ಗೊತ್ತಿಲ್ಲ, ವಿಜ್ಞಾನವು ಅದು ತನಗೆ ಗೊತ್ತೆಂದು ಹೇಳುವುದಿಲ್ಲ.

**ಹೊ :** 'ವಿಜ್ಞಾನದ ತತ್ತ್ವಶಾಸ್ತ್ರ' ಎಂಬ ಅಧ್ಯಯನ ವಿಭಾಗದಲ್ಲಿ ಕೇಳಿಬರುವ ಮಾತೊಂದಿದೆ ; ಅದೇನೆಂದರೆ ವಿಜ್ಞಾನವು ಸತ್ಯವನ್ನು ಹೊರಗೆಡಹಲಾರದು, ಎಂದು. ವಿಜ್ಞಾನವು ಅಬಾಧಿತ ಸತ್ಯವನ್ನು ತಿಳಿಸಿಕೊಡಲಾರದು ಎಂದರೆ ಅದು ಬೇರೆ. ಏಕೆಂದರೆ, ಹೊಸ ಬೆಳಕಿನಿಂದ ಹಿಂದಿನ ಗ್ರಹಿಕೆ ಅಸಮಗ್ರವೆನಿಸಬಹುದು. ಅವರೆಗಿನ ಸತ್ಯದ ಜಾಗದಲ್ಲಿ ಬೇರೊಂದು ಸತ್ಯ ಸ್ಥಾಪನೆಯಾಗಿದೆ ಎಂದರ್ಥ. ಆದರೆ ಸತ್ಯವೇ ದೊರಕಲಾರದೆಂದು ಹೇಳಿಬಿಟ್ಟರೆ ವಿಜ್ಞಾನವು ಅಪ್ರಸ್ತುತವಾಗುವುದಿಲ್ಲವೇ ?

**ನ :** ಸತ್ಯವೆಂಬುದು ಸಮಸ್ಯೆಗಳ ಆಗರ. ಆದರೆ ವಿಜ್ಞಾನವು ಒಂದು ಪದ್ಧತಿಯನ್ನು ನಮಗೆ ಕೊಟ್ಟಿದೆ, ಅದು ಪ್ರಭಾವಶಾಲಿಯಾದುದು. ಅದು ಅಪ್ರಸ್ತುತವೆಂಬುದು ಹುರುಳಿಲ್ಲದ ಮಾತು. ವಿಜ್ಞಾನವನ್ನು ಅಲ್ಲಗಳೆಯುವವರೂ ಕಂಪ್ಯೂಟರ್, ಏರೋಪ್ಲೇನ್, ಎಲ್ಲಾ ಬಳಸುತ್ತಾರೆ. ಆ ಸಾಧನಗಳ ಹಿಂದೆ ಅಗಾಧವಾದ ಎಷ್ಟೊಂದು ಜ್ಞಾನವಿದೆ ! ಅದು ಬಂದಿದ್ದೆಲ್ಲಿಂದ ? ಆದ್ದರಿಂದ ವಿಜ್ಞಾನ ಏನನ್ನೂ ಕೊಡಲಾರದೆಂಬುದು ಅಪ್ಪಟ ಸುಳ್ಳು. ಜ್ಞಾನವು ಎಂದಾದರೂ ಅಪ್ರಸ್ತುತವಾಗುತ್ತದೆಯೆ ? ವಿಸ್ಮಯದ ಒಳಹೊಕ್ಕು ಅನುಭವಿಸುವ ಶಿಸ್ತು ಬೇಕು, ಅಷ್ಟೆ. ಒಂದು ಉದಾಹರಣೆಯನ್ನು ನೋಡಿ : ನಮ್ಮ ನಡುವೆ ಅದೆಷ್ಟು ರೇಡಿಯೋ ಅಲೆಗಳಿವೆ, ಲಕ್ಷಾಂತರ. ಎಲ್ಲೆಲ್ಲಿಂದಲೋ ಬರುತ್ತಿರುತ್ತವೆ. ನನ್ನ ಕೈಯ್ಯಲ್ಲಿರುವ ಮೊಬೈಲ್ ಫೋನ್ ಅವುಗಳಲ್ಲಿ ಒಂದನ್ನು ಗ್ರಹಿಸುವುದು ಬಹಳ ಆಶ್ಚರ್ಯಕರ ಚಮತ್ಕಾರ. ಇದರಲ್ಲಿ ಒಂದು ಸುವ್ಯವಸ್ಥಿತ ಜ್ಞಾನದ ಅಳವಡಿಕೆ ಇದೆ. ನನ್ನ ಸ್ನೇಹಿತರೊಬ್ಬರು ವಿಜ್ಞಾನವೆಲ್ಲಾ ಒಂದು ಕತೆ ಎನ್ನುತ್ತಾರೆ. ಆದರೆ ಅದು ಬರಿಯ ಕತೆಯೆ ? ಅದು ಕತೆಯಾದರೆ ಅದೊಂದು ಅನನ್ಯವಾದ ಕತೆ ಎನ್ನಬೇಕು. ಅದರಲ್ಲಿ ಅಸಾಮಾನ್ಯವಾದ ಸತ್ವವಿದೆ. ಅದನ್ನು ತಿಳಿಯಲು ಗಾಢವಾದ ಕುತೂಹಲವಿರಬೇಕು, ಅಷ್ಟೆ. ವಿಜ್ಞಾನವು ಎಲ್ಲ ಸಮಸ್ಯೆಗಳನ್ನೂ ಬಗೆಹರಿಸಿಲ್ಲ, ನಿಜ. ಆದರೆ ಆ ದಿಕ್ಕಿನಲ್ಲಿ ಹೋಗಲು ವಿಜ್ಞಾನವಲ್ಲದೆ ಬೇರಾವ ಸಾಧನವೂ ನಮಗೆ ತಿಳಿಯದು. ಇತ್ತೀಚೆಗೆ ಪ್ರಕಟವಾದ 'ದೇಶ-ಕಾಲ' ತ್ರೈಮಾಸಿಕದ ಮೂರನೆಯ ಸಂಚಿಕೆಯಲ್ಲಿ ಇದನ್ನು ಸ್ವಲ್ಪ ಚರ್ಚಿಸಿದ್ದೇನೆ. 'ವಿಜ್ಞಾನ ಮತ್ತು ಹಿಂಸೆ' ಎಂಬ ವಿಷಯ ಕುರಿತು ವಿಚಾರಗೋಷ್ಠಿಯೊಂದು ನಡೆಯಲಿದೆಯೆಂದು ಕೇಳಿದ್ದೇನೆ. ನನಗೊಂದು ಬೌದ್ಧರ ಕತೆ ನೆನಪಿಗೆ ಬರುತ್ತದೆ. ವಿಜ್ಞಾನವನ್ನು ತೆಗಳುವಾಗ ಅದನ್ನು ಗಮನಿಸುವುದು ಒಳ್ಳೆಯದು. ಬೌದ್ಧರ ವಿಚಾರ ನನಗೆ ಬಹಳ ಇಷ್ಟ, ಹಲವಾರು ಮೂಲಭೂತ ಪ್ರಶ್ನೆಗಳಿಗೆ ಸಮಾಧಾನ ನೀಡುವ ಯತ್ನ ಅಲ್ಲಿದೆ. ಕತೆ ಏನೆಂದರೆ, ಎಲ್ಲರ ಕೈಯ್ಯಲ್ಲೂ ಸ್ವರ್ಗದ ಬಾಗಿಲಿನ ಬೀಗದ ಕೈ ಇದೆ; ತೊಂದರೆ ಬರುವುದು ಹೇಗೆಂದರೆ ಆ ಬೀಗದ ಕೈಯಿಂದ ನರಕದ ಬಾಗಿಲ ಬೀಗವನ್ನೂ ತೆಗೆಯಬಹುದು ! ಬೀಗದ ಕೈ ಯಾವುದಕ್ಕೆ ಬಳಸಬೇಕೆಂಬುದನ್ನು ತೀರ್ಮಾನಿಸುವುದು ಕೇವಲ ಆ ಬೀಗದ ಕೈ ಅಲ್ಲ!

**ಹೊ :** ನಮ್ಮ ದೇಶದಲ್ಲಿ ಪ್ರಯಾಣಿಕರಿಗೆಂದು ವಿಮಾನಗಳನ್ನು ನಿರ್ಮಿಸುವುದು ಯಾವಾಗ ? ಇತ್ತೀಚೆಗಷ್ಟೆ ನಲವತ್ತು ಏರ್‌ಬಸ್ ವಿಮಾನಗಳನ್ನು ಕೊಳ್ಳಲು ಒಪ್ಪಂದವಾಯಿತು.

**ನ :** ಬಹಳ ಮುಖ್ಯವಾದ ವಿಷಯ ಇದು. ದೇಶದಲ್ಲಿ ಕೇವಲ ಯುದ್ಧವಿಮಾನಗಳ ತಯಾರಿಕೆ ಸರಿಯಲ್ಲ; ನಾಗರಿಕ ವೈಮಾನಿಕ ಬೆಳವಣಿಗೆಗೆ ನಾವು ಸಜ್ಜಾಗಬೇಕು. ಯುದ್ಧವಿಮಾನ ಬೇಡವೆಂದಲ್ಲ, ಆದರೆ ಬೇರೆಯವೂ ಬೇಕು. ನಮ್ಮ ಉತ್ಪಾದನಾ ಶಕ್ತಿಯನ್ನು ಹೆಚ್ಚು ಚಲನಶೀಲವಾಗಿಸಬೇಕು.

**ಹೊ :** ವಿಮಾನಗಳನ್ನು ಕೊಳ್ಳಲು ಸಾವಿರಾರು ಕೋಟಿ ವ್ಯಯವಾಗುತ್ತಿದೆಯಲ್ಲವೆ ?

ನ : ಭಾರತ ಮತ್ತು ಚೀಣಾ ಕೊಳ್ಳುವಷ್ಟು ಬೇರಾರೂ ಕೊಳ್ಳುವುದಿಲ್ಲ. ಅಮೇರಿಕಾ, ಫ್ರಾನ್ಸ್, ರಷ್ಯಾ ನಿರ್ಮಿಸಬಲ್ಲದನ್ನು ನಾವು ನಿರ್ಮಿಸಲಾರೆವೆಂದೇನೂ ಇಲ್ಲ. ಹಾಗೆ ನೋಡಿದರೆ, ಅವರಿಗೆ ಮಾರುಕಟ್ಟೆ ಬೇಕು; ಅವರ ಅಗತ್ಯ ಪೂರೈಸಿದೆಯಾದ್ದರಿಂದ ಬೇರೆಯವರಿಗೆ ಮಾರಬೇಕು. ಹಳೆಯದರ ಜಾಗದಲ್ಲಿ ಹೊಸದು ಬಂದರೆ ಆಯಿತು ಅವರಿಗೆ, ಆದರೆ ನಮಗೆ ಅಭಾವ ತುಂಬಲು ಸದಾ ಹೊಸದು ಬೇಕು. ನಮ್ಮ ಅವಶ್ಯಕತೆಯು ಶೇ. ೨೦ರ ಪ್ರಮಾಣದಲ್ಲಿ ಹೆಚ್ಚುತ್ತಿದೆ. ಬರುವ ದಿನಗಳಲ್ಲಿ ನಾಗರಿಕ ವೈಮಾನಿಕ ಸೇವೆ ಮತ್ತು ಅಗತ್ಯ ಹೆಚ್ಚುವುದು ಏಷ್ಯಾದಲ್ಲೇ. ೨೦೨೦ರ ಹೊತ್ತಿಗಂತೂ ನಮ್ಮ ದೇಶಗಳೇ ಮುಂಚೂಣಿಯಲ್ಲಿರುತ್ತವೆ. ಆದರೆ ನಾವೇನು ಮಾಡುತ್ತಿದ್ದೇವೆ ? ನಿರಂತರವಾಗಿ ಕೊಳ್ಳುವುದು ! ಚಿಕ್ಕ ಪ್ರಮಾಣದಲ್ಲಿ ಈಗಾಗಲೇ ನಾವು ಯಶಸ್ವಿಯಾಗಿದ್ದೇವೆ. ಆದರೆ ದಾಪುಗಾಲು ಹಾಕಬೇಕಾದ ಸಮಯ ಬಂದಿದೆ.

**ಹೊ :** ಆಗಾಗ ಕೇಳಿಬರುವ ಆಪಾದನೆಯೇನೆಂದರೆ ನಮ್ಮಲ್ಲಿ ಎಲ್ಲಾ ಸಿದ್ಧತೆಗಳನ್ನೂ ಮಾಡಿಕೊಂಡು ನಿರ್ಮಾಣ ಆರಂಭಿಸಬೇಕೆನ್ನುವ ಹಂತದಲ್ಲಿ ಯಾವುದೋ ವಿದೇಶಿ ಕಂಪನಿಯೊಡನೆ ಒಪ್ಪಂದ ಮಾಡಿಕೊಂಡು ಸ್ವಂತದ ಸಾಧ್ಯತೆಗಳನ್ನು ಚಿವುಟಿ ಹಾಕಲಾಗುತ್ತದೆ, ಎಂದು. ಇದು ನಮ್ಮ ಇಂಜಿನಿಯರುಗಳಿಗೆ, ಕೆಲಸಗಾರರಿಗೆ ಹತಾಶೆ ಉಂಟುಮಾಡುತ್ತದೆ ಮತ್ತು ಸಂಶೋಧನೆಗೆ ತೊಡಗಿಸಿದ ಹಣ ವ್ಯರ್ಥವಾಗುತ್ತದೆ.

**ನ :** ಅದು ನಿಜವಿರಬಹುದು. ಹಾಗಾಗುವುದಿಲ್ಲವೆಂದು ಹೇಳಲಾರೆ. ಅದನ್ನು ತಡೆಗಟ್ಟಲು ನಾವು ಸತತ ಯತ್ನಿಸುತ್ತಿದ್ದೇವೆ. ಒಂದೊಂದು ಯೋಜನೆಯಲ್ಲಿ, ಸಂಶೋಧನೆಯಲ್ಲಿ, ಎಷ್ಟೆಷ್ಟು ಜನರ ಪ್ರತಿಭೆಯನ್ನು ಕ್ರೋಢೀಕರಿಸಲಾಗಿರುತ್ತದೆ ಯೆಂಬುದು ಎಲ್ಲರಿಗೂ ಅರ್ಥವಾಗುವುದಿಲ್ಲ. ಅದನ್ನು ನಮ್ಮ ದೇಶ ಉಪಯೋಗಿಸಿಕೊಳ್ಳ ದಿದ್ದರೆ ಅದೊಂದು ದುರಂತ; ಅಪರಾಧ ಎಂದರೂ ತಡೆಯುತ್ತದೆ. ಇನ್ನೊಂದಂಶ ಗಮನಿಸಬೇಕು : ಯಾವ ಕ್ಷೇತ್ರದಲ್ಲಿ ಸ್ಪರ್ಧೆ ಇಲ್ಲವೋ ಮತ್ತು ಬೇರೆಡೆ ತಂತ್ರಜ್ಞಾನ ಲಭ್ಯವಿಲ್ಲವೋ ಅಂತಹುದರಲ್ಲಿ ನಮ್ಮ ದೇಶ ಚೆನ್ನಾಗಿ ಕೆಲಸ ಮಾಡಿದೆ, ಸ್ವಂತವಾಗಿ ಅಭಿವೃದ್ಧಿಯ ಹಾದಿಯಲ್ಲಿ ಮುನ್ನಡೆದಿದೆ. ಅಂತರಿಕ್ಷ, ಕ್ಷೇತ್ರ ಒಂದು ಸ್ಪಷ್ಟ ನಿದರ್ಶನ. ಅದಕ್ಕೆ ನಾವು ತೊಡಗಿಸಿರುವ ಹಣವೆಷ್ಟು? ಪಾಶ್ಚಿಮಾತ್ಯ ದೇಶಗಳ ಬಜೆಟ್‌ಗೆ ಹೋಲಿಸಿದರೆ ನಮ್ಮದು ಕೇವಲ ಒಂದು ತುಣುಕು. ಅಂತರಿಕ್ಷ ತಂತ್ರಜ್ಞಾನಕ್ಕೆ ಸಂಬಂಧಿಸಿದ ಒಂದು ಅಂತರರಾಷ್ಟ್ರೀಯ ಸಂಶೋಧನಾ ಪತ್ರಿಕೆ ಇದೆ. ಇತ್ತೀಚೆಗೆ ಭಾರತದ ಬಗ್ಗೆ ಅದು ವಿಶೇಷವಾಗಿ ಬೆಳಕು ಚೆಲ್ಲಿತು. ಇಷ್ಟು ಕಡಿಮೆ ಹಣದಿಂದ ಇವರು ಹೇಗೆ ಇಷ್ಟನ್ನು ಸಾಧಿ ಸಿದರೆಂದು ಪತ್ರಿಕೆ ವಿಸ್ಮಯವನ್ನು ಪ್ರಕಟಿಸಿದೆ. ಅವರ ನಾಣ್ಯ ಚಲಾವಣೆಯಲ್ಲಿ ಹೇಳುವುದಾದರೆ, ಅದು ಐದಾರು ಲಕ್ಷ ಡಾಲರುಗಳಿರಬಹುದು. ಆದಾಗ್ಯೂ ಸುಮಾರು ನಲವತ್ತು ಸೆಟಲೈಟ್‌ಗಳನ್ನು ಈಗಾಗಲೇ ಉಡಾಯಿಸಿದ್ದೇವೆ. ಮುಖ್ಯವಾಗಿ ಗಮನಿಸಬೇಕಾದ್ದು, ಬೇರೆ ಯಾರೂ ಆ ತಂತ್ರಜ್ಞಾನ ಕೊಡಲು ಸಿದ್ಧರಿರಲಿಲ್ಲ ಎಂಬುದು. ಎಲ್ಲಿ ವ್ಯಾಪಾರೀ ಶಕ್ತಿಗಳ ಪ್ರವೇಶವಿಲ್ಲವೋ ಅಲ್ಲಿ ಭಾರತ ಯಶಸ್ವಿಯಾಗಿ ಮುನ್ನಡೆದಿದೆ.

**ಹೊ :** ಈ ಹಿನ್ನೆಲೆಯಲ್ಲಿ ಇತ್ತೀಚಿನ ಅಮೇರಿಕಾ ಜೊತೆಯ ಒಪ್ಪಂದವು ನಮ್ಮ ಅವಲಂಬನೆಯನ್ನು ಹೆಚ್ಚಿಸಿದೆ ಎನಿಸುವುದಿಲ್ಲವೇ ? ಪರಮಾಣು ಸ್ಥಾವರಗಳಿಗೆ ಇಂಧನ ಪಡೆಯಲು ನಾವು ಅಮೇರಿಕಾ ತೆಕ್ಕೆಗೆ ಸಿಲುಕುತ್ತಿದ್ದೇವೆಯೆ ?

**ನ :** ಹಾಗೇನೂ ಇಲ್ಲ. ಈಗಿನ ಒಪ್ಪಂದವು ಯಾರಿಗೂ ನಿರ್ಬಂಧವನ್ನು ಹೇರಿಲ್ಲ. ಒಪ್ಪಂದದ ಒಕ್ಕಣೆಯನ್ನು ಸೂಕ್ಷ್ಮವಾಗಿ ಗಮನಿಸಿ. ಮುಂದಿನ ಹೆಜ್ಜೆಗಳನ್ನು ಹಾಕುವ ಪ್ರಯತ್ನ ಮಾಡುತ್ತೇವೆಂಬುದಷ್ಟೇ ಒಪ್ಪಂದ. ಮುಂದೆ ಏನು ಮಾಡಬಹುದೆಂಬುದನ್ನು ಕಂಡುಕೊಳ್ಳಲು ಒಪ್ಪಂದ, ಅಷ್ಟೆ. ಅಮೇರಿಕಾದ ಅಧ್ಯಕ್ಷರು ಅಲ್ಲಿಯ ಕಾಂಗ್ರೆಸ್‌ಗೆ ಹೇಳಿ ಒಪ್ಪಿಸಬೇಕು – ಇಂತಿಂತಹ ನಿರ್ಬಂಧಗಳನ್ನು ಹಾಕಿ ಭಾರತಕ್ಕೆ ಅಣು ಇಂಧನ ನೀಡೋಣ ಮತ್ತು ಬೇರೆ ದೇಶಗಳಿಗೂ ಭಾರತಕ್ಕೆ ನೀಡಿ ಎಂದು ಹೇಳೋಣ, ಎಂದು. ನಾವೂ ಹೇಳುತ್ತೇವೆ, ನಮ್ಮ ನಾಗರಿಕ ಮತ್ತು ಮಿಲಿಟರಿ ಕಾರ್ಯಕ್ರಮಗಳನ್ನು ಪ್ರತ್ಯೇಕಗೊಳಿಸುತ್ತೇವೆ, ಎಂದು. ಎರಡು ದೇಶಗಳಲ್ಲಿ ಯಾರೊಬ್ಬರು ತಮ್ಮ ಆಶಯದಲ್ಲಿ ವಿಫಲರಾದರೂ ಅದು ಒಪ್ಪಂದದ ಉಲ್ಲಂಘನೆಯಾಗುವುದಿಲ್ಲ. ಮೂಲತಃ ನಮಗಿರುವ ಪ್ರಶ್ನೆ, ನಾವೆಷ್ಟು ಶಕ್ತಿಯನ್ನು (ಎನರ್ಜಿ) ಉತ್ಪಾದಿಸಿ ಕೊಳ್ಳಬಯಸುತ್ತೇವೆ ಎಂಬುದು. ಕೊರತೆ ಇರುವುದು ವಾಸ್ತವ. ಅದನ್ನು ತುಂಬಿಕೊಳ್ಳಲು ಅನೇಕ ಪರ್ಯಾಯಗಳಿವೆ : ಕಲ್ಲಿದ್ದಲು, ಎಣ್ಣೆ, ಸೂರ್ಯಶಕ್ತಿ, ಗಾಳಿ, ಪರಮಾಣು ಇತ್ಯಾದಿ. ಸದ್ಯಕ್ಕೆ ನಮ್ಮ ಪರಮಾಣು ಕೇಂದ್ರಿತ ಶಕ್ತಿ ಗಮನಾರ್ಹವಾಗಿ ವರ್ಧಿಸಿಲ್ಲ. ಇಂಧನದ ಕೊರತೆ ಅದಕ್ಕೆ ಕಾರಣ. ನಮ್ಮಲ್ಲಿ ಯುರೇನಿಯಂ ಇಲ್ಲ. ಹೀಗಿರುವಾಗ ಪರಮಾಣುಶಕ್ತಿ ಆಧಾರಿತ ವೃದ್ಧಿ ಆಗಬೇಕಾದರೆ ನಮಗಿರುವುದೇ ಎರಡು ಮಾರ್ಗಗಳು : (ಅ) ನಮ್ಮ ಸಂಪನ್ಮೂಲಗಳಲ್ಲಿ ಒಂದಾದ ಥೋರಿಯಂ ಅನ್ನು ಪರಿವರ್ತಿಸಿ ಇಂಧನವನ್ನಾಗಿಸಿ ಕೊಳ್ಳುವುದು; ಇದರಲ್ಲಿ ನಾವು ಅಷ್ಟೇನೂ ಯಶಸ್ವಿಯಾಗಿಲ್ಲ; ಅಥವಾ (ಆ) ಬೇರೆಡೆಯಿಂದ ಯುರೇನಿಯಂ ಪಡೆಯುವುದು. ಹಾಗೆ ಮಾಡದಿದ್ದರೆ ಶಕ್ತಿಯ ವಿಷಯದಲ್ಲಿ ನಾವು ಭದ್ರತೆ ಸಾಧಿಸಲಾರೆವು. ಎಣ್ಣೆಯ ಪರಿಸ್ಥಿತಿ ಹೇಗಿದೆ? ಪೂರ್ವ ಏಷ್ಯಾದಿಂದ ಪಡೆಯಬೇಕು. ಅಲ್ಲಿ ನಾಳೆಯ ಸಂದರ್ಭ ಹೇಗಿರುತ್ತದೆಂದು ಹೇಳಲಾದೀತೆ ? ಎಲ್ಲೆಲ್ಲೂ ಅಮೇರಿಕಾ ಕಾಲಿಡುತ್ತಿರುವುದು ಇಂದಿನ ವಿದ್ಯಮಾನ. ನಮ್ಮಲ್ಲಿ ತೈಲದ ಉತ್ಪಾದನೆ ಕುಗ್ಗುತ್ತಿದೆ, ಹೊರಗಿನಿಂದ ಬರುವುದೂ ಕುಗ್ಗುತ್ತದೆ. ಆಗ ನಮಗುಳಿಯುವುದು ಪರಮಾಣು ಇಂಧನ ಕೇಂದ್ರಿತ ಶಕ್ತಿಯೊಂದೇ.



**ಹೊ :** ಅಮೇರಿಕಾದಿಂದ ನಾವು ಪಡೆಯಬಯಸುವ ಯುರೇನಿಯಂ ಅಮೇರಿಕಾಕ್ಕೆ ಎಲ್ಲಿಂದ ಬರುತ್ತದೆ ? ಅವರಲ್ಲಿ ಅದರ ನಿಕ್ಷೇಪಗಳಿವೆಯೆ ?

**ನ :** ಇರಬಹುದು, ಆದರೆ ಹೊರಗಿನಿಂದಲೂ ಬರುತ್ತದೆ. ಪರಮಾಣು ಕೇಂದ್ರಿತ ವಿದ್ಯುದುತ್ಪಾದನೆ ಅಮೇರಿಕಾದಲ್ಲಿ ಹೆಚ್ಚುತ್ತಿಲ್ಲ. ಅವರಿಗೆ ಅದರ ಅವಶ್ಯಕತೆಯಿಲ್ಲ. ಜಲವಿದ್ಯುತ್ ಹೇರಳವಾಗಿದೆ, ಎಣ್ಣೆ ಅವರಲ್ಲಿದೆ ಮತ್ತು ಎಣ್ಣೆಗಾಗಿ ಬೇರೆ ದೇಶಗಳ ಆಕ್ರಮಣ ನಡೆಸುತ್ತದೆ. ಆದರಿಂದ ವಿದ್ಯುಚ್ಛಕ್ತಿಯ ಕೊರತೆ ಅವರಿಗಿಲ್ಲ. ಫ್ರಾನ್ಸ್ ಮತ್ತು ಜಪಾನ್‌ಗಳಲ್ಲಿ ಪರಮಾಣು ಕೇಂದ್ರಿತ ವಿದ್ಯುದುತ್ಪಾದನೆ ಅನಿವಾರ್ಯ. ಅದು ಅಪಾಯಕಾರಿ ಎಂಬ ಮಾತಿದೆ, ಆದರೆ ಜಪಾನಿನ ಶೇ. ೮೦ರಷ್ಟು ವಿದ್ಯುತ್ ಉತ್ಪಾದನೆ ಅಣುಶಕ್ತಿ ಕೇಂದ್ರಗಳಲ್ಲಿ ಆಗುತ್ತಿದೆ. ಯಾವ ಅಪಾಯವೂ ಸಂಭವಿಸಿಲ್ಲ. ಈ ಅಪಾಯದ ಕೂಗು ಬರುವುದು ಬ್ರಿಟನ್ ಮತ್ತು ಅಮೇರಿಕಾಗಳಿಂದ. ಅದಕ್ಕೆ ಅವರದೇ ಕಾರಣಗಳಿವೆ. ಆ ದೇಶಗಳಲ್ಲಿ ಅಣುಶಕ್ತಿಯಿಂದ ವಿದ್ಯುದುತ್ಪಾದನೆಯ ಅಗತ್ಯವಿಲ್ಲದಿರುವುದು ಗಮನಿಸಬೇಕಾದ ಅಂಶ. ೧೯೫೦ರ ದಶಕದಲ್ಲಿ ಸೂಯೆಜ್ ಕಾಲುವೆ ಸಮಸ್ಯೆ ಉಲ್ಬಣಗೊಂಡಾಗ ಫ್ರಾನ್ಸ್ ಅಣುಶಕ್ತಿ ಕೇಂದ್ರಿತ ವಿದ್ಯುತ್ತಿನ ಬಗ್ಗೆ ನಿರ್ಧಾರಕ್ಕೆ ಬಂತು. ನಮ್ಮದು ಸದ್ಯದಲ್ಲಿ ಒಂದು ಹಂಗಾಮಿ ಪರಿಸ್ಥಿತಿ. ಕ್ರಮೇಣ ಥೋರಿಯಂ ಪರಿವರ್ತನೆಯಿಂದ ಅಣುಶಕ್ತಿ ಕೇಂದ್ರಗಳಿಗೆ ಇಂಧನ ಪೂರೈಕೆ ಮಾಡಿಕೊಳ್ಳುವ ತಂತ್ರಜ್ಞಾನ ಫಲಿಸಿದರೆ ನಾವು ಸ್ವಾವಲಂಬನೆಯನ್ನು ಸಾಧಿಸಿಕೊಳ್ಳುವುದರಲ್ಲಿ ಸಂಶಯವಿಲ್ಲ.

ಹೊ : ನಮಗಾಗಿ ಬಹಳ ಸಮಯ ಕೊಟ್ಟಿದ್ದೀರಿ. ಅನೇಕ ಉಪಯುಕ್ತ ವಿಷಯಗಳನ್ನು ತಿಳಿಸಿಕೊಟ್ಟಿದ್ದೀರಿ. ವೈಯ್ಯಕ್ತಿಕವಾಗಿ ಮತ್ತು 'ಹೊಸತು' ಪರವಾಗಿ ನಿಮಗೆ ಅನಂತ ಧನ್ಯವಾದಗಳು. ನಮ್ಮ ಓದುಗರಿಗೆ ನಿಮ್ಮಿಂದ ಮುಂದೆಯೂ ವಿಜ್ಞಾನ-ತಂತ್ರಜ್ಞಾನ ವಿಷಯಗಳ ಬಗ್ಗೆ ತಿಳುವಳಿಕೆ ಲಭಿಸುವಂತಾಗಲೆಂದು ಆಶಿಸುತ್ತೇವೆ. ■

## ಕನಸು

ಕನಸು ಮನಸಿನ ಕನ್ನಡಿ
ಕನಸು ಅನಿಸಿಕೆಗಳ ಮುನ್ನುಡಿ
ಕನಸು ಭಾವನೆಗಳ ನಾಣ್ಣುಡಿ
ಕನಸು ಸಂಬಂಧಗಳ ಪರಿವಿಡಿ
ಕನಸು ಮನುಷ್ಯನ ನಾಡಿ
ಈ ಕನಸು ಕವಿತೆಯ ಕೈಪಿಡಿ
ಅಗಲುವ ತನಕ ಈ ಗಾಡಿ.

**ಎನ್. ಗುರುಕಿರಣ್**
ನಂ. ೩೭೫೭/೯, ೧೪ನೇ ಅಡ್ಡರಸ್ತೆ
೨ನೇ ಮುಖ್ಯರಸ್ತೆ, ಗಾಯತ್ರಿನಗರ, ಬೆಂಗಳೂರು-೨೧

# ಪ್ರಜಾಪ್ರಭುತ್ವಕ್ಕಾಗಿ ಜನತಾ ಚಳವಳಿಗಳು



ನಮ್ಮಲ್ಲಿ ಪ್ರಜಾಪ್ರಭುತ್ವ ಸಿದ್ಧಗೊಂಡಿರುವ ವ್ಯವಸ್ಥೆಯಲ್ಲ, ರೂಪುಗೊಳ್ಳುತ್ತಿರುವ ವಿಕಾಸಶೀಲ ಪ್ರಕ್ರಿಯೆ. ಇದನ್ನು ಸರ್ವಜನಹಿತಕಾರಿಯಂತೆ, ಕಟ್ಟಕಡೆಯ ಮನುಷ್ಯರಿಗೆ ಇದರ ಫಲ ತಲುಪುವಂತೆ ಮಾಡಬೇಕಿದೆ. ಈ ದಿಸೆಯಲ್ಲಿ ಚಳವಳಿಗಳ ಪಾತ್ರ ಹೇಗಿರಬೇಕು ಎಂಬ ಒಂದು ಸಂವಾದವನ್ನು ನಡೆಸಲು 'ಹೊಸತು' ಉದ್ದೇಶಿಸಿದೆ.

ನಮ್ಮಲ್ಲಿ ಸಮಸ್ಯೆಗಳು ಯಾವತ್ತೂ ಇದ್ದುವೇ. ಇವತ್ತೂ ಇವೆ. ಸಮಸ್ಯೆಗಳ ಪರಿಹಾರಕ್ಕೆ ಹೋರಾಟವೊಂದೇ ದಾರಿ, ಬೇರೆ ದಾರಿಯೇ ಇಲ್ಲ ಎಂಬ ವಾತಾವರಣ ಇವತ್ತೂ ಇದೆ. ಆದರೆ ಹೋರಾಟದ ಸ್ವರೂಪ ಹೇಗಿರಬೇಕೆಂಬ ಬಗ್ಗೆ ಮಾತ್ರ ನಮ್ಮಲ್ಲಿ ಭಿನ್ನಾಭಿಪ್ರಾಯಗಳಿವೆ. ತಾತ್ವಿಕವಾಗಿ ಹಿಂಸೆಯನ್ನೇ ಹೋರಾಟದ ಮಾರ್ಗವಾಗಿ ಹಿಡಿದ ಚಳವಳಿಗಳು ಇವೆ; ಅದನ್ನು ವಿರೋಧಿಸುವವರೂ ಇದ್ದಾರೆ. ಸಾಂದರ್ಭಿಕ ಅನಿವಾರ್ಯತೆಯಿಂದ ಘಟಿಸುವ ತೀವ್ರತೆಗೂ ಸೈದ್ಧಾಂತಿಕವಾಗಿ ತೀವ್ರತೆಯ ಹೋರಾಟವನ್ನು ನಂಬಿ ಚಳವಳಿ ಹೂಡುವುದಕ್ಕೂ ವ್ಯತ್ಯಾಸವಿದೆ. ಗಾಂಧಿ, ಅಂಬೇಡ್ಕರರ ರಾಜಕಾರಣ ನಮ್ಮ ಬೆನ್ನಿಗಿರುವಾಗ ತೀವ್ರಮಾರ್ಗಗಳು ಎಷ್ಟರಮಟ್ಟಿಗೆ ಸರಿ ? ಹಿಂಸೆಯಿಂದ ಸಮಾನತೆಯನ್ನು ತರುತ್ತೇವೆ, ಭಯೋತ್ಪಾದನೆಯಿಂದ ಬಿಕ್ಕಟ್ಟುಗಳನ್ನು ಪರಿಹರಿಸುತ್ತೇವೆ, ಎಂಬ ಧೋರಣೆ ಎಷ್ಟು ಸರಿ ?

ರಾಜಕೀಯ ಪಕ್ಷಗಳನ್ನು ಹೊರತುಪಡಿಸಿದರೆ ನಮ್ಮ ಎಲ್ಲ ಚಳವಳಿಗಳೂ ಒಂದಲ್ಲ ಒಂದು ಕಿರುಸಮುದಾಯ, ಜಾತಿ, ವರ್ಗಹಿತಗಳಿಗಾಗಿ ಇಲ್ಲವೆ ತಾತ್ಕಾಲಿಕ ಸಮಸ್ಯೆಯೊಂದರ ಪರಿಹಾರಕ್ಕಾಗಿ ಹುಟ್ಟಿರುವ ಚಳವಳಿಗಳೇ ಆಗಿವೆ. ಹೀಗಿರುವಾಗ ನಮ್ಮ ಚಳವಳಿಗಳು ಸಮಸ್ತರ ಹಿತಕ್ಕೆ ದುಡಿಯುವಂತೆ ಮಾಡುವ ಮಾರ್ಗಗಳಾದರೂ ಯಾವುವು ? ವ್ಯಕ್ತಿಪ್ರತಿಷ್ಠೆ ಮತ್ತು ನಾಯಕತ್ವದ ದಾಹಗಳನ್ನು ಮೀರಿದ ಸಮಷ್ಟಿ ಹಿತದ ಕಡೆಗೆ ಚಳವಳಿಗಳನ್ನು ಕೊಂಡೊಯ್ಯುವುದಾದರೂ ಹೇಗೆ ?

ಪ್ರಜಾಪ್ರಭುತ್ವದಲ್ಲಿ ಅಧಿಕಾರಗ್ರಹಣಕ್ಕಾಗಿ ರಾಜಕೀಯ ಪಕ್ಷಗಳು ಒಕ್ಕೂಟ ರಚನೆ ಮಾಡಿಕೊಳ್ಳುವುದು ಹಲವು ಸಾರಿ ನಮ್ಮಲ್ಲಿ ನಡೆದಿದೆ. ಆದರೆ ನಮ್ಮ ಚಳವಳಿಗಳು ಮಾತ್ರ ಛಿದ್ರಗೊಳ್ಳುತ್ತಲೇ ಬಂದಿವೆ. ಇತ್ತೀಚೆಗೆ ದಲಿತ ಮತ್ತು ರೈತ ಚಳವಳಿಗಳು 'ಸರ್ವೋದಯ ಕರ್ನಾಟಕ'ವೆಂದು ಒಕ್ಕೂಟಗೊಂಡು ಪರ್ಯಾಯ ರಾಜಕಾರಣಕ್ಕೆ ಕೈ ಜೋಡಿಸಿವೆ. ಇಲ್ಲೂ ಸಮಸ್ತ ಒಕ್ಕೂಟ ಇನ್ನೂ ಘಟಿಸಿಲ್ಲ. ಇಂಥ ಸಂದರ್ಭದಲ್ಲಿ ಚಳುವಳಿಗಳು ಛಿದ್ರಗೊಳ್ಳದಿರುವಂತೆ ಮಾಡಲು ಮಾರ್ಗೋಪಾಯಗಳೇನು ? ಸಂದರ್ಭದ ಅಗತ್ಯಕ್ಕೆ ತಕ್ಕಂತೆ ಸಂಯುಕ್ತ ಹೋರಾಟಕ್ಕೆ ಸಜ್ಜುಗೊಳ್ಳುವ ಮಾರ್ಗಗಳಾವುವು ? ರಾಜಕೀಯಕ್ಕೆ ಸಂಬಂಧಿಸಿದಂತೆ ಹೋರಾಟದ ರಾಜಕಾರಣ, ವಿರೋಧ ಪಕ್ಷೀಯ ರಾಜಕಾರಣ, ಪರ್ಯಾಯ ರಾಜಕಾರಣ (?) ಅಥವಾ ಇನ್ನಾವ ಮಾರ್ಗಗಳನ್ನು ಚಳವಳಿಗಳು ಆರಿಸಿಕೊಳ್ಳಬೇಕು ?

ನಮ್ಮ ಇದುವರೆಗಿನ ಯಾವ ಹೋರಾಟಗಳಿಂದಲೂ ಮಹಿಳೆಯ ವಿಮೋಚನೆ ಪೂರ್ಣವಾಗಿ ಆಗಿಲ್ಲ. ಪ್ರಜಾಪ್ರಭುತ್ವವೆಂದರೆ ಪುರುಷ ಪ್ರಭುತ್ವ ಎಂಬುದು ಕೆಲವು ಮಹಿಳಾವಾದಿಗಳ ಅಭಿಪ್ರಾಯ. ನಮ್ಮಲ್ಲಿನ ಮಹಿಳೆಯ ಎರಡನೆದರ್ಜೆಯತನ ನೀಗಿಸಲು ಚಳವಳಿಗಳು ಹೇಗೆ ವರ್ತಿಸಬೇಕು ? ಅಲ್ಲದೆ, ಮಹಿಳೆಯರನ್ನೆಲ್ಲಾ ಒಂದೇ ಒಂದು ವರ್ಗಕ್ಕೆ ಸೇರಿಸಬಹುದೇ ?

– ಹೀಗೆ ಎಷ್ಟೋ ವಿಷಯಗಳಿವೆ. ಅವುಗಳಲ್ಲಿ ಕೆಲವನ್ನು ಕುರಿತಂತೆ ಕೆಲವು ವಿಶ್ಲೇಷಣೆಗಳು ಹಾಗೂ ಪ್ರತಿಕ್ರಿಯೆಗಳು ಇಲ್ಲಿವೆ.

ಈ ವಿಭಾಗದ ಸಂಯೋಜಕರು ಶ್ರೀ ರಾಮಲಿಂಗಪ್ಪ ಟಿ. ಬೇಗೂರು.



# ಪ್ರಜಾಪ್ರಭುತ್ವ ಮತ್ತು ಚಳವಳಿಗಳು

ಅಸಮಾನತೆಯೇ ಇಲ್ಲದ ಸ್ಥಿತಿಯೊಂದರ ನಿರ್ಮಾಣವೆಂಬುದು ಸಾಂಘಿಕ ಬದುಕಿನಲ್ಲಿ ಕೇವಲ ಆದರ್ಶ ಮಾತ್ರ. ಅಸಮಾನತೆಯಿಂದ ಕಡಿಮೆ ಅಸಮಾನತೆಯ ಕಡೆಗೆ ಅಥವಾ ಅಪರಿಪೂರ್ಣತೆಯಿಂದ ಪರಿಪೂರ್ಣತೆಯ ಕಡೆಗೆ ಚಲಿಸುವುದೇ ನಿಜವಾದ ವಿಕಾಸ. ಇಂಥ ಒಂದು ವಿಕಾಸಶೀಲ ಪ್ರಕ್ರಿಯೆಯ ಐತಿಹಾಸಿಕ ಘಟ್ಟವೇ ಸ್ವಾತಂತ್ರ್ಯ ಚಳವಳಿ. ಇಂದಿನ ಪ್ರಜಾಪ್ರಭುತ್ವವು ಇಂಥ ಸಾಂಘಿಕ ಚಳವಳಿಯೊಂದರ ಫಲ. ಅದುವರೆಗೆ ಇದ್ದ ಅಸಂಖ್ಯ ಪ್ರಭುತ್ವಗಳ ವ್ಯವಸ್ಥೆಗೆ ಬದಲಿಯಾಗಿ ನಾವು ಕಟ್ಟಿಕೊಳ್ಳುತ್ತಿರುವ ವ್ಯವಸ್ಥೆ ಇದು. ಈ ಪ್ರಜಾಪ್ರಭುತ್ವವು ತನಗಿಂತ ಮೊದಲಿಗೆ ಇದ್ದ ಪ್ರಭುತ್ವಗಳನ್ನು ಅಂದರೆ ರಾಜಪ್ರಭುತ್ವದ ಜೊತೆಜೊತೆಗೇ ಇದ್ದ ಜಾತಿ, ಧರ್ಮ, ಭಕ್ತಿ, ಸಾಹಿತ್ಯ, ಶಾಸ್ತ್ರ-ಪುರಾಣ ಇತ್ಯಾದಿ ಸಾಂಸ್ಥಿಕ ಪ್ರಭುತ್ವಗಳನ್ನು ತನ್ನ ಪರಿಚಾರಕ್ಕೆ ಏಕಾಏಕಿ ತೆಗೆದುಕೊಳ್ಳಲು ಆಗಲಿಲ್ಲ. ಇದು ಪ್ರಜಾಪ್ರಭುತ್ವದ ಲೋಪವಲ್ಲ. ಈ ಪ್ರಕ್ರಿಯೆ ಕ್ರಾಂತಿಯಂತೆ ಒಮ್ಮೆಗೇ ನಡೆಸಿಬಿಡುವ ಕ್ರಿಯೆ ಅಲ್ಲ. ಇದೊಂದು ದೀರ್ಘಕಾಲೀನ ವಿಕಾಸವಾದಿ ಹೋರಾಟ. ಇದರಿಂದಾಗಿಯೇ ನಾವು ತಾತ್ವಿಕವಾಗಿ/ಶೈಕ್ಷಣಿಕವಾಗಿ ಕಲ್ಪಿಸಿಕೊಂಡಿರುವ ಪ್ರಜಾಪ್ರಭುತ್ವಕ್ಕೂ ನಾವಿಂದು ಆಚರಣೆಯಲ್ಲಿ ಬಾಳುತ್ತಿರುವ ಪ್ರಜಾಪ್ರಭುತ್ವಕ್ಕೂ ಬಹಳ ವ್ಯತ್ಯಾಸವಿದೆ.

ಸಮಸ್ಯೆಗಳ ಪರಿಹಾರಕ್ಕೆ ಹೋರಾಟವೊಂದೇ ದಾರಿ, ಬೇರೆ ದಾರಿಯೇ ಇಲ್ಲ ಎಂಬ ವಾತಾವರಣ ಇವತ್ತೂ ಇದೆ; ಎಂದರೆ ಇದೊಂದು ನಿತ್ಯನಿರಂತರ ವಾಸ್ತವ. ಸಮಸ್ಯೆಗಳೇ ಇಲ್ಲದ ವ್ಯವಸ್ಥೆ ಎಂಬುದೊಂದು ಇರಲಿಕ್ಕೆ ಸಾಧ್ಯವೇ? ಹಾಗೆ ನೋಡಿದರೆ ಯಾವ ವ್ಯವಸ್ಥೆಯೂ ಸಿದ್ಧಗೊಂಡ ವ್ಯವಸ್ಥೆಯಲ್ಲ. ಆ ರೀತಿ ಕಾಣುತ್ತಿರುತ್ತದೆ ಅಷ್ಟೆ. ನಮ್ಮ ಪ್ರಜಾಪ್ರಭುತ್ವವೂ ಸಿದ್ಧಗೊಂಡ ವ್ಯವಸ್ಥೆಯಲ್ಲ. ರೂಪಗೊಳ್ಳುತ್ತಿರುವ ವಿಕಾಸಶೀಲ ಪ್ರಕ್ರಿಯೆ. ನಮ್ಮ ಪ್ರಜಾಪ್ರಭುತ್ವಕ್ಕೆ ಏನು ಮಹಾ ವಯಸ್ಸಾಗಿದೆ? ಮಾನವ ಜಾತಿಯ ಇತಿಹಾಸದಲ್ಲಿ ಇದಿನ್ನೂ ಎಳೆಯ ಕೂಸು.

ಯಾವುದೇ ವಿಕಾಸ ಪ್ರಕ್ರಿಯೆಯಲ್ಲಿ ಆಗಾಗ ಹೊಸ ಹೊಸ ಸಮಸ್ಯೆಗಳು ಉಂಟಾಗುತ್ತಿರುತ್ತವೆ. ಆಗೆಲ್ಲ ಹೋರಾಟಗಳು ಅನಿವಾರ್ಯ. ರಾಜ್ಯವನ್ನು ಸದಾ ನಂಬಿ ಕೂರಲಾಗದು. ಬಹುಪಾತಳಿಯ ಸಮಸ್ಯೆಗಳ ಪರಿಹಾರಕ್ಕೆ ಬಹುರೂಪಿ ಹೋರಾಟಗಳು ಅಗತ್ಯ. ಚಳುವಳಿಗಳು ಸಮಸ್ಯೆಯ ಪರಿಹಾರದೊಂದಿಗೆ ಸಾಯಬೇಕು ಮತ್ತು ಹೊಸ ಸಮಸ್ಯೆಗಳ ಪರಿಹಾರಕ್ಕೆ ಹುಟ್ಟುತ್ತಿರಬೇಕು. ಸಮಸ್ಯೆಗಳ ರೂಪಾಂತರಕ್ಕೆ ತಕ್ಕಂತೆ ರೂಪಾಂತರಗೊಳ್ಳುತ್ತಿರಬೇಕು. ಚಳವಳಿಯ ಉದ್ದೇಶ ಸಾಧನೆ ಮುಖ್ಯವೇ ಹೊರತು ಸುಮ್ಮನೆ ಚಳವಳಿ ನಡೆಯುತ್ತಲೇ ಇರುವುದು ಮುಖ್ಯವಲ್ಲ. ಬಂಡಾಯ, ಪರಿಸರ ಇಂಥ ಕೆಲ ಚಳವಳಿಗಳಿಗೆ ಸಾವೆಂಬುದೇ ಇರಬಾರದು ನಿಜ. ಆದರೆ ಇಂಥ ಚಳವಳಿಗಳ ಸೋಲು-ಛಿದ್ರತೆಗಳಿಗೆ ನಾಯಕರನ್ನು ದೂರುವುದು ಸಲ್ಲದು. ದಣಿದ ತಲೆಮಾರಿನ ಬದಲು ಹೊಸ ರಕ್ತ ಸೇರ್ಪಡೆಯಾಗದೆ ದೀರ್ಘಕಾಲ ಚಳವಳಿಗಳು ಬಾಳವು. 'ತೆರೆಬಿದ್ದರೂ ರಂಗ ಬಿಡದ' ಚಿರಯುವಕರಿಂದ ಏನೂ ಆಗದು.

ಪ್ರಜಾಪ್ರಭುತ್ವದಲ್ಲಿ ಚಳವಳಿಗಳು ಸಮಸ್ತರ ಹಿತಕ್ಕಾಗಿ ದುಡಿಯಬೇಕು ಎಂಬ ಕಲ್ಪನೆಯೇ ವಾಸ್ತವವಾಗಿ ಸರಿಯಲ್ಲ. ಸಮಸ್ತ ಎಂದರೆ ಏನು? ವಿಶ್ವಮಾನವ-ಸರ್ವೋದಯ ಕಲ್ಪನೆಯ ಸಕಲ ಮಾನವರನ್ನೂ ಒಳಗೊಳ್ಳುವುದೇ? ಚಳವಳಿಗಳು ಅಲಕ್ಷಿತರ, ಅವಕಾಶ ವಂಚಿತರ, ಶೋಷಿತರ ಹಿತಕ್ಕಾಗಿ ದುಡಿಯಬೇಕು. ಅಂತ್ಯೋದಯವೇ ಸರ್ವೋದಯ.

ಗಾಂಧಿ, ಅಂಬೇಡ್ಕರರ ರಾಜಕಾರಣ ನಮ್ಮ ಬೆನ್ನಿಗಿರುವಾಗ ತೀವ್ರ ಮಾರ್ಗಗಳು ಎಷ್ಟರಮಟ್ಟಿಗೆ ಸರಿ? ಹೌದು ಸಶಸ್ತ್ರ ಮಾರ್ಗ ಸರಿಯಲ್ಲ. ಆದರೆ ಹೋರಾಟದ ತಾತ್ವಿಕತೆ ತೀವ್ರವಾಗಿರಬೇಕೋ ಅಥವಾ ಬೇಡವೋ ಎಂಬುದನ್ನು ಸಾಂದರ್ಭಿಕ ಹತಾಶತೆ ನಿರ್ಧರಿಸುತ್ತಿರುತ್ತದೆ. ಹಲವೇಳೆ ವ್ಯಕ್ತಿ ಪ್ರತಿಷ್ಠೆ, ನಾಯಕತ್ವದ ದಾಹ, ಕಿರು ವರ್ಗಹಿತಗಳೂ ಹೋರಾಟದ ಹಿಂದಿನ ನೀತಿ ನಿರೂಪಕ ಶಕ್ತಿಗಳಾಗಿ ಕೆಲಸ ಮಾಡುತ್ತಿರುತ್ತವೆ. ಹೀಗಾದಾಗ ಸಮಾಜಕ್ಕೆ ಒಳಿತಾಗುವುದು ಕಡಿಮೆ. ವಿಕಾಸಕ್ಕೆ ಇದರಿಂದ ತಪ್ಪು ನಿರ್ದೇಶನ ಸಿಕ್ಕಿ ಅಸಮಾನತೆಯ ದುಷ್ಫಲಾನುಭವಿಗಳು ಯಾಜಮಾನ್ಯದ ಫಲಾನುಭವಕ್ಕಾಗಿ ಹೋರಾಡುವುದಕ್ಕೆಂದೇ ಚಳುವಳಿಗಳು ಬಳಕೆಯಾಗುತ್ತವೆ. ಹೋರಾಟಗಳು ಅಂಥಲ್ಲಿ ಗುಂಪುಹಿತಾಸಕ್ತವಾಗುತ್ತವೆ. ನಮ್ಮಲ್ಲಿ ಎಷ್ಟೋ ವೇಳೆ ಹೀಗೆ ಆಗಿದೆ ಕೂಡ.

ನಮ್ಮ ಸಮಾಜದ ವರ್ಗವಿನ್ಯಾಸ ಬಹಳ ಸಂಕೀರ್ಣ ಮತ್ತು ಚಲನಶೀಲವಾದದ್ದು. ನಿರಂತರ ಅಂತರ್‌ಬೆರಕೆ ಆಗುತ್ತಿರುವಂಥದ್ದು. ಸಾಗರದಲ್ಲಿ ತೆರೆಗಳು ಹುಟ್ಟಿ ಇಲ್ಲವಾಗುವ ಹಾಗೆ ಅವಕಾಶ ಮತ್ತು ಸೌಲಭ್ಯಗಳಿಗಾಗಿ ನಮ್ಮಲ್ಲಿ ವರ್ಗಗಳು ನಿರಂತರ ರಚನೆ ಮತ್ತು ನಿರಚನೆಗೊಳ್ಳುತ್ತಲಿವೆ. ಜಾತಿ, ಉಪಜಾತಿ, ಪ್ರದೇಶ, ಭಾಷೆ, ಧರ್ಮ, ಉದ್ಯೋಗ, ನಿರುದ್ಯೋಗ, ಬಡತನ, ಪಕ್ಷ, ವ್ಯಾಪಾರಿ ಸಂಸ್ಥೆಗಳು ಹೀಗೆ ಹಲವು ನೆಲೆಗಳಲ್ಲಿ ಅನಗತ್ಯ ಮತ್ತು ಅಗತ್ಯ ತಾರತಮ್ಯಗಳಿಂದ ಸದಾ ತೊಳಲುವ ಸಾಪೇಕ್ಷ ವರ್ಗವಿನ್ಯಾಸ ನಮ್ಮದು. ಇಂಥಲ್ಲಿ ಸ್ಥಳೀಯ, ರಾಷ್ಟ್ರೀಯ, ಅಂತಾರಾಷ್ಟ್ರೀಯ ಶೋಷಣೆಗಳ ವಿರುದ್ಧದ ಚಳವಳಿಗಳನ್ನು ಈ ಅಂತರ್‌ಬೆರಕೆಯ ವರ್ಗವಿನ್ಯಾಸಗಳು ಸದಾ ತಂತಮ್ಮ ಬಲವೃದ್ಧಿಗಾಗಿ ಮತ್ತು ಅಧಿಕಾರಕ್ಕಾಗಿ ಬಳಸಿಕೊಳ್ಳಲು ಯತ್ನಿಸುತ್ತಿರುತ್ತವೆ. ಜಾಗತಿಕ ವ್ಯಾಪಾರಿ ಮನೋಭಾವ ಮತ್ತು ಐಷಾರಾಮಿ ಬದುಕಿನ ಕಡೆಗಿನ ನಾಗಾಲೋಟವೂ ವರ್ಗಹಿತಗಳನ್ನೂ ಮೀರಿಸುವ ಅಮೂರ್ತ ಹುನ್ನಾರಗಳನ್ನು ಸದಾ ಹೂಡುತ್ತಿರುತ್ತದೆ ಕೂಡ. ತಮಗಾಗಿ ಏನನ್ನಾದರೂ ಪಡೆಯಲಿಕ್ಕೆಂದೇ ಚಳುವಳಿ ನಡೆಸುವುದು ನಮ್ಮ ಚಳುವಳಿ ಚರಿತ್ರೆಯ ವಾಸ್ತವವಾಗಿದೆ. ಇತರರಿಗಾಗಿ ವಂಚಿತ ಫಲಗಳನ್ನು ದೊರಕಿಸಿಕೊಡುವ ಚಳುವಳಿಗಳು ನಮ್ಮಲ್ಲಿ ಹೆಚ್ಚು ಬೆಳೆಯಬೇಕಿದೆ. ನರ್ಮದಾ, ಮಂಡಲ್, ಸೌಹಾರ್ದ ಚಳವಳಿಗಳ ಎದುರಿಗೆ ಇಂದಿನ ಅಹಿಂದ ಚಳವಳಿಯನ್ನು ಇಟ್ಟು ನೋಡಿದರೆ ಈ ವ್ಯತ್ಯಾಸ ತಿಳಿಯುತ್ತದೆ.

ಈಗ ದಲಿತ ಮತ್ತು ರೈತ ಚಳವಳಿಗಳು ಪರ್ಯಾಯ ರಾಜಕಾರಣವನ್ನು ಮಾಡಲು ಹೊರಟಿವೆ. ಸರ್ವೋದಯ ಕರ್ನಾಟಕವು ಬೌದ್ಧಿಕವಾಗಿ ತಾತ್ವಿಕತೆಯ ಚರ್ಚೆಯಲ್ಲಿ ಬಸವಳಿಯುತ್ತಿದೆ. ಪ್ರಜಾಪ್ರಭುತ್ವದಲ್ಲಿ ಪಕ್ಷಗಳು ಬಡಪಟ್ಟಿಗೆ ಬದುಕಲಾರವು. ಅದಕ್ಕೆ ತಲೆ-ತಲೆಮಾರುಗಳ ನಿರಂತರ ಡೆಡಿಕೇಟೆಡ್ ದುಡಿಮೆ ಅಗತ್ಯ. ಚುನಾವಣಾ ರಾಜಕೀಯವನ್ನು ಚಳುವಳಿಗಳು ಆರಿಸಿಕೊಂಡಾಗ ಸೋಲು ಗೆಲುವುಗಳು ರೊಟ್ಟಿ ಮೊಗುಚಿದ ಹಾಗೆ ಸಹಜ. ಚಳುವಳಿಗಳಿಗೆ ನಿಜವಾಗಿಯೂ ಮೊದಲ ಗುರಿ ರಾಜ್ಯ ಅಥವಾ ಕೇಂದ್ರದಲ್ಲಿ ಆಡಳಿತ ಹಿಡಿಯುವುದೇ ಆಗಕೂಡದು. ಮೊದಲು ಗ್ರಾಮವೇ ಕೇಂದ್ರವಾಗಬೇಕು. ಬೇರುಮಟ್ಟದಲ್ಲಿ ಜನಸಂಘಟನೆಯಾಗದೆ ಯಾವ ಚಳವಳಿಯೂ ಬರಿ ನಾಯಕರಿಂದಲೇ ನಡೆಯುವುದಿಲ್ಲ.

ನಾವು ನಂಬಲಿಕ್ಕಾಗದಷ್ಟು ಬೆಳವಣಿಗೆಗಳು ಈಗೀಗ ಹಳ್ಳಿಯಲ್ಲಿ ಪಂಚಾಯಿತಿ ರಾಜಕೀಯದಿಂದ ಉಂಟಾಗುತ್ತಿವೆ. ರಾಜಕೀಯ ಮೀಸಲಾತಿಯಿಂದ ಅಲ್ಲಿನ ಪಾರಂಪರಿಕ ಅಧಿಕಾರ ರಚನೆಗಳು ಬದಲಾಗುತ್ತಿವೆ. ಜಾತಿ, ಲಿಂಗ, ಭೂರಹಿತ ಬಡಸ್ಥಿತಿ ಇತ್ಯಾದಿ ಕಾರಣಗಳಿಗೆ ಶೋಷಣೆ, ಅವಮಾನಗಳಿಗೆ ಗುರಿಯಾಗುತ್ತಿದ್ದ ಜನ ಪಂಚಾಯಿತಿ ರಾಜಕೀಯದಿಂದ ಉಸಿರಾಡುವಂತೆ ಆಗುತ್ತಿದೆ. ಆರ್ಥಿಕ ಶ್ರೀಮಂತಿಕೆ, ಸಾಂಸ್ಕೃತಿಕ ಶ್ರೀಮಂತಿಕೆಗಳನ್ನೂ ಮೀರಿ ಸಾಮಾಜಿಕ ಗೌರವ ಗ್ರಾಮೀಣ ರಾಜಕೀಯಾಧಿಕಾರದಿಂದ ದಕ್ಕುತ್ತಿದೆ. ನಾನು ಹುಟ್ಟಿದ ಹಳ್ಳಿಯಲ್ಲಿ ತಲೆತಲಾಂತರಗಳಿಂದ ಅಧಿಕಾರ ನಡೆಸುತ್ತಿದ್ದ ಗೌಡ/ಪಟೇಲ, ಶಾನುಭೋಗರೆಲ್ಲ ಕವಡೆ ಕಿಮ್ಮತ್ತೂ ಇಲ್ಲದವರಾಗಿದ್ದಾರೆ. ಮೀಸಲಾತಿಯಿಂದ ರಾಜಕೀಯ ಅಧಿಕಾರಕ್ಕೆ ಬರುತ್ತಿರುವ ದಲಿತರು, ಹಿಂದುಳಿದವರು, ಹೆಂಗಸರು ಆ ಅಧಿಕಾರದ ಮೂಲಕವೇ ಅಂತಸ್ತು-ಆತ್ಮಗೌರವಗಳನ್ನು ಪಡೆಯುತ್ತಿದ್ದಾರೆ. ಹಳೆ ನಾಯಕರಿಂದ ಸಂಪೂರ್ಣ ಮುಕ್ತಿ ಪಡೆಯಲು ಆಗಿಲ್ಲವಾದರೂ ಜಾತಿ, ಲಿಂಗ, ಧಾರ್ಮಿಕ ಕಟ್ಟುಪಾಡುಗಳ ಮೂಲಕ ಆಗುವ ಅವಮಾನಗಳನ್ನು ದಾಟುವ ಮಟ್ಟಕ್ಕೆ ಬೆಳೆದಿದ್ದಾರೆ. ಆದರೆ ರಾಷ್ಟ್ರೀಯ ರಾಜಕಾರಣದ ಮಿನಿಯೇಚರ್‌ಗಳಂತೆ ಪಂಚಾಯಿತಿಗಳು ಆಗುತ್ತಿವೆ ಕೂಡ. ಹಾಗಿದ್ದೂ ಪಂಚಾಯಿತಿ ರಾಜಕೀಯವನ್ನು ಸ್ವಾವಲಂಬಿ ಚಳುವಳಿಯನ್ನಾಗಿ ರೂಪಿಸಲು ಈಗ ಕಾಲ ಹದವಾಗಿದೆ. ಗ್ರಾಮೀಣ ರಾಜಕೀಯವು ನಿರುದ್ಯೋಗಿಗಳ ಧಂಧೆಯಾಗುವುದನ್ನು ತಪ್ಪಿಸುವ ಜರೂರು ಇಂದು ಇದೆ. ದಲಿತ, ರೈತ ಚಳುವಳಿಗಳೂ ಒಳಗೊಂಡಂತೆ ಎಲ್ಲ ಜನಪರರೂ ಈ ಕಡೆಗೆ ಒತ್ತುನೀಡುವುದು ಒಳಿತು ಎನ್ನಿಸುತ್ತದೆ.

ಕೊನೆಗೊಂದು ಮಾತು: ನಮ್ಮ ಕವಿ ಹರಿಹರ ತನ್ನ ರಗಳೆಗಳಲ್ಲಿ ಒಂದು ಸಾಮಾನ್ಯವಾದ ವ್ಯಕ್ತಿತ್ವ ವಿಕಾಸ ಪ್ರಕ್ರಿಯೆಯನ್ನು ಚಿತ್ರಿಸಿದ್ದಾನೆ. ಅವನ ಎಲ್ಲ ಶರಣರೂ ಮಾನವರಾಗಿ ಹುಟ್ಟಿ ಈ ಲೋಕದ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸುತ್ತ, ಅನುಭವಿಸುತ್ತ ಮಾಗಿ ಕೊನೆಗೆ ದೇವರುಗಳೇ ಆಗಿಬಿಡುತ್ತಾರೆ. ಮಾನವನು ಸುತ್ತಣ ದೌರ್ಬಲ್ಯಗಳನ್ನೆಲ್ಲ ದಾಟಿ ದೇವರೇ ಆಗಿಬಿಡುವ ಈ ಪ್ರಕ್ರಿಯೆ ವ್ಯಕ್ತಿತ್ವ ವಿಕಾಸದ ಔನ್ನತ್ಯವಾಗಿದೆ. ಸಮಾಜದ ಪ್ರತಿಯೊಬ್ಬನೂ ಹೀಗೆ ಪ್ರಜಾಪ್ರಭುತ್ವದಲ್ಲಿ ದೇವರಾಗುವುದು ಅಸಾಧ್ಯದ ಮಾತಾದೀತು. ಆದರೆ ಪ್ರತಿಯೊಬ್ಬರೂ ಇನ್ನಷ್ಟು ಮತ್ತಷ್ಟು ಮಾನವೀಯವಾಗದ ಹೊರತು ಪ್ರಜಾಪ್ರಭುತ್ವದ ಫಲಗಳು ಕಟ್ಟಕಡೆಯ ಪ್ರಜೆಗಳಿಗೆ ತಲುಪಲು ಸಾಧ್ಯವಿಲ್ಲ. ನಿಜವಾಗಿಯೂ ನಮ್ಮ ಚಲನೆ ಅಂತಿಮವಾಗಿ ಚಳವಳಿಗಳೇ ಇಲ್ಲದ ನೆಮ್ಮದಿ ಸ್ಥಿತಿಯ ಕಡೆಗೆ ಸಾಗಬೇಕಿದೆ. ಹಾಗಾಗಲು ಪ್ರತಿಯೊಬ್ಬರೂ ಮಾನವೀಯರಾಗುವ ಅಗತ್ಯವಿದೆ.

ರಾಮಲಿಂಗಪ್ಪ ಟಿ. ಬೇಗೂರು, ಹಿರಿಯ ಶ್ರೇಣಿ ಕನ್ನಡ ಉಪನ್ಯಾಸಕರು
ಸರ್ಕಾರಿ ಬಾಲಕರ ಕಾಲೇಜು, ಕೋಲಾರ - ೫೬೩ ೧

# ತಾತ್ವಿಕ ನೆಲೆಗಟ್ಟು

ನಮ್ಮಲ್ಲಿ ಸಿದ್ಧಗೊಂಡಿರುವ ವ್ಯವಸ್ಥೆಯ ಮೂಲಭೂತ ಆಯಾಮ: ಸಾಮಾಜಿಕ-ಆರ್ಥಿಕ ಅಸಮಾನತೆ ಮತ್ತು ಅದರಿಂದ ಉದ್ಭವಿಸುವ ವರ್ಗಶೋಷಣೆ. ಸಮಾಜದ ಸಾಂಸ್ಕೃತಿಕ, ಧಾರ್ಮಿಕ ಇನ್ನಿತರ ಆಯಾಮಗಳು ವರ್ಗಶೋಷಣೆಯನ್ನು ಮುಂದುವರಿಸುವ ನಿಟ್ಟಿನಲ್ಲಿ ಸಿದ್ಧಗೊಂಡಿವೆ. ಈ ವ್ಯವಸ್ಥೆ ತನ್ನ ಉಳಿವಿಗಾಗಿ ಜಾತಿ, ಪ್ರಾಂತೀಯತೆ, ಭಾಷಾಭಿಮಾನ, ಮೂಲಭೂತವಾದ, ಇನ್ನಿತರ ಧೋರಣೆಗಳನ್ನು ಬಲಗೊಳಿಸುತ್ತ ಸಮಯಕ್ಕೆ ತಕ್ಕಂತೆ ಅಸ್ತ್ರಗಳನ್ನಾಗಿ ಬಳಸುತ್ತದೆ. ಹಾಗೂ ಪ್ರಭುತ್ವವು ಶೋಷಣೆಯನ್ನು ಮುಂದುವರಿಸಲು ತನ್ನೆಲ್ಲಾ ಅಂಗಗಳನ್ನು ಹಾಗೂ ಅಧಿಕಾರವನ್ನು ಉಪಯೋಗಿಸುತ್ತದೆ. ಶೋಷಣೆಯನ್ನು ಮುಂದುವರಿಸಲು ರಾಜ್ಯ ತಾನು ಮಾಡುವ ಕಾರ್ಯಗಳನ್ನು ಹಿಂಸೆ-ಅಹಿಂಸೆ, ನ್ಯಾಯ-ಅನ್ಯಾಯ, ಧರ್ಮ-ಅಧರ್ಮ ಎನ್ನುವ ಚೌಕಟ್ಟುಗಳಲ್ಲಿ ವಿಶ್ಲೇಷಿಸುವ ಗೋಜಿಗೆ ಹೋಗುವುದಿಲ್ಲ. ವ್ಯವಸ್ಥೆಯನ್ನು ಮುಂದುವರಿಸಲು ಯಾವ ಅಸ್ತ್ರವನ್ನಾದರೂ ಉಪಯೋಗಿಸಬಹುದು : ಅದೇ ನ್ಯಾಯ, ಅದೇ ಸಾಮಾಜಿಕ ನ್ಯಾಯ, ಅಹಿಂಸೆ; ಅದೇ ಧರ್ಮ !

ಹೀಗೆ ಸಿದ್ಧಗೊಂಡಿರುವ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವ ತನ್ನ ವಿಕಾಸಶೀಲತೆಯನ್ನು ಪಡೆಯುತ್ತಿದೆ. ಪ್ರಜಾಪ್ರಭುತ್ವದ ತಾತ್ವಿಕ ನೆಲೆಗಟ್ಟು ವ್ಯವಸ್ಥೆಯನ್ನು ಶೋಷಣಾರಹಿತಗೊಳಿಸಿ, ವ್ಯಕ್ತಿ ಸ್ವಾತಂತ್ರ್ಯವನ್ನು ರೂಪಿಸಿ ಸಮಾನತೆಯ ಕಡೆ ಒಯ್ಯುವ ಧ್ಯೇಯ ಉಳ್ಳದ್ದು. ಆದರೆ ಈಗ ಭಾರತದಲ್ಲಿ ಸಿದ್ಧಗೊಂಡಿರುವ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವವೂ ಸಹ ಶೋಷಣಾ ವ್ಯವಸ್ಥೆಯನ್ನು ಮುಂದುವರಿಸುವ ಅಸ್ತ್ರವಾಗಿ ಕೆಲಸಮಾಡುವ ಗಂಡಾಂತರವನ್ನು ಎದುರಿಸುತ್ತಿದೆ.

ಪ್ರಜಾಪ್ರಭುತ್ವವನ್ನು ಈ ಗಂಡಾಂತರದಿಂದ ತಪ್ಪಿಸಲು ಹಾಗೂ ಅದರ ವಿಕಾಸಶೀಲತೆಯ ಮೂಲಕ ಕಟ್ಟಕಡೆಯ ಮನುಷ್ಯನಿಗೂ ಭವ್ಯ ಬದುಕನ್ನು ನೀಡುವ ಉದ್ದೇಶದಿಂದ, ಹಲವಾರು ಚಳವಳಿಗಳು ನಡೆದಿವೆ. ಆದರೆ ನಮ್ಮ ರಾಷ್ಟ್ರದಲ್ಲಿ ನಡೆದಿರುವ ಹೆಚ್ಚಿನ ಚಳವಳಿಗಳು ಬಹಳಮಟ್ಟಿಗೆ ತಾತ್ವಿಕ ನೆಲೆಯಲ್ಲಿಯೇ ನಮ್ಮ ವ್ಯವಸ್ಥೆಯ ಮೇಲ್ಮೈಯಲ್ಲಿ ಕಾಣಿಸಿಕೊಳ್ಳುವ ರೋಗಗ್ರಸ್ತ ಲಕ್ಷಣಗಳನ್ನು ಅಲ್ಪಸ್ವಲ್ಪ ಸರಿಪಡಿಸುವ ಧ್ಯೇಯವನ್ನು ಹೊಂದಿರುವುವೇ ಹೊರತು ವ್ಯವಸ್ಥಿತವಾಗಿ ರೋಗಗ್ರಸ್ತ ವ್ಯವಸ್ಥೆಯನ್ನೇ ನಿಯಂತ್ರಿಸುವ ಹಾಗೂ ಮುಂದುವರಿಸುವ ಮೂಲಭೂತ ಕಾರಣಗಳನ್ನು ನಿರ್ನಾಮ ಮಾಡಿ ಆರೋಗ್ಯಕರ ವ್ಯವಸ್ಥೆಯನ್ನು ರೂಪಿಸುವ ಹೋರಾಟದ ನೆಲೆಗಳನ್ನು ಹೊಂದಿಲ್ಲ. ಈ ನಿಲುವು ನಮ್ಮ ಚಳವಳಿಗಳ ತಾತ್ವಿಕ ನೆಲೆಗಟ್ಟಿನಲ್ಲಿ ಗಟ್ಟಿಯಾಗಲಿಕ್ಕೆ ಒಂದು ಬಲವಾದ ಕಾರಣ : ಭಾರತದ ಸಾಮಾನ್ಯ ಪ್ರಜೆಯನ್ನು ಜಾಗತಿಕ ಚರಿತ್ರೆಯ ಬೆಳವಣಿಗೆಗಳ ಜ್ಞಾನದಿಂದ ಆಳುವ ವರ್ಗ ತನ್ನ ಹಿತಾಸಕ್ತಿಯನ್ನು ಮುಂದುವರಿಸಲು ವಂಚಿತಗೊಳಿಸಿರುವುದು.

ಸಾಮಾಜಿಕ ವಿಕಾಸಶೀಲತೆಯ ಚಾರಿತ್ರಿಕ ಸಾಪೇಕ್ಷತೆ ಹಾಗೂ ಅಭಿವ್ಯಕ್ತಿ ಗುರುತಿಸುವ ಹಿನ್ನೆಲೆಯಲ್ಲಿ, ನಮ್ಮ ಹೋರಾಟದ ಮಾರ್ಗಗಳು ಮತ್ತು ಅವುಗಳ ತಾತ್ವಿಕ ನೆಲೆಗಟ್ಟು ನಮ್ಮ ವ್ಯವಸ್ಥೆಯ ರಚನೆಯನ್ನು ರೂಪಿಸುತ್ತಿರುವ ಶಕ್ತಿಗಳಿಂದಲೇ ಬಹಳಮಟ್ಟಿಗೆ ನಿರ್ಧರಿಸಲ್ಪಡುತ್ತವೆ. ಆದರೆ ನಮ್ಮ ಹೋರಾಟದ ಮೂಲಕ ಕಟ್ಟಕಡೆಯ ಮನುಷ್ಯನ ಆಮೂಲಾಗ್ರ ಬೆಳವಣಿಗೆಯನ್ನೂ ಧ್ಯೇಯವಾಗಿಟ್ಟುಕೊಂಡರೆ, ನಮ್ಮ ಬೆನ್ನಿಗಿರುವ ಗಾಂಧಿ, ಅಂಬೇಡ್ಕರರ ತಾತ್ವಿಕ ನೆಲೆಗಳ ಹಾಗೂ ಅವುಗಳಿಂದ ರೂಪಿಸಲ್ಪಡುವ ಚಳವಳಿಗಳ, ಹೋರಾಟಗಳ ಹಾಗೂ ತೀವ್ರ ಮಾರ್ಗಗಳ ಸಮಂಜಸತೆಯನ್ನು ಇಂದು ಸಿದ್ಧಗೊಂಡಿರುವ ವ್ಯವಸ್ಥೆಯ ಚೌಕಟ್ಟಿನಲ್ಲಿ ನಿರ್ಧರಿಸಬೇಕು : ವ್ಯವಸ್ಥೆಯನ್ನು ಇಂದು ನಿಯಂತ್ರಿಸುತ್ತಿರುವ ಶಕ್ತಿಗಳ ಧ್ಯೇಯೋದ್ದೇಶಗಳಲ್ಲಿ ಕಟ್ಟಕಡೆಯ ಮನುಷ್ಯನಿಗೆ ಪ್ರಜಾಪ್ರಭುತ್ವದ ವಿಕಾಸಶೀಲತೆಯ ಮೂಲಕ ವ್ಯವಸ್ಥೆಯಲ್ಲಾಗುವ ಬೆಳವಣಿಗೆಯ ಫಲ ಮುಟ್ಟಬೇಕೆಂದಿದೆಯೇ ? ಹಾಗೂ ಇಂದು ರಾಜ್ಯದ ಪಾತ್ರವೇನು ? ಅಸಮಾನತೆಯನ್ನು ಇಲ್ಲವಾಗಿಸಲು ರಾಜ್ಯ ತನ್ನ ಶಕ್ತಿಯನ್ನು ಎಲ್ಲಾದರೂ ಗಂಭೀರವಾಗಿ ಉಪಯೋಗಿಸಿ ಆಳುವ ವರ್ಗಕ್ಕೆ ನೋವನ್ನುಂಟುಮಾಡಿದೆಯೇ ? ಅಸಮಾನತೆಯನ್ನು ಮುಂದುವರಿಸುವಲ್ಲಿ ಅನುಸರಿಸುವ ಮಾರ್ಗಗಳು ಹಿಂಸಾತ್ಮಕವಲ್ಲವೇ ? ಈ ಹಿನ್ನೆಲೆಯಲ್ಲಿ ಗಾಂಧಿ, ಅಂಬೇಡ್ಕರರ ತಾತ್ವಿಕ ನೆಲೆಗಟ್ಟನ್ನು ವಿಶ್ಲೇಷಿಸಿ ಆ ತಾತ್ವಿಕ ನೆಲೆಗಳಿಂದ ರೂಪಿಸಲ್ಪಡುವ ಚಳವಳಿಗಳ, ಹೋರಾಟಗಳ ಫಲಗಳು ಕಟ್ಟಕಡೆಯ ಮನುಷ್ಯನನ್ನು ಮುಟ್ಟಲು ಸಾಧ್ಯವೆ ಎಂದು ನಿರ್ಣಯಿಸಬೇಕು : ನಮ್ಮಲ್ಲಿ ಕೆಲವು ಬುದ್ಧಿಜೀವಿಗಳು, ಸಮಾಜೋದ್ಧಾರಕರು ಹೇಳುವ ಹಾಗೆ ಗಾಂಧಿ, ಅಂಬೇಡ್ಕರರ ತಾತ್ವಿಕ ಹಿನ್ನೆಲೆಯಲ್ಲಿ ವ್ಯವಸ್ಥೆಯನ್ನು ಬದಲಾಯಿಸಿದರೆ ಕಟ್ಟಕಡೆಯ ಮನುಷ್ಯನ ಬೆಳವಣಿಗೆ ಸಾಧ್ಯವಾಗುವುದಾದರೆ ನಾವು ಅವರ ತತ್ವಗಳನ್ನು ಯಾತಕ್ಕಾಗಿ ಅನುಷ್ಠಾನಕ್ಕೆ ತಂದಿಲ್ಲ? ಈ ಕ್ರಿಯೆಗೆ ಅಡ್ಡಪಡಿಸುವ ಶಕ್ತಿಗಳಾವುವು ? ಅಂತಹ ಶಕ್ತಿಗಳನ್ನು ಗುರುತಿಸಿದರೆ ನಿಯಂತ್ರಿಸಲು ಸಾಧ್ಯವೆ ? ವ್ಯವಸ್ಥೆಯನ್ನು ಆಳುತ್ತಿರುವ ಶಕ್ತಿಗಳು ಅಂತಹ ಬದಲಾವಣೆ ತರಲು ಪರವಾನಿಗೆ ಕೊಡುತ್ತವೆಯೆ ?

ಒಂದು ದೃಷ್ಟಿಯಲ್ಲಿ ಗಾಂಧಿ-ಅಂಬೇಡ್ಕರರ ವಾದಗಳು ಬುದ್ಧ-ಬಸವರ ಪರಿಹಾರಗಳಂತೆ ಧಾರ್ಮಿಕ ನೆಲೆಗೆ ಜಾರುತ್ತಿವೆ : ವ್ಯವಸ್ಥೆಯನ್ನು ಸರಿಪಡಿಸಲು ಅವರು ಬೋಧಿಸುವ ಪರಿಹಾರಗಳು ವ್ಯವಸ್ಥೆಯ ವಿರೋಧವಾಗಿದ್ದರೂ, ಪರಿಹಾರಗಳನ್ನು ಅನುಷ್ಠಾನಕ್ಕೆ ತರುವ ಮಾರ್ಗಗಳು ವ್ಯಕ್ತಿಗತ : ವ್ಯಕ್ತಿ ಆಸೆಯನ್ನು ಬಿಡಬೇಕು; ಮಾನವತೆಯನ್ನು ಬೆಳೆಸಿಕೊಳ್ಳಬೇಕು; ತನ್ನ ಸಂಪನ್ಮೂಲಗಳನ್ನು ಸಮಾಜದ ಒಳಿತಿಗಾಗಿ ನಿಯೋಜಿಸಬೇಕು; ತನ್ಮೂಲಕ ಸಮಾನತೆಯನ್ನು ರೂಪಿಸಬೇಕು. ಆದುದರಿಂದ ಅನುಷ್ಠಾನಕ್ಕೆ ಮುಂದಿಟ್ಟಿರುವ ಮಾರ್ಗಗಳು ವ್ಯವಸ್ಥೆಯ ಪರ...ವ್ಯವಸ್ಥೆಯನ್ನು ಮುಂದುವರಿಸಲು ಅನುವು ಮಾಡಿಕೊಡುವಂತಹವು. ಆದುದರಿಂದ ಈ ಧ್ಯೇಯಗಳು ಆಳುವ ವರ್ಗಗಳ ವಿರೋಧವಿರುವುದರಿಂದ, ಧ್ಯೇಯಗಳನ್ನು ಅನುಷ್ಠಾನಕ್ಕೆ ತರುವ ಮಾರ್ಗಗಳು ಯಾವುದೇ ಸಾಮೂಹಿಕ ಶಕ್ತಿಯಿಂದ ನಿಯಂತ್ರಿಸಲ್ಪಡದೇ ವ್ಯಕ್ತಿಯ ಸ್ವನಿರ್ಧಾರಕ್ಕೆ ಒಳಗಾಗಿರುವುದರಿಂದ, ಅನುಷ್ಠಾನವಾಗುವುದಿಲ್ಲ. ಅನುಷ್ಠಾನವಾಗದೇ ಶೋಷಿತರು ತಮ್ಮ ನೋವನ್ನು ಸಹಿಸಿಕೊಳ್ಳಲು ಸಹಾಯವಾಗುತ್ತೆ : ಧರ್ಮ ತಾತ್ವಿಕವಾಗಿ ತಮ್ಮ ಪರವಾಗಿರುತ್ತದೆ ಎಂದು. ಹಾಗೆಯೇ, ಅನುಷ್ಠಾನವಾಗದೇ ಇದ್ದರೂ ಶೋಷಕನ ಅನಿರ್ಬಂಧಿತ ಶೋಷಣೆಗೆ ರಕ್ಷಾಕವಚವಾಗಿ ಕೆಲಸಮಾಡುತ್ತದೆ. ಆದುದರಿಂದ ಇಂತಹ ತಾತ್ವಿಕ ನೆಲೆಗಟ್ಟುಗಳು, ವಾದಗಳು ಆಳುವ ವರ್ಗಗಳಿಂದ ಶಾಶ್ವತ ಸಮಂಜಸತೆಯನ್ನು ಪಡೆದು ಧಾರ್ಮಿಕ ನೆಲೆಗೆ ಜಾರುತ್ತವೆ.

ಈ ಹಿನ್ನೆಲೆಯಲ್ಲಿ ಚಳವಳಿಗಳ ಚಾರಿತ್ರಿಕ ಸಮಂಜಸತೆಯನ್ನು ಅಳೆಯಬೇಕಾಗುತ್ತದೆ. ಅಸಮಾನತೆಯ ತಳಹದಿಯನ್ನು ಪಡೆದ ಹಾಗೂ ಅಂತಹ ತಳಹದಿಯನ್ನು ಮುಂದುವರಿಸಲು ರಾಜ್ಯದ ಕುಮ್ಮಕ್ಕೂ ಇದ್ದರೆ, ಹಿಂಸೆ-ಅಹಿಂಸೆ, ಧರ್ಮ-ಅಧರ್ಮಗಳ ವಿಶ್ಲೇಷಣೆಗೆ ಬೇರೊಂದು ಚೌಕಟ್ಟು ರೂಪಿಸಬೇಕಾಗುತ್ತದೆ. ಇಂತಹ ಚಾರಿತ್ರಿಕ ಸಂದರ್ಭದಲ್ಲಿ, ಹಿಂಸೆಯ ತಳಹದಿಯನ್ನು ಹೊಂದಿರುವ ಸಮಾಜದಲ್ಲಿ ಅಹಿಂಸೆಯ ಪರವಾಗಿ ವಾದಿಸುವ ಎಲ್ಲಾ ತಾತ್ವಿಕ ನೆಲೆಗಳೂ ಹಿಂಸೆಯನ್ನು ಸಮರ್ಥಿಸಿ ಶೋಷಣೆಯನ್ನು ಮುಂದುವರಿಸುವ ಉದ್ದೇಶಗಳನ್ನು ಹೊಂದಿವೆಯೆಂದು ಅರ್ಥೈಸುವುದು ಕಷ್ಟವಲ್ಲ.

ನಮ್ಮ ಚಳವಳಿಗಳನ್ನು ರೂಪಿಸುವಲ್ಲಿ (ಕಟ್ಟಕಡೆಯ ಮನುಷ್ಯನ ಬೆಳವಣಿಗೆಯನ್ನೂ ನಾವು ಮಾಡಬೇಕಾದರೆ) ಇನ್ನೊಂದು ಮುಖ್ಯ ಅಂಶವನ್ನು ನಾವು ಇಂದಿನ ಜಾಗತಿಕ ಚರಿತ್ರೆಯ ಹಿನ್ನೆಲೆಯಲ್ಲಿ ಕಲಿಯಬೇಕಾಗುತ್ತದೆ : ಜಾಗತೀಕರಣ. ಜಾಗತೀಕರಣ ಇಂದು ವೈಜ್ಞಾನಿಕ, ತಾಂತ್ರಿಕ ಜ್ಞಾನವನ್ನೆಲ್ಲಾ ಉಪಯೋಗಿಸಿಕೊಂಡು, ವಿಶ್ವದ ರಾಷ್ಟ್ರಗಳನ್ನು ಮಾರುಕಟ್ಟೆಗಳಾಗಿ ಪರಿವರ್ತಿಸಿ, ಶೋಷಣೆಯನ್ನು ದೃಢೀಕರಿಸಿ ಮುಂದುವರಿಸುವ ಬಹುರಾಷ್ಟ್ರೀಯ ಕಂಪನಿಗಳ ಅಸ್ತ್ರ. ಈ ಶೋಷಣೆಯ ಜಾಲ ಇಡೀ ಜಗತ್ತನ್ನೇ ಆವರಿಸಿದೆ. ಈ ಸಂದರ್ಭದಲ್ಲಿ ನಮ್ಮ ಚಳವಳಿಗಳ, ಹೋರಾಟಗಳ ತಾತ್ವಿಕತೆ, ಸ್ವರೂಪ ಹೇಗಿರಬೇಕು ? ಅನಿವಾರ್ಯವಾಗಿಯೇ ಶೋಷಿತ ಸಮುದಾಯದ ಸಮಸ್ತರ ಹಿತಕ್ಕೆ ದುಡಿಯುವ ತಾತ್ವಿಕ ನೆಲೆಗಟ್ಟು ನಮ್ಮ ಚಳವಳಿಗಳಿಗೆ ಅಗತ್ಯ. ಈಗ ಜಾತಿ, ಭಾಷೆ, ಧರ್ಮ, ಪ್ರಾಂತೀಯತೆ, ರಾಷ್ಟ್ರೀಯತೆಯ ಚೌಕಟ್ಟುಗಳಲ್ಲಿ (ಜಾಗತೀಕರಣದ ಹಿನ್ನೆಲೆಯಲ್ಲಿ ಭಾರತವೂ ಸಹ ಒಂದು ಮಾರುಕಟ್ಟೆಯಾಗಿ ಪರಿವರ್ತಿತವಾಗಿರುವುದನ್ನು ಗುರುತಿಸಬೇಕು) ಛಿದ್ರವಾಗಿ ಇರುವ ಪ್ರಜ್ಞೆಯನ್ನು ವರ್ಗಪ್ರಜ್ಞೆಯ ಚೌಕಟ್ಟಿನಲ್ಲಿ ಪುನಃರೂಪಿಸಿದಲ್ಲಿ ನಮ್ಮ ಚಳವಳಿಗಳು ಕಟ್ಟ ಕಡೆಯ ಮನುಷ್ಯನನ್ನೂ ಸಹ ಒಬ್ಬ ಪ್ರಜ್ಞಾವಂತ ಪೌರನನ್ನಾಗಿ ಮಾಡಲು ಸಾಧ್ಯ. ಇಂತಹ ಚಳವಳಿಗಳನ್ನು ರೂಪಿಸಲು ಸಮಾಜವಾದದ ನೆಲೆಯೊಂದೇ ಮಾರ್ಗ. ಭಾರತದ ಎಡ ರಾಜಕೀಯ ಪಕ್ಷಗಳು ಈ ಕಾರ್ಯದಲ್ಲಿ ತೊಡಗಿವೆ.

ಇತ್ತೀಚಿನ ಚಳವಳಿಗಳಲ್ಲಿ ಸಮಾಜವಾದದ ಧ್ಯೇಯೋದ್ದೇಶಗಳ ನೆಲೆಯಲ್ಲಿ ರೂಪಿಸಲ್ಪಟ್ಟ ಸಾಹಿತ್ಯಿಕ ಚಳವಳಿ ಬಂಡಾಯ ಸಾಹಿತ್ಯ ಚಳವಳಿ : ಜಾಗತಿಕ ಚರಿತ್ರೆಯ ಬೆಳವಣಿಗೆಗಳನ್ನೆಲ್ಲಾ ಗಂಭೀರವಾಗಿ ಪರಿಗಣಿಸಿ (ಮುಖ್ಯವಾಗಿ ೨೦ನೇ ಶತಮಾನದಲ್ಲಾದ ಕ್ರಾಂತಿಕಾರಕ ಚಳವಳಿಗಳು) ಮಾನವನ ಅನುಭವವನ್ನು ಸಮಾಜವಾದಿ ವಾಸ್ತವದ ನೆಲೆಯಲ್ಲಿ, ಕಲಾತ್ಮಕ ಚೌಕಟ್ಟಿನಲ್ಲಿ ಜನರ ಮುಂದಿಡುವ ಯತ್ನ : ಮನುಷ್ಯನಲ್ಲಿ ಕೆಲವು ಅನುಭವಗಳ ಸಾಧ್ಯತೆಯನ್ನೇ ಅದುಮಿಟ್ಟಿದ್ದ ಊಳಿಗಮಾನ್ಯ, ಬಂಡವಾಳಶಾಹಿ ವ್ಯವಸ್ಥೆಗಳ ಮೌಲ್ಯಗಳಿಂದ ವ್ಯಕ್ತಿಯ ಪ್ರಜ್ಞೆಯನ್ನು ಸ್ವತಂತ್ರಗೊಳಿಸಿ, ವ್ಯಕ್ತಿ ತಾನು ಈ ಸಮಾಜವನ್ನು ರೂಪಿಸುವವನೆನ್ನುವ ಪ್ರಜ್ಞೆಯನ್ನು ಅವನ ಅನುಭವಕ್ಕೆ ಸಿಗುವಂತೆ ಮಾಡುತ್ತಾ, ಸಮಾನತೆಯ ಕಡೆ ದಿಟ್ಟ ಹೆಜ್ಜೆ ಇಡಲು ಅನುವು ಮಾಡಿಕೊಡುವ ಒಂದು ಕಲಾತ್ಮಕ, ಸೃಜನಾತ್ಮಕ ಯತ್ನ.

ಒಂದೂವರೆ ದಶಕದ ಕಾಲ ಸಕ್ರಿಯವಾಗಿ ಬೆಳೆದು, ಸಮಾಜವಾದಿ ರಾಷ್ಟ್ರಗಳು,

ಮುಖ್ಯವಾಗಿ ಸೋವಿಯತ್ ರಷ್ಯಾ ಬಿದ್ದುಹೋದ ಹಿನ್ನೆಲೆಯಲ್ಲಿ ಹಾಗೂ ಜಾಗತೀಕರಣದ ವಿಕಿರಣತೆಯಿಂದ ವ್ಯಕ್ತಿಯ ಮತ್ತು ರಾಷ್ಟ್ರದ ಅನನ್ಯತೆಯ ನಷ್ಟದ ಹಿನ್ನೆಲೆಯಲ್ಲಿ ಸೊರಗಿ ಯುವ ಬರಹಗಾರರನ್ನು ಆಕರ್ಷಿಸುವಲ್ಲಿ ಸೋತಿದೆ. ಆದರೆ ಜಾಗತೀಕರಣ ಮತ್ತೊಮ್ಮೆ ಸಮಾಜವಾದಕ್ಕೆ ಚಾಲನೆ ಈಯುವುದರಲ್ಲಿ ಸಂದೇಹವಿಲ್ಲ. ಏಕೆಂದರೆ ಜಾಗತೀಕರಣ, ನವಸಾಮ್ರಾಜ್ಯಶಾಹಿಯ ಅಸ್ತ್ರ ತನ್ನ ಒಳವೈರುಧ್ಯಗಳಿಂದ ಒಡೆದು ಹೆಚ್ಚು ಹೆಚ್ಚಾಗಿ ಅಮಾನವೀಯವಾಗುತ್ತಾ ಸಾಗುತ್ತಿದ್ದ ಹಾಗೆ ಅದನ್ನು ಮಾನವೀಕರಿಸಲು ಇರುವ ಏಕೈಕ ಮಾರ್ಗ ಸಮಾಜವಾದ. ಬಂಡಾಯ ಸಾಹಿತ್ಯ ಮತ್ತೊಮ್ಮೆ ಚಳವಳಿಯಾಗಿ ಬಲಗೊಂಡು ಶೋಷಣೆಯ ಪರವಾಗಿ ಕ್ರಿಯಾತ್ಮಕವಾಗಿರುವ ಪ್ರಜ್ಞೆಯ ಎಲ್ಲಾ ಆಯಾಮಗಳನ್ನು ಮಸುಕಿಗೆ ತಳ್ಳುವುದರಲ್ಲಿ ಸಂದೇಹವಿಲ್ಲ.

**ಡಾ|| ಬಿ. ಕೃಷ್ಣಮೂರ್ತಿ,** ಸಪ್ತಾಪುರ, ೧೦ನೇ ಕ್ರಾಸ್, ಧಾರವಾಡ - ೫೮೦ ೦೦೧

## 'ಪ್ರಜಾಪ್ರಭುತ್ವ' ಮತ್ತು ಹೋರಾಟಗಳು

'ಪ್ರಜಾಪ್ರಭುತ್ವ' ಎಂಬುದು ಶೈಕ್ಷಣಿಕವಾಗಿ ವಿದ್ಯಾರ್ಥಿಗಳಿಗೆ ಕಂಠಪಾಠ ಮಾಡಿಸಿ, ಅವರಿಗೆ ಪ್ರಶ್ನೆ ಕೇಳಿ, ಉತ್ತರ ಪಡೆಯಲು ಸೀಮಿತವಾಗಿದೆ. 'ಪ್ರಜಾಪ್ರಭುತ್ವ' ಎಂಬುದರ ಬಗ್ಗೆ ನಾನು ವಿದ್ಯಾರ್ಥಿಯಾಗಿದ್ದಾಗ ಕಂಠಪಾಠ ಮಾಡಿಕೊಂಡಿದ್ದ ಹೇಳಿಕೆ ನೆನಪಿನಲ್ಲಿದೆ! ಆದರೆ ಆ ಹೇಳಿಕೆಗೆ ಒಂದು ಸಾಸಿವೆ ಕಾಳಿನಷ್ಟೂ ಹೊಂದಿಕೊಳ್ಳಲಾರದ ಕ್ರೂರವಾದ ವಿಕೃತವಾದ ವಾಸ್ತವ ನಮ್ಮ ಕಣ್ಣ ಮುಂದಿದೆ; ನಮ್ಮ ಹಿಂಸಾತ್ಮಕ ಅನುಭವದಲ್ಲಿದೆ. ಹಾಗಾಗಿ ನಮ್ಮ ಹಿಂಸಾತ್ಮಕ ಅನುಭವಕ್ಕೆ ಮೋಸ ಮಾಡಿ, ಪರೀಕ್ಷೆಗಾಗಿ ಕಂಠಪಾಠ ಮಾಡಿದ್ದ ಆಧಾರದಲ್ಲಿ ಪ್ರಜಾಪ್ರಭುತ್ವವನ್ನು ವಿವರಿಸುವುದು ಮತ್ತು ಒಪ್ಪುವುದು ಸರಿಯಲ್ಲ. ನಮ್ಮ ಹಿಂಸಾತ್ಮಕ ಅನುಭವವೇ ವಾಸ್ತವದಲ್ಲಿ ನಿಜವಿದ್ದರೆ ಇದನ್ನು 'ಪ್ರಜಾಪ್ರಭುತ್ವ' ಎನ್ನುವ ಬದಲು ಪ್ರಭುಪ್ರಭುತ್ವ ಎಂದು ಕರೆಯಬೇಕಾಗುತ್ತದೆ.

'ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ, ಪ್ರಜೆಗಳಿಂದಲೇ ನಡೆಯುವ ಸರಕಾರಿ ಯಂತ್ರಾಂಗಕ್ಕೆ ಪ್ರಜಾಪ್ರಭುತ್ವ' ಎಂದು ಕರೆಯುತ್ತಾರಂತೆ. ಇದನ್ನೇ ನಾವು ಅಂದು ಓದಿದ್ದು; ಮತ್ತು ಇಂದು ಸಾವಿರಾರು ಮಂದಿ ವಿದ್ಯಾರ್ಥಿಗಳು ಕಂಠಪಾಠ ಮಾಡುತ್ತಿರುವುದು. ಮೇಲಿನ ಆ ಹೇಳಿಕೆ ವಾಸ್ತವ ಜಗತ್ತಿನಲ್ಲಿ ನಿಜವಾಗಿ ಇದ್ದಿದ್ದರೆ ಈ ವ್ಯವಸ್ಥೆಯಲ್ಲಿ ಯಾವುದೇ ಹೋರಾಟದ ಅವಶ್ಯಕತೆ ಇರುತ್ತಿರಲಿಲ್ಲ. ಶ್ರೀಮಂತರು, ಜಮೀನುದಾರರು ಮತ್ತು ಐಟಿ ಬಿಟಿ ದೊರೆಗಳು ತಮಗಾಗಿ, ಬಹುರಾಷ್ಟ್ರೀಯ ಕಂಪನಿಗಳಿಗಾಗಿ ಮತ್ತು ಸಾಮ್ರಾಜ್ಯಶಾಹಿಯ ಸುಲಿಗೆಗಾಗಿ ಕೇವಲ ಒಂದು ಮಧ್ಯವರ್ತಿಯಾಗಿ ಸರಕಾರವನ್ನು ಇಟ್ಟುಕೊಂಡಿದ್ದಾರೆ. ಎಲ್ಲಾ ಬಗೆಯ ಸಂಪತ್ತು ಮತ್ತು ಆಸ್ತಿಪಾಸ್ತಿಗಳು ಖಾಸಗಿ ಒಡೆತನದಲ್ಲಿದ್ದರೆ ಆ ವ್ಯವಸ್ಥೆಯಲ್ಲಿ ಅಧಿಕಾರ ಕೂಡ ಖಾಸಗಿಯವರ ಕೈಯಲ್ಲಿರುತ್ತದೆ. ಎಲ್ಲಾ ಬಗೆಯ ಹೋರಾಟಗಳು ಅಪ್ರಜ್ಞಾಪೂರ್ವಕವಾಗಿ ಹಾಗೂ ಅಘೋಷಿತವಾಗಿ ಖಾಸಗಿ ಆಸ್ತಿ ಮತ್ತು ಖಾಸಗಿ ಅಧಿಕಾರದ ಪರ ಅಥವಾ ವಿರುದ್ಧ ಭುಗಿಲೇಳುತ್ತಿರುತ್ತವೆ.

ಇಂದು ನಡೆಯುತ್ತಿರುವ ಕೆಲವು ಹೋರಾಟಗಳನ್ನು ಆಳುವ ಜನರೇ ಹುಟ್ಟು ಹಾಕಿ ಬೆಳೆಸಿಕೊಂಡಿದ್ದಾರೆ. ಇನ್ನು ಕೆಲವನ್ನು ನಾನಾ ಬಗೆಯ ಶೋಷಿತರು ತಮ್ಮ ಶೋಷಣೆಯ ವಿರುದ್ಧ ಹೋರಾಡಲು ಕಟ್ಟಿಕೊಂಡಿದ್ದಾರೆ. ಶೋಷಣೆಯನ್ನು ಹೇಗೆ ವಿವರಿಸಿಕೊಳ್ಳುತ್ತೇವೋ ಅದಕ್ಕೆ ಅನುಗುಣವಾಗಿ ಹೋರಾಟದ ದಾರಿ ಗುರಿ ನಿರ್ಮಾಣವಾಗುತ್ತದೆ. ವರ್ಗ, ಜಾತಿ, ಲಿಂಗ ಇವುಗಳನ್ನು ಶೋಷಣೆಯ ಕಾರಣಗಳನ್ನಾಗಿ ಪರಿಗಣಿಸಿ ಹೋರಾಟಗಳು ಸಾಗಿವೆ. ಇವು ಬೇರೆಬೇರೆ ಹೋರಾಟಗಳಾಗಿರಬಹುದು ಇಲ್ಲವೆ ಒಂದು ಪ್ರಬುದ್ಧ ಕ್ರಾಂತಿಕಾರಿ

## ಸುನಾಮಿ



ಈಗೇನು ಮಾಡುತ್ತಿರಬಹುದು
ಅಷ್ಟೆಲ್ಲ ಹಾರಾಟ ನಡೆಸಿದ ಮೇಲೆ ಆ ಸುನಾಮಿ !

ಕಾಲ್ಗೆಜ್ಜೆಗಳ ಸವರುತ್ತ , ಆಗೀಗ ಗಿಲಿಗಿಲಿಸುತ್ತ
ದಣಿವಾರಿಸಿಕೊಳ್ಳುತ್ತಿರಬಹುದೆ ?
ಹೊಸ ಆಟಕ್ಕೆ ತಯಾರಿ ನಡೆಸುತ್ತಿರಬಹುದೇ ?
ತಪ್ಪು ಮಾಡಿದ ಮಗು ತಾಯ ಮರೆಗೋಡುವ ಹಾಗೆ
ಕಡಲ ಮಡಿಲನು ಸೇರಿ
ನಿದ್ದೆ ಹೋಗಿರಬಹುದೇ ?

೨

ಎಲ್ಲಿ ಹೋದರೂ ಇಲ್ಲಿ ಇದ್ದವರೆಲ್ಲ ?
ಆ ಕೇಕೆ, ದಿನದ ಬದುಕಿನ ರಗಳೆ, ಸುಖದುಃಖ
ದೃಶ್ಯ ಬದಲಾವಣೆಯ ಸಂಭ್ರಮದ ಗಳಿಗೆಗಳೆಲ್ಲಿ ?
ಆಕಾಶವ್ಯಾಪ್ತಿಯಲಿ ಹಕ್ಕಿ
ರೆಕ್ಕೆಗಳ ದಿಗಂತದ ತನಕ ಬಿಚ್ಚಿ ಹಾರಾಡಿದರೆ
ಬಯಲಾಟ ಮುಗಿದ ಮೇಲಣ ಭಣಗುಡುವ ಬಯಲಲ್ಲಿ
ಭಯಾನಕ ನೆರಳ ಚಲನೆ –
ಉಳಿದೇ ಇದೆ ಗಾಳಿಯಲಿ – ಹಾರಾಡುವ
ಕಾಗದ ಚೂರು, ಮಲಮೂತ್ರಗಳ ವಾಸನೆ, ಜತೆಗೆ
ರುದ್ರ ನಾಟ್ಯಕೆ ಬೆಚ್ಚಿ ಎದ್ದು ಹೋದವರ ಚಹರೆ
ನಿದ್ದೆಗಣ್ಣಲ್ಲಿ ಟೆಂಟು ಬಿಚ್ಚುವ ಯಾಂತ್ರಿಕ ಕಾಯಕದಾಚೆ
ಅಲ್ಲೊಂದು ಅನಾಥ ಮಗು, ಇಲ್ಲೊಬ್ಬಳು ಭಿಕ್ಷುಕಿ ತಾಯಿ
ಮುಗಿಯದ ನಿದ್ದೆ –
ಆರ್ಭಟದ ಎದುರ ದಿಗಿಲಲ್ಲಿ ತೆರೆದೇ ಉಳಿದ ಕಣ್ಣರೆಪ್ಪೆ

೩

ಆ ಮಗುವಿನ ಬೆಳಕಾರಿದ ಕಣ್ಣೆನ್ನೂ ತೆರೆದೇ ಇದೆ
ಬೆಳಕೂಡುವವರಿಲ್ಲ
ಆ ತಾಯಿಯ ಕಣ್ಣು ಅರಸುತ್ತಲೇ ಇದೆ ಕಳೆದ ಆತ್ಮವನು
ಶೂನ್ಯದಲಿ
ಹುಡುಕಿ ಕೊಡುವವರಿಲ್ಲ
ಆ ದೇಹ ಕೊಳೆಯುತ್ತ ಸಂಸ್ಕಾರಕ್ಕೆ ಕಾದೇ ಇದೆ
ಕೊಳ್ಳಿ ಇಡುವವರಿಲ್ಲ
ಆ ಹಸಿದ ಹೊಟ್ಟೆಗಳು ಒದ್ದಾಡುತ್ತಲೇ ಇವೆ
ತುತ್ತು ನೀಡುವವರಿಲ್ಲ
ಈ ಕ್ಷಣದಲ್ಲೆಲ್ಲ ಸ್ತಬ್ಧ. ಕಾಲದ ಚಲನೆ ನಿಂತು
ದಿಟ್ಟಿಸಿಯೂ ದಿಟ್ಟಿಸದೇ ಉಳಿದು ಬಿಟ್ಟಿದೆ
ಮೌನ ಪ್ರತಿಮೆಯಾಗಿ

೪

ಆಕಾಶದವಕಾಶದಲ್ಲಿ ನಿಂತಿದೆ ಈಗ ಹಕ್ಕಿ
ಬೆಳ್ಳಿ ಮಂತಿನ ಹಾಗೆ
ಎಲ್ಲ ಚೈತನ್ಯವನೂ ತುಂಬಿಕೊಳ್ಳುವ ಹಾಗೆ –
ನಿಂತ ಕಾಲವನೊದ್ದು ಚಾಲನೆಯ ನೀಡುವ ಹಾದಿ
ಧ್ಯಾನಿಸುತ – ನಿಂತಲ್ಲೇ ನೆಲ ಮುಗಿಲನ್ನೊಳಗೊಳುವ
ಯತ್ನದಲ್ಲಿ
ಆ ಕಣ್ಣಿಗೆ ಬೆಳಕು, ಆ ಹೊಟ್ಟೆಗೆ ತುತ್ತು
ಆ ದೇಹಕೆ ಕೊಳ್ಳಿ, ಕಳೆದಂತಿರುವ ಆತ್ಮ
ಸೇರಿಸಲು ಸಂಬಂಧದ ಸೂತ್ರ

ಮತ್ತೆ ಸಾಕ್ಷಾತ್ಕಾರ ಆದೀತೇ ಬಯಲಾದ ಭೂಮಿಯಲಿ
ಕಳಕೊಂಡ ರೂಪ.
ತಲೆಮರೆಸಿಕೊಂಡ ಸುನಾಮಿ, ಹಕ್ಕಿಯ ಭೇಟಿ
ತಣಿಸಬಹುದೇ ಪ್ರತಾಪ ?

**ಸುಬ್ರಾಯ ಚೊಕ್ಕಾಡಿ,** ಚೊಕ್ಕಾಡಿ - ೫೭೪ ೨೧೨, ದಕ್ಷಿಣ ಕನ್ನಡ

ಚಳುವಳಿಯಲ್ಲಿ ವರ್ಗ ಸಮೂಹ ಹೋರಾಟಗಳಾಗಿರಬಹುದು. ಶೋಷಣೆಯ ವ್ಯವಸ್ಥೆಯನ್ನು ಒಪ್ಪಿಕೊಂಡು ಅದರಲ್ಲಿ ಸೌಲಭ್ಯ ಪಡೆಯುವ, ಆ ಮೂಲಕ ಶೋಷಿತರನ್ನು 'ಉದ್ಧಾರ' ಮಾಡುವ ಹೋರಾಟಗಳು ಇವೆ. ಇವಲ್ಲದೆ ಖಾಸಗಿ ಆಸ್ತಿ ಮತ್ತು ಖಾಸಗಿ ಅಧಿಕಾರದ ವಿರುದ್ಧ ರಾಜೀರಹಿತವಾಗಿ ಹೋರಾಡುವ ಹೋರಾಟಗಳೂ ಇವೆ. ಕೆಲವು ಹೋರಾಟಗಳನ್ನು ಶೋಷಕ ವ್ಯವಸ್ಥೆ ಹಾಗೂ ಸರಕಾರಿ ಯಂತ್ರಾಂಗ ಎನ್‌ಜಿಓಗಳ ಮೂಲಕ ದಾರಿ ತಪ್ಪಿಸುತ್ತಿದೆ; ತನ್ನ ಹಿತಾಸಕ್ತಿಗಾಗಿ ಮಾರ್ಪಡಿಸಿಕೊಳ್ಳುತ್ತಿದೆ ಇಲ್ಲವೆ ಕಪ್ಪು ಕಾನೂನುಗಳ ಮೂಲಕ ಹತ್ತಿಕ್ಕುತ್ತಿದೆ. ರಕ್ಷಣೆಯ ಹೆಸರಿನಲ್ಲಿ ಇಂಡಿಯಾದ ಅರ್ಧ ಬಜೆಟ್ ಅನ್ನು ಇದಕ್ಕಾಗಿ ಅಪವ್ಯಯ ಮಾಡುತ್ತಿರುವುದು ಪ್ರಜಾಪ್ರಭುತ್ವದ ಮಹಾನ್ ವ್ಯಂಗ್ಯ. ಮೂಲತಃ ಬೆವರು ಮತ್ತು ಕಣ್ಣೀರಿನಿಂದ ಸೃಷ್ಟಿಯಾದ ಉತ್ಪತ್ತಿಯ ಬಹುಭಾಗವನ್ನು; ಅದೇ ಉತ್ಪಾದಕರು, ಶ್ರಮಜೀವಿಗಳು ನ್ಯಾಯಕ್ಕಾಗಿ ಹೋರಾಡಿದಾಗ ಅವರನ್ನು ಮುಗಿಸುವ ಹಿಂಸಾತ್ಮಕ ಕೆಲಸಕ್ಕೆ ಖರ್ಚು ಮಾಡುತ್ತಿರುವುದು ಪ್ರಜಾಪ್ರಭುತ್ವದ ಮತ್ತೊಂದು ವ್ಯಂಗ್ಯ. ಆದರೆ ಶೋಷಣೆ ಇರುವ ತನಕ ಹೋರಾಟಗಳು ನಿಲ್ಲುವುದಿಲ್ಲ ಎಂಬುದನ್ನು ಇದುವರೆಗಿನ ಮಾನವ ಚರಿತ್ರೆ ಸಾಬೀತುಪಡಿಸಿದೆ. ಶೋಷಣೆ ಮತ್ತು ಅದರ ವಿರುದ್ಧದ ಹೋರಾಟ ಒಂದೇ ಸಾಮಾಜಿಕ ವಸ್ತುಸ್ಥಿತಿಯ ಎರಡು ಮುಖಗಳಷ್ಟೆ. 'ಶೋಷಣೆ ಹಾಗೆಯೇ ಮುಂದುವರಿಯುತ್ತಿರಲಿ; ಆದರೆ ಅದರ ವಿರುದ್ಧದ ಹೋರಾಟಗಳು ಮಾತ್ರ ನಿಲ್ಲಲಿ' ಎಂದು ಆಳುವ ವರ್ಗ ತಾಕೀತು ಮಾಡುತ್ತದೆ. ಯಾಕೆಂದರೆ ಅದು ಅದರ ಡ್ಯೂಟಿ ಮತ್ತು ಅದರ ಸ್ವಭಾವ.

ಹೋರಾಟಗಳನ್ನು ದೇಶಾಭಿಮಾನಿ-ದೇಶದ್ರೋಹಿ, ಸಂವಿಧಾನಾತ್ಮಕ-ಸಂವಿಧಾನ ವಿರೋಧಿ, ಕಾನೂನು ರೀತ್ಯಾ-ಕಾನೂನು ಬಾಹಿರ, ಪ್ರಜಾತಾಂತ್ರಿಕ-ಅಪ್ರಜಾತಾಂತ್ರಿಕ ಎಂದು ವಿಂಗಡಿಸಿ ನೋಡುವ ಪ್ರವೃತ್ತಿಯನ್ನು ಸೃಷ್ಟಿಸಲಾಗಿದೆ. ಹೋರಾಟವೊಂದು ನ್ಯಾಯೋಚಿತವೊ ಅಲ್ಲವೊ ಎಂದು ತೀರ್ಮಾನಿಸಬೇಕಾದುದನ್ನು ಬಿಟ್ಟು ಅದು ಸರಕಾರದ ಕಾನೂನಿನ ಒಳಗೆ ನಡೆಯುತ್ತಿದೆಯೊ ಇಲ್ಲವೊ ಎಂದು ಪ್ರಶ್ನಿಸುವ ಪರಿಸ್ಥಿತಿ ಎದುರಾಗಿದೆ. 'ಹೋರಾಟಗಳು ಕಾನೂನುಗಳನ್ನು ಪಾಲಿಸಬೇಕು; ಕಾನೂನು ಚೌಕಟ್ಟಿನೊಳಗೆ ನಡೆಯಬೇಕು' ಎಂದು ಪ್ರಭುತ್ವ ಬಯಸುತ್ತದೆ. ಮತ್ತೊಂದು ಕಡೆ ಪ್ರಭುತ್ವವೇ ಕಾನೂನುಗಳನ್ನು ಗಾಳಿಗೆ ತೂರಿ ಇಡೀ ದೇಶದ ಸಂಪತ್ತನ್ನು, ಸಾರ್ವಜನಿಕ ಬಂಡವಾಳವನ್ನು, ಸಾರ್ವಜನಿಕ ವಲಯವನ್ನು ಸಾಮ್ರಾಜ್ಯಶಾಹಿಗಳಿಗೆ, ಬಹುರಾಷ್ಟ್ರೀಯ ಕಂಪನಿಗಳಿಗೆ ಮಾರಾಟ ಮಾಡುತ್ತಿದೆ. 'ದೇಶಾಭಿಮಾನ'ದ ಹೆಸರಿನಲ್ಲಿ ದೇಶದ್ರೋಹಿ ಕೋಮುವಾದಿ ಸಂಘಟನೆಗಳು ಎಲ್ಲಾ ಬಗೆಯ ಶೋಷಣೆಯನ್ನು ಯಶಸ್ವಿಯಾಗಿ ಮುಂದುವರಿಸಲು ಕಾನೂನುಗಳನ್ನು ಗಾಳಿಗೆ ತೂರುತ್ತಿವೆ. ಅವುಗಳನ್ನು ಕಾನೂನುಬಾಹಿರ ಎಂದು ಯಾರೂ ಕರೆಯುತ್ತಿಲ್ಲ. ಮತ್ತೊಂದು ಕಡೆ ವರ್ಗ ಶೋಷಣೆಯ ವಿರುದ್ಧ ನಡೆಸಲಾಗುತ್ತಿರುವ ಸಶಸ್ತ್ರ ಹೋರಾಟಗಳನ್ನು 'ಕಾನೂನು ಬಾಹಿರ' ಎಂದು ಕರೆಯಲಾಗುತ್ತಿದೆ.

ಕರ್ನಾಟಕದಲ್ಲಿ ನಡೆಯುತ್ತಿರುವ ಹೋರಾಟಗಳನ್ನೂ ಕೂಡ ಹೀಗೆ 'ಕಾನೂನು ರೀತ್ಯಾ ಮತ್ತು ಕಾನೂನು ವಿರೋಧಿ' ಎಂಬ ನೆಲೆಯಲ್ಲಿ ನೋಡಲಾಗುತ್ತಿದೆ. ನಿರ್ದಿಷ್ಟವಾಗಿ ಕರ್ನಾಟಕದ ಮಲೆನಾಡು ಭಾಗದಲ್ಲಿ ನಡೆಯುತ್ತಿರುವ ಹೋರಾಟವನ್ನು ಈ ಪರಿಭಾಷೆಯಲ್ಲಿ ಕರೆಯಲಾಗುತ್ತಿದೆ. ಕೆಲವರ ಪ್ರಕಾರ ''ಮಲೆನಾಡಿನಲ್ಲಿ ಹಸಿವು ಬಡತನಗಳು ಉತ್ತರ ಕರ್ನಾಟಕದಲ್ಲಿರುವಷ್ಟು ಇಲ್ಲ. ಕೂಲಿ ಕೂಡ ಉತ್ತರ ಕರ್ನಾಟಕಕ್ಕಿಂತ ಮಲೆನಾಡಿನಲ್ಲಿ ಜಾಸ್ತಿ ಇದೆ. ಹಾಗಾಗಿ ಅಂತಹ ಉಗ್ರ ಹೋರಾಟದ ಅವಶ್ಯಕತೆಯಿಲ್ಲ. ಜನರ ಸಣ್ಣಪುಟ್ಟ ಬೇಡಿಕೆಗಳಿದ್ದರೆ ಅವುಗಳನ್ನು ಕಾನೂನು ಚೌಕಟ್ಟಿನಲ್ಲೇ ಬಗೆಹರಿಸಿಕೊಳ್ಳಬಹುದು. ಅದಕ್ಕಾಗಿ ಜನರನ್ನು ಕಾಡಿಗೆ ಕರೆದುಕೊಂಡು ಹೋಗಿ ಸಶಸ್ತ್ರ ಹೋರಾಟ ಮಾಡುವ ಅಗತ್ಯವಿಲ್ಲ. ಅಲ್ಲಿಯ ಜನರು ಒಂದು ಕಡೆ ಹೋರಾಟಗಾರರಿಂದ ಮತ್ತೊಂದು ಕಡೆ ಪೊಲೀಸರ ಕಿರುಕುಳದಿಂದ ನಲುಗಿ ಹೋಗುತ್ತಿದ್ದಾರೆ...'' ಇಂತಹ ಹೇಳಿಕೆಗಳು ಸದ್ಯಕ್ಕೆ ಎಲ್ಲರಿಗೂ ಗೊತ್ತಿದೆ.

ಮಲೆನಾಡೆಂದರೆ ಕೆಲವರಿಗೆ ಪ್ರಕೃತಿಯ ಅಚ್ಚಹಸುರಿನ, ಸಾವಿರಾರು ಜಾತಿಯ ಗಿಡಮರಗಳ ದಟ್ಟ ಕಾಡಿನ, ಕೋಟಿಗಟ್ಟಲೆ ಜೀವ ವೈವಿಧ್ಯವಿರುವ ಸೌಂದರ್ಯ ರಮಣೀಯತೆ, ತಂಪಾದ ವಾತಾವರಣ ಆಹಾ ! ಓಹೋ ! ಹೀಗೆ ಈ ಪಟ್ಟಿ ಇನ್ನೂ ಮುಂದುವರೆಯುತ್ತದೆ. ಮಲೆನಾಡನ್ನು ಹೀಗೆ ಮರದ ಮೇಲಿನಿಂದ, ಮುಗಿಲಿನ ಮೇಲಿನಿಂದ, ಕೋಗಿಲೆಯ ಗಾನದಿಂದ ನೋಡುವವರಿಗೆ ಅದೇ ನಿತ್ಯ ಸತ್ಯ. ಆದರೆ ಮಲೆನಾಡನ್ನು ಒಳಗಿನಿಂದ ನೋಡಿದಾಗ ಊಳಿಗಮಾನ್ಯ ಶೋಷಣೆಯ ವಿಕೃತ ರೂಪಗಳು ಕಾಣುತ್ತವೆ. ಅಂತಹ ಎರಡೇ ಎರಡು ವಿಷಯಗಳನ್ನು ಇಲ್ಲಿ ಬಿಡಿಸಿಡುತ್ತೇನೆ.

**ಒಂದು :**

ಮಲೆನಾಡು - ಊಳಿಗಮಾನ್ಯಶಾಹಿ - ಭೂಮಿಯ ಸಂಬಂಧ -> ಹೊಸವಿಧಾನದ ಶೋಷಣೆ. ಈ ಮೂಲಭೂತ ಅಂಶವನ್ನು ಬಿಟ್ಟು ಮಲೆನಾಡನ್ನು ನೋಡಿದರೆ ಅದು ಎಲ್ಲರಿಗೂ ಕಲರ್‌ಫುಲ್ ಆಗಿಯೇ ಕಾಣುತ್ತದೆ. ಭೂಮಿಯ ಸಂಬಂಧದಲ್ಲಿ ಮಲೆನಾಡಿನಲ್ಲಿ ಒಪನ್ನಾಗಿ ಕಾಣದ ಕ್ರೂರ ಬೆಳವಣಿಗೆಯೊಂದು ತಣ್ಣಗೆ ನಡೆಯುತ್ತಿದೆ. ೨೦೦೦ ದಿಂದೀಚೆಗೆ ಮಲೆನಾಡಿನಲ್ಲಿ ಕಾಫಿ ಮತ್ತು ಅಡಿಕೆ ಬೆಲೆ ಕಡಿಮೆ ಆಯಿತು. ಇದರಿಂದ ಭೂಮಾಲಿಕರಿಗೆ ಆ ಮೊದಲು ಸಿಗುತ್ತಿದ್ದ ಲಾಭದಲ್ಲಿ ಸ್ವಲ್ಪ ಇಳಿಮುಖವಾಯಿತು. ಬ್ಯಾಂಕಿನ ಸಾಲಕ್ಕೆ ಬಡ್ಡಿ ಮನ್ನಾ ಮಾಡಿಸಿಕೊಂಡರು. ಹೊಸದಾಗಿ ಸಾಲ ಪಡೆಯುವುದಕ್ಕಾಗಿ ತಮ್ಮ ಜಮೀನುಗಳಲ್ಲೇ ಕೂಲಿ ಮಾಡುವವರ ತುಂಡು ಜಮೀನುಗಳನ್ನು ಅಕ್ರಮವಾಗಿ ಅಗ್ರಿಮೆಂಟ್ ಮಾಡಿಕೊಂಡು ಬ್ಯಾಂಕುಗಳ ನೆರವಿನಿಂದ ಸ್ಥಳೀಯ ಸೊಸೈಟಿ (ವ್ಯವಸಾಯ ಸೇವಾ ಸಹಕಾರ ಸಂಘ ನಿಯಮಿತ)ಗಳಲ್ಲಿ ಸಾಲ ತೆಗೆದುಕೊಂಡಿದ್ದಾರೆ. ತಮ್ಮ ಜಮೀನು ಭೂಮಾಲಿಕರಿಗೆ ಅಗ್ರಿಮೆಂಟ್ ಆಗಿರುವುದು ಕೆಲವರಿಗೆ ಗೊತ್ತು. ಅನೇಕರಿಗೆ ಗೊತ್ತಿಲ್ಲ. ಕೆಲವರಿಗೆ ಸೊಸೈಟಿಯಿಂದ 'ಸಾಲ ಕಟ್ಟಿ' ಎಂಬ ನೋಟೀಸ್ ಬಂದಾಗಲೇ ಗೊತ್ತು. ಮತ್ತೆ ಕೆಲವರಿಗೆ ತಮ್ಮ ಜಮೀನು ಹರಾಜಿಗೆ ಬಂದಾಗಲೇ ಗೊತ್ತು. ಕೃಷಿ ಅಥವಾ ಕೃಷಿಯೇತರ ಭೂಮಿಗೆ ದಿನದಿನಕ್ಕೆ ರೇಟು ಗಗನಕ್ಕೆ ಏರುತ್ತಿರುವುದು; ಇತ್ತೀಚಿನ ದಲಿತ ತಲೆಮಾರಿನವರು ಜೀತಕ್ಕೆ ಸಹಜವಾಗಿ ಒಗ್ಗಿಕೊಳ್ಳದೇ ಇರುವುದು – ಭೂಮಾಲಿಕರ ಕಣ್ಣು ತಮ್ಮ ಕೂಲಿಕಾರ್ಮಿಕರ ತುಂಡು ಭೂಮಿಯ ಮೇಲೆ ಬೀಳಲು ಮುಖ್ಯ ಕಾರಣವಾಗಿದೆ. ಎಸ್‌ಸಿ/ಎಸ್‌ಟಿಗಳ ಜಮೀನನ್ನು ಎಸ್‌ಸಿ/ಎಸ್‌ಟಿಗಳಲ್ಲದವರಿಗೆ ನೊಂದಾವಣೆ ಮಾಡಬಾರದೆಂಬ ಕಾನೂನಿದೆ. ಆದರೆ ಭೂಮಾಲಿಕರು ತಮ್ಮ ಕೂಲಿ ಜನರ ತುಂಡು ಜಮೀನಿನ ಮೇಲೆ ಅಕ್ರಮ ಅಗ್ರಿಮೆಂಟ್ ಮಾಡಿಕೊಂಡು, ಉದ್ದೇಶಪೂರ್ವಕವಾಗಿ ಸಾಲ ಕಟ್ಟದೆ, ಸೊಸೈಟಿಯಿಂದ ತುಂಡು ಜಮೀನುಳ್ಳವರಿಗೆ ನೋಟೀಸ್ ಕೊಡಿಸಿ, ಆ ನೋಟೀಸನ್ನು ಅವರಿಗೆ ತೋರಿಸಿ ಅವರನ್ನು ನೇರವಾಗಿ ಜೀತಕ್ಕಿಟ್ಟುಕೊಳ್ಳುತ್ತಾರೆ. ಅನಂತರ ಜಮೀನು ಹರಾಜಿಗೆ ಬರುವಂತೆ ಮಾಡುತ್ತಾರೆ. ಸೊಸೈಟಿ ಮತ್ತು ಬ್ಯಾಂಕಿನವರು ಆ ತುಂಡು ಜಮೀನನ್ನು ಹರಾಜು ಹಾಕಿದಾಗ ಅದೇ ಭೂಮಾಲಿಕರು ಆ ತುಂಡು ಭೂಮಿಯನ್ನು ಕೊಂಡುಕೊಳ್ಳುತ್ತಾರೆ. ಚಿಕ್ಕಮಗಳೂರು ಜಿಲ್ಲಾದ್ಯಂತ ಇದು ಭೂಮಾಲಿಕರ ದರ್ಪ ಮತ್ತು ಅಟ್ಟಹಾಸದಿಂದ ಹಾಗೂ ನೌಕರರ ಅಕ್ರಮ ಸಹಕಾರದೊಂದಿಗೆ ಬಹಿರಂಗವಾಗಿ ನಡೆಯುತ್ತಿದೆ. ಇದರ ಬಗ್ಗೆ ಇದುವರೆಗೆ ಯಾವುದೇ ಸಂಘಟನೆಗಳು ತಮ್ಮ ಹೋರಾಟವನ್ನು ಕೈಗೆತ್ತಿಕೊಂಡಿಲ್ಲ. ಎಸ್‌ಸಿ/ಎಸ್‌ಟಿಗಳ ಜಮೀನು ಬೇರೆಯವರಿಗೆ ಮಾರಾಟವಾಗಲು ಕಾನೂನಿನ ತೊಡಕಿದೆ ನಿಜ. ಆದರೆ ಆ ಜಮೀನನ್ನು ಕಾನೂನು ಬಾಹಿರವಾಗಿ ಅಗ್ರಿಮೆಂಟ್ ಮಾಡಿಸಿಕೊಂಡು, ಕಾನೂನು ಸಮೇತ ಹರಾಜಿನಲ್ಲಿ ಭೂಮಾಲಿಕರು ಅನ್ಯಾಯದಿಂದ ಕೊಂಡುಕೊಳ್ಳುತ್ತಿದ್ದಾರೆ. ಈ ಪ್ರಕ್ರಿಯೆಯಲ್ಲಿ ತುಂಡು ಜಮೀನು ಕಳೆದುಕೊಂಡವರನ್ನು ಭೂಮಾಲಿಕರು ಹೊಸ ಬಗೆಯ ಜೀತಕ್ಕೆ ಒಳಗುಮಾಡಿಕೊಳ್ಳುತ್ತಿದ್ದಾರೆ.

**ಎರಡು :**

ಮತ್ತೊಂದು ಕಡೆ ಮಲೆನಾಡಿನ ಸಂಪದ್ಭರಿತ ಮತ್ತು ಜೀವ ವೈವಿಧ್ಯಗಳಿಂದ ಕೂಡಿದ ಪ್ರಾಕೃತಿಕ ಸಂಪತ್ತನ್ನು ವಿಶ್ವಬ್ಯಾಂಕ್ ಆದೇಶದ ಮೇರೆಗೆ, ಮೀಸಲು ಅರಣ್ಯದ ಹೆಸರಿನಲ್ಲಿ ಬಹಿರಂಗವಾಗಿ ಬಹುರಾಷ್ಟ್ರೀಯ ಕಂಪನಿಗಳಿಗೆ ಮೀಸಲಿರಿಸುವ ಕೆಲಸ ಮುಂದುವರಿದಿದೆ. ಮೂಡಿಗೆರೆ

---

**ಪ್ರಜಾಪ್ರಭುತ್ವ**

ನಾವು ಸಂಕುಚಿತ ಧಾರ್ಮಿಕ ಮನೋಧರ್ಮವನ್ನು ಬಿಟ್ಟು ಕೊಡಬೇಕು. ನಿಸರ್ಗಾತೀತ ಹಾಗೂ ಆಧ್ಯಾತ್ಮಿಕ ಮಿಥ್ಯಾ ಚಿಂತನೆಯ ಗೀಳನ್ನು ಬಿಟ್ಟುಕೊಡಬೇಕು. ಧಾರ್ಮಿಕ ಆಚರಣೆಗಳಲ್ಲೂ ಮಿಥ್ಯಾತ್ಮಕ ಭಾವುಕತೆಗಳಲ್ಲೂ ನಮ್ಮ ಮನಸ್ಸಿನ ಶಿಸ್ತು ಸಡಿಲಗೊಳ್ಳುತ್ತದೆ. ಹಾಗಾಗಿ ಅದನ್ನು ಬಿಟ್ಟುಕೊಡಬೇಕು. ನಮ್ಮನ್ನೂ, ಈ ಪ್ರಪಂಚವನ್ನೂ, ಅರ್ಥ ಮಾಡಿಕೊಳ್ಳುವುದಕ್ಕೆ ಅಡ್ಡಿ ಬರುವಂತಹುವನ್ನೆಲ್ಲ ಬಿಟ್ಟುಕೊಡಬೇಕು. ನಾವು ವರ್ತಮಾನವನ್ನು, ಈ ಬಾಳನ್ನು, ಈ ಜಗತ್ತನ್ನು, ಅನಂತ ವೈವಿಧ್ಯತೆಗಳೊಂದಿಗೆ ನಮ್ಮನ್ನು ಸುತ್ತುವರಿದಿರುವ ಈ ಪ್ರಕೃತಿಯನ್ನು, ಗಾಢವಾಗಿ ಅರ್ಥಮಾಡಿಕೊಳ್ಳಬೇಕು. ಕೆಲವು ಹಿಂದೂ ಸಂಪ್ರದಾಯಸ್ಥರು ವೇದಗಳ ಪೂರ್ವಕಾಲಕ್ಕೆ ಹಿಂದಿರುಗುವ ಮಾತನಾಡುತ್ತಾರೆ. ಅಂತೆಯೇ ಕೆಲವು ಮುಸ್ಲಿಮರು ಇಸ್ಲಾಮಿಕ್ ದೇವಪ್ರಭುತ್ವ ಸ್ಥಾಪನೆಯ ಕನಸು ಕಾಣುತ್ತಾರೆ. ಇವೆಲ್ಲ ಸೋಮಾರಿತನದ ಮನಸ್ಸಿನಲ್ಲಿ ಮೂಡುವ ಭ್ರಾಂತಿಗಳು, ಏಕೆಂದರೆ, ಗತಕಾಲಕ್ಕೆ ಹಿಂದಿರುಗುವುದು ಎಷ್ಟು ಮಾತ್ರವೂ ಸಾಧ್ಯವಿಲ್ಲ. ಅಂತಹ ಚಿಂತನೆ ಅಪೇಕ್ಷಣೀಯವಾದರೂ ಕಾಲದ ಜಗತ್ತಿನಲ್ಲಿ ಏಕಮುಖ ಸಂಚಾರಕ್ಕಷ್ಟೆ ಅವಕಾಶ.

– ಜವಾಹರಲಾಲ ನೆಹರು
''ಡಿಸ್ಕವರಿ ಆಫ್ ಇಂಡಿಯಾ''

---

ತಾಲೂಕಿನ ತೆತ್ಕೊಳ ಗ್ರಾಮವನ್ನು ಒಕ್ಕಲೆಬ್ಬಿಸಲಾಗಿದೆ. ಚಿಕ್ಕಮಗಳೂರು ತಾಲೂಕಿನ ಪರದೇಶಪ್ಪನಮಠ, ಮಾಡ್ಳ, ಹಿಪ್ಲ, ಹೊನ್ನಂಗಿ, ಬೆಳ್ಳಂಗಿ ಮುಂತಾದ ೧೫ ಗ್ರಾಮಗಳನ್ನು ಒಕ್ಕಲೆಬ್ಬಿಸಲಾಗಿದೆ. ಈಗ ಮಸಗಲಿ, ಶಿರಗೂರು, ಒಡ್ಡಿಗುಡ್ಡ ಮುಂತಾದ ಗ್ರಾಮಗಳನ್ನು ಒಕ್ಕಲೆಬ್ಬಿಸುವ ಕಾರ್ಯ ಭರದಿಂದ ಸಾಗಿದೆ. ಇಡಿಯಾಗಿ ಮಲೆನಾಡನ್ನೇ ಮೀಸಲು ಅರಣ್ಯದ ಹೆಸರಿನಲ್ಲಿ ಬಹುರಾಷ್ಟ್ರೀಯ ಕಂಪನಿಗಳಿಗೆ ಮೀಸಲಿಡುವ ಯೋಜನೆ ನಿಧಾನವಾಗಿ ಸಾಗುತ್ತಿದೆ. ಒಂದೇ ಸಲ ಮಲೆನಾಡನ್ನು ಇಡಿಯಾಗಿ ಕಬ್ಜ ಮಾಡಿದರೆ ದೊಡ್ಡ ಪ್ರಮಾಣದ ಜನವಿರೋಧ ಬರುತ್ತದೆ ಎಂಬುದು ಗೊತ್ತು. ಅದಕ್ಕಾಗಿ ಒಂದೊಂದು, ಎರಡೆರಡು ಗ್ರಾಮಗಳನ್ನು ಒಕ್ಕಲೆಬ್ಬಿಸುತ್ತಿದ್ದಾರೆ. ಮುಂದೊಂದು ದಿನ ಇಡೀ ಮಲೆನಾಡು ಬಹುರಾಷ್ಟ್ರೀಯ ಕಂಪನಿಗಳ ಪಾಲಾಗುತ್ತದೆ.

ಇಂತಹ ಪರಿಸ್ಥಿತಿಯಲ್ಲಿ ಮಲೆನಾಡಿನಲ್ಲಿ ಕೂಲಿಜನರ ತುಂಡು ಜಮೀನುಗಳನ್ನು ಭೂಮಾಲಿಕರ ಆಕ್ರಮಣದಿಂದ ಉಳಿಸಬೇಕಾಗಿದೆ. ಅದೇ ಕಾಲಕ್ಕೆ ಇಡೀ ಮಲೆನಾಡು ವಿಶ್ವಬ್ಯಾಂಕ್ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಪಾಲಾಗುವುದನ್ನು ತಪ್ಪಿಸಬೇಕಾಗಿದೆ. ಇದು ಜಿಲ್ಲಾ ಮಟ್ಟದ ಹೋರಾಟದಿಂದ ಅಥವಾ ಆಳುವವರ್ಗದ ರಾಜಕೀಯ ಪಕ್ಷಗಳಿಂದ ಬಗೆಹರಿಯುವಂತಹದ್ದಲ್ಲ. ನೇರವಾಗಿ ಸುಪ್ರೀಂ ಕೋರ್ಟಿನ ಆಜ್ಞೆಯ ಹೆಸರಿನಲ್ಲಿ ಈ ಸುಲಿಗೆ ನಡೆಯುತ್ತಿದೆ. ಹಾಗಾಗಿ ರಾಜ್ಯ ಹಾಗೂ ಕೇಂದ್ರ ಸರಕಾರಗಳನ್ನು ಮತ್ತು ಸಾಮ್ರಾಜ್ಯಶಾಹಿಯನ್ನು ಟಾರ್‌ಗೆಟ್ ಮಾಡಿಕೊಂಡು, ರಾಜಿರಹಿತವಾದ ಹಾಗೂ ಸಮರಶೀಲವಾದ ಹೋರಾಟವನ್ನು ಮಾಡಬೇಕಾಗಿದೆ. ಇದಕ್ಕೆ ಬೇಕಾಗಿರುವುದು ಕಾನೂನು ರೀತ್ಯಾ ಹೋರಾಟವೊ ? ಕಾನೂನುಬಾಹಿರ ಹೋರಾಟವೊ ? ಕಾನೂನು ರೀತ್ಯಾ ಹೋರಾಟವೆಂದರೆ ಕೇವಲ ಅರ್ಜಿ ಮನವಿಗಳ ಹೋರಾಟವೆಂದೂ; ಕಾನೂನುಬಾಹಿರ ಹೋರಾಟವೆಂದರೆ ಕೇವಲ ಸಶಸ್ತ್ರ ಹೋರಾಟವೆಂದೂ ಪ್ರಚುರಪಡಿಸಲಾಗಿದೆ. ಹೋರಾಟಗಳನ್ನು ಹೀಗೆ ಯಾಂತ್ರಿಕವಾಗಿ ಸರಳೀಕರಿಸುವುದು ಸರಿಯಲ್ಲ. ಸಶಸ್ತ್ರ ಹೋರಾಟ ಮಾಡುವವರೂ ಕಾನೂನಾತ್ಮಕ ಸಾಧ್ಯತೆಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಸಶಸ್ತ್ರ ಹೋರಾಟ ಮಾಡದವರೂ ಕಾನೂನುಗಳ ಚೌಕಟ್ಟಿನಾಚೆಗೂ ಹೋರಾಟಗಳನ್ನು ರೂಪಿಸುತ್ತಿದ್ದಾರೆ. ಇವೆರಡರ ರಾಜಕೀಯ ಧ್ರುವೀಕರಣವೇ ಹೋರಾಟಗಳ ಮುಂದಿರುವ ಮುಖ್ಯ ಸವಾಲಾಗಿದೆ. ಇದು ಕೇವಲ ಮಲೆನಾಡನ್ನು ಉಳಿಸಲು ಸಂಬಂಧಿಸಿದ್ದಲ್ಲ. ಇಡೀ ದೇಶವನ್ನು ಸಾಮ್ರಾಜ್ಯಶಾಹಿ ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಸುಲಿಗೆಯಿಂದ ಮುಕ್ತಗೊಳಿಸಿ ದುಡಿವ ಜನರಿಗಾಗಿ ಉಳಿಸುವ ಪ್ರಶ್ನೆ. ಅಂತಿಮವಾಗಿ ಇದು ಪ್ರಜಾತಾಂತ್ರಿಕ ರಾಜಕೀಯದ ಪ್ರಶ್ನೆ. ಭಾರತದ ಪ್ರಜಾಪ್ರಭುತ್ವವನ್ನು ಸಾಮ್ರಾಜ್ಯಶಾಹಿ ಮತ್ತು ದೇಶೀಯ ದಲ್ಲಾಳಿಗಳಿಂದ ಬಿಡುಗಡೆ ಮಾಡಿ, ಜನತೆಯ ಪ್ರಜಾಪ್ರಭುತ್ವವನ್ನಾಗಿ ಮಾಡಲು ಯಾವುದೇ ರೂಪದ ಮತ್ತು ಎಲ್ಲಾ ಬಗೆಯ ಪ್ರಗತಿಪರ ಹೋರಾಟಗಳ ಅವಶ್ಯಕತೆ ಇದೆ.

**ಡಾ|| ಬಿ. ಎಂ. ಪುಟ್ಟಯ್ಯ, ಕನ್ನಡ ವಿಶ್ವವಿದ್ಯಾಲಯ**
ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಭಾಷಾ ಚಳವಳಿ

'**ಚ**ಳವಳಿ' ಎಂಬ ಪದವು ಚಲನ ಮತ್ತು ವಲನ ಎಂಬ ಎರಡು ಪದಗಳು ಸೇರಿ ಆದುದು. ಎರಡೂ ಅಲುಗಾಟವನ್ನು ಸೂಚಿಸಿದರೂ, ಚಲನ ಮುಂದೆ ಸರಿಯುವುದನ್ನೂ, ವಲನ ಅತ್ತಿತ್ತ ಚಲಿಸುವುದನ್ನೂ ಸೂಚಿಸುತ್ತದೆ. ಹೀಗಾಗಿ ಚಳವಳಿ ಒಟ್ಟಿಗೇ ನಡೆಯುವ ಎರಡೂ ಬಗೆಯ ಚಲನೆಗಳನ್ನು ಹೇಳುವ ಶಬ್ದ. ಹಾಗಾದರೆ ಚಳವಳಿಯ ಎರಡು ಬಗೆಯ ಚಲನೆಗಳಾವುವು ? ನನಗನ್ನಿಸುವುದೆಂದರೆ, ಮೊದಲನೆಯದು, ಕಾಲಕ್ರಮದಲ್ಲಿ ಮುಂದೆ ಸಾಗುವುದು; ಎರಡನೆಯದು ವ್ಯಾಪ್ತಿಯನ್ನು ಪಡೆಯುವುದು. ಎಂದರೆ ಯಾವುದೋ ಒಂದು ಕಾರಣಕ್ಕಾಗಿ ದೀರ್ಘ ಕಾಲವೂ ಸುತ್ತಮುತ್ತಲ ಜನರನ್ನು ಒಳಗೊಂಡೂ ಸಂಭವಿಸುವ ಘಟನೆಯೇ ಚಳವಳಿ. ಈ ಅರ್ಥದಲ್ಲಿ ನೋಡಿದರೆ ಒಂದು ಭಾಷೆಯ ಅಸ್ತಿತ್ವವೇ ಚಳವಳಿ ನಡೆಯುತ್ತಿರುವುದನ್ನು ತೋರಿಸುತ್ತಿದೆ. ಇದು ಉದ್ದೇಶಪೂರ್ವಕವಾದುದಲ್ಲವಾಗಿರಬಹುದು, ಅಥವಾ ಎದ್ದು ತೋರುವುದಲ್ಲವಾಗಿರಬಹುದು. ಆದರೆ ಮೇಲೆ ಹೇಳಿದ ಎರಡು ಬಗೆಯ ಚಲನೆಗಳೂ ಸಾಗುತ್ತಿರುವುದರಿಂದ ನಾನು ಅದನ್ನೂ ಚಳವಳಿ ಎಂದೇ ಕರೆದದ್ದು. ಈ ದೃಷ್ಟಿಯಲ್ಲಿ ಕನ್ನಡ ತನ್ನ ಅಸ್ತಿತ್ವವನ್ನು ಪಡೆದ ಕಾಲದಿಂದಲೇ ಕನ್ನಡ ಚಳವಳಿ ನಡೆಯುತ್ತಿದೆ. ಆದರೆ ಚಳವಳಿ

ಎರಡು ರೂಪದ್ದು: ಗುಪ್ತಗಾಮಿನಿಯಾದದ್ದು ಅಥವಾ ಆಂತರಿಕವಾದದ್ದು ಹಾಗೂ ಬಹಿರಂಗವಾದದ್ದು ಅಥವಾ ಎದ್ದು ಕಾಣುವುದು. ಮೊದಲನೆಯ ರೀತಿಯಲ್ಲಿ ನಿರಂತರವಾಗಿ ಮತ್ತು ಎರಡನೆಯ ಬಗೆಯಲ್ಲಿ ಆಗೊಮ್ಮೆ ಈಗೊಮ್ಮೆ ಕನ್ನಡ ಚಳವಳಿ ನಡೆಯುತ್ತಲೇ ಇದೆ ಎಂದು ನನ್ನ ಭಾವನೆ.

ಕನ್ನಡ ಯಾವಾಗ ಸಂಸ್ಕೃತ-ಪ್ರಾಕೃತಗಳಂತಹ ಪ್ರಬಲ ಭಾಷೆಗಳ ನಡುವೆಯೇ ಸ್ವತಂತ್ರವಾಗಿ ಬಳಕೆಗೆ ಬಂದಿತೋ ಅದು ಕನ್ನಡ ಭಾಷಾ ಚಳವಳಿಯ ಮೊದಲ ಗೆಲವು. ಅಂದರೆ ಕನ್ನಡ ಜನಪದರು ಸುತ್ತಲಿನ ಅನ್ಯರಿಂದ ಬೇರಾಗಿ ತಮ್ಮದೇ ಇರುವಿಕೆಯನ್ನು ಹೊಂದಿದ್ದು ಆಗ. 'ಕನ್ನಡ' ಎಂಬ ಮಾತು ಮುಂದೆ ಭಾಷಾವಾಚಿಯಾಗಿಯೂ, ದೇಶವಾಚಿಯಾಗಿಯೂ ಬಳಕೆಯಲ್ಲಿತ್ತು. ಪ್ರಾಯಶಃ ಜಗತ್ತಿನ ಎಲ್ಲ ಭಾಷೆಗಳ ವಿಷಯದಲ್ಲಿಯೂ ಈ ಮಾತು ನಿಜ; ನೆಲ ಮತ್ತು ನುಡಿಗಳ ಸಂಬಂಧದ ಅನನ್ಯತೆಯನ್ನು ಇದು ಸಂಕೇತಿಸುತ್ತದೆ. ನುಡಿಯು ಎಲ್ಲರದ್ದೂ ಆದ್ದರಿಂದ ಎಲ್ಲರೂ ಸೇರಿ ನಡೆಸುವ ಯಾವುದೇ ಪ್ರಯತ್ನ ಆಯಾ ಭಾಷೆಯ ಚಳವಳಿಯೇ ಆಗುತ್ತದೆ. ಕನ್ನಡ ಚಳವಳಿ ಹೀಗೆ ಕನ್ನಡ ಬದುಕಿನ ವಿವರಸಮಸ್ತವನ್ನೂ ಒಳಗೊಳ್ಳುವಂಥದು. ನಿದರ್ಶನಕ್ಕೆ, ವಚನ ಚಳವಳಿ; ನನಗೆ ತಿಳಿದ ಮಟ್ಟಿಗೆ ಒಂದು ವಚನದಲ್ಲಾದರೂ 'ಕನ್ನಡ' ಎಂಬ ಶಬ್ದವನ್ನು ನುಡಿಸೂಚಕವಾಗಿ ಬಳಸಿಲ್ಲ. ಇಷ್ಟಾದರೂ ಅದಕ್ಕಿಂತ ಮೇಲಾದ ಕನ್ನಡ ಚಳವಳಿಯನ್ನು ನಾವಾರೂ ಕಾಣೆವು. ಹಾಗೆಯೇ ಹರಿದಾಸ ಚಳವಳಿ. ಈ ಎದ್ದು ಕಾಣುವ ಘಟನೆಗಳ ನಡುವೆ ಕನ್ನಡಕ್ಕಾಗಿ, ಎಂದರೆ ಕನ್ನಡಿಗರ ಅಸ್ಮಿತೆಯನ್ನುಳಿಸಿಕೊಳ್ಳಲು ಒಂದಲ್ಲ ಒಂದು ರೀತಿಯ ಚಳವಳಿ ನಡೆಯುತ್ತಲೇ ಇದೆ.

ಒಂದು ಜನಸಮುದಾಯ ತನ್ನ ಅಂತರಂಗವನ್ನು ಸಾಹಿತ್ಯದ ಮೂಲಕ ಇಬ್ಬಗೆಯಾಗಿ ಹೊಮ್ಮಿಸುತ್ತಿದೆ: ಗ್ರಾಂಥಿಕ ಮತ್ತು ಮೌಖಿಕ. ಆದರೆ ಕನ್ನಡ ಜನಪದ ಸಾಹಿತ್ಯ ಯಾವಾವಾಗ ಏನೇನು ಸವಾಲುಗಳನ್ನೆದುರಿಸಿತು ಎಂಬ ದಾಖಲೆ ಇಲ್ಲ. ಆದರೆ ಶಿಷ್ಟ ಸಾಹಿತ್ಯದಲ್ಲಿ ಅದರ ವಿವರಗಳು ತಕ್ಕಮಟ್ಟಿಗೆ ದೊರೆಯುತ್ತದೆ. ಹತ್ತನೇ ಶತಮಾನದ ಪಂಪ 'ದೇಸಿ'ಯನ್ನು ಎತ್ತಿಹಿಡಿಯುವುದು; ಹನ್ನರಡನೇ ಶತಮಾನದ ನಯಸೇನ ಸಂಸ್ಕೃತವನ್ನು ಎಣ್ಣೆಗೂ, ಕನ್ನಡವನ್ನು ತುಪ್ಪಕ್ಕೂ ಹೋಲಿಸುವುದು; ಹದಿನೇಳನೇ ಶತಮಾನದ ಮಹಲಿಂಗರಂಗನ 'ಲಲಿತವಹ ಕನ್ನಡದ ನುಡಿಯಲಿ ತಿಳಿದು ತನ್ನೊಳು ತನ್ನ ಮೋಕ್ಷವ ಗಳಿಸಿಕೊಂಡರೆ ಸಾಲದೇ, ಸಂಸ್ಕೃತದೊಳಿನ್ನೇನು' ಎಂಬಂತಹ ಮಾತುಗಳು ಕನ್ನಡದ ಮೇಲೆ ಸಂಸ್ಕೃತ ಸವಾರಿಮಾಡಲು ಹೊರಟಾಗ ಸಿಡಿದ ಮಾತುಗಳು. ಈ ಮಾತುಗಳು ಆಯಾ ಕಾಲದಲ್ಲಿ ಒಬ್ಬನಿಂದ ಹೊಮ್ಮಿರಬಹುದು; ಆದರೆ ಅದು ಸಾಮುದಾಯಿಕ ಅಭಿಪ್ರಾಯವನ್ನೇ ಅಭಿವ್ಯಕ್ತಿಗೊಳಿಸುತ್ತಿದೆ; ಕವಿ ಜನಪದದ ಮುಖವಾಣಿಯಲ್ಲವೇ? ಅಲ್ಲದೆ, ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳಲ್ಲಿ ಆದ ಸ್ವರೂಪ ಮತ್ತು ಧೋರಣೆಗಳಲ್ಲಾದ ಬದಲಾವಣೆಗಳು ಕನ್ನಡ ಜನಸಮುದಾಯದ ದನಿಯನ್ನೇ ಪ್ರತಿನಿಧಿಸುತ್ತವೆ.

ಅಂದರೆ ನನ್ನ ದೃಷ್ಟಿಯಲ್ಲಿ ಕನ್ನಡ ನಾಡಿನಲ್ಲಿ ನಡೆದ ಹಾಗೂ ನಡೆಯುವ ಪ್ರತಿಯೊಂದು ಜನಪರ ಚಳವಳಿಯೂ ಕನ್ನಡ ಚಳವಳಿಯೇ; ಅದು ಇಪ್ಪತ್ತನೇ ಶತಮಾನದಲ್ಲಿ ಆರಂಭಗೊಂಡುದಲ್ಲ. 'ಕನ್ನಡ ನಾಡು' ಎಂಬುದು ಕರ್ನಾಟಕ ಏಕೀಕರಣದವರೆಗೂ ಒಂದು ಸಾಂಸ್ಕೃತಿಕ ಪರಿಕಲ್ಪನೆಯಾಗಿತ್ತು; ಆನಂತರ ಅದಕ್ಕೊಂದು ರಾಜಕೀಯ ಆಯಾಮವೂ ದೊರಕಿದೆ. ಆಧುನಿಕ ಕಾಲದಲ್ಲಿ ಕನ್ನಡ ಚಳವಳಿ ಹೀಗೆ ಹೊಸ ಸ್ವರೂಪವನ್ನು ಪಡೆದಿದೆ. ಅದಕ್ಕೆ ಕಾರಣ ಪ್ರಜಾಪ್ರಭುತ್ವದ ಕಲ್ಪನೆ ಮತ್ತು ಆದರ್ಶ. ಏಕೀಕರಣದ ಉದ್ದೇಶವೇ ಕನ್ನಡ ಜನರು ಒಂದಾಗಬೇಕೆಂಬ ಹಂಬಲಿಕೆಯ ಕಾರಣದ ಜೊತೆಗೆ ಆಡಳಿತ ಜನಪರವಾಗಿರಬೇಕೆಂಬ ಕನಸು. ಕನ್ನಡಿಗರೆಂದರೆ ಯಾರು? ಕನ್ನಡದಿಂದಲೇ ತಮ್ಮ ಬದುಕನ್ನೆಲ್ಲ ಗ್ರಹಿಸುವವರು, ಅನ್ಯವಾದುದನ್ನೂ ಆ ಮೂಲಕವೇ ಪಡೆಯುವವರು; ಅಂದರೆ ಸಾಮಾನ್ಯರು. ಹೀಗಾಗಿ ಅಂಥ ಸಾಮಾನ್ಯರ ಬದುಕನ್ನು ಹಸನುಗೊಳಿಸುವ ಕನಸನ್ನು ಹೊತ್ತ ಎಲ್ಲ ಆಂದೋಲನಗಳೂ ಕನ್ನಡ ಚಳವಳಿಗಳೇ. ಕನ್ನಡ ಭಾಷೆಯ ಹೆಸರಿನಲ್ಲಿ ಚಳವಳಿ ನಡೆಸುವವರಂತೆಯೇ ಜನಸಾಮಾನ್ಯರನ್ನು ಪ್ರತಿನಿಧಿಸುವ ರೈತರೂ, ದಲಿತರೂ ನಡೆಸುವುದೂ ಕನ್ನಡ ಚಳವಳಿಯೇ; ಅವೆಲ್ಲ ಅದರ ಬೇರೆ ಬೇರೆ ಮುಖಗಳು. ಈ ಒಂದೊಂದೂ ಒಂದು ಅಂಶಕ್ಕೆ ವಿಶೇಷ ಗಮನ ನೀಡಿ ಆಂದೋಲನ ರೂಪಿಸುವುದರಿಂದ ಆಯಾ ಹೆಸರುಗಳು ಪ್ರಾಪ್ತವಾಗಿರಬಹುದು. ಒಂದೊಂದು ಕಾಲದ ತುರ್ತು ಸಮಸ್ಯೆಯನ್ನು ನಿಭಾಯಿಸಲು ಅವು ಹೆಚ್ಚಿನ ಮಹತ್ವ ನೀಡಬಹುದು.

ಚಳವಳಿ ನಡೆಯಲು ಕಾರಣ ಸುತ್ತಲ ಪರಿಸ್ಥಿತಿ; ಅಂದರೆ ಸಾಮಾನ್ಯರ ಬದುಕಿಗೆ ಮತ್ತು ಭಾಷೆಗೆ ಕುತ್ತು ಬಂದಿದೆ ಎನ್ನಿಸುವುದು. ಸಾಮಾನ್ಯ ರೈತವರ್ಗಕ್ಕೆ ವಿಶಿಷ್ಟ ಸಮಸ್ಯೆ ಒದಗಿದಾಗ, ದಲಿತರ ಆತ್ಮಾಭಿಮಾನದ ಪ್ರಶ್ನೆ ಬಂದಾಗ, ಕನ್ನಡದ ಮೇಲೆ ಪರಭಾಷೆ ಸವಾರಿ ಮಾಡಿದಾಗ ಘೋಷಣೆಗಳು ಬದಲಾಗಬಹುದೇ ಹೊರತು ಆಂತರ್ಯದಲ್ಲಿ ಅವೆಲ್ಲ ಜನಪರವೇ. ಹಾಗಾಗಿ ಈ ಎಲ್ಲ ಚಳವಳಿಗಳ ಮುಖಗಳ ಹಿಂದೆಯೂ ಸಮಾನವಾಗಿ ಇರುವುದು ಕನ್ನಡತನವಾದ್ದರಿಂದ ಈ ಎಲ್ಲ ಅಂಶಗಳಿಗೂ ಮಹತ್ವ ನೀಡುವುದೇ ನಿಜವಾದ ಕನ್ನಡ ಚಳವಳಿ ಎಂಬ ಅಭಿಪ್ರಾಯ ನನ್ನದು. ಒಂದೊಂದು ಸಂದರ್ಭದಲ್ಲಿ ಒಂದೊಂದು ಅಂಶ ಮೇಲೆದ್ದು, ಅದರ ಮೇಲೆ ಗಮನ ಕೇಂದ್ರೀಕೃತವಾಗಬಹುದೇ ಹೊರತು ಅವುಗಳ ನಡುವೆ – ತಾತ್ವಿಕ ದೃಷ್ಟಿಯಿಂದ – ಯಾವುದೇ ಭಿನ್ನತೆಯಿಲ್ಲ ಎಂಬುದು ನನ್ನ ದೃಢವಾದ ನಿಲವು.



ಈಗ, ನಾವು ಕನ್ನಡ ಚಳವಳಿಯ ಮುಂದಿನ ಸ್ವರೂಪ ಹೇಗಿರಬೇಕೆಂಬ ಬಗ್ಗೆ ಆಲೋಚಿಸಬಹುದು. ಈಗಿನ ನಮ್ಮ ಸಮಸ್ಯೆ ಎಂದರೆ ಎರಡು ಬಗೆಯ ತೊಡಕುಗಳನ್ನು ಪರಿಹರಿಸಿಕೊಳ್ಳುವುದು. ಅವೆಂದರೆ ಜಾಗತೀಕರಣ ಮತ್ತು ಹುಸಿ ರಾಷ್ಟ್ರೀಯತೆ. ಪ್ರಪಂಚದ ಎಲ್ಲರೂ ಸಮಾನರು, ಎಲ್ಲ ಸುಖವಾಗಿರಬೇಕೆಂಬ ಜಗದೃಷ್ಟಿ ಸರಿಯೇ. ಆದರೆ ಇಂದು ಜಾಗತೀಕರಣ ಎಂಬುದು ಅಮೆರಿಕೀಕರಣವಾಗಿದೆ. ರಾಜಕೀಯವಾಗಿ ತನ್ನ ನೀತಿಯನ್ನೇ ಹೇರುವ ಹಾಗೂ ಪ್ರಜಾಪ್ರಭುತ್ವದ ಹೆಸರಿನಲ್ಲಿ ತನ್ನನ್ನು ವಿರೋಧಿಸುವವರ ಮೇಲೆ ದಾಳಿ ಮಾಡುವ ಅಮೆರಿಕ, ಡಬ್ಲ್ಯುಟಿಒ ಮೂಲಕ ಜಗತ್ತಿನ ರಾಷ್ಟ್ರಗಳನ್ನೆಲ್ಲ ಆರ್ಥಿಕವಾಗಿ ತನ್ನ ಕಪಿಮುಷ್ಟಿಯಲ್ಲಿರಿಸಿಕೊಳ್ಳುವ ಹುನ್ನಾರ ಮಾಡುವಂತೆ ಕಾಣುತ್ತಿದೆ. ಇದರಿಂದಾಗಿ ಎಲ್ಲರೂ ಸಾಂಸ್ಕೃತಿಕವಾಗಿ ತನ್ನ ಹಿರಿಮೆಯನ್ನು ಒಪ್ಪಿಕೊಳ್ಳುವಂತೆ ಪರೋಕ್ಷ ಒತ್ತಡ ತರುತ್ತಿದೆ; ಇದಕ್ಕೆ ನಮ್ಮ ಯುವಜನತೆ ಬಲಿಬೀಳುತ್ತಿರುವುದು ಇಂದು ಢಾಳಾಗಿ ಕಾಣುತ್ತಿದೆ. ಇಂಗ್ಲಿಷ್ ವ್ಯಾಮೋಹ ಇದರ ಸಂಕೇತ. ಅದು ಜ್ಞಾನದ ಆಕರವಾಗಿ ಕಾಣುವುದಕ್ಕಿಂತ ಹೆಚ್ಚಾಗಿ ಹಿರಿಮೆಯ ಕುರುಹಾಗಿದೆ. ಇಂಗ್ಲಿಷ್ ಎಂದರೆ ಅಮೆರಿಕನ್ ಇಂಗ್ಲಿಷ್; ಹಲೊ ಬದಲು ಹಾಯ್ ಅನ್ನುವುದು, ಮಿರರ್ ಬದಲು ಲುಕಿಂಗ್‌ಗ್ಲಾಸ್ ಎನ್ನುವುದು, ಗ್ರೌಂಡ್‌ನಟ್ ಬದಲು ಪೀನಟ್ ಎನ್ನುವುದು ಈಗಿನ ಯುವಜನತೆಗೆ ಹಿರಿಮೆಯ ದ್ಯೋತಕವಾಗಿದೆ.

ಕನ್ನಡದ ಸ್ಥಾನವನ್ನು ಮತ್ತಷ್ಟು ಕುಗ್ಗಿಸಿರುವುದು ಹಿಂದಿ. ಅದನ್ನು ರಾಷ್ಟ್ರಭಾಷೆ ಎಂದು ಬಿಂಬಿಸಿ ಇತರ ಭಾಷೆಗಳನ್ನು 'ಪ್ರಾದೇಶಿಕ ಭಾಷೆ'ಗಳೆಂದು ಕರೆಯುವುದು ವಿದ್ರೋಹವಾಗಿದೆ. ಸಾವಿರಾರು ವರ್ಷಗಳಿಂದ ಜನಸಾಮಾನ್ಯರ ಅಭಿವ್ಯಕ್ತಿ ಮಾಧ್ಯಮವಾದ ಭಾಷೆಗಳನ್ನು ನಮ್ಮ ಸಂವಿಧಾನವೇ ಹಾಗೆ ಕರೆದಿರುವುದು ದುರದೃಷ್ಟಕರ. ಹಿಂದಿ ಮಾತನಾಡುವವರು ಮೇಲಿನವರು, ಉಳಿದವರು ಕೆಳಗಿನವರು ಎಂಬ ಭಾವನೆಯನ್ನು ಭಾರತ ರಾಷ್ಟ್ರೀಯತೆಯ ಪರಿಕಲ್ಪನೆಯ ಮೂಲಕ ಬಿತ್ತಲಾಗುತ್ತಿದೆ. ಇದರಿಂದಾಗಿ ಭಾರತ ಮಟ್ಟದಲ್ಲಿ ಹಿಂದಿ ಜನರು ಇತರರನ್ನು ಕೀಳಾಗಿ ಕಾಣುವುದು ಹೆಚ್ಚುತ್ತಿದೆ. ರಾಷ್ಟ್ರ ನಾಯಕರೆಲ್ಲ ಹಿಂದಿ ಮಾತನಾಡುವವರು, ಆ ಭಾಷೆ ಬರದಿದ್ದರೆ ಹಾಗಾಗಲು ಸಾಧ್ಯವಿಲ್ಲ, ಅವರು ಸ್ಥಳೀಯ ನಾಯಕರಾಗಬಹುದು, ಅಷ್ಟೆ. ಇದರಿಂದಾಗಿ ಆ ಜನ ರಾಜಕೀಯವಾಗಿ, ಆರ್ಥಿಕವಾಗಿ ಇತರರ ಮೇಲೆ ತಮ್ಮ ಕಾಲನ್ನೂರಲು ಪ್ರಯತ್ನಿಸುತ್ತಿದ್ದಾರೆ. ಇಲ್ಲಿಗೆ ವಲಸೆ ಬಂದ ಹಿಂದೀಯರ ಜೊತೆ ನಾವು ಹಿಂದಿಯಲ್ಲೇ ಮಾತನಾಡಬೇಕೆಂದು ಅವರು ನಿರೀಕ್ಷಿಸುತ್ತಾರೆ. ಭಾರತ ಒಂದು ರಾಷ್ಟ್ರವಲ್ಲ, ರಾಷ್ಟ್ರಗಳ ಒಕ್ಕೂಟ; ಕರ್ನಾಟಕದಂತಹ ಅನೇಕ ರಾಷ್ಟ್ರಗಳು ಸೇರಿ ಆದದ್ದು. ನಮ್ಮ ಸಂವಿಧಾನದ ಮೊದಲನೇ ವಿಧಿಯೇ "India, that is Bharath, shall be a Union of States" ಎಂದು ಹೇಳುತ್ತದೆ. ಈ ಮಾತಿನಂತೆ ಭಾರತವು ಒಕ್ಕೂಟ ಎಂಬ ಭಾವನೆಯನ್ನು ಬಿಂಬಿಸಬೇಕಾಗಿದೆ.

ಇಂಗ್ಲಿಷ್ ಮತ್ತು ಹಿಂದಿಗಳು ಹೀಗೆ ಕನ್ನಡಿಗರನ್ನು ಮೂರನೆಯ ದರ್ಜೆಯವರನ್ನಾಗಿ ಮಾಡಿವೆ. ಅಂದರೆ ಕನ್ನಡಿಗರು ವಿದೇಶೀಯರು ಮತ್ತು ಹಿಂದೀಯರ ನಂತರ ಮೂರನೆಯ ಸ್ಥಾನ ಪಡೆಯುತ್ತಾರೆ. ಇದು ನಮ್ಮ ಯುವಜನತೆಯಲ್ಲಿಯೇ ಮೈಗೂಡುತ್ತಿವೆ. ಅವರ ಈ ವಿಸ್ಮೃತಿಯನ್ನು ಹೋಗಲಾಡಿಸುವುದು ತುರ್ತು ಕರ್ತವ್ಯ. ಭಾಷಿಕವಾಗಿ ಹೇಗೆಯೋ ಜನಾಂಗಿಕವಾಗಿ ಕೂಡ ನಾವು ಇತರರಿಗೆ ಸರಿಸಮ ಎಂಬ ಆತ್ಮಸ್ಥೈರ್ಯವನ್ನು ತುಂಬಬೇಕಾಗಿದೆ. ನಿಜವಾದ ಕನ್ನಡ ಚಳವಳಿಯು ಈ ಎರಡರಿಂದಲೂ ಮುಕ್ತಿಗೊಳ್ಳುವ ದಿಸೆಯಲ್ಲಿ ಕಾರ್ಯಪ್ರವೃತ್ತವಾಗಬೇಕು. ಸಾಮಾನ್ಯ ಕನ್ನಡಿಗ ತನ್ನೆಲ್ಲ ವ್ಯವಹಾರಗಳನ್ನೂ ಕನ್ನಡದ ಮೂಲಕವಾಗಿಯೇ ಮಾಡುವ ಸನ್ನಿವೇಶ ಒದಗಬೇಕು; ಕನ್ನಡಿಗ ಇತರರ ಜೊತೆ ಸಮಾನಸ್ಕಂದನಂತೆ ವ್ಯವಹರಿಸುವಂತಾಗಬೇಕು. ಕೊಳುಕೊಡುಗೆಗಳು ಪರಸ್ಪರವಾಗಬೇಕು. ನಾನು ಕನ್ನಡದ ಬಗ್ಗೆ ಹೇಳುತ್ತಿರುವ ಮಾತು ಭಾರತದ ಇತರ ಭಾಷಿಕ ರಾಷ್ಟ್ರೀಯತೆಗಳಿಗೂ ಅನ್ವಯಿಸುತ್ತದೆ. ಸಮಾನತೆಯೇ ಸಮತೋಲನದ ಆಧಾರ. ಹಾಗಾಗಿ ಒಕ್ಕೂಟ ಮಟ್ಟದಲ್ಲಿ ಎಲ್ಲ ಭಾಷೆಗಳಿಗೂ ಸಮಾನಾವಕಾಶವಿರಬೇಕು. ಕನ್ನಡ ಚಳವಳಿ ತನ್ನ ಅಂತಿಮ ಗುರಿಯಾಗಿ ಈ ನಿಲುವನ್ನು ಪ್ರತಿಪಾದಿಸಬೇಕು. ಎಲ್ಲ ಚಳವಳಿಗಳಿಗೂ ಒಂದು ಅಂತಿಮ ಗುರಿಯಿದ್ದರೂ ಸಮಸ್ಯೆಗಳನ್ನು ತಾತ್ಕಾಲಿಕ ನೆಲೆಯಲ್ಲಿಯೂ ಎದುರಿಸಬೇಕಾಗುತ್ತದೆ; ಅವುಗಳಿಗೆ ಮುಖಾಮುಖಿಯಾಗುವಲ್ಲಿನ ಮಾರ್ಗಗಳೂ ಭಿನ್ನವಾಗಬಹುದು.

ಅಮೆರಿಕ ಪ್ರತಿಪಾದಿಸುವ ಜಾಗತೀಕರಣದ ಮುಕ್ತತೆಯಿಂದ ಪಾರಾಗಿ, ಇತಿಹಾಸದಲ್ಲಿ ನಡೆದ ತಪ್ಪುಗಳನ್ನು ಸರಿಪಡಿಸುವ ದಿಸೆಯಲ್ಲಿನ ಆರ್ಥಿಕ ಮತ್ತು ಸಾಂಸ್ಕೃತಿಕ ನೀತಿಗಳನ್ನು ರೂಪಿಸಿಕೊಳ್ಳುವುದು ನಮಗೆ ಮುಖ್ಯ. ವಿವಿಧ ಭಾಷಿಕ ರಾಷ್ಟ್ರೀಯತೆಗಳು ಅಳವಡಿಸಿಕೊಳ್ಳಬೇಕಾದ ಈ ನೀತಿಗಳು ಎಂತಹವಿರಬೇಕೆಂಬ ಬಗ್ಗೆ ಭಿನ್ನಾಭಿಪ್ರಾಯವಿರಲು ಸಾಧ್ಯ. ಅಂದರೆ ಭಾಷಿಕ ಚಳವಳಿಗಳ ತಾತ್ವಿಕ ನೆಲಗಟ್ಟಿನಲ್ಲಿಯೂ ವ್ಯತ್ಯಾಸಗಳಿರಬಹುದು. ಆದರೆ ಒಟ್ಟಾರೆ ವ್ಯಕ್ತಿಗೌರವದಂತೆಯೇ, ಜನಾಂಗಿಕ ಸಮಾನತೆಯನ್ನು ಸಾಧಿಸುವುದು ನಮ್ಮ ಚಳವಳಿಗಳ ಗುರಿಯಾಗಬೇಕು, ಪರಸ್ಪರರನ್ನು ಗೌರವಿಸುವ ಮನೋಭಾವ ಮೈಗೂಡಬೇಕು. ಹೀಗಾಗಿ ವಿವಿಧ ಚಳವಳಿಗಳು ರೂಪುಗೊಳ್ಳಲು ಸಾಧ್ಯ; ವಿವರಗಳಲ್ಲಿ ಅವುಗಳ ನಡುವೆ ಭಿನ್ನತೆ ಇರಬಹುದು, ಆದರೆ ಗುರಿ ಒಂದೇ. ಕನ್ನಡ ರಾಜಕೀಯ ಶಕ್ತಿಯ ಸಂಕೇತವೂ ಆಗಬೇಕು. ಕನ್ನಡವನ್ನು ಬಿಟ್ಟರೆ ತನ್ನ ಅಸ್ತಿತ್ವ ಸಾಧ್ಯವಿಲ್ಲ ಎಂಬ ಸ್ಥಿತಿ ರಾಜಕಾರಣದಲ್ಲಿ ಸ್ಥಿರವಾಗಬೇಕು.

ಡಾ|| ಪಿ. ವಿ. ನಾರಾಯಣ, 'ತಂಗಾಳಿ', ೩೦, ಆರ್‌ಬಿಐ ಕಾಲೋನಿ
ಜಯನಗರ ೩ನೇ ಬ್ಲಾಕ್ ಪೂರ್ವ, ಬೆಂಗಳೂರು - ೫೬೦ ೦೧೧

## ಸರ್ವೋದಯ ಚಳವಳಿ : ಒಂದು ಚರ್ಚೆ

"ನಾನು ಯಾವ ನೂತನ ಸಿದ್ಧಾಂತವನ್ನೂ ಮಂಡಿಸಿಲ್ಲ. ಗಾಂಧಿ ಪಂಥವೆಂಬುದೊಂದಿಲ್ಲ. ನನ್ನ ತರುವಾಯ ಯಾವ ಪಂಥವನ್ನೂ ಕಟ್ಟಿಹೋಗುವ ಇಚ್ಛೆ ನನಗಿಲ್ಲ. ಯಾವುದಾದರೂ ನೂತನ ತತ್ವದ ಅಥವಾ ಸಿದ್ಧಾಂತದ ಮೂಲ ಪುರುಷ ಎಂಬ ಭಾವನೆಯೂ ನನಗಿಲ್ಲ'' ಎಂದು ಗಾಂಧೀಜಿ ಸ್ಪಷ್ಟೋಕ್ತಿಗಳಲ್ಲಿ ಹೇಳಿದ್ದಾರೆ. ಅದರ ಪ್ರಕಾರ ಗಾಂಧಿವಾದವೆಂಬುದೊಂದು ಇಲ್ಲವೆಂದಾದ ಮೇಲೆ ಗಾಂಧಿವಾದಿಯೂ ಇಲ್ಲ. ವಿಚಾರ ವ್ಯಕ್ತಿಗಿಂತ ದೊಡ್ಡದು ಮತ್ತು ಅದು ವ್ಯಕ್ತಿ ನಿರಪೇಕ್ಷವಾಗಿರಬೇಕಾದುದು. ವ್ಯಕ್ತಿ ಪ್ರವಾಹ ಸೀಮಿತವಾದುದು. ಆದರೆ ವಿಚಾರ ಪ್ರವಾಹ ಅಪರಿಮಿತವಾದುದು. ಗಾಂಧಿ ವಿಚಾರ ಯಾವ ಧ್ಯೇಯ ಸೂಚಕ ಮತ್ತು ಪ್ರತಿಪಾದಕವೋ ಆ ಧ್ಯೇಯದ ಹೆಸರಿನಿಂದಲೇ ಆ ವಿಚಾರವನ್ನು ಕರೆಯುವುದು ಹೆಚ್ಚು ಸೂಕ್ತವಾಗಿದ್ದೀತು. ಗಾಂಧಿಯವರ ಧ್ಯೇಯ ಬಹಿಷ್ಕಾರ ಸಭ್ಯತೆಯ ವಿರುದ್ಧ, ಸಂಹಾರ ಸಭ್ಯತೆಯ ನಿಷೇಧಕ ಸರ್ವಾಯತನದ ಸಭ್ಯತೆಯನ್ನು ಸ್ಥಾಪಿಸುವುದೇ ಆಗಿತ್ತು. ಎಂದರೆ 'ಬಹುಜನ ಸುಖಾಯ, ಬಹುಜನ ಹಿತಾಯ' ತತ್ವದಿಂದ ಮುಂದೆ ಹೋಗಿ ಸರ್ವರ (ಜನರ) ಹಿತಸಾಧಿಸುವ ಸರ್ವಾಯತನದ ಸಭ್ಯತೆಯನ್ನು ನಿರ್ದೇಶಿಸುವ ಶಬ್ದ ಬಳಸಿ ಆ ಹೆಸರಿನಿಂದ ಗಾಂಧಿ ವಿಚಾರವನ್ನು ಕರೆಯುವುದೇ ಹೆಚ್ಚು ಸಮಂಜಸವಾಗಿರುವುದರಿಂದ ನಮ್ಮದು ಕೇವಲ ಗಾಂಧಿ ವಿಚಾರವಲ್ಲ ಅದು ಸರ್ವೋದಯ ವಿಚಾರ; ನಾವು ಗಾಂಧಿ

ವಾದಿಗಳಲ್ಲ ಸರ್ವೋದಯವಾದಿಗಳು.

ಸರ್ವಾಯತನದ ಸಭ್ಯತೆಯನ್ನು ಕಟ್ಟುವ ಧ್ಯೇಯ ಬಹುದೂರದ್ದು ಮತ್ತು ಬಹು ಉನ್ನತವಾದುದೆನಿಸುತ್ತದೆ. ಅದು ಕೊನೆಯ ಬಿಂದು. ಆರಂಭಿಕ ಬಿಂದು ಅಂತ್ಯೋದಯ. ಸರ್ವೋದಯದ ಆರಂಭ ಅಂತ್ಯೋದಯದಿಂದ, ಸಾಧನ ಹಲವಾರು ರಚನಾತ್ಮಕ ಕಾರ್ಯಕ್ರಮಗಳು. ಸ್ವತಂತ್ರ ಭಾರತದಲ್ಲಿ ನಡೆದ ಮೊದಲ ದೇಶವ್ಯಾಪಿ ಭೂದಾನ ಆಂದೋಳನವೂ ಇದನ್ನೇ ಗಮನದಲ್ಲಿರಿಸಿಕೊಂಡು ಸಾಗಿತು. ಅದು ದೇಶದ ಮೂಲಭೂತ ಸಮಸ್ಯೆಯನ್ನೆತ್ತಿಕೊಂಡಿತ್ತು. ಭೂಮಿ ಸಮಸ್ಯೆ, ಭೂಮಿ ಹಂಚಿಕೆಯಲ್ಲಾಗಿರುವ ವಿಷಮತೆ, ಭಾರಿ ಪ್ರಮಾಣದ ಕೃಷಿ ಕಾರ್ಮಿಕ ವರ್ಗದಲ್ಲಿ ಭೂಮಿಹೀನತೆ ಇತ್ಯಾದಿ ಗಂಭೀರ ಸಮಸ್ಯೆಗಳ ಪರಿಹಾರಾರ್ಥ ಮತ್ತು ಅದಕ್ಕಾಗಿ ಹಿಂಸಾ ವಿಧಾನದ ಅನುಸರಣೆಯನ್ನು ತೊರೆದು ಅಹಿಂಸಾತ್ಮಕ ವಿಧಾನಗಳಿಂದಲೇ ಸಮಸ್ಯೆಯ ಪರಿಹಾರ ಸಾಧ್ಯವೆಂದು ತೋರಿಸಲು ಆಂದೋಳನ ನಡೆಯಿತು. ಭೂಮಿಯ ಪುನರ್ ಹಂಚಿಕೆಯಾಗಲಿ, ಕಟ್ಟಕಡೆಯ ಮನುಷ್ಯನ ಕೈಗೂ ಉತ್ಪಾದನೆಯ ಸಾಧನವಾದ ಭೂಮಿ ದೊರಕುವಂತಾಗಲಿ ಮತ್ತು ಅವನು ರಾಜ್ಯಾವಲಂಬಿಯಾಗುವುದರ ಬದಲು ಸ್ವಾವಲಂಬಿಯಾಗಲಿ; ಯಾವನು ಸ್ವಾವಲಂಬಿಯೋ ಅವನೇ ಸ್ವಾಭಿಮಾನಿ. ಯಾವನು ಪರಾವಲಂಬಿಯೋ ಅವನೆಂದೂ ಸ್ವಾವಲಂಬಿಯಾಗಿ ಇತರರೊಡನೆ ತಲೆಎತ್ತಿ ನಿಲ್ಲಲಾರ. ಆದ್ದರಿಂದ ಆತ್ಮಾವಲಂಬಿಯಾಗುವಂಥ ದುಡಿಮೆಯ ಸಾಧನ ಅವನ ಕೈಗಿರಿಸಬೇಕೆಂಬುದೇ ಭೂದಾನ ಆಂದೋಳನದ ಮೊಟ್ಟಮೊದಲ ಕಾರ್ಯನೀತಿಯಾಯಿತು. ಎರಡನೆಯದಾಗಿ, ಕಡೆಯ ಮನುಷ್ಯನ ಅಭಿಪ್ರಾಯಕ್ಕೂ ಸಮಾನ ಮನ್ನಣೆ, ಬೆಲೆ, ಮತ್ತು ಅವಕಾಶವಿರಬೇಕಾದ್ದು ಅತ್ಯವಶ್ಯಕವೆಂದು ಬಗೆದು ದೇಶದ ರಾಜ್ಯಶಕ್ತಿಯು ವಿಕೇಂದ್ರಿತವಾಗಿ ಪ್ರತಿಯೊಂದು ಗ್ರಾಮವೂ ಸ್ವಾಯತ್ತ ಆಡಳಿತದ ಘಟಕವಾಗಲಿ. ಆ ಘಟಕದ ಅಂಗವೆನಿಸುವ ಕಟ್ಟಕಡೆಯ ಮನುಷ್ಯನೂ ಅಲ್ಲಿ ತನ್ನ ಅಭಿಮತ ವ್ಯಕ್ತಪಡಿಸುವ ಮುಕ್ತ ಮತ್ತು ಸಮಾನಾವಕಾಶ ಪಡೆಯಲಿ. ಆತನ ಅಭಿಮತ ಕೇಳಿಯೇ ನಿರ್ಣಯವಾಯಿತು ಎನ್ನುವಂತಾದರೆ, ಅಷ್ಟು ಸಮಾಧಾನ ಆತನಿಗೆ ದೊರೆಯುವಂತಾಗಲಿ ಎನ್ನುವ ವಿಚಾರದಿಂದ ಪ್ರೇರಿತವಾಗಿ ಸರ್ವೋದಯ ಚಳವಳಿ ರಾಜ್ಯಶಕ್ತಿಯ ವಿಕೇಂದ್ರೀಕರಣದ ಕಾರ್ಯನೀತಿಯನ್ನು ರೂಪಿಸಿ ಅದರ ಅನ್ವಯಕ್ಕೆ ಶ್ರಮಿಸಿತು. ಇದು ಎರಡನೆಯ ಕಾರ್ಯನೀತಿಯಾಯಿತು.

ಭೂಮಿಯ ಪುನರ್‌ಹಂಚಿಕೆಯ ವಿಷಯ ಆರ್ಥಿಕ ನ್ಯಾಯದ ಕಾರ್ಯಕ್ರಮವಾದರೆ, ರಾಜ್ಯಶಕ್ತಿಯ ವಿಕೇಂದ್ರೀಕರಣ ರಾಜಕೀಯ ನ್ಯಾಯ ದೊರಕಿಸಿಕೊಡುವ ಕಾರ್ಯಕ್ರಮವಾಯಿತು. ಎರಡೂ ಕೂಡಿ ಬಹುಮಟ್ಟಿಗೆ ಕಟ್ಟಕಡೆಯ ಮನುಷ್ಯನವರೆಗೆ ಮೂಲಭೂತ ಅಂಶಗಳಲ್ಲಿ ನ್ಯಾಯ ತಲುಪಿಸುವ ಸಮಗ್ರ ಕಾರ್ಯಕ್ರಮವಿತ್ತು. ಈ ಸಮಗ್ರತೆಯ ದರ್ಶನ ಆಂದೋಳನಕ್ಕಿತ್ತು.

ಮೇಲಿನ ಸಮಗ್ರ ದರ್ಶನಕ್ಕೆ ಸಾಕಾರ ರೂಪಕೊಡುವ ಉದ್ದೇಶ್ಯಕ್ಕಾಗಿ ದೀಕ್ಷೆ ತೊಟ್ಟು ದುಡಿಯುವ ಕಾರ್ಯಕರ್ತರ ಪಡೆಯನ್ನು ಕಟ್ಟುವ ಕಾರ್ಯದಲ್ಲಿ ಸರ್ವೋದಯ ಚಳವಳಿ ತೊಡಗಿತ್ತು. ಅಂಥ ಸಂಕಲ್ಪಬದ್ಧ ಕಾರ್ಯಕರ್ತರಿಗಾಗಿ ಅವರ ನಡವಳಿಕೆಯ ಸಮಗ್ರ ಸಂಹಿತೆಯನ್ನು ಸಹ ರೂಪಿಸಲಾಯಿತು. ಮುಖ್ಯವಾಗಿ, ಸರ್ವೋದಯ ಕಾರ್ಯಕರ್ತ ತಾನು ಒಂದು ವೃತ್ತದ ಮೇಲಿನ ಅಸಂಖ್ಯ ಬಿಂದುಗಳಲ್ಲೊಂದಾಗಿ ಕೆಲವು ಬಿಂದುಗಳಿಗೆ ಸಮೀಪದವನೂ, ಇನ್ನು ಉಳಿದವಕ್ಕೆಲ್ಲ ದೂರದವನೂ ಆಗುಳಿಯದೆ, ವೃತ್ತದ ಮಧ್ಯಬಿಂದುವಾಗಬಲ್ಲವನಾಗಲಿ. ಆಗ ಆತ ಎಲ್ಲ ಬಂಧುಗಳಿಗೂ (ಅರ್ಥಾತ್ ಎಲ್ಲರಿಗೂ) ಸಮಾನ ದೂರದವನಾಗಿ ಸರ್ವರನ್ನೂ ಒಂದುಗೂಡಿಸುವ ಅಥವಾ ಹತ್ತಿರ ತರುವ ಶಕ್ತಿಯಾಗಲಿ. ಈ ಭವ್ಯ ದರ್ಶನಕ್ಕನುಸಾರ ಆತನ ವ್ಯಕ್ತಿತ್ವ ರೂಪಗೊಳ್ಳಲಿ ಎಂಬ ಆಶಯದಿಂದ ಪ್ರೇರಿತವಾಗಿ ಚಳವಳಿ ಆತನಿಗಾಗಿ ಕೆಲವು ನಿಷ್ಠೆಗಳುಳ್ಳ ಪ್ರತಿಜ್ಞಾ ಪತ್ರ ಗೊತ್ತುಮಾಡಿತು. ಸತ್ಯ, ಅಹಿಂಸೆ, ಸಾಧನಶುದ್ಧಿ, ಉತ್ಪಾದಕ ಶರೀರ ಶ್ರಮ ಮತ್ತು ಸಮಾನತೆಯ ಜೀವನಮೌಲ್ಯಗಳಿಗೆ, ಶುದ್ಧ ಪ್ರಮಾಣಿತ ಖಾದಿಧಾರಿಯಾಗಿ ಆಜೀವನಪರ್ಯಂತ ಈ ವ್ರತ ಪಾಲನೆಗೆ; ಮಾದಕದ್ರವ್ಯಗಳ ನಿಷೇಧಕ್ಕೆ; ಸ್ಪೃಶ್ಯಾಸ್ಪೃಶ್ಯತೆ, ಜಾತಿಗತಿ ಭೇದಭಾವಗಳಿಗೆ ಆಸ್ಪದ ಕೊಡದಿರುವಿಕೆ; ಸರ್ವಧರ್ಮಸಮಭಾವ, ಸ್ತ್ರೀ-ಪುರುಷ ಸಮಾನತೆಗೆ; ಯಾವುದೇ ರಾಜಕೀಯಪಕ್ಷಕ್ಕೆ ಸದಸ್ಯನಾಗದಿರುವಿಕೆ; ಯಾವುದೇ ಚುನಾಯಿತ ಸ್ಥಾನಕ್ಕೆ ಉಮೇದುವಾರನಾಗದಿರುವಿಕೆ ಮತ್ತು ಲೋಕತಂತ್ರದ ಆಧಾರಭೂತ ಮೌಲ್ಯಗಳ ರಕ್ಷಣೆಗೆ ಮತ್ತು ಸ್ಥಾಪನೆಗಾಗಿ ಶ್ರಮಿಸುವಿಕೆಗೆ; ಸಮಾಜದ ನಿಃಸ್ವಾರ್ಥ ಸೇವೆಗೆ, ಅಸತ್ಯ ಮತ್ತು ಅನ್ಯಾಯದ ಅಹಿಂಸಾತ್ಮಕ ಪ್ರತೀಕಾರಕ್ಕೆ, ಅಶುದ್ಧ ಸಾಧನಗಳ ಬಳಸದಿರುವ ಮತ್ತು ನಿತ್ಯ ಸ್ವಾಧ್ಯಾಯದ ನಿಷ್ಠೆಗಳಿಗೆ ಬದ್ಧನಾಗಿರುವ ಪ್ರತಿಜ್ಞೆ, ಇವೆಲ್ಲ ಅದರಲ್ಲಿ ಸೇರಿದ್ದವು. ಇವಲ್ಲದೆ, ಸಾಂಘಿಕವಾಗಿ ಸರ್ವಸಮ್ಮತಿ ಅಥವಾ




**ಖ್ಯಾತ ಲೇಖಕಿ ಶ್ರೀಮತಿ ಭುವನೇಶ್ವರಿ ಹೆಗಡೆ ಅವರು ಡಿಸೆಂಬರ್ ೩ ರಂದು ಮಂಗಳೂರಿನ ಪ್ರಸಾದ್ ಆರ್ಟ್ ಗ್ಯಾಲರಿಯಲ್ಲಿ, ವ್ಯಂಗ್ಯಚಿತ್ರಕಾರ ಶ್ರೀ ಹರಿಶ್ಚಂದ್ರ ಶೆಟ್ಟಿ (ಹರಿಣಿ) ಅವರ ಕೃತಿ 'ಪೋಕ್ರಿ'ಯನ್ನು ಅನಾವರಣಗೊಳಿಸಿದರು ಮತ್ತು ಅವರ ಈ-ಚಿತ್ರ ಪ್ರದರ್ಶನವನ್ನು ಉದ್ಘಾಟಿಸಿದರು. ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಹರಿಣಿ, ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಡಾ|| ಶಾಂತಾರಾಮ ಶೆಟ್ಟಿ ಮತ್ತು ಶ್ರೀಮತಿ ಭುವನೇಶ್ವರಿ ಹೆಗಡೆ.**

ಸರ್ವಾನುಮತಿಯಿಂದ ನಿರ್ಣಯ ಪ್ರಕ್ರಿಯೆ, ಶಿಸ್ತುಕ್ರಮವನ್ನವಲಂಬಿಸದಿರುವುದು, ಸ್ವೈಚ್ಛಿಕತೆ ಮತ್ತು ಸ್ವಯಂಪ್ರೇರಣೆಗಳಿಗೆ ಪೂರ್ಣಾವಕಾಶ, ಒಂದು ಸಡಿಲ ಭ್ರಾತೃಸಮಾಜದ ನಿರ್ಮಾಣದ ಗುರಿಸಾಧಿಸುವ ದೃಷ್ಟಿಯುಳ್ಳ ಸಂಘಟನೆಯ ರಚನೆ ಮುಂತಾದವು ಆ ಸಂಹಿತೆಯಲ್ಲಿ ಸೇರಿದ್ದವು. ಇಷ್ಟೆಲ್ಲ ಸಾಧನ-ಸಲಕರಣೆಗಳಿಂದ ಸುಸಜ್ಜಿತವಾದ ಭೂದಾನ ಆಂದೋಳನ ಕೆಲವೊಂದು ವಿಷಯಗಳಲ್ಲಿ ಸಫಲ, ಇನ್ನು ಕೆಲವು ವಿಷಯಗಳಲ್ಲಿ ವಿಫಲವಾಗಿ, ಮತ್ತೆ ಕೆಲವನ್ನು ಸಮಾಜಕ್ಕೂ, ಸರ್ಕಾರಕ್ಕೂ ಬಿಟ್ಟುಕೊಟ್ಟು ವಿರಮಿಸಿತು. ಆದರೆ ಭೂದಾನ ಚಳವಳಿ ತನ್ನ ವೈಫಲ್ಯಗಳಿಂದ ಪಾಠ ಕಲಿಯಿತು ಮತ್ತು ಅನುಭವ ಪಡೆಯಿತು. ತಾವು ತಿದ್ದಿಕೊಳ್ಳಬೇಕಾದ್ದಿದೆ ಎಂಬ ಅರಿವು ಮೇಲ್ಮಟ್ಟದ ಕಾರ್ಯಕರ್ತ ಮತ್ತು ನಾಯಕ ವರ್ಗದಿಂದಾರಂಭಿಸಿ ಅತಿ ಕೆಳಗಿನ ತೃಣಮೂಲ ಕಾರ್ಯಕರ್ತರವರೆಗೂ ಎಲ್ಲ ಸ್ತರಗಳಲ್ಲೂ ಉಂಟಾಯಿತು, ಸ್ವಯಂ ವಿಮರ್ಶೆಯ ಪ್ರಕ್ರಿಯೆ ಸಹ ನಡೆಯಿತು. ಒಂದೆರಡು ಸಂದರ್ಭಗಳಲ್ಲಿ ವಿನೋಬಾ ನುಡಿದುದು ಆತ್ಮವಿಮರ್ಶೆಗೆ ಸಾಕ್ಷಿಯಾಗಿತ್ತು. ತಮ್ಮ ನಿಧನಕ್ಕೆ ಒಂದೆರಡು ವರ್ಷ ಮುಂಚೆಯೇ ನಮ್ಮಂಥ ಕೆಲವು ಕಾರ್ಯಕರ್ತರೊಡನೆ ಮಾತನಾಡುತ್ತಾ ತಾವು ಪುನಃ ಭೂದಾನ ಚಳವಳಿ ನಡೆಸುವುದಾದರೆ ಈಗ ನಡೆಸಿದಂತೆ ನಡೆಸದೆ ಭಿನ್ನ ರೀತಿಯಲ್ಲಿ ನಡೆಸಿಯೇನು. ಏಕೆಂದರೆ ತಾನೂ ಪಾಠ ಕಲಿತಿದ್ದೇನೆ ಎಂದರು. ಇದು ಆತ್ಮ ವಿಮರ್ಶೆಯ ಫಲಸ್ವರೂಪವಾಗಿ ಬಂದ ಮಾತು.

ಸರ್ವೋದಯ ಆಂದೋಳನ ದೀರ್ಘ ನಿರೀಕ್ಷಣೆ ಮತ್ತು ಅನುಭವದ ಆಧಾರದ ಮೇಲೆ ಬಂದ ಕೆಲವು ನಿಷ್ಕರ್ಷೆಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಶಕ್ತಿಗಳ ವಿಕೇಂದ್ರೀಕಾರಣವಾಗಿಯೇ ದೇಶದ ಸ್ವಾತಂತ್ರ್ಯ ಮತ್ತು ಪ್ರಜಾತಂತ್ರದ ಫಲಗಳು ಸಾಮಾನ್ಯ ಮನುಷ್ಯನಿಗೂ ಮತ್ತು ಕಟ್ಟಕಡೆಯ ಮನುಷ್ಯನಿಗೂ ತಲುಪುವಂತೆ ಮಾಡುವುದು ಸಾಧ್ಯವೆಂಬುದು ಮೂಲಭೂತವೂ ಮತ್ತು ಅತಿ ಪ್ರಮುಖವಾದದ್ದೂ ಆಗಿದೆ. ಸಣ್ಣ-ಸಣ್ಣ ಜನಸಮುದಾಯಗಳಲ್ಲಿ ನೇರ ಮುಖಾಮುಖಿ ಸಾಮುದಾಯಿಕ ಪ್ರಜಾತಂತ್ರ ಹೆಚ್ಚು ವಸ್ತುನಿಷ್ಠವಾಗಿಯೂ ಮತ್ತು ಅರ್ಥವತ್ತಾಗಿಯೂ ನಡೆಯಬಲ್ಲದು ಎನ್ನುವುದು ನಮ್ಮ ವಿಚಾರದ ಕೇಂದ್ರಬಿಂದು. ಅದೇ ರೀತಿ ಎಲ್ಲ ದುಡಿಯುವ ಕೈಗಳಿಗೂ ಉತ್ಪಾದನೆಯ ಸಾಧನವಿತ್ತು, ಅವಕ್ಕೆ ಪೂರ್ಣ ಉದ್ಯೋಗ ಕೊಟ್ಟೇ ನಿರುದ್ಯೋಗದ ಮೂಲೋತ್ಪಾಟನೆ ಸಾಧ್ಯ ಮತ್ತು ನೈಜ ಸಮಾನತೆ ಹಾಗೂ ಸಮೃದ್ಧಿಯ ಗುರಿಸಾಧನೆ ಆದೀತು 'ಎಂಬುದು ಅದೇ ಕೇಂದ್ರ ಬಿಂದುವಿನ ಮತ್ತೊಂದು ಮುಖ. ಅದಕ್ಕಾಗಿ ಸಣ್ಣ ಮತ್ತು ಸರಳ ತಂತ್ರಜ್ಞಾನ (small tool technology) ಅಥವಾ ಗ್ರಾಮೀಣ ತಂತ್ರಜ್ಞಾನ ಅಥವಾ ಸಯುಕ್ತ ತಂತ್ರಜ್ಞಾನವನ್ನು ಅನ್ವಯಿಸಿ ಬೆಳೆಸಿಯೇ ನಿರುದ್ಯೋಗ ಮತ್ತು ಬಡತನದ ನಿವಾರಣ ಸಾಧ್ಯವೆಂದು ಆಂದೋಳನದ ದೃಢನಂಬಿಕೆ. ಇದೇ ಮಾತು ಭಾರಿ ಉದ್ಯೋಗಪತಿಗಳೇ ಆ ಕ್ಷೇತ್ರದ ಧುರೀಣರೇ ಹೇಳುತ್ತಿದ್ದಾರೆ. ಗಾಂಧಿ-ವಿನೋಬಾರನ್ನು

ಪಕ್ಕಕ್ಕಿಟ್ಟು ಮಾತನೋಡೋಣ. ವಿಕೇಂದ್ರೀಕರಣದ ಪರ ಮಾತನಾಡುವ ಚಿಂತನಶೀಲ ವ್ಯಕ್ತಿಗಳನೇಕರು ಇದಾರೆ. ಜ. ಸುಂದರ್‌ಜಿ, ನಯನತಾರಾ ಸಹಗಲ್, ಶ್ರಂಜಯ ಚಕ್ರವರ್ತಿ, ಜೇಮ್ಸ್ ಮೇನರ್, ಮೆಕಿನ್ ಜೋನ್ಸ್ ಮುಂತಾದ ಭಿನ್ನಭಿನ್ನ ಕ್ಷೇತ್ರಗಳ, ವೈವಿಧ್ಯಮಯ ವಿಚಾರಧಾರೆಯ ಜನರೂ ಈ ಒಂದು ವಿಷಯದಲ್ಲಿ ಮಾತ್ರ ಏಕಧ್ವನಿಯಲ್ಲಿ ಮಾತನಾಡಿದ್ದಾರೆ. ಭಾರತದಂಥ ವಿಶಾಲ, ಅತ್ಯಂತ ವೈವಿಧ್ಯಮಯ ದೇಶಕ್ಕೆ ಇದೊಂದೇ ಶ್ರೇಷ್ಠ ಮಾರ್ಗವೆಂದು ಅವರೆಲ್ಲ ಪ್ರತಿಪಾದಿಸಿದಾರೆ. ಇಲ್ಲಿ ಒಂದು ಎಚ್ಚರಿಕೆಯ ಮಾತನ್ನು ಸದಾ ನೆನಪಿನಲ್ಲಿಟ್ಟಿರಬೇಕು – ವಿಕೇಂದ್ರೀಕರಣವೆಂದರೆ ಅದು ವಿಘಟನೆಯಲ್ಲ. ಈ ಮಾತನ್ನು ಮರೆಯದಿರಬೇಕು.

ಸರ್ವೋದಯ ಚಳವಳಿಯು ಇನ್ನೂ ಎರಡು-ಮೂರು ಮೌಲಿಕ ಪಾಠಗಳನ್ನು ಕಲಿತಿದೆ. ಒಂದು ಸಂಘಟನೆ, ಒಂದು ವೈಚಾರಿಕ ಚಳವಳಿ ಸ್ವಸ್ಥ ಗತಿಶೀಲ, ಮತ್ತು ಸ್ವಯಂಸ್ಫೂರ್ತಿ ಮತ್ತು ಸ್ವಯಂಪ್ರೇರಣೆಯಿಂದ ದೃಢ ಹೆಜ್ಜೆಯಿಟ್ಟು ಮುನ್ನಡೆಯಬೇಕಾದರೆ, ಅದರ ಕಾರ್ಯಕರ್ತರ ಸಮೂಹ ಇವೆಲ್ಲ ಗುಣಲಕ್ಷಣಗಳನ್ನುಳ್ಳ ಚೈತನ್ಯಮಯ ಪಡೆಯಾಗಿ ಮುನ್ನಡೆಯುವಂತಿರಬೇಕು. ಹಾಗಾಗಲು ಒಂದೇ ಒಂದು ನಿಶಾಂತ ಆವಶ್ಯಕತೆಯೆಂದರೆ ಅವರನ್ನೆಲ್ಲ ಒಂದುಗೂಡಿಸಿ, ಚೈತನ್ಯ ತುಂಬಬಲ್ಲ ವ್ಯಾಪಕ, ಸರ್ವಸಮ್ಮತ, ತ್ಯಾಗಮಯ ಕಾರ್ಯಕ್ರಮವೊಂದಿರಬೇಕು. ಅದು ಚಳವಳಿಗೆ ಜೀವನಾಡಿ, ಅಥವಾ ರಕ್ತಪ್ರವಾಹವಿದ್ದಂತೆ. ಅದರ ಅಭಾವವಿತ್ತೋ ಚಳವಳಿಯು ವಿಘಟನೆಯ ಹಾದಿ ಹಿಡಿಯಿತೆಂದೇ ತಿಳಿಯಬೇಕು. ಸುತ್ತಲೂ ಕಣ್ಣು ಹಾಯಿಸಿ ನೋಡಿದಾಗ ಇಂದಿಗೂ ಈ ಮಾತಿನ ಸತ್ಯಾಂಶ ಎದ್ದುಕಾಣುತ್ತದೆ. ಎರಡನೆಯದಾಗಿ, ಆಡಳಿತಪಕ್ಷದೊಂದಿಗೆ ಚಳವಳಿಯ ಸಂಬಂಧ ಏನು ಮತ್ತು ಅದು ಆ ಪಕ್ಷಕ್ಕೆ ಎಷ್ಟು ದೂರ ಅಥವಾ ಎಷ್ಟು ಸಮೀಪವಿರಬೇಕೆಂಬುದನ್ನು ಅತಿ ಸುಸ್ಪಷ್ಟ ಶಬ್ದಗಳಲ್ಲಿ ನಿಶ್ಚಯಿಸಿಟ್ಟುಕೊಳ್ಳಬೇಕು. ಮೂರನೆಯದಾಗಿ, ಆ ಚಳವಳಿ ತನ್ನ ಪ್ರಕೃತತೆ (relevance) ಮತ್ತು ಉಪಯೋಗಿತೆಯನ್ನೂ, ಕಾರ್ಯ ಮತ್ತು ಕಾರ್ಯಕ್ಷಮತೆಯನ್ನೂ ನಿರಂತರ ಆತ್ಮ ವಿಮರ್ಶೆಗೆ ಒಳಪಡಿಸುತ್ತಿರಬೇಕು. ಸಂಘಟನಾ ಶಾಸ್ತ್ರದ ಈ ನಿಯಮವನ್ನು ಮರೆಯದಿರಬೇಕು. ನಾಲ್ಕನೆಯದಾಗಿ, ಒಡಕುತನದ ಪ್ರವೃತ್ತಿ, ಸ್ವಪ್ರತಿಷ್ಠೆ, ಏಕಾಧಿಕಾರದ ಪ್ರವೃತ್ತಿ, ಅತಿಶಯ ಕುಶಲತೆಯಿಂದ ನ್ಯಾಯ ವಿರುದ್ಧ ರೀತಿಯಲ್ಲಿ ಎಲ್ಲರನ್ನೂ ಎಲ್ಲವನ್ನೂ ಸ್ವಾಧೀನದಲ್ಲಿಟ್ಟುಕೊಳ್ಳುವ ಪ್ರವೃತ್ತಿಯೇ ಮುಂತಾದ ಹಲವಾರು ಕುಪ್ರಭಾವಗಳಿಗೆ ಬಲಿಯಾಗದೆ ಚಳವಳಿ ಅವುಗಳಿಂದ ದೂರ ಉಳಿಯಬೇಕಾದರೆ ಅದರೊಳಗಿರುವ ಕಾರ್ಯಕರ್ತರಲ್ಲಿ ಶ್ರೇಷ್ಠಮಟ್ಟದ ಪ್ರತಿರೋಧ ಶಕ್ತಿಯೂ, ಜಾಗರೂಕತೆಯೂ ಬೆಳೆದಿರಬೇಕು, ಎಂದರೆ ಅವರಲ್ಲಿ ಸತ್ಯಾಗ್ರಹಿ ಶಕ್ತಿ ಬೆಳೆದಿರಬೇಕು. ಒಳಗಣ ಮತ್ತು ಹೊರಗಣ ಕುಪ್ರಭಾವಗಳ ವಿರೋಧಕ ನಿಷೇಧಕ ಶಕ್ತಿ ಇದೆ. ಬಹು ಚುರುಕಿನ ಕಾರ್ಯಕ್ರಮವೊಂದಿದ್ದರೆ ಆಂತರಿಕ ಕುಪ್ರವೃತ್ತಿ-ಕುಪ್ರಭಾವಗಳ ಮೇಲೆ ಬಹುಮಟ್ಟಿಗೆ ತಾನಾಗಿಯೇ ಅಂಕುಶ ಬೀಳಬಲ್ಲದೆಂಬುದನ್ನು ಬೇರೆ ಒತ್ತಿ ಹೇಳಬೇಕಾಗಿಲ್ಲ. ಸರ್ವೋದಯ ಚಳವಳಿ ಸಮಾಜ ಪರಿವರ್ತನೆಯ ಕಾರ್ಯಕ್ಕೆ ಕೇವಲ ಜನಶಕ್ತಿಯನ್ನು ನಂಬಿದೆ, ಇದು ಐದನೆಯ ಶ್ರದ್ಧೆ.

ಮೇಲ್ಕಂಡ ದೀರ್ಘ ವಿಶ್ಲೇಷಣೆಯಲ್ಲಿ ತೀವ್ರ ಮಾರ್ಗ ಎಷ್ಟು ಸರಿ, ಹಿಂಸೆ ಮತ್ತು ಅಥವಾ ಕೇವಲ ರಾಜ್ಯ ಶಕ್ತಿಯಿಂದ ಸಮಾನತೆ ತರಲು ಸಾಧ್ಯವೇ ? ಭಯೋತ್ಪಾದಕತೆಯಿಂದ ಬಿಕ್ಕಟ್ಟು ಪರಿಹಾರ, ಸಮಸ್ತರ ಹಿತಕ್ಕೆ ದುಡಿಯುವ, ಸಮಷ್ಟಿ ಹಿತದ ಕಡೆ ಚಳವಳಿಯನ್ನು ಒಯ್ಯುವ ಮಾರ್ಗ; ಚಳವಳಿಗಳುಛಿದ್ರಗೊಳ್ಳದಿರುವಿಕೆಗೆ, ಸಂಯುಕ್ತ ಹೋರಾಟಕ್ಕೆ, ಚಳವಳಿಯ ಮಾರ್ಗ, ಚಳವಳಿಗಳ ಸ್ವರೂಪ, ತಾರ್ಕಿಕತೆ, ಚಳವಳಿಗಳ ನಡೆ, ಅವುಗಳ ಹಿಂದೆ ಇರಬೇಕಾದ ಜ್ಞಾನರಚನೆ, ನಿಯಂತ್ರಕಗಳೆ ಮುಂತಾದ ಪ್ರಶ್ನೆ ಮತ್ತು ಸಮಸ್ಯೆಗಳಿಗೆ ಉತ್ತರ ಈ ಲೇಖನದಲ್ಲಿ ನಿಹಿತವಾಗಿ ಬಂದಿದೆ ಎಂದು ನನ್ನ ಅಭಿಪ್ರಾಯ. ಚರ್ಚೆ ಮುಂದುವರಿದಂತೆ ಅಗತ್ಯಕ್ಕೆ ತಕ್ಕಷ್ಟು ವಿಶದೀಕರಿಸಿ ಬರೆಯಬಹುದು.

ಸತ್ಯವ್ರತ
ಗಾಂಧಿಭವನ, ಬೆಂಗಳೂರು - ೫೬೦ ೦೦೧

## ಅವಶ್ಯ-ಹಕ್ಕುಗಳ ಅರಿವಿಗಾಗಿ ಒಂದು ಚಳವಳಿ

**ಚ**ಳುವಳಿಯೊಂದರ ಉದ್ದೇಶಗಳ ಕುರಿತು ಯೋಚಿಸುವ ಮೊದಲು ಆ ಚಳುವಳಿ ಜನಸಾಮಾನ್ಯರ ಪ್ರಜಾಸತ್ತಾತ್ಮಕ ಹಕ್ಕುಗಳನ್ನು ವಿಸ್ತರಿಸುವಂತಹದ್ದೆ ಎಂಬ ಪ್ರಶ್ನೆಯನ್ನು ನಾವು ಅಗತ್ಯ ಕೇಳಬೇಕು. ಪ್ರಜಾಪ್ರಭುತ್ವ ಈಗಾಗಲೇ ಸಾಧಿತವಾಗಿರುವ ಮತ್ತು ಎಲ್ಲ

ಪ್ರಜೆಗಳೂ ರೂಢಿಸಿಕೊಂಡಿರುವ ಒಂದು ಸಿದ್ಧಮೌಲ್ಯವಲ್ಲ. ಅದು ಸದಾ ರೂಪುಗೊಳ್ಳುತ್ತಿರುವ ಒಂದು ಪ್ರಕ್ರಿಯೆ – in the process of making. ಪ್ರಜಾಪ್ರಭುತ್ವದ ಪರಿಪೂರ್ಣ ಮಾದರಿ ಎಂದು ಬಹುತೇಕ ಎಲ್ಲರೂ ನಂಬುವ ಅಮೆರಿಕದಲ್ಲಿ ಕೂಡ ವಿಶಾಲ ಜನಸಮೂಹ, ಈಗಲೂ ಪ್ರಜಾಪ್ರಭುತ್ವದ ಹಕ್ಕುಗಳಿಂದ ವಂಚಿತವಾಗಿದೆ. ಅಲ್ಲಿನ ಕಳೆದ ಎರಡು ಅಧ್ಯಕ್ಷೀಯ ಚುನಾವಣೆಗಳಲ್ಲಿ ಜಾರ್ಜ್ ಬುಷ್‌ಗೆ ಅನುಕೂಲವಾಗುವಂತೆ ಫಲಿತಾಂಶವನ್ನು ತಿರುಚಿದ ರೀತಿಯ ಮತ್ತು ಕತ್ರೀನಾ ಪ್ರವಾಹದ ಸಂತ್ರಸ್ತರ ಬಗ್ಗೆ ಸರಕಾರ ತೋರಿದ ಅಲಕ್ಷ್ಯದ ಧೋರಣೆಗಳಲ್ಲಿ ಅಮೆರಿಕದ ಪ್ರಜಾಪ್ರಭುತ್ವದ ಹುಳುಕುಗಳೆಲ್ಲ ಎದ್ದುಕಾಣುತ್ತವೆ. ಕಾರ್ಪೊರೇಟ್ ಬಂಡವಾಳಶಾಹಿಯ ಹಿಡಿತದಲ್ಲಿರುವ ಅಮೆರಿಕದ ಮಾಧ್ಯಮ ತಾನು ಬಿತ್ತರಿಸುವ ಸುದ್ದಿ ಮಾತ್ರವಲ್ಲ, ಸರಕಾರದ ಧೋರಣೆಯನ್ನು ಸಹ ತನ್ನ ಹಿತಾಸಕ್ತಿಗೆ ತಕ್ಕಂತೆ ರೂಪಿಸುವುದು ಲಾಗಾಯ್ತಿನಿಂದಲೂ ನಡೆದುಬಂದ ಪದ್ಧತಿ. ಪ್ರಜಾಪ್ರಭುತ್ವ ಜಗತ್ತಿನಾದ್ಯಂತ ಅತಿಹೆಚ್ಚು ಗೌರವಕ್ಕೆ ಪಾತ್ರವಾದ ಮೌಲ್ಯ; ಆದರೆ ಎಲ್ಲಿಯೂ ಅದು ಪರಿಪೂರ್ಣ ಸ್ಥಿತಿಯಲ್ಲಿ ಅಸ್ತಿತ್ವದಲ್ಲಿರುವ ವ್ಯವಸ್ಥೆ ಅಲ್ಲ. ಹಾಗಾಗಿ ಯಾವುದೇ ರಾಜಕೀಯ ಚಳುವಳಿ ಅರ್ಥಪೂರ್ಣವಾಗಬೇಕಾದರೆ, ಅದು ಎಲ್ಲಕ್ಕಿಂತ ಮುಖ್ಯವಾಗಿ ಪ್ರಜಾಸತ್ತಾತ್ಮಕ ಹಕ್ಕುಗಳ ಕುರಿತು ಜನರ ಪ್ರಜ್ಞೆಯನ್ನು ಹೆಚ್ಚಿಸುವಂತಹದ್ದಾಗಬೇಕು. ಈ ದೃಷ್ಟಿಯಿಂದ, ಕಳೆದ ೨೦ ವರ್ಷಗಳಲ್ಲಿ ಭಾರತದ ಎರಡು ಅತಿ ದೊಡ್ಡ ಚಳುವಳಿಗಳು ನಿಷೇಧಾತ್ಮಕವಾಗಿದ್ದವು. ಇವುಗಳಲ್ಲಿ ಮೊದಲನೆಯದ್ದು ರಾಮಜನ್ಮಭೂಮಿ ಚಳುವಳಿ. ಸ್ವತಂತ್ರ ಭಾರತದ ಯಾವುದೇ ಚಳುವಳಿಗಿಂತ, ಹೆಚ್ಚು ಜನರನ್ನು ಇದು ತನ್ನೆಡೆಗೆ ಸೆಳೆದುಕೊಂಡಿತು. ರಾಮಜನ್ಮಭೂಮಿ ಚಳುವಳಿಯ ಹಿಂದಿರುವ ಫ್ಯಾಸಿಸ್ಟ್ ಸಿದ್ಧಾಂತದ ಕೆಡುಕು ಮತ್ತು ಕ್ರೌರ್ಯಗಳನ್ನು ಇಲ್ಲಿ ವಿವರಿಸಬೇಕಾದ ಅಗತ್ಯವಿಲ್ಲ. ಯಾಕೆ ಈ ಸಿದ್ಧಾಂತ, ೮೦ರ ದಶಕದಿಂದ ಈಚೆಗೆ ಇಷ್ಟು ದೀರ್ಘಕಾಲ ಇಷ್ಟು ದೊಡ್ಡ ಸಂಖ್ಯೆಯ ಜನರನ್ನು ಆಕರ್ಷಿಸಿತು? ಇದರ ಹಿಂದಿರುವ ಆರ್ಥಿಕ ಸಾಮಾಜಿಕ ಒತ್ತಾಸೆಗಳು ಏನು? ಈ ಪ್ರಶ್ನೆಗೆ ಕೊಡಲಾಗುತ್ತಿದ್ದ ಸಿದ್ಧ ಉತ್ತರಗಳೆಲ್ಲ ಈಗ ಸುಳ್ಳಾಗಿವೆ. ಹಿಂದುತ್ವದ ಫ್ಯಾಸಿಸ್ಟ್ ಸಿದ್ಧಾಂತದ ಮುಖವಾಣಿಯಾಗಿರುವ ಬಿ.ಜೆ.ಪಿ.ಗೆ ಪಾರಂಪರಿಕವಾಗಿ ಬೆಂಬಲ ಕೊಡುತ್ತಿದ್ದವರು ಭೂಮಾಲಿಕರು, ವರ್ತಕರು ಮತ್ತು ಮೇಲುಜಾತಿಯ ಮಧ್ಯಮವರ್ಗದವರು. ಆದರೆ ೮೦ರ ದಶಕದಲ್ಲಿ ಪಕ್ಷದ ವರ್ಗ ತಳಹದಿ ಒಮ್ಮೆಂದೊಮ್ಮೆಗೆ ವಿಸ್ತೃತವಾಯಿತು. ದಲಿತರು, ಆದಿವಾಸಿಗಳು, ಕೆಳಜಾತಿಯವರು, ನಗರಗಳ ಹಂಗಾಮಿ ಕೂಲಿಕಾರ ವರ್ಗದವರು ಮತ್ತು ಹೆಂಗಸರು – ಈ ಜನ ವರ್ಗಗಳ ಬಹುದೊಡ್ಡ ವಿಭಾಗವೊಂದನ್ನು ತನ್ನೆಡೆಗೆ ಸೆಳೆದುಕೊಳ್ಳುವುದರಲ್ಲಿ ಬಿ.ಜೆ.ಪಿ. ಯಶಸ್ವಿಯಾಯಿತು. ಇದರಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಬಡವರೂ ಸೇರಿದಂತೆ, ವಿವಿಧ ವರ್ಗಗಳ ಜನ ದೊಡ್ಡ ಸಂಖ್ಯೆಯಲ್ಲಿ ಭಾಗವಹಿಸುವ ಚಳುವಳಿಯೊಂದು ತನ್ನಷ್ಟಕ್ಕೆ ತಾನೇ ಪ್ರಜಾಸತ್ತಾತ್ಮಕವಾಗಿಬಿಡುವುದಿಲ್ಲ. ಪ್ರಜಾಪ್ರಭುತ್ವದ ಸಾಧನಗಳನ್ನು ಬಳಸಿಕೊಂಡೇ ತಾನು ಪ್ರಜಾಪ್ರಭುತ್ವವನ್ನು ನಾಶಪಡಿಸುತ್ತೇನೆ ಎಂದು ಹಿಟ್ಲರ್ ಹೇಳಿಕೊಂಡದ್ದು ಹುಸಿಹೆಗ್ಗಳಿಕೆಯಲ್ಲ. ಬಿ.ಜೆ.ಪಿ.ಯ ಯಶಸ್ಸು ಕೂಡ ಇದನ್ನು ಸಾಬೀತುಪಡಿಸುತ್ತದೆ.

ರಾಜಕೀಯದಲ್ಲಿ ಎಂದೂ ಶೂನ್ಯ ಸ್ಥಿತಿ ಎಂಬುದಿಲ್ಲ; ಯಾವ ಸ್ಥಾನವೂ ಯಾವತ್ತೂ ಖಾಲಿ ಬೀಳುವುದಿಲ್ಲ ಎಂಬ ಕಟು ವಾಸ್ತವವನ್ನೂ ಹಿಂದುತ್ವ ಚಳುವಳಿಯ ದಿಢೀರ್ ಜನಪ್ರಿಯತೆ ಎತ್ತಿತೋರಿಸಿತು. ನಿತ್ಯದ ಜಂಜಡಗಳಲ್ಲಿ ಕೈಸೋತ ಜನ ಆದರ್ಶ ನಾಯಕನಿಗಾಗಿ ಕಾಯುತ್ತ ಕೂಡುವುದಿಲ್ಲ. ಅವರು ತಮಗೆ ದಕ್ಕುವ ಪರಿಕರಗಳಿಂದಲೇ ತಮ್ಮ ರಾಜಕೀಯವನ್ನು ರೂಪಿಸಿಕೊಳ್ಳುತ್ತಾರೆ. ೮೦ರ ದಶಕದಲ್ಲಿ ಭಾರತದ ಆಳುವವರ್ಗ, ಜನತೆಗೆ ತಾನು ಕೊಟ್ಟ ಭರವಸೆಗಳಿಂದ ಹಿಂದೆ ಸರಿಯಲು ಆರಂಭಿಸಿತು. ಅಂತರ್ ರಾಷ್ಟ್ರೀಯ ಬಂಡವಾಳಶಾಹಿಯ ಒತ್ತಡಕ್ಕೆ ಮಣಿದು ಸರಕಾರ ಜಾಗತೀಕರಣ, ಖಾಸಗೀಕರಣ ಮತ್ತು ಉದಾರೀಕರಣಗಳ ಹೊಸ ಆರ್ಥಿಕ ಧೋರಣೆ (ಅದರಲ್ಲಿ ಹೊಸತೇನಿತ್ತು?)ಯನ್ನು ಅಂಗೀಕರಿಸಿತ್ತು. ಜನರ ದೈನಂದಿನ ಪರಿಸ್ಥಿತಿ ದುರ್ಭರವಾಗಿತ್ತು. ಈ ಸನ್ನಿವೇಶದಲ್ಲಿ ಹಿಂದುತ್ವವಾದಿಗಳು ಮಂದಿರ ನಿರ್ಮಾಣಕ್ಕೋಸುಗ ಜನರನ್ನು ಬೀದಿಗೆ ಇಳಿಸಿದರು. ಸರಿಸುಮಾರು ಇದೇ ಕಾಲಘಟ್ಟದಲ್ಲಿಯೇ ಉತ್ತರ ಭಾರತದಲ್ಲಿ ಮಂಡಲ್ ಚಳುವಳಿಯೂ ನಡೆಯಿತು. ಕೆಳಜಾತಿಯವರಿಗೆ ಸಾಮಾಜಿಕ ನ್ಯಾಯ ಒದಗಿಸುವುದು ಈ ಚಳುವಳಿಯ ಘೋಷಿತ ಉದ್ದೇಶ. ಆದರೆ ಸಾಮಾಜಿಕ ನ್ಯಾಯ, ಜೊತೆಗೆ ಸಾಂಸ್ಕೃತಿಕ ಅವಕಾಶ ಮತ್ತು ಅಭಿವ್ಯಕ್ತಿಗಳಿಗೆ ಕೂಡ ನಡೆದ ಕೆಳಜಾತಿಗಳ ಚಳುವಳಿಗೆ ದಕ್ಷಿಣ ಭಾರತದಲ್ಲಿ ೧೦೦ ವರ್ಷಗಳ ಇತಿಹಾಸವಿದೆ. ಮಹಾರಾಷ್ಟ್ರದಲ್ಲಿ ಈ ಚಳುವಳಿ ಜ್ಯೋತಿ ಬಾ ಫುಲೆ, ಅಂಬೇಡ್ಕರ್‌ರಂತಹ ಧೀಮಂತ ನಾಯಕರನ್ನು ಸೃಷ್ಟಿಸಿದೆ. ಮಂಡಲ್ ಚಳುವಳಿಗೆ ದಕ್ಷಿಣ ಭಾರತದ ಕೆಳಜಾತಿಯವರ ಚಳುವಳಿಗಿದ್ದ ತಾತ್ವಿಕ ತಳಹದಿ ಇರಲಿಲ್ಲ; ಫುಲೆ ಮತ್ತು ಅಂಬೇಡ್ಕರ್‌ರ ಕಾಣ್ಕೆಯಂತೂ ಇರಲೇ ಇಲ್ಲ. ಸರಕಾರಿ ಉದ್ಯೋಗಗಳು ಮತ್ತು ಶಿಕ್ಷಣಕ್ಷೇತ್ರದಲ್ಲಿ ಮೀಸಲಾತಿ ತನ್ನ ಹೋರಾಟದ ತಕ್ಷಣದ ಗುರಿ ಎಂದು ಮಂಡಲ್ ಚಳುವಳಿ ಸಾರಿಕೊಂಡಿತ್ತು. ಆದರೆ ಮೀಸಲಾತಿಗಾಗಿ ಸರಕಾರವನ್ನು ಒತ್ತಾಯಿಸಲು ಉದ್ಯೋಗಗಳಾದರೂ ಎಲ್ಲಿದ್ದವು? ಶಿಕ್ಷಣದ ಅವಕಾಶಗಳು ಸರಕಾರೀ ವಲಯದಲ್ಲಿ ಎಷ್ಟು ಸೃಷ್ಟಿಯಾಗಿದ್ದವು? ದೇವನೂರ ಮಹಾದೇವರ 'ಒಡಲಾಳ'ದಲ್ಲಿ ಸಾಕವ್ವನ ಬಳಿ ಇಲ್ಲದ ಆಸ್ತಿಗಾಗಿ ಆಕೆಯ ಸೊಸೆಯಂದಿರು ಜಗಳವಾಡಿಕೊಂಡ ಹಾಗೆ ಮೀಸಲಾತಿಗಾಗಿ ಮಂಡಲ್ ಚಳುವಳಿ ನಡೆಯಿತು. ಹೀಗೆ ೨೦ನೆಯ ಶತಮಾನದ ಅಂತ್ಯಭಾಗದಲ್ಲಿ ಭಾರತ ಕಂಡ ಎರಡು ದೊಡ್ಡ ಚಳುವಳಿಗಳು ಜನರ ಹತಾಶೆಯ ಅರ್ಥಹೀನ ಅಭಿವ್ಯಕ್ತಿಗಳಾಗಿದ್ದವು. ಭಾರತದ ಆಳುವವರ್ಗ ತೆರವು ಮಾಡಿದ್ದ ಸ್ಥಳವನ್ನು ಎಡಪಂಥೀಯ ಚಳುವಳಿಯ ಗೈರುಹಾಜರಿಯಲ್ಲಿ ಈ ಚಳುವಳಿಗಳು ಆಕ್ರಮಿಸಿಕೊಂಡವು.

ನಿಜ ಜೀವನದಲ್ಲಿ ಯಾವ ಚಳುವಳಿಯೂ ನಾಯಕನ ಬುದ್ಧಿಮತ್ತೆ ಅಥವಾ ಉದಾತ್ತ ಆದರ್ಶದ ಕಾರಣಕ್ಕೆ ಹುಟ್ಟಿ ಬೆಳೆಯುವುದಿಲ್ಲ. ಅದು ಸಿನೆಮಾದ ಸರಕು. ಜನರ ಸಂಕಲ್ಪವಿಲ್ಲದೆ ಯಾವ ಚಳುವಳಿಯೂ ಇಲ್ಲ. ಈ ಪ್ರಾಥಮಿಕ ಸತ್ಯವನ್ನು ಕಡೆಗಣಿಸಿದರೆ, ಪ್ರತಿಯೊಂದು ಎನ್.ಜಿ.ಓ. (ಸರಕಾರೇತರ ಸ್ವಯಂಸೇವಾ ಸಂಘಟನೆಗಳೂ)ದ ಸ್ವಯಂ ಘೋಷಿತ ಆಶಯಗಳನ್ನೂ ಜನತೆಯ ಆಶೋತ್ತರಗಳು ಎಂದು ನಾವು ಮುಗ್ಧವಾಗಿ ನಂಬಿಬಿಡುವ ಸಂಭವವಿದೆ. ಜನತೆಯ ಅನುಭವವನ್ನೇ ಮೂಲದ್ರವ್ಯವಾಗಿಸಿಕೊಂಡು ಸಮಷ್ಟಿ ಪ್ರಜ್ಞೆಯನ್ನು ವಿಸ್ತರಿಸಲು ಯತ್ನಿಸುವ ಚಳುವಳಿ ಎನ್.ಜಿ.ಓ.ಗಳಂತೆ ತನ್ನ ಪೂರ್ವ ನಿರ್ಧರಿತ ಘೋಷಣೆಗಳನ್ನು ಜನತೆಯ ಮೇಲೆ ಹೇರುವುದಿಲ್ಲ. ಹಿಂದುತ್ವದ ಚಳುವಳಿಯಂತೆ ಅದು ಸಂಖ್ಯಾಬಲದ ಕ್ರೌರ್ಯದ ಚಳುವಳಿಯೂ ಅಲ್ಲ; ಮಂಡಲ್ ಚಳವಳಿಯಂತೆ ಇಲ್ಲದ ಅವಕಾಶಗಳ ಮಾಯಾಮೃಗವನ್ನು ಬೆನ್ನಟ್ಟುವಂತಹದ್ದೂ ಅಲ್ಲ. ನಮ್ಮ ಸಾರ್ವಜನಿಕ ಬದುಕಿನಲ್ಲಿ ನೈಜ ''ಜನಪರ'' ಚಳುವಳಿಗಳ ಉದಾಹರಣೆಗಳೂ ಸಾಕಷ್ಟಿವೆ. ಆ ಚಳುವಳಿಗಳಲ್ಲಿ ಭಾಗವಹಿಸಿದ ಜನಗಳ ಸಂಖ್ಯೆಯ ದೃಷ್ಟಿಯಿಂದ ಅವು ವಿಶೇಷವೆನಿಸದೆ ಇದ್ದರೂ ಪ್ರಜಾಪ್ರಭುತ್ವದ ವಾಗ್ದಾನಗಳಿಗೆ ಅವು ನೀಡಿರುವ ಚಾಲನೆ ಮಹತ್ವಪೂರ್ಣವಾದದ್ದು. ಸಣ್ಣ ಪ್ರಮಾಣದಲ್ಲೇ ಆದರೂ ಮೌಲಿಕವಾಗಿ ನಡೆದ ಅಣ್ವಸ್ತ್ರ ವಿರೋಧಿ ಚಳುವಳಿ ಈ ಬಗೆಯದ್ದು. ಇಂತಹದ್ದೇ ಇನ್ನೊಂದು ಚಳುವಳಿ ಮೇಧಾ ಪಾಟ್ಕರ್ ನಾಯಕತ್ವದ ನರ್ಮದಾ ಆಂದೋಲನ. ಅದನ್ನು ಬಗ್ಗುಬಡಿಯುವುದರಲ್ಲಿ ನಮ್ಮ ಸರಕಾರ, ನ್ಯಾಯಾಂಗ, ಮಾಧ್ಯಮಗಳು ಮತ್ತು ನಮ್ಮ ಒಟ್ಟು ರಾಜಕೀಯ ವ್ಯವಸ್ಥೆ ಯಶಸ್ವಿಯಾಗಿದೆ ನಿಜ. ಆದರೆ ಅಭಿವೃದ್ಧಿಯ ಪರಿಕಲ್ಪನೆಯ ಬಗೆಗೆ ಆ ಚಳುವಳಿ ಹುಟ್ಟುಹಾಕಿರುವ ಚರ್ಚೆ ಪ್ರಜಾಪ್ರಭುತ್ವದ ಉಳಿವಿಗೆ ಅತ್ಯವಶ್ಯವಾಗಿರುವಂತಹದ್ದು. ಕೇರಳ, ಪಶ್ಚಿಮ ಬಂಗಾಳ ಮತ್ತು ಈಗ ಕರ್ನಾಟಕದಲ್ಲಿ ಕೂಡ ನಡೆದಿರುವ ಪಂಚಾಯತ್ ಆಡಳಿತದ ಪ್ರಯೋಗ ಕೂಡ ಪ್ರಜಾಪ್ರಭುತ್ವವನ್ನು ವಿಸ್ತರಿಸುವ ಇನ್ನೊಂದು ಮಹತ್ವದ ಚಳುವಳಿ. ಕೇರಳ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಪಂಚಾಯತ್ ಆಡಳಿತ ವ್ಯವಸ್ಥೆ ಭದ್ರವಾದ ನೆಲೆ ಕಂಡುಕೊಂಡಿದೆ. ಕರ್ನಾಟಕದ ಹಳ್ಳಿಗಳಲ್ಲೂ ಈ ಪ್ರಯೋಗ ರಾಜಕೀಯ ಜಾಗೃತಿಯನ್ನು ತರುತ್ತಿದೆ. ಆದರೆ ಕರ್ನಾಟಕದ ಬುದ್ಧಿಜೀವಿಗಳು ಇದನ್ನು ಇನ್ನೂ ಗಮನಿಸಿದಂತಿಲ್ಲ. ರಾಜಸ್ಥಾನದಲ್ಲಿ M.K.S.S. – ಮಜ್ದೂರ್ ಕಿಸಾನ್ ಶಕ್ತಿ ಸಂಘಟನ್–ನ ನೇತೃತ್ವದಲ್ಲಿ ನಡೆದ ಮಾಹಿತಿ ಹಕ್ಕಿನ ಚಳುವಳಿಯ ಪ್ರಜಾಸತ್ತಾತ್ಮಕ ಸಾಧನೆಯೂ ಸಣ್ಣದಲ್ಲ; ಈ ಚಳುವಳಿಯಿಂದಾಗಿ, ರಾಜಸ್ಥಾನದಲ್ಲಿ, ಬರಪರಿಹಾರ, ಕನಿಷ್ಠ ಕೂಲಿ ಮತ್ತು ಕೂಲಿಗಾಗಿ ಕಾಳು ಯೋಜನೆಗಳು ನಿಜಕ್ಕೂ ಗ್ರಾಮೀಣ ಬಡವರನ್ನು ತಲುಪುವಂತಾಗಿದೆ. ಇದೀಗ ಕೇಂದ್ರದ ಯು.ಪಿ.ಎ. ಸರಕಾರ ಗ್ರಾಮೀಣ ಕನಿಷ್ಠ ಉದ್ಯೋಗ ಭರವಸೆಯ ಶಾಸನವನ್ನು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡಿದೆ. ಈ ಶಾಸನದ ಅಂಗೀಕಾರಕ್ಕೆ ಭಾರೀ ಒತ್ತಡವನ್ನು ಹೇರಿದ್ದ ಎಡಪಕ್ಷಗಳು, ಈಗ ಅದರ ಪ್ರಾಮಾಣಿಕ ಅನುಷ್ಠಾನದಲ್ಲಿಯೂ ತಮ್ಮನ್ನು ತೊಡಗಿಸಿಕೊಳ್ಳಬೇಕಾಗಿದೆ. ಈ ಶಾಸನದಿಂದಾಗಿ ಗ್ರಾಮೀಣ ಬಡಕುಟುಂಬಗಳಿಗೆ ವರ್ಷದಲ್ಲಿ ಕನಿಷ್ಠ ನೂರು ದಿನಗಳ ಉದ್ಯೋಗ ಅಥವಾ ಆ ದಿನಗಳಿಗೆ ಕನಿಷ್ಠ ವೇತನ ಹಕ್ಕು ದೊರೆತಿದೆ. ವಸ್ತುತಃ ಬಡವರ ಬದುಕುವ ಹಕ್ಕನ್ನು ಈಗ ವ್ಯವಸ್ಥೆ ಮಾನ್ಯಮಾಡಿದೆ.

ತಮ್ಮ ಈ ಶಾಸನಬದ್ಧ ಹಕ್ಕನ್ನು ಬಡವರು ಚಲಾಯಿಸುವಂತೆ ಮಾಡುವ ಚಾರಿತ್ರಿಕ ಜವಾಬ್ದಾರಿ ಈಗ ಎಡಪಂಥೀಯ ಸಂಘಟನೆಗಳ ಮೇಲಿದೆ. ಕನಿಷ್ಠ ಉದ್ಯೋಗ ಭರವಸೆಯ ಶಾಸನ ಹಳ್ಳಿಹಳ್ಳಿಗಳಲ್ಲೂ ಜಾರಿಗೆ ತರಲು ನಾವು ಒಂದು ದೇಶವ್ಯಾಪಿ ಚಳುವಳಿಯನ್ನೇ ನಡೆಸಬೇಕಾಗಿದೆ. ಚುನಾವಣೆಯಲ್ಲಿ ಸೋತಿದ್ದರೂ ವ್ಯವಸ್ಥೆಯ ವಿವಿಧ ಸ್ತರಗಳಲ್ಲಿ ಮತ್ತು ನಾಗರಿಕ ಸಮಾಜದಲ್ಲಿ ಈಗಲೂ ಶಕ್ತಿಶಾಲಿಯಾಗಿರುವ ಹಿಂದುತ್ವವನ್ನೂ ಈ ಚಳುವಳಿ ಹಿಮ್ಮೆಟ್ಟಿಸುವ ಸಾಧ್ಯತೆಗಳು ನಿಚ್ಚಳವಾಗಿದೆ. ಜೊತೆಗೆ ಇಂತಹ ಒಂದು

ಚಳುವಳಿ ಗ್ರಾಮೀಣ ಉದ್ಯೋಗ ಭರವಸೆಯ ಶಾಸನವನ್ನು ಕ್ರಮೇಣ ಶಿಕ್ಷಣ, ವಸತಿ ಮತ್ತು ಆರೋಗ್ಯಗಳಿಗೂ ವಿಸ್ತರಿಸುವಂತೆ ಒತ್ತಾಯ ತರಬಲ್ಲದು. ಸರಕಾರದ ಈ ಶಾಸನವನ್ನು ಸಮಾನತೆಯ ಕಡೆಗೆ ಇಟ್ಟ ಒಂದು ಹೆಜ್ಜೆಯನ್ನಾಗಿ ಮಾರ್ಪಡಿಸುವ ಚಳುವಳಿ ಈಗ ಅವಶ್ಯವಾಗಿದೆ. ವ್ಯಕ್ತಿಗಳ ಬದಲು ಕುಟುಂಬಗಳನ್ನು ಉದ್ದೇಶಿಸಿರುವ ಈ ಶಾಸನದ ಜಾರಿ ಮತ್ತು ವಿಸ್ತರಣೆಯನ್ನು ಒತ್ತಾಯಿಸಲು ಗ್ರಾಮೀಣ ಮಹಿಳೆಯರ ಸಂಘಟನೆಯೂ ತುರ್ತಾಗಿ ಆಗಬೇಕಾಗಿದೆ.

ಜಿ. ರಾಜಶೇಖರ

ಎಲ್.ಐ.ಸಿ. ಆಫ್ ಇಂಡಿಯಾ, ಡಿವಿಜನಲ್ ಆಫೀಸ್, ಉಡುಪಿ - ೫೭೬ ೧೦೧

# ನಮ್ಮ ಸಾಂಸ್ಕೃತಿಕ ಚಳವಳಿಯ ಶೂನ್ಯತೆ ತುಂಬುವುದು ಹೇಗೆ ?

ನಾನು ಮುದ್ದಾಮಾಗಿ 'ಸಾಂಸ್ಕೃತಿಕ ಚಳವಳಿ' ಎಂಬ ಪದವನ್ನು ಬಳಸಿದ್ದೇನೆ. ಯಾಕೆಂದರೆ 'ಸಂಸ್ಕೃತಿ' ಎಂಬ ಆಶಯದ ಅಡಿಯಲ್ಲಿ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತಲೇ ಇರುತ್ತವೆ. ಸಭೆ ಸಮ್ಮೇಳನಗಳು, ಹಬ್ಬಹರಿದಿನ, ವಿಚಾರ ಸಂಕಿರಣ, ದೀಪಾವಳಿ ಶುಭಾಶಯ ಹೀಗೆ ಹೀಗೆ ಮಠದವರು ನಡೆಸುವ ಅಡ್ಡಪಲ್ಲಕಿ ಉತ್ಸವದಿಂದಲೂ ಹಿಡಿದು ಮುತ್ತೈದೆಯರಿಗಾಗಿ ನಡೆಯುವ 'ಅರಿಶಿನ ಕುಂಕುಮ'ದವರೆಗೂ. ಆದರೆ ಇವಾವವೂ ಚಳವಳಿಗಳಲ್ಲ ಮತ್ತು ಜನಪರ ಸಾಂಸ್ಕೃತಿಕ ಚಳವಳಿಗಳಂತೂ ಅಲ್ಲವೇ ಅಲ್ಲ.

ಸಾಂಸ್ಕೃತಿಕ ಚಳವಳಿ ಎಂದಾಗ ನನ್ನ ಎದುರಿಗೆ ಇರುವುದು ಜನಪರವಾದ ಸಾಂಸ್ಕೃತಿಕ ಚಳವಳಿಗಳು. 'ಸಮುದಾಯ' ದಲಿತ-ಬಂಡಾಯ ಸಾಹಿತ್ಯ ಸಂಘಟನೆ, ದಲಿತ ಸಂಘರ್ಷ ಸಮಿತಿ ಇಂಥವು. ಸಮುದಾಯದ ಪುನರುಜ್ಜೀವನ ಕಾರ್ಯ ನಡೆಯಬಹುದೋ ಹೇಗೆ ಎಂಬುದರ ಕುರಿತು ಮೊನ್ನೆ ಮೊನ್ನೆ ಬೆಂಗಳೂರಿನಲ್ಲಿ ವಿಚಾರವಿನಿಮಯಕ್ಕಾಗಿ ಸಮ್ಮೇಳನ ನಡೆಯಿತು. ಮುಂದೆ ಸುದ್ದಿಯಿಲ್ಲ. ಬಂಡಾಯ ಸಾಹಿತ್ಯ ಸಂಘಟನೆಯ ಕುರಿತು ಕೂಡ ಅಂಥ ಒಂದೆರಡು ಸಮ್ಮೇಳನ ನಡೆದದ್ದುಂಟು. ಆದರೆ ಬೆಳವಣಿಗೆಯಿಲ್ಲ. 'ದಲಿತ ಸಂಘರ್ಷ ಸಮಿತಿ' ಅನೇಕ ಭಾಗವಾಗಿದೆ. ಅಷ್ಟರಮಟ್ಟಿಗೆ ಅದು ತನ್ನ ಶಕ್ತಿ ಹಾನಿಮಾಡಿಕೊಂಡರೂ ಅಲ್ಲಲ್ಲಿ ಮತ್ತು ಆಗಾಗ ಕ್ರಿಯಾಶೀಲತೆಯನ್ನು ತೋರುತ್ತಲಿದೆ. ಹಾಗಾದರೆ ಇವುಗಳ ಅವಶ್ಯಕತೆಯೇನಿತ್ತು? ಮತ್ತು ಅದು ಕ್ರಿಯಶೀಲ ಆಗುವುದು ಹೇಗೆ ಎಂಬುದು ನಮ್ಮ ಮುಂದಿರುವ ಗಂಭೀರ ಪ್ರಶ್ನೆಯಾಗಿದೆ.

ಸಾಂಸ್ಕೃತಿಕ ಚಳವಳಿಯ ಜನಪರತೆ ಇರುವುದು ಅದರ ಬದ್ಧತೆಯಲ್ಲಿ. ಆ ಬದ್ಧತೆ ಎರಡು ತೆರನಾಗಿರುವುದು. ಒಂದನೆಯದಾಗಿ, ಅದು ಶೋಷಿತ ಜನತೆಯ ಪರವಾಗಿರುವುದು. ಶೋಷಣೆಯ ಬಗೆ ಅಸ್ಪೃಶ್ಯತೆಯದಿರಬಹುದು, ಪುರೋಹಿತಶಾಹಿಯದಾಗಿರಬಹುದು. ಸಂಪತ್ತಿನ ಹಂಚಿಕೆಯ ಪ್ರಕಾರದಲ್ಲಿರಬಹುದು. ಲಿಂಗ ಅಸಮಾನತೆಯಲ್ಲಿರಬಹುದು. ಈ ಎಲ್ಲ ಪ್ರಕಾರದಿಂದಲೂ ಶೋಷಣೆಗೆ ಒಳಗಾದವರು ತಮ್ಮ ಸಾಮಾಜಿಕ ಸಮಾನತೆಯ ಹಕ್ಕನ್ನು, ಪ್ರಜಾಪ್ರಭುತ್ವವಾದಿ ಸ್ವಾತಂತ್ರ್ಯದ ಅವಕಾಶವನ್ನು ಮತ್ತು ಇವೆಲ್ಲವುಗಳಿಂದ ಪುಷ್ಟಿಗೊಳ್ಳಬೇಕಾದ ಸಾಂಸ್ಕೃತಿಕ ಅಭಿವ್ಯಕ್ತಿಯ ಅವಕಾಶದಿಂದ ವಂಚಿತರಾಗುತ್ತಾರೆ ಎಂಬ ಪ್ರಜ್ಞೆಯಿಂದ ಪ್ರೇರಿತರಾಗುವುದು. ಎರಡನೆಯದೆಂದರೆ ಈ ವ್ಯವಸ್ಥೆಯನ್ನು ಬದಲಾಯಿಸಬೇಕೆಂಬ ಪ್ರೇರಣೆಗೆ ರಾಜಕೀಯ ಬದ್ಧತೆಯನ್ನು ಹೊಂದಾಣಿಸುವುದು.

ರಾಜಕೀಯ ಬದ್ಧತೆ ಎಂದೊಡನೆ ನಮ್ಮೆದುರು ಬೇರೆ ಸವಾಲುಗಳೇ ನಿಂತಿರುತ್ತವೆ. ಯಾವ ರಾಜಕೀಯ ? ಯಾವ ತತ್ವದ್ದು? ಕಾಂಗ್ರೆಸ್ಸೇ, ಭಾರತೀಯ ಜನತಾಪಕ್ಷ (ಬಿ.ಜೆ.ಪಿ.)ವೇ ? ಕಮ್ಯುನಿಸ್ಟ್ ಪಕ್ಷವೇ ? ಅಥವಾ ಇತರ ಸಾಂದರ್ಭಿಕ ಪಕ್ಷವೇ ಇತ್ಯಾದಿ.

ಮೇಲಿನ ವಿವರಣೆಯಲ್ಲಿ ನಾನು ಹೇಳಿರುವ 'ಈ ವ್ಯವಸ್ಥೆಯನ್ನು ಬದಲಾಯಿಸಬೇಕೆಂಬ ಪ್ರಜ್ಞೆಯಿಂದ ಪ್ರೇರಿತವಾದುದು' ಎಂದು ಹೇಳಿರುವುದನ್ನು ಗಮನಿಸ ಬೇಕು. ಅಂಥ ಪ್ರೇರಣೆ ರಾಜಕೀಯವೇ ಹೊರತು ರಾಜಕಿಯ ಪಕ್ಷದ್ದಲ್ಲ. ಇವುಗಳ ಮಧ್ಯೆಯ ಸೂಕ್ಷ್ಮತೆಯನ್ನು ಗಮನಿಸಬೇಕು. ಮುಖ್ಯವಾಗಿ ಸಾಂಸ್ಕೃತಿಕ ಚಳವಳಿ ಅಂತಿಮವಾಗಿ ಅದು ಸಾಂಸ್ಕೃತಿಕವಾಗೇ ಇರಬೇಕು. ಅದು ಜನಪರವಾಗಿಯೂ ಇರಬೇಕು. ಆದರೆ ಅದಕ್ಕೆ ಈ ವ್ಯವಸ್ಥೆಯನ್ನು ಬದಲಿಸಬೇಕೆಂಬ ಪ್ರೇರಣೆಯ ರಾಜಕೀಯ ಬದ್ಧತೆ ಇರಬೇಕೇ ಹೊರತು ಪಕ್ಷದ ರಾಜಕೀಯವಲ್ಲ.



ಉದಾಹರಣೆಗೆ, ಹೇಳುವುದಾದರೆ 'ಸಮುದಾಯ' ಹಾಗೆ ಇತ್ತು. ಊಳಿಗಮಾನ್ಯ ವ್ಯವಸ್ಥೆಯ ಬದುಕುವ ಸಮಾಜದಲ್ಲಿ ಅಕ್ಷರ ಕಲಿಕೆಯಿಂದಲೂ, ಅನುಕೂಲದಿಂದಲೂ ವಂಚಿತರಾದ ಜನಸಮುದಾಯದೊಡನೆ ಸಂವಹನ ಸಾಧಿಸುವುದಕ್ಕೆ ರಂಗಭೂಮಿಯೇ ರಾಮಬಾಣ ಎನ್ನುವಂತೆ. ಆದ್ದರಿಂದ 'ಸಮುದಾಯ' ಆ ದಿಸೆಯಲ್ಲಿ ವಿಶೇಷ ಆಸಕ್ತಿ ವಹಿಸಿತ್ತು ಎನ್ನುವುದನ್ನು ಮರೆಯುವಂತಿಲ್ಲ.

ಅದರ ಮುಂದಿನ ಬೆಳವಣಿಗೆ ಅಂದರೂ ಸರಿಯೇ 'ಬಂಡಾಯ ಸಾಹಿತ್ಯ ಸಂಘಟನೆ' ಕೂಡ ಇಂಥ ಪ್ರೇರಣೆಯನ್ನೇ ಹೊಂದಿತ್ತು. ಎಡಪಂಥೀಯ ರಾಜಕೀಯ ಬದ್ಧತೆ ಅದರದಾಗಿತ್ತು. ಅದು ಸ್ಥೂಲವಾದ ಒಂದು ನಿಲುವು. ಎಂತಲೇ ಅದೊಂದು ಲೋಹಿಯಾ, ಅಂಬೇಡ್ಕರ್, ಮಾರ್ಕ್ಸ್‌ವಾದಿ ಒಕ್ಕೂಟವಾಗಿತ್ತು. 'ದಲಿತ ಸಂಘರ್ಷ ಸಮಿತಿ' ಕೂಡ ಇಂಥ ರಾಜಕೀಯ ಬದ್ಧತೆ ಹೊಂದಿತ್ತಲ್ಲದೆ ತೀವ್ರತೆಯನ್ನೂ ಹೊಂದಿತ್ತು.

ಅಂಥವುಗಳ ಬದ್ಧತೆ ಯಾಕೆ ತನ್ನ ಕ್ರಿಯಾಶೀಲತೆಯನ್ನು ಕಳೆದುಕೊಂಡಿತು ? ಇದೊಂದು ಗಂಭೀರವಾಗಿ ಚಿಂತಿಸಬೇಕಾದ ಸಂಗತಿಯಾಗಿದೆ. ಹಾಗೆ ಕೇಳಿದರೆ ಅನೇಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಬಂದ ಚಳವಳಿಗಳು ತನಗೆ ಸಮಾನವಾದ ವೈರಿಯ ವಿರುದ್ಧ ಹೋರಾಡುವಾಗ ಮಾತ್ರ ತಮ್ಮ ಸಿದ್ಧಾಂತದೊಳಗಿನ ಸೂಕ್ಷ್ಮಭೇದವನ್ನು ಮರೆತು ಒಂದಾಗುತ್ತವೆ. ಆ ವೈರಿ ನಾಶವಾದೊಡನೆ ಮತ್ತೆ ಕೇಂದ್ರದಿಂದ ಚಲ್ಲಾಪಿಲ್ಲಿ (ಥಿಂಗ್ಸ್ ಫಾಲ್ ಅಪಾರ್ಟ್) ಆಗುತ್ತವೆ.

ಆ ಅಳತೆಗೋಲನ್ನು ಇಲ್ಲಿ ಇಟ್ಟು ನೋಡಿದರೆ ಅಳತೆಯ ಅಂದಾಜು ಆಗಲಾರದು. ಯಾಕೆಂದರೆ ಎಡಪಂಥೀಯ ಅನ್ನುವ ಸಿದ್ಧಾಂತದ ಸಮಾನ ವೈರಿಯೇನೂ ನಾಶವಾಗಿಲ್ಲ. ಆ ವೈರಿ ಇನ್ನೂ ಶಕ್ತಿಶಾಲಿಯಾಗಿ ನನಗೆ ವೈರಿಗಳೇ ಇಲ್ಲ ಎಂಬಂತೆ ವಿಜೃಂಭಿಸುತ್ತಿದೆ. ಅದಕ್ಕೆ ಮೊದಲಿನ ಕ್ರೂರ ಹಲ್ಲುಗಳ ಜೊತೆಗೆ ಈಗ ಜಾಗತೀಕರಣವೆಂಬ ಹರಿತವಾದ ಪಂಜ ಸಹ ಮೂಡಿದೆ. ಹೀಗಿರುವಾಗ ಪ್ರತಿಭಟನಾ ಚಳವಳಿ ಇನ್ನೂ ರಭಸದಿಂದ ಬರಬೇಕಿತ್ತು. ಆದರೆ ಎಲ್ಲಾ ಶಾಂತವಾಗಿದೆ; ಯಾಕೆ ?

ಇದಕ್ಕೆ ಎರಡು ಕಾರಣಗಳು ಗೋಚರಿಸುತ್ತವೆ. ಒಂದನೆಯದಾಗಿ, ಯಾವ ಭೂಸುಧಾರಣೆ ಮೀಸಲಾತಿ ಇತ್ಯಾದಿ ಸೌಲತ್ತುಗಳು, ವಿದ್ಯಾಭ್ಯಾಸ ಕೆಳಜಾತಿಗಳ ದಲಿತರಿಗಾಗುವ ಸುಲಿಗೆಯ ಬಗೆಯನ್ನು ಬಯಲು ಮಾಡಿ ಪ್ರತೀಕಾರಕ್ಕೆ ಪ್ರೇರಣೆಯನ್ನೂ, ಶಕ್ತಿಯನ್ನು ಒದಗಿಸಿತೋ ಅದೇ ಸುಧಾರಣೆ ಸುಲಿಗೆಯ ಸೂಕ್ಷ್ಮವನ್ನೂ ಸಾರ್ವತ್ರಿಕತೆಯನ್ನೂ ಮರೆಸುವ ಸಮ್ಮೋಹನ ಅಸ್ತ್ರವಾಯಿತು ಎಂಬುದು.

ಎರಡನೆಯದೂ ಬಹುಮುಖ್ಯವಾದದೂ ಎಂದರೆ ಸಮಾಜದಲ್ಲಿ ಉಂಟಾದ ವರ್ಗ ವಿಭಜನೆ. ಸರಕಾರಿ ನೌಕರಿ, ರಾಜಕಾರಣ ಇತ್ಯಾದಿಗಳಿಂದ ಸಂಪತ್ತಿನ ಏರಿಕೆ ಹಿಂದುಳಿದ ಎಲ್ಲ ಜಾತಿಗಳಲ್ಲೂ ಮತ್ತು ದಲಿತರಲ್ಲೂ ವರ್ಗವಿಭಜನೆ ಉಂಟಾಯಿತು. ವರ್ಗ ವಿನಾಶವನ್ನೇ ಮುಖ್ಯ ಗುರಿಯನ್ನಾಗಿ ಇಟ್ಟುಕೊಳ್ಳದ ರಾಜಕೀಯದ ಸುಧಾರಣ ಸಂದರ್ಭದಲ್ಲಿ ಈ ವರ್ಗ ವಿಭಜನೆ ಸಹಜವಾಗೇ ಇರುತ್ತದೆ. ಹೀಗೆ ವರ್ಗವಿಭಜಿತರಾದವರು ತಮ್ಮದೇ ಜಾತಿ-ಪಂಗಡದಿಂದ ಬೇರಾಗುತ್ತಾರೆ. ಹೀಗೆ ಬೇರೆಯಾಗಿ 'ಗಣ್ಯ' (ಎಲೈಟ್) ಗುಂಪಿಗೆ ಸೇರಿದವರು ತಮಗಿಂತ ಕೆಳಗಿರುವವರಿಂದ ದೂರ ಸರಿಯುತ್ತಾರೆ. ಮತ್ತು ಅವರು ಗಣ್ಯಪರ ಗುಂಪಿನಲ್ಲಿ ಕೂಡಿಕೊಳ್ಳುತ್ತಾರೆ – ಪೂರ್ಣವಲ್ಲದಿದ್ದರೂ ಹೆಚ್ಚಿನ ಅಂಶದಲ್ಲಿ ಹಾಗಾಗುವುದರಿಂದ ಶೋಷಿತರ ಹೋರಾಟ ಶಕ್ತಿಗುಂದುತ್ತದೆ. ಮತ್ತು ಹೋರಾಟದ ಮುಂದಾಳ್ತನ ಹೊಸದಾಗಿ ಹುಟ್ಟಿ ಬರಬೇಕಾಗುತ್ತದೆ. ಅಂಥ ನೇತೃತ್ವ ಅತಿ ಹಿಂದುಳಿದವರ, ಅತಿ ದಲಿತರ ಪರ ಇರಬೇಕಾಗುತ್ತದೆ. ಇದರ ಅರ್ಥ ಇಲ್ಲಿಯವರೆಗಿನ ಹೋರಾಟ, ಪ್ರಗತಿಯೆಲ್ಲ ವ್ಯರ್ಥ ಎಂದೇನೂ ಅಲ್ಲ. ಅಂಥ ಹೋರಾಟ ವರ್ಗವಿನಾಶವಾಗುವವರೆಗೂ ನಿಲ್ಲಬಾರದು ಎಂಬುದಕ್ಕಾಗಿ. ಆದರೆ ಆಡಳಿತ ರಾಜಕೀಯ ಸುಧಾರಣೆಗೆ ಇಳಿದಾಗ ಅದು 'ಸುಧಾರಣಾವಾದ'ವಾಗುತ್ತದೆ. ಮತ್ತು ಸುಧಾರಣಾವಾದ ಗಣ್ಯಪರ (ಎಲೈಟ್) ವರ್ಗವನ್ನು ವಿಸ್ತರಿಸುತ್ತದೆ. ಈ ವಿಸ್ತರಣೆ ತಾನು ರಾಜಕಿಯ ಆಡಳಿತದ ಅಧಿಕಾರ ಹಿಡಿಯುವ ಮಟ್ಟಿಗೆ ಮಾತ್ರ ಇರುತ್ತದೆ. ಆದ್ದರಿಂದ

ಜನಪರ (ಸಾಂಸ್ಕೃತಿಕ) ಹೋರಾಟ ಸ್ತಬ್ಧವಾಗುತ್ತದೆ. ಇದ್ದರೂ ಹೆಸರಿಗೆ ಮಾತ್ರ ಜೀವಹಿಡಿದಿರುತ್ತದೆ.

ಹೀಗೆಂದಾಕ್ಷಣ ಹೊಸದಾಗಿ ಗಣ್ಯವರ್ಗಕ್ಕೆ ಸೇರಿದ ಅತಿ ಹಿಂದುಳಿದವರು, ದಲಿತರು ಎಲ್ಲಾ ಶೋಷಣೆಯಿಂದ ವಿಮುಕ್ತಿ ಹೊಂದಿದ್ದಾರೆ ಎಂದೇನಿಲ್ಲ. ಇಂದು ದಲಿತರಲ್ಲಿ ಹಿರಿಯ ಅಧಿಕಾರಿಯಾದವರೇ ಆದರೂ ಸವರ್ಣೀಯರು (ಇದಕ್ಕೆ ಬ್ರಾಹ್ಮಣರೇ ಆಗಬೇಕೆಂದಿಲ್ಲ) ಅವರಿಗೆ ಮನೆ ಬಾಡಿಗೆಗೆ ಕೊಡುವುದಿಲ್ಲ. ಮೇಲುಮೇಲಿನಿಂದ ಅಭಿನಂದಿಸಿದರೂ ವರ್ಣ-ಜಾತಿಯ ಸ್ವಭಾವ ಅಷ್ಟು ಬೇಗ ಅಳಿದುಹೋಗುವ ಯಾಂತ್ರಿಕ ಕ್ರಿಯೆಯಲ್ಲ. ಆದ್ದರಿಂದ ಹೊಸದಾಗಿ ಗಣ್ಯಪರ ವರ್ಗಕ್ಕೆ ಸೇರಿದವರದ್ದು ತ್ರಿಶಂಕು ಸ್ಥಿತಿ! ಹೀಗಿರುವಾಗ ಜನಪರ ಚಳವಳಿಯೊಂದು ಹೊಸದಾಗಿ ಮೂಡಿಬಂದರೆ ನಿಶ್ಚಯವಾಗಿ ಈ 'ಗಣ್ಯ'ರು ಸಹಕಾರ-ಸಹಾಯವನ್ನು ಕೊಡುತ್ತಾರೆ. ಈ ಹೊಸಗಣ್ಯ ವರ್ಗದವರು ತಮ್ಮದೇ ಆದ ಪೂರ್ಣ ಸ್ವಾತಂತ್ರ್ಯ-ಸಮಾನತೆಯನ್ನು ಗಳಿಸಬೇಕಾದರೂ ಒಂದು ಹೊಸ ಜನಪರ ಚಳವಳವನ್ನು ಬೆಳೆಸಬೇಕು. ಅಂದರೆ ಇಡಿಯಾಗೇ ತಾವು ವರ್ಗವಿಮೋಚನೆ ಹೊಂದುವಂಥ ಚಳವಳಿ ಅತಿ ಕೆಳಗಿನಿಂದ ಮೂಡಿಬರುವಂತೆ ಹೊಸ ಮುಂದಾಳನ್ನವನ್ನು ಅರಸಿ, ಬೆಳೆಸಬೇಕು.

ಈಗ ನಮ್ಮ ಮುಂದೆ ಎರಡು ಮೂರು ಪ್ರಯತ್ನಗಳಿವೆ: ಒಂದನೆಯದು ದಲಿತ ಸಂಘರ್ಷ ಸಮಿತಿ (ದಸಂಸ). ಇದು ಅನೇಕ ಭಾಗವಾದರೂ ಸಮಸ್ಯೆಯ ನೆಲೆಯಲ್ಲಿ ಒಂದಾಗಿ ಬೆಸೆಯಬಹುದು. ಹಾಗಾಗುವುದಾದರೆ ಅದು ದಲಿತ – ಬಂಡಾಯದಂಥ ಚಳವಳಿಯನ್ನು ಸಂಘಟಿಸ ಬೇಕಾಗುತ್ತದೆ.

ಎರಡನೆಯದು, ದಲಿತ-ರೈತ ಒಕ್ಕೂಟ. ಇದನ್ನು ನೆನೆಸಿಕೊಂಡಾಗ ನಾನು ಚಿಕ್ಕವನಿದ್ದಾಗ ಕೇಳಿಸಿಕೊಂಡ 'ಋಷಿ ಆಶ್ರಮದಲ್ಲಿ ಹುಲಿಯೂ ಹಸುವೂ ಒಟ್ಟಿಗೆ ವಾಸಿಸುತ್ತಿದ್ದವು' ಕತೆ ನೆನಪಾಗುತ್ತದೆ. ಆದರೆ ಪ್ರಜಾಪ್ರಭುತ್ವದಲ್ಲಿ ಅಸಾಧ್ಯವಾಗಲಿಕ್ಕಿಲ್ಲ. ಅಂದರೆ ಪ್ರಗತಿಪಥದಲ್ಲಿ ಒಂದು ಹೆಜ್ಜೆ ಮುಂದಿಟ್ಟರೂ ಸ್ವಾಗತಾರ್ಹವೇ. ಈ ಒಕ್ಕೂಟದಲ್ಲಿ ದೇವನೂರ ಮಹಾದೇವ ಮತ್ತವರ ಗೆಳೆಯರು ಇರುವುದು ಆಶಾದಾಯಕ.

ಮೂರನೆಯದು, 'ಅಹಿಂದ' ಸಂಘಟನೆ. ಖರೆ ಎಂದರೆ 'ಅಹಿಂದ' ಒಂದು ಜನಪರವಾದ ಸಾಂಸ್ಕೃತಿಕ ಚಳವಳಿಯೇ. ಆದರೆ ಈಗ ಅದು ಹಾಗೆ ಇಲ್ಲ. ಅದರ ಮುಂದಾಳ್ತನ ಇರುವುದು ಈಗ, ಸಂಧಿಸಾಧಕ ಧೂರ್ತರ ರಾಜಕಾರಣಿಗಳ ಕೈಯಲ್ಲಿ. ಅದು ಈಗ ಜಾತ್ಯತೀತ ಜನತಾದಳವನ್ನು ಒಡೆಯುವುದರಲ್ಲಿ ಯಶಸ್ವಿಯಾಗಿದೆ. ಎರಡು ಜನತಾದಳಕ್ಕೆ ಚುನಾವಣಾ ಆಯೋಗದ ಮಾನ್ಯತೆ ಸಿಕ್ಕುವತನಕ, ಮತ್ತು ಇಲ್ಲಿರುವ ಸಂಧಿ ಸಾಧಕರಿಗೆ ತಮ್ಮ ಮೊದಲಿನ ನೆಲೆ ಮರಳಿ ಸಿಕ್ಕುವ ತನಕ ಮುಂದುವರಿಯುತ್ತದೆ. ಅಷ್ಟೆ ಕೆಟ್ಟ ರಾಜಕೀಯವನ್ನೇ ತಮ್ಮ ಬದ್ಧತೆಯನ್ನಾಗಿ ಮಾಡಿಕೊಂಡ ತಂಡದಿಂದ ಜನಪರವಾದ ಯಾವ ಸಾಂಸ್ಕೃತಿಕದ್ದಾಗಲಿ, ರಾಜಕೀಯದ್ದಾಗಲಿ ಚಳವಳಿ ರೂಪುಗೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ನಮ್ಮ ಮುಂದೆ ಸಾಂಸ್ಕೃತಿಕ ಶೂನ್ಯವೊಂದು ಇದೆ. ಆದರೂ ಕೆ. ಬಿ. ಸಿದ್ಧಯ್ಯನಂಥವರು ಇಲ್ಲಿ ಇರುವುದನ್ನು ಮರೆಯದಿರೋಣ.

ಇಂಥ ಸಾಂಸ್ಕೃತಿಕ ಶೂನ್ಯವನ್ನು ತುಂಬಲು ಹೊಸದಾಗೇ ಚಳವಳಿಯೊಂದು ಮೂಡಿಬರಬೇಕು. ಅದು ಜನಪರವಾದ ಎಲ್ಲಾ ಶೋಷಿತರ ಅಂದರೆ ಜಾತಿ, ಅಸ್ಪೃಶ್ಯತೆ, ಲಿಂಗಭೇದದಿಂದುಂಟಾಗುವ ಶೋಷಣೆಯ ವಿರುದ್ಧವಾದ ರಾಜಕೀಯದ ಬದ್ಧತೆಯುಳ್ಳದ್ದಾಗಿರಬೇಕು. ಅದಕ್ಕೆ ಇನ್ನೂ ತುಸುಕಾಲ ಬೇಕಾದೀತೇನೊ.

ಡಾ|| ಆರ್. ವಿ. ಭಂಡಾರಿ
ಕೆರಕೋಣ, ಅಂಚೆ : ಅರೆಅಂಗಡಿ, ಹೊನ್ನಾವರ ತಾಲೂಕು, ಉ.ಕ.ಜಿಲ್ಲೆ

## ಹುಲ್ಲುಗಾವಲು

ಈ ನೆಲದಲ್ಲೇ
ಸಂಘಟನೆಕಾರರಾಗಿ
ಚಳುವಳಿಗಾರರಾಗಿ
ಏನೆಲ್ಲಾ ಭಯಂಕರವಾಗಿ.
ಆಕಾಶದೆತ್ತರಕ್ಕೆ
ಹಾರಾಡಿದವರೆಲ್ಲಾ
ಹಸಿವು ತಾಳಲಾರದೆ
ಹೋದರು
ಗೆಳೆಯ
ಎಲ್ಲಿಗೆ?
ಸರ್ಕಾರದ ಹುಲ್ಲುಗಾವಲಿಗೆ!

ದಿನೇಶ್ ಮಾ. ನ.
ಕನ್ನಡ ಅಧ್ಯಾಪಕರು
ಸರ್ವೋದಯ ಪ್ರೌಢಶಾಲೆ
ವಿಜಯನಗರ, ತುಮಕೂರು - ೨

# ಕರ್ನಾಟಕದಲ್ಲಿ ಕಮ್ಯುನಿಸ್ಟ್ ಚಳುವಳಿ

**ಕ**ರ್ನಾಟಕ ಏಕೀಕರಣಗೊಂಡ ಐವತ್ತು ವರ್ಷಗಳ ಸಂದರ್ಭದಲ್ಲಿ ಈ ನೆಲದ ಜನರ ಬದುಕನ್ನು ರೂಪಿಸಲು ನಡೆದ ವಿವಿಧ ಚಳುವಳಿ, ಜನಾಂದೋಲನಗಳನ್ನು ಗುರ್ತಿಸುವದು ಸ್ವಾಗತಾರ್ಹ ವಿಚಾರ. ಐದು ವಿಭಾಗಗಳಲ್ಲಿ ಹಲವು ಸಂಸ್ಥಾನಗಳಲ್ಲಿ ಹರಿದು ಹಂಚಿ ಹೋಗಿದ್ದ ಈ ನಾಡು ಜನತೆಯ ಬದುಕಿಗಾಗಿ, ಸ್ವಾತಂತ್ರ್ಯ ಹಾಗೂ ಸ್ವಾವಲಂಬನೆಗಾಗಿ, ಸಮಾನತೆಗಾಗಿ, ಏಕೀಕರಣಕ್ಕಾಗಿ ಹಲವಾರು ಸಮರಶೀಲ ಹೋರಾಟಗಳನ್ನು ಕಂಡಿದೆ. ಅಂಥ ಹೋರಾಟಗಳಲ್ಲಿ ಕಮ್ಯುನಿಸ್ಟರು ವಹಿಸಿದ ಪಾತ್ರ, ಮಾಡಿದ ತ್ಯಾಗ ಬಲಿದಾನಗಳು ಗಮನಾರ್ಹವಾಗಿವೆ. ೮೦ ವರ್ಷಗಳಿಂದ ನಿರಂತರವಾಗಿ ಈ ದೇಶದಲ್ಲಿ ಹೋರಾಡುತ್ತಿರುವ ಭಾರತ ಕಮ್ಯುನಿಸ್ಟ್ ಪಕ್ಷ ಈ ದೇಶದ, ರಾಜ್ಯದ ರಾಜಕೀಯ – ಸಾಮಾಜಿಕ ಬದುಕಿಗೆ ತನ್ನದೇ ಆದ ಕಾಣಿಕೆಕೊಟ್ಟಿದೆ. ಭಾರತ ಕಮ್ಯುನಿಸ್ಟ್ ಪಕ್ಷ ೧೯೨೫ ಡಿಸೆಂಬರ್ ೨೬ರಂದು ಜನ್ಮ ತಳೆದದ್ದೇ ಈ ದೇಶದ ಆಂತರಿಕ ಅವಶ್ಯಕತೆಯಿಂದ. ೧೯೨೦-೨೨ರಲ್ಲಿ ಗಾಂಧೀಜಿಯವರ ನಾಯಕತ್ವದಲ್ಲಿ ಕಾಂಗ್ರೆಸ್ ಆರಂಭಿಸಿದ ಅಸಹಕಾರ ಚಳುವಳಿ ಮತ್ತು ಅದರ ದಿಢೀರ್ ನಿಲುಗಡೆ ಈ ದೇಶದ ಕ್ರಾಂತಿಕಾರಿಗಳ ಮನಸ್ಸಿನಲ್ಲಿ ಅಸಮಾಧಾನವನ್ನು ಹುಟ್ಟಿಸಿತ್ತು. ಆಗ ಕಾಂಗ್ರೆಸ್‌ಗಿಂತ ಭಿನ್ನವಾದ, ಕ್ರಾಂತಿಕಾರಿಯಾದ, ಸಮಾಜ ವಾದಿ ಮುನ್ನೋಟದ ಒಂದು ರಾಜಕೀಯ ಚಳುವಳಿಯ ಅವಶ್ಯಕತೆ ಕಂಡಿತು. ಆ ಅವಶ್ಯಕತೆಗೆ ಪೂರಕವಾಗಿ ಭಾರತ ಕಮ್ಯುನಿಸ್ಟ್ ಪಕ್ಷ ಜನ್ಮ ತಳೆಯಿತು.

ವಿವಿಧ ಭಾಗಗಳಲ್ಲಿ ಹಂಚಿಹೋಗಿದ್ದ ಕರ್ನಾಟಕದ ಕ್ರಾಂತಿಕಾರಿ ಮನಸ್ಸುಗಳು ಕಮ್ಯುನಿಸ್ಟ್ ವಿಚಾರಧಾರೆಗೆ ಒಲಿದು ಈ ರಾಜ್ಯದಲ್ಲಿ ಜನಸಾಮಾನ್ಯರ ನಿಜವಾದ ಸ್ವಾತಂತ್ರ್ಯಕ್ಕಾಗಿ ಕಮ್ಯುನಿಸ್ಟ್ ಪಕ್ಷ ಆರಂಭಿಸಿದರು. ಕಾಂಗ್ರೆಸ್ ಪಕ್ಷವೂ ಇಲ್ಲದಿದ್ದ ಮೈಸೂರು ಸಂಸ್ಥಾನದಲ್ಲಿ ಸಂಸ್ಥಾನದ ಮೊದಲ ಕಮ್ಯುನಿಸ್ಟರೆಂದು ಖ್ಯಾತರಾದ ಸಿ. ಬಿ. ಮೊಣ್ಣಯ್ಯ, ಎನ್. ಡಿ. ಶಂಕರ್, ಎಂ. ಎಸ್. ರಾಮರಾಯರು ಮಾರ್ಕ್ಸ್‌ವಾದಿ ದೃಷ್ಟಿಕೋನದಿಂದ ಸ್ವಾತಂತ್ರ್ಯ ಹೋರಾಟ ಆರಂಭಿಸಿದರು. ೧೯೩೭ರ ಸಂದರ್ಭದಲ್ಲಿಯೇ ಜನಜಾಗೃತಿ ಸಂಘದ ಹೆಸರಿನಲ್ಲಿ ಸಕ್ರಿಯರಾದರು. ಜವಾಬ್ದಾರಿ ಸರಕಾರಕ್ಕಾಗಿ ನಡೆದ ಹೋರಾಟ, ಶಿವಪುರ ಧ್ವಜ ಸತ್ಯಾಗ್ರಹ, ನಾರಿಮನ್ ಗಲಭೆ ಇಂಥ ಹಲವಾರು ಸ್ವಾತಂತ್ರ್ಯ ಹೋರಾಟಗಳಲ್ಲಿ ಪಾಲ್ಗೊಂಡು ಜೈಲುವಾಸ ಅನುಭವಿಸಿದರು. ಮುಂದೆ ಕೈಗಾರಿಕಾನಗರವಾಗಿ ಬೆಳೆಯುತ್ತಿದ್ದ ಬೆಂಗಳೂರಿನಲ್ಲಿ ಹೀನಾಯ ಸ್ಥಿತಿಯಲ್ಲಿದ್ದ ಕಾರ್ಮಿಕರ ಬದುಕನ್ನು ನೋಡಿ ಎನ್. ಡಿ. ಶಂಕರ್ ಹಾಗೂ ಎಂ. ಎಸ್. ರಾಮರಾಯರು ೧೯೪೧ರಲ್ಲಿ ಕಾರ್ಮಿಕರ ಸಂಘಟನೆ, ಹೋರಾಟಕ್ಕೆ ತೊಡಗಿದರು. ಬಿನ್ನಿ ಮಿಲ್‌ನಲ್ಲಿ ಕಾರ್ಮಿಕರ ಹೋರಾಟ, ಕೋಲಾರ ಚಿನ್ನದ ಗಣಿಗಳಲ್ಲಿ ಹೋರಾಟ ನಡೆಸಿ ಜೈಲುವಾಸ ಅನುಭವಿಸಿದರು. ರಾಮರಾಯರು ಬೆಂಗಳೂರು ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿಯಾಗಿ, ಉಳಿದ ಸಂಗಾತಿಗಳಾದ ಮರಿದಾಸ್, ಶ್ರೀರಾಮುಲು, ಎ. ಎಸ್. ಸಿಂಗ್, ರತ್ನಂ ಮುಂತಾದವರೊಡನೆ ಸೇರಿ ಟಿ. ಆರ್. ಮಿಲ್ಸ್, ಕೃಷ್ಣಾ ಮಿಲ್ಸ್, ಮಹಾರಾಜಾ ಮಿಲ್, ಐ.ಟಿ.ಸಿ., ಹೋಟೆಲ್ ಕಾರ್ಮಿಕರು, ಮುನ್ಸಿಪಲ್ ಕಾರ್ಮಿಕರು ಹೀಗೆ ಎಲ್ಲ ವಲಯದ ಕಾರ್ಮಿಕರನ್ನು ಸಂಘಟಿಸಿ ಹೋರಾಟಕ್ಕಿಳಿದರು. ಹೀಗೇ ಮಂಗಳೂರಿನಲ್ಲಿ ಬೀಡಿ ಕೆಲಸಗಾರರು, ಗೆರುಬೀಜ ಕೆಲಸಗಾರರು, ನೇಕಾರರ ಮಧ್ಯೆ ಸಿಂಪ್ಸನ್ ಸೋನ್ಸ್, ಬಿ.ವಿ. ಕಕ್ಕಿಲ್ಲಾಯ, ಹೊಳ್ಳ ಮುಂತಾದವರು ಕಮ್ಯುನಿಸ್ಟ್ ಚಳುವಳಿಯನ್ನು ಕಟ್ಟಿ ಅಲ್ಲಿ ಸ್ವಾತಂತ್ರ್ಯ ಹೋರಾಟ ತೀವ್ರಗೊಳಿಸಿದರು. ದಾವಣಗೆರೆಯಲ್ಲಿ ಜವಳಿ ಗಿರಣಿಗಳು ಆರಂಭವಾಗಿ ಅಲ್ಲಿಯೂ ಕಾರ್ಮಿಕರ ಸಂಘಟನೆ ಹೋರಾಟಗಳನ್ನು ಶಿವಶಂಕರ ರಾಯರು, ಮುರುಗಯ್ಯ, ಅಂತೆಯೇ, ಸೋನ್ಸ್‌ರ ನಾಯಕತ್ವದಲ್ಲಿ ಕಮ್ಯುನಿಸ್ಟ್ ಚಳುವಳಿ ಕಾರ್ಮಿಕರ ಮೂಲಭೂತ ಹಕ್ಕುಗಳಿಗಾಗಿ ನಡೆಯಿತು. ಹೀಗೆ ರಾಜ್ಯದ ಎಲ್ಲ ಭಾಗಗಳಲ್ಲಿ ಕಾರ್ಮಿಕರ ಮಧ್ಯೆ ಸಂಘಟನೆ ಹೋರಾಟ ನಡೆದವು.

ಮಂಗಳೂರು ಸಮೀಪದ ಕೈಯ್ಯೂರು ರೈತರು ಸಾಮ್ರಾಜ್ಯಶಾಹಿಗಳ ವಿರುದ್ಧ ಹಾಗೂ ಸ್ಥಳೀಯ ಭೂಮಾಲೀಕರ ವಿರುದ್ಧ ನಡೆಸಿದ ಹೋರಾಟ ಹಾಗೂ ಬಲಿದಾನ ಇತಿಹಾಸದಲ್ಲಿ ಸ್ಥಾಯಿಯಾಗಿದೆ. ಹೈದರಾಬಾದ್ ನಿಜಾಮ ಸಂಸ್ಥಾನದಲ್ಲಿದ್ದ ಗುಲಬರ್ಗಾ, ರಾಯಚೂರು ಭಾಗದಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಕಮ್ಯುನಿಸ್ಟ್ ಪಕ್ಷ ಶ್ರೀನಿವಾಸ ಗುಡಿಯವರ ನಾಯಕತ್ವದಲ್ಲಿ ಗ್ರಾಮ ಗ್ರಾಮಗಳಲ್ಲಿ ಸ್ವಾತಂತ್ರ್ಯದ ಕಿಚ್ಚು ಹೊತ್ತಿಸಿತ್ತು. ಬಾಂಬೆ ಕರ್ನಾಟಕದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷ ಹುಬ್ಬಳ್ಳಿಯನ್ನು ಕೇಂದ್ರವಾಗಿಟ್ಟು ಕೊಂಡು ಕಾರವಾರ ಬೆಳಗಾಂ ಭಾಗದಲ್ಲಿ ಹೋರಾಟ ನಡೆಸಿ ಹಲವಾರು ನಾಯಕರು ಜೈಲುವಾಸ ಅನುಭವಿಸಿದರು. ಸಿ. ಬಿ. ಮೊಣ್ಣಯ್ಯನವರು ರಾಜ್ಯದಾದ್ಯಂತ ಹೋರಾಟದಲ್ಲಿ

ತೊಡಗಿ ರಾಜ್ಯದ ಎಲ್ಲ ಜೈಲುಗಳಲ್ಲಿ ವಾಸಮಾಡಿ ಬಂದವರು. ಗೋವಾ ವಿಮೋಚನಾ ಚಳುವಳಿಗೆ ಕರ್ನಾಟಕದ ಎಲ್ಲ ಭಾಗಗಳಿಂದ ಕಮ್ಯುನಿಸ್ಟರ ದಂಡೇ ನುಗ್ಗಿ ಹೋರಾಟ ನಡೆಸಿತು. ಕರ್ನಾಟಕ ಏಕೀಕರಣದ ಹೋರಾಟಕ್ಕೆ ಪಕ್ಷ ಸಂಪೂರ್ಣ ತೊಡಗಿಸಿ ಕೊಂಡಿತು. ಅಖಂಡ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್‌ನ (ಅಕರಾನಿ) ಕಾರ್ಯದರ್ಶಿ ಯಾಗಿ ಬಿ. ವ್ಹಿ. ಕಕ್ಕಿಲ್ಲಾಯರೇ ಆಯ್ಕೆ ಆಗಿದ್ದರು. ಇನ್ನುಳಿದ ಕಮ್ಯುನಿಸ್ಟ್ ನಾಯಕರಾದ ವಿ. ಜೆ. ಮುಧೋಳ, ಡಿ. ಜಿ. ಮುಲ್ಲಾ ಮುಂತಾದವರು ಮುಂಚೂಣಿಯಲ್ಲಿದ್ದರು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಅಖಿಲ ಭಾರತ ವಿದ್ಯಾರ್ಥಿ ಫೆಡರೇಶನ್ ನಿರ್ಣಾಯಕ ಪಾತ್ರ ವಹಿಸಿತ್ತು. ೧೯೪೦ರ ಸಂದರ್ಭದಲ್ಲಿ ವಿದ್ಯಾರ್ಥಿಗಳಾಗಿದ್ದ ಎಂ. ಎಸ್. ಕೃಷ್ಣನ್, ಎಂ. ಸಿ. ನರಸಿಂಹನ್ ಬೆಂಗಳೂರಿನಲ್ಲಿ, ಮಂಗಳೂರಿನಲ್ಲಿ ಪಿ. ಎಂ. ಎನ್. ಮೂರ್ತಿ, ವಿಜಾಪೂರದಲ್ಲಿ ಪಿ. ಎಸ್. ಪಾಟೀಲ್, ಬಳ್ಳಾರಿಯಲ್ಲಿ ಅರವಿಂದ ಮಳೆಬೆನ್ನೂರ ಹೀಗೆ ರಾಜ್ಯದಾದ್ಯಂತ ವಿದ್ಯಾರ್ಥಿ ಚಳುವಳಿಯನ್ನು ಸಂಘಟಿಸುವಲ್ಲಿ ಕಮ್ಯುನಿಸ್ಟರ ಪ್ರಮುಖ ಪಾತ್ರ ವಹಿಸಿದರು. ಕರ್ನಾಟಕದಲ್ಲಿ ರೈತ ಚಳುವಳಿಯನ್ನು ಆರಂಭಿಸಿದ್ದೇ ಕಮ್ಯುನಿಸ್ಟರು. 'ಉಳುವವನಿಗೆ ಭೂಮಿ' ಎಂಬ ನಿಲುವಿನೊಂದಿಗೆ ೧೯೫೫-೫೬ರಿಂದಲೇ ಚಳುವಳಿ ರಾಜ್ಯದಲ್ಲಿ ಆರಂಭವಾಗಿತ್ತು. ಮುಂದೆ ೧೯೭೩ರಲ್ಲಿಯೂ ಸಹ ಭೂಸುಧಾರಣೆಗಾಗಿ ಕಮ್ಯುನಿಸ್ಟರೇ ಹೋರಾಟ ತೀವ್ರಗೊಳಿಸಿ ಭೂಸುಧಾರಣೆ ಕಾನೂನು ಬರಲು ಕಾರಣರಾದರು.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿಯೇ ಕಮ್ಯುನಿಸ್ಟ್ ಚಿಂತನೆಯ ಬರಹಗಾರರು ಪ್ರಗತಿಶೀಲ ಬರಹಗಾರರ ಸಂಘ ಆರಂಭಿಸಿದರು. ಭಾರತೀಯ ಜನತಾ ರಂಗಭೂಮಿ (ಇಪ್ಟಾ) ಆರಂಭಿಸಿದರು. 'ಜನಶಕ್ತಿ' ಎಂಬ ಪತ್ರಿಕೆ ಆಗಲೇ ಪತ್ರಿಕೋದ್ಯಮದಲ್ಲಿ ಹೆಸರು ಪಡೆದಿತ್ತು. ನಿರಂಜನ, ಸಿ. ಆರ್. ಕೃಷ್ಣರಾವ್, ಎಸ್. ಆರ್. ಭಟ್ ಮುಂತಾದವರು ಆ ವಲಯದಲ್ಲಿ ಕೆಲಸ ಮಾಡಿದರು. ಹೀಗೆ ಕಾರ್ಮಿಕ, ರೈತ, ವಿದ್ಯಾರ್ಥಿ, ಸಾಹಿತ್ಯ-ಸಾಂಸ್ಕೃತಿಕ ರಂಗದಲ್ಲಿ ಸಂಘಟನೆ ಮಾಡಿ ಆ ಮೂಲಕ ಸಾಮಾಜಿಕ ಚಳುವಳಿಗೆ, ಸ್ವಾತಂತ್ರ್ಯ ಹೋರಾಟಕ್ಕೆ ಕಮ್ಯುನಿಸ್ಟ್ ಪಕ್ಷ ತನ್ನದೇ ಆದ ಕೊಡುಗೆ ಕೊಟ್ಟಿದೆ.

ಸ್ವಾತಂತ್ರ್ಯಾನಂತರದ ದಿನಗಳಲ್ಲಿ ಕಮ್ಯುನಿಸ್ಟ್ ಪಕ್ಷ ದೇಶದ, ರಾಜ್ಯದ ಸರಕಾರಗಳ ಜನವಿರೋಧಿ ನೀತಿಗಳ ವಿರುದ್ಧ ನಿರಂತರ ಹೋರಾಟ ನಡೆಸಿದೆ. ೧೯೪೮ರಲ್ಲಿ ಮೊದಲ ರಾಜ್ಯ ಸಮ್ಮೇಳನ ದಾವಣಗೆರೆಯಲ್ಲಿ ನಡೆಯಿತು. ಎನ್. ಎಲ್. ಉಪಾಧ್ಯಾಯ ಕಾರ್ಯದರ್ಶಿಯಾದರು. ಪಡೆದ ಸ್ವಾತಂತ್ರ್ಯವನ್ನು ಜನತೆಗೆ ತಲುಪಿಸುವುದು ಪಕ್ಷದ ಮುಂದಿದ್ದ ಸವಾಲು. ದೇಶೀಯ ಬಂಡವಾಳಗಾರರು, ಭೂಮಾಲಿಕರು ಸರಕಾರಗಳನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡು ಶೋಷಣೆ ಮುಂದುವರೆಸಿದರು. ಕಾರ್ಮಿಕ ಪರವಾದ ಕಾನೂನುಗಳು ಜಾರಿಯಾಗದೇ ಹೋದವು. ಆಗ ಬೆಂಗಳೂರು, ಮೈಸೂರು, ಮಂಗಳೂರು, ದಾವಣಗೆರೆ, ಶಿವಮೊಗ್ಗ, ಗುಲಬರ್ಗಾ ಹೀಗೆ ಕೈಗಾರಿಕಾ ಪ್ರಧಾನ ನಗರಗಳಲ್ಲಿ ಸಾರ್ವಜನಿಕ, ಖಾಸಗೀವಲಯದ ಕಾರ್ಮಿಕರ ಸಂಘಟನೆ ಹೋರಾಟ ತೀವ್ರವಾದವು. ಈ ನಡುವೆ ಸೈದ್ಧಾಂತಿಕ ಕಾರಣಗಳಿಂದ ಪಕ್ಷ ವಿಭಜನೆಯಾದರೂ ನಂತರದ ದಿನಗಳಲ್ಲಿ ಜಂಟೀ ಹೋರಾಟಗಳ ಮೂಲಕ, ಜನರ ಸಮಸ್ಯೆಗಳಿಗೆ ಸ್ಪಂದಿಸಿದವು. ಇಂದಿನ ಜಾಗತೀಕರಣ ಸಂದರ್ಭದಲ್ಲಿ ಮತ್ತೆ ನವಸಾಮ್ರಾಜ್ಯಶಾಹಿ ನೀತಿ ವಿರುದ್ಧ ದಿಟ್ಟ, ಸ್ಪಷ್ಟ ಹೋರಾಟ ನಡೆಸಿರುವುದು ಕಮ್ಯುನಿಸ್ಟ್ ಪಕ್ಷಗಳೆ. ರಾಜ್ಯದ ರೈತರ ಮಧ್ಯೆ, ಕೃಷಿಕೂಲಿಕಾರರ ಮಧ್ಯೆ ಕಮ್ಯುನಿಸ್ಟರು ತಮ್ಮ ಮಿತಿಗಳ ನಡುವೆಯೂ ಕೆಲಸ ಮಾಡಿದ್ದಾರೆ. ರಾಜ್ಯದ ಪ್ರಮುಖ ರೈತ ಚಳುವಳಿಗಳಲ್ಲೊಂದಾದ ನರಗುಂದ-ನವಲಗುಂದ ಹೋರಾಟ ದಲ್ಲಿ ಕಮ್ಯುನಿಸ್ಟ್‌ರ ಪಾತ್ರ ಮಹತ್ವದ್ದು. ಬಾಗೂರು-ನವಿಲೆ ಹೋರಾಟ, ಕೋಲಾರ, ರಾಯಚೂರು, ಗುಲಬರ್ಗಾ, ಮಂಗಳೂರು, ಧಾರವಾಡ ಹಲವಾರು ಜಿಲ್ಲೆಗಳಲ್ಲಿ ನಡೆದ ರೈತರ, ಕೃಷಿ ಕೂಲಿಕಾರರ ಹೋರಾಟಗಳಲ್ಲಿ ಕಮ್ಯುನಿಸ್ಟರು ಕ್ರಿಯಾಶೀಲರಾಗಿದ್ದಾರೆ.

ಪ್ರಮುಖವಾಗಿ ಸಾಹಿತ್ಯ ಸಾಂಸ್ಕೃತಿಕ ರಂಗದಲ್ಲಿ ಇಂದಿಗೂ ಎಡಪಂಥೀಯ ಚಿಂತಕರದು ಮಹತ್ತರ ಕಾಣಿಕೆ. ಸಮುದಾಯ, ಇಪ್ಟಾದಂಥ ಸಾಂಸ್ಕೃತಿಕ ಸಂಘಟನೆಗಳು ತಮ್ಮ ಮಿತಿಯ ಮಧ್ಯೆಯೂ ಜನಪರ ಸಾಂಸ್ಕೃತಿಕ ಹೋರಾಟಗಳಲ್ಲಿ ತೊಡಗಿವೆ. ಕೋಮುವಾದವನ್ನು ಎದುರಿಸುವಲ್ಲಿ ಕಮ್ಯುನಿಸ್ಟ್ ಪಕ್ಷಗಳು ವಹಿಸಿದ ಪಾತ್ರ ಮಹತ್ವದ್ದು. ಜಾಗತೀಕರಣದ ಪರವಾಗಿ, ಜಾತಿ, ಧರ್ಮ, ಹಣಬಲ, ಭುಜಬಲದಿಂದ ತುಂಬಿದ ಇಂದಿನ ರಾಜಕೀಯ ವ್ಯವಸ್ಥೆಯಲ್ಲಿ ಕಮ್ಯುನಿಸ್ಟ್ ಪಕ್ಷಗಳು ಜನಪರ ರಾಜಕಾರಣಕ್ಕಾಗಿ, ಸಮಾಜವಾದಿ ಸಮಾಜ ನಿರ್ಮಾಣದ ಕನಸಿನೊಂದಿಗೆ ಸಂಘರ್ಷಮಯ ಮಾರ್ಗದಲ್ಲಿವೆ.

ಸಿದ್ದನಗೌಡ ಪಾಟೀಲ
ಘಾಟೆ ಭವನ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ಕರ್ನಾಟಕದ ಕಾರ್ಮಿಕ ಚಳುವಳಿ – ಒಂದು ಹಿನ್ನೋಟ

**ಬೊಂ**ಬಾಯಿ, ಮದ್ರಾಸ್ ಮತ್ತು ಕಲ್ಕತ್ತಾ ನಗರಗಳಲ್ಲಿ ಬ್ರಿಟಿಷ್ ಆಳ್ವಿಕೆಯ ಕಾಲದಿಂದಲೇ ಅನೇಕ ಕಾರ್ಖಾನೆಗಳನ್ನು ಸ್ಥಾಪಿಸಲಾಗಿತ್ತು. ಇದು ಭಾರತದಲ್ಲಿ ಜರುಗಿದ ಕೈಗಾರಿಕೀಕರಣದ ಮೊದಲ ಭಾಗ ಎನ್ನಬಹುದು. ಈ ನಗರಗಳು ಕಾರ್ಮಿಕ ವರ್ಗದ ಬೆಳವಣಿಗೆ ಮತ್ತು ಅದರ ಹೋರಾಟಗಳ ಪ್ರಮುಖ ಕೇಂದ್ರಗಳೂ ಆಗಿದ್ದವು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಸೆಣಬು, ಹತ್ತಿ ಗಿರಣಿ ಕಾರ್ಮಿಕರು ನೀಡಿರುವ ಕೊಡುಗೆ ಅಪಾರವಾದುದು. ಈ ನಗರಗಳಲ್ಲಿದ್ದ ಕೈಗಾರಿಕೆಗಳು ಮತ್ತು ಅವುಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿ ಅಂದಿನ ಸಂದರ್ಭದ ಕೈಗಾರಿಕಾ ಸಂಬಂಧಗಳನ್ನು ರೂಪಿಸಿತ್ತು. ಹೆಚ್ಚು ಹೆಚ್ಚು ಕಾರ್ಖಾನೆಗಳು ಖಾಸಗಿ ಕ್ಷೇತ್ರದಲ್ಲಿದ್ದು ಕಾರ್ಮಿಕ ಶೋಷಣೆಯ ಮಟ್ಟ ಸಹಜವಾಗಿಯೇ ಹೆಚ್ಚಿನ ಪ್ರಮಾಣದಲ್ಲಿತ್ತು. ಆದಕಾರಣ ಕಾರ್ಮಿಕರು ಮಾಲೀಕರನ್ನು ಎದುರಿಸಲು ಹೊರಗಿನ ನಾಯಕತ್ವವನ್ನು ಪಡೆಯುತ್ತಿದ್ದದ್ದು ಸರ್ವೇಸಾಮಾನ್ಯವಾಗಿತ್ತು. ೧೯೨೬ರಲ್ಲಿ ಜಾರಿಗೆ ಬಂದ ಭಾರತ ಕಾರ್ಮಿಕ ಸಂಘಗಳ ಕಾಯ್ದೆಯೂ ಕೂಡ ಹೊರಗಿನವರನ್ನು ಪದಾಧಿಕಾರಿಗಳನ್ನಾಗಿ ಆಯ್ಕೆ ಮಾಡಿಕೊಳ್ಳುವ ಹಕ್ಕನ್ನು ಕಾರ್ಮಿಕರಿಗೆ ಮತ್ತು ಕಾರ್ಮಿಕ ಸಂಘಗಳಿಗೆ ಕೊಟ್ಟಿದ್ದಿತು. ಸ್ವಾತಂತ್ರ್ಯ ಚಳುವಳಿಯ ಹಲವಾರು ನೇತಾರರು ಕಾರ್ಮಿಕ ಸಂಘಗಳ ಮುಖಂಡರೂ ಆಗಿದ್ದರು. ಸ್ವಾತಂತ್ರ್ಯೋತ್ತರ ಕಾರ್ಮಿಕವರ್ಗದ ಚರಿತ್ರೆಯನ್ನು ಅವಲೋಕಿಸಿದಾಗ, ಸಂಘಟನೆಗೆ ಹೊರಗಿನಿಂದ ನಾಯಕರನ್ನು ಕರೆದುತರುವ ಪದ್ಧತಿ ಈ ನಗರಗಳಲ್ಲಿ ಇಂದಿಗೂ ಪ್ರಚಲಿತವಾಗಿರುವುದು ಕಂಡುಬರುತ್ತದೆ. ಆದರೆ, ನಾಯಕತ್ವವನ್ನು ಬದಲಾವಣೆ ಮಾಡುವ ಪದ್ಧತಿ ಹೆಚ್ಚುತ್ತಿರುವುದು ಕಂಡುಬರುತ್ತದೆ. ಇದು ಕಾರ್ಮಿಕರ ಸಂಘಟನಾ ಶ್ರದ್ಧೆಯ ಇಳಿಮುಖದ ಸಂಕೇತವಿರಬಹುದು ಅಥವಾ ನಾಯಕತ್ವದ ದೋಷವೂ ಇರಬಹುದು.

> ಭಾರತೀಯ ತತ್ತ್ವಜ್ಞಾನವು ನಿಸರ್ಗಾತೀತ ಹಾಗೂ ಆಧ್ಯಾತ್ಮಿಕ ಮಿಥ್ಯಾ ಚಿಂತನೆಯ ಔನ್ನತ್ಯಗಳಿಂದ ಭೂಮಿಗೆ ಇಳಿದು ಬರಬೇಕು, ವಿಜ್ಞಾನದೊಂದಿಗೆ ದೃಢವಾಗಿ ಕೈಗೂಡಿಸಬೇಕು. ಮನುಷ್ಯರ ದಿನನಿತ್ಯ ಜೀವನದ ಹಿತಗಳನ್ನು ಸಾಧಿಸುವಂತಾಗಬೇಕು.
>
> **– ಜವಾಹರಲಾಲ ನೆಹರು**

ಈ ಹಿನ್ನೆಲೆಯಲ್ಲಿ ಕಳೆದ ಐದು ದಶಕಗಳಲ್ಲಿ ಕರ್ನಾಟಕ ರಾಜ್ಯದ ಕೈಗಾರಿಕಾ ಬಾಂಧವ್ಯದ ಬಗ್ಗೆ ಒಂದು ಪಕ್ಷಿನೋಟ ಹರಿಸಿದಲ್ಲಿ ಕೆಲವು ವಿಶೇಷತೆಗಳು ನಮ್ಮ ಗಮನ ಸೆಳೆಯುತ್ತವೆ. ಈ ರಾಜ್ಯದಲ್ಲಿ ಸ್ಥಾಪಿತಗೊಂಡ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಹಾಗೂ ಅಲ್ಲಿ ಹುಟ್ಟಿಕೊಂಡ ಕಾರ್ಮಿಕ ಸಂಘಟನೆಗಳು ಬೇರೆ ರಾಜ್ಯಗಳಿಗಿಂತ ಭಿನ್ನವಾದ ಕಾರ್ಮಿಕ ಸಂಸ್ಕೃತಿಯನ್ನು ಸೃಷ್ಟಿಸಿತು. ವಿಶ್ವೇಶ್ವರಯ್ಯ ಕಬ್ಬಿಣ ಕಾರ್ಖಾನೆ, ಮೈಸೂರು ಕಾಗದ ಕಾರ್ಖಾನೆ, ಮೈಸೂರು ಗಂಧದ ಸೋಪಿನ ಕಾರ್ಖಾನೆ, ಮೈಸೂರು ರೇಷ್ಮೆ ಕಾರ್ಖಾನೆ, ಮೈಸೂರು ಲ್ಯಾಂಪ್ಸ್ ಕಾರ್ಖಾನೆ ಸಾರ್ವಜನಿಕ ಕ್ಷೇತ್ರದಲ್ಲಿ ಸ್ಥಾಪಿಸಲಾದ ಮೊದಲ ಉದ್ದಿಮೆಗಳು. ಇವು ಭಾರತದ ಕೈಗಾರಿಕೀಕರಣದ ಚರಿತ್ರೆಯಲ್ಲಿ ಕರ್ನಾಟಕಕ್ಕೆ ವಿಶೇಷ ಸ್ಥಾನ ದೊರಕಿಸಿಕೊಟ್ಟವು. ಸ್ವಾತಂತ್ರ್ಯಾನಂತರ ಹಿಂದೂಸ್ತಾನ್ ಏರೋನಾಟಿಕ್ಸ್ ಲಿಮಿಟೆಡ್, ಹಿಂದೂಸ್ತಾನ್ ಮೆಷಿನ್ ಟೂಲ್ಸ್, ಭಾರತ್ ಎಲೆಕ್ಟ್ರಾನಿಕ್ಸ್ ಲಿಮಿಟೆಡ್, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್, ಭಾರತ್ ಅರ್ಥ್ ಮೂವರ್ಸ್ ಲಿಮಿಟೆಡ್, ಭಾರತ್ ಗೋಲ್ಡ್ ಮೈನ್ಸ್ ಲಿಮಿಟೆಡ್ ಇವೇ ಮುಂತಾದ ಬೃಹತ್ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಕರ್ನಾಟಕದಲ್ಲಿ ಮತ್ತು ವಿಶೇಷವಾಗಿ ಬೆಂಗಳೂರು ನಗರದಲ್ಲಿ ಹೊಸ ಕಾರ್ಮಿಕ ಪಡೆಯನ್ನು ಸೃಷ್ಟಿಸಿತು. ಈ ಕಾರ್ಖಾನೆಗಳ ಕಾರ್ಮಿಕರು ಸಾಕಷ್ಟು ಮಟ್ಟಿಗೆ ಶಿಕ್ಷಣ ಮತ್ತು ತಾಂತ್ರಿಕ ಕುಶಲತೆ ಹೊಂದಿದ್ದ ಕಾರಣ ಹೊರಗಿನ ನಾಯಕತ್ವವನ್ನು ಬಯಸಲಿಲ್ಲ. ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳ ಆಡಳಿತವರ್ಗ ಕೂಡ ಕಾರ್ಮಿಕ ಸಂಘಗಳ ಒಳಗಿನ ನಾಯಕತ್ವಕ್ಕೆ ಮಾನ್ಯತೆ ನೀಡಿ, ಅನೇಕ ಸವಲತ್ತುಗಳನ್ನು ಕಾರ್ಮಿಕರಿಗೆ ಕೊಟ್ಟದ್ದರಿಂದ ಮತ್ತು ಮಾತುಕತೆಗಳ ಮೂಲಕ ಅನೇಕ ಸಮಸ್ಯೆಗಳೂ ಪರಿಹಾರವಾಗುತ್ತಿದ್ದರಿಂದ ಈ ಉದ್ದಿಮೆಗಳಲ್ಲಿ ತೀವ್ರ ಕಾರ್ಮಿಕ ಚಳುವಳಿಗೆ ಅವಕಾಶವಾಗಲಿಲ್ಲ. ಕೈಗಾರಿಕಾ ಸಂಬಂಧಗಳು ಒಂದು ರೀತಿಯ ಸಮತೋಲನ ಹೊಂದಿದ್ದುವು.

ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳೊಂದಿಗೆ ಹಲವಾರು ಖಾಸಗಿ ಉದ್ದಿಮೆಗಳೂ ಬೆಳೆದುಬಂದವು. ದಾವಣಗೆರೆಯ ಹತ್ತಿ ಗಿರಣಿಗಳೂ, ಹರಿಹರದ ಮೈಸೂರು ಕಿರ್ಲೋಸ್ಕರ್ ಕಾರ್ಖಾನೆ, ಗುಲ್ಬರ್ಗಾ, ಬಿಜಾಪುರ, ಗೋಕಾಕ್‌ನಲ್ಲಿ ಸ್ಥಾಪಿತಗೊಂಡ ಹತ್ತಿಗಿರಣಿಗಳು, ಬೆಂಗಳೂರಿನ ಕಿರ್ಲೋಸ್ಕರ್ ಎಲೆಕ್ಟ್ರಿಕ್ ಕಂಪನಿ, ಜಿ.ಕೆ.[illegible], ಮಫತ್‌ಲಾಲ್ ಪ್ಲೈವುಡ್ ಕಾರ್ಖಾನೆ, ವಿಡಿಯಾ ಇಂಡಿಯಾ ಕಂಪನಿ, [illegible] ಸೋಮಪ್ಪ, ಮೈಸೂರು ಎಲೆಕ್ಟ್ರಿಕ್ ಕಂಪನಿ, ಕ.ವಿ.ಕಾ., ಮೈಕೊ, ಇಂಡಿಯನ್ ಟೊಬ್ಯಾಕೊ ಕಂಪನಿ, ಮೈಸೂರಿನ ಕೆ.ಆರ್.ಮಿಲ್ಸ್, ಐಡಿಯಲ್ ಜಾವಾ, ನಂಜನಗೂಡಿನ ಸುಜಾತಾ ಮಿಲ್ಸ್ ಇತ್ಯಾದಿ ಖಾಸಗಿ ವಲಯದ ಉದ್ದಿಮೆಗಳು ಕರ್ನಾಟಕದ ಕೈಗಾರಿಕಾ ಪ್ರತಿಷ್ಠೆಯನ್ನು ಹೆಚ್ಚಿಸಿ, ಕಾರ್ಮಿಕ ಚಳುವಳಿಗೆ ಹೊಸ ಆಯಾಮವನ್ನು ನೀಡಿದವು. ಈ ಕ್ಷೇತ್ರದ ಕಾರ್ಮಿಕವರ್ಗ ಎಪ್ಪತ್ತರ ದಶಕದಲ್ಲಿ ಹೊರಗಿನ ನಾಯಕತ್ವ ಪಡೆದು ಸಂಘಟನೆಯ ಹಕ್ಕುಗಳಿಗಾಗಿ, ಸಂಘದ ಮಾನ್ಯತೆಗಾಗಿ ಮತ್ತು ಆರ್ಥಿಕ ಬೇಡಿಕೆಗಳ ಈಡೇರಿಕೆಗಾಗಿ ಪ್ರಬಲ ಹೋರಾಟಗಳನ್ನು ಎ.ಐ.ಟಿ.ಯು.ಸಿ. ಮತ್ತು ಸಿ.ಐ.ಟಿ.ಯು. ನಾಯಕತ್ವದಲ್ಲಿ ನಡೆಸಿತು. ಶ್ರೀ ಎಂ. ಎಸ್. ಕೃಷ್ಣನ್ ಮತ್ತು ಶ್ರೀ ಸೂರ್ಯನಾರಾಯಣ ರಾವ್ ಮತ್ತು ಶ್ರೀ ಪಂಪಾಪತಿ ಈ ಅವಧಿಯಲ್ಲಿ ಹಲವಾರು ಹೋರಾಟಗಳಿಗೆ ನಾಯಕತ್ವ ಕೊಟ್ಟರು. ಸುಮಾರು ಇದೇ ಅವಧಿಯಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ಗಳ ನೌಕರರು, ಈ ಮೊದಲೇ ರಾಷ್ಟ್ರೀಕೃತವಾಗಿದ್ದ ಜೀವವಿಮಾ ಕ್ಷೇತ್ರದ ನೌಕರರು, ಸಾರಿಗೆ ಸಂಸ್ಥೆಯ ನೌಕರರು ಕಾರ್ಮಿಕ ಶಕ್ತಿಯನ್ನು ಹಿಗ್ಗಿಸಿದರು. ಈ ಹೊತ್ತಿಗಾಗಲೇ ಬೀಡಿ ಕಾರ್ಮಿಕರು ಮತ್ತು ಪ್ಲಾಂಟೇಶನ್ ಕಾರ್ಮಿಕರು ಮಂಗಳೂರು, ಹಾಸನ, ಕೊಡಗು, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಾರ್ಮಿಕ ಸಂಘಗಳನ್ನು ರಚಿಸಿ, ತಮ್ಮ ಹಕ್ಕುಗಳಿಗಾಗಿ ಹೋರಾಟಗಳನ್ನು ನಡೆಸಿದ್ದರು.

೧೯೭೪ರ ರೈಲ್ವೇ ಕಾರ್ಮಿಕರ ಅಖಿಲ ಭಾರತ ಮುಷ್ಕರವು ಕರ್ನಾಟಕ ಕಾರ್ಮಿಕ ವರ್ಗದ ಮೇಲೆ ಅಪಾರ ಪರಿಣಾಮ ಬೀರಿತ್ತು. ಈ ಮುಷ್ಕರಕ್ಕೆ ಅನೇಕ ಕಾರ್ಮಿಕ ಸಂಘಟನೆಗಳು ಬೆಂಬಲ ನೀಡಿದವು. ನಂತರ ೧೯೭೫-೭೭ರ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಕಾರ್ಮಿಕ ಚಳುವಳಿಗೆ ಸ್ವಲ್ಪ ಹಿನ್ನಡೆಯಾಯಿತೆಂದು ಕಂಡುಬಂದರೂ, ಒಂದು ಬಗೆಯ ಅಸಮಾಧಾನದ ಹೊಗೆಯಾಡುತ್ತಿತ್ತು. ಈ ಅವಧಿಯಲ್ಲಿ ಜರುಗಿದ ತಾತಗುಣಿ ಎಸ್ಟೇಟ್‌ನ ಕಾರ್ಮಿಕರ ಸುದೀರ್ಘ ಹೋರಾಟ ಅವಿಸ್ಮರಣೀಯ.

ತುರ್ತು ಪರಿಸ್ಥಿತಿ ಕೊನೆಗೊಳ್ಳುತ್ತಿದ್ದಂತೆಯೆ ಸಾಲು ಸಾಲಾಗಿ ಅನೇಕ ಕಾರ್ಮಿಕ ಚಳುವಳಿಗಳು ಭುಗಿಲೆದ್ದವು. ೧೯೮೦-೮೧ರ ಕೇಂದ್ರ ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳಲ್ಲಿನ ಕಾರ್ಮಿಕರ ೭೮ ದಿನಗಳ ಮುಷ್ಕರ, ಮೈಕೊ, ಐ.ಟಿ.ಸಿ. ಕಾರ್ಮಿಕರ ಮುಷ್ಕರ, ದಾವಣಗೆರೆ ಜವಳಿ ಮಿಲ್ ಕಾರ್ಮಿಕರ ಮುಷ್ಕರ ಕೈಗಾರಿಕಾ ಸಂಬಂಧಗಳಿಗೆ ಹೊಸ ತಿರುವು ನೀಡಿದವು. ವಿಶೇಷವೆಂದರೆ, ಮೈಕೊ ಮುಷ್ಕರವನ್ನು ಹೊರತುಪಡಿಸಿ, ರಾಜ್ಯ ಸರ್ಕಾರ ಪಕ್ಷಾತೀತವಾಗಿ ಕಾರ್ಮಿಕ ವಿವಾದಗಳನ್ನು ಬಗೆಹರಿಸಲು ಪ್ರಯತ್ನಿಸುತ್ತಿತ್ತು. ೧೯೮೦-೮೧ರಲ್ಲಿ ಕಾರ್ಮಿಕ ವರ್ಗ ನರಗುಂದ-ನವಲಗುಂದದಿಂದ ಪ್ರಾರಂಭಿಸಿದ ರೈತರ ಜಾಥಾಕ್ಕೆ ನೀಡಿದ ಅಮೋಘ ಬೆಂಬಲ ರೂಪುಗೊಳ್ಳುತ್ತಿದ್ದ ವರ್ಗ ಸಮೀಕರಣಕ್ಕೆ ಒಂದು ಅಪೂರ್ವ ನಿದರ್ಶನವಾಗಿತ್ತು. ಎ.ಐ.ಟಿ.ಯು.ಸಿ. ಮತ್ತು ಸಿ.ಐ.ಟಿ.ಯು. ಕಾರ್ಮಿಕ ಸಂಘಟನೆಗಳು ಪ್ರಬಲ ಶಕ್ತಿಗಳಾಗಿ ಬೆಳೆದವು. ಕಾಂಗ್ರೆಸ್‌ನ ಐ.ಎನ್.ಟಿ.ಯು.ಸಿ. ತನ್ನ ಪ್ರಭಾವವನ್ನು ಕಳೆದುಕೊಳ್ಳತೊಡಗಿತು.

ಶ್ರೀಮಂತ ರಾಷ್ಟ್ರಗಳ ಪ್ರತಿನಿಧಿ ಸಂಸ್ಥೆಗಳಾದ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವವ್ಯಾಪಾರಿ ಸಂಸ್ಥೆಗಳ ಮೂಲಕ ಈ ದೇಶಕ್ಕೆ ಆಮದಾದ ಜಾಗತೀಕರಣ, ಅದಕ್ಕನುಗುಣವಾಗಿ ಕೇಂದ್ರ ಸರ್ಕಾರ ಜಾರಿಗೆ ತಂದ ಉದಾರೀಕರಣ ಮತ್ತು ಖಾಸಗೀಕರಣದ ನೀತಿಗಳು ರಾಷ್ಟ್ರದ ಮತ್ತು ಕರ್ನಾಟಕ ರಾಜ್ಯದ ಕಾರ್ಮಿಕರನ್ನು ಸ್ವಲ್ಪ ಕಾಲ ಕಂಗಾಲುಗೊಳಿಸಿದರೂ, ನಂತರ ರೂಪುಗೊಂಡ ಕಾರ್ಮಿಕ ಚಳುವಳಿಯನ್ನು ಗುಣಾತ್ಮಕವಾಗಿ ಬದಲಾಯಿಸಿದುವು. ರಾಷ್ಟ್ರೀಕೃತ ಬ್ಯಾಂಕ್‌ಗಳ ನೌಕರರು, ವಿಮಾಕ್ಷೇತ್ರದ ನೌಕರರು, ಸಾರಿಗೆ ಕ್ಷೇತ್ರದ ಕಾರ್ಮಿಕರು ಖಾಸಗೀಕರಣದ ವಿರುದ್ಧ ಹಲವಾರು ಹೋರಾಟಗಳನ್ನು ಸಂಘಟಿಸಿದ್ದಾರೆ.

ಜಾಗತೀಕರಣದ ದುಷ್ಪರಿಣಾಮಗಳು ಕಾಣಲಾರಂಭವಾಗುತ್ತಿದ್ದಂತೆ ಕಾರ್ಮಿಕ ವರ್ಗವು ಹೊಸ ಹೋರಾಟಗಳಿಗೆ ಸಜ್ಜಾಗುತ್ತಿದೆ. ಐಕ್ಯ ಹೋರಾಟಗಳ ಅನಿವಾರ್ಯತೆಯನ್ನು ಕಂಡುಕೊಂಡಿರುವ ಎ.ಐ.ಟಿ.ಯು.ಸಿ., ಸಿ.ಐ.ಟಿ.ಯು., [illegible] ಎಂ.ಎಸ್. ಮತ್ತು ಬ್ಯಾಂಕ್ ನೌಕರರ, ವಿಮಾನೌಕರರ, ರಾಜ್ಯ ಹಾಗೂ ಕೇಂದ್ರ ಸರಕಾರಗಳ ನೌಕರರ

ಸಂಘಟನೆಗಳು ಜಂಟಿ ಕ್ರಿಯಾ ಸಮಿತಿಯ ನೇತೃತ್ವದಲ್ಲಿ ಜಾಗತೀಕರಣದ ವಿರುದ್ಧ ಚಳುವಳಿ ನಡೆಸಿದ್ದಾರೆ. ರಾಷ್ಟ್ರವ್ಯಾಪಿ ಕಾರ್ಮಿಕ ಚಳುವಳಿಗಳೊಂದಿಗೆ ರಾಜ್ಯದ ಕಾರ್ಮಿಕ ಸಂಘಟನೆಗಳು ಕೈ ಜೋಡಿಸಿವೆ. ಇದು ಬೆಳೆಯುತ್ತಿರುವ ರಾಜಕೀಯ ಪ್ರಜ್ಞೆಯ ದಿಕ್ಸೂಚಿಯಾಗಿದೆ.

ರಾಜ್ಯ ಸರ್ಕಾರ ಜಾಗತೀಕರಣದ ದಳ್ಳಾಳಿಯಾಗಿದೆ. ಮಾಹಿತಿ ತಂತ್ರಜ್ಞಾನದ ಉದ್ದಿಮೆಗಳು ಬೆಂಗಳೂರಿನಲ್ಲಿ ನೆಲೆಯೂರಿವೆ. ವೇತನ ತಾರತಮ್ಯಕ್ಕೆ ಎಡೆಮಾಡಿ ಕೊಟ್ಟಿದೆ. ಉದ್ದಿಮೆಗಳಿಗೆ ಕಾರ್ಮಿಕ ಕಾನೂನುಗಳಿಂದ ವಿನಾಯಿತಿ ಕೊಟ್ಟು, ಈ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ನೌಕರರು ಹಲವಾರು ಕಾರ್ಮಿಕ ಹಕ್ಕುಗಳಿಂದ ವಂಚಿತರಾಗಿದ್ದಾರೆ. ಕಾರ್ಖಾನೆಗಳೂ ಮುಚ್ಚಿಹೋಗುತ್ತಿವೆ. ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳನ್ನು ಖಾಸಗೀಕರಿಸಲು ಸರ್ಕಾರ ಸನ್ನದ್ಧವಾಗಿದೆ. ಸಾರಿಗೆ ಕಾರ್ಮಿಕರ ಸಂಘಟನಾ ಹಕ್ಕಿನ ಮೇಲೆ ರಾಜ್ಯ ಸರ್ಕಾರ ದಾಳಿ ನಡೆಸಿದೆ. ಎಲ್ಲೆಡೆ ಕಾರ್ಮಿಕ ಸಂಘಗಳ ಬಲ ಕುಂದಿಸುವ ಪ್ರಯತ್ನಗಳಿಗೆ ಸರ್ಕಾರ ಕುಮ್ಮಕ್ಕು ನೀಡುತ್ತಿದೆ. ಮಾಲೀಕರಿಗೆ ಅನುಕೂಲವಾಗುವ ರೀತಿಯಲ್ಲಿ ಕಾರ್ಮಿಕ ಕಾನೂನುಗಳನ್ನು ಪರಿಷ್ಕರಿಸಲು ಸರ್ಕಾರ ತಯಾರಿ ನಡೆಸಿದೆ.

ಸೆಪ್ಟೆಂಬರ್ ೨೯, ೨೦೦೫ರಂದು ನಡೆದ ಐತಿಹಾಸಿಕ ಸಾರ್ವತ್ರಿಕ ಮುಷ್ಕರದ ಮೂಲಕ ಕಾರ್ಮಿಕ ವರ್ಗ ಸರ್ಕಾರಕ್ಕೆ ಎಚ್ಚರಿಕೆ ನೀಡಿದೆ. ಮುಂದಿನ ದಿನಗಳಲ್ಲಿ ವರ್ಗ ಸಂಘರ್ಷ ತೀವ್ರಗೊಳ್ಳುವ ಎಲ್ಲ ಸೂಚನೆಗಳು ಕಾಣುತ್ತಿವೆ. ಕಳೆದ ಐವತ್ತು ವರ್ಷಗಳಲ್ಲಿ ರಾಜ್ಯದ ಕಾರ್ಮಿಕ ಚಳುವಳಿ ಗುಣಾತ್ಮಕವಾಗಿ ಬೆಳೆದಿದೆ.

ಸುವರ್ಣ ಕರ್ನಾಟಕದ ಆಶಯವು ಸಾಕಾರವಾಗಬೇಕಾದರೆ ಕಾರ್ಮಿಕರ ಶೋಷಣೆ ನಿಲ್ಲಬೇಕು, ರೈತರ ಆತ್ಮಹತ್ಯೆ ನಿಲ್ಲಬೇಕು, ಶಿಕ್ಷಣಕ್ಷೇತ್ರದ ಖಾಸಗೀಕರಣ, ಕೇಸರೀಕರಣ ನಿಲ್ಲಬೇಕು. ಅಸಮಾನತೆ ಕೊನೆಗಾಣಬೇಕು. ಈಗ ಸರ್ಕಾರ ನಡೆಸುತ್ತಿರುವ ರಾಜಕೀಯ ಪಕ್ಷಗಳಿಂದ ಇದನ್ನು ನಿರೀಕ್ಷಿಸುವುದು ಕೇವಲ ಒಂದು ಭ್ರಮೆ. ಮುಂಬರುವ ಕಾರ್ಮಿಕ-ರೈತ-ವಿದ್ಯಾರ್ಥಿಗಳ ಐಕ್ಯ ಹೋರಾಟಗಳಿಂದ ಮಾತ್ರ ಸುವರ್ಣ ಕರ್ನಾಟಕದ ಕನಸನ್ನು ಸಾಕಾರಗೊಳಿಸಲು ಸಾಧ್ಯವಿದೆ.

**ಮುರಳೀಧರ, ರಾಜ್ಯ ಕಾರ್ಯದರ್ಶಿ**
ಎ.ಐ.ಟಿ.ಯು.ಸಿ. ಕರ್ನಾಟಕ ರಾಜ್ಯ ಸಮಿತಿ, ಬೆಂಗಳೂರು.

## ಪ್ರಜಾಪ್ರಭುತ್ವ ಮತ್ತು ಚಳವಳಿಗಳು

ಪ್ರಜಾಪ್ರಭುತ್ವದ ಕಲ್ಪನೆ ತುಂಬ ಉದಾತ್ತವಾದ ಆಶಯವನ್ನು ಒಳಗೊಂಡಿದೆ. ನಾಗರಿಕರೇ ಪ್ರಜೆಗಳಾಗಿರುವ, ಆಳುವವರೇ ಪ್ರಭುಗಳಾಗಿರುವ ವ್ಯವಸ್ಥೆಯನ್ನು ಪ್ರಜಾಪ್ರಭುತ್ವ ಎಂದು ಕರೆಯಬಹುದು. ಪ್ರಜಾಪ್ರಭುತ್ವವು ಪ್ರಜೆಗಳಿಗಾಗಿ ಪ್ರಜೆಗಳೇ ನಿರ್ವಹಿಸುವಂಥ ಒಂದು ವ್ಯವಸ್ಥೆ ಎಂಬ ಮೂಲ ಕಲ್ಪನೆ ಮೂಡಿಬಂದದ್ದು, ಒಂದು ಘೋಷಣೆಯಾಗಿ ಕೇಳಿಬಂದದ್ದು ಫ್ರೆಂಚ್ ಕ್ರಾಂತಿಯ ಸಂದರ್ಭದಲ್ಲಿ. ಆದರೆ, ಪರಿಣಾಮದಲ್ಲಿ ಅದು ನೆಪೋಲಿಯನ್‌ನಂಥ ಚಕ್ರವರ್ತಿಯ ಉದಯಕ್ಕೆ ಕಾರಣವಾದದ್ದು ಒಂದು ವಿಪರ್ಯಾಸ. 'ಪ್ರಜಾಪ್ರಭುತ್ವ'ದ ಶಬ್ದಾರ್ಥ ಅನುಷ್ಠಾನಕ್ಕೆ ಬಂದಿರುವ ಒಂದು ಮಾದರಿ ರಾಜ್ಯವನ್ನು ಹೆಸರಿಸುವುದು ಈಗಲೂ ಕಷ್ಟವೇ. ಭಾರತದಲ್ಲಿರುವ ಆಡಳಿತ ವ್ಯವಸ್ಥೆಯನ್ನು ಪ್ರಜಾಪ್ರಭುತ್ವ ಎಂದು ಹೇಳುವುದಕ್ಕೆ ಇರುವ ಒಂದೇ ಒಂದು ನಿಚ್ಚಳ ಕಾರಣವೆಂದರೆ ಸರ್ಕಾರಗಳ ರಚನೆಯನ್ನು ಆಗಾಗ್ಗೆ ಚುನಾವಣೆಗಳ ಮೂಲಕ ನಿರ್ಧರಿಸುತ್ತಿರುವುದು. ಅದಕ್ಕೆ ಭಂಗ ಬಂದದ್ದು ೧೯೭೫-೭೭ರ ನಡುವಿನ ಒಂದು ಕಿರು ಕಾಲಘಟ್ಟದಲ್ಲಿ ಮಾತ್ರ. ಮತ ಚಲಾಯಿಸದ ಮತದಾರರ ಸಂಖ್ಯೆ ಎಷ್ಟೇ ಇರಲಿ (ಉದಾ : ಶೇ. ೧೮, ೪೮ ಅಥವಾ ೫೨), ಮತ ಚಲಾಯಿಸಿದ ಪ್ರಜೆಗಳ ಸಂಖ್ಯೆ ಪ್ರತಿಶತ ಎಷ್ಟಾದರು ಇರಲಿ (ಉದಾಹರಣೆಗೆ ೪೮%) ಚಲಾಯಿಸಿದ ಮತಗಳಲ್ಲಿ ಹೆಚ್ಚಿನ ಮತಗಳನ್ನು ಗಳಿಸಲು ಶಕ್ತರಾದವರೇ ಶಾಸಕರೂ ಸಂಸದರೂ ಆಗುತ್ತಾರೆ. ಅಂಥವರೇ ಅಥವಾ ಅಂಥವರ ಒಕ್ಕೂಟವೇ (ಹಲವು ಪಕ್ಷಗಳ ಲಾಂಛನದ ನೆರಳಲ್ಲಿ ಆಯ್ಕೆಗೊಂಡವರಾದರೂ) ಅಧಿಕಾರವನ್ನು ಹಿಡಿಯುತ್ತ ಬಂದಿದ್ದಾರೆ. ಒಟ್ಟಾರೆ, ದೇಶದ ಮತದಾರರ ಬಹುಮತವನ್ನು ಹೇಗಾದರೂ ಗಳಿಸಿ ಅಧಿಕಾರವನ್ನು ಹಿಡಿದವರ ಆಳ್ವಿಕೆಯೇ ಪ್ರಜಾಪ್ರಭುತ್ವ ಎಂಬುದು ಈಗ ಸಿದ್ಧಗೊಂಡಿರುವ ಸತ್ಯ. ಆದರೆ ನಮ್ಮ ಇಂದಿನ ಸಂದರ್ಭದಲ್ಲಿ ಪ್ರಜೆಗಳು ಪ್ರಭುಗಳಾಗಿ ಇರುವ ಬದಲು ಹತಾಶರೂ, ಪರತಂತ್ರರೂ, ಅಸಹಾಯಕರೂ ಆಗಿರುವುದೇ ಹೆಚ್ಚು.

ಈ ವ್ಯವಸ್ಥೆಯಲ್ಲಿ ಮೂಲತಃ ದೋಷಗಳಿವೆ ಎಂದಮೇಲೆ ಅದರಿಂದ ಹುಟ್ಟಿಕೊಂಡ ಸಮಸ್ಯೆಗಳೂ ವಿಪುಲವಾಗಿರಲೇಬೇಕು. ಅವಕ್ಕೆ ಪರಿಹಾರ ಕೇವಲ ಚುನಾವಣೆಗಳಲ್ಲಿ ಮತ ಚಲಾಯಿಸುವುದೂ ಅಲ್ಲ; ಅಧಿಕಾರಸ್ಥ ಪಕ್ಷಗಳನ್ನು ಬದಲಾಯಿಸುವುದೂ ಅಲ್ಲ.

ಮೂಲತಃ ಜನರ ಸಮಸ್ಯೆಗಳ ನಿವಾರಣೆಗೆ ಹೋರಾಡಬೇಕಾಗಿರುವುದು ಅನಿವಾರ್ಯ.

ಸಮಸ್ಯೆಗಳ ನಿವಾರಣೆಗಾಗಿ, ವ್ಯವಸ್ಥೆಯ ಸುಧಾರಣೆಗಾಗಿ ನಾಗರಿಕರು ನಡೆಸುವ ಹೋರಾಟವನ್ನೇ ಚಳವಳಿ ಎಂದು ಕರೆಯಬಹುದಾಗಿದೆ. ಅದೇ ಇಲ್ಲಿನ ಚರ್ಚೆಯ ವಿಷಯ. ಚಳವಳಿ ಎಂದಾಗ ಪ್ರತಿಭಟನೆ, ಧರಣಿ, ಮುಷ್ಕರ, ಸತ್ಯಾಗ್ರಹ, ಉಪವಾಸ, ರಸ್ತೆ ತಡೆ ಮುಂತಾದವೆಲ್ಲ ನಮ್ಮ ಕಣ್ಣೆದುರು ಬರುತ್ತವೆ. ಯಾವತ್ತಿಗೂ ಚಳವಳಿ ಮಾಡುವುದು, ಅಸಮಾಧಾನ ತೋರಿಸುವುದು, ಅಸಹಕಾರದ ಮೂಲಕ ಒತ್ತಡ ತರುವುದು ನಮಗಿಂತ ಬಲಿಷ್ಠವಾಗಿರುವ ಒಂದು ಶಕ್ತಿಯ ಎದುರು. ಆ ಶಕ್ತಿಯೇ ಪ್ರಭುತ್ವ. ಅದು ಜನರದೇ ಆಗಿದ್ದರೆ ಅವರೇಕೆ ಅದರ ವಿರುದ್ಧ ಹೋರಾಟಕ್ಕಿಳಿಯಬೇಕು? ಅಥವಾ ಪ್ರಭುತ್ವ ನಮ್ಮದಾಗಬೇಕು, ನಮಗೆ ಸೇರಿದ್ದು – ಎಂಬ ಕಾರಣಕ್ಕಾಗಿಯೇ ಈ ಚಳವಳಿಯ ಅಸ್ತ್ರವನ್ನು ಬಳಸುತ್ತೇವೆ ಎನ್ನಬಹುದಲ್ಲವೆ? ಹೋರಾಟವು ಒಂದು ಶಕ್ತಿಯ ಎದುರು ಹೂಡುವ ಕ್ರಿಯೆ ಎಂಬ ಮಾತು ಮುಖ್ಯ. ನಾವು ಎಜಿಟೇಟ್ ಮಾಡುವುದು ಅಥವಾ ಹೋರಾಡುವುದು ಪ್ರಭುತ್ವ ಶಕ್ತಿಯ ಎದುರಾಗಿಯೇ ಹೊರತು ಅದರ ವಿರುದ್ಧವಾಗಿ ಅಲ್ಲ. ಈ ವಿವೇಕದ ಹಿನ್ನೆಲೆಯಲ್ಲೇ ನಾವು ಚಳವಳಿಯ ಸ್ವರೂಪವನ್ನು ನಿಷ್ಕರ್ಷಿಸಬೇಕಾಗಿದೆ. ಇತಿಹಾಸದಲ್ಲಿ ಕಾಣುವ ಹಲವು ಚಳವಳಿಗಳಲ್ಲಿ ಕೆಲವು ರೋಮಾಂಚನಕಾರಿ ಯಶಸ್ಸುಗಳನ್ನು ಗಳಿಸಿದ ನಿದರ್ಶನಗಳಿವೆ. ಕೆಲವು ದಾರಿತಪ್ಪಿ ಘೋರ ವೈಫಲ್ಯಗಳನ್ನು ಕಂಡಿವೆ. ಸಫಲವಾದ ಚಳವಳಿಗಳನ್ನು ಎಚ್ಚರದಿಂದ ಪರಿಶೀಲಿಸಿದರೆ ಅಂಥವುಗಳಲ್ಲಿ ಅಂತರ್ಗತವಾಗಿದ್ದ ಜಾಣ್ಮೆ, ವಿವೇಕ, ದೂರದೃಷ್ಟಿ ಮತ್ತು ಮಿತಿಮೀರಿದಾಗ ಉಂಟಾಗುವ ಸಾಮಾಜಿಕ ನಷ್ಟ ಅಥವಾ ದುಷ್ಪರಿಣಾಮಗಳನ್ನು ತಡೆಯಲು ಅಗತ್ಯವಾದ ಸಂಯಮ – ಇವೆಲ್ಲವೂ ಸಮತೂಕದಲ್ಲಿ ಸೇರಿಕೊಂಡಿರುವುದು ಕಾಣುತ್ತದೆ.

ಇತಿಹಾಸವನ್ನು ಎಚ್ಚರದಿಂದ ಓದಿದರೆ ಇಂದಿನ ಪರಿಸ್ಥಿತಿಯಲ್ಲಿ ಹಿಂಸೆಯಿಂದ ಬದಲಾವಣೆ ತರುವುದಾಗಲೀ ಸಶಸ್ತ್ರ ಹೋರಾಟವಾಗಲೀ ಸಾಧುವಲ್ಲ ಮತ್ತು ಅದು ಅವಾಸ್ತವ ಎಂದೇ ಹೇಳಬೇಕು. ರಕ್ತಸಿಕ್ತ ಹೋರಾಟದ ಮೂಲಕ ಪ್ರಜಾಪ್ರಭುತ್ವಕ್ಕೆ ಅಂಟಿದ ಕಾಮಾಲೆಯನ್ನು ಗುಣಪಡಿಸಲು ಸಾಧ್ಯವಿಲ್ಲ. ಅಂಥ ಯಾವುದೇ ಚಳವಳಿ ಅಥವಾ ಹೋರಾಟವನ್ನು ಮುರಿಯಲು ಬಂಡವಾಳಶಾಹಿ ಪ್ರಭುತ್ವಗಳು, ಸಶಸ್ತ್ರ ಬಂಡಾಯವನ್ನು ಎದುರಿಸುತ್ತಿರುವ ಸರ್ಕಾರಗಳಿಗೆ, ಮಿಲಿಟರಿ ನೆರವನ್ನು ದೊಡ್ಡ ಪ್ರಮಾಣದಲ್ಲಿ ಒದಗಿಸುತ್ತವೆ. ಒಂದು ದಶಕದ ಹಿಂದೆ ಭಾರತವೇ ಸಿಂಹಳದಲ್ಲಿ ನಡೆಯುತ್ತಿರುವ ತಮಿಳು ವ್ಯಾಘ್ರರ ವಿರುದ್ಧವಾಗಿ ಸಿಂಹಳದ ಸರ್ಕಾರಕ್ಕೆ ಮಿಲಿಟರಿ ನೆರವು ಕೊಟ್ಟಿತ್ತು. ಅದು (ಮಿಲಿಟರಿ ನೆರವು) ವಿಫಲವಾದದ್ದು ಬೇರೆ ಮಾತು.

ರಾಜಕೀಯ ಪಕ್ಷಗಳನ್ನು ಹೊರತುಪಡಿಸಿ ನಾಗರಿಕ ಸಂಘಟನೆಗಳ ಮೂಲಕ ಸಮಸ್ಯೆಗಳ ಪರಿಹಾರಕ್ಕಾಗಿ ಚಳವಳಿ ಹೂಡಬಲ್ಲ ಶಕ್ತಿ ನಾಗರಿಕರಲ್ಲಿ ಇದ್ದಂತಿಲ್ಲ. ಮತ, ಭಾಷೆ, ಸ್ಥಳೀಕರು-ವಲಸಿಗರು ಮುಂತಾದ ಆವೇಶ ಪ್ರಚೋದಕವಾದ ವಿಷಯಗಳಿಗಲ್ಲದೆ ಜನರು ಕ್ಷಿಪ್ರವಾಗಿ ಒಟ್ಟಾಗುವುದಿಲ್ಲ, ಬೀದಿಗಿಳಿಯುವುದಿಲ್ಲ ಎಂಬುದಕ್ಕೆ ನಿದರ್ಶನಗಳು ಅಸ್ಸಾಂನಲ್ಲಿ ಗಣಸಂಗ್ರಾಮ ಪರಿಷತ್ತಿನ ಚಳವಳಿ, ತಮಿಳುನಾಡಿನಲ್ಲಿ ನಡೆದ ಹಿಂದಿ ವಿರೋಧ ಚಳವಳಿ, ಮಹಾರಾಷ್ಟ್ರದಲ್ಲಿನ ಮಣ್ಣಿನ ಮಕ್ಕಳ ಚಳವಳಿ ಮೊದಲಾದವು ನಿದರ್ಶನಗಳು. ಕಾರ್ಮಿಕರು ಸಾಮೂಹಿಕವಾಗಿ ಸರ್ಕಾರದ ಜೊತೆ ಸಂಘಟಿತವಾಗಿ ಚೌಕಾಸಿ ಮಾಡುವ ಹಕ್ಕನ್ನು ಸಂವಿಧಾನವೇ ಕೊಟ್ಟಿದೆ. ಆದರೆ ಇದುವರೆಗೆ ಎಡಪಕ್ಷಗಳ ನೇತೃತ್ವದಲ್ಲಿ ಸಂಘಟಿತವಾಗಿರುವ ಕಾರ್ಮಿಕ ಸಂಘಗಳು ತಮ್ಮ ಸಂಬಳ, ಭತ್ಯೆ ಮುಂತಾದ ತಮ್ಮ ಹಿತರಕ್ಷಣೆಯ ಉದ್ದೇಶಕ್ಕಷ್ಟೇ ಚಳವಳಿಗಳನ್ನು ಸೀಮಿತಗೊಳಿಸಿಕೊಂಡದ್ದೇ ಹೆಚ್ಚು. ಇತ್ತೀಚೆಗೆ ಕಾಂಗ್ರೆಸ್ ಸರ್ಕಾರ ಆರಂಭಿಸಿದ ಖಾಸಗೀಕರಣಕ್ಕೆ ಕಾರ್ಮಿಕ ಸಂಘಗಳು ಒಡ್ಡುತ್ತ ಬಂದಿರುವ ವಿರೋಧ ಕೇವಲ ಕಾರ್ಮಿಕರ ಹಿತರಕ್ಷಣೆಯನ್ನು ಮೀರಿ ಸಮಗ್ರ ದೇಶದ ಆರ್ಥಿಕ ಸಮಸ್ಯೆಗೆ ಸಂಬಂಧಿಸಿದ ಮಹತ್ವವನ್ನು ಪಡೆದಿದೆ. ಸಮಗ್ರ ಜನಜೀವನದ ಏಳಿಗೆಯ ಉದ್ದೇಶವನ್ನು ಎತ್ತಿಕೊಂಡು ಕಾರ್ಮಿಕ ಸಂಘಗಳು ಚಳವಳಿ ಹೂಡುವಂತಾಗಬೇಕು. ದಲಿತ ಮತ್ತು ರೈತ ಸಂಘಟನೆಗಳ ಜೊತೆಗೆ, ಜನರ ಸಮಸ್ಯೆಗಳ ಬಗೆಗೆ, ಸಹಜ ಕಾಳಜಿ ಇರುವಂಥ ಎಡಪಕ್ಷಗಳು ಮತ್ತು ಅವುಗಳ ಅಂಗಸಂಸ್ಥೆಗಳಾದ ಕಾರ್ಮಿಕ ಸಂಘಗಳು ಕೈಜೋಡಿಸಿದರೆ ಅಥವಾ ಎಡಪಕ್ಷಗಳ ಜೊತೆಗೆ ದಲಿತ ಮತ್ತು ರೈತ ಸಂಘಟನೆಗಳೇ ಕೈಜೋಡಿಸಿದರೆ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ದಾರಿ ಸುಲಭವಾಗಬಹುದು. ಆದರೆ ಈ ಸಂಘಟನೆಗಳಲ್ಲಿ ಹತ್ತು ಹಲವು ಆಂತರಿಕ ವೈರುಧ್ಯಗಳಿವೆ. ರೈತ ಸಂಘಗಳಲ್ಲಿ ಭೂ ರಹಿತ ಮತ್ತು ಸಣ್ಣ ರೈತರ ಜೊತೆಗೆ ದೊಡ್ಡ ಭೂಮಾಲಿಕರು ಸೇರಿಕೊಂಡಿರುವುದೂ, ದಲಿತ ಸಂಘಟನೆಗಳು ತಮ್ಮ ಸಮಸ್ಯೆಗಳನ್ನು ಕೇವಲ ಆರ್ಥಿಕ ಮತ್ತು ಔದ್ಯೋಗಿಕ ಸಮಸ್ಯೆಗಳೆಂದು ಬಗೆಯದೆ ಅಸ್ಪೃಶ್ಯತೆ, ಸ್ಥಾನಮಾನ ಮತ್ತು ಮೀಸಲಾತಿ ಮೊದಲಾದ ವಿಷಯಗಳಿಗೆ ಪ್ರಾಧಾನ್ಯ ಕೊಡುತ್ತಿರುವುದೂ ಈ ವೈರುಧ್ಯಗಳಿಗೆ ಕಾರಣ.

ನಮ್ಮ ವರ್ತಮಾನದ ಸಮಸ್ಯೆಗಳಿಗೆ ಬರುವುದಾದರೆ ನಿರುದ್ಯೋಗ, ಅನಕ್ಷರತೆ, ಜನಸಾಮಾನ್ಯರ ಶಿಕ್ಷಣ (ತಾಂತ್ರಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣಗಳನ್ನು ಒಳಗೊಂಡಂತೆ) ಮತ್ತು ಮಹಿಳಾ ವಿಮೋಚನೆ ಇವು ಜರೂರಾಗಿ ಪರಿಹರಿಸಬೇಕಾಗಿರುವ ಸಮಸ್ಯೆಗಳು. ಮಹಿಳೆಯರ ವಿಷಯವನ್ನೇ ತೆಗೆದುಕೊಂಡರೆ, ಅವರೆಲ್ಲ ಒಂದೇ ವರ್ಗಕ್ಕೆ ಸೇರಿದವರಲ್ಲ. ಬಡವರು-ಶ್ರೀಮಂತರು, ವಿದ್ಯಾವಂತರು-ಅವಿದ್ಯಾವಂತರು, ದುಡಿಯುವ ಮಹಿಳೆಯರು-ಗೃಹಿಣಿಯರು ಹೀಗೆ. ಶೈಕ್ಷಣಿಕ ಸಂಸ್ಥೆಗಳಲ್ಲಿ, ಉದ್ಯೋಗದಲ್ಲಿ ಮತ್ತು ಶಾಸನಸಭೆಗಳಲ್ಲಿ ಮಹಿಳೆಯರಿಗೆ ಆದ್ಯತೆ ಅಲ್ಲದಿದ್ದರೂ ಸಮಾನ ಅವಕಾಶಗಳು ದೊರೆಯಲೇಬೇಕು. ಅದನ್ನು ಶಾಸನದ ರೂಪದಲ್ಲಿ ಜಾರಿಗೆ ತರಲು ಕೆಲವು ರಾಜಕೀಯ ಪಕ್ಷಗಳೇ ಬಿಡುತ್ತಿಲ್ಲ. ಕೆಲವು ರಾಜ್ಯಗಳ ಮತ್ತು ರಾಜಕೀಯ ಪಕ್ಷಗಳ ಪುರುಷರ ಸ್ವಾರ್ಥ ಇದಕ್ಕೆ ಕಾರಣ. ಒಂದು ಕಾಲಕ್ಕೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದ್ದು ಈಗ ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಿರುವ ಕೇರಳ ರಾಜ್ಯದಲ್ಲಾದರೂ ಇಂತಹ ಒಂದು ಬೆಳವಣಿಗೆ ಹುಟ್ಟುಕೊಂಡೀತೇ?

ಶಿಕ್ಷಣದ ವಿಷಯಕ್ಕೆ ಬಂದರೆ ಸಮಸ್ಯೆಗಳು ಸುಧಾರಿಸುವ ಬದಲು ದಿನದಿನಕ್ಕೆ ಜಟಿಲವಾಗುತ್ತಿರುವಂತೆ ಕಾಣುತ್ತಿದೆ. ಮಾಧ್ಯಮದ ವಿಷಯ ಕಗ್ಗಂಟಾಗಿ ಕುಳಿತಿದೆ. ಶಿಕ್ಷಣ ಕ್ಷೇತ್ರವನ್ನು ಪೀಡಿಸುತ್ತಿರುವ ಖಾಸಗೀಕರಣ ಮುಂತಾದ ಸಾಮಾಜಿಕ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಲು ವ್ಯಾಪಕ ಜನಪರ ಹೋರಾಟಗಳು ಜರುಗಬೇಕಿದೆ. ಈ ನಿಟ್ಟಿನಲ್ಲಿ ಕಾರ್ಮಿಕ ಜನಸಾಮಾನ್ಯರು, ಹೆಚ್ಚಿನ ರಾಜಕೀಯ ಪ್ರಜ್ಞೆ, ಹೋರಾಟದ ಮನೋಭಾವವನ್ನು ಪ್ರದರ್ಶಿಸಿದಲ್ಲಿ ನಮ್ಮ ಪ್ರಜಾಪ್ರಭುತ್ವ ಪ್ರಕ್ರಿಯೆಯು ಅರ್ಥಪೂರ್ಣವಾಗುತ್ತದೆ; ಅಲ್ಲದೆ, ಆಡಳಿತ ವ್ಯವಸ್ಥೆಯಲ್ಲಿ ದುರ್ಬಲವರ್ಗದ ಜನತೆಯೂ ಸಕ್ರಿಯವಾಗಿ ಪಾತ್ರವಹಿಸಲು ಸಾಧ್ಯವಾಗುತ್ತದೆ.

ಪ್ರೊ॥ ಎಚ್. ಜಿ. ಸಣ್ಣಗುಡ್ಡಯ್ಯ
೧ನೇ 'ಎ' ಅಡ್ಡರಸ್ತೆ, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨

# ದಲಿತ ಸಾಹಿತ್ಯ : ಕೆಲವು ಟಿಪ್ಪಣಿಗಳು

ದಲಿತ ಸಾಹಿತ್ಯದ ಬಹುಮುಖ್ಯ ವಿಶೇಷತೆ ಎಂದರೆ, ಇಲ್ಲಿಯ ಲೇಖಕರು ಸ್ಪಷ್ಟವಾದ ರಾಜಕೀಯ, ಸಾಮಾಜಿಕ ಅಜೆಂಡಾಗಳಿಗಾಗಿ ಮೊದಲು ಸಂಘಟಿತರಾಗಿ, ಹೋರಾಟದ ಕಣಕ್ಕೆ ಧುಮುಕಿ ಅನುಭವ ಶ್ರೀಮಂತಿಕೆಯನ್ನು ಗಳಿಸಿಕೊಂಡರು. ಅನಂತರ ಹೋರಾಟದ ಕಾವನ್ನು ಸದಾ ಕಾಪಿಡುವುದಕ್ಕೆ ಮತ್ತು ಒಟ್ಟು ಜನಮಾನಸಕ್ಕೆ ಹೋರಾಟದ ಸಂದೇಶವನ್ನು ಮುಟ್ಟಿಸುವುದಕ್ಕೆ ಹಾಗೂ ಸಾಹಿತ್ಯಿಕ ವಲಯದಲ್ಲೂ ತಮ್ಮ ಹೆಜ್ಜೆಗುರುತುಗಳನ್ನು ಸ್ಥಾಪಿಸುವುದಕ್ಕೆ – ಚಳುವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡವರಲ್ಲಿ ಕೆಲವರು ಸೃಜನಶೀಲ ಬರವಣಿಗೆಯತ್ತ ಹೊರಳಿದರು. ದಲಿತ ಕವಿ ಸಿದ್ದಲಿಂಗಯ್ಯ ಅವರ 'ಹೊಲೆಮಾದಿಗರ ಹಾಡು' ಅಂತಹ ಒಂದು ಪ್ರಯತ್ನದ ಮಾದರಿಯಾದರೆ, ದೇವನೂರು ಮಹಾದೇವರ ಕಥನ ಸಾಹಿತ್ಯ ಇನ್ನೊಂದು ಮಾದರಿಯಾಗಿದೆ. ಇವರಿಬ್ಬರ ಬರವಣಿಗೆಗಳೂ ಅದುವರೆಗಿನ ಸಾಹಿತ್ಯದ ಸಾಂಪ್ರದಾಯಿಕ ಲಯಕ್ಕೆ ವಿಶಿಷ್ಟವೂ ವಿಭಿನ್ನವೂ ಆದ ತಿರುವನ್ನು ನೀಡಿದವು.

ದೇವನೂರು ಮಹಾದೇವ, ಸಿದ್ದಲಿಂಗಯ್ಯ, ಮುಳ್ಳೂರು ನಾಗರಾಜ, ದೇವಯ್ಯ ಹರವೆ, ಮ. ನ. ಜವರಯ್ಯ, ಇಂದೂಧರ ಹೊನ್ನಾಪುರ, ಗಂಗಾರಾಂ ಚಾಂಡಾಲ, ಗೋವಿಂದಯ್ಯ, ಅರವಿಂದ ಮಾಲಗತ್ತಿ, ಎಲ್. ಹನುಮಂತಯ್ಯ, ಕೆ. ಬಿ. ಸಿದ್ದಯ್ಯ ಮುಂತಾದ ಮೊದಲ ತಲೆಮಾರಿನ ಬರೆಹಗಾರರ ಮಹತ್ವದ ಕೃತಿಗಳು ಕಳೆದ ಶತಮಾನದ ಎಪ್ಪತ್ತು ಮತ್ತು ಎಂಬತ್ತರ ದಶಕಗಳಲ್ಲಿ ಪ್ರಕಟವಾದವು. ಇವರೆಲ್ಲರೂ ಸಾಮಾಜಿಕ ಅಸಮಾನತೆಗಳ ಕುರಿತು ಸಂಘಟನಾತ್ಮಕ ಹೋರಾಟದ ಮೂಲಕವೇ ಸಾಹಿತ್ಯವನ್ನು ಪ್ರವೇಶಿಸಿದ್ದರಿಂದ, ತಮ್ಮ ಬರವಣಿಗೆಗಳಲ್ಲಿ ಹೋರಾಟ ಮತ್ತು ಸಾಹಿತ್ಯವನ್ನು ಅವರು ಅಭಿನ್ನವಾಗಿ ಗ್ರಹಿಸಿದ ಮತ್ತು ಪ್ರತಿಪಾದಿಸಿದ ದಟ್ಟ ಸುಳುಹುಗಳೂ ದೊರೆಯುತ್ತವೆ.

ತೊಂಬತ್ತರ ದಶಕದಿಂದ ಬರೆಯಲು ಆರಂಭಿಸಿದ ಮೊಗಳ್ಳಿ ಗಣೇಶ್, ಶಿವರುದ್ರ ಕಲ್ಲೋಳಿಕರ, ಸುಬ್ಬು ಹೊಲೆಯಾರ, ಬಿ. ಟಿ. ಜಾಹ್ನವಿ, ದು. ಸರಸ್ವತಿ, ಮಿತಾ ದೇವನೂರು, ಸತ್ಯಾನಂದ ಪಾತ್ರೋಟ ಮುಂತಾದ ಎರಡನೆಯ ತಲೆಮಾರಿನ ಬರಹಗಾರರು ತೊಂಬತ್ತರ ದಶಕದಿಂದ ಬರೆಯಲು ತೊಡಗಿದ್ದಾರೆ. ಮೊದಲ ಕಾಲ ಘಟ್ಟದಲ್ಲಿ ಕಾವ್ಯ ಮತ್ತು ಸಣ್ಣಕತೆಗಳ ರಚನೆ ವಿಶೇಷವಾಗಿ ಕಂಡುಬಂದಿದೆ. ಈ ಅವಧಿಯಲ್ಲಿ ಕಾದಂಬರಿಗಳು ರಚನೆಯಾಗಿದ್ದರೂ ಅವುಗಳ ಸಂಖ್ಯೆ ಕೈಬೆರಳೆಣಿಕೆಯಷ್ಟು ಮಾತ್ರ.

ಕೂಳೆ, ಒಡಲಾಳ, ಕಾರ್ಯ ಮುಂತಾದುವು ನೀಳ್ಗತೆ ಮತ್ತು ಕಿರುಕಾದಂಬರಿಗಳ ನಡುವಿನ ರಚನೆಯಂತಿವೆ. 'ಮರಣ ಮಂಡಲ ಮಧ್ಯದೊಳಗೆ', 'ಕುಸುಮಬಾಲೆ', 'ಮಾಗಿ' ಮಾತ್ರ ಕಾದಂಬರಿಯ ವ್ಯಾಪಕತೆಯನ್ನು ಪಡೆದುಕೊಂಡಿವೆ. ಎಂದರೆ ಮೊದಲ ತಲೆಮಾರಿನ ಲೇಖಕರು ಕಾದಂಬರಿ ರಚನೆಯನ್ನು ಒಂದು ಪ್ರಯೋಗವೆಂಬಂತೆ ಕಂಡಿದ್ದಾರೆ. ಎರಡನೆಯ ಕಾಲಘಟ್ಟದಲ್ಲಿ ಕಾದಂಬರಿ ಪ್ರಕಾರ ತೀರ ಉಪೇಕ್ಷೆಗೆ ಒಳಗಾಗಿದೆ. ತೊಂಬತ್ತರ ದಶಕದಲ್ಲಿ ಬಂದ 'ಹೊಲಗೇರಿಯ ರಾಜಕುಮಾರ' (ಶಿವರುದ್ರ ಕಲ್ಲೋಳಿಕರ) ಕಾದಂಬರಿಯನ್ನು ಬಿಟ್ಟರೆ, ೨೦೦೫ರಲ್ಲಿ ಬಂದ 'ಸೂರ್ಯ' (ಮನಜ), 'ತೊಟ್ಟಿಲು' (ಮೊಗಳ್ಳಿ ಗಣೇಶ್) ಇವು ಹೊಸ ಸೇರ್ಪಡೆಗಳಾಗಿವೆ. ಆದರೆ ಕಾವ್ಯ ಮತ್ತು ಕಥಾಪ್ರಕಾರದಲ್ಲಿ ಹುಲುಸಾದ ಸಾಹಿತ್ಯ ಸೃಷ್ಟಿಯಾಗಿದೆ. ಅದರ ಜೊತೆಜೊತೆಗೆ ವಿಮರ್ಶೆ, ಸಂಶೋಧನೆ, ಪ್ರಬಂಧ ಸಾಹಿತ್ಯ, ವಿಚಾರಸಾಹಿತ್ಯ ಮುಂತಾದ ವಿವಿಧ ಪ್ರಕಾರಗಳಲ್ಲಿ ಎರಡನೆಯ ತಲೆಮಾರಿನ ಲೇಖಕರು ತಮ್ಮನ್ನು ತೊಡಗಿಸಿಕೊಂಡಿರುವುದು ಮೊದಲ ನೋಟಕ್ಕೇ ಅರಿವಿಗೆ ಬರುತ್ತದೆ.

ಯಾವುದೇ ಒಂದು ಬಲಿಷ್ಠ ಅಥವಾ ಸ್ಥಾಪಿತ ಶಕ್ತಿಯು ಹೊಸದೊಂದು ದನಿಯ ಉಗಮವನ್ನು ಅಥವಾ ಅಧೀನ ಶಕ್ತಿಯ ಬೆಳವಣಿಗೆಯನ್ನು ಏಕರೂಪದಲ್ಲಿ ಗ್ರಹಿಸುವುದಿಲ್ಲ. ಅಧೀನ ಗುಂಪು ಬಲಿಷ್ಠ ಶಕ್ತಿಯ ನೆಲೆಯಲ್ಲಿ ಸದಾ 'ಅನ್ಯ'ವಾಗಿ ಉಳಿಯಬೇಕಾದ ಅನಿವಾರ್ಯತೆ ಇರುತ್ತದೆ. ದಲಿತ ಸಮುದಾಯ ಕೂಡ ಶತಮಾನಗಳಿಂದ 'ಅನ್ಯ'ವಾಗಿ ಉಳಿದುಕೊಂಡು ಬಂದಿತ್ತು. 'ಅನ್ಯ'ವೆನಿಸಿದ ದಲಿತ ವರ್ಗದ ಜನರೇ ಸಾಹಿತ್ಯ ಕೃಷಿಗೆ ತೊಡಗಿದಾಗ, ಅದುವರೆಗಿನ 'ಅನ್ಯ'ದ ಚಿತ್ರಣ ಬದಲಾಗತೊಡಗಿತು. ಅಷ್ಟೇ ಅಲ್ಲ, 'ಅನ್ಯ'ವಾಗಿಸಿದ ಬಲಿಷ್ಠ ಶಕ್ತಿಯ ಹುನ್ನಾರಗಳು, ಕುರೂಪಗಳು ಅನಾವರಣಗೊಳ್ಳತೊಡಗಿದವು. ಇಂತಹ ದಲಿತ ಜಗತ್ತಿನ 'ಸ್ವ'ದ ನಿರ್ವಚನದ ಮುಖ್ಯ ಸಂಗತಿಗಳನ್ನು ಹೀಗೆ ಗುರುತಿಸಬಹುದು.

* ದಲಿತ ಸಮುದಾಯ ನಿಷ್ಕ್ರಿಯ, ನಿರ್ಜೀವ ಮತ್ತು ವಿವೇಚನಾರಹಿತವಾದುದು ಎಂಬ ಸಿದ್ಧ ಮೌಲ್ಯಗಳು ಕುಸಿದುಬಿದ್ದವು. ದಲಿತ ಲೋಕದ ಸೃಜನಶೀಲ ಮುಖಗಳು, ಸೃಜನಶೀಲತೆಯ ಸಾಧ್ಯತೆಯ ನೆಲೆಗಳು ಮತ್ತು ದಲಿತರ ಪ್ರತಿರೋಧದ ಬಹು ಆಯಾಮಗಳು ಕನ್ನಡದ ಓದುಗರಿಗೆ ಮೊದಲ ಬಾರಿಗೆ ದಲಿತ ಲೇಖಕರಿಂದ ದೊರೆತವು. ಎಂತಹುದೇ ಬಿಕ್ಕಟ್ಟಿನ, ದುರ್ಭರತೆಯ ಒಳಗೂ ಇರಬಹುದಾದ ಸ್ನಿಗ್ಧ ನಗು, ಜೀವನಪ್ರೀತಿ, ಕನಸುಗಾರಿಕೆ, ಕುಸುರಿಕಲೆ, ಪುರಾಣ, ಐತಿಹ್ಯ ಹೀಗೆ ದಲಿತರ ಶ್ರೀಮಂತ ಲೋಕ ಇವರ ಮೂಲಕ ಕನ್ನಡಕ್ಕೆ ತೆರೆದುಕೊಂಡಿತು. ಇವು ಕೇವಲ ಉತ್ಪ್ರೇಕ್ಷಿತವಾಗಿ ಮೂಡಿಬಾರದೆ, ದಮನಶೀಲ ಶಕ್ತಿಯ ಮಿತಿಗಳತ್ತ ಮುಖಮಾಡಿವೆ. ಪ್ರಧಾನ ವ್ಯವಸ್ಥೆಗೆ ದಲಿತರ ದೇಹಗಳನ್ನು ದಂಡಿಸಲು ಸಾಧ್ಯವಾಯಿತೇ ಹೊರತು ಅವರ ಮನೋಲೋಕವನ್ನು ದಂಡಿಸಲು ಸಾಧ್ಯವಾಗಲಿಲ್ಲ ಎಂಬುದು ಸಣ್ಣ ಸಂಗತಿಯಂತೂ ಅಲ್ಲ. ಹೀಗೆ ಅಧೀನ ಸಂಸ್ಕೃತಿಯೊಂದರ ತಾಳಿಕೆಯ ಗುಣಗಳನ್ನು, ಅದರ ವಿದ್ರೋಹದ ವಿನ್ಯಾಸಗಳನ್ನು ಕೂಡ ದಲಿತ ಸಾಹಿತ್ಯ ವಿಶದಪಡಿಸಿದೆ.

* ದಲಿತ ಸ್ತ್ರೀಲೋಕದ ಚಿತ್ರಣವೂ ಅನನ್ಯವಾಗಿದೆ. ಬಂಡಾಯ ಕಾಲಘಟ್ಟದವರೆಗೂ ಸಾಹಿತ್ಯದಲ್ಲಿ ದಲಿತ ಸ್ತ್ರೀಯು ದೇಹಮೂಲದಿಂದ ಮಾತ್ರ ಹಾಜರಾಗಿದ್ದಳು. ದಲಿತ ಲೇಖಕರು ದಲಿತ ಮಹಿಳೆಯ ಬಹುಸ್ತರ ದಮನದ ಆಯಾಮಗಳತ್ತ ಗಮನ ಹರಿಸಿದ್ದಾರೆ ಎಂದರೆ ವರ್ಣ, ವರ್ಗ ಮತ್ತು ಲಿಂಗದ ನೆಲೆಯ ಶೋಷಣೆಯ ಜೊತೆಗೆ ತನ್ನದೇ ಸಮುದಾಯದ ಪುರುಷ ದಬ್ಬಾಳಿಕೆಯನ್ನು ಆಕೆ ಎದುರುಗೊಳ್ಳಬೇಕಾದ ಇಕ್ಕಟ್ಟುಗಳು ಇವರಿಂದ ಅನಾವರಣಗೊಂಡಿವೆ. ಇದರೊಂದಿಗೇ ಸ್ತ್ರೀ ಪಾತ್ರಗಳ ಅನನ್ಯ ಕರ್ತೃತ್ವ ಶಕ್ತಿ, ಪಾಲನಾಗುಣ, ಕುಂದದ ಕನಸುಗಾರಿಕೆ, ದುಡಿಮೆಯ ಛಾತಿ, ಜೀವಮುಖೀ ಚಿಂತನೆಗಳಿಂದ ಸಶಕ್ತ ಮತ್ತು ಪರಿಪೂರ್ಣ ವ್ಯಕ್ತಿಗಳಾಗಿ ದಲಿತ ಸ್ತ್ರೀ ಪಾತ್ರಗಳು ಮೂಡಿಬಂದಿವೆ.

* ಪ್ರಧಾನ ಸಂಸ್ಕೃತಿಯು ದಲಿತರ ಕುರಿತು ಉದಾರವಾದೀ ಮತ್ತು ಮಾನವತಾವಾದಿ ನೆಲೆಯ ಚಿಂತನೆಯಿಂದ ಪ್ರತಿಕ್ರಿಯಿಸುವಾಗ, ಅಸ್ಪೃಶ್ಯತೆ, ಮತಾಂತರ ಮತ್ತು ಊಳಿಗಮಾನ್ಯ ವ್ಯವಸ್ಥೆ ಇವೇ ದಲಿತರ ಜ್ವಲಂತ ಸಮಸ್ಯೆಗಳು ಎಂದು ಬಿಂಬಿಸಿತ್ತು. ದಲಿತ

ಸಾಹಿತ್ಯವನ್ನು ಗಮನಿಸಿದರೆ, ಮತಾಂತರವು ದಲಿತರ ಜ್ವಲಂತ ಸಮಸ್ಯೆಯೇ ಅಲ್ಲ ಎಂಬುದು ಗೋಚರಕ್ಕೆ ಬರುತ್ತದೆ. ಅಸ್ಪೃಶ್ಯತೆಯ ಸಮಸ್ಯೆಯ ವಿರಾಟ್ ಚಿತ್ರಣ ದಲಿತ ಸಾಹಿತ್ಯದಲ್ಲಿ ಹರಳುಗಟ್ಟಿ ಬಂದಿದೆ.

✳ ಊಳಿಗಮಾನ್ಯ ವ್ಯವಸ್ಥೆಯ ಅಸ್ತಿಭಾರವು ಕುಸಿಯುತ್ತಿರುವುದರ ಸೂಚನೆಯನ್ನು ಹಾಗೂ ಅದರ ಅನಿವಾರ್ಯತೆಯನ್ನು ಕೆಲವು ದಲಿತ ಲೇಖಕರು ಮುಂದಿಟ್ಟರೆ, ಜಮೀನ್ದಾರ ಮತ್ತು ಊಳಿಗದವ ಇವರ ನಡುವಿನ ಭಾವನಾತ್ಮಕ ಸಂಬಂಧಗಳ ಸಂಕೀರ್ಣ ಸ್ವರೂಪದ ನೇಯ್ಗೆಯನ್ನು ಇನ್ನು ಕೆಲವು ದಲಿತ ಲೇಖಕರು ಬಿಡಿಸಿಟ್ಟಿದ್ದಾರೆ. ಶೋಷಕನಿಗೆ ತಾನು ನಡೆಸುತ್ತಿರುವ ಶೋಷಣೆಯ ಅರಿವೇ ಇಲ್ಲದ ಸ್ಥಿತಿಯ ಕುರಿತ ವಿಷಾದ ಮತ್ತು ಜೀತಗಾರನಿಗೆ ತನ್ನ ಶೋಷಿತ ಸ್ಥಿತಿಯ ಅರಿವಿದ್ದೂ, ಅಸಹಾಯಕನಾಗಿ ಉಳಿಯಬೇಕಾದ ಸ್ಥಿತಿಯ ದುರಂತ ಇವು ದಲಿತ ಸಾಹಿತ್ಯದಲ್ಲಿ ಅನನ್ಯವಾಗಿ ಮೂಡಿಬಂದಿವೆ.

✳ ವಸಾಹತೋತ್ತರ ಭಾರತೀಯ ಸಮಾಜವು ಹಾದುಬಂದ ರಾಜಕೀಯ ಮತ್ತು ಸಾಮಾಜಿಕ ಸ್ಥಿತ್ಯಂತರಗಳೂ ದಲಿತ ಸಮುದಾಯದ ಮೇಲೆ ಧನಾತ್ಮಕ ಮತ್ತು ಋಣಾತ್ಮಕ ಪರಿಣಾಮಗಳನ್ನು ಸಹಜವಾಗಿಯೇ ಉಂಟುಮಾಡಿವೆ. ಸಂವಿಧಾನಾತ್ಮಕ ನೆಲೆಯಲ್ಲಿ ದೊರೆತ ಬೆಂಬಲ ದಲಿತರಲ್ಲಿ ರಾಜಕೀಯ ಪ್ರಜ್ಞೆಯನ್ನು ಮೂಡಿಸುವಲ್ಲಿ, ಅವರ ಹೋರಾಟಕ್ಕೆ ಹೊಸ ಶಕ್ತಿಯನ್ನು ಒದಗಿಸುವಲ್ಲಿ ನೆರವಾಗಿದೆ. ಇದರಿಂದ ಭೂತಾಕಾರವಾಗಿ ಬೆಳೆದಿದ್ದ ಊಳಿಗಮಾನ್ಯ ಯಾಜಮಾನ್ಯ ದುರ್ಬಲಗೊಂಡ, ನಿರ್ವೀರ್ಯವಾದ ಸೂಚನೆಗಳನ್ನು ದಲಿತ ಸಾಹಿತ್ಯವು ಸ್ಪಷ್ಟವಾಗಿಯೇ ಗ್ರಹಿಸಿದೆ. ಅದರೊಂದಿಗೆ ಶಾಸನಾತ್ಮಕ ನೆಲೆಯ ಕೋರ್ಟು, ಪೊಲೀಸ್ ವ್ಯವಸ್ಥೆಗಳು ದಲಿತ ಪರವಾಗಿ ನಿಲ್ಲಬೇಕಾಗಿ ಬಂದ ಸ್ಥಿತಿಯನ್ನು ಇಲ್ಲವೆ ತಮಗೆ ಎದುರಾದ ಆ ಸಂಸ್ಥೆಗಳನ್ನು ಒಳದಾರಿಗಳ ಮೂಲಕ ಗೆಲ್ಲುವ ದಲಿತರ ಚಾಕಚಕ್ಯತೆಯನ್ನು ಹಾಗೂ ಅದರಿಂದ ಪ್ರಧಾನ ಸಂಸ್ಕೃತಿಯು ತಲ್ಲಣಗೊಂಡ ಎಳೆಗಳನ್ನು ಮರಣಮಂಡಲ ಮಧ್ಯದೊಳಗೆ, ಒಡಲಾಳ, ಮಾಗಿ ಮುಂತಾದ ಕೆಲವು ದಲಿತ ಕೃತಿಗಳು ಚಿತ್ರಿಸಿವೆ. ಈ ಬೆಳವಣಿಗೆಗಳು ನಮ್ಮ ರಾಜಕೀಯ ಹಾಗೂ ಸಾಮಾಜಿಕ ಪಲ್ಲಟದ ಸೂಚನೆಗಳಾಗಿವೆ.

✳ ಆಧುನಿಕ ಶಿಕ್ಷಣದ ಬಗೆಗೆ ದಲಿತ ಸಾಹಿತ್ಯ ಸಂಕೀರ್ಣ ನಿಲುವನ್ನು ಹೊಂದಿದೆ. ಕೆಲವು ಕೃತಿಗಳು ದಲಿತರ ವಿಮೋಚನೆಗೆ ಆಂಗ್ಲ ಶಿಕ್ಷಣವನ್ನು 'ವರದಾನ' ಎಂದು ಗ್ರಹಿಸಿದರೆ, ದೇವನೂರು ಮತ್ತು ಮುಳ್ಳೂರು ನಾಗರಾಜ ಅವರ ಕಾದಂಬರಿಗಳು ಆಂಗ್ಲ ಶಿಕ್ಷಣದಿಂದ ತ್ರಿಶಂಕು ಸ್ಥಿತಿ ತಲುಪಿದ ಯುವಪೀಳಿಗೆಯನ್ನು ಚಿತ್ರಿಸುವ ಮೂಲಕ ಆಧುನಿಕ ಶಿಕ್ಷಣವನ್ನೇ ಗುಮಾನಿಯಿಂದ ನೋಡುತ್ತಿರುವುದು ಚಾರಿತ್ರಿಕ ಸತ್ಯವಾಗಿದೆ. ಈ ವೈರುಧ್ಯವು ಚಾರಿತ್ರಿಕ ಅನಿವಾರ್ಯವೂ ಆಗಿರಬಹುದು.

✳ ವಸಾಹತೋತ್ತರ ಭಾರತದಲ್ಲಿ ದಲಿತರ ಮೇಲಿನ ಹಲ್ಲೆಗಳ, ಲೈಂಗಿಕ ದೌರ್ಜನ್ಯಗಳ, ಸಾಮಾಜಿಕ ಬಹಿಷ್ಕಾರದ ಘಟನೆಗಳು ಸಂಪೂರ್ಣವಾಗಿ ನಾಶವಾಗಿಲ್ಲ. ಇಂಥ ಸಂದರ್ಭಗಳಲ್ಲಿ ಆಯಾ ನಿರ್ದಿಷ್ಟ ಪ್ರಕರಣಗಳ ಕುರಿತ ಪ್ರತಿರೋಧವು ಪ್ರಕಟವಾಗುತ್ತ ಬಂದಿದೆ; ಅವುಗಳ ಕುರಿತ ಹೋರಾಟದ ಹಾಡುಗಳೂ ವಿಪುಲವಾಗಿ ದೊರೆಯುತ್ತಿವೆ. ಆದರೆ ಇವೆಲ್ಲ ಅಕ್ಷರ




ರೂಪಕ್ಕೆ ಬಂದುದು ಇಲ್ಲವೆಂಬಷ್ಟು ವಿರಳ. ಇದು ಯೋಚಿಸಬೇಕಾದ ಸಂಗತಿ. ಏಕೆಂದರೆ, ಇಂತಹ ದೌರ್ಜನ್ಯಗಳ ಕುರಿತ ವಿರೋಧ ಮೌಖಿಕ ಸಾಹಿತ್ಯಕ್ಕೆ ಮಾತ್ರ ಒಗ್ಗುತ್ತದೆ ಎಂಬುದು ಇದರ ಕಾರಣವೋ? ಅಥವಾ ಪ್ರಧಾನ ಸಾಹಿತ್ಯವು ಸಾಹಿತ್ಯದ ಕುರಿತು ಕಟ್ಟಿದ ಆವರಣಕ್ಕೆ ಈ ವಸ್ತು ಮತ್ತು ಅದರ ನಿರ್ವಹಣೆ ಎರಡೂ ಹೊಂದಿಕೊಳ್ಳುವುದಿಲ್ಲ ಎಂಬ ನಿಲುವು ಇದಕ್ಕೆ ಕಾರಣವೋ? – ಇದು ಇನ್ನೂ ಹೆಚ್ಚಿನ ಚರ್ಚೆಯನ್ನು ಬಯಸುವ ಅಂಶವಾಗಿದೆ.

✳ ದಲಿತ ಲೇಖಕರ ಸಂಖ್ಯೆ ಇಂದು ನೂರ ಐವತ್ತನ್ನೂ ಮೀರಿದೆ ಎಂಬುದಾಗಿ ಹೇಳುವುದಿದೆ. ಆದರೆ ಅವರು ಯಾರು ಎಂಬುದಕ್ಕೆ ನಮಗೆ ಒಂದೆಡೆ ಮಾಹಿತಿ ದೊರೆಯುತ್ತಿಲ್ಲ. ದಲಿತ ಸಾಹಿತ್ಯದ ಅಧ್ಯಯನ, ಸಂಶೋಧನೆ, ವಿಮರ್ಶೆ ಮುಂತಾದೆಡೆಗಳಲ್ಲಿ ಕೆಲವೇ ಲೇಖಕರ ಕೃತಿಗಳು ಅಧ್ಯಯನಕ್ಕೆ ಒಳಪಡುತ್ತವೆ. ದಲಿತ ಸಾಹಿತ್ಯದ ಕುರಿತು ದಲಿತೇತರರೇ ಹೆಚ್ಚಾಗಿ ಅಧ್ಯಯನ ಮಾಡಿರುವುದು ಇದಕ್ಕೆ ಒಂದು ಕಾರಣವಾಗಿರಬಹುದು. ಇನ್ನೊಂದು, ಹೊಸ ದಲಿತ ಬರಹಗಾರರ ವಿವರ, ಅವರ ಆರಂಭಿಕ ರಚನೆಗಳು ಕ್ವಚಿತ್ತಾಗಿ ಸಂಕಲನ ರೂಪದಲ್ಲಿ ದೊರೆಯುವುದೂ ಕಾರಣವಾಗಿರಬಹುದು.

✳ ದಲಿತ ಸಾಹಿತ್ಯದ ಗಟ್ಟಿ ಕೃತಿಗಳೂ ಬಂದಿರುವುದು ಗ್ರಾಮಸಂಸ್ಕೃತಿಯ ಹಿನ್ನೆಲೆಯಿಂದ ಎಂಬುದು ಮುಖ್ಯ. ಎಂದರೆ ಲೇಖಕ/ಕಿಯರು ತಮ್ಮ ಪೂರ್ವಾಶ್ರಮದ, ಬಾಲ್ಯದ ಅನುಭವ ವಲಯವನ್ನು ತುಂಬ ಸಮರ್ಥವಾಗಿ ಅದರೆಲ್ಲ ಸಂಕೀರ್ಣತೆಗಳೊಂದಿಗೆ ದಾಖಲಿಸುವಲ್ಲಿ ಯಶಸ್ವಿಯಾಗಿದ್ದಾರೆ. ಇಂದು ಬರೆಯುತ್ತಿರುವ ಬಹುಪಾಲು ಲೇಖಕರು ನಗರಸಂಸ್ಕೃತಿಯ ಭಾಗವಾದವರು. ಇಲ್ಲಿಯ ಅನುಭವಲೋಕವನ್ನು ಮಾತ್ರ ಯಾರೂ ಒರೆಗೆ ಹಚ್ಚುವ ಪ್ರಯತ್ನಕ್ಕೆ ಹೋಗದಿರುವುದು ಅಚ್ಚರಿಯನ್ನು ಉಂಟುಮಾಡುತ್ತದೆ.(ಬಿ. ಟಿ. ಜಾಹ್ನವಿ ಅವರ ಕಥಾಸಂಕಲನ ಇದಕ್ಕೊಂದು ಅಪವಾದ ಎನ್ನಬೇಕು. ಇನ್ನು ದಲಿತ ಆತ್ಮಕಥನಗಳಲ್ಲಿ ನಗರಸಂಸ್ಕೃತಿಯ ಅನುಭವ ಸ್ವಲ್ಪ ಮಟ್ಟಿಗೆ ಇಣುಕಿನೋಡಿದೆ ಅಷ್ಟೆ.) ನಗರ ಸಂಸ್ಕೃತಿಯಲ್ಲಿ ವಿಶಿಷ್ಟ ದಲಿತ ಅನುಭವ ಇಲ್ಲವೆಂದೇ? ಅಥವಾ ಆ ಅನುಭವ ದಲಿತೇತರರ ಅನುಭವಕ್ಕಿಂತ ಭಿನ್ನವಾಗಿಲ್ಲ ಎಂದೇ? ದಲಿತ-ದಲಿತೇತರರ ಸಹಬಾಳ್ವೆಯ ಪರಿಸರ ಸಂಘರ್ಷರಹಿತವಾಗಿದೆ ಎಂಬುದು ಈ ಮೌನಕ್ಕೆ ಕಾರಣವೇ? ಎಂದರೆ ದಲಿತ ಸಾಹಿತ್ಯ ಇಂತಹ ಹಲವು ಮಗ್ಗುಲುಗಳ ಚಿತ್ರಣಕ್ಕೆ ಗಮನ ನೀಡಿದಲ್ಲಿ ಅದರ ವ್ಯಾಪ್ತಿ ಹಿಗ್ಗುವುದರಲ್ಲಿ ಸಂದೇಹವಿಲ್ಲ.

✳ ಒಟ್ಟು ದಲಿತ ಸಾಹಿತ್ಯಕ್ಕೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ದಲಿತ ಸಾಹಿತ್ಯದ ಕೊಡುಗೆ ತುಂಬ ಸೊರಗಿದೆ ಎಂದೇ ಹೇಳಬೇಕು (ಜನಾರ್ದನ ಎರ್ಪಕಟ್ಟೆ, ಮಾಧವ ಪೆರಾಜೆ ಹೀಗೆ ಕೆಲವರೇ ಕಾಣಿಸುತ್ತಾರೆ). ಸಾಕ್ಷರತೆಯ ನೆಲೆಯಲ್ಲಿ ಮೊದಲಿನಿಂದಲೂ ಈ ಜಿಲ್ಲೆ ಪ್ರಥಮ ಸ್ಥಾನದಲ್ಲಿ ನಿಂತುಕೊಂಡಿದ್ದೂ, ಈ ವ್ಯತ್ಯಾಸಕ್ಕೆ ಕಾರಣವೇನು ಎಂಬ ಪ್ರಶ್ನೆ ಎದುರಾಗುತ್ತದೆ. ಅಕ್ಷರಸ್ಥರಾದವರೆಲ್ಲ ಸೃಜನಶೀಲ ಬರವಣಿಗೆಗೆ ತೊಡಗುತ್ತಾರೆ ಅಥವಾ ತೊಡಗಬೇಕು ಎಂಬುದು ಕಡ್ಡಾಯವಲ್ಲ ಎಂಬುದನ್ನು ಒಪ್ಪಿಕೊಂಡರೂ, ಅಷ್ಟೇ ಮೇಲಿನ ಪ್ರಶ್ನೆಗೆ ಉತ್ತರವಾಗಲಾರದು. ದಲಿತರ ಹಕ್ಕುಗಳು, ಅವರ ಮೇಲಿನ ದೌರ್ಜನ್ಯಗಳು ಮುಂತಾದವುಗಳ ಕುರಿತು ಸಾಂಘಿಕವಾದ ಹೋರಾಟ, ಹಕ್ಕೊತ್ತಾಯ, ವೈಚಾರಿಕ ಲೇಖನ ಇತ್ಯಾದಿಗಳು ಜಿಲ್ಲೆಯಾದ್ಯಂತ ಕಂಡುಬಂದರೂ, ಅವುಗಳನ್ನು ಸಾಹಿತ್ಯಿಕ ವಲಯಕ್ಕೆ ಒಗ್ಗಿಸುವ ಪ್ರಯತ್ನಗಳು ಇಲ್ಲವೆಂಬಷ್ಟು ವಿರಳವಾಗಿವೆ. ದಲಿತರು ಹಿಂದುತ್ವದ ಪ್ರಕ್ರಿಯೆಯ ಭಾಗವಾಗುತ್ತ ಸಾಗುವುದು ಇದಕ್ಕೆ ಕಾರಣವೇ? ಅಥವಾ ಯಾವುದೇ ಆಮೂಲಾಗ್ರ ಬದಲಾವಣೆಗೆ, ಕ್ರಾಂತಿಕಾರಕ ಚಳುವಳಿಗೆ ಅವಕಾಶ ನೀಡದ ಸಮಾಜದಲ್ಲಿ ದಮನಿತ ವರ್ಗದವರು ಬರಹಗಾರರಾಗಿ, ಕಲಾವಿದರಾಗಿ ಬೆಳಗುವುದು ಕಷ್ಟಸಾಧ್ಯ ಎನ್ನಬಹುದೇ? ಇನ್ನೂ ಒಂದು ನೆಲೆಯಲ್ಲಿ ಯೋಚಿಸಬಹುದಾದರೆ, ದಕ್ಷಿಣ ಕನ್ನಡದ ದಲಿತ ವರ್ಗದ ಸೃಜನಶೀಲತೆ ಮೌಖಿಕ ಸಂಸ್ಕೃತಿಯಲ್ಲಿ ಮತ್ತು ಆರಾಧನಾ ಸಂಸ್ಕೃತಿಯಲ್ಲಿ ಪೂರ್ಣ ತೊಡಗಿಸಿಕೊಂಡದ್ದು ಇದಕ್ಕೆ ಕಾರಣವಿರಬಹುದೇ? ಇಂತಹ ಚರ್ಚೆಗಳು ನಿರ್ವಾತವನ್ನು ಗುರುತಿಸಲು ಮತ್ತು ಅದಕ್ಕೆ ಕಾರಣಗಳನ್ನು ಹುಡುಕಲು ಅನುವು ಮಾಡುತ್ತವೆ ಎಂಬುದು ಇಲ್ಲಿಯ ಕಾಳಜಿಯಾಗಿದೆ.

ಡಾ॥ ಭೂಮಿಗೌಡ
ಸಂತ ಆ್ಯಗ್ನೆಸ್ ಕಾಲೇಜು, ಮಂಗಳೂರು - ೫೭೫ ೦೦೨

■

## ತಬ್ಬಲಿ

ನಿರಾಶ್ರಿತರ ಶಿಬಿರದಲ್ಲಿ
ಪುಟ್ಟ ಬಾಲಕಿ ಹೃದಯವಿದ್ರಾವಕವಾಗಿ
ಅಳುತ್ತಿದ್ದಳು.
ಅವಳೆದುರು ಗಂಜಿ ತುಂಬಿದ ತಟ್ಟೆಯಿತ್ತು.
ಊಟ ಮಾಡಿಸಲು ಅವ್ವನೇ ಬರಬೇಕು
ಎಂಬ ಬೇಡಿಕೆ ಅವಳದ್ದು.
ಅವಳ ತಾಯಿಯ ಬೂದಿ
ಹಿಂದಿನ ರಾತ್ರಿ ಬೀಸಿದ ಗಾಳಿಗೆ
ಹಾರಿಹೋಗಿತ್ತು.

■ ಕೆ. ಎಸ್. ರವಿಕುಮಾರ್, ಹಾಸನ

# ಕಾಗುಣಿತದ ಮಾರ್ಪಾಟು

ಪ್ರೊ|| ಕೆ. ಕುಶಾಲಪ್ಪ ಗೌಡ

**೧. ಅರ್ಕ ಒತ್ತು, ದೀರ್ಘ ಚಿಹ್ನೆಯ ಸ್ಥಾನಪಲ್ಲಟ ಇತ್ಯಾದಿ**

ಕನ್ನಡದಲ್ಲಿ ಅರ್ಕ ಒತ್ತು ಸಂಯುಕ್ತಾಕ್ಷರ ಬರೆಯುವಲ್ಲಿ ಪ್ರಯೋಗವಾಗುತ್ತದೆ. $rc_1$- ಎಂಬ ಸಂಯುಕ್ತತೆಯಲ್ಲಿ ಕನ್ನಡ ಬರವಣಿಗೆಯಲ್ಲಿ ಇದನ್ನು (=r) ಎರಡನೆಯ ವರ್ಣ (=$c_1$)ದ ಅನಂತರ ಬರೆಯುವ ಕ್ರಮ (= – $c_1r$-) ಎಂಬಂತೆ. ಉದಾ : ಅರ್ಕ, ತರ್ಕ, ಅರ್ಧ. ಸಂಸ್ಕೃತ ಲಿಪಿಯಲ್ಲಿ ಈ ಸಂಜ್ಞೆ ದ್ವಿತೀಯ ವ್ಯಂಜನದ ತಲೆಯ ಮೇಲೆ ಬರುತ್ತದೆ. ಉದಾಹರಣೆಗೆ : अर्क, ಎಂಬಂತೆ. ಕನ್ನಡದಲ್ಲಿ ಮೇಲೆ ನೋಡಿದಂತೆ ಬದಿಗೆ ಸರಿದಿದೆ. ಉಚ್ಚಾರಣೆಯಲ್ಲಿ ಮೊದಲಿಗೆ ಬಂದರೂ ಬರಹದಲ್ಲಿ ಎರಡನೆಯದಾಗಿ ಬರುತ್ತದೆ. ಚಿಕ್ಕಂದಿನಿಂದಲೂ ಅಭ್ಯಾಸ ಮಾಡಿ ಮಾಡಿ ತರ್ಕ ಸಮ್ಮತವಲ್ಲದ ಈ ಬರಹಕ್ರಮ ನಮಗೆ ರೂಢಿಯಾಗಿ ಹೋಗಿದೆ. ಆದರೆ ಅನ್ಯ ಭಾಷೆಯವರಿಗೆ ಕನ್ನಡ ಕಲಿಸುವಾಗ ಈ ಸಮಸ್ಯೆ ಎದುರಾಗುತ್ತದೆ. ಕನ್ನಡಿಗರಿಗೂ ಕೆಲವರಿಗೆ ಈ ಸಮಸ್ಯೆ ಎದುರಾಗಿ, ತರ್ಕ ಬುದ್ಧಿಯಿಂದ ರೂಢಿಗೆ ವ್ಯತಿರಿಕ್ತವಾಗಿ ಬರೆಯುವುದೂ ಆಗೊಮ್ಮೆ ಈಗೊಮ್ಮೆ ನುಸುಳಿಬರುವುದಿದೆ. ಉದಾಹರಣೆಗೆ 'ನುಡಿಬಸಗೆ' ಎಂಬ ಅಭಿನಂದನ ಗ್ರಂಥದಲ್ಲಿ ಜನಾರ್ದನ ಎಂಬ ಹೆಸರು ಜರ್ನಾದನ ಎಂದು ಎರಡು ಸಲ ಅಚ್ಚಾಗಿದೆ (ಪರಿವಿಡಿ : ಮನೆಯೊಸಗೆ ವಿಭಾಗ, ಸಂಖ್ಯೆ ೫೪; ಮತ್ತು ಪುಟ ೩೧೩). ನಾ ಆದ ಮೇಲೆ ಉಚ್ಚಾರಣೆಯಲ್ಲಿ 'ರ'ಕಾರ ಮೊದಲು ಬರುತ್ತದೆಂಬ ತರ್ಕ ಬುದ್ಧಿ ಇದಕ್ಕೆ ಕಾರಣವಾಗಿರಬೇಕು.

ಗೊಂದಲಗಳಿಂದ ಸಂಪೂರ್ಣ ಮುಕ್ತವಾದ ಲಿಪಿಗಳು ಬಹುಶಃ ಇರಲಾರವೆಂದು ಹೇಳಬಹುದು. ಮೇಲೆ ಹೇಳಿದ ಅರ್ಕ ಒತ್ತನ್ನು ಬಳಸದೆ, ಇರುವ ಕ್ರಮ ತೆಲುಗು ಲಿಪಿಯಲ್ಲಿ ಬಳಕೆಯಲ್ಲಿದೆ. ತೆಲುಗು - ಕನ್ನಡ ಲಿಪಿಗಳು ಸಾಮಾನ್ಯ ಮಟ್ಟಿಗೆ ಒಂದೇ ರೀತಿಯಲ್ಲಿವೆ. ಅಲ್ಲಿ ಅರ್ಕ ಒತ್ತು ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲವಾದರೂ ಅದರ ಬಳಕೆ ಅಪರೂಪ. ಅದರ ಬದಲಿಗೆ 'ರ' ಕಾರವನ್ನು ಬಳಸಿ ಸಂಯುಕ್ತಾಕ್ಷರವನ್ನು ಬರೆಯಲಾಗುತ್ತದೆ. ಉದಾಹರಣೆಗೆ : ಅರ‍್ಕ, ತರ‍್ಕ, ಕಾರ‍್ಯ, .... ಇತ್ಯಾದಿ. ಇದೇ ಕ್ರಮವನ್ನು ಕನ್ನಡದಲ್ಲೂ ಅಳವಡಿಸಿದರೆ, ಗೊಂದಲ ನಿವಾರಣೆಯಾಗುತ್ತದಲ್ಲದೆ, ಲಿಪಿಯಲ್ಲಿ ಒಂದು ಸಂಜ್ಞೆಯ ಉಳಿತಾಯವಾದಂತಾಗುತ್ತದೆ.

**೨. ದೀರ್ಘಚಿಹ್ನೆಯ ಸ್ಥಾನ ಪಲ್ಲಟ**

ಅರ್ಕ ಒತ್ತು ಬಳಕೆಯಾಗುವಾಗ ದೀರ್ಘ ಚಿಹ್ನೆಯನ್ನು ಎಲ್ಲಿ ಬಳಸಬೇಕೆಂಬಲ್ಲಿಯೂ ಗೊಂದಲವಿದೆ. ಉದಾಹರಣೆಗೆ, ನಿರ್ದೇಶನ ನಿರ್ದೇಶನ. ಇದರಲ್ಲಿ ದೀರ್ಘ, ಮೊದಲ ವ್ಯಂಜನದ ಅಂಗವಾಗಿಯೇ ಇದೆ. ಆದುದರಿಂದ ಅದನ್ನು ತುಂಡರಿಸಿ, ಅರ್ಕ ಒತ್ತು ಮಧ್ಯೆ ಪ್ರವೇಶಿಸುವಂತೆ ಮಾಡುವುದು ಸರಿಯಲ್ಲ. ನಿರ್ದಾಕ್ಷಿಣ್ಯ ಎಂದು ಬರೆಯುವಾಗ, 'ದಾ' ಎಂಬ ದೀರ್ಘವನ್ನು ಅರ್ಕ ಒತ್ತು ಒಡೆಯುವುದಿಲ್ಲ. ಒಡೆಯಲು ಸಾಧ್ಯವೂ ಇಲ್ಲ. ಈ ಗೊಂದಲವನ್ನೂ 'ರ' ಕಾರದ ಸಹಾಯದಿಂದ ನಿವಾರಿಸಲು ಸಾಧ್ಯ. ನಿರ‍್ದೇಶನ, ನಿರ‍್ದಾಕ್ಷಿಣ್ಯ ಎಂದು ಬರೆಯುವ ಮೂಲಕ.

**೩. ಅನುಸ್ವಾರ ವರ್ಗಾನುನಾಸಿಕಗಳ ವಿನಿಮಯ**

ಲಿಪಿಯನ್ನು ಬರೆಯುವಲ್ಲಿ ಕೆಲವು ಸುಧಾರಣೆಗಳು ನಮ್ಮಲ್ಲಿ ಹಿಂದಿನಿಂದಲೇ ನಡೆದಿವೆ. ಹೀಗಿರುವಲ್ಲಿ ನಮ್ಮ ಅನುಕೂಲಕ್ಕೆ ಅಗತ್ಯವಾದಂತೆ ಸುಧಾರಣೆಗಳನ್ನು ತರುವುದು ತಪ್ಪಾಗದು. ಇಂತಹ ಒಂದು ಕ್ರಾಂತಿಕಾರಕ ಸುಧಾರಣೆ ವರ್ಗೀಯ ಅನುನಾಸಿಕಗಳು ಮತ್ತು ವರ್ಗೀಯ ವ್ಯಂಜನಗಳ ಸಂಯುಕ್ತ ರೂಪಗಳನ್ನು ಬರೆಯುವಲ್ಲಿ ನಡೆದಿದೆ. ಅಂದರೆ ಐದು ಅನುನಾಸಿಕಗಳನ್ನೂ ಬಿಂದು ಅಥವಾ ಅನುಸ್ವಾರವೇ ಪ್ರತಿನಿಧಿಸುವಂತೆ ಮಾಡುವುದು.

ಉದಾ : ಙ → 'ಂ' ಅಙ್ಕ → ಅಂಕ; ಅಙ್ಗ → ಅಂಗ

ಞ → 'ಂ' ಅಞ್ಚೆ → ಅಂಚೆ; ಅಞ್ಜು → ಅಂಜು

ಣ → 'ಂ' ಅಣ್ಟು → ಅಂಟು; ಕಣ್ಡು → ಕಂಡು

ನ → 'ಂ' ಅನ್ತು → ಅಂತು; ಅನ್ದು → ಅಂದು

ಮ → 'ಂ' ತಮ್ಪು → ತಂಪು; ಅಮ್ಬು → ಅಂಬು

ಈ ರೀತಿಯ ಬರವಣಿಗೆ ಪ್ರಾರಂಭಿಸಿದಾಗ ಪಂಡಿತವರೇಣ್ಯರು ಇದನ್ನು ಮೆಚ್ಚಲಿಲ್ಲವೆಂದು ಕಾಣುತ್ತದೆ. ಎರಡನೆಯ ನಾಗವರ್ಮ ಈ ಐದೂ ಅನುನಾಸಿಕಗಳನ್ನು ಬರಹದಲ್ಲಿ ಉಳಿಸಿಕೊಳ್ಳಬೇಕೆಂಬ ಉದ್ದೇಶದಿಂದಲೆಂಬಂತೆ ಒಂದು ಕಂದಪದ್ಯವನ್ನು ಉದಾಹರಿಸಿದ್ದಾನೆ : ಕೇಶಿರಾಜನೂ ಅದನ್ನು ಉದ್ಧರಿಸಿದ್ದಾನೆ. [ಕನ್ನಡ ಅರ್ಥಕೋಶದಲ್ಲಿ (ಎಫ್. ಕಿಟ್ಟೆಲ್ ವಿರಚಿತ) ಈ ಹಳೆಯ ಸ್ವರೂಪವನ್ನೇ ಉಳಿಸಿಕೊಳ್ಳಲಾಗಿದೆ.]

ಉದಾ :

ಬಿಙ್ಕಮ್ಬೆತ್ತೆಸೆವಞ್ಚೆಯ ।
ಸಙ್ಕುಳಮುಂ ತೊಣ್ಡುಗೆಡೆವ ಶುಕಸಾರಿಕೆಯುಂ ॥
ಸೊಙ್ಕು ಬಲವನ್ದು ತೀಡುವ ।
ತೆಙ್ಕಣ ಗಾಳಿಯುಮವೇಂ ಮನಙ್ಗೊಳಿಸಿದುವೋ ॥

(ಶ.ಮ.ದ : ಸೂತ್ರ ೧೮ : ಪದ್ಯ ೨೫)

ಈಗ ಈ ಕ್ರಮ ಮೇಲಿನ ಪದ್ಯದಲ್ಲೇ ಸಮಾಧಿಗೊಂಡಿದೆ ಅಷ್ಟೆ. ಅನುನಾಸಿಕಗಳನ್ನು ಅನುಸ್ವಾರ ಆಕ್ರಮಿಸಿಕೊಂಡ ಕಾರಣ, 'ಙ' ಮತ್ತು 'ಞ' ಕನ್ನಡ ಲಿಪಿಮಾಲೆಯಿಂದ ಕಳಚಿಕೊಳ್ಳುವಂತಾಯ್ತು.

**೪. ಅನುಸ್ವಾರದ ವಿಸ್ತರಣೆ**

ಮುಂದೆ ಈ ಅನುಸ್ವಾರದ ಬಳಕೆ ಬೇರೆಡೆಗೂ ಅಂದರೆ ಅನುನಾಸಿಕಗಳ ದ್ವಿತ್ವ ರೂಪಗಳನ್ನು ಬರೆಯುವಲ್ಲಿಗೂ ವಿಸ್ತರಿಸಿತು.

– ಣ್ಣ – ವನ್ನು – ಂಣ – ಎಂದು, ಉದಾ :– ಅಣ್ಣ → ಅಂಣ

– ನ್ನ – ವನ್ನು – ಂನ – ಎಂದು, ಉದಾ :– ನನ್ನ → ನಂನ

– ಮ್ಮ – ವನ್ನು – ಂಮ – ಎಂದು, ಉದಾ :– ಅಮ್ಮ → ಅಂಮ

ಎಂದೂ ಕೆಲವರು ಬರೆಯಲು ಆರಂಭಿಸಿದರು. ಹಳಬರ ಬರವಣಿಗೆಗಳಲ್ಲಿ ಈ ಕ್ರಮ ಅಪರೂಪವಾಗಿ ಕಂಡುಬಂದರೂ ಇದಕ್ಕೆ ಈಗ ಮಾತ್ರ ಸರ್ವಮಾನ್ಯತೆಯಿಲ್ಲ.

ಈ ರೀತಿಯ ಬರವಣಿಗೆಯ ಒಳಗಣಸೂತ್ರವೆಂದರೆ ಅನುಸ್ವಾರದ ಅನಂತರದ ವ್ಯಂಜನ ಯಾವುದಿದೆಯೋ ಅದರ ಬೆಲೆಯನ್ನೇ ಅನುಸ್ವಾರವೂ ಪಡೆಯುತ್ತದೆ ಎಂದು (ಂಣ – ಣ್ಣ, ಇತ್ಯಾದಿ) ಹಾಗೆ, ಇತರ ದ್ವಿತ್ವ ವ್ಯಂಜನಗಳನ್ನೂ ಬರೆಯುವಾಗಲೂ ಯಾಕೆ ಅನುಸ್ವಾರವನ್ನು ಬಳಸಬಾರದು ? ಎಂಬ ತರ್ಕ ಬುದ್ಧಿ (ಅತಿ ಬುದ್ಧಿವಂತಿಕೆ !) ಒಬ್ಬ ಶಾಸನ ಬರಹಗಾರನಿಗೆ ಹೊಳೆದ ಒಂದು ಅಪೂರ್ವ ಉದಾಹರಣೆ ಕಂಡುಬಂದಿದೆ. ಉದಾ : ಎಲೆಕಟ್ಟು ಎಂಬುದನ್ನು ಯೆಲೆ ಕಂಟು ಎಂದು ಬರೆದಿದೆ (ನಂಜನಗೂಡು 236-12 EC III). ಇದನ್ನು ನಾವು ತಪ್ಪು ಎಂದು ಪರಿಗಣಿಸಿದರೂ, – ಕಂಟು ಎಂಬಲ್ಲಿಯ ಅನುಸ್ವಾರ ಅದರ ಅನಂತರದ ವರ್ಣದ ಬೆಲೆಯನ್ನೇ ಪಡೆಯುತ್ತದೆ – ಎಂಬುದು ಬರಹಗಾರನ ತರ್ಕ ಎಂದಾಗ ನಗುವಂತಾಗುತ್ತದೆ.

**೫. ಮುಂದುವರಿ, ಮುಂದುವರೆ – ಅಪ ಪ್ರಯೋಗ**

ಸರಿಯಾದ ರೂಪ ಮುಂದುವರಿ ಎಂಬುದನ್ನು ಈಗ ವಿದ್ವದ್ವರೇಣ್ಯರು ಸಹ ಮುಂದುವರೆ ಎಂದೇ ಬರೆಯುತ್ತಾರೆ. ಇದು ತೀರ ಅಶುದ್ಧ ರೂಪ. ಟಿ.ವಿ.ಯಲ್ಲೂ ಅನೇಕ ಬಾರಿ ''ಕಾರ್ಯಕ್ರಮ ಮುಂದುವರೆಯುವುದು'' ಎಂದು ಬರೆದಿರುವುದನ್ನು ಕಾಣುತ್ತೇವೆ. ಮುಂದು + ಪರಿ ಎಂಬುದರ ಸಂಯುಕ್ತ ರೂಪವಾಗಿ ಮುಂದುವರಿ ಎಂಬ ಪದವಾಗಿದೆ. ಸಂಧಿಯ ಕಾರಣದಿಂದ ಪ > ವ ಆಗಿದೆ. ಪರಿ ಎಂದರೆ ಚಲಿಸು, ಹೋಗು ಎಂಬ ಅರ್ಥ. ಪರೆ ಎಂಬುದಕ್ಕೆ ಆ ಅರ್ಥ ಇಲ್ಲವೇ ಇಲ್ಲ. ಹಾಗಾಗಿ ಶಿಷ್ಟ ಬರಹದಲ್ಲಿ ಮುಂದುವರಿ ಎಂಬ ಶುದ್ಧ ರೂಪವನ್ನೇ ಬಳಸಬೇಕಾದುದು ಅಗತ್ಯ.

ಪ್ರೊ|| ಕೆ. ಕುಶಾಲಪ್ಪ ಗೌಡ
ಜಟ್ಟಿಪಳ್ಳ , ಸುಳ್ಯ - ೫೭೪ ೨೩೯
ದಕ್ಷಿಣ ಕನ್ನಡ ಜಿಲ್ಲೆ.

# ಪ್ರಗತಿಪರ ದೇಶಗಳಿಗೆ ವಿಶ್ವವ್ಯಾಪಾರ ಸಂಸ್ಥೆಯು ಸಹಾಯ ಮಾಡಲು ಸಮರ್ಥವೇ ?





■ ಕೆ. ಎಸ್. ಕೃಷ್ಣಸ್ವಾಮಿ

ಇಪ್ಪತ್ತೊಂದನೇ ಸಹಸ್ರಮಾನದ ಹಿಂದಿನ ವರ್ಷಗಳಲ್ಲಿ ವಿಶ್ವವ್ಯಾಪಾರ ಸಂಸ್ಥೆಯ (WTO) ಕಾರ್ಯವ್ಯಾಪ್ತಿಯನ್ನು ವಿಸ್ತರಿಸಲು ಆರ್ಥಿಕವಾಗಿ ಮುಂದುವರೆದಿರುವ ರಾಷ್ಟ್ರಗಳು ಮಾಡಿದ ಪ್ರಯತ್ನಗಳ್ಯಾವುವೂ ಸಫಲವಾಗಿ ಇರಲಿಲ್ಲ. ೧೯೯೪ರಲ್ಲಿ ನೂರನಲವತ್ತಕ್ಕೂ ಹೆಚ್ಚು ದೇಶಗಳು ಸಮ್ಮತಿಸಿದ್ದ ಒಪ್ಪಂದಗಳ ಪ್ರಕಾರ ವಿಶ್ವವ್ಯಾಪಾರ ಸಂಸ್ಥೆಗೆ ಸರಕು ಸಾಮಾನುಗಳು, ಸೇವೆಗಳು (services), ಬೌದ್ಧಿಕ ಆಸ್ತಿ (intellectual property) ಮುಂತಾದವುಗಳ ವ್ಯಾಪಾರ ವಿನಿಮಯಗಳಲ್ಲದೆ ಈ ಕ್ಷೇತ್ರಗಳಲ್ಲಿ ಎಲ್ಲ ಸದಸ್ಯರೂ ಅನುಸರಿಸಬೇಕಾದ ನೀತಿಗಳು, ಭಿನ್ನಾಭಿಪ್ರಾಯಗಳ ಇತ್ಯರ್ಥ ಮೊದಲಾದ ವಿಷಯಗಳು ಒಳಪಟ್ಟಿದ್ದವು. ಇವೆಲ್ಲವನ್ನೂ ನಿಷ್ಕರ್ಷಿಸುವ ಮೊದಲೇ ಬೇರೆ ವಿಷಯಗಳನ್ನು ಚರ್ಚಿಸಲು ಅಭಿವೃದ್ಧಿಶೀಲ ರಾಷ್ಟ್ರಗಳು ಸಮ್ಮತಿಸಲಿಲ್ಲ. ಅಮೆರಿಕಾ ಮತ್ತು ಯೂರೋಪ್ ದೇಶಗಳು ಸಿಯಾಟಲ್, ಕ್ಯಾನ್‌ಕೂನ್, ಸಿಂಗಪುರ ಮುಂತಾದ ಪಟ್ಟಣಗಳ ಅಧಿವೇಶನಗಳಲ್ಲಿ ಕಾರ್ಮಿಕರಿಗೆ ಅನ್ವಯಿಸುವ ನೀತಿ ನಿಯಮಗಳು, ಅಂತರರಾಷ್ಟ್ರೀಯ ಹೂಡಿಕೆಗೆ ವಿಮಾ ಸೌಕರ್ಯ, ಮುಕ್ತ ವ್ಯಾಪಾರ ಧೋರಣೆ, ಸರ್ಕಾರಗಳು ಕೊಳ್ಳಲು ಅನುಸರಿಸಬೇಕಾದ ರೀತಿ ಇತ್ಯಾದಿಗಳನ್ನು ಚರ್ಚಿಸಲು ಅಭಿವೃದ್ಧಿನಿರತ ರಾಷ್ಟ್ರಗಳು ಒಪ್ಪಲಿಲ್ಲ. ಇದರ ಪರಿಣಾಮವಾಗಿ ೨೦೦೧ರಲ್ಲಿ ಕತಾರ್ ದೇಶದ ದೋಹಾದಲ್ಲಿ ನಡೆದ ಮಂತ್ರಿಗಳ ಸಭೆಯು ''ಅಭಿವೃದ್ಧಿಪರ ಕಾರ್ಯಸೂಚಿ''ಯನ್ನು ಚರ್ಚಿಸಿ ಕೆಲವು ನಿರ್ಣಯಗಳನ್ನು ತೆಗೆದುಕೊಂಡಿತು. ಅವುಗಳಲ್ಲಿ ಮುಖ್ಯವಾದ ವಿಷಯಗಳೆಂದರೆ : (೧) ಬೌದ್ಧಿಕ ಆಸ್ತಿ ಹಕ್ಕಿನ ಸಂಬಂಧದ ಒಪ್ಪಂದದಲ್ಲಿ ಆಗಬೇಕಾದ ಬದಲಾವಣೆಗಳು ; (೨) ಜವಳಿ ವ್ಯಾಪಾರದ ಒಡಂಬಡಿಕೆಯನ್ನು ವಿಸ್ತರಿಸುವುದು; (೩) ಬಹಳ ಹಿಂದುಳಿದ ರಾಷ್ಟ್ರಗಳಿಗೆ ಮಾತ್ರ ದೊರಕುವ ವಿಶೇಷ ರಿಯಾಯಿತಿಗಳು ಮತ್ತು (೪) ವಿಶ್ವವ್ಯಾಪಾರ ಸಂಸ್ಥೆಯು ಹೊಸ ವಿಷಯಗಳನ್ನು ಕೈಗೆತ್ತಿಕೊಳ್ಳುವ ಮೊದಲು ಅವುಗಳ ಚರ್ಚೆಗೆ ಸೂಕ್ತವಾದ ವಿಧಾನ (modalities) ವನ್ನು ಕ್ರಮವಾಗಿ ಪರಿಶೀಲಿಸಿ ೨೦೦೩ರ ಮಾರ್ಚ್ ತಿಂಗಳೊಳಗೆ ನಿಗದಿಪಡಿಸುವುದು.

ಸಂಸ್ಥೆಯ ಸಂವಿಧಾನದ ಪ್ರಕಾರ ತೆಗೆದುಕೊಳ್ಳಬೇಕಾದ ನಿರ್ಣಯಗಳಿಗೆ ಎಲ್ಲಾ ಸದಸ್ಯರೂ ಒಪ್ಪಬೇಕು. ಹೊಸ ವಿಷಯಗಳನ್ನು ಕಾರ್ಯಕ್ರಮಕ್ಕೆ ಸೇರಿಸುವಲ್ಲಿ ಸಾಕಷ್ಟು ಭಿನ್ನಾಭಿಪ್ರಾಯವಿದ್ದುದರಿಂದ ಅವುಗಳ ಗಣನೆಯನ್ನು ಮುಂದೂಡಬೇಕಾಯ್ತು. ಈ ವಿಚಾರದಲ್ಲಿ ಭಾರತ ದೇಶದ ನಿಲುವು ದೃಢವಾಗಿದ್ದು, ದೋಹಾ ಸಭೆಯಲ್ಲಿ ಒಮ್ಮತಕ್ಕೆ ಬರಲು ಅಡ್ಡಿಪಡಿಸುತ್ತದೆಯೆಂಬ ಆಕ್ಷೇಪಣೆ ಬಲವಾಗಿತ್ತು. ಆದರೆ ಬೌದ್ಧಿಕ ಆಸ್ತಿಯ ಒಪ್ಪಂದವನ್ನು ಜನತೆಯ ಆರೋಗ್ಯ ಸಂರಕ್ಷಣೆಗೆ ಎಲ್ಲಾ ದೇಶಗಳಿಗೂ ಅನುಕೂಲವಾಗುವ ರೀತಿಯಲ್ಲಿ ಬದಲಾಯಿಸಬೇಕೆಂಬ ವಿಷಯದಲ್ಲಿ ಭಾರತ, ಬ್ರೆಜಿಲ್ ಮುಂತಾದ ದೇಶಗಳು ಇತರ ಅಭಿವೃದ್ಧಿನಿರತ ರಾಷ್ಟ್ರಗಳನ್ನೆಲ್ಲಾ ಸಂಘಟಿಸಲು ಮಾಡಿದ ಪ್ರಯತ್ನ ಸಫಲವಾಯ್ತು. ಇದರ ಪರಿಣಾಮವಾಗಿ ಏಡ್ಸ್ ಮುಂತಾದ ಭೀಕರ ರೋಗಗಳಿಗೆ ಬೇಕಾಗುವ ಔಷಧಿಗಳನ್ನು ಹಕ್ಕು ಪಡೆದಿರುವ ಕಂಪನಿಗಳಲ್ಲದೆ ಇತರ ಔಷಧಿ ತಯಾರಕರೂ ಉತ್ಪನ್ನ ಮಾಡಿ ಮಾರಾಟ ಮಾಡಲು ಈಗ ಸಾಧ್ಯವಾಗಿದೆ. ಅಂತೆಯೇ ಸಾಂಕ್ರಾಮಿಕ ರೋಗಗಳ ನಿವಾರಣೆಗೆ ಬೇಕಾಗುವ ಸಾಮಗ್ರಿಗಳನ್ನೂ ಸ್ಥಳೀಯ ಕಂಪನಿಗಳು ತಯಾರಿಸಲು ಆಯಾಯ ದೇಶದ ಸರ್ಕಾರಗಳು ಕ್ರಮ ತೆಗೆದುಕೊಳ್ಳಬಹುದು.

ಮೇಲಿನ ವಿಷಯ ಚರ್ಚೆಗೆ ಬಂದಾಗ ಮುಂದುವರಿದ ರಾಷ್ಟ್ರಗಳ ವಿರುದ್ಧ ಮಿಕ್ಕೆಲ್ಲ ಸದಸ್ಯರೂ ದೃಢವಾಗಿ ನಿಂತ ಕಾರಣ ಜನತೆಯ ಆರೋಗ್ಯ ರಕ್ಷಣೆಗೆ ಅವಶ್ಯಕವಾದ ತಿದ್ದುಪಡಿಗಳನ್ನು ಸಂಸ್ಥೆ ಅನುಮೋದಿಸಲು ಸಾಧ್ಯವಾಯಿತು. ಆದರೆ ಉಳಿದ ವಿಷಯಗಳನ್ನು ಸಭೆ ಕೈಗೆತ್ತಿಕೊಂಡಾಗ ಒಗ್ಗಟ್ಟು ಶಿಥಿಲವಾಯಿತು. ಈ ಬದಲಾವಣೆ ಅನಿರೀಕ್ಷಿತವಾಗೇನೂ ಇರಲಿಲ್ಲ. ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಪ್ರತಿ ರಾಷ್ಟ್ರವೂ ತನಗೆ ಅತ್ಯನುಕೂಲವಾದ ರೀತಿಯ ಮಾರ್ಗವನ್ನು ಅನುಸರಿಸುವುದು ಸ್ವಾಭಾವಿಕ. ಜೊತೆಗೆ ಇಂತಹ ಸಂದರ್ಭಗಳಲ್ಲಿ ಶಕ್ತಿಯುತವಾದ ರಾಷ್ಟ್ರಗಳು ತಮಗುಂಟಾಗಬಹುದಾದ ಅಡಚಣೆಗಳನ್ನು ನಿವಾರಿಸಲು ಚತುರೋಪಾಯಗಳನ್ನೆಲ್ಲ ಬಳಸುವುದೂ ಸ್ವಾಭಾವಿಕ. ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಒಂದು ವಿಷಯ ಪರಿಗಣಿಸುವಾಗ ಇರುವ ಒಗ್ಗಟ್ಟು ಮಿಕ್ಕ ಸಮಯದಲ್ಲೂ ಉಳಿಯುವುದು ಬಹಳ ಅಪರೂಪ. ಹೀಗಾಗಿ ದೋಹಾದಲ್ಲಿ ಜವಳಿ ವ್ಯಾಪಾರದ ಮೇಲಿದ್ದ ನಿರ್ಬಂಧಗಳನ್ನು ೨೦೦೫ರಲ್ಲಿ ಕೊನೆಗಾಣಿಸುವ ಬದಲು ಇನ್ನೂ ಹತ್ತು ವರ್ಷ – ಅಂದರೆ ೨೦೧೫ರವರೆಗೆ – ವಿಸ್ತರಿಸಲು ಅಮೆರಿಕಾ ಮತ್ತು ಯೂರೋಪ್ ಒಕ್ಕೂಟಗಳಿಗೆ ಸಾಧ್ಯವಾಯಿತು. ಅಲ್ಲಿಯ ಮಾರುಕಟ್ಟೆಗಳಲ್ಲಿ ಇತರ ದೇಶಗಳು ಬಿಕರಿ ಮಾಡಬಹುದಾದ ಜವಳಿ ಪ್ರಮಾಣದ ಮೇಲಿದ್ದ ನಿರ್ಬಂಧಗಳು ಹಾಗೆಯೇ ಉಳಿದವು. ಹಾಗೆಯೇ ಯೂರೋಪಿನ ರಾಷ್ಟ್ರಗಳು ಹಿಂದೆ ಅವರ ವಸಾಹತುಗಳಾಗಿದ್ದ ದೇಶಗಳಿಗೆ ಕೊಡುವ ವಿಶೇಷ ರಿಯಾಯಿತಿಗಳನ್ನು ಇತರರಿಗೆ ನೀಡದಿರಲು ಸರ್ವಸಾಮಾನ್ಯ ಒಪ್ಪಂದಗಳಲ್ಲಿ ಆಗಬೇಕಾಗಿದ್ದ ತಿದ್ದುಪಡಿಗಳಿಗೆ ಸಭೆಯನ್ನು ಒಪ್ಪಿಸಲು ಸಾಧ್ಯವಾಯಿತು. ಇಷ್ಟಾದರೂ ಆ ಸಮ್ಮೇಳನದಲ್ಲಿ ವಿಶ್ವದ ಪ್ರಗತಿಪರ ರಾಷ್ಟ್ರಗಳು ನಿರ್ಣಯಗಳ ಕರಡುಗಳನ್ನು ಸಿದ್ಧಪಡಿಸುವಾಗ ಸಾಕಷ್ಟು ಶ್ರಮ ತೆಗೆದುಕೊಳ್ಳಲಿಲ್ಲ. ಜಿನೀವಾದಲ್ಲಿದ್ದ ಗ್ಯಾಟ್ ಸಂಸ್ಥೆಯ ಮುಖ್ಯ ನಿರ್ದೇಶಕ ಆರ್ಥರ್ ಡಂಕೆಲ್‌ರವರಿಗೆ ಬಿಟ್ಟಿದ್ದುದರಿಂದ ಈಗ ಸರ್ವಸಮ್ಮತವಾಗಿ ಇರುವ ಸ್ಥೂಲ ಒಪ್ಪಂದಗಳೆಲ್ಲಾ ತಮ್ಮ ಅನುಕೂಲಕ್ಕೆ ಬೇಕಾದಂತೆ ತಿರುಚಲು ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಗೆ ಸಾಧ್ಯವಾಗಿದೆ. ಅವರಿಗೆ ಪ್ರಮುಖವಾಗಿ ಬೇಕಾಗಿರುವುದು ಕೈಗಾರಿಕಾ ಮತ್ತು ಸೇವಾ ಉತ್ಪನ್ನಗಳನ್ನು ಮಾರಲು ಇರುವ ಅಡಚಣೆಗಳನ್ನೆಲ್ಲಾ ತೆಗೆದುಹಾಕುವುದು ಮತ್ತು ತಮ್ಮ ಜನತೆಯ ಆದಾಯ ಮತ್ತು ಜೀವನಶೈಲಿಗಳಿಗೆ ಇತರರ ಸ್ಪರ್ಧೆಯಿಂದ ಹಾನಿಯಾಗದಂತೆ ನೋಡಿಕೊಳ್ಳುವುದು. ಈ ಉದ್ದೇಶಗಳನ್ನು ಸಾಧಿಸಿಕೊಳ್ಳಲು ಏನೇನು ಪ್ರಯತ್ನಗಳನ್ನು ಮಾಡಬಹುದೋ ಅವನ್ನೆಲ್ಲ ಉಪಯೋಗಿಸಿಕೊಳ್ಳಲು ಸಿದ್ಧರಿರುವರೆಂದು ದೋಹಾ ಮತ್ತಿತರ ಸಭೆಗಳಿಂದ ಖಚಿತವಾಗಿದೆ.

* * *

ಲೇಖಕರು ರಿಸರ್ವ್ ಬ್ಯಾಂಕಿನ ಡೆಪ್ಯುಟಿ ಗವರ್ನರಾಗಿದ್ದ ಅರ್ಥಶಾಸ್ತ್ರಜ್ಞರು.

ಯಾವ ರೀತಿಯ ಒಡಂಬಡಿಕೆಗೆ ಸಾಧ್ಯವಾಗದ ವಿಷಯಗಳು ಸಾಕಷ್ಟಿದ್ದವು. ಇವನ್ನೆಲ್ಲ ಕೂಲಂಕಷವಾಗಿ ಪರಿಶೀಲಿಸಿ ಡಿಸೆಂಬರ್ ೨೦೦೫ರವರೆಗೆ ಎಲ್ಲರೂ ಸಮ್ಮತಿಸಬಹುದಾದ ಮಟ್ಟವನ್ನು ತಲುಪಲು ಪ್ರಯತ್ನಿಸಬೇಕೆಂಬ ಅಪೇಕ್ಷೆ ವ್ಯಕ್ತವಾಗಿತ್ತು. ಆದರೆ ಇದುವರೆಗೆ ನಡೆದ ವಿವಿಧ ರೀತಿಯ ಸಭೆಗಳಲ್ಲಿ ವಿಶ್ವವ್ಯಾಪಾರ ಸಂಸ್ಥೆಗೆ ಖಚಿತವಾದ ಕಾರ್ಯಕ್ರಮವನ್ನು ಗೊತ್ತು ಮಾಡಲು ಸಾಧ್ಯವಾಗಿಲ್ಲ. ಈ ಸ್ಥಿತಿಯಲ್ಲಿ ಡಿಸೆಂಬರ್‌ನಲ್ಲಿ ಹಾಂಗ್‌ಕಾಂಗ್‌ನಲ್ಲಿ ನಡೆಯುವ ಮಂತ್ರಿಗಳ ಸಭೆ ಆ ಸಂಸ್ಥೆಯ ಭವಿಷ್ಯವನ್ನೇ ನಿರ್ಣಯಿಸುವಂತಾಗಿದೆ.

– ೨ –

ವಿಶ್ವವ್ಯಾಪಾರ ಸಂಸ್ಥೆ ೧೯೯೫ರಲ್ಲಿ ಸ್ಥಾಪಿತವಾದಾಗಿನಿಂದ ನಡೆದಿರುವ ಮಂತ್ರಿಗಳ ಸಭೆಗಳ್ಯಾವುವೂ ಸಮರ್ಪಕವಾಗಿ ಕೊನೆಗಾಣದೆ ಇರುವುದಕ್ಕೆ ಅನೇಕ ಕಾರಣಗಳಿವೆ; ಮುಖ್ಯವಾಗಿ ಮುಂದುವರೆದಿರುವ ಕೆಲವು ದೇಶಗಳಿಗೂ ಇನ್ನೂ ಅಭಿವೃದ್ಧಿ ಹೊಂದುತ್ತಿರುವ ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾ ರಾಷ್ಟ್ರಗಳಿಗೂ ಅಂತರರಾಷ್ಟ್ರೀಯ ಆರ್ಥಿಕ ವ್ಯವಹಾರಗಳ ವಿಷಯದಲ್ಲಿರುವ ಭಿನ್ನಾಭಿಪ್ರಾಯಗಳು. ೧೯೯೫ರ ಸಭೆಯಲ್ಲಿ ಮಂಡಿಸಿದ್ದ ಸರ್ವಸಾಮಾನ್ಯ ಒಪ್ಪಂದಗಳಿಗೆ (ಜನರಲ್ ಅಗ್ರಿಮೆಂಟ್ಸ್) ವ್ಯಾಪಾರದ ಜಾಗತೀಕರಣಕ್ಕೆ ಎಲ್ಲಾ ದೇಶಗಳ ಮೇಲಿದ್ದ ಒತ್ತಡ ಬಲವಾಗಿತ್ತು. ಅದುವರೆಗೂ ಚಾಲ್ತಿಯಲ್ಲಿದ್ದ ಗ್ಯಾಟ್ (GATT) ಒಪ್ಪಂದವನ್ನು ಬದಲಾಯಿಸಿ ತಮ್ಮ ಹೂಡಿಕೆ ಮತ್ತು ವ್ಯಾಪಾರಗಳನ್ನು ಪ್ರಪಂಚದಲ್ಲೆಲ್ಲಾ ಹೆಚ್ಚಿಸುವ ಗುರಿಯನ್ನು ಮುಂದುವರೆದ ದೇಶಗಳು ಇಟ್ಟುಕೊಂಡಿದ್ದವು. ಅದಕ್ಕೆ ವ್ಯತಿರಿಕ್ತವಾಗಿ ಅಭಿವೃದ್ಧಿನಿರತ ರಾಷ್ಟ್ರಗಳು ಜಾಗತೀಕರಣದಿಂದ ತಮ್ಮ ವಿದೇಶ ಸಂಪರ್ಕಗಳನ್ನು ಬೆಳೆಸಿಕೊಂಡು ಆ ಮೂಲಕ ಕೈಗಾರಿಕೆ, ಕೃಷಿ ಮತ್ತು ಇತರ ವಲಯಗಳು ಹೆಚ್ಚಿನ ಪ್ರಗತಿ ಸಾಧಿಸುವ ಆಕಾಂಕ್ಷೆ ಹೊಂದಿದ್ದವು. ಈ ಅವಸರದಲ್ಲಿ ಪ್ರಗತಿಪರ ದೇಶಗಳು ೧೯೯೫ರ ಒಪ್ಪಂದಗಳ ನ್ಯೂನತೆಗಳನ್ನು ಗಮನಿಸಿದರೂ ಸರಕು ವ್ಯಾಪಾರ, ಸೇವೆಗಳ ವಿನಿಮಯ, ಬೌದ್ಧಿಕ ಆಸ್ತಿ ಹಕ್ಕುಗಳು, ಅಂತರರಾಷ್ಟ್ರೀಯ ಹೂಡಿಕೆ ಇತ್ಯಾದಿಗಳನ್ನು ಕೂಲಂಕಷವಾಗಿ ಮುಂದಾಗುವ ಸಭೆಗಳಲ್ಲಿ ಚರ್ಚಿಸಬಹುದಾದ ಕಾರಣ ಸ್ಥೂಲವಾಗಿ ಒಪ್ಪಿಕೊಂಡಿದ್ದವು. ಆದರೆ ಈ ಎಲ್ಲಾ ಒಪ್ಪಂದಗಳ ಕರಡುಗಳನ್ನು ತಯಾರಿಸುವಾಗಲೇ ಪಾಶ್ಚಿಮಾತ್ಯ ದೇಶಗಳು ಹೊಂದಿದ್ದ ಮೂಲ ಉದ್ದೇಶ - ಪ್ರಪಂಚದ ಮಾರುಕಟ್ಟೆಗಳಿಗೆಲ್ಲಾ ತಮಗೆ ಮುಕ್ತ ಪ್ರವೇಶವಿದ್ದು ತಮಗೆ ಹೆಚ್ಚು ಲಾಭವಿರಬೇಕೆಂಬುದು. ಇತರ ದೇಶಗಳಿಗೆ ಇದು ಸ್ಪಷ್ಟವಾದುದು ಅನಂತರ. ಆಮೇಲೆ ನಡೆದ ಸಭೆಗಳಲ್ಲಿ ತಮ್ಮ ಉದ್ದೇಶವನ್ನು ಸಾಧಿಸಲು ಅವಕಾಶ ದೊರೆತಂತೆ ಬೇರೆ ರಾಷ್ಟ್ರಗಳ ಮೇಲೆ ರಾಜಕೀಯ ಅಥವಾ ಮಿಲಿಟರಿ ಬಲಾತ್ಕಾರ ಉಪಯೋಗಿಸಲು ಪ್ರಯತ್ನಿಸಿದುದರಿಂದ ಅವರ ವಿರೋಧ ಹೆಚ್ಚಿ ಯಾವ ನಿರ್ಣಯಗಳನ್ನೂ ತೆಗೆದುಕೊಳ್ಳಲು ಸಾಧ್ಯವಾಗಲಿಲ್ಲ. ಸಿಯಾಟಲ್ ಮತ್ತು ಕ್ಯಾನ್‌ಕುನ್ ಸಮ್ಮೇಳನಗಳು ನಿಷ್ಫಲವಾದಾಗ ಪಾಶ್ಚಿಮಾತ್ಯ ದೇಶಗಳು ತಮ್ಮ ನಿಲುವನ್ನು ಬದಲಾಯಿಸಬೇಕಾಗಿ ಬಂದುದು ದೋಹಾ ಅಧಿವೇಶನ ಕೆಲಮಟ್ಟಿಗೆ ಲಾಭಕರವಾಗಿತ್ತು.

ಇಷ್ಟಾದರೂ ಇನ್ನೂ ಅನೇಕ ವಿಷಯಗಳು ಇತ್ಯರ್ಥವಾಗದೆ ಉಳಿದಿವೆ. ಅತಿ ಮುಖ್ಯವಾಗಿ ಕೃಷಿ ಉತ್ಪನ್ನಗಳ ವ್ಯಾಪಾರಕ್ಕಿರುವ ಅಡಚಣೆಗಳು. ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕಾ ಖಂಡಗಳ ಹೆಚ್ಚು ದೇಶಗಳು ಕೃಷಿ ಅವಲಂಬಿತವಾದವು. ಅವುಗಳ ಉತ್ಪಾದನೆಯ ಬಹುಭಾಗ ಅಮೆರಿಕಾ, ಯೂರೋಪ್ ಮತ್ತು ಜಪಾನ್ ದೇಶಗಳು ಬಳಸಿಕೊಳ್ಳುತ್ತವೆ. ಆದರೆ ಆ ದೇಶಗಳ ಹಲವು ಕಾರ್ಯನೀತಿಗಳಿಂದ ಕೃಷಿ ಪ್ರಧಾನ ದೇಶಗಳಿಗೆ ಲಾಭಕ್ಕಿಂತ ಹೆಚ್ಚಾಗಿ ನಷ್ಟವೇ ಆಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ಭಾರತ, ಬ್ರೆಜಿಲ್, ಅರ್ಜೆಂಟೀನಾ ಮುಂತಾದವುಗಳ ಮುಂದಾಳತ್ವದಲ್ಲಿ ಇಪ್ಪತ್ತು ರಾಷ್ಟ್ರಗಳ ತಂಡ (G–20)ವೊಂದು ಅಂತರರಾಷ್ಟ್ರೀಯ ಕೃಷಿ ವ್ಯಾಪಾರದ ತೊಡಕುಗಳನ್ನು ಬಿಡಿಸಲು ಶ್ರಮಿಸುತ್ತಿದೆ. ಆದರೆ ಇದುವರೆಗೂ ಇದರಿಂದೇನೂ ಪ್ರಯೋಜನವಾಗಿಲ್ಲ. ಈ ಸಮಸ್ಯೆ ಬಗೆಹರಿಯುವವರೆಗೆ ಏನೂ ಪ್ರಗತಿ ಸಾಧ್ಯವಿಲ್ಲವೆಂದು ಎಲ್ಲಾ ದೇಶಗಳಿಗೂ ತಿಳಿದಿದ್ದರೂ ಇದುವರೆಗೆ ಯಾವ ಪರಿಹಾರವೂ ದೊರಕದೆ ಇರಲು ಕಾರಣವೇನು ?

ಅಭಿವೃದ್ಧಿ ಹೊಂದಿರುವ ಯೂರೋಪ್-ಅಮೆರಿಕಾ ದೇಶಗಳ ಸಮಗ್ರ ಉತ್ಪನ್ನದಲ್ಲಿ (GDP) ಕೃಷಿಯ ಭಾಗ ಗೌಣ. ಆದರೆ ರಾಜಕೀಯವಾಗಿ ವ್ಯವಸಾಯಗಾರರನ್ನು ಯಾವ ಪಕ್ಷವೂ ನಿರ್ಲಕ್ಷಿಸುವಂತಿಲ್ಲ. ಹಾಗಾಗಿ ಅವರ ಜೀವನಾಧಾರಕ್ಕೆ ಅನೇಕ ರೀತಿ ಸರ್ಕಾರಗಳು ಸಹಾಯ ಮಾಡುತ್ತಿವೆ. ಯೂರೋಪ್ ಒಕ್ಕೂಟ ಈಗ ಜಾರಿಯಲ್ಲಿರುವ ಸಾಧಾರಣ ಕೃಷಿ ನೀತಿ (Common Agriculture Policy)ಯ ಪ್ರಕಾರ ಸದಸ್ಯ ರಾಷ್ಟ್ರಗಳ ರೈತರಿಗೆ ಒಟ್ಟಾರೆ ೫೩ ಶತಕೋಟಿ 'ಯುರೋ'ಗಳ ಸಹಾಯ ಧನ ದೊರಕುತ್ತಿದೆ. ಇದರಲ್ಲಿ ಉಳಿದವರಿಗಿಂತ ದೊಡ್ಡ ಭಾಗ ಫ್ರಾನ್ಸ್ ದೇಶದ ಕೃಷಿಕರಿಗೆ ಸಲ್ಲುತ್ತದೆ. ಅದೇ ರೀತಿ ಅಮೆರಿಕಾ ಕೂಡ ಅಪಾರವಾದ ಹಣವನ್ನು ತನ್ನ ಕೃಷಿಕರಿಗೆ ವಿಧವಿಧವಾಗಿ ನೀಡುತ್ತಿದೆ.

ಇವುಗಳಿಂದ ಆ ದೇಶದ ರೈತರು ತಾವು ಉತ್ಪಾದಿಸುವ ಬೆಳೆಗಳನ್ನು ಖರ್ಚಿಗಿಂತ ಕಡಿಮೆ ಬೆಲೆಗೆ ಮಾರಲು ಶಕ್ತರಾಗಿದ್ದಾರೆ. ಆದರೂ ತಮ್ಮ ಅಥವಾ ಬೇರೆ ದೇಶಗಳ ಮಾರುಕಟ್ಟೆಗಳಲ್ಲಿ ಇತರ ದೇಶಗಳ ಜೊತೆ ಸ್ಪರ್ಧಿಸಲು ಅಸಮರ್ಥರಾದ ಕಾರಣ ಆಮದುಗಳ ಮೇಲೆ ಕಠಿಣ ತೆರಿಗೆಗಳನ್ನು ವಿಧಿಸುವುದಲ್ಲದೆ ರಫ್ತು ಮಾಡುವ ರೈತರಿಗೆ ಮತ್ತಷ್ಟು ಸಹಾಯ ಧನ ಒದಗಿಸುತ್ತಿದ್ದಾರೆ. ಪರಿಣಾಮವಾಗಿ ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ಕೃಷಿ ಪ್ರಾಧಾನ್ಯ ರಾಷ್ಟ್ರಗಳು ತಮ್ಮ ಉತ್ಪಾದನೆಯನ್ನು ಸರಿಯಾದ ಬೆಲೆಗಳಿಗೆ ಮಾರಲು ಸಾಧ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ ಈ ವರ್ಷ ನಡೆದಿರುವ ಕೆಲವು ಸಭೆಗಳಲ್ಲಿ G-20 ರಾಷ್ಟ್ರಗಳವರು ಯೂರೋಪ್, ಅಮೆರಿಕಾ ಮತ್ತು ಜಪಾನ್ ದೇಶಗಳು ಹಮ್ಮಿಕೊಂಡಿರುವ ಕೃಷಿ ಕಾರ್ಯನೀತಿಗಳನ್ನು ಬದಲಾಯಿಸುವವರೆಗೆ ವಿಶ್ವವ್ಯಾಪಾರ ಸಂಸ್ಥೆ ಇತರ ವಿಷಯಗಳನ್ನು ಚರ್ಚಿಸಲು ಸಾಧ್ಯವಿಲ್ಲವೆಂದು ಖಡಾಖಂಡಿತವಾಗಿ ತಿಳಿಸಿದ್ದಾರೆ. ಆಹಾರ ಭದ್ರತೆ (food security) ಮತ್ತು ರೈತರ ಕಲ್ಯಾಣಗಳು ಅತ್ಯವಶ್ಯಕವೆಂದು ಜಪಾನ್ ದೇಶ ತನ್ನ ಕಾರ್ಯನೀತಿಗಳನ್ನು ಬದಲಾಯಿಸಲು ಸಿದ್ಧವಿಲ್ಲವೆಂದು ಹೇಳುತ್ತಿದೆ. ಕಳೆದ ತಿಂಗಳಲ್ಲಿ ಅಮೆರಿಕಾ ಮತ್ತು ಯೂರೋಪ್ ಒಕ್ಕೂಟ ವಿವಿಧ ಸಭೆಗಳಲ್ಲಿ ಭಾಗವಹಿಸಿದ್ದರೂ ಸಮರ್ಪಕವಾದ ಪರಿಹಾರವನ್ನು ನೀಡಲು ಸಿದ್ಧರಿರುವಂತಿಲ್ಲ. ರೈತರಿಗೆ ಕೊಡುತ್ತಿರುವ ಸಹಾಯ ಧನವನ್ನು ಕಡಿಮೆ ಮಾಡುವುದಲ್ಲದೆ ಕೃಷಿ ಉತ್ಪನ್ನಗಳ ಮೇಲೆ ವಿಧಿಸಿರುವ ಆಮದು ತೆರಿಗೆಗಳನ್ನು ತಗ್ಗಿಸುವ ವಿಷಯದಲ್ಲಿ ಅವರವರಲ್ಲೇ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ಹತ್ತು ವರ್ಷಗಳ ಕೆಳಗೆ ಸರ್ವರೂ ಒಪ್ಪಿಕೊಂಡ ಕರಾರಿನ ಪ್ರಕಾರ ಆಮದು ಸುಂಕಗಳನ್ನೆಲ್ಲ ಕ್ರಮೇಣ ಇಳಿಸುವ ಗುರಿ ಇದ್ದರೂ ಈವರೆಗೆ ಗಣನೀಯ ಪ್ರಯತ್ನವನ್ನು ಯಾವ ದೇಶವೂ ಮಾಡಿಲ್ಲ. ಪ್ರಸ್ತುತ ಚಾಲ್ತಿಯಲ್ಲಿರುವ ಸುಂಕಗಳಿಂದ ವಿಶ್ವ ಮಾರುಕಟ್ಟೆಗಳಲ್ಲಿ ವ್ಯವಸಾಯ ಪದಾರ್ಥಗಳ ಬೆಲೆಗಳು ಸಾಕಷ್ಟು ವಿಕೃತಗೊಂಡಿವೆಯೆಂದು ಎಲ್ಲರೂ ಒಪ್ಪಿಕೊಂಡರೂ ಆ ಸುಂಕಗಳ ಪ್ರಭಾವವೇನೆಂದು ಖಚಿತವಾಗಿ ಅಳೆಯುವುದು ಕಷ್ಟದ ಕೆಲಸ. ಆದರೂ ಮುಂದುವರೆದ ದೇಶಗಳು ವಿಧಿಸುತ್ತಿರುವ ತೆರಿಗೆಗಳು ಈ ಮಾರುಕಟ್ಟೆಗಳನ್ನು ಇತರ ದೇಶಗಳಿಗೆ ತೊಂದರೆಯಾಗುವ ರೀತಿಯಲ್ಲಿ ಏರುಪೇರು ಮಾಡುತ್ತಿರುವುದು ನಿರ್ವಿವಾದ. ಪ್ರಗತಿಶೀಲ ರಾಷ್ಟ್ರಗಳು ಇವುಗಳನ್ನು ತಗ್ಗಿಸಿದ ಹೊರತು ಎಂತಹ ಒಪ್ಪಂದವೂ ಸಾಧ್ಯವಿಲ್ಲವೆಂದು ಪಟ್ಟು ಹಿಡಿದಿರುವುದು ಸರಿಯೆಂದು ಒಪ್ಪಲೇಬೇಕು.

ಆದರೆ ಅಮೆರಿಕಾ ಮತ್ತು ಯೂರೋಪ್ ರಾಷ್ಟ್ರಗಳು ಈ ಸುಂಕಗಳನ್ನು ಅವಶ್ಯವಿದ್ದಷ್ಟು ಇಳಿಸಲು ಒಪ್ಪದಿರುವುದಲ್ಲದೆ ಹಾಗೆ ಮಾಡಲು ಕೆಲವು ವರ್ಷಗಳೇ ಬೇಕೆಂದು ಹೇಳುತ್ತಿವೆ. ಪ್ರತಿಯಾಗಿ ಮಿಕ್ಕ ದೇಶಗಳೆಲ್ಲಾ ಸುಂಕಗಳನ್ನು ತೀವ್ರವಾಗಿ ಇಳಿಸಿ ತಮ್ಮ ಜನತೆ ಉಪಯೋಗಿಸುವ ಆಹಾರ ಪದಾರ್ಥಗಳ ಕನಿಷ್ಠ ಪಕ್ಷ ಶೇಕಡ ನಾಲ್ಕರಷ್ಟನ್ನು ಆಮದು ಮಾಡಲು ಸಿದ್ಧರಾಗಬೇಕು. ಭಾರತ ದೇಶದ ವಾಣಿಜ್ಯ ಮಂತ್ರಿ ಶ್ರೀ ಕಮಲನಾಥರು ಕೆಲವು ದಿನಗಳ ಹಿಂದೆ ಹೇಳಿದಂತೆ ಪಾಶ್ಚಿಮಾತ್ಯ ದೇಶಗಳು ನೀಡುತ್ತಿರುವ ಸೌಕರ್ಯಗಳೆಲ್ಲ ಭವಿಷ್ಯ ಪಾವತಿಯ ಚೆಕ್ಕಿನಂತೆ (postdated cheque). ಇದರ ಅನಿಶ್ಚಿತತೆಯ ಬದಲು ನಾವು ಖಚಿತವಾದ ನಿರ್ಣಯಗಳನ್ನು ತೆಗೆದುಕೊಳ್ಳುವುದು ಅಸಾಧ್ಯ. ಅಭಿವೃದ್ಧಿ ಹೊಂದಿರುವ ದೇಶಗಳು ಕೃಷಿಯ ವಿಷಯದಲ್ಲಿ ತಮ್ಮ ಕಾರ್ಯನೀತಿಗಳನ್ನು ತ್ವರಿತವಾಗಿ ಬದಲಾಯಿಸಿದ ಹೊರತು ವಿಶ್ವವ್ಯಾಪಾರ ಸಂಸ್ಥೆಯ ಮುಂಬರುವ ಅಧಿವೇಶನಗಳು ಫಲಪ್ರದವಾಗುವುದು ಅನುಮಾನ.

ಸಹಾಯಧನ ತೆರಿಗೆಗಳಲ್ಲದೆ ಕೃಷಿ ಉತ್ಪನ್ನಗಳ ವ್ಯಾಪಾರಕ್ಕೆ ಇನ್ನೂ ಕೆಲವು ಅಡಚಣೆಗಳಿವೆ. ಆಹಾರ ಪದಾರ್ಥಗಳ ಲಭ್ಯತೆಯ ಭದ್ರತೆ ಮತ್ತು ರೈತರ ಬಡತನ ಪರಿಹಾರಗಳಿಗೆ ಬಳಸಬಹುದಾದ ಕ್ರಮಗಳನ್ನು ತಾವು ಸೂಕ್ತ ರೀತಿ ನಿರ್ಧರಿಸಲು ಅಧಿಕಾರವಿರಬೇಕೆಂಬ ಪ್ರಗತಿಪರ ರಾಷ್ಟ್ರಗಳ ನಿಲುವನ್ನು ಅಮೆರಿಕಾ-ಯೂರೋಪ್‌ಗಳು ಒಪ್ಪುತ್ತಿಲ್ಲ. ತೆರಿಗೆಗಳನ್ನು ಕಡಿಮೆ ಮಾಡುವುದು ಅಥವಾ ಸಹಾಯ ಧನದ ಪ್ರಮಾಣವನ್ನು ಎಲ್ಲರಿಗೂ ಸಮ್ಮತಿಯಾಗುವ ರೀತಿಯಲ್ಲಿ ಬದಲಾಯಿಸಬಹುದೇ ಹೊರತು ತಮಗೆ ಅನುಕೂಲವಾದಂತೆ ಹೊಂದಿಸುವ ಅಧಿಕಾರವನ್ನು ಕೃಷಿ ಪ್ರಾಧಾನ್ಯವಾದ ದೇಶಗಳಿಗೆ ಬಿಡಲು ಸಾಧ್ಯವಿಲ್ಲವೆಂದು ಅವರ ವಾದ. ಆದರೆ ತಾವು ತಮ್ಮ ವ್ಯವಸಾಯಗಾರರಿಗೆ ಕೊಡುತ್ತಿರುವ ವಿಶೇಷ ರಕ್ಷಣೆ (special safeguards)ಗಳನ್ನು ಇತರರು ಅನುಸರಿಸಲು ಅಭಿವೃದ್ಧಿ ಹೊಂದಿರುವವರು ಒಪ್ಪುತ್ತಿಲ್ಲ. ಇದೇ ತರಹ ಹಳೆಯ ಗ್ಯಾಟ್ ಒಪ್ಪಂದ (GATT-1947)ದಲ್ಲಿ ಅಭಿವೃದ್ಧಿನಿರತ ರಾಷ್ಟ್ರಗಳಿಗೆಲ್ಲಾ ಅನ್ವಯಿಸುತ್ತಿದ್ದ ರಿಯಾಯಿತಿಗಳನ್ನು ಬಹಳಷ್ಟು ಕಡಿಮೆ ಮಾಡಿರುವುದಲ್ಲದೆ ಅವನ್ನು ಉಪಯೋಗಿಸುವ ಅವಕಾಶ ಬಹಳ ಹಿಂದುಳಿದ ಕೆಲವು ರಾಷ್ಟ್ರಗಳಿಗೆ ಸೀಮಿತವಾಗಿದೆ. ಇದರಿಂದಾಗಿ ಸಂಸ್ಥೆಯ ಸದಸ್ಯ ರಾಷ್ಟ್ರಗಳಲ್ಲಿರುವ ಅಸಮತೆಗಳ ನಿವಾರಣೆಗೆ ಜಾಗತೀಕರಣದಿಂದ ದೊರಕಬೇಕಾದ ಉತ್ತೇಜನ ಸಿಕ್ಕುವುದೆಂಬ ವಾದ ತಿರುಳಿಲ್ಲದಂತಾಗಿದೆ.

ತೆರಿಗೆಗಳಲ್ಲದೆ ಜನತೆ, ಪ್ರಾಣಿ ಅಥವಾ ಸಸ್ಯವರ್ಗಗಳಿಗೆ ಇತರ ದೇಶಗಳಿಂದ ಆಮದಾಗುವ ಸಾಮಗ್ರಿಗಳಿಂದ ಅಪಾಯವಿರಬಹುದೆಂಬ ಕಾರಣಕ್ಕೆ ಅವನ್ನು ನಿಷೇಧಿಸುವ ಅಧಿಕಾರ ಆಯಾ ದೇಶಗಳ ಸರ್ಕಾರಕ್ಕಿರುತ್ತದೆ. ಆಹಾರ ಪದಾರ್ಥಗಳು ಪಾಲಿಸಬೇಕಾದ ಗುಣಮಟ್ಟ, ಕಾಲಾವಕಾಶ, ಮಾರಾಟಕ್ಕೆ ಸಿದ್ಧಪಡಿಸುವಿಕೆ ಇತ್ಯಾದಿಗಳ ಅಂತರರಾಷ್ಟ್ರೀಯ ನಿಯಮಗಳನ್ನು ಪ್ರತಿ ರಾಷ್ಟ್ರವೂ ತನಗೆ ಸೂಕ್ತವಾದ ರೀತಿ ಅಳವಡಿಸುವುದರಲ್ಲಿರುವ ಆಸ್ಪದವನ್ನು ಬೇರೆ ಬೇರೆ ತರಹ ಉಪಯೋಗಿಸಿಕೊಳ್ಳಬಹುದು. ಇದನ್ನು ಮುಂದುವರೆದ ದೇಶಗಳು ಕಟ್ಟುನಿಟ್ಟಾಗಿ ಅನೇಕ ಆಹಾರ ಪದಾರ್ಥಗಳಿಗೆ ಪ್ರಯೋಗಿಸುತ್ತಿರುವುದರಿಂದ ಅವುಗಳ ರಫ್ತು ಬಹಳ ರಾಷ್ಟ್ರಗಳಿಗೆ ಕಷ್ಟಸಾಧ್ಯ. ಬೆಲೆ ಇತ್ಯಾದಿಗಳು ಸೂಕ್ತವಾಗಿದ್ದರೂ ಮಾರಾಟ ಮಾಡುವುದು ಸುಲಭವಲ್ಲ. ಇದೇ ರೀತಿ ಸಸ್ಯಗಳಿಗೆ ತಗುಲಬಹುದಾದ ಸೋಂಕುಗಳನ್ನು ತಪ್ಪಿಸಲು ಅವುಗಳ ಆಮದಿಗೂ ಅನೇಕ ನಿಷೇಧಗಳಿವೆ. ಇವೆಲ್ಲಾ ಅನಿವಾರ್ಯವೆನಿಸಿದರೂ ಅವುಗಳ ವ್ಯಾಪಾರದಲ್ಲಿ ತಾರತಮ್ಯಗಳನ್ನು ಮಾಡುವುದು ಅಪರೂಪವೇನಲ್ಲ.

ಇವೆಲ್ಲಕ್ಕಿಂತ ಕಠಿಣವಾಗಿರುವುದು ಮುಂದುವರೆದ ದೇಶಗಳು ತಾವು ಮಾಡಬೇಕಾದ ವ್ಯವಸಾಯ ಸಂಬಂಧ ಕಾರ್ಯನೀತಿಯ ಪ್ರತಿಯಾಗಿ ಕೃಷಿಯೇತರ ಕ್ಷೇತ್ರಗಳಲ್ಲಿ ಮುಕ್ತ ವ್ಯಾಪಾರಕ್ಕೆ ಇತರರು ನೀಡಬೇಕಾದ ಅನುಕೂಲಗಳು. ಮುಖ್ಯವಾಗಿ ಕೈಗಾರಿಕಾ ತಯಾರಿಕೆಗಳ ಮತ್ತು ಸೇವೆಗಳ (services) ಆಮದಿನ ಮೇಲೆ ವಿಧಿಸುವ ತೆರಿಗೆಗಳನ್ನು ಗಣನೀಯ ಪ್ರಮಾಣದಲ್ಲಿ ತಗ್ಗಿಸುವುದಲ್ಲದೆ ಯಾವ ತೆರಿಗೆಯೂ ಪದಾರ್ಥದ ಬೆಲೆಯ ಶೇಕಡ ಒಂದು ನೂರಕ್ಕಿಂತ ಹೆಚ್ಚಿರಬಾರದೆಂಬ ಷರತ್ತಿಗೆ ಬದ್ಧರಾಗಬೇಕು. ಅಮೆರಿಕಾ, ಯೂರೋಪ್ ಒಕ್ಕೂಟ ಈಗಾಗಲೇ ತಾವು ವಿಧಿಸುವ ಇಂತಹ ತೆರಿಗೆಗಳನ್ನು ಸಾಕಷ್ಟು ತಗ್ಗಿಸಿರುವುದರಿಂದ ಅವರ ಮೇಲೆ ಗರಿಷ್ಠ ಸುಂಕ ಯಾವ ಮಿತಿಯನ್ನು ಮೀರಬಾರದೆಂಬ ನಿಬಂಧನೆಯನ್ನು ಹೇರುವುದು ರಫ್ತು ಮಾಡುತ್ತಿರುವ ದೇಶಗಳಿಗೆ ಲಾಭವಾಗುವುದಿಲ್ಲ. ಈ ಸ್ಥಿತಿಯಲ್ಲಿ ಕೃಷಿಯೇತರ ಉದ್ಯಮಗಳಿಗೆ ರಿಯಾಯಿತಿಗಳನ್ನು ನೀಡುವುದರಲ್ಲಿ ಭಾರತ ಮುಂತಾದ ದೇಶಗಳಿಗೆ ಲಾಭಕ್ಕಿಂತ ನಷ್ಟವೇ ಜಾಸ್ತಿ. ಆದರೂ ಡಿಸೆಂಬರ್ ೨೦೦೫ರಲ್ಲಿ ನಡೆಯಲಿರುವ ಹಾಂಗ್‌ಕಾಂಗ್ ಅಧಿವೇಶನದಲ್ಲಿ ತಾತ್ಕಾಲಿಕವಾಗಿಯಾದರೂ ಸಮಂಜಸವಾಗಿ ಇರಬಹುದಾದ ಏರ್ಪಾಟಿಗೆ ಬಂದರೆ ೨೦೦೧ರಿಂದ ಇದುವರೆಗೂ ಉಳಿದಿರುವ ಸಮಸ್ಯೆಗಳ ಬಗ್ಗೆ ಮುಂದಿನ ವರ್ಷದ ಕೊನೆಯ ವೇಳೆಗೆ ಎಲ್ಲರಿಗೂ ಅನುಕೂಲವಾಗಬಹುದಾದ ರೀತಿಯಲ್ಲಿ ನಿರ್ಣಯಗಳನ್ನೂ ತಲುಪಬಹುದು. ಇದರ ಸಾಧ್ಯತೆಯನ್ನು ಪರಿಶೀಲಿಸಲು ನವೆಂಬರ್ ಮೊದಲಲ್ಲಿ ಭಾರತ ಮತ್ತು ಬ್ರೆಜಿಲ್ G-20 ರಾಷ್ಟ್ರಗಳ ಪರವಾಗಿ ಲಂಡನ್‌ನಲ್ಲಿ ಅಮೆರಿಕಾ, ಜಪಾನ್ ಮತ್ತು ಯೂರೋಪ್ ಒಕ್ಕೂಟದೊಡನೆ ಸಮಾಲೋಚಿಸಿದರು. ಕೃಷಿಯೇತರ ಉದ್ಯಮಗಳ ಸರಕುಗಳ ಮೇಲೆ ವಿಧಿಸುತ್ತಿರುವ ತೆರಿಗೆಗಳನ್ನು ಸರಾಸರಿ ಪ್ರಮಾಣ (average percentage) ಇಳಿಸುವುದರ ಬದಲು ಪ್ರತಿಯೊಂದು ಪದಾರ್ಥಗಳ ಮೇಲಿರುವ ತೆರಿಗೆಗಳನ್ನು ಪ್ರತ್ಯೇಕವಾಗಿ ಪರಿಗಣಿಸಿ, ಅತಿ ಹೆಚ್ಚಿನ ಸುಂಕಗಳನ್ನು ಗಣನೀಯ ರೀತಿಯಾಗಿ ಕಡಿಮೆ ಮಾಡಲು ಸಿದ್ಧರಿರುವರೆಂದು ತಿಳಿಸಿದರು. ಪ್ರತಿಯಾಗಿ ಮುಂದುವರೆದ ದೇಶಗಳು ಕೃಷಿ ಉತ್ಪನ್ನಗಳ ಮೇಲೆ ಹಾಕಿರುವ ಆಮದು ಸುಂಕಗಳನ್ನು ಸರಾಸರಿ ಶೇಕಡ ಎಪ್ಪತ್ತರಷ್ಟಾದರೂ ಇಳಿಸಿ ವ್ಯವಸಾಯಗಾರರಿಗೆ ಕೊಡುವ ನಾನಾ ತರಹದ ಸಹಾಯ ಧನಗಳಿಂದ ವಿಶ್ವ ಮಾರುಕಟ್ಟೆಗಳಲ್ಲಿ ಕೃಷಿ ಪದಾರ್ಥಗಳ ಬೆಲೆ ವಿಕೃತವಾಗದಂತೆ ನೋಡಿಕೊಳ್ಳಬೇಕೆಂಬ ನಿರ್ಣಯಕ್ಕೆ ಬದ್ಧರಾಗಬೇಕೆಂದು ಸೂಚಿಸಿದ್ದರು. ಆದರೆ ಇದ್ಯಾವುದಕ್ಕೂ ಯೂರೋಪ್ ಒಕ್ಕೂಟದ ವಾಣಿಜ್ಯ ಸಚಿವ ಪೀಟರ್ ಮಂಡೆಲ್‌ಸಾನ್ ಒಪ್ಪಲಿಲ್ಲ. ಸಮಾಲೋಚನೆಗಳನ್ನು ಮುಂದುವರೆಸುವುದಾಗಿ ಭಾರತದ ವಾಣಿಜ್ಯ ಮಂತ್ರಿ ಶ್ರೀ ಕಮಲನಾಥರವರು ಹೇಳಿದ್ದರೂ ಅಭಿವೃದ್ಧಿನಿರತ ದೇಶಗಳಿಗೆ ಅನುಕೂಲವಾಗುವಂತಹ ಸಮಾಧಾನ ಈ ವರ್ಷ ದೊರಕುವುದು ಅಸಂಭವ.

– ೩ –

ದೋಹಾ ಸಮ್ಮೇಳನವನ್ನು ಎಲ್ಲರೂ ಪ್ರಗತಿಪರ ದೇಶಗಳಿಗೆ ಉಪಯೋಗವಾಗಬಹುದೆಂದು ಭಾವಿಸಿ ಅದನ್ನು 'ಅಭಿವೃದ್ಧಿಶೀಲ ಕಾರ್ಯಕ್ರಮ'ವೆಂದು ಕರೆದಿದ್ದರು. ಆದರೆ ಅಲ್ಲಿಂದೀಚೆಗೆ ಆಗಿರುವ ಸಭೆಗಳ ಗತಿಯನ್ನು ನೋಡಿದರೆ ವಿಶ್ವವ್ಯಾಪಾರ ಸಂಸ್ಥೆಯ ಮುಖಾಂತರ ಭಾರತದಂತಹ ದೇಶಗಳಿಗೆ ಬಹಳ ಉಪಯೋಗವಾಗುವುದೆಂದು ನಿರೀಕ್ಷಿಸುವುದು ತಪ್ಪೆಂದು ಗೋಚರಿಸುತ್ತದೆ. ೨೦೦೧ರಿಂದ ಈಚೆಗೆ ನಡೆದಿರುವ ಚರ್ಚೆಗಳೆಲ್ಲಾ ನಿಷ್ಫಲವಾಗಿರುವುದಕ್ಕೆ ಮುಖ್ಯ ಕಾರಣ ಮುಂದುವರೆದಿರುವ ರಾಷ್ಟ್ರಗಳ ಅಸಹಕಾರ. ಇತರ ದೇಶಗಳಿಗೆ ತಮ್ಮಿಂದ ದೊರಕಬಹುದಾದ ಸಹಾಯ ಒದಗಿಸುವುದಕ್ಕೆ ಆ ದೇಶಗಳು ಯಾವ ತರಹ ಬೆಲೆಗೂ ಸಿದ್ಧರಾಗಿಲ್ಲ. ಹೂಡಿಕೆಯಾಗಲಿ, ವ್ಯಾಪಾರವಾಗಲಿ ಅಥವಾ ತಂತ್ರಜ್ಞಾನವಾಗಲಿ ಅಭಿವೃದ್ಧಿ ಹೊಂದಿರುವ ದೇಶಗಳು ತಮಗೆ ಸಿಕ್ಕುವ ನಿವ್ವಳ ಲಾಭದ ಮೇಲೆ ಗುರಿಯಿಟ್ಟಿರುವರೇ ಹೊರತು ಪ್ರಪಂಚದಲ್ಲಿರುವ ಇತರ ಜನಗಳ ಅಭ್ಯುದಯಕ್ಕೆ ಗಮನ ಕೊಡುತ್ತಿಲ್ಲ. ವರ್ಷಗಳು ಕಳೆದಂತೆ ಇದು ಸುಸ್ಪಷ್ಟವಾಗುತ್ತಿದೆ.

AQUADIAGNOSTICS



Water Research & Technology Centre

WATER QUALITY
ASSOCIATION





# Aquadiagnostics

## Water Research &Technology Centre

**Recognized by Water Quality Association USA and NABL accredited** as per ISO/IEC 17025

Aquadiagnostics Water Research & Technology Centre is the state-of-the-art water research laboratory located in Bangalore, India. The Centre is equipped with advanced facilities for testing water and water purifiers to standards and protocols prescribed by leading institutions like APHA (American Public Health Association); NSF (National Sanitation Foundation, USA); USEPA (United Sates Environmental Protection Agency); and BIS (Bureau of Indian Standards).

Aquadiagnostics has been assessed and accredited in accordance with standard ISO/IEC 17025:1999 by the prestigious National Accreditation Board for Testing and Calibration Laboratories (NABL), Department of Science and Technology, India.

Today Aquadiagnostics holds distinction of being the first ever laboratory in Asia and the 8th in the world to be recognized by the Water Quality Association (WQA), USA as an "Independent Testing Authority". The Centre is authorized by WQA to test and evaluate water purifiers for gold seal certification program.

Aquadiagnostics is staffed by qualified and trained water technology professionals to carry out Water Chemistry, Bacteriology, Virology and Toxicology test of drinking water.

Visit our website www.aquadiagnostics.com or contact our customer relation manager for more details and testing facilities.

*Aquadiagnostics Water Research and Technology Centre*
*143, C-4 Bommasandra Industrial I.Area*
*Off Hosur Road, Bangalore 560 099*
*Tel: +91-80-7834443. Fax 91-80-7834911*

**The quality of our health depends on the quality of water we drink.**

**Test and ensure it.**

ಮಾಹಿತಿ ತಂತ್ರಜ್ಞಾನ, ವೈದ್ಯಕೀಯ ಶಾಸ್ತ್ರ, ಬಯೋ ತಂತ್ರಜ್ಞಾನ, ಬಾಹ್ಯಾಕಾಶ ವಿಜ್ಞಾನ, ಅಣು ತಂತ್ರಜ್ಞಾನ ಇತ್ಯಾದಿಗಳಲ್ಲಾಗಿರುವ ಸಂಶೋಧನೆಗಳಿಂದ ಎಲ್ಲರಿಗೂ ಉಪಯೋಗವಾಗುವುದೆಂಬ ಎಣಿಕೆ ಎಷ್ಟು ತಪ್ಪೆಂದು ದೋಹಾದ ಅಧಿವೇಶನದ ನಂತರ ವ್ಯಕ್ತವಾಗಿದೆ. ಬೌದ್ಧಿಕ ಆಸ್ತಿಹಕ್ಕಿನ ಒಪ್ಪಂದವನ್ನೂ ಸ್ವಲ್ಪವಾಗಿ ಬಗ್ಗಿಸಲು ಇತರ ದೇಶಗಳು ಮಾಡಿದ ಭಗೀರಥ ಪ್ರಯತ್ನ ಸರ್ವವಿದಿತ. ದೊರೆತ ಸ್ವಲ್ಪ ಲಾಭ ಮುಂದುವರೆಯುವ ದೇಶಗಳೆಲ್ಲಾ ಒಗ್ಗಟ್ಟಾದುದರಿಂದ. ಇದನ್ನು ಅರಿತಿರುವ ಅಮೆರಿಕಾ ಮುಂತಾದ ದೇಶಗಳು ಆ ಒಗ್ಗಟ್ಟನ್ನು ಒಡೆಯಲು ಅನೇಕ ತಂತ್ರಗಳನ್ನು ಬಳಸುವುವೆಂದು ನಿರೀಕ್ಷಿಸಬಹುದು. ಅದರಲ್ಲೂ ಈಗಾಗಲೇ ರಾಜಕೀಯ ಅಥವಾ ರಕ್ಷಣಾ ಏರ್ಪಾಟುಗಳಿಗೆ ಒಳಪಟ್ಟಿರುವ ದೇಶಗಳು ಅವರ ಒತ್ತಡಕ್ಕೆ ಮಣಿದರೆ ಆಶ್ಚರ್ಯವೇನಿಲ್ಲ. ದೋಹಾ ಸಮ್ಮೇಳನದಲ್ಲಿ ಯೂರೋಪ್ ಒಕ್ಕೂಟಕ್ಕೆ ಹಿಂದೆ ತಮ್ಮ ವಸಾಹತುಗಳಿದ್ದ ದೇಶಗಳಿಗೆ ನೀಡುತ್ತಿರುವ ಸೌಕರ್ಯಗಳನ್ನು ಇತರರು ಉಪಯೋಗಿಸಿಕೊಳ್ಳದಂತೆ ಮಾಡಬೇಕಾದ ತಿದ್ದುಪಡಿಗಳಿಗೆ ಆ ದೇಶಗಳ ಸಹಾಯ ಪಡೆಯುವುದರಲ್ಲಿ ಸಾಧ್ಯವಾಯಿತು. ಹಾಗೆಯೇ ಜವಳಿ ವ್ಯಾಪಾರದ ವಿಷಯದಲ್ಲಿ ತಮಗೆ ಬೇಕಾದಂತೆ ಕಾಲಾವಕಾಶವನ್ನು ವಿಸ್ತರಿಸಲು ಇತರರು ಒಟ್ಟಾಗಿ ಪ್ರತಿಭಟಿಸದಂತೆ ನೋಡಿಕೊಂಡರು. ಈಚೀಚೆಗೆ ಚೀನಾದೊಡನೆ ಅಮೆರಿಕಾ ಮತ್ತು ಯೂರೋಪ್ ದೇಶಗಳು ಈ ವಿಷಯದಲ್ಲಿ ಬೇರೆ ಬೇರೆ ಒಪ್ಪಂದಗಳನ್ನು ಮಾಡಿಕೊಂಡಿವೆ. ಭಾರತವನ್ನೂ ಇತರರಿಂದ ಪ್ರತ್ಯೇಕಿಸಲು ಸಾಕಷ್ಟು ಪ್ರಯತ್ನಗಳಾಗುತ್ತಿವೆ. ಒಟ್ಟಿನಲ್ಲಿ ತಮಗೆ ಲಾಭದಾಯಕವಾಗುವಂತೆ ವಿಶ್ವವ್ಯಾಪಾರ ಸಂಸ್ಥೆಯನ್ನು ಬಗ್ಗಿಸಲು ಸಾಧ್ಯವಾಗದಿದ್ದರೆ ವಿವಿಧ ದೇಶಗಳೊಡನೆ ಬೇರೆ ಬೇರೆ ಕರಾರು ಮಾಡಿಕೊಳ್ಳುವುದು ನಿಸ್ಸಂಶಯ.

ಇದಲ್ಲದೆ ಅಮೆರಿಕಾ ಮತ್ತು ಯೂರೋಪ್ ದೇಶಗಳು ಹಲವಾರು ದೇಶಗಳೊಡನೆ ಮುಕ್ತ ವ್ಯಾಪಾರ ಒಪ್ಪಂದಗಳನ್ನು ಮಾಡಿಕೊಳ್ಳುತ್ತಿವೆ. ಮೆಕ್ಸಿಕೋ ಮತ್ತು ಕೆನಡಾ ದೇಶಗಳನ್ನು ಒಳಗೊಂಡ ಉತ್ತರ ಅಮೆರಿಕಾ ಮುಕ್ತ ವ್ಯಾಪಾರ ಏರ್ಪಾಟನ್ನು (NAFTA) ದಕ್ಷಿಣ ಅಮೆರಿಕಾಕ್ಕೆ ವಿಸ್ತರಿಸಲು ಅಮೆರಿಕಾ ಮಾಡಿದ ಪ್ರಯತ್ನ ಸಫಲವಾಗಲಿಲ್ಲ. ಆದರೂ NAFTA ಮಾದರಿಯಲ್ಲಿ ಲ್ಯಾಟಿನ್ ಅಮೆರಿಕಾ ದೇಶಗಳು ತಮ್ಮ ತಮ್ಮಲ್ಲಿ ಮುಕ್ತ ವ್ಯಾಪಾರಕ್ಕೆ ಒಪ್ಪಿಕೊಂಡಿವೆ (LAFTA); ಇದೇ ತರಹ ದಕ್ಷಿಣ ಪೂರ್ವ ದೇಶಗಳು, ಪೆಸಿಫಿಕ್ ಸಾಗರದ ಅಂಚಿನ ದೇಶಗಳು ಇತ್ಯಾದಿಗಳ ಹೊಂದಾಣಿಕೆಯಾಗುತ್ತಿದೆ. ಭಾರತವೂ ದಕ್ಷಿಣ ಏಷ್ಯಾದಲ್ಲಿರುವ ತನ್ನ ಗಡಿಯಾಚೆಯ ದೇಶಗಳು ಮತ್ತು ಥಾಯ್ಲೆಂಡ್, ಸಿಂಗಪುರ ಮೊದಲಾದ ದೇಶಗಳೊಡನೆ ಸಮಾಲೋಚಿಸುತ್ತಿದೆ. ಈ ತರಹ ಪ್ರಾದೇಶಿಕ ಒಪ್ಪಂದಗಳು ವಿಶ್ವವ್ಯಾಪಾರ ಸಂಸ್ಥೆಯ ಎಲ್ಲಾ ನಿಯಮಗಳಿಗೆ ಬದ್ಧವಾಗಿರಬೇಕೆಂಬ ನಿರ್ಬಂಧವಿಲ್ಲದ ಕಾರಣ ಪರಸ್ಪರ ಅನುಕೂಲಕ್ಕೆ ತಕ್ಕಂತೆ ರೂಪಿಸಲ್ಪಟ್ಟಿವೆ. ಇವು ಹೆಚ್ಚುತ್ತಾ ಬಂದಂತೆ ವಿಶ್ವವ್ಯಾಪಾರ ಸಂಸ್ಥೆಯ ಕಾರ್ಯವ್ಯಾಪ್ತಿ ಕಡಿಮೆಯಾಗುತ್ತದೆ. ಆ ಸಂಸ್ಥೆಯ ಮುಂದಿರುವ ಸಮಸ್ಯೆಗಳನ್ನು ಇನ್ನೆರಡು ವರ್ಷಗಳಲ್ಲಿ ಬಗೆಹರಿಸಲು – ಮುಖ್ಯವಾಗಿ ಜಾಗತೀಕರಣದಿಂದ ಅಭಿವೃದ್ಧಿನಿರತ ದೇಶಗಳ ಪ್ರಗತಿಯನ್ನು ಬಲಪಡಿಸಲು – ಎಲ್ಲರಿಗೂ ಉತ್ಸಾಹವಿರುವುದೆಂದು ಭಾವಿಸುವುದು ತಪ್ಪಾಗುತ್ತದೆ.

ಮೇಲಿನ ವಿಷಯಗಳನ್ನು ಗಮನಕ್ಕೆ ತಂದುಕೊಂಡಾಗ ಕೆಲವು ಮೂಲಭೂತ ಪ್ರಶ್ನೆಗಳು ಹುಟ್ಟುತ್ತವೆ. ೧೯೪೭ರಲ್ಲಿ ನಡೆದ ಗ್ಯಾಟ್ ಒಪ್ಪಂದ ಸರಕುಗಳ ವ್ಯಾಪಾರಕ್ಕೆ ಮೀಸಲಾಗಿತ್ತು, ಅಲ್ಲದೆ ಪ್ರಪಂಚದ ದೇಶಗಳಲ್ಲಿ ಪ್ರಗತಿ ಹೊಂದಬೇಕಾದವು ಬಹಳವಿದ್ದುದರಿಂದ ಅವುಗಳಿಗೆ ಅನ್ವಯಿಸುವ ವಿಶೇಷ ರಿಯಾಯಿತಿಗಳ ಬಗ್ಗೆ ಒಂದು ಅಧ್ಯಾಯವೇ ಇತ್ತು. ಎಲ್ಲಕ್ಕಿಂತ ಹೆಚ್ಚಾಗಿ – ಅದರಲ್ಲೂ ಅಮೆರಿಕಾ – ಎರಡನೇ ಮಹಾಯುದ್ಧದಲ್ಲಿ ಯಾವ ತರಹ ದಾಳಿಯನ್ನೂ ಅನುಭವಿಸದೆ ಇದ್ದುದರಿಂದ ಕೈಗಾರಿಕಾ ವಲಯದಲ್ಲಿ ಎಲ್ಲರಿಗಿಂತ ಬಹಳ ಮುಂದಿದ್ದುದಲ್ಲದೆ ಸರಕುಗಳ ವಿಕ್ರಯಕ್ಕೆ ಇತರ ಮಾರುಕಟ್ಟೆಗಳಿಗೆ ಪ್ರವೇಶ ದೊರಕಿಸಿಕೊಳ್ಳಲು ಉತ್ಸುಕವಾಗಿತ್ತು. ಬೇರೆ ದೇಶಗಳ ಪೈಪೋಟಿಯೂ ಅಷ್ಟೇನೂ ಇರಲಿಲ್ಲ. ಅದರಿಂದ ಗ್ಯಾಟ್ ೧೯೪೭ ಸರಳವಾಗಿದ್ದುದಲ್ಲದೆ ವ್ಯಾಪಾರಕ್ಕೆ ಸೀಮಿತವಾಗಿದ್ದು, ವಿಶ್ವ ವ್ಯಾಪಾರ ಸಂಸ್ಥೆಯ ಸ್ಥಾಪನೆ ಅನವಶ್ಯಕವಾಗಿತ್ತು. ಆದರೆ ಅಮೆರಿಕಾದ ಸ್ಥಿತಿ ೧೯೮೭ರ ವೇಳೆಗೆ ಬಹಳ ಬದಲಾಯಿಸಿತ್ತು. ಯೂರೋಪ್ ದೇಶಗಳಲ್ಲದೆ ಜಪಾನ್, ದಕ್ಷಿಣ ಕೊರಿಯಾ, ತೈವಾನ್ ಮುಂತಾದ ಮಿತ್ರ ದೇಶಗಳು ಕೈಗಾರಿಕಾ ಕ್ಷೇತ್ರದಲ್ಲಿ ಸಾಕಷ್ಟು ಮುಂದುವರೆದು ಅಮೆರಿಕಾದ ಪ್ರಾಬಲ್ಯವನ್ನು ಎದುರಿಸುವಷ್ಟು ಶಕ್ತವಾಗಿದ್ದವು. ಸೋವಿಯೆಟ್ ರಷ್ಯಾದ ಆರ್ಥಿಕ ಸ್ಥಿತಿ ಅಷ್ಟೇನೂ ಉತ್ತಮವಾಗಿಲ್ಲದಿದ್ದರೂ ಪ್ರಪಂಚದ ವ್ಯವಹಾರಗಳಲ್ಲಿ ಅಮೆರಿಕಾದ ಎದುರು ನಿಲ್ಲುವ ಶಕ್ತಿ ಹೊಂದಿದ್ದಿತು. ಚೀನಾ ಮತ್ತು ಯೂರೋಪ್ ದೇಶಗಳು ಯುದ್ಧಾನಂತರದ ಕಾಲದಲ್ಲಿ ಚೆನ್ನಾಗಿ ಚೇತರಿಸಿಕೊಂಡು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸಮರ್ಥರಾಗುತ್ತಿದ್ದರು. ಈ ಪರಿಸರದಲ್ಲಿ ಪ್ರಾರಂಭವಾದ (೧೯೮೭) ಉರುಗ್ವೇ ವ್ಯಾಪಾರ ಸಮ್ಮೇಳನದಲ್ಲಿ ಕೈಗಾರಿಕಾ ಸಾಮಾನುಗಳಲ್ಲದೆ ಕೃಷಿ, ಸೇವಾವೃತ್ತಿಗಳು, ಬೌದ್ಧಿಕ ಆಸ್ತಿ ಹಕ್ಕು, ಅಂತರರಾಷ್ಟ್ರೀಯ ಹೂಡಿಕೆ ಎಲ್ಲವನ್ನೂ ವಿವರವಾಗಿ ಚರ್ಚಿಸಿ ಎಲ್ಲರೂ ಪಾಲಿಸಬೇಕಾದ ನಿಯಮಗಳನ್ನು ನಿಶ್ಚಯಿಸಿ ಅವುಗಳ ಆಚರಣೆಯನ್ನು ನೋಡಿಕೊಳ್ಳಲು ವಿಶ್ವವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಬೇಕೆಂದು ಅಮೆರಿಕಾ ಮಾಡಿದ ಸಲಹೆಗೆ ಯೂರೋಪ್ ರಾಷ್ಟ್ರಗಳ ಜೊತೆ ಜಪಾನ್ ಒತ್ತಾಯಿಸಿತು. ಹಲವಾರು ವರ್ಷಗಳ ಚರ್ಚೆಗಳಲ್ಲಿ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರಗಳೆಲ್ಲಾ ಭಾಗವಹಿಸಿ ಎಲ್ಲರೂ ಒಪ್ಪಬಹುದಾದ ಸ್ಥೂಲ ನಿರ್ಣಯಗಳನ್ನು ೧೯೯೪ರಲ್ಲಿ ಮೊರಾಕ್ಕೋ ದೇಶದ ಮರ್ರಾಕ್ಕೇಷ್ ಸಭೆ ತೀರ್ಮಾನಿಸಿ, ವಿಶ್ವವ್ಯಾಪಾರ ಸಂಸ್ಥೆ ಅದರ ಮುಂದಿನ ವರ್ಷ ತನ್ನ ಕಾರ್ಯ ಪ್ರಾರಂಭಿಸಿತು. ಪರಿಣಾಮವಾಗಿ ಹಳೆಯ ಗ್ಯಾಟ್ ಒಪ್ಪಂದಕ್ಕೆ ಸೇರದಿದ್ದ ಅನೇಕ ವಿಷಯಗಳನ್ನು ವಿಶ್ವವ್ಯಾಪಾರ ಸಂಸ್ಥೆಯ ಮೇಲ್ವಿಚಾರಣೆಗೆ ಒಳಪಡಿಸಲು ಅಮೆರಿಕಾ ಮತ್ತಿತರ ದೇಶಗಳಿಗೆ ಸಾಧ್ಯವಾಯಿತು. ಅವರು ಒಪ್ಪಂದಗಳು ತಮಗೆ ಅನುಕೂಲವಾಗುವ ತರಹ ರಚಿಸುವುದರಲ್ಲಿ ಜಯಗಳಿಸಿ ಕೃಷಿ ಮತ್ತಿತರ ಉದ್ಯೋಗಗಳು, ಬೌದ್ಧಿಕ ಆಸ್ತಿಗಳ ನೋಂದಣಿ (patents registration) ಇತ್ಯಾದಿಗಳನ್ನೆಲ್ಲಾ ತಮ್ಮ ಉಪಯೋಗಕ್ಕೆ ತಕ್ಕಂತೆ ಇತರರ ಅನುಮತಿ ಪಡೆಯಲು ಶಕ್ತರಾದರು. ದುರದೃಷ್ಟವೇನೆಂದರೆ ಪ್ರಗತಿಪರ ರಾಷ್ಟ್ರಗಳು ನಿರ್ಣಯಗಳ ಕರಡುಗಳನ್ನು ಸಿದ್ಧಪಡಿಸುವಾಗ ಸಾಕಷ್ಟು ಶ್ರಮ ತೆಗೆದುಕೊಳ್ಳಲಿಲ್ಲ. ಜಿನೀವಾದಲ್ಲಿದ್ದ ಗ್ಯಾಟ್ ಸಂಸ್ಥೆಯ ಮುಖ್ಯ ನಿರ್ದೇಶಕ ಆರ್ಥರ್ ಡಂಕೆಲ್‌ರವರಿಗೆ ಬಿಟ್ಟಿದ್ದುದರಿಂದ ಈಗ ಸರ್ವಸಮ್ಮತವಾಗಿರುವ ಸ್ಥೂಲ ಒಪ್ಪಂದಗಳೆಲ್ಲಾ ತಮ್ಮ ಅನುಕೂಲಕ್ಕೆ ಬೇಕಾದಂತೆ ತಿರುಚಲು ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಿಗೆ ಸಾಧ್ಯವಾಗಿದೆ. ಅವರಿಗೆ ಪ್ರಮುಖವಾಗಿ ಬೇಕಾಗಿರುವುದು ಕೈಗಾರಿಕಾ ಮತ್ತು ಸೇವಾ ಉತ್ಪನ್ನಗಳನ್ನು ಮಾರಲು ಇರುವ ಅಡಚಣೆಗಳನ್ನೆಲ್ಲಾ ತೆಗೆದು ಹಾಕುವುದು ಮತ್ತು ತಮ್ಮ ಜನತೆಯ ಆದಾಯ ಮತ್ತು ಜೀವನಶೈಲಿಗಳಿಗೆ ಇತರರ ಸ್ಪರ್ಧೆಯಿಂದ ಹಾನಿಯಾಗದಂತೆ ನೋಡಿಕೊಳ್ಳುವುದು. ಈ ಉದ್ದೇಶಗಳನ್ನು ಸಾಧಿಸಿಕೊಳ್ಳಲು ಏನೇನು ಪ್ರಯತ್ನಗಳನ್ನು ಮಾಡಬಹುದೋ ಅವನ್ನೆಲ್ಲ ಉಪಯೋಗಿಸಿಕೊಳ್ಳಲು ಸಿದ್ಧರಿರುವರೆಂದು ದೋಹಾ ಮತ್ತಿತರ ಸಭೆಗಳಿಂದ ಖಚಿತವಾಗಿದೆ.

ಸನ್ನಿವೇಶ ಹೀಗಿರುವಾಗ ಭಾರತ, ಬ್ರೆಜಿಲ್ ಮೊದಲಾದ ದೇಶಗಳ ಪಾತ್ರವೇನಿರಬೇಕು ? ಮೊದಲನೆಯದಾಗಿ ಈಗ ಉಚ್ಛ್ರಾಯ ಸ್ಥಿತಿಯಲ್ಲಿರುವ ಚೀನಾ ಮತ್ತು ಕೃಷಿ ಮತ್ತು ಪಶುಸಂಗೋಪನೆಗಳು ತಮ್ಮ ಜೀವನಶೈಲಿಗಳಿಗೆ ಅವಶ್ಯಕವಾಗಿರುವ ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ್, ಅರ್ಜೆಂಟೀನಾ ತರಹ ರಾಷ್ಟ್ರಗಳನ್ನು ತಮ್ಮ ಜೊತೆಗೂಡಿಸಲು ಸತತವಾಗಿ ಪ್ರಯತ್ನಿಸಬೇಕು. ಎರಡನೆಯದಾಗಿ ತಮ್ಮಷ್ಟು ಮುಂದುವರಿಯದೆ ಇರುವ ಆಫ್ರಿಕಾ ದೇಶಗಳನ್ನು ಅಮೆರಿಕಾ ಸೆಳೆದುಕೊಳ್ಳುವುದನ್ನು ತಡೆಯಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಬೇರೆ ಬೇರೆ ಆಮಿಷಗಳನ್ನು ಒಡ್ಡಿ ಪಾಶ್ಚಾತ್ಯ ದೇಶಗಳು ತಮ್ಮ ಬಲೆಗೆ ಹಾಕಿಕೊಳ್ಳುವುದನ್ನು ಎದುರಿಸಬೇಕು. ಇಲ್ಲದಿದ್ದರೆ ವಿಶ್ವವ್ಯಾಪಾರ ಸಂಸ್ಥೆಯ ಕಾರ್ಯಕಲಾಪಗಳು ಪ್ರಗತಿ ಹೊಂದಲು ಶ್ರಮಿಸುತ್ತಿರುವ ನೂರಾರು ದೇಶಗಳಿಗೆ ಸಹಾಯವಾಗುವುದಿಲ್ಲ. ಹೂಡಿಕೆ, ಬ್ಯಾಂಕಿಂಗ್ ಮತ್ತು ವಿಮಾ ಸಂಬಂಧ ವಿಷಯಗಳಲ್ಲಿ ಜಾಗತೀಕರಣದಿಂದ ಆಗಬಹುದಾದ ಉಪಯೋಗಗಳನ್ನು ಮಾತ್ರ ಗಣನೆಗೆ ತಂದುಕೊಳ್ಳುವುದು ತಪ್ಪಾಗುವುದು. ಆರ್ಥಿಕ ಮತ್ತು ರಾಜಕೀಯವಾಗಿ ಪಾಶ್ಚಿಮಾತ್ಯ ದೇಶಗಳು ಇತರ ರಾಷ್ಟ್ರಗಳ ಸ್ವಾತಂತ್ರ್ಯವನ್ನು ಕಸಿದುಕೊಂಡು ಪ್ರಪಂಚವನ್ನೆಲ್ಲಾ ತಮ್ಮ ವಸಾಹತುಗಳಾಗುವಂತೆ ಮಾಡುವುದು ನಿಸ್ಸಂಕೋಚ.

### References


1. *MVIRDC* : (World Trade Centre) : *GATT Agreements : Final Text of Uruguay Round* : 1994.
   Academy of Business Studies, 24/4866 Shedtara House, Ansari Road, New Delhi - 110 002. pp xxxvii + 256
2. Martin Khor : "Services Agreement : Attempt to Alter Structure". *Economic and Political Weekly,* (Mumbai). Vol. XL No. 39. pp 4209-4211 (September 24, 2005)
3. Bhagirath Lal Das : "Bumpy Road to Hong Kong" *Economic and Political Weekly.* (Mumbai) Vol. XL No. 42 pp 4499-4502. October 15, 2005.
4. Alan Beattie : "EU places offer on Farm Trade". *Business Standard* (Bangalore edition) October 12, 2005. p.8.



ಕೆ. ಎಸ್. ಕೃಷ್ಣಸ್ವಾಮಿ
ಸಿ-೬೦೧, ಆದರ್ಶ ಕಾಂಪ್ಲೆಕ್ಸ್, ೪೭ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಜಯನಗರ ೮ನೇ ಬ್ಲಾಕ್, ಬೆಂಗಳೂರು-೫೬೦ ೦೮೨



# THE BOOK PARADISE

(Publishers, Distributors, Importers)

13/11, Subhash Nagar, Near D.S.D. College, Gurgaon (Haryana)

Phone : 4062330, 4067543   e-mail : bookparadise@hotmail.com




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 90




Rs. 325

*Distributors of*
*All Kinds of Children's Books*
*Fiction, Non-fiction, Cooking, Fashion, Furniture*
*Dictionaries and all other General Books*

ಭಾಷಾವಾರು ಪ್ರಾಂತ್ಯ ವಿಂಗಡನೆಯಾಗಿ ಐವತ್ತು ಕಳೆಯಿತು. ಕಳೆದ ಐವತ್ತು ವರ್ಷಗಳಲ್ಲಿ ಕರ್ನಾಟಕವು ಕ್ರಮಿಸಿದ ಶಿಕ್ಷಣದ ಹಾದಿ ಯಾವುದು? ಅದೀಗ ಉತ್ತುಂಗದಲ್ಲಿದೆಯೇ? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ.

ಕಳೆದ ಅರ್ಧ ಶತಮಾನದಲ್ಲಿ ಕನ್ನಡ ನಾಡಿನ ಶಿಕ್ಷಣದಲ್ಲಿ ಏನೊಂದೂ ಬದಲಾವಣೆ ಆಗಿಲ್ಲ, ಅದು ನಿಂತ ನೀರಿನಂತಿದೆ ಎಂದರೆ ಆತ್ಮವಂಚನೆಯ ಮಾತಾದೀತು. ಭಾರಿ ಶೈಕ್ಷಣಿಕ ಪ್ರಗತಿಯಾಗಿದೆ; ಶಿಕ್ಷಣದ ವಿಚಾರದಲ್ಲಿ ಕರ್ನಾಟಕ ಮುಂಚೂಣಿಯಲ್ಲಿದೆ ಎಂಬುದು ಉತ್ಪ್ರೇಕ್ಷೆಯಾದೀತು. ಈ ಐವತ್ತು ವರ್ಷಗಳಲ್ಲಿ ಶಿಕ್ಷಣರಂಗದಲ್ಲಿ ವಿಶ್ವವ್ಯಾಪಿ ಬದಲಾವಣೆಗಳಾಗಿವೆ. ಕಳೆದ ಒಂದು ದಶಕದಲ್ಲಂತೂ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣದ ದೆಸೆಯಿಂದಾಗಿ ದ್ರುತಗತಿಯಲ್ಲಿ ಶೈಕ್ಷಣಿಕ ಪರಿವರ್ತನೆಗಳಾಗಿವೆ. ಇದರ ಪ್ರತಿಫಲನ ಸಹಜವಾಗಿ ಕರ್ನಾಟಕದ ಶಿಕ್ಷಣರಂಗದಲ್ಲೂ ಆಗಿದೆ. ಪ್ರಾಥಮಿಕ, ಪ್ರೌಢ, ಉನ್ನತ ಹಾಗೂ ವೃತ್ತಿಪರ ಶಿಕ್ಷಣರಂಗಗಳಲ್ಲಿ ರಾಚನಿಕ ಸ್ವರೂಪದಲ್ಲಿ ಬದಲಾವಣೆಗಳಾಗಿವೆಯೇ ಹೊರತು ಮೂಲವಿಗ್ರಹ ಇದ್ದ ಹಾಗೆಯೇ ಇದೆ ಅನ್ನಿಸುತ್ತದೆ.

ಐವತ್ತು ವರ್ಷಗಳಾದರೂ ಕರ್ನಾಟಕದಲ್ಲಿನ ಶಾಲಾ ಶಿಕ್ಷಣದಲ್ಲಿ ನಮ್ಮ ಸರಕಾರಗಳ ಭಾಷಾ ನೀತಿ ಏನು ಎಂದು ನಾವು ದೈನ್ಯದಿಂದ ಆಕ್ರೋಶದಿಂದ ಕೇಳಬೇಕಾಗಿಬಂದಿದೆ. ನಮ್ಮ ಸರಕಾರಗಳ ದಿವಾಳಿಕೋರನೀತಿ ಯಾವ ಹಂತ ಮುಟ್ಟಿದೆ ಎಂದರೆ ಕರ್ನಾಟಕದಲ್ಲಿ ಒಂದನೆಯ ತರಗತಿಯಿಂದ ಎಲ್ಲ ಮಕ್ಕಳೂ ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕು ಎಂದು ಆಜ್ಞೆ ಹೊರಡಿಸುವ ಬದಲು ಸರಕಾರಿ ಶಾಲೆಗಳಲ್ಲಿ ಒಂದನೆಯ ತರಗತಿಯಿಂದ ಕಡ್ಡಾಯ ಇಂಗ್ಲಿಷ್ ಕಲಿಸುವ ಬಗ್ಗೆ ಆಜ್ಞೆ ಹೊರಡಿಸುವ ಹುನ್ನಾರ ನಡೆಯುತ್ತಿದೆ. ಹೀಗೆ ಮಾಡುವ ಮೂಲಕ ದುರ್ಬಲವಾದ ಕನ್ನಡ ಹಂಬಿಗೆ ಬಲವಾದ ಇಂಗ್ಲಿಷ್‌ನ ಹಂದರ ಒದಗಿಸುವ ಭವ್ಯ ಯೋಚನೆ ಸಾಗಿದೆ! ಕವಿಪುಂಗವ ಕುವೆಂಪು ಅವರು ವಿಶ್ವವಿದ್ಯಾನಿಲಯ ಹಂತದ ಶಿಕ್ಷಣ ಕನ್ನಡ ಮಾಧ್ಯಮದಲ್ಲಾಗಬೇಕು ಎಂದು ಬಯಸಿ ಮೈಸೂರು ವಿಶ್ವವಿದ್ಯಾನಿಲಯದ



# ಕರ್ನಾಟಕ ಕ್ರಮಿಸಿದ ಶಿಕ್ಷಣದ ಹಾದಿ

ಡಾ|| ಮಹಾಬಲೇಶ್ವರ ರಾವ್

ಪ್ರಸಾರಾಂಗದ ಮೂಲಕ ಕನ್ನಡದಲ್ಲಿ ವೈವಿಧ್ಯಮಯ ಗ್ರಂಥಗಳನ್ನು ನಾಲ್ಕು ದಶಕಗಳ ಹಿಂದೆ ಪ್ರಕಟಿಸಿದರು. ಆದರೆ ಈ ಐವತ್ತು ವರ್ಷಗಳಲ್ಲಿ ಕನ್ನಡ ಜನತೆಯ ಮೂಲಕ ಆಯ್ಕೆಯಾಗಿ ಬಂದ ಸರಕಾರಗಳು ಕರ್ನಾಟಕದ ಶಿಕ್ಷಣರಂಗದಲ್ಲಿ ಕನ್ನಡ ಮಾಧ್ಯಮಕ್ಕೆ ಆದ್ಯತೆ ನೀಡುವ ದೃಢಸಂಕಲ್ಪ ಮಾಡಿದ್ದೇ ಇಲ್ಲ. ಕನಿಷ್ಠ ಪ್ರೌಢ ಶಿಕ್ಷಣದವರೆಗಾದರೂ ಕನ್ನಡ ಮಾಧ್ಯಮ ಕಡ್ಡಾಯ ಮಾಡಬಹುದಿತ್ತು. ಹಾಗೆ ಮಾಡುವುದಕ್ಕೆ ಬದಲಾಗಿ ಕಂಡು ಕೇಳದವರಿಗೆಲ್ಲ ಸಿಬಿಎಸ್‌ಇ, ಐಸಿಎಸ್‌ಇ ಶಾಲೆಗಳನ್ನು ತೆರೆಯಲು ಉದಾರ ಪರವಾನಗಿ ನೀಡಿದ್ದರ ದೆಸೆಯಿಂದಾಗಿ ಇಂದು ಕನ್ನಡ ಮಾಧ್ಯಮ ಹಾಗೂ ಸರಕಾರಿ ಶಾಲೆಗಳನ್ನು ಕೇಳುವವರಿಲ್ಲ. ಹೀಗಾಗಿಯೇ ಈಗ ಇಂಗ್ಲಿಷ್ ಕಲಿಕೆಯ ಮೂಲಕ ಕನ್ನಡ ಉಳಿಸುವ ಇತಿಹಾಸದ ಕ್ರೂರ ವ್ಯಂಗ್ಯ ಕಣ್ಮುಂದಿದೆ.

ಈ ಪರಿಸ್ಥಿತಿಗೆ ಪೂರಕವಾದ ಆಡಳಿತ ಸ್ಥಿತಿಯೂ ಹಿನ್ನೆಲೆಯಾಗಿ ಬೆಳೆದು ಬಂದಿದೆ. ಸರಕಾರಿ, ಖಾಸಗಿ ಅನುದಾನಿತ ಹಾಗೂ ಅನುದಾನರಹಿತ ಸಂಸ್ಥೆಗಳು ನಮ್ಮಲ್ಲಿವೆ. ಒಂದು ಕಾಲಕ್ಕೆ ಅನುದಾನರಹಿತ ಸಂಸ್ಥೆಗಳ ಪ್ರಮಾಣ ನಮ್ಮಲ್ಲಿ ಕಡಿಮೆ ಇದ್ದಿತು. ಸರಕಾರ ಖಾಸಗಿ ನೆಲೆಯ ಶಿಕ್ಷಣ ಸಂಸ್ಥೆಗಳಿಗೆ ಅನುದಾನದ ಸೌಲಭ್ಯ ಒದಗಿಸಿ ಶಿಕ್ಷಕರಿಗೆ ಸೇವಾಭದ್ರತೆ ನೀಡುತ್ತಿತ್ತು. ಆದರೆ ಸರಕಾರಗಳ ಬಳಿ ಶಿಕ್ಷಣಾಭಿವೃದ್ಧಿಗಾಗಿ ಹಣಕಾಸಿಲ್ಲ ಎಂಬ ಕಾರಣಕ್ಕೆ ಅನುದಾನರಹಿತ ಸಂಸ್ಥೆಗಳೇ ಒಂದು ಪ್ರಬಲ ಲಾಬಿಯಾಗಿ ರೂಪುಗೊಂಡು ಸರಕಾರ, ಕೋರ್ಟು ಹಾಗೂ ಜನಾಭಿಪ್ರಾಯವನ್ನು ರೂಪಿಸುವ, ನಿಯಂತ್ರಿಸುವ, ತಿದ್ದುವ

ಐವತ್ತು ವರ್ಷಗಳಾದರೂ ಕರ್ನಾಟಕದಲ್ಲಿನ ಶಾಲಾ ಶಿಕ್ಷಣದಲ್ಲಿ ನಮ್ಮ ಸರಕಾರಗಳ ಭಾಷಾ ನೀತಿ ಏನು ಎಂದು ನಾವು ದೈನ್ಯದಿಂದ ಆಕ್ರೋಶದಿಂದ ಕೇಳಬೇಕಾಗಿಬಂದಿದೆ. ನಮ್ಮ ಸರಕಾರಗಳ ದಿವಾಳಿಕೋರ ನೀತಿ ಯಾವ ಹಂತ ಮುಟ್ಟಿದೆ ಎಂದರೆ ಕರ್ನಾಟಕದಲ್ಲಿ ಒಂದನೆಯ ತರಗತಿಯಿಂದ ಎಲ್ಲ ಮಕ್ಕಳೂ ಕನ್ನಡವನ್ನು ಕಡ್ಡಾಯವಾಗಿ ಕಲಿಯಲೇಬೇಕು ಎಂದು ಆಜ್ಞೆ ಹೊರಡಿಸುವ ಬದಲು ಸರಕಾರಿ ಶಾಲೆಗಳಲ್ಲಿ ಒಂದನೆಯ ತರಗತಿಯಿಂದ ಕಡ್ಡಾಯ ಇಂಗ್ಲಿಷ್ ಕಲಿಸುವ ಬಗ್ಗೆ ಆಜ್ಞೆ ಹೊರಡಿಸುವ ಹುನ್ನಾರ ನಡೆಯುತ್ತಿದೆ. ಹೀಗೆ ಮಾಡುವ ಮೂಲಕ ದುರ್ಬಲವಾದ ಕನ್ನಡ ಹಂಬಿಗೆ ಬಲವಾದ ಇಂಗ್ಲಿಷ್‌ನ ಹಂದರ ಒದಗಿಸುವ ಭವ್ಯ ಯೋಚನೆ ಸಾಗಿದೆ!

ದುಷ್ಟಶಕ್ತಿಯಾಗಿ ಮಾರ್ಪಟ್ಟಿರುವುದು ದುರಂತದ ಸಂಗತಿ. ಈ ನಡುವೆ ಸರಕಾರ ತಾನು ಸ್ಥಾಪಿಸಿದ ಸಂಸ್ಥೆಗಳ ಸುಧಾರಣೆಗೆ ೧೯೮೬ರವರೆಗೂ ವಿಶೇಷ ಮುತುವರ್ಜಿ ವಹಿಸಿರಲಿಲ್ಲ. ಆದರೆ ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬-೯೨ ಘೋಷಣೆ ಹಾಗೂ ಅನುಷ್ಠಾನದಿಂದಾಗಿ ವಿವಿಧ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಉದಾರವಾಗಿ ಹಣಕಾಸು ವಿವಿಧ ರೂಪಗಳಲ್ಲಿ ಒದಗಿಬರುತ್ತಿರುವುದರಿಂದಾಗಿ ಸರಕಾರಿ ಶಾಲಾ ಕಾಲೇಜುಗಳ ಭೌತಿಕ ಸ್ವರೂಪ, ಸೌಲಭ್ಯ ಬದಲಾಗುತ್ತಿದೆ. ಶಿಕ್ಷಕರ ನೇಮಕಾತಿಗಳು ನಡೆಯುತ್ತಿವೆ. ಆದರೆ, ೨೦೧೦ರ ಬಳಿಕ ಈ ಹಣಕಾಸಿನ ಹರಿವು ಸ್ಥಗಿತಗೊಂಡ ಬಳಿಕ ಈ ನಾಡಿನಲ್ಲಿ ಪ್ರಾಥಮಿಕ ಶಿಕ್ಷಣದ ಸುಧಾರಣಾ ಕಾರ್ಯಗಳಿಗೆ ಯಾವ ಗತಿ ಒದಗಬಹುದು ?

ಇಲ್ಲಿ ಮುಖ್ಯವಾದ ಸಂಗತಿ ಎಂದರೆ ಕಳೆದ ಕೆಲವು ವರ್ಷಗಳಿಂದೀಚೆಗೆ ಅನುದಾನಿತ ಶಿಕ್ಷಣ ಸಂಸ್ಥೆಗಳಲ್ಲಿ ಸರಕಾರ ದುಡ್ಡಿಲ್ಲ ಎಂಬ ಕಾರಣಕ್ಕೆ ನೇಮಕಾತಿ ಸ್ಥಗಿತಗೊಳಿಸಿದೆ. ಇದರ ಪರಿಣಾಮವಾಗಿ ಅನುದಾನಿತ ಶಿಕ್ಷಣ ಸಂಸ್ಥೆಗಳು ಬಹಳ ಶೋಚನೀಯ ಸ್ಥಿತಿಯಲ್ಲಿವೆ. ಇಂಥ ಸಂಸ್ಥೆಗಳು ಮುಚ್ಚುಗಡೆಯ ಅಪಾಯಕ್ಕೆ ಸಿಲುಕಿವೆ. ಈ ನಡುವೆ ಈ ದುರಂತಕ್ಕೆ ಸರಕಾರದ ಅನುದಾನಿತ ಹಾಗೂ ಸರಕಾರಿ ಎಂಬ ತಾರತಮ್ಯ ನೀತಿ ಆಜ್ಯವೆರೆದು ಅತೃಪ್ತಿ ಅಸಮಾಧಾನಗಳಿಗೆ ಕಾರಣವಾಗಿದೆ.

ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಕ್ಷೇತ್ರದಲ್ಲಿ ಏನೊಂದೂ ಬದಲಾವಣೆಯಾಗಿಲ್ಲ ಎನ್ನುವುದು ತಪ್ಪಾಗುತ್ತದೆ. ಸಾಮರ್ಥ್ಯಾಧಾರಿತ ಬೋಧನೆ, ಕಲಿಕೆಯ ಕನಿಷ್ಠ ಅಥವಾ ಅವಶ್ಯಕ ಮಟ್ಟಗಳು, ಜಿಲ್ಲಾ ಪ್ರಾಥಮಿಕ ಶಿಕ್ಷಣ ಯೋಜನೆ, ಕರಿಹಲಗೆ ಕಾರ್ಯಾಚರಣೆ, ಅಕ್ಷರ ದಾಸೋಹ, ಬಾ ಮರಳಿ ಶಾಲೆಗೆ, ಚಿಣ್ಣರ ಅಂಗಳ, ಕಲಿಕಾ ಖಾತ್ರಿ ಯೋಜನೆ, ಚೈತನ್ಯ, ಏಳನೆಯ ತರಗತಿ ಪಬ್ಲಿಕ್ ಪರೀಕ್ಷೆ ರದ್ದು, ಶಾಲಾಮೌಲ್ಯ ಮಾಪನ ವ್ಯವಸ್ಥೆ, ತ್ರೈಮಾಸಿಕ ಶಿಕ್ಷಣ ವ್ಯವಸ್ಥೆ, ಅಂಕಗಳ ಬದಲಿಗೆ ಗ್ರೇಡಿಂಗ್, ಎಸ್‌ಎಸ್‌ಎಲ್‌ಸಿ ಪರೀಕ್ಷೆಗಳಲ್ಲಿ ಬಹ್ವಂಶ ಆಯ್ಕೆ ಪ್ರಶ್ನೆಗಳಿಗೆ ಪ್ರಾಧಾನ್ಯ, ರ್‍ಯಾಂಕ್ ಪದ್ಧತಿ ಕೈ ಬಿಡುವಿಕೆ, ಪ್ರತಿಭಾ ಕಾರಂಜಿ ಇತ್ಯಾದಿಯಾಗಿ ನೂರೆಂಟು ಬದಲಾವಣೆಗಳಾಗಿವೆ. ಕಳೆದ ಒಂದು ದಶಕದಿಂದ ಈಚೆಗಂತೂ ಯದ್ವಾತದ್ವಾ ಬದಲಾವಣೆಗಳಾಗುತ್ತಿವೆ. ಈ ಬದಲಾವಣೆಗಳ ಹಿನ್ನೆಲೆ, ಉದ್ದೇಶಗಳನ್ನು ಅರಿಯುವುದೇ ಕಷ್ಟ ಸಾಧ್ಯವಾಗಿದೆ.



ಬದಲಾವಣೆಗಳಾಗುವುದು ತಪ್ಪಲ್ಲ. ಶಿಕ್ಷಣ ಚಲನಶೀಲವಾಗಬೇಕೆಂದು ಬಯಸುವವರು ಈ ಬದಲಾವಣೆಗಳನ್ನು ಸ್ವಾಗತಿಸಿಯಾರು. ಆದರೆ ಅನೇಕ ಶೈಕ್ಷಣಿಕ ಬದಲಾವಣೆಗಳಿಗೆ ಪ್ರಗತಿಪರ ಶಿಕ್ಷಣ ಚಿಂತಕರೇ ವಿರೋಧ-ಕಟುಟೀಕೆ ವ್ಯಕ್ತಪಡಿಸುತ್ತಿದ್ದಾರೆ. ''ಬದಲಾವಣೆ ಬೇಕು ಎನ್ನುವವರೇ ಬದಲಾವಣೆಗಳಾದಾಗ ಹಳೆಯ ಪದ್ಧತಿಗೇ ಜೋತುಬಿದ್ದು ವಿರೋಧಿಸುವುದೇಕೆ ?'' ಎಂದು ಕೆಲವರು ಪ್ರಶ್ನಿಸುತ್ತಿದ್ದಾರೆ. ಎಲ್ಲ ಬದಲಾವಣೆಗಳು ಸ್ವಾಗತಾರ್ಹವಲ್ಲ, ಸ್ವೀಕಾರಾರ್ಹವಲ್ಲ. ಕಣ್ಮುಚ್ಚಿಕೊಂಡು ಬದಲಾವಣೆಗಳನ್ನು ಬದಲಾವಣೆಗಾಗಿ ಸ್ವಾಗತಿಸುವುದು ಹುಂಬತನ. ಶಿಕ್ಷಣ ರಂಗದಲ್ಲಿ ಯಾವುದೇ ಬದಲಾವಣೆ ಶಿಕ್ಷಕರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದೆ ಮಾಡುವಂಥದ್ದಾಗಬಾರದು, ಮೇಲಿನಿಂದ ಕೆಳಕ್ಕೆ ಹೇರಿದ್ದಾಗಬಾರದು. ನಮ್ಮ ಒಟ್ಟು ಶಿಕ್ಷಣ ವ್ಯವಸ್ಥೆ ವಿಕೇಂದ್ರೀಕರಣ, ಸೂಕ್ಷ್ಮಯೋಜನೆ, ಸಬಲೀಕರಣ, ಸ್ಥಳೀಯ ಯೋಜನೆ ಇತ್ಯಾದಿ ಘೋಷಣೆಗಳನ್ನು ಧಾರಾಳ ಬಳಸುತ್ತದೆ; ಆದರೆ ಪ್ರತಿಯೊಂದು ಸಣ್ಣ ವಿಷಯವೂ ಮೇಲಿನಿಂದ ಹೇರಲ್ಪಟ್ಟದ್ದಾಗಿರುತ್ತದೆ. ಯಾವುದೇ ಬದಲಾವಣೆ ಮಾಡುವ ಸಂದರ್ಭದಲ್ಲಿ ಶಿಕ್ಷಕರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರೊಡನೆ ಚರ್ಚಿಸಿ, ಅವರಿಗೆ ವ್ಯಾಪಕವೂ ತಲಸ್ಪರ್ಶಿಯೂ ಆದ ತರಬೇತಿ ನೀಡಿದಾಗ ಮಾತ್ರ ಶೈಕ್ಷಣಿಕ ಪ್ರಯೋಗಗಳು ಯಶಸ್ವಿಯಾಗುತ್ತವೆ. ಆದರೆ ಕ್ಷೇತ್ರದಲ್ಲಿ ನಿತ್ಯವೂ ದುಡಿಯುವ ಶಿಕ್ಷಕರ ಅಭಿಪ್ರಾಯಗಳನ್ನು ಪರಿಗಣಿಸುವ ಮತ್ತು ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವ ವ್ಯವಸ್ಥೆ ನಮ್ಮಲ್ಲಿಲ್ಲ. ಬದಲಾಗಿ ಅನುದಾನರಹಿತ ಹಾಗೂ ಅನುದಾನಿತ ಕ್ಷೇತ್ರದಲ್ಲಿ ಇಂದು ದುಡಿಯುತ್ತಿರುವ ಶಿಕ್ಷಕರು ಎದುರಿಸುತ್ತಿರುವ ಸೇವಾ ಭದ್ರತೆ, ವೇತನ ಇತ್ಯಾದಿಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಚಾಪೆಯ ಕೆಳಗೆ ತೂರಿ ಬದ್ಧತೆ, ದಕ್ಷತೆ ಇತ್ಯಾದಿಯಾಗಿ ಉಪದೇಶಿಸುವ ಪ್ರವೃತ್ತಿ ದಿನೇ ದಿನೇ ಹೆಚ್ಚುತ್ತಿದೆ.

ಪದವಿಪೂರ್ವ ಹಂತದ ಕೊನೆಯಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆ ಜಾರಿಗೆ ಬಂದುದರ ಸಾಧಕ-ಬಾಧಕಗಳ ಬಗ್ಗೆ ವಿವಿಧ ಬಗೆಗಳಲ್ಲಿ ಚರ್ಚಿಸಬಹುದು. ಈ ಪರೀಕ್ಷೆಯಿಂದಾಗಿ ಸರಕಾರಕ್ಕೆ ಪದವಿಪೂರ್ವ ಪರೀಕ್ಷೆ ಬಗ್ಗೆ ವಿಶ್ವಾಸವಿಲ್ಲವೇ ಎಂದು ಪ್ರಶ್ನಿಸುವುದಕ್ಕೂ ಕಾರಣವಾಗಿದೆ. ಸಾಮಾನ್ಯ ಪ್ರವೇಶ ಪರೀಕ್ಷೆ ವ್ಯವಸ್ಥೆಯಿಂದಾಗಿ ಗ್ರಾಮಾಂತರ ಪ್ರದೇಶದ ಪ್ರತಿಭಾವಂತ ವಿದ್ಯಾರ್ಥಿಗಳನೇಕರಿಗೆ ವೈದ್ಯಕೀಯ ಹಾಗೂ ತಂತ್ರಜ್ಞಾನದ ಕೋರ್ಸುಗಳಲ್ಲಿ ಆಯ್ಕೆ ಸಾಧ್ಯವಾಗಿದೆ. ಆರ್ಥಿಕವಾಗಿ ದುರ್ಬಲರಾದವರು ಕೂಡ ಸರಕಾರಿ ಕೋಟಾದಲ್ಲಿ ಸ್ಥಾನ ಪಡೆದು ವಿದ್ಯಾಭ್ಯಾಸ ಮುಂದುವರಿಸಲು ಸಾಧ್ಯವಾಗಿದೆ ಎಂಬುದು ಪ್ರಗತಿದಾಯಕ ಸಂಗತಿ. ಆದರೆ ಇದೇ ವೇಳೆಗೆ ಪದವಿಪೂರ್ವ ಹಂತದ ವಿಜ್ಞಾನದ ವಿದ್ಯಾರ್ಥಿಗಳ ಮೇಲೆ ಇದು ಇನ್ನಿಲ್ಲದ ಹೊರೆ ಹೊರಿಸಿದೆ. ತಂದೆ ತಾಯಿಗಳ ಮೇಲಿನ ಒತ್ತಡವೂ ಹೆಚ್ಚಿದೆ. ಪ್ರವೇಶ ಪರೀಕ್ಷೆ ನೆಪವಾಗಿಟ್ಟುಕೊಂಡು ವಿದ್ಯಾರ್ಥಿಗಳು ಉಳಿದೆಲ್ಲವನ್ನೂ ನಿರ್ಲಕ್ಷಿಸುವ ಜಾಯಮಾನ ಬೆಳೆದಿದೆ; ಮಾತ್ರವಲ್ಲದೆ, ಆರ್ಥಿಕ ಅಸಮತೋಲನ, ವ್ಯಾಪಾರೀಕರಣಕ್ಕೂ ಇದು ಅವಕಾಶ ಮಾಡಿಕೊಟ್ಟಿದೆ. ಪ್ರವೇಶ ಪರೀಕ್ಷೆಯಲ್ಲಿ ಜಯಭೇರಿ ಬಾರಿಸಲೇಬೇಕಾದ ಅನಿವಾರ್ಯತೆಯ ದೆಸೆಯಿಂದಾಗಿ ಕೋಚಿಂಗ್ ಸೆಂಟರ್‌ಗಳ ಹಾವಳಿ ಮಿತಿಮೀರಿದೆ. ವಿಜ್ಞಾನದ ಉಪನ್ಯಾಸಕರು ತರಗತಿ ಪಾಠಗಳಿಗಿಂತಲೂ ಹಣಮಾಡುವ ಕೋಚಿಂಗ್ ಸೆಂಟರ್‌ಗಳನ್ನು ನಡೆಸುವ ಅಪಾಯಕಾರಿ ಪ್ರವೃತ್ತಿ ಪ್ರಬಲವಾಗಿದೆ. ಖಾಸಗಿ ಆಡಳಿತ ಮಂಡಳಿಗಳು, ಶಾಸಕರು, ಮಂತ್ರಿಗಳು ಶಾಮೀಲಾಗಿ ವೃತ್ತಿಪರ ಸಂಸ್ಥೆಗಳನ್ನು ನಡೆಸುತ್ತಿದ್ದು ಸುಪ್ರೀಂ ಕೋರ್ಟಿನ ಇತ್ತೀಚಿನ ತೀರ್ಪಿನ ದೆಸೆಯಿಂದಾಗಿ ಸಾಮಾಜಿಕ ನ್ಯಾಯ ಮೂರಾಬಟ್ಟೆಯಾಗಿದೆ. ಯಾವ ಉದ್ದೇಶಕ್ಕಾಗಿ ಸಾಮಾನ್ಯ ಪ್ರವೇಶ ಪರೀಕ್ಷೆ ಜಾರಿಗೆ ಬಂದಿತೋ ಆ ಉದ್ದೇಶವೇ ಈಗ ಗಾಳಿಪಾಲಾಗಿದೆ. ಕೇಂದ್ರೀಯ ಶಾಸನವೇ ಇದಕ್ಕೆ ಸೂಕ್ತ ಪರಿಹಾರವೆಂದು ಈಗ ನಿರೀಕ್ಷಿಸಲಾಗುತ್ತಿದೆ.

ಶಿಕ್ಷಕರ ವೃತ್ತಿಪರ ಶಿಕ್ಷಣದಲ್ಲೂ ಈಗ ಸರಕಾರಿ ಹಾಗೂ ಆಡಳಿತ ಮಂಡಳಿ ಕೋಟಾ ಮತ್ತು ಸಾಮಾನ್ಯ ಪ್ರವೇಶ ಪರೀಕ್ಷೆ ಜಾರಿ ದೆಸೆಯಿಂದಾಗಿ ಕಳೆದ ಅನೇಕ ವರ್ಷಗಳಲ್ಲಿ ಬಿ.ಎಡ್., ಡಿ.ಎಡ್. ಹಂತದಲ್ಲಿ ಪ್ರತಿಭಾವಂತ ವಿದ್ಯಾರ್ಥಿ ಶಿಕ್ಷಕರನ್ನು ಕಾಣಬಹುದಾಗಿದೆ. ಆದರೆ ವಿದ್ಯಾರ್ಥಿಗಳ ಹಂಚಿಕೆಯ ವಿಷಯದಲ್ಲಿ ತೀರ ತೊಂದರೆಗಳಾಗುತ್ತಿವೆ. ಬಡಕುಟುಂಬದಿಂದ ಬಂದ ವಿದ್ಯಾರ್ಥಿಗಳು ದೂರದ ಊರುಗಳಿಗೆ ಹೋಗಿ ಸಾವಿರಾರು ರೂಪಾಯಿ ವೆಚ್ಚಮಾಡಿ ಕಲಿಯಬೇಕಾದ ದುಃಸ್ಥಿತಿ ಒದಗಿದೆ. ಈ ಬಗ್ಗೆ ಸರಕಾರ ಯಾವುದೇ ರೀತಿಯ ಚಿಂತನ ನಡೆಸಿದಂತೆ ಕಂಡುಬರುತ್ತಿಲ್ಲ; ಮಾತ್ರವಲ್ಲದೆ ಸಾರ್ವಜನಿಕ ಅಭಿಪ್ರಾಯ ಕೂಡಾ ಮೂಡಿಬಂದಿಲ್ಲ. ಈ ನಡುವೆ ಉದಾರೀಕರಣದ ದೆಸೆಯಿಂದಾಗಿ ಡಿ.ಎಡ್., ಹಾಗೂ ಬಿ.ಎಡ್. ಕಾಲೇಜುಗಳು ಕಳೆದ ಒಂದು ವರ್ಷದಲ್ಲಿ ನಾಯಿಕೊಡೆಗಳಂತೆ ತಲೆಯೆತ್ತಿ ಖಾಸಗಿ ಶಿಕ್ಷಣ ಸಂಸ್ಥೆಗಳು ಹಣ ಕೊಳ್ಳೆಹೊಡೆಯಲು ಪೈಪೋಟಿಗಿಳಿದಿವೆ. ಮೇಲಾಗಿ ಉತ್ತಮ ಫಲಿತಾಂಶಕ್ಕಾಗಿ ಎಲ್ಲ ಬಗೆಯ ಅಕ್ರಮಗಳನ್ನು ನಡೆಸಲು ಮುಂದಾಗಿವೆ. ಬೇಡಿಕೆಗಳಿಗಿಂತಲೂ ಹತ್ತೈವತ್ತು ಪಟ್ಟು ಶಿಕ್ಷಕರನ್ನು ಉತ್ಪಾದಿಸಲು ಹೊರಟಿರುವುದು ಸರಕಾರ, ವಿಶ್ವವಿದ್ಯಾನಿಲಯ ಹಾಗೂ ಗುಣನಿಯಂತ್ರಣ ಸಂಸ್ಥೆ ಎಂದು ನಗಾರಿ ಬಾರಿಸುತ್ತಿರುವ ಎನ್‌ಸಿಟಿಇಯ ವ್ಯಾವಹಾರಿಕ ದಿವಾಳಿಕೋರತನಕ್ಕೆ ಸಾಕ್ಷಿಯಾಗಿದೆ. ಪರಿಸ್ಥಿತಿ ಹೀಗೆ ಮುಂದುವರಿದರೆ ಪ್ರಶಿಕ್ಷಣ ಪಡೆದ ಮಂದಿ ನಕ್ಸಲೀಯರಾಗಿ ಮಾರ್ಪಾಡುಹೊಂದುವ ದಿನಗಳು ದೂರ ಉಳಿದಿಲ್ಲ.

ವಿಶ್ವವಿದ್ಯಾನಿಲಯ ಶಿಕ್ಷಣ ವ್ಯವಸ್ಥೆಯಂತೂ ಮೂರಾಬಟ್ಟೆಯಾಗಿಹೋಗಿದೆ. ಹೊಸಕಾಲದ ಸವಾಲುಗಳಿಗೆ ಸ್ಪಂದಿಸಬೇಕೆಂಬ ಜಾಗತೀಕರಣದ ತಾಳಕ್ಕೆ ಕುಣಿಯ ಹೊರಟು ಗುಣ ಮೌಲ್ಯಮಾಪನ, ಸ್ವಸಹಾಯ ಕಾಲೇಜು, ಸ್ವಾಯತ್ತ ಕಾಲೇಜು, ಖಾಸಗಿ ವಿಶ್ವವಿದ್ಯಾನಿಲಯ ಇತ್ಯಾದಿಯಾಗಿ ವಾಣಿಜ್ಯೀಕರಣ, ಖಾಸಗೀಕರಣಕ್ಕೆ ತುತ್ತಾಗಿ ನರಳುತ್ತಿದೆ.

ಇಷ್ಟೆಲ್ಲ ಬದಲಾವಣೆಗಳು ಎಡೆಬಿಡದೆ ನಡೆಯುತ್ತಿದ್ದರೂ ಯಾವ ಹಂತದಲ್ಲೂ ತಮ್ಮ ಮಕ್ಕಳ ಶಿಕ್ಷಣಕ್ಕಾಗಿ ಹಣವ್ಯಯ ಮಾಡುವ ಪಾಲಕರ ಮನ ಒಲಿಸುವ, ಅವರನ್ನು ತಟ್ಟುವ, ಅವರ ಚಿಂತನ ಕ್ರಮಗಳನ್ನು ಬದಲಿಸುವ, ಅವರಿಗೆ ಸರಿಯಾದ ಶಿಕ್ಷಣ ನೀಡುವ ಪ್ರಯತ್ನಗಳನ್ನು ಮಾಡಲಾಗುತ್ತಿಲ್ಲ. ಹೀಗಾಗಿ ಎಲ್ಲ ಬಗೆಯ ಹೆತ್ತವರು ಶಿಕ್ಷಕರ ಹಾಗೆ ಗೊಂದಲಕ್ಕೆ ತುತ್ತಾಗಿದ್ದಾರೆ. ಮೇಲಾಗಿ ಶಿಕ್ಷಣ ಪರಿಣತರ, ಚಿಂತಕರ, ತಜ್ಞರ, ಪರಿಣತ ಅಭಿಪ್ರಾಯಗಳಿಗೆ ಕಿವಿಕೊಡುವ ವ್ಯವಧಾನ ಸರಕಾರಕ್ಕೆ ಇಲ್ಲವಾಗಿದೆ. ಅದು 'ಕುವೆಂಪು ಮಾದರಿ ಶಾಲೆ'ಯಾಗಲಿ, 'ತ್ರೈಮಾಸಿಕವಾಗಲಿ' ಒಂದನೆಯ ತರಗತಿಯಿಂದ 'ಇಂಗ್ಲಿಷ್ ಕಲಿಕೆ'ಯಾಗಲಿ, – ಎಲ್ಲವೂ ಬೀದಿಯಲ್ಲಿ, ಸಂತೆಗದ್ದಲದಲ್ಲಿ, ಘೋಷಣೆಗಳ ಬಲದಲ್ಲಿ, ತಲೆ ಲೆಕ್ಕಾಚಾರದಲ್ಲಿ ನಿರ್ಧಾರವಾಗುವ ದುರಂತ ಒದಗಿದೆ. ಸಂಸ್ಥೆಗಳನ್ನು ಸ್ಥಾಪಿಸಿ ಆಡಳಿತ ನಡೆಸುವವರು, ಉದ್ದಿಮೆದಾರರು ಹಾಗೂ ಅಧಿಕಾರಿ ವರ್ಗದವರು ಶಿಕ್ಷಣ ತಜ್ಞರ ಸ್ಥಾನಗಳನ್ನು ಆಕ್ರಮಿಸಿಕೊಂಡಿದ್ದಾರೆ. ಮುಷ್ಕರ, ಚಳವಳಿ, ಆಂದೋಳನ ಇತ್ಯಾದಿ ನಡೆಯದೆ ಯಾವ ಶೈಕ್ಷಣಿಕ ಸಮಸ್ಯೆಯೂ ಬಗೆಹರಿಯದು ಎಂಬ ಸ್ಥಿತಿ ಉದ್ಭವಿಸಿದೆ. ಶಿಕ್ಷಣದ ವಿಚಾರಗಳಲ್ಲಿ ಶಿಕ್ಷಕ ಸಂಘಟನೆಗಳ ಮತ್ತು ಪ್ರತಿನಿಧಿಗಳ ಮಾತಿಗೆ ಬೆಲೆಯಿಲ್ಲ ಎಂಬಂತಾಗಿದೆ. ಒಟ್ಟಿನಲ್ಲಿ ಎರಡು ವಿಚಾರಗಳು ತುಂಬ ನಿಚ್ಚಳವಾಗಿವೆ. ಕರ್ನಾಟಕವನ್ನು ಇದುವರೆಗೆ ಆಳಿದ ಪಕ್ಷಗಳ ಮುಂದೆ ಶಿಕ್ಷಣಾಭಿವೃದ್ಧಿಗೆ ಸಂಬಂಧಿಸಿದಂತೆ ಒಂದು ಶಿಕ್ಷಣ ಪ್ರಣಾಳಿಯಾಗಲಿ, ನೀಲನಕಾಶೆಯಾಗಲಿ ಇರುವಂತೆ ಕಂಡುಬಂದಿಲ್ಲ. ಹೀಗಾಗಿ ಶಿಕ್ಷಣದ ವಿವಿಧ ಘಟ್ಟಗಳು ಬೇಕಾಬಿಟ್ಟಿಯಾಗಿ, ಅಯೋಜಿತವಾಗಿ, ಬೆಳೆದು ಅಸಂತುಲಿತ ಅಭಿವೃದ್ಧಿ ಕಂಡುಬಂದಿದೆ. ಎರಡನೆಯದು 'ಬೀಸುವ ದೊಣ್ಣೆಯಿಂದ ಪಾರಾದರೆ ನೂರು ವರ್ಷ ಆಯಸ್ಸು' ಎಂಬ ಹಾಗೆ ಸದ್ಯದ ಸ್ಥಿತಿಯಿಂದ ಪಾರಾದರೆ ಸಾಕು ಎಂಬ ತತ್ಕಾಲೀನ ಯೋಜನೆ ಶಿಕ್ಷಣ ರಂಗದಲ್ಲಿ ಹೊಡೆದು ಕಾಣುತ್ತಿದೆ. ಮುಂದಿನ ಹತ್ತು ಹದಿನೈದು ವರ್ಷಗಳಲ್ಲಿ ಕರ್ನಾಟಕದಲ್ಲಿ ಶಿಕ್ಷಣದ ಸ್ಥಿತಿಗತಿ ಹೇಗಿರಬೇಕು ಎಂಬ ದೂರಗಾಮಿ ಆಲೋಚನೆ, ದೂರದರ್ಶಿತ್ವ ಆಳುವವರಲ್ಲಿ ಇಲ್ಲದಿರುವುದು ತೀರ ವಿಷಾದದ ಸಂಗತಿ. ಪ್ರವಾಹ ಕೊಚ್ಚಿಕೊಂಡು ಹೋದ ಕಡೆ ನಾವೆಲ್ಲರೂ ಸಾಗುತ್ತಿದ್ದೇವೆ. ದಡ ಸೇರುವವರು ಯಾರು? ಎಷ್ಟು? ಹೇಗೆ? ಯಾವುದೂ ಸ್ಪಷ್ಟವಿಲ್ಲ! ಇದು ಸಮಾಜ ಮತ್ತು ಶಿಕ್ಷಣದ ದೃಷ್ಟಿಯಿಂದ ಅನುತ್ತೇಜಕ ವಾತಾವರಣ. ಜನಪರ ಆಂದೋಳನಗಳ ಮೂಲಕ ನಾವು ಈ ಸ್ಥಿತಿಯಿಂದ ಆದಷ್ಟು ಶೀಘ್ರ ಹೊರಬರಬೇಕಾಗಿದೆ.

**ಡಾ|| ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ|| ಟಿ.ಎಂ.ಎ.ಪೈ ಶಿಕ್ಷಣ ಕಾಲೇಜು
ಉಡುಪಿ - ೫೭೬ ೧೦೨

# ಮನೆಕಡೆಯ ಸುದ್ದಿ



"ನನ್ನ ಪ್ರೀತಿಯ ಮಗನೆ, ದೇವರ ದಯದಿಂದ ನಾನು ಕ್ಷೇಮ
ನಿನಗಾಗಿ ಹಗಲಿರುಳು ಪ್ರಾರ್ಥಿಸುತ್ತೇನೆ.

"ನನ್ನ ಪ್ರೀತಿಯ ಸೋದರನೆ,
ನಮ್ಮ ಪ್ರೀತಿಯ ಅಮ್ಮನ ಸಾವಿನ ಸಂಗತಿಯನ್ನು ತಿಳಿಸುವುದು
ನನ್ನ ದುಃಖಮಯ ಕರ್ತವ್ಯ.
ಕೆಲವು ದಿವಸಗಳ ಅನಾರೋಗ್ಯದ ನಂತರ
ಕಳೆದ ರವಿವಾರ, ಅಮ್ಮ ತೀರಿಕೊಂಡಳು.

"ನನ್ನ ಪ್ರೀತಿಯ ಕಸಿನ್,
ನಾನು ಸಾಕಷ್ಟು ಎತ್ತರ, ಗಾತ್ರ ಬೆಳೆದಿದ್ದೇನೆ
ನನಗೆ ಕೆಲವು ಪ್ಯಾಂಟುಗಳನ್ನು ಹಾಗೆಯೇ ಹೊಸ ಷೂಗಳನ್ನು
ಕಳಿಸು.

"ನನ್ನ ಒಲವಿನ ಒಲವೆ,
ನಿನಗಾಗಿ ಕಾಯುತ್ತ ಹತ್ತು ವರ್ಷಗಳು ಕಳೆದವು
ಬಿಳಿಜನರ ಆ ನಾಡಿನಲ್ಲಿ ನಿನ್ನನ್ನು ಹಿಡಿದಿಟ್ಟ ಸಂಗತಿ ಯಾವುದು ?
ಇಷ್ಟು ದಿನಗಳ ಮೌನ, ಇಷ್ಟೊಂದು ಕಣ್ಣೀರು
ಕಷ್ಟ ಎಷ್ಟಿದೆಯೆಂದು ದಯವಿಟ್ಟು ಯೋಚಿಸು.

"ನನ್ನ ಪ್ರೀತಿಯ ಗೆಳೆಯನೇ,
ನಮ್ಮ ಈ ನಾಡು ಸಂತೆಗದ್ದಲವಾಗಿ ಬದಲಾಗಿದೆ.
ಯಾರಿಗೂ ಹೊಟ್ಟೆತುಂಬ ಊಟವಿಲ್ಲ, ಕೇವಲ... ಹೋಗಲಿ ಬಿಡು.
ನನಗೆಂದು ಒಂದು ಟೇಪ್‌ರಿಕಾರ್ಡರ್ ಕಳಿಸು.

"ನನ್ನ ಪ್ರೀತಿಯ ಮಗನೆ, ನಾನು ಇದು, ನಿನ್ನ ತಂದೆ
ಬೇಡಿಕೊಳ್ಳುತ್ತೇನೆ. ನಿನ್ನ ನಾಡಿಗೆ ಹಿಂದಿರುಗು.
ಇಲ್ಲವಾದರೆ ನಿನಗೆ ನನ್ನ ಗೋರಿಯನ್ನು ಗುರುತು ಹಿಡಿಯುವ
ದುಃಖ ಕೂಡ ಇರುವುದಿಲ್ಲ.

"ನನ್ನ ಪ್ರೀತಿಯ ಅಣ್ಣನ, ಪ್ರೀತಿಯ ಮಗನೆ,
ನಿನ್ನ ತಂದೆಯ ಸಾವಿನ ಸಂಗತಿಯನ್ನು
ನಾನು ಹೇಳಬೇಕಾಗಿದೆ.
ನಲವತ್ತನೆಯ ದಿವಸದ ಕರ್ಮಾಂತರಕ್ಕೆ
ನೀನು ಬರಬಹುದೆಂದು
ನಮ್ಮೆಲ್ಲರ ನಿರೀಕ್ಷೆ.

"ನನ್ನ ಪ್ರೀತಿಯ... ... ...
ಅಂಚೆಯವನು ನಿನ್ನೆ ಬಂದಾಗ ಒಂದು ಹನಿ ಕಣ್ಣೀರು
ಇಂದು ಅವನ ಬರವಿಗಾಗಿ ಆತಂಕದ ನಿರೀಕ್ಷೆ.
ಆದರೂ ಮನೆಕಡೆಯ ಸುದ್ದಿ ಬರದೆ ಹೋದಾಗ
ನಾನು ವಿಷಾದದ ಸಾಗರದಲ್ಲಿ ಮುಳುಗುತ್ತೇನೆ.
ಮನೆಕಡೆಯ ಸುದ್ದಿ ನನ್ನ ಕಡೆ ಬಂದಾಗ
ನನ್ನ ಜೀವವು ಒಣಗಿ ಮುದುರುತ್ತದೆ.

ಕೆಲವು ದಿನಗಳ ಹಿಂದೆ,
ಮನೆಕಡೆಯ ಪತ್ರಗಳಿಂದ ಒಂದು ದೋಣಿ ಮಾಡಿದೆ.
"ಕಡಲಾಚೆಗಿನ ಅಜ್ಞಾತವಾಸಿ" ಎಂಬ ಬಂದರಿನಲ್ಲಿ
ಅದನ್ನು ತೇಲಿಬಿಟ್ಟೆ
"ಭರವಸೆ ತುಂಬಿದ ಒಂಟಿತನ" ಎಂಬ ವಿಳಾಸದಲ್ಲಿ
ಅದನ್ನು ಸ್ವೀಕರಿಸಲು
ನಾನೇ ಅಲ್ಲಿಗೆ ಹೋದೆ.
ಆ ದೋಣಿಯಲ್ಲಿ, ನನಗಾಗಿ ಕೆಲವರು
ಗೂಢಚಾರರು ಬಂದರು.
ಮರು ದಿವಸ ಮುಂಜಾನೆ ಅಂಚೆಯವನ
ವಿಧಿಯಂತಹ ಹಸ್ತ
ನನ್ನ ಕಡೆ ಚಾಚಿತ್ತು.

"ನನ್ನ ಪ್ರೀತಿಯ ಗೆಳೆಯನೇ,
ಕಳೆದ ವಾರ ನಿನ್ನ ಸಹೋದರನನ್ನು ಸೆರೆಹಿಡಿದರು.
ಇದು ಸರ್ಕಾರದ ವಿರುದ್ಧ ನೀನು ನಡೆಸಿದ ರಾಜಕೀಯ
ಚಟುವಟಿಕೆಗಳಿಗೆ
ನೀಡಿದ ಶಿಕ್ಷೆ.
ಈಗ ನಿನ್ನ ಕುಟುಂಬಕ್ಕೆ ಗಂಡುದಿಕ್ಕು ಇಲ್ಲ.
ನನಗೆಂದು ಒಂದು ಅಂಗಿ ಮತ್ತು ನೆಕ್‌ಟೈ ಕಳಿಸು."

ಮೂಲ : ಅಹ್ಮದ್ ತಿಡ್ಜಾನಿ - ಸಿಸ್ಸೆ ಗಿನೀ ದ್ವೀಪಗಳು

ಕನ್ನಡಕ್ಕೆ : [redacted] ಎಚ್. ಎಸ್. ರಾಘವೇಂದ್ರ ರಾವ್
೭ 'ಶ್ರೀಮಾತಾ' ೧೫ನೇ ಕ್ರಾಸ್ (ರಿಂಗ್ ರಸ್ತೆ), ೫ನೇ ಫೇಸ್
ಜೆ. ಪಿ.ನಗರ, ಬೆಂಗಳೂರು - ೫೬೦ ೦೭೮

# ಸ್ತ್ರೀವಾದವು ಪರಿಣಾಮಕಾರಿ ಆಗಬೇಕಾದರೆ ತನ್ನ ಹೆಸರನ್ನು ಬದಲಿಸಿಕೊಳ್ಳಬೇಕೇ ?

## — ಒಂದು ಚಿಂತನೆ

ಡಾ|| ಎಲ್. ಜಿ. ಮೀರಾ




ಸ್ತ್ರೀವಾದ ಎಂಬ ಪದವನ್ನು ಉಚ್ಚರಿಸಿದೊಡನೆ ಕೇಳುಗರ ಮನಸ್ಸುಗಳಲ್ಲಿ ಧುತ್ತೆಂದು ಗೋಡೆಗಳು ಎದ್ದು ನಿಲ್ಲುವುದನ್ನು ಅನೇಕರು ಗಮನಿಸಿರಬಹುದು. ಸ್ತ್ರೀವಾದದ ಪರವಾಗಿ ಮಾತಾಡುವವರು ಯುದ್ಧಕ್ಕೆ ಮುನ್ನವೇ ಸೋತು ಹೋಗುತ್ತಾರೆ. ಏಕೆಂದರೆ ಸ್ತ್ರೀವಾದ ಮತ್ತು ಸ್ತ್ರೀವಾದಿಗಳ ಬಗ್ಗೆ ಸಾಮೂಹಿಕ ಮನಸ್ಸಿನಲ್ಲಿ ತುಂಬ ಕಹಿ ಭಾವನೆಗಳಿವೆ. 'ಸಾರ್ವಜನಿಕ ನೆನಪು ಎಂಬುದರ ಆಯುಷ್ಯ ಕಡಿಮೆ' ಎಂಬರ್ಥದ ನಾಣ್ಣುಡಿಯೊಂದು ಇಂಗ್ಲಿಷ್‌ನಲ್ಲಿದ್ದರೂ, ತೀವ್ರಗಾಮಿ ಸ್ತ್ರೀವಾದಿಗಳು ತಮ್ಮ ಒಳಉಡುಪುಗಳನ್ನು ಸುಟ್ಟಿದ್ದನ್ನು ಜನ ಯಾಕೋ ಮರೆಯುವುದೇ ಇಲ್ಲ ಅಥವಾ ಮಾಧ್ಯಮಗಳು ಅದನ್ನು ಮರೆಯಲು ಬಿಡುತ್ತಿಲ್ಲ. ಸ್ತ್ರೀವಾದ ಎಂಬ ಪರಿಕಲ್ಪನೆಯಿಂದ ಆಗಬೇಕಾದಷ್ಟು ಪ್ರಯೋಜನ ಆಗದಿರುವುದಕ್ಕೆ ಈ ನೇತ್ಯಾತ್ಮಕ ಭಾವನೆಗಳೇ ಕಾರಣ ಅನ್ನಿಸುತ್ತದೆ. ಸ್ತ್ರೀವಾದೀ ಸಿದ್ಧಾಂತಗಳ ಸಂಖ್ಯೆ ಮತ್ತು ಸ್ತ್ರೀಯರ ಮೇಲಿನ ಹಿಂಸೆ ಒಟ್ಟೊಟ್ಟಿಗೆ ಹೆಚ್ಚುತ್ತಿರುವುದನ್ನು ನೋಡಿದ ಯಾರಿಗೇ ಆದರೂ ಸ್ತ್ರೀವಾದದ ಬಂಡಿ ಸರಿಯಾಗಿ ಓಡುತ್ತಿಲ್ಲ ಅನ್ನಿಸದಿರದು. ಇನ್ನೊಂದು ಕುತೂಹಲಕರ ಸಂಗತಿ ಅಂದರೆ ಕೆಲವು ಸ್ತ್ರೀವಾದಿಗಳು ತಾವು ಸ್ತ್ರೀವಾದಿ ಎಂದು ಹೇಳಿಕೊಳ್ಳಲು ತಯಾರಿರುವುದಿಲ್ಲ. ತನ್ನ ಸಿದ್ಧಾಂತಿಗಳಿಗೆ ಇಂತಹ ಮುಜುಗರ ಉಂಟುಮಾಡುವ ಶಿಸ್ತುಗಳು ಅಪರೂಪ ಅನ್ನಿಸುತ್ತದೆ. ಸ್ತ್ರೀವಾದದ ಬಗ್ಗೆ ಒಂದು ರೀತಿಯ ಅಸ್ಪೃಶ್ಯ ಭಾವನೆ ಇರುವುದು ವಿಚಿತ್ರವಾದರೂ ಸತ್ಯ. ಸಾರ್ವಜನಿಕ ರಂಗಕ್ಕಂತೂ ಈ ಲಕ್ಷಣ ಇದೆ.

ಸಾರ್ವಜನಿಕ ರಂಗವನ್ನು ಒತ್ತಟ್ಟಿಗಿಟ್ಟು ಶೈಕ್ಷಣಿಕ ರಂಗದಲ್ಲಿ ಹಾಗೂ ವಿದ್ವತ್ ವಲಯಗಳಲ್ಲಿ ಸ್ತ್ರೀವಾದದ ಸ್ಥಾನಮಾನಗಳನ್ನು ಗಮನಿಸಿದರೆ ಅಲ್ಲೂ ಕೆಲವು ವಿಚಿತ್ರಗಳು ಕಾಣಸಿಗುತ್ತವೆ. ಸ್ತ್ರೀವಾದದ ಬಗೆಗೆ ಪುಸ್ತಕಗಳು ಬಂದರೆ ಗಂಭೀರ ಚರ್ಚೆಗಳಾಗುವುದಿಲ್ಲ. ವಿಚಾರಸಂಕಿರಣಗಳಲ್ಲಿ ಒಂದು 'ಸ್ತ್ರೀವಾದೀ ಪೇಪರ್' ಇಟ್ಟುಬಿಟ್ಟರೆ ತಮ್ಮ ಕೆಲಸ ಮುಗಿಯಿತು ಎಂಬಂತೆ ಆಯೋಜಕರು ವರ್ತಿಸುತ್ತಾರೆ. ಸ್ತ್ರೀವಾದದ ಬಗೆಗೆ ಮಾತಾಡಬೇಕಾದವರು ಸ್ತ್ರೀಯರು ಮಾತ್ರ ಅಥವಾ ಮಹಿಳಾ ಅಧ್ಯಯನ ಕೇಂದ್ರಗಳಲ್ಲಿ ಸಂಶೋಧಕರಾಗಿಯೋ, ಉಪನ್ಯಾಸಕರಾಗಿಯೋ ಕೆಲಸ ಮಾಡುತ್ತಿರುವವರು ಮಾತ್ರ ಎಂಬ ನುಣುಚಿಕೊಳ್ಳುವ ಧೋರಣೆ ಕಾಣಿಸುತ್ತದೆ. ''ಸ್ತ್ರೀವಾದವೆಂಬುದು ಎಲ್ಲೋ ಕೆಲವು ಸ್ತ್ರೀಯರಿಗೆ ಮಾತ್ರ ಮುಖ್ಯವೆನ್ನಿಸುವ ಸಂಗತಿ, ತಮಗಲ್ಲ'' ಎಂಬ ಮೌನ ಸಂದೇಶವೊಂದು ರವಾನೆಯಾಗುತ್ತಿರುತ್ತದೆ. ಸ್ತ್ರೀವಾದದ ಬಗೆಗೆ 'ಪುರುಷ' ವಿಮರ್ಶಕರು ತೋರುವ ದಿವ್ಯ ನಿರ್ಲಕ್ಷ್ಯ ಢಾಳಾಗಿ ಕಾಣುತ್ತದೆ. ಇದೇಕೆ ಹೀಗೆ ? ಸ್ತ್ರೀವಾದಕ್ಕೆ ಇದೇಕೆ ಇಂತಹ ದುಸ್ಥಿತಿ ? ಇಲ್ಲಿ ಅಸಹನೆ ಇರುವುದು ಯಾವುದರ ಬಗೆಗೆ ? 'ಸ್ತ್ರೀವಾದ' ಎಂಬ ಪದದ ಬಗೆಗೋ ಇಲ್ಲ ಸ್ತ್ರೀ ದೃಷ್ಟಿಕೋನವುಳ್ಳ ಚಿಂತನಾಕ್ರಮದ ಬಗೆಗೋ ? ದುರಂತವೆಂದರೆ ಈ ಅಸಹನೆಯಿಂದಾಗಿ ಸ್ತ್ರೀಪರ ಚಿಂತನೆ ಹಾಗೂ ಲಿಂಗ ಸಮಾನತೆಗಳನ್ನು ಪ್ರತಿಪಾದಿಸುವ ಉದ್ದೇಶದಿಂದ ಸ್ತ್ರೀವಾದವು ಎತ್ತುವ ಕೂಗು ಅರಣ್ಯರೋದನವಾಗಿಬಿಡುತ್ತಿದೆ. ಸ್ತ್ರೀಯರ ಹಕ್ಕುಗಳಿಗಾಗಿ ಹೋರಾಡುವ ಹೆಂಗಸರು ಜಗಳಗಂಟಿಯರಂತೆ, ಮನೆ ಮುರುಕಿಯರಂತೆ ಕಾಣಿಸುತ್ತಾರೆ. ಸ್ತ್ರೀ ಭ್ರೂಣಹತ್ಯೆ, ವಧು ದಹನ, ಸಮೂಹ ಅತ್ಯಾಚಾರಗಳು (ಗ್ಯಾಂಗ್ ರೇಪ್), ಸ್ತ್ರೀಯನ್ನು ಸರಕುಗೊಳಿಸುವಿಕೆ ಮುಂತಾದ ಸ್ತ್ರೀ ಹಿಂಸೆಗಳು ದಿನದಿನಕ್ಕೂ ಹೆಚ್ಚುತ್ತಿದ್ದರೂ ಜನರಲ್ಲಿ ಇದರ ಬಗ್ಗೆ ಜಾಗೃತಿ ಮೂಡುತ್ತಿಲ್ಲ. ಇದೆಲ್ಲದರ ಬಗ್ಗೆ ಎಚ್ಚರ ಮೂಡಿಸಬೇಕಾದ ಸ್ತ್ರೀವಾದ ಯಾರಿಗೂ ಬೇಡದ ಕಹಿಗುಳಿಗೆಯಾಗಿ ಮೂಲೆಯಲ್ಲಿ ಕುಳಿತಿದೆ. ಸ್ತ್ರೀದ್ವೇಷವೆಂಬುದು ಎಲ್ಲೆಲ್ಲೂ ರುದ್ರತಾಂಡವ ನೃತ್ಯ ನಡೆಸುತ್ತಿದ್ದರೂ, ಇದನ್ನು ವಿವರಿಸುವ ಹಾಗೂ ಸ್ತ್ರೀದೃಷ್ಟಿಕೋನವನ್ನು ಅರ್ಥಮಾಡಿಸುವ ಶಕ್ತಿ ಸ್ತ್ರೀವಾದಕ್ಕಿದ್ದರೂ, ವೈದ್ಯನಿಗೆ ಹೆದರುವ ಮಕ್ಕಳಂತೆ ಜನ ಸ್ತ್ರೀವಾದವನ್ನು ಹತ್ತಿರ ಸೇರಿಸುತ್ತಿಲ್ಲ ಅಥವಾ ಸ್ತ್ರೀವಾದಕ್ಕೆ ಮನ್ನಣೆ ನೀಡದಿರುವುದರಿಂದ ಕೆಲವರಿಗೆ ನಷ್ಟವಿದೆ. ಸ್ತ್ರೀಯನ್ನು ಭೋಗವಸ್ತುವಿನಂತೆ ಬಳಸುತ್ತಾ ಶೇವಿಂಗ್ ಬ್ಲೇಡಿನಿಂದ ಹಿಡಿದು ವಿಮಾನದ ತನಕ ಎಲ್ಲವನ್ನೂ ಮಾರಲು ಅವಳ ನಗ್ನದೇಹವನ್ನು ಪ್ರದರ್ಶನಕ್ಕಿಡುವವರಿಗೆ, ಮದ್ಯ ಹಾಗೂ ಮಾಂಸಗಳ ಜತೆ ಹೆಣ್ಣಿನ ದೇಹವನ್ನೂ ತಮ್ಮ ವ್ಯಾಪಾರದ ಅಭಿವೃದ್ಧಿಗೆ ಬಳಸುವ ಪ್ರವಾಸೋದ್ಯಮದವರಿಗೆ ಸ್ತ್ರೀವಾದ ಹೇಗೆ ತಾನೆ ಸಹ್ಯವಾದೀತು ? ಸ್ತ್ರೀವಾದಕ್ಕೆ ಜಾಗ ಕೊಟ್ಟರೆ ತಮ್ಮ ಸುಖವಲಯಗಳು (ಕಂಫರ್ಟ್ ಝೋನ್ಸ್) ಅಲುಗಾಡುವ ಅಪಾಯ ಇರುವುದರಿಂದ, ಕುಟುಂಬ ಮತ್ತು ಇತರ ಸ್ತ್ರೀ ಅಧೀನಕಾರಕ ವ್ಯವಸ್ಥೆಗಳು ಹಾಗೇ ಇರಬೇಕೆಂದು ಬಯಸುವವರು ಸ್ತ್ರೀವಾದವನ್ನು ಅಪಾಯದ ಸಂಗತಿಗಳ ಪಟ್ಟಿಯಲ್ಲಿ ಸೇರಿಸಿಬಿಟ್ಟಿದ್ದಾರೆ. ಸ್ತ್ರೀಯನ್ನು ಜಗಳಗಂಟಿ ಅತ್ತೆ, ಹೊಟ್ಟೆಕಿಚ್ಚಿನ ಹೆಂಡತಿ, ಅಲಂಕಾರ ಪ್ರಿಯ ಗೊಂಬೆ, ಅಳುಮುಂಜಿ ಮುಂತಾದ ಸಿದ್ಧ ಪಡಿಯಚ್ಚುಗಳಲ್ಲಿ ತೋರಿಸುವ ಧಾರಾವಾಹಿ ಹಾಗೂ ಸಿನಿಮಾಗಳಂತೂ 'ಸ್ತ್ರೀವಾದ' ಎಂಬ ಪದವೇ ಗೊತ್ತಿಲ್ಲದಂತೆ ಆಡುತ್ತವೆ. ಅಥವಾ ಸ್ತ್ರೀವಾದಿಗಳನ್ನು ತೋರಿಸಿದರೂ ಅವರನ್ನು ಪುರುಷದ್ವೇಷಿ ರಾಕ್ಷಸಿಯರಂತೆ

ತೋರಿಸಿ, ಸ್ತ್ರೀವಾದವನ್ನೂ ಒಂದು ಸ್ಟೀರಿಯೋಟೈಪ್ ಮಾಡಿ ಕೂರಿಸಿಬಿಡುತ್ತವೆ. ಹೀಗಾಗಿಯೇ ಬಹುಶಃ ಸ್ತ್ರೀವಾದದ ಪರವಾಗಿ ಮಾತಾಡುವವರು ಯುದ್ಧಮಾಡುವ ಮೊದಲೇ ಸೋತುಹೋಗುತ್ತಾರೆ.

ಇಷ್ಟಕ್ಕೂ ಸ್ತ್ರೀವಾದ ಅಂದರೇನು ಎಂಬುದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸೋಣ. ''ಸ್ತ್ರೀ ಶೋಷಣೆಯನ್ನು ವಿರೋಧಿಸುವ ಮತ್ತು ಲಿಂಗಸಮಾನತೆಯನ್ನು ಎತ್ತಿ ಹಿಡಿಯುವ ಒಂದು ಸಿದ್ಧಾಂತ'' ಎಂಬ ಸಾಮಾನ್ಯಜ್ಞಾನದ (ಕಾಮನ್ ಸೆನ್ಸ್ ಅನ್ನುವ ಅರ್ಥದಲ್ಲಿ) ನೆಲೆಯ ವ್ಯಾಖ್ಯಾನ ಇದಕ್ಕಿದ್ದರೂ, ಸ್ತ್ರೀವಾದ ಎಂದರೇನು ಎಂದು ತಿಳಿದುಕೊಳ್ಳುವುದು ಇಷ್ಟು ಸರಳವಲ್ಲ. 'ಏಕೆಂದರೆ ಸ್ತ್ರೀವಾದವು ತನ್ನ ಸೈದ್ಧಾಂತಿಕ ಮತ್ತು ಪರಿಕಲ್ಪನಾತ್ಮಕ ತಳಹದಿಯನ್ನು ಯಾವುದೇ 'ಒಂದು ಸೈದ್ಧಾಂತಿಕರೂಪ'ದಿಂದ ನಿರ್ಮಿಸಿಕೊಂಡಿಲ್ಲ. ಏಕೆಂದರೆ, ಎಲ್ಲ ಕಾಲದ ಎಲ್ಲ ಹೆಂಗಸರಿಗೂ ಅನ್ವಯವಾಗುವಂತಹ ಒಂದು ನಿರ್ದಿಷ್ಟ ಅಮೂರ್ತ ವ್ಯಾಖ್ಯೆ (ಡೆಫಿನಿಷನ್)ಯೊಂದು ಸ್ತ್ರೀವಾದಕ್ಕಿಲ್ಲ. ಸ್ತ್ರೀವಾದ ಎಂದರೇನು ಎಂಬುದಕ್ಕೆ ನೀಡಲಾಗುವ ಉತ್ತರವು ಬದಲಾಗಬಲ್ಲುದು ಮತ್ತು ಬದಲಾಗುತ್ತಿರುತ್ತದೆ. ಇದಕ್ಕೆ ಕಾರಣವೇನೆಂದರೆ **ಸ್ತ್ರೀವಾದವು ನಿರ್ದಿಷ್ಟ ಚಾರಿತ್ರಿಕ ಮತ್ತು ಸಾಂಸ್ಕೃತಿಕ ವಾಸ್ತವಗಳು ಹಾಗೂ ಪ್ರಜ್ಞೆಯ ಸ್ತರಗಳು, ಗ್ರಹಿಕೆಗಳು ಮತ್ತು ಕ್ರಿಯೆಗಳನ್ನು ಆಧರಿಸಿ ನಿಂತಿರುವ ಒಂದು ವಾದವಾಗಿದೆ.** ೧೭ನೆಯ ಶತಮಾನದಲ್ಲಿ (ಫೆಮಿನಿಸಂ ಎಂಬ ಪದವನ್ನು ಮೊದಲು ಉಪಯೋಗಿಸಿದಾಗ) ಸ್ತ್ರೀವಾದದ ಅರ್ಥ ಒಂದಾಗಿದ್ದರೆ ೨೦ನೇ ಶತಮಾನದಲ್ಲಿ ಬೇರೆಯೇ ಆಗಿದೆ. ಪ್ರಪಂಚದ ಬೇರೆ ಬೇರೆ ಕಡೆಗಳಲ್ಲಿ ಇದನ್ನು ಬೇರೆ ಬೇರೆಯಾಗಿ ಅರ್ಥೈಸಲಾಗುತ್ತದೆ. ಒಂದು ದೇಶದೊಳಗೂ ಕೂಡ ಬೇರೆ ಬೇರೆ ಹೆಂಗಸರು ತಮ್ಮ ವರ್ಗೀಯ ಹಿನ್ನೆಲೆ, ವಿದ್ಯಾಭ್ಯಾಸದ ಮಟ್ಟ, ಪ್ರಜ್ಞೆ... ಈ ಮುಂತಾದವುಗಳನ್ನು ಆಧರಿಸಿ ಸ್ತ್ರೀವಾದವನ್ನು ಬೇರೆ ಬೇರೆ ರೀತಿಗಳಲ್ಲಿ ವ್ಯಾಖ್ಯಾನಿಸಿಕೊಳ್ಳುತ್ತಾರೆ. ಒಂದೇ ರೀತಿಯ ಹೆಂಗಸರಲ್ಲೂ ಕೂಡ, ಪಿತೃ ಪ್ರಧಾನತೆ ಮತ್ತು ಪುರುಷ ದಬ್ಬಾಳಿಕೆಗಳಿಗಿರುವ ಚಾರಿತ್ರಿಕ ಕಾರಣಗಳ ಬಗ್ಗೆ ಹಾಗೂ ಯಾವ ರೀತಿಯಲ್ಲಿ ವರ್ಗ, ಜಾತಿ, ಜನಾಂಗ ಮತ್ತು ಲಿಂಗ – ಈ ನಾಲ್ಕು ವಿಷಯಾಧಾರಿತ ಶೋಷಣೆಗಳಿಂದ ಮುಕ್ತವಾದ ಸಮಾಜವನ್ನು ರಚಿಸುವುದು ಎಂಬುದರ ಬಗ್ಗೆ ವಿಭಿನ್ನ ರೀತಿಯ ಚರ್ಚೆಗಳು ನಡೆಯುತ್ತಿವೆ. ಆದಾಗ್ಯೂ, ಇವತ್ತು ನಾವು ಭಾರತೀಯ ಸಂದರ್ಭದಲ್ಲಿ ಸ್ತ್ರೀವಾದವನ್ನು ಸ್ಥೂಲವಾಗಿ ಹೀಗೆ ವ್ಯಾಖ್ಯಾನಿಸಿಕೊಳ್ಳಬಹುದು.

''ಸಮಾಜದಲ್ಲಿ, ಕಾರ್ಯಕ್ಷೇತ್ರ (ಉದ್ಯೋಗಸ್ಥಳ ಎಂದೂ ಅರ್ಥ)ದಲ್ಲಿ ಹಾಗೂ ಕುಟುಂಬದಲ್ಲಿ ನಡೆಯಬಹುದಾದ ಸ್ತ್ರೀ ಶೋಷಣೆಯ ಬಗೆಗಿನ ಅರಿವು ಹಾಗೂ ಈ ಸನ್ನಿವೇಶವನ್ನು ಬದಲಾಯಿಸಲು ಹೆಂಗಸರು ಮತ್ತು ಗಂಡಸರು ಕೈಗೊಳ್ಳುವ ಪ್ರಜ್ಞಾಪೂರ್ವಕ ಕ್ರಿಯೆ.''

ಈ ವ್ಯಾಖ್ಯೆಯನ್ನು ಎಂಬತ್ತರ ದಶಕದಲ್ಲಿ ನಡೆದ ದಕ್ಷಿಣ ಏಷ್ಯಾದ ಕಾರ್ಯಾಗಾರವೊಂದರಲ್ಲಿ ಭಾರತ, ಬಾಂಗ್ಲಾದೇಶ, ನೇಪಾಳ, ಪಾಕಿಸ್ತಾನ ಮತ್ತು ಶ್ರೀಲಂಕಾದ ಹೆಂಗಸರು ಸ್ವೀಕಾರಾರ್ಹವೆಂದು ಪರಿಗಣಿಸಿದರು.

ಈ ವ್ಯಾಖ್ಯೆಯ ಪ್ರಕಾರ, 'ಲಿಂಗಭೇದ ನಡೆಯುತ್ತಿದೆ' ಎಂದು ಗುರುತಿಸುವ, ಪಿತೃ ಪ್ರಧಾನತೆ ಮತ್ತು ಪುರುಷ ದಬ್ಬಾಳಿಕೆಗಳನ್ನು ಅರಿವಿಗೆ ತಂದುಕೊಳ್ಳುವ ಹಾಗೂ ಇವುಗಳನ್ನು ತಡೆಯಲು ಏನಾದರೂ ಕ್ರಿಯೆಯನ್ನು ಕೈಗೊಳ್ಳುವ ಯಾರೇ ಆಗಲಿ ಅವರನ್ನು ಸ್ತ್ರೀವಾದಿ ಎಂದು ಕರೆಯಬಹುದು.

ಈ ವ್ಯಾಖ್ಯೆಯಿಂದ ನಮಗೆ ಅರ್ಥವಾಗುವ ವಿಷಯವೇನೆಂದರೆ, ಲಿಂಗಭೇದದ ಬಗ್ಗೆ ಅರಿವು ತಂದುಕೊಳ್ಳುವಷ್ಟೇ ಮುಖ್ಯವಾದ ಸಂಗತಿ – ಅದನ್ನು ವಿರೋಧಿಸುವ ನಿಟ್ಟಿನಲ್ಲಿ ಏನಾದರೂ ಕೆಲಸ ಮಾಡುವುದು; ಅರಿವು ತಂದುಕೊಂಡು ಸುಮ್ಮನಿರುವುದಲ್ಲ. ಆದರೆ ಲಿಂಗಭೇದವನ್ನು ವಿರೋಧಿಸಲು ಮಾಡುವ ಕ್ರಿಯೆ/ಕಾರ್ಯ ಹೀಗೇ ಇರಬೇಕು ಎಂಬ ನಿಯಮವಿಲ್ಲ. ಉದಾಹರಣೆಗೆ, ಒಬ್ಬ ಹೆಂಗಸು 'ಅವಮಾನವನ್ನು ಸಹಿಸಲಾರೆ' ಎಂಬ ನಿರ್ಧಾರವನ್ನು ತೆಗೆದುಕೊಳ್ಳುವುದು, 'ವಿದ್ಯೆಯನ್ನು ಗಳಿಸಿ ವೃತ್ತಿಯೊಂದರಲ್ಲಿ ತೊಡಗುತ್ತೇನೆ' ಎಂದು ನಿರ್ಧರಿಸುವುದು, 'ಮಕ್ಕಳನ್ನು ಹೆರಲಾರೆ' ಎಂಬ ನಿರ್ಧಾರ ಮಾಡುವುದು, 'ಪರ್ದಾವನ್ನು ತೊಡಲಾರೆ' ಎಂದು ನಿರ್ಧರಿಸಿ ಹಾಗೆ ನಡೆದುಕೊಳ್ಳುವುದು ಇವೆಲ್ಲವನ್ನೂ ಸ್ತ್ರೀವಾದೀ ಕ್ರಿಯೆಗಳೆಂದು ಗುರುತಿಸಲಾಗುತ್ತದೆ. ಬೇರೆ ಪದಗಳಲ್ಲಿ ಹೇಳುವುದಾದರೆ ಸ್ತ್ರೀವಾದಿ ಅನ್ನಿಸಿಕೊಳ್ಳಲು ನೀವು ಒಂದು ಸ್ತ್ರೀಹೋರಾಟ ಗುಂಪಿನ ಸದಸ್ಯರಾಗಿರುವುದು ಕಡ್ಡಾಯವೇನಲ್ಲ. ವೈಯಕ್ತಿಕ ನೆಲೆಯಲ್ಲೂ ಸ್ತ್ರೀವಾದೀ ಹೋರಾಟವು ಸಾಧ್ಯವಿದೆ.

ಹಿಂದಿನ ಅಂದರೆ ೧೭ನೇ, ೧೮ನೇ ಶತಮಾನದ ಸ್ತ್ರೀವಾದಿಗಳು ಹೆಂಗಸರ ಪ್ರಜಾಪ್ರಭುತ್ವದ ಹಕ್ಕುಗಳಿಗಾಗಿ (ಅಂದರೆ ವಿದ್ಯೆ ಮತ್ತು ಉದ್ಯೋಗ ಗಳಿಸುವ ಹಕ್ಕು, ಆಸ್ತಿಯನ್ನು ಹೊಂದುವ ಹಕ್ಕು, ಮತ ಚಲಾಯಿಸುವ ಹಕ್ಕು, ಸಂಸತ್ತನ್ನು ಪ್ರವೇಶಿಸುವ ಹಕ್ಕು, ಗರ್ಭ ನಿರೋಧದ ಹಕ್ಕು, ವಿವಾಹ ವಿಚ್ಛೇದನದ ಹಕ್ಕು... ಇತ್ಯಾದಿ) ಹೋರಾಡುತ್ತಿದ್ದರು. ಹಿಂದಿನ ಹೋರಾಟಗಳು ಕಾನೂನಿನ ಬದಲಾವಣೆಗಾಗಿ ಮತ್ತು ಸಮಾಜದಲ್ಲಿನ ಸಮಾನ ಸ್ಥಾನಮಾನಗಳಿಗಾಗಿ ನಡೆಯುತ್ತಿದ್ದವು. ಈ ಹೋರಾಟಗಳು ಮುಖ್ಯವಾಗಿ, ಕುಟುಂಬ ಮತ್ತು ಮನೆಯ ಹೊರಗಿನ ಪ್ರಪಂಚದಲ್ಲಿನ ತಾರತಮ್ಯವನ್ನು ಹೋಗಲಾಡಿಸಲು ಪ್ರಯತ್ನಿಸುತ್ತಿದ್ದವು. ಆದರೆ ಈಗ ಸ್ತ್ರೀವಾದದ ಸ್ವರೂಪ ಬದಲಾಗಿದೆ. ಈಗ ಮನೆ, ಕುಟುಂಬಗಳಲ್ಲಿ ನಡೆಯುವ ಸ್ತ್ರೀ ಶೋಷಣೆಯ ವಿರುದ್ಧವೂ ಹೋರಾಟ ಪ್ರಾರಂಭವಾಗಿದೆ. ಸ್ತ್ರೀಯರ ಮೇಲಿನ ಹಿಂಸೆಯನ್ನು ತಡೆಯುವಂತಹ ಹೋರಾಟಗಳು ನಡೆಯುತ್ತಿವೆ. ಈಗ ಸ್ತ್ರೀವಾದಿಗಳು ಲಿಂಗತಾರತಮ್ಯದ ವಿರುದ್ಧ ಹೋರಾಡುವುದಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿಕೊಳ್ಳದೆ, ಗಂಡಸರು, ಸಮಾಜ ಹಾಗೂ ಸರ್ಕಾರಗಳಿಂದ ನಡೆಯುವ ಎಲ್ಲ ಬಗೆಯ ಶೋಷಣೆಯಿಂದ ಮುಕ್ತಿಗಾಗಿಯೂ ಹೋರಾಡುತ್ತಿದ್ದಾರೆ. ಇಂದಿನ ಸ್ತ್ರೀವಾದವು ಸ್ತ್ರೀಸಮಾನತೆಗಾಗಿ ಮಾತ್ರವಲ್ಲದೆ ಅವಳ ಗೌರವ, ಆಯ್ಕೆಯ ಸ್ವಾತಂತ್ರ್ಯ (ಮನೆ ಮತ್ತು ಮನೆಯ ಹೊರಗಿನ ಜೀವನದಲ್ಲಿ ತೆಗೆದುಕೊಳ್ಳುವ ನಿರ್ಧಾರಗಳಲ್ಲಿ)ಗಳಿಗಾಗಿ ಹೋರಾಡುತ್ತಿದೆ. 'ಗಂಡಸಿನೊಂದಿಗೆ ಸಮಾನತೆ' ಎಂಬುದು ಮಾತ್ರ ಇಂದಿನ ಸ್ತ್ರೀವಾದದ ಗುರಿಯಲ್ಲ. ಏಕೆಂದರೆ ಸ್ವತಃ ತಾನೇ ತುಳಿತಕ್ಕೊಳಗಾಗಿರುವ, ಶೋಷಣೆ ಅನುಭವಿಸುತ್ತಿರುವ ಗಂಡಸಿಗೆ ಸಮಾನಳು ಅನ್ನಿಸಿಕೊಂಡರೂ ಹೆಂಗಸು ಹೆಚ್ಚಿನದೇನನ್ನೂ ಸಾಧಿಸಿದಂತಾಗುವುದಿಲ್ಲ. ಹೀಗಾಗಿಯೇ ಇಂದಿನ ಸ್ತ್ರೀವಾದಿಗಳು ಹೆಂಗಸು ಮತ್ತು ಗಂಡಸು ಇಬ್ಬರಿಗೂ ಸಲ್ಲುವ ನ್ಯಾಯಯುತ ಹಾಗೂ ಶೋಷಣಾರಹಿತ ಸಮಾಜದ ರಚನೆಗಾಗಿ ಹೋರಾಡುತ್ತಿದ್ದಾರೆ. ಅಂದರೆ ಮೂಲದಲ್ಲಿ ಸ್ತ್ರೀವಾದವು ಗಂಡಸರು ಮತ್ತು ಹೆಂಗಸರು ಇಬ್ಬರನ್ನೂ ಲಿಂಗಭೇದದ ವಿರುದ್ಧ ಜಾಗೃತಗೊಳಿಸುವ ಮತ್ತು ಸಮಾಜದಲ್ಲಿ ಸ್ತ್ರೀಸಂವೇದನೆಯನ್ನು ಮೂಡಿಸುವ ಜವಾಬ್ದಾರಿಯನ್ನು ಹೊತ್ತಿದೆ.

ಸ್ತ್ರೀವಾದವೆಂದರೇನೆಂದು ತಿಳಿದುಕೊಂಡ ಮೇಲೆ ಏಳುವ ಪ್ರಶ್ನೆಯೆಂದರೆ ಸ್ತ್ರೀವಾದದ ಪ್ರಾಣಸ್ವರೂಪಿ ಚಿಂತನೆಗಳಾದ ಸ್ತ್ರೀಸಂವೇದನೆ ಹಾಗೂ ಸ್ತ್ರೀ ದೃಷ್ಟಿಕೋನಗಳನ್ನು ಸಮೂಹದ ಮನಸ್ಸಿಗೆ ಕಲಿಸುವುದು ಹೇಗೆ? ಸ್ತ್ರೀಯ ಮೇಲೆ ಉಂಟಾಗುತ್ತಿರುವ ನಾನಾ ರೀತಿಯ ಹಿಂಸೆಗಳನ್ನು ಕಡಿಮೆ ಮಾಡುವುದು ಹೇಗೆ? ಇದು ಕಾನೂನುಗಳನ್ನು ಹೆಚ್ಚು ಮಾಡುವುದರಿಂದ ಮತ್ತು ಬಲಪ್ರಯೋಗದಿಂದ ಆಗಿಬಿಡುವ ಕೆಲಸವಲ್ಲ. ಮನಸ್ಸುಗಳು ಬದಲಾಗಬೇಕು. ಹೃದಯಗಳು ಪರಿವರ್ತನೆಯಾಗಬೇಕು. ಬಾಲ್ಯದಿಂದಲೇ ಮಕ್ಕಳು ಲಿಂಗ ಸಮಾನತೆಯ ಗಾಳಿಯನ್ನು ಉಸಿರಾಡಬೇಕು. ಆದರೆ ಸದ್ಯಕ್ಕೆ ನಮ್ಮ ಪುಪ್ಪುಸಗಳೊಳಕ್ಕೆ ಹೋಗುತ್ತಿರುವುದು ಲಿಂಗತಾರತಮ್ಯದ ವಿಷವಾಯು, ಸ್ತ್ರೀದ್ವೇಷದ ಮಾರಕ ಗಾಳಿ. ಈ ಮಾತಿಗೆ ಕೆಲವು ನಿದರ್ಶನಗಳನ್ನು ನೀಡಬಯಸುತ್ತೇನೆ.

* ಇವತ್ತಿಗೂ ಹೋಟೆಲು, ಪಾರ್ಕು, ಸಿನಿಮಾ ಮಂದಿರ ಮುಂತಾದ 'ಸಾರ್ವಜನಿಕ ಸ್ಥಳ'ಗಳು ಕೇವಲ ಪುರುಷ ಸ್ಥಳಗಳಾಗಿಯೇ ಇವೆ. ಇಂತಹ ಜಾಗಗಳಲ್ಲಿ ಒಂಟಿ ಹೆಣ್ಣೊಬ್ಬಳು ಹಾಯಾಗಿರಲು ಸಾಧ್ಯವೇ ಇಲ್ಲ. ಗಂಡ, ಮಗ, ತಂದೆ... ಹೀಗೆ ಇನ್ನೊಬ್ಬರ ಅದರಲ್ಲೂ ಗಂಡಸರ ಸಾಂಗತ್ಯ ಇಲ್ಲದಿದ್ದರೆ ಅವಳು 'ವೇಶ್ಯೆಯಿರಬಹುದು' ಎಂಬ ಅನುಮಾನದ ದೃಷ್ಟಿಗೆ ಒಳಗಾಗುತ್ತಾಳೆ.
* 'ಹುಟ್ಟುವ ಮಗು ಗಂಡಾಗಬೇಕು' ಎಂಬ ಅಪೇಕ್ಷೆ ಬರೀ ಆಸೆಯಾಗಿ ಉಳಿಯದೆ ಸ್ತ್ರೀಭ್ರೂಣಗಳನ್ನು ಹತ್ಯೆ ಮಾಡುವ ಕ್ರೌರ್ಯವಾಗಿ ಮಾರ್ಪಡುತ್ತದೆ. ಪುಟ್ಟ ಪುಟ್ಟ ಹೆಣ್ಣುಮಕ್ಕಳೆದುರು ''ಅಯ್ಯೋ, ನಮಗೆ ಒಂದೂ ಗಂಡಾಗಲಿಲ್ಲ'' ಎಂಬಂತಹ ಮಾತುಗಳನ್ನು ಆಡಲಾಗುತ್ತದೆ. ಲಿಂಗಭೇದದ ಬೀಜವನ್ನು ಆ ಎಳೆಯ ಮನಸ್ಸುಗಳಲ್ಲಿ ಬಿತ್ತಲು ಇಂತಹ ಒಂದು ಮಾತು ಸಾಕು.
* ಪತ್ರಿಕೆಗಳಲ್ಲಿ 'ಗ್ಯಾಂಗ್ ರೇಪ್' ಎಂಬುದು ನಿತ್ಯದ ಸುದ್ದಿಗಳ ಸಾಲಿಗೆ ಸೇರಿಬಿಟ್ಟಿದೆ. ಒಬ್ಬ ಮಹಿಳೆಯ ಮೇಲೆ ನಾಲ್ಕು ಜನ, ಎಂಟು ಜನ, ಹದಿನಾಲ್ಕು ಜನ ಅತ್ಯಾಚಾರ ಮಾಡಿದರು ಎಂಬ ಸುದ್ದಿಯನ್ನು ತಣ್ಣಗೆ ಓದುತ್ತಿದ್ದೇವೆ. ಹಾಗೆ ಅತ್ಯಾಚಾರ ಮಾಡಿಸಿಕೊಂಡ ಹೆಣ್ಣಿನ ಮನಃಸ್ಥಿತಿ, ದೇಹಸ್ಥಿತಿ ಹೇಗಿರಬಹುದು? ಹತ್ತು, ಹನ್ನೊಂದು ವರ್ಷದ ಮಕ್ಕಳೂ ಇಂತಹ ಗ್ಯಾಂಗ್ ರೇಪ್‌ಗೆ ಒಳಗಾಗುತ್ತಿದ್ದಾರೆ.
* ಮನೆಕೆಲಸ = ಹೆಂಗಸಿನ ಜವಾಬ್ದಾರಿ
  ಮಕ್ಕಳನ್ನು ಬೆಳೆಸುವುದು = ಅಮ್ಮನ ಕರ್ತವ್ಯ
  ಅಡಿಗೆಮನೆ = ಹೆಂಗಸು...

  ಇಂತಹ ಸಮೀಕರಣಗಳು ನಮ್ಮ ಮನಸ್ಸಿನಲ್ಲಿ ಎಷ್ಟು ಆಳವಾಗಿ ಬೇರುಬಿಟ್ಟಿವೆ ಅಂದರೆ ಉದ್ಯೋಗಸ್ಥ

ಮಹಿಳೆಯರು ತಮ್ಮೊಳಗಿನ ಇಂತಹ ಸಮೀಕರಣಗಳಿಂದಾಗಿ ಅಪರಾಧಿ ಪ್ರಜ್ಞೆ, ಒತ್ತಡ, ಅವಿಶ್ರಾಂತ ದುಡಿಮೆಗಳಿಂದ ನರಳುತ್ತಾರೆ.

* ವರದಕ್ಷಿಣೆಯ ಸಮಸ್ಯೆ ಅನೇಕ ಆಧುನಿಕ ಅವತಾರಗಳನ್ನು ತಾಳುತ್ತಾ ಹೆಂಗಸರ ಜೀವಗಳನ್ನು ಬಲಿತೆಗೆದುಕೊಳ್ಳುತ್ತಲೇ ಇದೆ.
  (ಅಂದರೆ ಹೆಣ್ಣು ಆರ್ಥಿಕವಾಗಿ, ಶಾರೀರಿಕವಾಗಿ, ಸಾಮಾಜಿಕವಾಗಿ ದುರ್ಬಲ ಸ್ಥಾನಗಳಲ್ಲಿದ್ದಾಗ ಅವಳ ಮೇಲೆ ಹಿಂಸೆ ಮತ್ತು ಅತ್ಯಾಚಾರಗಳು ಎಡೆಬಿಡದೆ ನಡೆಯುತ್ತವೆ. ಹೆಣ್ಣಿನ ನೆಮ್ಮದಿಯ ಬದುಕು ಎಂಬುದು ಒಂದು 'ಚಾನ್ಸ್ ಫ್ಯಾಕ್ಟರ್' ಆಗಿಬಿಟ್ಟಿದೆ.)
* ಓದಿ ಉದ್ಯೋಗ ಮಾಡುತ್ತಾ ಹೊರಗೆ ಓಡಾಡುವ ಹುಡುಗಿಯರ ಬಗ್ಗೆ ''ಈಗೀಗ ಹುಡ್ಗೀರು ತುಂಬಾ ಫಾಸ್ಟು'', ''ಸಿಟಿ ಹುಡುಗೀರ್ಗೆ ಮದುವೆಗೆ ಮುಂಚೆ ಎಷ್ಟು ಜನ ಬಾಯ್‌ಫ್ರೆಂಡ್ಸೋ... '' ಮುಂತಾದ ಮಾತುಗಳು ಕೇಳಿಬರುತ್ತವೆ. ಚಾರಿತ್ರ್ಯವಧೆ ಮಾಡುವ ಇಂತಹ ಮಾತುಗಳು ತುಂಬ ನೋವುಂಟುಮಾಡುವಂಥವು.

ಈ ನಿದರ್ಶನಗಳು ಯಾರಿಗೂ ಅಪರಿಚಿತವೇನಲ್ಲ. ಇವು ನಾವೆಲ್ಲರೂ ದಿನಾಲೂ ನೋಡುವ ಸಂಗತಿಗಳೇ ಆಗಿವೆ. ಇಷ್ಟಾದರೂ, ತಮ್ಮ ಹಕ್ಕುಗಳ ಬಗ್ಗೆ ಮಾತಾಡುವ ಸ್ತ್ರೀಯರು ಏಕೆ ಜಗಳಗಂಟಿಯರಂತೆ ಕಾಣಿಸುತ್ತಾರೆ ? ಸ್ತ್ರೀವಾದ ಎಂಬುದು ಏಕೆ ಅನಗತ್ಯ ವಾಗ್ವಾದದಂತೆ, ಆಮದು ಸರಕಿನಂತೆ, ಅಪಾಯದ ಗಂಟೆನಂತೆ ಕಾಣಿಸುತ್ತದೆ ?

ಬಹುಶಃ ಸ್ತ್ರೀವಾದ ಮಾರುವೇಷದಲ್ಲಿ ಬರಬೇಕು. 'ಸ್ತ್ರೀವಾದ' ಎಂಬ ಹೆಸರು ಜನರ ಮನಸ್ಸುಗಳಲ್ಲಿ ಗೋಡೆಗಳನ್ನು ಎಬ್ಬಿಸಿ ನಿಲ್ಲಿಸಿದರೆ, ಸ್ತ್ರೀದೃಷ್ಟಿಯ ಚಿಂತನೆ, ಸ್ತ್ರೀಸಂವೇದನೆ ಎಂಬ ಸೌಮ್ಯ ಹೆಸರುಗಳನ್ನು ಇಟ್ಟುಕೊಳ್ಳಬೇಕು. ಕವಿತೆ, ನಾಟಕ, ಸಿನಿಮಾ, ಹಾಸ್ಯಲೇಖನ... ಮುಂತಾದ ಕಾಂತಾಸಂಹಿತೆಯ ಉಪಕರಣಗಳಿಂದ ಜನರ ಮನಸ್ಸುಗಳನ್ನು ಬದಲಾಯಿಸಬೇಕು. ಖಂಡತುಂಡ ವಾಗ್ವಾದಗಳು ಕೆಲಸ ಮಾಡದಿರುವ ಕಡೆ ಒಲ್ಲೈಸುವಿಕೆ, ಕಥೆ ಹೇಳುವಿಕೆಯಂತಹ ಬೇರೆ ಉಪಾಯಗಳನ್ನು ಮಾಡಬೇಕು. ಏಕೆಂದರೆ ಕಹಿ ಗುಳಿಗೆಗಳನ್ನು ಸಿಹಿಯ ಲೇಪದೊಳಗೆ ಅಡಗಿಸಿ ರೋಗಿಗಳಿಗೆ ಕೊಡುವುದು ವೈದ್ಯರ ಹಳೆಯ ಪದ್ಧತಿ. ಸ್ತ್ರೀವಾದ ಒಂದು ಚಿಕಿತ್ಸಕ ಪ್ರಜ್ಞೆಯೇ ತಾನೇ.

''ಯಾವ ಹೆಸರಿನಿಂದ ಕರೆದರೂ ಗುಲಾಬಿ ಗುಲಾಬಿಯೇ'' ಎಂಬ ಮಾತಿದೆ. 'ಸ್ತ್ರೀವಾದ' ಎಂಬ ಪದವನ್ನು ಜನ ಮನ್ನಿಸುತ್ತಾರೊ, ಇಲ್ಲವೋ ಎಂಬುದಕ್ಕಿಂತ ಸಮಾಜದಲ್ಲಿ ಸ್ತ್ರೀಪರ ಚಿಂತನೆಯನ್ನು ಮೂಡಿಸುವುದು ಹೇಗೆ ಎಂಬ ಪ್ರಶ್ನೆ ಮುಖ್ಯವಾದುದು. ಎತ್ತ ತಿರುಗಿದರೂ ಸ್ತ್ರೀಹಿಂಸೆಯ ಪ್ರಕರಣಗಳು ಕಣ್ಣಿಗೆ ಚುಚ್ಚುತ್ತಿರುವ ನಮ್ಮ ಸಂದರ್ಭದಲ್ಲಿ ಸಾಧ್ಯವಾದ ಎಲ್ಲ ರೀತಿಗಳಲ್ಲೂ ಸ್ತ್ರೀಪರ ಪ್ರಜ್ಞೆಯನ್ನು ಹುಟ್ಟುಹಾಕಬೇಕಿದೆ. 'ಹೆಣ್ಣು ಭ್ರೂಣದ ಕವನ' ಎಂಬ ಪುಟ್ಟ ಕವನದೊಂದಿಗೆ ಈ ಲೇಖನವನ್ನು ಮುಕ್ತಾಯಗೊಳಿಸುತ್ತೇನೆ.

**ಹೆಣ್ಣು ಭ್ರೂಣದ ಕವನ**

ಅಮ್ಮ,

ನಾನು ಚಿಟ್ಟೆಯ ಹಿಂದೆ ಓಡಬಹುದಿತ್ತು
ಗಾಳಿಯಲ್ಲಿ ಹೂವಿನಂತೆ ಓಲಾಡಬಹುದಿತ್ತು
ತೇಲಾಡುವ ಮೋಡ ನೋಡುತ್ತಾ ಹಾಡಬಹುದಿತ್ತು
ಮಾತಾಡಬಹುದಿತ್ತು ನಡೆದಾಡಬಹುದಿತ್ತು
ಗೆಳೆಯರ ಜತೆ ಆಟವಾಡಬಹುದಿತ್ತು
ವೈದ್ಯೆ, ವಕೀಲೆ ಏನೇನೋ ಆಗಬಹುದಿತ್ತು
ಅಮ್ಮ, ನೀ ನನ್ನ ಹುಟ್ಟಲು ಬಿಟ್ಟಿದ್ದಿದ್ದರೆ
ಒಂದು ದಿನ, ನಾ ನಿನ್ನ ಕಣ್ಣೀರೊರೆಸಬಹುದಿತ್ತು.

* 'ಸ್ತ್ರೀವಾದ ಎಂದರೇನು ?' ಎಂಬ ಚರ್ಚೆಗೆ ಈ ಲೇಖಕಿ 'ಸಮ್ ಕ್ವೆಶ್ಚನ್ಸ್ ಆನ್ ಫೆಮಿನಿಸಂ ಆ್ಯಂಡ್ ಇಟ್ಸ್ ರೆಲೆವೆನ್ಸ್ ಇನ್ ಸೌತ್ ಏಷಿಯಾ' ಎಂಬ ಲೇಖನಕ್ಕೆ ಋಣಿ.

ಲೇಖಕಿಯರು : ಕಮಲಾ ಭಾಸಿನ್ ಮತ್ತು ನಿಘಾತ್ ಸೈಯದ್ ಖಾನ್. ಪುಸ್ತಕ : ಫೆಮಿನಿಸಂ ಇನ್ ಇಂಡಿಯಾ, ಸಂ. ಮೈತ್ರೇಯಿ ಚೌಧುರಿ, ಕಾಲ್ ಫಾರ್ ವಿಮೆನ್, ೨೦೦೪.

ಡಾ|| ಎಲ್. ಜಿ. ಮೀರಾ
ಸಂಶೋಧಕರು, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

೨೦೦೫ನೇ ಇಸವಿಯನ್ನು ಅಂತರ ರಾಷ್ಟ್ರೀಯ ಭೌತವಿಜ್ಞಾನ ಸಂವತ್ಸರ ಎಂದು ಕರೆದು ಹಬ್ಬದೋಪಾದಿಯಲ್ಲಿ ಪ್ರಪಂಚದ ಎಲ್ಲೆಡೆ ಆಚರಿಸಲಾಯಿತು. ಇದಕ್ಕೆ ಕಾರಣ ಇಂದಿಗೆ ಸರಿಯಾಗಿ ನೂರು ವರ್ಷಗಳ ಹಿಂದೆ, ಎಂದರೆ ೧೯೦೫ರಲ್ಲಿ ಆಲ್ಬರ್ಟ್ ಐನ್‌ಸ್ಟೈನರು ಮೂರು ಕ್ರಾಂತಿಕಾರಿ ಸಂಶೋಧನಾ ಲೇಖನಗಳನ್ನು ಪ್ರಕಟಿಸಿದರು. ಈ ಸಂಶೋಧನೆಗಳಿಂದಾಗಿ ೧೯೦೫ ಭೌತವಿಜ್ಞಾನದ ಪರ್ವಕಾಲ ಎನ್ನಿಸಿಕೊಂಡಿತು. ಒಂದು ಪ್ರಕಟಣೆಯಲ್ಲಿ ಐನ್‌ಸ್ಟೈನರು ತಮ್ಮ ಸಾಪೇಕ್ಷ ಸಿದ್ಧಾಂತವನ್ನು ಮಂಡಿಸಿದರು. ಅವರ ಸಾಪೇಕ್ಷ ಸಿದ್ಧಾಂತ ವಿಶ್ವದ ಸ್ವರೂಪದ ಬಗ್ಗೆ ಅಲ್ಲಿಯವರೆಗೆ ಪ್ರಚಲಿತವಾಗಿದ್ದ ತತ್ವಗಳಲ್ಲಿ ಮೂಲಭೂತ ಬದಲಾವಣೆಗಳನ್ನು ತಂದಿತು. ಇನ್ನೊಂದು ಪ್ರಕಟಣೆ ಬೆಳಕಿನ ಸ್ವರೂಪದ ವಿಶ್ಲೇಷಣೆಯಾಗಿತ್ತು. ಇದು ಕ್ವಾಂಟಮ್ ಸಿದ್ಧಾಂತದ ಪ್ರಥಮ ಪ್ರಕಟಣೆ ಎನ್ನಬಹುದು. ನಂತರ ರುದರ್‌ಫೋರ್ಡ್, ಪ್ಲಾಂಕ್, ನೀಲ್ಸ್ ಬೋರ್, ಶ್ರೋಡಿಂಗರ್, ಹೈಸನ್‌ಬರ್ಗ್ ಮುಂತಾದವರಿಂದ ಬೆಳವಣಿಗೆ ಕಂಡ ಕ್ವಾಂಟಮ್ ಸಿದ್ಧಾಂತ, ನಂತರದ ಕಾಲು ಶತಮಾನದಲ್ಲಿ ಪ್ರಬುದ್ಧಾವಸ್ಥೆ ತಲುಪಿತು. ಇದರ ಪ್ರಭಾವ ತತ್ವಶಾಸ್ತ್ರದಿಂದ ಹಿಡಿದು ದಿನನಿತ್ಯದ ಜೀವನದವರೆಗೆ ವಿಸ್ತರಿಸಿತು. ಟೆಲಿವಿಷನ್, ಕಂಪ್ಯೂಟರ್ ಮುಂತಾದ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವುದಕ್ಕೆ ಈ ಸಂಶೋಧನೆಗಳು ನೆರವಾದುವು. ಹಾಗೆಯೇ, ಅಂದಿನವರೆಗೆ ವಿಜ್ಞಾನಿಗಳಲ್ಲಿದ್ದ ಅಣುಪ್ರಪಂಚದ ಕಲ್ಪನೆಗಳೂ ಕೂಡ ಈ ಸಂಶೋಧನೆಗಳಿಂದ ಬಹಳ ಬದಲಾದವು.

ಭೌತಶಾಸ್ತ್ರದ ಅಭಿವೃದ್ಧಿ ಜೀವಶಾಸ್ತ್ರಕ್ಕೆ ಅನೇಕ ಅತ್ಯಮೂಲ್ಯ ಕೊಡುಗೆಗಳನ್ನು ನೀಡಿತು. ಭೌತಶಾಸ್ತ್ರದ ಪ್ರಭಾವದಿಂದಲೇ ಈಗ ಅತ್ಯಂತ ತ್ವರಿತ ಗತಿಯಲ್ಲಿ ಮುನ್ನಡೆ




ಜೀವಶಾಸ್ತ್ರಕ್ಕೆ ಭೌತಶಾಸ್ತ್ರದ ಕೊಡುಗೆ ವಿಜ್ಞಾನದ ಒಂದು ಪ್ರಮುಖ ಲಕ್ಷಣದ ಕನ್ನಡಿ. ನಿಜವಾಗಿ ನಮ್ಮ ಕಲಿಕೆಯ ಮಿತಿಯಿಂದಾಗಿ, ನಾವು ವಿಜ್ಞಾನವನ್ನು ಬೇರೆ, ಬೇರೆ ಶಾಖೆಗಳನ್ನಾಗಿ ಭಾಗಿಸಿ, ನಮಗೆ ರುಚಿಸುವ ಒಂದು ಭಾಗವನ್ನು ಮಾತ್ರ ಕಲಿಯುತ್ತೇವೆ. ಹೀಗೇ, ವಿಜ್ಞಾನ ಸಾವಿರಾರು ಶಾಖೆಗಳಾಗಿ ಒಡೆದಿದೆ. ಆದರೆ ಎಲ್ಲ ವಿಜ್ಞಾನಕ್ಕೂ ಸಂಶೋಧನೆಯ ಮಾರ್ಗ ಒಂದೇ. ಎಲ್ಲ ವಿಜ್ಞಾನಿಗಳೂ ಒಂದೇ ಸೂರಿನಡಿ ವಾಸಿಸುವ ವ್ಯಕ್ತಿಗಳು. ವಿಜ್ಞಾನದ ಒಂದು ಶಾಖೆ ಇನ್ನೊಂದು ಶಾಖೆಗೆ ಸತತ ತನ್ನ ಕಾಣಿಕೆಯನ್ನು ಸಲ್ಲಿಸುತ್ತಲೇ ಇರುತ್ತದೆ. ಒಂದು ಶಾಖೆಯ ಪ್ರಾಮುಖ್ಯತೆಯನ್ನು ಇನ್ನೊಂದು ಶಾಖೆಯಲ್ಲಿದ್ದು ಕಂಡುಕೊಳ್ಳಲು ಅದಕ್ಕೆ ಸರಿಹೊಂದುವ ದೂರದೃಷ್ಟಿ, ಮೇಧಾಶಕ್ತಿ ಇರಬೇಕಷ್ಟೆ. ೨೦ನೆಯ ಶತಮಾನದಲ್ಲಿ ಇಂತಹ ಅನೇಕ ಮೇಧಾವಂತ ಭೌತಶಾಸ್ತ್ರಜ್ಞರು ಜೀವಶಾಸ್ತ್ರಕ್ಕೆ ಅತಿ ದೊಡ್ಡ ಕಾಣಿಕೆ ಸಲ್ಲಿಸಿದ್ದಾರೆ. ಇವರ ಶ್ರಮದಿಂದಾಗಿ ಇಂದು ಜೀವವಿಜ್ಞಾನ ಕಲ್ಪನೆಗೂ ಮೀರಿದ ಪ್ರಗತಿ ತೋರಿಸಿದೆ.

**ಪ್ರೊ॥ ಎಮ್. ಆರ್. ಎನ್. ಮೂರ್ತಿ**

ಸಾಧಿಸುತ್ತಿರುವ ಅಣು ಜೀವಶಾಸ್ತ್ರ (molecular biology) ಹುಟ್ಟಿಕೊಂಡಿತು. ಐನ್‌ಸ್ಟೈನರು ತಮ್ಮ ಸಂಶೋಧನೆಗಳನ್ನು ಪ್ರಕಟಿಸಿದ ವರ್ಷಕ್ಕೆ ಒಂದು ದಶಕ ಮುಂಚೆ ೧೮೯೫ ರಲ್ಲಿ ಜರ್ಮನಿಯಲ್ಲಿ ಭೌತಶಾಸ್ತ್ರಜ್ಞ ರಾಂಟ್ಜನ್ ಮಹತ್ವದ ಸಂಶೋಧನೆಗಳನ್ನು ನಡೆಸಿದ್ದರು. ಅತಿ ಕಡಿಮೆ ವಾಯು ಒತ್ತಡದಲ್ಲಿ ವಿದ್ಯುತ್ ಹರಿಸಿದಾಗ ಉಂಟಾಗುವ ಪರಿಣಾಮಗಳನ್ನು ರಾಂಟ್ಜನ್ ಪರೀಕ್ಷಿಸುತ್ತಿದ್ದರು. ವಾಯು ಒತ್ತಡ ಕಡಿಮೆಯಿರುವ ನಳಿಕೆಯ ಒಂದು ತುದಿಯಲ್ಲಿ ಕೆಂಪಗೆ ಕಾದ ಲೋಹದ ತಂತಿ ಮತ್ತೊಂದು ತುದಿಯಲ್ಲಿ ಒಂದು ತಾಮ್ರದ ತಗಡನ್ನು ಕೂರಿಸಿ, ಅವುಗಳ ನಡುವೆ ಹಲವು ಹತ್ತಾರು ಸಹಸ್ರ ವಿದ್ಯುತ್ ಒತ್ತಡ (voltage) ಹೇರಿದಾಗ ತಾಮ್ರದ ತಗಡಿನಿಂದ ಒಂದು ಬಗೆಯ ಕಿರಣಗಳು ಹೊರಸೂಸುವುದನ್ನು ಗಮನಿಸಿದ್ದರು. ಈ ಕಿರಣಗಳ ಸ್ವರೂಪ ಮಾತ್ರ ತಿಳಿದಿರಲಿಲ್ಲ. ಆದ್ದರಿಂದ ಈ ಕಿರಣಗಳಿಗೆ ಎಕ್ಸ್-ಕಿರಣಗಳೆಂದು ಕರೆದರು. ಎಕ್ಸ್-ಕಿರಣಗಳು ಬೆಳಕು ಭೇದಿಸಲಾಗದ ವಸ್ತುಗಳ ಮೂಲಕ ಹಾದುಹೋಗುವ ಗುಣ ಪಡೆದಿರುವುದನ್ನು ಗಮನಿಸಿದರು. ತಮ್ಮ ಮಡದಿಯ ಕೈಯನ್ನು ಈ ಕಿರಣಗಳ ದಾರಿಯಲ್ಲಿರಿಸಿ ಛಾಯಾಚಿತ್ರ ತೆಗೆದಾಗ, ಕೈಯ ಮೂಳೆಗಳು ಹಾಗೂ ಅವರ ಮದುವೆಯ ಉಂಗುರದ ಚಿತ್ರ ಪಟದಲ್ಲಿ ಮೂಡಿಬಂದಿದ್ದವು. ಇದನ್ನೇ ಮುಂದಿನ ಚಿತ್ರ ತೋರಿಸುತ್ತದೆ. ಇದರಿಂದ, ಎಕ್ಸ್-ಕಿರಣಗಳು ಮೂಳೆಗಿಂತ ಮಾಂಸಖಂಡದ ಮೂಲಕ ಹೆಚ್ಚಾಗಿ ಹಾಯ್ದುಹೋಗುವುದೆಂದು ತೀರ್ಮಾನಿಸಿದರು. ಉಂಗುರದ ಲೋಹ ಎಕ್ಸ್-ಕಿರಣಗಳಿಗೆ ತಡೆ ಒಡ್ಡುವುದರಿಂದ, ಅದರ ನೆರಳು ಇನ್ನೂ ಸ್ಪಷ್ಟವಾಗಿ ಮೂಡಿಬಂದಿತ್ತು. ಈ ಕಿರಣಗಳ ಸ್ವರೂಪ ತಿಳಿಯದಿದ್ದರೂ ಅವುಗಳನ್ನು ಬಳಸಿಕೊಂಡು, ಮುರಿದ ಮೂಳೆಗಳನ್ನು ಗುರುತಿಸಿ, ಅವುಗಳಿಗೆ ತಕ್ಕ ಚಿಕಿತ್ಸೆ ಕೊಡಬಹುದೆಂಬ ಉಪಾಯ ವೈದ್ಯರಿಗೆ ತಡವಿಲ್ಲದೆ ಮನವರಿಕೆಯಾಯಿತು. ಆದ್ದರಿಂದ ನಂತರದ ವರ್ಷಗಳಲ್ಲಿ ಅನೇಕ ಆಸ್ಪತ್ರೆಗಳಲ್ಲಿ ಎಕ್ಸ್-ಕಿರಣ ಯಂತ್ರಗಳು ಕಾಣಿಸಿಕೊಂಡವು. ೨೦ನೆಯ ಶತಮಾನದ ಪ್ರಾರಂಭದಲ್ಲಿ ಮಹತ್ವದ ವೈಜ್ಞಾನಿಕ ಸಂಶೋಧನೆಗಳಿಗೆ ನೊಬೆಲ್ ಪಾರಿತೋಷಕ ಕೊಟ್ಟು ಸನ್ಮಾನಿಸುವ ಬಳಕೆ ಪ್ರಾರಂಭವಾಯಿತು. ಈ ಪಾರಿತೋಷಕ ಪಡೆದವರಲ್ಲಿ ರಾಂಟ್ಜನ್ ಮೊದಲಿಗರಾದರು.

೧. ರಾಂಟ್ಜನ್ನರ ಎಕ್ಸ್-ಕಿರಣ ಯಂತ್ರದ ತತ್ವ. ರಾಂಟ್ಜನ್ನರ ಭಾವಚಿತ್ರವನ್ನು ಎಡಬದಿಯಲ್ಲಿ ಕಾಣಬಹುದು. ಕಥೋಡಿನಿಂದ (ಕೆಂಪಗೆ ಕಾದ ಲೋಹದ ತಂತಿ) ಹೊಮ್ಮುವ ಎಲೆಕ್ಟ್ರಾನ್ ಕಣಗಳು ವಿದ್ಯುತ್ ಒತ್ತಡಕ್ಕೆ ಒಳಪಟ್ಟು ಎದುರಿನ ತಾಮ್ರದ ತಗಡಿನ ಮೇಲೆ ಧುಮ್ಮಿಕ್ಕಿದಾಗ ಎಕ್ಸ್-ಕಿರಣಗಳು ಹೊರಸೂಸುತ್ತವೆ. ಕೊಳವೆಯೊಳಗೆ ವಾಯು ಒತ್ತಡ ಬಹಳ ಕಡಿಮೆಯಿರಬೇಕು. ಎಲೆಕ್ಟ್ರಾನುಗಳ ಸತತ ಹೊಡೆತದಿಂದ ಕಾಯುವ ತಾಮ್ರದ ತಗಡಿನ ಶಾಖವನ್ನು ತಣ್ಣೀರಿನಿಂದ ತೆಗೆಯಬೇಕು. ಇಲ್ಲದಿದ್ದರೆ ತಾಮ್ರದ ತಗಡು ಕರಗುತ್ತದೆ. ಬಲಬದಿಯಲ್ಲಿ ರಾಂಟ್ಜನ್ನರ ಮಡದಿಯ ಕೈಯನ್ನು ಎಕ್ಸ್-ಕಿರಣಗಳು ಹಾದು ಹೋದಾಗ ಮೂಡಿಬಂದ ಚಿತ್ರವನ್ನು ತೋರಿಸಿದೆ. ಕೈಮೂಳೆಗಳನ್ನೂ, ರಾಂಟ್ಜನ್ ತೊಡಿಸಿದ ಮದುವೆಯುಂಗುರವನ್ನೂ ಚಿತ್ರದಲ್ಲಿ ಕಾಣಬಹುದು.


ರಾಂಟ್ಜನ್



ಎಕ್ಸ್-ಕಿರಣ ಯಂತ್ರದ ತತ್ವ


ಮಡದಿಯ ಕೈ

ಈ ಎಕ್ಸ್-ಕಿರಣಗಳ ಸ್ವರೂಪ ಏನೆಂಬ ಸಮಸ್ಯೆ ವಿಜ್ಞಾನಿಗಳನ್ನು ಕಾಡುತ್ತಿತ್ತು. ೨೦ನೆಯ ಶತಮಾನಕ್ಕೂ ಮೊದಲೇ ಬೆಳಕಿನ ಸ್ವರೂಪವನ್ನು ಕುರಿತು ಬಹಳ ಸಂಶೋಧನೆಗಳು ನಡೆದಿದ್ದವು. ಈ ಸಂಶೋಧನೆಗಳಿಂದ ಬೆಳಕು ವಿದ್ಯುತ್ ಅಯಸ್ಕಾಂತ ಅಲೆಗಳು (electro magnetic waves) ಎಂದು ತಿಳಿದುಬಂದಿತ್ತು. ಸಮುದ್ರದಲ್ಲಿ ನೀರಿನ ಅಲೆಗಳಂತೆ, ವಿದ್ಯುತ್ ಹಾಗೂ ಅಯಸ್ಕಾಂತ ಕ್ಷೇತ್ರಗಳ ಅಲೆಗಳು ಆಕಾಶದಲ್ಲಿ ಚಲಿಸುವುದೇ ವಿದ್ಯುತ್

ಅಯಸ್ಕಾಂತ ಅಲೆಗಳು ಎನ್ನುವುದು ಸಾಬೀತಾಗಿತ್ತು. ನಮ್ಮ ಕಣ್ಣಿಗೆ ಕಾಣಿಸುವ ವಿದ್ಯುತ್ ಅಯಸ್ಕಾಂತ ಕಿರಣಗಳ (visible light) ಅಲೆಯಳತೆ ಅಥವಾ ತರಂಗದೂರ (wave length) ಸುಮಾರು ೫೦೦ ನಾನೋಮೀಟರುಗಳು (ನಾನೋಮೀಟರ್ = ಒಂದು ಮೀಟರಿನ ದಶಕೋಟಿಯ ಒಂದು ಭಾಗ). ತರಂಗ ದೂರವೆಂದರೆ, ಅಲೆಯ ಒಂದು ಉನ್ನತ ಬಿಂದುವಿಗೂ ನಂತರದ ಉನ್ನತ ಬಿಂದುವಿಗೂ ಇರುವ ದೂರ. ನಮ್ಮ ಕಣ್ಣಿಗೆ ಕಾಣಿಸುವ ಬೆಳಕಿನ ತರಂಗ ದೂರ ಸುಮಾರು ೪೦೦ ನಾನೋಮೀಟರಿನಿಂದ ೮೦೦ ನಾನೋಮೀಟರುಗಳು. ತರಂಗ ದೂರ ಬದಲಾದಂತೆ ನಮಗೆ ಬೆಳಕಿನ ಬಣ್ಣ ಬದಲಾದಂತೆ ತೋರುತ್ತದೆ. ಸುಮಾರು ೪೦೦ ನಾನೋಮೀಟರ್ ತರಂಗ ದೂರದ ಬೆಳಕು ನೇರಳೆ ಬಣ್ಣದ ಅನುಭವ ಕೊಡುತ್ತದೆ. ೮೦೦ ನಾನೋಮೀಟರ್ ತರಂಗ ದೂರವಿದ್ದರೆ, ಆ ಬೆಳಕು ನಮಗೆ ಕೆಂಪು ಬಣ್ಣದ ಅನುಭವ ಕೊಡುತ್ತದೆ. ನಮ್ಮ ಕಣ್ಣಿಗೆ ಕಾಣಿಸದ ೪೦೦ ನಾನೋಮೀಟರಿಗಿಂತ ಕಡಿಮೆ ಅಥವಾ ೮೦೦ ನಾನೋಮೀಟರಿಗಿಂತ ಹೆಚ್ಚು ತರಂಗ ದೂರ ಇರುವ ವಿದ್ಯುತ್ ಅಯಸ್ಕಾಂತ ಕಿರಣಗಳ ಇರುವಿಕೆ ತಿಳಿದಿತ್ತು. ೧೯೧೨ ರಲ್ಲಿ ಇಂಗ್ಲೆಂಡಿನ ಭೌತ ವಿಜ್ಞಾನಿ ಮಾಕ್ಸ್ ವಾನ್ ಲಾವೆ ಎಕ್ಸ್-ಕಿರಣಗಳೂ ಬೆಳಕಿನಂತೆ ವಿದ್ಯುತ್ ಅಯಸ್ಕಾಂತ ಅಲೆಗಳು, ಆದರೆ ಅವುಗಳ ತರಂಗ ದೂರ ಬಹಳ ಕಡಿಮೆ ಇರಬಹುದೆಂದು ಊಹಿಸಿದ. ಅದೂ ಅಲ್ಲದೇ, ಸ್ಫಟಿಕಗಳು (crystals) ಇಂತಹ ತರಂಗ ದೂರದ ಕಿರಣಗಳನ್ನು ಕೆಲವೇ ದಿಕ್ಕುಗಳಲ್ಲಿ ಚೆದುರಿಸಬೇಕೆಂದೂ ಪ್ರತಿಪಾದಿಸಿದ. ಅದಕ್ಕೆ ಮುಖ್ಯ ಕಾರಣ ಸ್ಫಟಿಕಗಳ ರಚನೆಯ ಬಗ್ಗೆ ವಿಜ್ಞಾನಿಗಳಿಗಿದ್ದ ಕಲ್ಪನೆ. ಸಹಸ್ರಾರು ವರ್ಷಗಳಿಂದ ವಜ್ರದಂತಹ ಸ್ಫಟಿಕಗಳ ಪರಿಚಯದಿಂದ ಅವುಗಳ ರಚನೆಯ ಬಗ್ಗೆ ವಿಜ್ಞಾನಿಗಳಲ್ಲಿ ಸ್ಪಷ್ಟ ಕಲ್ಪನೆ ಮೂಡಿತ್ತು. ಸ್ಫಟಿಕಗಳಲ್ಲಿ ಅಣುಗಳು ಕ್ರಮಬದ್ಧ ಜೋಡಣೆಯಲ್ಲಿರುತ್ತವೆ ಎಂದು ನಂಬಲಾಗಿತ್ತು. ಇಂತಹ ಮೂರು ಆಯಾಮಗಳ ಅಣು ಸಮೂಹದ ಮೂಲಕ ಹಾದುಹೋಗುವ ಎಕ್ಸ್-ಕಿರಣಗಳನ್ನು ಸ್ಫಟಿಕದ ಅಣುಗಳು ಕೆಲವೇ ದಿಕ್ಕುಗಳಲ್ಲಿ ಚದುರಿಸಬೇಕು (reflect, reflection) ಎನ್ನುವ ತೀರ್ಮಾನಕ್ಕೆ ಸೈದ್ಧಾಂತಿಕ ಆಧಾರಗಳನ್ನು ಲಾವೆ ಕಂಡುಕೊಂಡರು. ಇಂತಹ ಚದರುವಿಕೆಯನ್ನು ವಿವರ್ತನ (diffraction) ಎಂದು ಕರೆಯಬಹುದು. ಆದ್ದರಿಂದ ಒಂದೇ ಪ್ರಯೋಗದಿಂದ ಎಕ್ಸ್-ಕಿರಣಗಳ ಸ್ವರೂಪವನ್ನೂ, ಸ್ಫಟಿಕಗಳಲ್ಲಿ ಅಣುಗಳು ಕ್ರಮಬದ್ಧ ಜೋಡಣೆಯಲ್ಲಿವೆಯೇ ಎಂಬುದನ್ನೂ ಪರೀಕ್ಷಿಸಬಹುದು ಎಂದು ಲಾವೆ ವಾದಿಸಿದರು. ಈ ವಾದವನ್ನು ತಡವಿಲ್ಲದೇ ವಿಜ್ಞಾನಿಗಳು ಪರೀಕ್ಷಿಸಿ, ಲಾವೆಯವರ ಸಿದ್ಧಾಂತ ಸರಿಯೆಂದು ತೋರಿಸಿದರು. ಲಾವೆಯವರ ಸಿದ್ಧಾಂತಕ್ಕಾಗಿ ಅವರಿಗೆ ನೊಬೆಲ್ ಪಾರಿತೋಷಕ ದೊರೆಯಿತು.



೨. ಸಸ್ಯ ಹಾಗೂ ಪ್ರಾಣಿಗಳಿಗೆ ಕಾಯಿಲೆ ಬರಿಸುವ ವೈರಾಣು ಕಣಗಳನ್ನು (virus particles) ಸ್ಫಟಿಕೀಕರಿಸಬಹುದು (crystallize). ಇಂತಹ ಒಂದು ಸ್ಫಟಿಕದ ಮೂಲಕ ಎಕ್ಸ್-ಕಿರಣಗಳನ್ನು ಹಾಯಿಸಿದಾಗ ಎಕ್ಸ್-ಕಿರಣಗಳು ನಿರ್ದಿಷ್ಟ ದಿಕ್ಕುಗಳಲ್ಲಿ ಚದುರಿ ನಂತರ ಇರಿಸಿದ ಚಿತ್ರಫಲಕದಲ್ಲಿ ಮೂಡಿಬಂದಿರುವ ಚಿತ್ರ. ಇಲ್ಲಿ ಕಾಣಿಸುವ ಪ್ರತಿ ಕಪ್ಪು ಬಿಂದುವೂ ಎಕ್ಸ್-ಕಿರಣಗಳಿಂದ ಚದುರಿಸಲ್ಪಟ್ಟ ಒಂದು ದಿಕ್ಕನ್ನು ಸೂಚಿಸುತ್ತದೆ. ತಿರುಪತಿ ಸುತ್ತಮುತ್ತಲ ರೈತರ ತೋಟಗಳಲ್ಲಿ ಬೆಳೆಸುವ ಅಗಸೆ ಗಿಡಕ್ಕೆ ತಗಲುವ ಹಳದಿ ಚುಕ್ಕೆ ರೋಗಕ್ಕೆ ಕಾರಣವಾದ ವೈರಾಣುವಿನ ಸ್ಫಟಿಕವೊಂದನ್ನು ಎಕ್ಸ್-ಕಿರಣಗಳಿಗೆ ಒಡ್ಡಿದಾಗ ದೊರಕಿದ ಚಿತ್ರ. ಪ್ರತಿಫಲಿತ ಬಿಂದುಗಳಲ್ಲಿರುವ ತೀವ್ರತೆ (intensity) ವೈರಾಣುವಿನ ಅಣುರಚನೆಯನ್ನು ಸೂಚಿಸುತ್ತದೆ. ಇಂತಹ ಎಕ್ಸ್-ಕಿರಣಗಳ ಚದುರುವಿಕೆಗೆ ಎಕ್ಸ್-ಕಿರಣ ವಿವರ್ತನ (X-ray diffraction) ಎಂದು ಕರೆಯುತ್ತಾರೆ.

ಈ ಪ್ರಯೋಗಗಳು ನಡೆದಾಗ ಮುಂದೊಂದು ದಿನ ಈ ಶೋಧನೆಗಳು ಜೀವವಿಜ್ಞಾನಕ್ಕೆ ವರವಾಗಿ ಪರಿಣಮಿಸಬಹುದೆಂದು ಯಾರೂ ಅಂದುಕೊಂಡಿರಲಿಲ್ಲ. ಸ್ಫಟಿಕದಿಂದ ಎಕ್ಸ್-ಕಿರಣಗಳು ಚದುರಿ ಬರುವ ದಿಕ್ಕುಗಳು ಸ್ಫಟಿಕದಲ್ಲಿರುವ ಅಣುಗಳ ನಡುವಿನ ದೂರವನ್ನು (intermolecular distances) ತಿಳಿಸಿಕೊಡುತ್ತವೆ. ಹಾಗೆ ಚದುರಿಬರುವ ಕಿರಣಗಳ ತೀವ್ರತೆ (intensity) ಸ್ಫಟಿಕದಲ್ಲಿರುವ ಅಣು ರಚನೆಯ (molecular structure) ಫಲ. ಹೆಬ್ಬೆಟ್ಟಿನ ಗುರುತು ಅದರ ಯಜಮಾನನ ಖಚಿತ ಚಿಹ್ನೆಯಾಗಿರುವಂತೆ, ಚದುರಿಬರುವ ಕಿರಣಗಳ ತೀವ್ರತೆಗಳು (intensities) ಸ್ಫಟಿಕದಲ್ಲಿರುವ ಅಣು ರಚನೆಯ ಗುರುತಾಗಿರುತ್ತವೆ. ಆದ್ದರಿಂದ ಈ ತೀವ್ರತೆಗಳ ಮಟ್ಟವನ್ನು ಅಳೆಯುವುದರಿಂದ, ಸ್ಫಟಿಕದಲ್ಲಿರುವ ಅಣುಗಳ ರಚನೆಯನ್ನು ಕಂಡುಕೊಳ್ಳಬಹುದು. ಈ ವಿಧಾನವನ್ನು ಬಳಸಿದವರಲ್ಲಿ ಮೊದಲಿಗರು ಸರ್ ವಿಲಿಯಮ್ ಬ್ರಾಗ್ ಹಾಗೂ ಸರ್ ಲಾರೆನ್ಸ್ ಬ್ರಾಗ್ (ತಂದೆ, ಮಕ್ಕಳು). ಇವರು ಎಕ್ಸ್-ಕಿರಣವನ್ನು ಅಡುಗೆ ಉಪ್ಪಿನ ಸ್ಫಟಿಕಗಳ ಮೇಲೆ ಬಳಸಿ, ಉಪ್ಪಿನ ಸ್ಫಟಿಕ ರಚನೆ ಬಿಡಿಸಿದರು. ಈ ಸಂಶೋಧನೆಗಾಗಿ ಇವರಿಬ್ಬರಿಗೂ ನೊಬೆಲ್ ಪಾರಿತೋಷಕ ದೊರೆಯಿತು. ಇದೊಂದೇ ಬಾರಿ ತಂದೆ, ಮಗ ಇಬ್ಬರಿಗೂ ಒಟ್ಟಿಗೇ ನೊಬೆಲ್ ಪಾರಿತೋಷಕ ದೊರೆತಿರುವುದು. ಮಗ ಸರ್ ಲಾರೆನ್ಸ್ ಬ್ರಾಗ್ ನೊಬೆಲ್ ಪಾರಿತೋಷಕ ಪಡೆದವರಲ್ಲಿ ಅತ್ಯಂತ ಕಿರಿಯರು.

ಜೀವಕೋಶಗಳ ಕ್ರಿಯೆಯನ್ನು ಸಾವಿರಾರು ಬೃಹದಣುಗಳು (macromolecules) ನಿಯಂತ್ರಿಸುತ್ತವೆ. ಇವುಗಳಲ್ಲಿ ಪ್ರೋಟೀನ್ ಬೃಹದಣುಗಳು ಬಹು ದೊಡ್ಡ ಪಾತ್ರ ವಹಿಸುತ್ತವೆ. ಪ್ರತಿ ಬೃಹದಣುವಿನಲ್ಲಿಯೂ ಸಹಸ್ರಾರು ಪರಮಾಣುಗಳಿರುತ್ತವೆ. ಎಕ್ಸ್-ಕಿರಣಗಳನ್ನು ಬಳಸಿ ಸರಳ ಉಪ್ಪಿನ ರಚನೆಯನ್ನು ಬಿಡಿಸುವುದಕ್ಕಿಂತ ಇದೇ ಕಿರಣಗಳನ್ನು ಬಳಸಿ ಜೀವಕೋಶದ ಬೃಹದಣುಗಳ ರಚನೆ ಕಂಡುಕೊಳ್ಳುವುದು ಲಕ್ಷಾಂತರ ಪಟ್ಟು ಕ್ಲಿಷ್ಟವಾದ ಸಮಸ್ಯೆ. ಈ ಸಮಸ್ಯೆಯನ್ನು ಪರಿಹರಿಸುವ ಹರಸಾಹಸವನ್ನು ೧೯೩೦ರ ದಶಕದಲ್ಲಿ ಕೈಗೆತ್ತಿಕೊಂಡವರು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ, ಭೌತಶಾಸ್ತ್ರದಲ್ಲಿ ಪಳಗಿದ ಮಾಕ್ಸ್ ಪೆರೂಟ್ಸ್ ಮತ್ತು ಜಾನ್ ಕೆಂಡ್ರೂ ಎನ್ನುವ ಯುವಕರು. ಆಗ ಅವರಿನ್ನೂ ವಿದ್ಯಾರ್ಥಿಗಳಾಗಿದ್ದರು. ನಮ್ಮ ರಕ್ತದಲ್ಲಿ ಹೀಮೋಗ್ಲಾಬಿನ್ (haemoglobin) ಎನ್ನುವ ಪ್ರೋಟೀನ್ ಬೃಹದಣುವಿದೆ. ಇದು ರಕ್ತಕ್ಕೆ ಕೆಂಪು ಬಣ್ಣ ನೀಡುತ್ತದೆ. ಹೀಮೋಗ್ಲಾಬಿನ್ ಎದೆಯ ಗೂಡಿನಲ್ಲಿ ಆಮ್ಲಜನಕವನ್ನು ಹೀರಿ, ನಮ್ಮ ಸ್ನಾಯುಗಳಿಗೆಲ್ಲಾ ರವಾನಿಸುತ್ತದೆ. ಆಮ್ಲಜನಕದ ಪೂರೈಕೆ ಮೆದುಳಿಗೆ ಹಲವು ನಿಮಿಷಗಳು ತಪ್ಪಿದರೂ ಸಾವು ನಿಶ್ಚಿತ.







೩. ತಂದೆ ಸರ್ ವಿಲಿಯಮ್ ಬ್ರಾಗ್ ಮತ್ತು ಮಗ ಸರ್ ಲಾರೆನ್ಸ್ ಬ್ರಾಗ್. ಇವರು ಉಪ್ಪಿನ ಹರಳುಗಳ ಎಕ್ಸ್-ಕಿರಣ ವಿವರ್ತನದಲ್ಲಿ (X-ray diffraction) ಪ್ರತಿಫಲಿತ ಕಿರಣಗಳ ತೀವ್ರತೆಗಳನ್ನು (intensities of reflections) ಬಳಸಿ ಉಪ್ಪಿನ ಪರಮಾಣು ವಿನ್ಯಾಸ ಕಂಡುಹಿಡಿದರು. ಉಪ್ಪಿನ ರಚನೆಯನ್ನು ಬಲಭಾಗದಲ್ಲಿ ತೋರಿಸಿದೆ. ಪ್ರತಿ ಸೋಡಿಯಮ್ ಪರಮಾಣುವಿನ (ಸಣ್ಣ ಗೋಲಗಳು) ಸುತ್ತ ಆರು ಸೋಡಿಯಮ್ (ದೊಡ್ಡ ಗೋಲಗಳು) ಪರಮಾಣುಗಳಿವೆ. ಹಾಗೆಯೇ ಪ್ರತಿ ಕ್ಲೋರೀನ್ ಪರಮಾಣುವಿನ ಸುತ್ತ ಆರು ಸೋಡಿಯಮ್ ಪರಮಾಣುಗಳಿವೆ. ಈ ಆವಿಷ್ಕಾರಕ್ಕಾಗಿ ತಂದೆ, ಮಗ ಇಬ್ಬರಿಗೂ ನೊಬೆಲ್ ಪಾರಿತೋಷಕ ದೊರೆಯಿತು.

ಮಯೋಗ್ಲಾಬಿನ್ (myoglobin) ಎನ್ನುವ ಬೃಹದಣು ನಮ್ಮ ಸ್ನಾಯುಗಳಲ್ಲಿದ್ದು ರಕ್ತದಲ್ಲಿಯ ಆಮ್ಲಜನಕವನ್ನು ಹೀರಿಕೊಂಡು ಸಂಗ್ರಹಿಸುತ್ತದೆ. ಮಯೋಗ್ಲಾಬಿನ್ ಪ್ರೋಟೀನ್ ಬೃಹದಣುವಿನ ರಚನೆಯನ್ನು ೧೯೬೦ರಲ್ಲಿ ಜಾನ್ ಕೆಂಡ್ರೂ ಮತ್ತು ಹೀಮೋಗ್ಲಾಬಿನ್ ಬೃಹದಣುವಿನ ರಚನೆಯನ್ನು ೧೯೬೨ರಲ್ಲಿ ಮಾಕ್ಸ್ ಪೆರೂಟ್ಸ್ ಕಂಡು ಹಿಡಿದರು. ಹೊಸ ಸೈದ್ಧಾಂತಿಕ ಹಾಗೂ ಪ್ರಾಯೋಗಿಕ ಮಾರ್ಗಗಳು ಅಗತ್ಯವಾಗಿದ್ದ ಈ ಸಾಧನೆಯಲ್ಲಿ ಜಾನ್ ಕೆಂಡ್ರೂ ಮತ್ತು ಮಾಕ್ಸ್ ಪೆರೂಟ್ಸ್ ಮೂರು ದಶಕಗಳನ್ನು ಕಳೆದಿದ್ದರು. ಇವರ ಸಾಧನೆಗಾಗಿ ಇಬ್ಬರಿಗೂ ನೊಬೆಲ್ ಪಾರಿತೋಷಕ ದೊರೆಯಿತು. ಇವರ ಸಾಧನೆಯ ನಂತರ ಪ್ರೋಟೀನ್ ಬೃಹದಣುಗಳ ರಚನೆಯನ್ನು ತಡವಿಲ್ಲದೆ ನಿರ್ಧರಿಸುವ ಮಾರ್ಗಗಳು ತ್ವರಿತವಾಗಿ ಬೆಳೆದುಬಂದವು. ಈಗ ಹೀಮೋಗ್ಲಾಬಿನ್ ಗಾತ್ರದ ಪ್ರೋಟೀನ್ ಅಣು ರಚನೆ ಬಿಡಿಸಲು ಒಂದು ವರ್ಷವೂ ಬೇಕಾಗಿಲ್ಲ. ಈಗಾಗಲೇ ಸುಮಾರು ೩೦,೦೦೦ ಪ್ರೋಟೀನುಗಳ ರಚನೆ ನಮಗೆ ತಿಳಿದಿದೆ. ಇವುಗಳಲ್ಲಿ ಕಿಣ್ವಗಳು (enzymes), ಹಾರ್ಮೋನುಗಳು (harmones; ದೇಹದಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಇದ್ದರೂ ಅಗಾಧ ಪರಿಣಾಮ ಉಂಟುಮಾಡುವ ಪ್ರೋಟೀನುಗಳು; ಇನ್ಸುಲಿನ್ ಒಂದು ಉದಾಹರಣೆ), ವಿಷಕಾರಿ ಪ್ರೋಟೀನುಗಳು (toxins, ಉದಾಹರಣೆಗೆ ಹಾವು, ಚೇಳುಗಳ ಕಡಿತದಲ್ಲಿ ಒಸರುವ ಪ್ರೋಟೀನುಗಳು), ಜೀವಕೋಶಗಳ ನಡುವೆ ಸಂದೇಶವಾಹಕ ಪ್ರೋಟೀನುಗಳು, ವೈರಾಣುಗಳು (viruses, virus-like particles), ಸೂರ್ಯನ ಬೆಳಕನ್ನು ಹೀರಿ ಗ್ಲೂಕೋಸ್ ತಯಾರಿಕೆಯ ಕೆಲಸದಲ್ಲಿ ನೆರವಾಗುವ ಹರಿದ್ವರ್ಣದ ಪ್ರೋಟೀನುಗಳು (photosynthetic reaction centre), ಬೃಹತ್ ಪ್ರೋಟೀನ್ ಅಣುಗಳನ್ನು ಸಂಶ್ಲೇಷಿಸುವ ರೈಬೊಸೋಮುಗಳು (ribosomes), ಮುಂತಾದುವೆಲ್ಲಾ ಸೇರಿವೆ.



೪. ಮಾಕ್ಸ್-ಪೆರೂಟ್ಸ್, ಜಾನ್ ಕೆಂಡ್ರೂ ಅವರೇ ನಿರ್ಧರಿಸಿದ ಮೊದಲ ಪ್ರೋಟೀನ್ ಅಣುಗಳ ಮಾದರಿಯೊಂದಿಗೆ. ಇಬ್ಬರೂ ನೊಬೆಲ್ ಪಾರಿತೋಷಕ ವಿಜೇತರು.

ಎಕ್ಸ್-ಕಿರಣಗಳನ್ನು ಬಳಸಿ ಸಾಧಿಸಿದ ಮತ್ತೊಂದು ಇನ್ನೂ ಹೆಚ್ಚು ಪರಿಣಾಮಕಾರಿ ಸಂಶೋಧನೆ ಡೀಆಕ್ಸಿ ರೈಬೋನ್ಯೂಕ್ಲಿಯಿಕ್ (ಡೀ.ಎನ್.ಎ.) ಆಮ್ಲದ ರಚನೆ (DNA; deoxy ribonucleic acid). ಎಲ್ಲ ಜೀವಕೋಶಗಳಲ್ಲಿ ವಂಶವಾಹಿ ಮಾಹಿತಿ ಹೊತ್ತಿರುವ ಡೀ.ಎನ್.ಎ. ಅಣು ರಚನೆಯನ್ನು ಬಿಡಿಸುವ ಸಾಹಸದಲ್ಲಿ ತೊಡಗಿದ್ದ ಅನೇಕ ವಿಜ್ಞಾನಿಗಳಲ್ಲಿ ಜೇಮ್ಸ್ ವಾಟ್ಸನ್ ಮತ್ತು ಫ್ರಾನ್ಸಿಸ್ ಕ್ರಿಕ್ ಎನ್ನುವವರು ಸಫಲರಾದರು. ಜೇಮ್ಸ್ ವಾಟ್ಸನ್ ಜೀವಶಾಸ್ತ್ರದ ವಿಜ್ಞಾನಿಯಾಗಿದ್ದರು. ಫ್ರಾನ್ಸಿಸ್ ಕ್ರಿಕ್ ಭೌತಶಾಸ್ತ್ರದಲ್ಲಿ ಪಳಗಿದವರಾಗಿದ್ದರು. ಡೀ.ಎನ್.ಎ. ರಚನೆ ಜೀವಶಾಸ್ತ್ರದ ಅಡಿಗಲ್ಲು ಎನಿಸಿದೆ. ಜೀವಕೋಶದ ಎಲ್ಲ ಕ್ರಿಯೆಗಳನ್ನೂ, ಜೀವವಿಕಾಸವನ್ನೂ ಈ ಅಣು ರಚನೆಯ ಸಹಾಯವಿಲ್ಲದೇ ಅರಿಯಲಾಗದು ಎನ್ನುವ ಹೆಗ್ಗಳಿಕೆಯನ್ನು ಈ ಅಣು ಗಳಿಸಿದೆ. ಈ ಸಾಧನೆಗೆ ಜೇಮ್ಸ್ ವಾಟ್ಸನ್ ಮತ್ತು ಫ್ರಾನ್ಸಿಸ್ ಕ್ರಿಕ್ಕರಿಗೆ, ಹಾಗೂ ಅವರ ಸಂಶೋಧನೆಗೆ ಅಗತ್ಯವಾಗಿದ್ದ ಡೀ.ಎನ್.ಎ. ಅಣುಗಳ ಎಕ್ಸ್-ಕಿರಣ ವಿವರ್ತನ ಚಿತ್ರಗಳನ್ನು (X-ray diffraction patterns) ತೆಗೆದ ಭೌತಶಾಸ್ತ್ರಜ್ಞ ಮಾರಿಸ್ ವಿಲ್ಕಿನ್ಸ್‌ರವರಿಗೆ ನೊಬೆಲ್ ಪಾರಿತೋಷಕ ದೊರೆಯಿತು.





೫. ಡೀಆಕ್ಸಿ ರೈಬೋನ್ಯುಕ್ಲಿಯಿಕ್ ಆಮ್ಲದ (DNA; deoxy ribonucleic acid) ರಚನೆ ಬಿಡಿಸಿದ್ದಕ್ಕಾಗಿ ನೊಬೆಲ್ ಪಾರಿತೋಷಕ ಪಡೆದ ಫ್ರಾನ್ಸಿಸ್ ಕ್ರಿಕ್, ಜೇಮ್ಸ್ ವಾಟ್ಸನ್ ಹಾಗೂ ಮಾರಿಸ್ ವಿಲ್ಕಿನ್ಸ್.

೧೯೦೫ರಲ್ಲಿ ಐನ್‌ಸ್ಟೈನರು ಪ್ರಕಟಿಸಿದ ಒಂದು ಲೇಖನ ಬೆಳಕಿನ ಸ್ವರೂಪವನ್ನು ಕುರಿತಾಗಿತ್ತು. ಅಲ್ಲಿಯವರೆಗೆ ಬೆಳಕನ್ನು ವಿದ್ಯುತ್ ಅಯಸ್ಕಾಂತ ಅಲೆಗಳೆಂದು ನಂಬಲಾಗಿತ್ತು. ಸಮುದ್ರದ ಮೇಲೆ ಹರಿದುಹೋಗುತ್ತಿರುವಂತೆ ನಮಗೆ ಭಾಸವಾಗುವ ನೀರ ಹೊಯ್ದಾಟ ಒಂದು ಅಲೆ. ಆದರೆ ಕೆಲವು ಪ್ರಯೋಗಗಳ ಫಲಿತಾಂಶಕ್ಕೆ ಬೆಳಕಿನ ಅಲೆಗಳ ಸ್ವರೂಪ ಹೊಂದಿಕೊಳ್ಳುತ್ತಿರಲಿಲ್ಲ. ಇದಕ್ಕೆ ವಿರುದ್ಧವಾಗಿ ಎಲೆಕ್ಟ್ರಾನುಗಳನ್ನು ಕಣಗಳೆಂದು ಭಾವಿಸಿದ್ದರು. ಕಣಗಳಿಗೆ ಮಕ್ಕಳು ಆಡುವ ಗೋಲಿಗಳ ಗುಣಗಳಿರುತ್ತವೆ. ಒಂದು ಕಣಕ್ಕೆ ಮತ್ತೊಂದು ಕಣ ಸೇರಿಸಿದರೆ, ಎರಡು ಕಣಗಳು ದೊರೆಯುತ್ತವೆ. ಅಲೆಗಳ ಸ್ವಭಾವ ಬಹಳ ಬೇರೆ. ಒಂದು ಅಲೆಗೆ ಮತ್ತೊಂದು ಅಲೆ ಸೇರಿದರೆ ಅವುಗಳ ಉನ್ನತ ಬಿಂದುಗಳ ಸಾಪೇಕ್ಷ ಸ್ಥಾನವನ್ನನುಸರಿಸಿ (relative phase) ಪರಸ್ಪರ ಸ್ಥಗಿತಗೊಳ್ಳಬಹುದು ಇಲ್ಲವೇ ಮತ್ತೊಂದು ದೊಡ್ಡ ಅಲೆಯಾಗಬಹುದು. ಬೆಳಕಿಗೂ ಕಣಗಳ ಸ್ವಭಾವವಿದ್ದರೆ, ಹಲವಾರು ಪ್ರಯೋಗಗಳಿಗೆ ಸರಳ ವಿವರಣೆ ಒದಗಿಸಬಹುದೆಂಬುದು ಐನ್‌ಸ್ಟೈನರ ಅಭಿಪ್ರಾಯವಾಗಿತ್ತು. ಅಲೆ ಹಾಗೂ ಕಣಗಳ ಎರಡೂ ಸ್ವಭಾವ ಒಂದೇ ಭೌತಿಕ ಅಂಶಕ್ಕೆ ಇರಬಹುದಾದ ಸಾಧ್ಯತೆಯನ್ನು ಊಹಿಸಿಕೊಳ್ಳಲು ಐನ್‌ಸ್ಟೈನರಂತಹ ಮೇಧಾವಿ ಬೇಕಾಗಿತ್ತು. ಭೌತಶಾಸ್ತ್ರದಲ್ಲಿ ಬೆಳಕಿಗೆ ತರಂಗ ಸ್ವಭಾವ ಹಾಗೂ ಕಣಗಳ ಸ್ವಭಾವ ಎರಡೂ ಇರುವುದನ್ನು ಒಪ್ಪಿಕೊಳ್ಳಲಾಗಿದೆ. ಕೆಲವು ಪ್ರಯೋಗಗಳಲ್ಲಿ ಅದರ ಕಣಸ್ವರೂಪ ಪ್ರಕಟಗೊಳ್ಳುತ್ತದೆ. ಇನ್ನು ಕೆಲವು ಪ್ರಯೋಗಗಳಲ್ಲಿ ಅದರ ತರಂಗ ಸ್ವರೂಪ ಎದ್ದು ಕಾಣುತ್ತದೆ.

೧೯೨೪ರಲ್ಲಿ ಡೀ ಬ್ರಾಲೆ ಎಂಬ ಫ್ರೆಂಚ್ ಭೌತಶಾಸ್ತ್ರಜ್ಞರು ಇನ್ನೊಂದು ತರ್ಕ ಮುಂದಿಟ್ಟರು. ಪರಮಾಣುಗಳಲ್ಲಿ ಕೇಂದ್ರದ ಸುತ್ತ ಗಿರಕಿ ಹೊಡೆಯುವ ಎಲೆಕ್ಟ್ರಾನುಗಳು ಕಣ ಸ್ವರೂಪ ಹೊಂದಿವೆ ಎಂದು ಅಲ್ಲಿಯವರೆಗಿನ ಅಭಿಪ್ರಾಯವಾಗಿತ್ತೆಂದು ಗಮನಿಸಿದ್ದೇವೆ. ಬೆಳಕಿಗೆ ತರಂಗ ಹಾಗೂ ಕಣಗಳ ಸ್ವರೂಪವೆರಡೂ ಇರಬಹುದಾದರೆ, ಕಣಗಳೆಂದು ಅಲ್ಲಿಯವರೆಗೆ ಭಾವಿಸಿದ್ದ ಎಲೆಕ್ಟ್ರಾನುಗಳಿಗೂ ತರಂಗ ಸ್ವರೂಪ ಇರಬಹುದೆಂಬುದು ಡೀ ಬ್ರಾಲೆಯವರ ಯೋಚನೆಯಾಗಿತ್ತು. ಎಲೆಕ್ಟ್ರಾನುಗಳಿಗೆ ತರಂಗ ಸ್ವಭಾವವೂ ಇದ್ದರೆ, ಅವುಗಳನ್ನು ಕೂಡಾ ಎಕ್ಸ್-ಕಿರಣಗಳಂತೆ ವಿವರ್ತನ (diffraction) ಪ್ರಕ್ರಿಯೆಗೆ ಒಳಪಡಿಸಬಹುದು. ಈ ಪ್ರಯೋಗವನ್ನು ಇನ್ನಿಬ್ಬರು ಭೌತಶಾಸ್ತ್ರಜ್ಞರು ಪ್ರಯೋಗ ಮಾಡಿ ತೋರಿಸಿದರು. ಈಗ ನಮಗೆ ತಿಳಿದಿರುವಂತೆ, ಅಣು ಪ್ರಪಂಚದ ಎಲ್ಲ ಭೌತಿಕ ಕ್ರಿಯೆಗಳಲ್ಲೂ ಕಣಗಳ ಸ್ವರೂಪವನ್ನೂ ಹಾಗೂ ತರಂಗಗಳ ಸ್ವರೂಪವನ್ನೂ ಕಾಣುತ್ತೇವೆ.

ನಮಗೆ ಕಾಣುವ ಬೆಳಕಿನ ಸಹಾಯದಿಂದ ಸೂಕ್ಷ್ಮ ದೂರದರ್ಶಕಗಳನ್ನು ಸಿದ್ಧಪಡಿಸುವಂತೆ ಎಲೆಕ್ಟ್ರಾನ್ ಅಲೆಗಳನ್ನು ಬಳಸಿ, ಎಲೆಕ್ಟ್ರಾನ್ ಸೂಕ್ಷ್ಮ ದರ್ಶಕಗಳನ್ನು ಸೃಷ್ಟಿಸಲು ಸಾಧ್ಯವಾಗುತ್ತದೆ. ಇಂತಹ ಯಂತ್ರಗಳು ೧೯೫೦ರ ದಶಕದಲ್ಲಿ ಕಾಣಿಸಿಕೊಳ್ಳಲಾರಂಭಿಸಿದವು. ವೇಗವಾಗಿ ಚಲಿಸುತ್ತಿರುವ ಎಲೆಕ್ಟ್ರಾನ್ ಅಲೆಗಳ ತರಂಗ ದೂರ ಬೆಳಕಿನ ತರಂಗ ದೂರಕ್ಕಿಂತ ಬಹಳ ಕಡಿಮೆ. ಈ ಗುಣದಿಂದಾಗಿ, ಬೆಳಕಿನ ಸೂಕ್ಷ್ಮದರ್ಶಕದಲ್ಲಿ ಕಾಣಿಸದ ಅತಿ ಚಿಕ್ಕ ಕಣಗಳನ್ನೂ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ನೋಡಲು ಸಾಧ್ಯವಾಗುತ್ತದೆ. ಇಂತಹ ಸೂಕ್ಷ್ಮದರ್ಶಕಗಳನ್ನು ಬಳಸಿ, ಜೀವಕೋಶಗಳ ಒಳ ರಚನೆಗಳನ್ನು ಕಾಣಬಹುದು. ವೈರಾಣುಗಳ ರಚನೆ ಬಗ್ಗೆ ಸಂಶೋಧನೆ ನಡೆಸಬಹುದು. ವೈರಾಣುಗಳಲ್ಲೆಲ್ಲಾ ಮೊತ್ತಮೊದಲಿಗೆ ಕಂಡುಬಂದದ್ದು ತಂಬಾಕು ಗಿಡಗಳಿಗೆ ಮಚ್ಚೆ ರೋಗ ಬರಿಸುವ ವೈರಾಣು. ಇವುಗಳ ರಚನೆಯನ್ನು ಆರನ್ ಕ್ಲಗ್ ಎಂಬ

ಭೌತಶಾಸ್ತ್ರದಲ್ಲಿ ಪಳಗಿದ ವಿಜ್ಞಾನಿ ಬಿಡಿಸಿದರು. ಇದಕ್ಕಾಗಿ ಹಾಗೂ ಅವರ ಇತರ ಸಂಶೋಧನೆಗಳಿಗಾಗಿ ಅವರಿಗೆ ನೊಬೆಲ್ ಪಾರಿತೋಷಕ ದೊರೆಯಿತು.



೬. ಡೀ ಬ್ರಾಲೆ. ಎಲೆಕ್ಟ್ರಾನ್ ಕಣಗಳಿಗೂ ಅಲೆಯ ಸ್ವರೂಪವಿದೆಯೆಂಬ ಸಿದ್ಧಾಂತ ಮಂಡಿಸಿ, ಅದನ್ನು ದೃಢಪಡಿಸಿದ ನಂತರ ನೊಬೆಲ್ ಪಾರಿತೋಷಕ ಪಡೆದ ಫ್ರೆಂಚ್ ಭೌತಶಾಸ್ತ್ರಜ್ಞ.

ನಾವು ತಿಂದ ಆಹಾರ ನಮ್ಮ ದೇಹದಲ್ಲಿ ಲಕ್ಷಾಂತರ ಇತರ ಧಾತುಗಳಾಗಿ ಮಾರ್ಪಡುತ್ತದೆ. ಕೂದಲು, ಉಗುರುಗಳು ಸತತ ಬೆಳೆದರೂ ನಾವು ಅದನ್ನೇ ತಿನ್ನುವುದಿಲ್ಲ! ನಾವು ಸೇವಿಸಿದ ಆಹಾರವೇ ಕೂದಲಾಗಿ, ಉಗುರಾಗಿ ಬದಲಾಗುತ್ತದೆ. ಈ ಬದಲಾವಣೆಗಳು ನೂರಾರು ಹಂತಗಳಲ್ಲಿ ನಡೆಯುತ್ತವೆ. ಈ ಹಂತಗಳನ್ನೆಲ್ಲಾ ವಿವರವಾಗಿ ಪರೀಕ್ಷಿಸುವುದು ಜೀವ ವಿಜ್ಞಾನಿಗಳ ಒಂದು ಮುಖ್ಯ ಉದ್ದೇಶ. ಭೌತ ವಿಜ್ಞಾನಿಗಳು ನಿರ್ಮಿಸಿರುವ ಅಣು ಸ್ಥಾವರಗಳಲ್ಲಿ ವಿಕಿರಣಯುಕ್ತ ಧಾತುಗಳು (radio active substances) ಲಭಿಸುತ್ತವೆ. ಈ ವಿಕಿರಣಯುಕ್ತ ಧಾತುಗಳನ್ನು ಬಳಸಿ, ಅಣುಗಳು ಜೀವಕೋಶಗಳಲ್ಲಿ ಹೇಗೆ ಬದಲಾಗುತ್ತಾ ಹೋಗುತ್ತವೆ ಎಂಬುದನ್ನು ತಿಳಿಯಬಹುದು.




೭. ಎಲೆಕ್ಟ್ರಾನ್ ಸೂಕ್ಷ್ಮದರ್ಶಕ (ಮೊದಲ ತಲೆಮಾರಿಗೆ ಸೇರಿದ್ದು, ಈಗ ಇನ್ನೂ ಬಹು ಒಳ್ಳೆಯ ಸೂಕ್ಷ್ಮದರ್ಶಕಗಳಿವೆ) ಹಾಗೂ ಬಲಬದಿಯಲ್ಲಿ ಎಲೆಕ್ಟ್ರಾನ್ ಸೂಕ್ಷ್ಮ ದರ್ಶಕದ ಕಾರ್ಯತತ್ವವನ್ನು ತೋರಿಸಿದೆ.







೮. ಆರನ್ ಕ್ಲಗ್ ಮತ್ತು ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಕಾಣಿಸುವ ತಂಬಾಕು ಗಿಡಕ್ಕೆ ಹಳದಿ ಚುಕ್ಕೆ ಬರಿಸುವ ರೋಗದ ವೈರಾಣು (tobacco mosaic virus). ಅವರ ಸಂಶೋಧನೆಗಳಿಗಾಗಿ ಆರನ್ ಕ್ಲಗ್‌ರವರಿಗೆ ೧೯೮೨ರಲ್ಲಿ ನೊಬೆಲ್ ಪಾರಿತೋಷಕ ದೊರೆಯಿತು. ವೈರಾಣು ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ನೇರ ಕೋಲಿನಂತೆ ಕಾಣಿಸುತ್ತದೆ (ಮಧ್ಯದ ಚಿತ್ರ). ವೈರಾಣುವಿನ ವಿಸ್ತೃತ ರಚನೆಯನ್ನು ಎಕ್ಸ್-ಕಿರಣಗಳನ್ನು ಬಳಸಿ ನಿರ್ಧರಿಸಬಹುದು. ಬಲಗಡೆಯ ಚಿತ್ರದಲ್ಲಿ ವೈರಾಣುವಿನ ರಚನೆ ತೋರಿಸಿದೆ. ವೈರಾಣುವಿನ ಹೊರಮೈಯಿಂದ ಎದ್ದುಕಾಣುವ ರಚನೆಗಳು ಪ್ರೋಟೀನ್ ಅಣುಗಳು. ಒಳಗೆ ಸುರಳಿಯಾಕಾರದಲ್ಲಿ ಕಾಣುವುದು ವೈರಾಣುವಿನ ವಂಶವಾಹಿ ಮಾಹಿತಿ ಹೊಂದಿರುವ ಒಂದು ರೈಬೋನ್ಯೂಕ್ಲಿಯಕ್ ಆಮ್ಲದ ಬೃಹದಣು (RNA, ribonucleic acid).

ನಮ್ಮ ಜಗತ್ತಿನ ಸ್ವರೂಪದ ಬಗೆಗೂ, ಅದರ ಪ್ರಾರಂಭದ ಕ್ಷಣ ಎಂದು ನಂಬಲಾಗಿರುವ ಮಹಾಸ್ಫೋಟದ (big bang) ಬಗೆಗೂ ಹೆಚ್ಚಿಗೆ ತಿಳಿಯಲು, ಎಲೆಕ್ಟ್ರಾನ್ ಮುಂತಾದ ಕಣಗಳನ್ನು ಬೆಳಕಿನ ವೇಗಕ್ಕೆ ಸಮೀಪವಾಗಿರುವ ಅತ್ಯಧಿಕ ವೇಗಗಳಿಗೆ ಏರಿಸಿ, ಅವು ಪರಸ್ಪರ ಢಿಕ್ಕಿ ಹೊಡೆದಾಗ ಉಂಟಾಗುವ ಪರಿಣಾಮಗಳನ್ನು ಪರೀಕ್ಷಿಸಬೇಕಾಗುತ್ತದೆ. ಇದಕ್ಕಾಗಿ, ಭೌತಶಾಸ್ತ್ರಜ್ಞರು ಸಿಂಕ್ರೋಟ್ರಾನ್ ಎಂದು ಕರೆಸಿಕೊಳ್ಳುವ ಯಂತ್ರಗಳನ್ನು ಸೃಷ್ಟಿಸಿದ್ದಾರೆ. ಈ ಯಂತ್ರಗಳು ಗಾತ್ರದಲ್ಲಿ ಒಂದು ಸಣ್ಣ ಊರಿನಷ್ಟಿರುತ್ತವೆ. ಒಂದೆರಡು ಕಿಲೋಮೀಟರ್ ವ್ಯಾಪ್ತಿಯುಳ್ಳ ವೃತ್ತಾಕಾರದ ಸುರಂಗವನ್ನು ನಿರ್ವಾತಗೊಳಿಸಿ, ಅದರಲ್ಲಿ ಎಲೆಕ್ಟ್ರಾನ್ ಮುಂತಾದ ಕಣಗಳನ್ನು ಸೆಕೆಂಡಿಗೆ ಸುಮಾರು ೩೦೦,೦೦೦ ಕಿಲೋಮೀಟರ್ ವೇಗದಲ್ಲಿ ಸುತ್ತಿಸುತ್ತಾರೆ. ಈ ವೇಗದಲ್ಲಿ ಎಲೆಕ್ಟ್ರಾನುಗಳು ನಮ್ಮ ಭೂಮಿಯನ್ನು ಸೆಕೆಂಡಿಗೆ ಏಳು ಬಾರಿ ಸುತ್ತುಹೊಡೆದಾವು. ಈ ಯಂತ್ರ ಅವರ ಪ್ರಯೋಗಗಳಿಗೆ ಅಗತ್ಯ. ಆದರೆ, ಹೀಗೆ ಎಲೆಕ್ಟ್ರಾನುಗಳು ಸುತ್ತುತ್ತಿರುವಾಗ, ಅವುಗಳು ಎಕ್ಸ್-ಕಿರಣಗಳಂತಹ ಅಧಿಕ ಶಕ್ತಿಯ ವಿದ್ಯುತ್ ಅಯಸ್ಕಾಂತ ಅಲೆಗಳನ್ನು ಸತತ ಹೊರಸೂಸುತ್ತವೆ. ಆದ್ದರಿಂದ ಅವುಗಳಿಗೆ ಈ ಮಟ್ಟದ ಶಕ್ತಿಯನ್ನು ಸತತ ಪೂರೈಸಬೇಕಾಗುತ್ತದೆ. ಒಂದು ಸಿಂಕ್ರೋಟ್ರಾನಿನಲ್ಲಿ ವ್ಯಯವಾಗುವ ಶಕ್ತಿ ನಮ್ಮ ಸಣ್ಣ ನಗರಗಳಲ್ಲಿ ಎಲ್ಲ ಮನೆಗಳೂ ಸೇರಿ ಉಪಯೋಗಿಸಬಹುದಾದ ವಿದ್ಯುತ್ ಶಕ್ತಿಯಷ್ಟಿರುತ್ತದೆ (ಸುಮಾರು ೫೦,೦೦೦ ಮನೆಗಳಲ್ಲಿ ಬಳಸುವ ವಿದ್ಯುತ್ ಶಕ್ತಿಗೆ ಸಮ ಎನ್ನಬಹುದು). ಆದ್ದರಿಂದ ಈ ಶಕ್ತಿಯ ವ್ಯಯ ಭೌತಶಾಸ್ತ್ರಜ್ಞರಿಗೆ ಸಹಿಸಲೇಬೇಕಾದ ತಲೆನೋವು. ಇದನ್ನು ಕಂಡ ಜೀವಶಾಸ್ತ್ರಜ್ಞರು ಈ ಯಂತ್ರಗಳಿಂದ ಹೊರಹೊಮ್ಮುವ ಎಕ್ಸ್-ಕಿರಣಗಳು ಪ್ರೋಟೀನುಗಳ ರಚನೆ ಬಿಡಿಸಲು ಬೇಕಾದ ಅತ್ಯಮೂಲ್ಯ ವಿಕಿರಣ ಎಂದು ಕಂಡುಕೊಂಡರು. ಈ ಯಂತ್ರಗಳ ಸುತ್ತ ಪ್ರೋಟೀನ್ ರಚನೆಗೆ ಬೇಕಾದ ಪ್ರಯೋಗಾಲಯಗಳನ್ನು ನಿರ್ಮಿಸಿಕೊಂಡರು. ಈ ಬೆಳವಣಿಗೆಗಳಿಂದಾಗಿ, ಈ ದಿನಗಳಲ್ಲಿ ಪ್ರೋಟೀನ್ ರಚನೆ ಬಿಡಿಸುವುದು ಸುಲಭದ ಕೆಲಸ ಎನ್ನಿಸಿದೆ. ಪ್ರೋಟೀನ್ ರಚನೆ ಮೊದಲು ಬಿಡಿಸಿದ ಧೀಮಂತರಿಗೆ ಮೂರು ದಶಕಗಳು ಬೇಕಾದವು. ಈಗ ಈ ಧೀಮಂತಿಕೆ ಇಲ್ಲದ ಜೀವ ವಿಜ್ಞಾನಿಗಳೂ ಸುಲಭವಾಗಿ ಒಂದು ವರ್ಷದೊಳಗೆ ಪ್ರೋಟೀನ್ ರಚನೆ ಬಿಡಿಸುತ್ತಾರೆ.




೯. ನಗರ ಗಾತ್ರದ ಸಿಂಕ್ರೋಟ್ರಾನ್ ಯಂತ್ರ: ಪ್ರಬಲ ಎಕ್ಸ್-ಕಿರಣಗಳ ಆಗರ. ಭೌತಶಾಸ್ತ್ರಜ್ಞರಿಂದ ನಿರ್ಮಿತವಾದರೂ ಜೀವವಿಜ್ಞಾನಕ್ಕೆ ಅತ್ಯಮೂಲ್ಯ ಕೊಡುಗೆ ನೀಡುತ್ತಿದೆ.

೧೦. ಅಗಸೆ ಸೊಪ್ಪಿನ ಗಿಡಕ್ಕೆ ತಗಲುವ ಹಳದಿ ಚುಕ್ಕೆ ರೋಗಕ್ಕೆ ಕಾರಣವಾದ ವೈರಾಣುವಿನ ರಚನೆ (sesbania mosaic virus). ಎಡಬದಿಯಲ್ಲಿ ವೈರಾಣುವಿನಲ್ಲಿರುವ ಪ್ರೋಟೀನ್ ಅಣುಗಳ ಸುರಳಿ ಚಿತ್ರ. ಪ್ರೋಟೀನುಗಳು ಅಮೈನೋ ಆಮ್ಲಗಳ ಸರಪಣಿಗಳು (amino acid chain). ಚಿತ್ರ ಈ ಸರಪಣಿ ಸುತ್ತಿಕೊಂಡಿರುವ ಮಾದರಿಯನ್ನು ತೋರಿಸುತ್ತದೆ. ಇಂತಹ ರಚನೆಯಿರುವ ೧೮೦ ಪ್ರೋಟೀನ್ ಅಣುಗಳು ಒಟ್ಟು ಕೂಡಿ ವೈರಾಣುವಿನ ವಂಶವಾಹಿ ಮಾಹಿತಿಯಾದ ಒಂದು ರೈಬೋನ್ಯೂಕ್ಲಿಯಿಕ್ ಆಮ್ಲದ (ribonucleic acid) ಸುತ್ತ ಕೋಟೆಕಟ್ಟಿ (coat protein) ಅದನ್ನು ರಕ್ಷಿಸುತ್ತವೆ. ಬಲಗಡೆಯ ಚಿತ್ರ ಈ ಪ್ರೋಟೀನ್ ಕೋಟೆಯನ್ನು ತೋರಿಸುತ್ತದೆ. ಈ ವೈರಾಣುವಿನ ರಚನೆಯನ್ನು ಎಕ್ಸ್-ಕಿರಣ ವಿವರ್ತನ ವಿಧಾನ (diffraction) ಬಳಸಿ ತಾತಾ ವಿಜ್ಞಾನಮಂದಿರದಲ್ಲಿ ಬಿಡಿಸಲಾಗಿದೆ. ನಮಗೆ ತಗಲುವ ವೈರಸ್ ಕಾಯಿಲೆಗಳಿಗೆ ಕಾರಣವಾಗುವ ವೈರಾಣುಗಳ ರಚನೆಗಳನ್ನು ತಿಳಿದುಕೊಳ್ಳುವುದು ಅವುಗಳ ವಿರುದ್ಧ ಕೆಲಸಮಾಡುವ ಔಷಧಗಳ ತಯಾರಿಕೆಗೆ ಅಗತ್ಯ. ಏಡ್ಸ್‌ನಂತಹ ಮಾರಕ ರೋಗಗಳಿಗೆ ಈಗ ಲಭ್ಯವಿರುವ ಔಷಧಗಳನ್ನು ಎಕ್ಸ್-ಕಿರಣ ವಿವರ್ತನ ವಿಧಾನದಿಂದಲೇ (methods of X-ray diffraction) ಕಂಡುಕೊಳ್ಳಲಾಗಿದೆ.




ಪ್ರೋಟೀನುಗಳು ಬಹು ಜಟಿಲ ರಚನೆ ಹೊಂದಿವೆ. ಅವು ಅಮೈನೋ ಆಮ್ಲಗಳನ್ನು ಹೆಣೆದು ಪೋಣಿಸಿದ ಸರಪಣಿಗಳು. ಅಮೈನೋ ಆಮ್ಲಗಳಿಗೆ ಸರಳ ರಚನೆಯಿದೆ. ಪ್ರೋಟೀನುಗಳ ಸಂಶ್ಲೇಷಣೆಯಾದಾಗ, ಅದರ ಸರಪಣಿಯನ್ನು ಹೆಣೆಯುವ ರೈಬೋಸೋಮ್ ಎನ್ನುವ ಜೀವಕೋಶದ ಯಂತ್ರ ಒಟ್ಟು ೨೦ ಬಗೆಯ ಅಮೈನೋ ಆಮ್ಲಗಳನ್ನು ಬಳಸುತ್ತದೆ. ಪ್ರತಿ ಅಮೈನೋ ಆಮ್ಲದಲ್ಲೂ ಇಂಗಾಲದ ಒಂದು ಪರಮಾಣುವಿಗೆ (carbon atom) ಒಂದು ಕಾರ್ಬಾಕ್ಸಿಲ್ (carboxyl), ಒಂದು ಅಮೈನೋ (amino) ಹಾಗೂ ಪ್ರತಿ ಅಮೈನೋ ಆಮ್ಲಕ್ಕೂ ತನ್ನದೇ ಆದ ಒಂದು ಇಂಗಾಲಯುಕ್ತ ಶಾಖೆ (side chain) ರಾಸಾಯನಿಕ ಬಂಧದಿಂದ ಕೂಡಿರುತ್ತದೆ. ಇಂತಹ ಸರಪಣಿಗೆ ಯಾವ ಬಗೆಯ ರಚನೆಗಳು ಇರಬಹುದೆಂಬ ಸಮಸ್ಯೆಯ ಪರಿಹಾರ ಸುಲಭಸಾಧ್ಯವಲ್ಲ. ಮೊದಲು ಎಲೆಕ್ಟ್ರಿಕಲ್ ಇಂಜನಿಯರಿಂಗ್ ಪದವಿ ಪಡೆದು ನಂತರ ಸರ್ ಸೀ. ವೀ. ರಾಮನ್ನರ ಗರಡಿಯಲ್ಲಿ ಭೌತಶಾಸ್ತ್ರದಲ್ಲಿ ಪಳಗಿದ ನಮ್ಮ ದೇಶದ ವಿಜ್ಞಾನಿ ಡಾ|| ರಾಮಚಂದ್ರನ್‌ರವರು ಪ್ರೋಟೀನುಗಳ ರಚನೆಯ ಸಮಸ್ಯೆಯ ಪರಿಹಾರಕ್ಕೆ ಬಹು ದೊಡ್ಡ ಕಾಣಿಕೆ ಸಲ್ಲಿಸಿದರು. ಇದಲ್ಲದೇ ರಾಮಚಂದ್ರನ್‌ರವರು ಎಕ್ಸ್-ಕಿರಣ ವಿವರ್ತನ (X-ray diffraction) ವಿಧಾನ ಬಳಸಿ ಪ್ರಾಣಿಗಳ ಚರ್ಮದ ಪ್ರಮುಖ ಪ್ರೋಟೀನಾದ ಕಾಲೊಜನ್ ರಚನೆಯನ್ನೂ ಕಂಡುಹಿಡಿದರು. ಭೌತಶಾಸ್ತ್ರಜ್ಞರಾಗಿದ್ದು ಜೀವಶಾಸ್ತ್ರಕ್ಕೆ ದೊಡ್ಡ ಸೇವೆ ಸಲ್ಲಿಸಿದ ಭಾರತೀಯರಲ್ಲಿ ರಾಮಚಂದ್ರನ್ ಬಹಳ ದೊಡ್ಡವರು.



೧೧. ಈ ಚಿತ್ರದಲ್ಲಿ ತೋರಿಸಿರುವ ಎಲ್ಲ ಪ್ರೋಟೀನುಗಳನ್ನೂ ನಿಮ್ಮ ದೇಹ ನೀವು ಈ ಲೇಖನ ಓದುತ್ತಿರುವಂತೆ ಸಂಶ್ಲೇಷಿಸುತ್ತಿದೆ ಎಂದರೆ ನಂಬುತ್ತೀರ? ಇಲ್ಲಿ ತೋರಿಸಿರುವುದು ಪ್ರೋಟೀನ್ ಸರಪಣಿಗಳು ಮೂರು ಆಯಾಮಗಳಲ್ಲಿ ಹೇಗೆ ಸುರುಳಿ ಸುತ್ತಿಕೊಂಡಿವೆ ಎಂದು ಮಾತ್ರ. ಅವುಗಳ ವಿಸ್ತೃತ ರಚನೆ ಇನ್ನೂ ಸಂಕೀರ್ಣ. ಪ್ರೋಟೀನ್ ಅಣುವಿನಲ್ಲಿ ಇರುವ ಎಲ್ಲ ಪರಮಾಣುಗಳನ್ನೂ ತೋರಿಸಿದರೆ, ಗೋಜಲಾಗಿ ಏನೂ ತಿಳಿಯದಾದೀತು. ಆದರೆ ಈ ಎಲ್ಲ ಪ್ರೋಟೀನುಗಳನ್ನೂ ತಪ್ಪಿಲ್ಲದೇ ನಾವು ಸೇವಿಸುವ ಆಹಾರ ಬಳಸಿ ನಮ್ಮ ದೇಹ ತಯಾರಿಮಾಡಿಕೊಳ್ಳುತ್ತದೆ ಎನ್ನುವುದು ಅತ್ಯಾಶ್ಚರ್ಯಕರ ಸಂಗತಿ. ಈ ತಪ್ಪಿಲ್ಲದ ಕ್ರಿಯೆ ನಮ್ಮ ಆರೋಗ್ಯಕ್ಕೆ ಅತ್ಯಗತ್ಯ. ಈ ಎಲ್ಲ ರಚನೆಗಳನ್ನೂ ಎಕ್ಸ್-ಕಿರಣ ವಿವರ್ತನ (methods of X-ray diffraction) ವಿಧಾನದಿಂದ ಕಂಡುಕೊಳ್ಳಲಾಗಿದೆ.

ಜೀವಶಾಸ್ತ್ರಕ್ಕೆ ಭೌತಶಾಸ್ತ್ರದ ಕೊಡುಗೆ ಈ ಲೇಖನದಲ್ಲಿ ಉಲ್ಲೇಖಿಸಿದ ಭಾಗಗಳಿಗೆ ಮಾತ್ರ ಸೀಮಿತವಾಗಿಲ್ಲ. ಇಲ್ಲಿ ನಾವು ಪರಿಶೀಲಿಸಿರುವ ಭೌತಶಾಸ್ತ್ರದ ಕೊಡುಗೆಗಳು ಜೀವಶಾಸ್ತ್ರದಲ್ಲಿ ಮೂಲಭೂತ ಬದಲಾವಣೆಗಳನ್ನು ತಂದಿರುವುದು ಇಲ್ಲಿ ಪ್ರಸ್ತುತ ಪಡಿಸಿರುವ ವಿಷಯಗಳ ವಿಶೇಷ. ಈ ಭೌತಶಾಸ್ತ್ರದ ಕೊಡುಗೆಗಳು ಜೀವದ ಲಕ್ಷಣಗಳನ್ನು ಕುರಿತ ನಮ್ಮ ಧೋರಣೆಗಳನ್ನು ಬದಲಿಸಿವೆ. ಜೀವಶಾಸ್ತ್ರ ಭೌತಶಾಸ್ತ್ರದಿಂದ ಇನ್ನೂ ಅನೇಕ ಲಾಭಗಳನ್ನು ಗಳಿಸಿದೆ. ಈ ಕೆಲವು ಕೊಡುಗೆಗಳು ನಮ್ಮ ಜೀವನದಲ್ಲಿ ಒಮ್ಮೆಯಲ್ಲ ಇನ್ನೊಮ್ಮೆ ಕಾಣಿಸಿಕೊಳ್ಳುತ್ತವೆ. ಉದಾಹರಣೆಗೆ, ಹೃದಯದ ತಪಾಸಣೆಗಾಗಿ ಬಳಸುವ ಎಲೆಕ್ಟ್ರೋ ಕಾರ್ಡಿಯೋಗ್ರಮ್ (electro cardiogram, ECG), ಮೆದುಳಿನ ತಪಾಸಣೆಗೆ ಬಳಸುವ ಎಲೆಕ್ಟ್ರೋ ಎಂಕೆಫಲೋಗ್ರಮ್ (electro encephalogram, EEG), ಎಕ್ಸ್-ಕಿರಣಗಳನ್ನು ಬಳಸಿ ನಮ್ಮ ಮೆದುಳು ಮುಂತಾದ ಅಂಗಗಳ ಮೂರು ಆಯಾಮಗಳ ಚಿತ್ರ ರಚಿಸುವ ಸೀ.ಟೀ. ಸ್ಕ್ಯಾನ್ (C. T. Scan), ಹೈಡ್ರೋಜನ್ ಪರಮಾಣು ಕೇಂದ್ರ ಅಯಸ್ಕಾಂತ ಕ್ಷೇತ್ರದ ಗುಣವನ್ನು (spin of hydrogen nucleus) ಬಳಸಿಕೊಂಡು ನಮ್ಮ ಇಡೀ ದೇಹದ ಒಳಚಿತ್ರವನ್ನು ತೋರಿಸುವ ಎನ್.ಎಮ್.ಆರ್. ಇಮೇಜಿಂಗ್ (Nuclear Magnetic Resonance imaging – whole body scan) ಮುಂತಾದುವೆಲ್ಲಾ ಸೇರಿವೆ. ಈ ಕಡೆಯ ಸಾಧನ, ನಮ್ಮ ಮೆದುಳು ಕೆಲಸಮಾಡುವ ವಿಧಾನ ಮತ್ತು ವೈಯಕ್ತಿಕ ಅನಿಸಿಕೆಗಳಿಗೂ ಮೆದುಳಿನ ರಾಸಾಯನಿಕ ಕ್ರಿಯೆಗಳಿಗೂ ಇರುವ ಸಂಬಂಧ ತಿಳಿದುಕೊಳ್ಳಲು ಅತ್ಯಗತ್ಯ ಎನಿಸಿದೆ.

ಜೀವಶಾಸ್ತ್ರಕ್ಕೆ ಭೌತಶಾಸ್ತ್ರದ ಕೊಡುಗೆ ವಿಜ್ಞಾನದ ಒಂದು ಪ್ರಮುಖ ಲಕ್ಷಣದ ಕನ್ನಡಿ. ನಿಜವಾಗಿ ನಮ್ಮ ಕಲಿಕೆಯ ಮಿತಿಯಿಂದಾಗಿ, ನಾವು ವಿಜ್ಞಾನವನ್ನು ಬೇರೆ ಬೇರೆ ಶಾಖೆಗಳನ್ನಾಗಿ ಭಾಗಿಸಿ, ನಮಗೆ ರುಚಿಸುವ ಒಂದು ಭಾಗವನ್ನು ಮಾತ್ರ ಕಲಿಯುತ್ತೇವೆ. ಹೀಗೆ, ವಿಜ್ಞಾನ ಸಾವಿರಾರು ಶಾಖೆಗಳಾಗಿ ಒಡೆದಿದೆ. ಆದರೆ ಎಲ್ಲ ವಿಜ್ಞಾನಕ್ಕೂ ಸಂಶೋಧನೆಯ ಮಾರ್ಗ ಒಂದೇ. ಎಲ್ಲ ವಿಜ್ಞಾನಿಗಳೂ ಒಂದೇ ಸೂರಿನಡಿ ವಾಸಿಸುವ ವ್ಯಕ್ತಿಗಳು. ವಿಜ್ಞಾನದ ಒಂದು ಶಾಖೆ ಇನ್ನೊಂದು ಶಾಖೆಗೆ ಸತತ ತನ್ನ ಕಾಣಿಕೆಯನ್ನು ಸಲ್ಲಿಸುತ್ತಲೇ ಇರುತ್ತದೆ. ಒಂದು ಶಾಖೆಯ ಪ್ರಾಮುಖ್ಯತೆಯನ್ನು ಇನ್ನೊಂದು ಶಾಖೆಯಲ್ಲಿದ್ದು ಕಂಡುಕೊಳ್ಳಲು ಅದಕ್ಕೆ ಸರಿಹೊಂದುವ ದೂರದೃಷ್ಟಿ, ಮೇಧಾಶಕ್ತಿ ಇರಬೇಕಷ್ಟೆ. ೨೦ನೆಯ ಶತಮಾನದಲ್ಲಿ ಇಂತಹ ಅನೇಕ ಮೇಧಾವಂತ ಭೌತಶಾಸ್ತ್ರಜ್ಞರು ಜೀವಶಾಸ್ತ್ರಕ್ಕೆ ಅತಿ ದೊಡ್ಡ ಕಾಣಿಕೆ ಸಲ್ಲಿಸಿದ್ದಾರೆ. ಇವರ ಶ್ರಮದಿಂದಾಗಿ ಇಂದು ಜೀವವಿಜ್ಞಾನ ಕಲ್ಪನೆಗೂ ಮೀರಿದ ಪ್ರಗತಿ ತೋರಿಸಿದೆ.



೧೨. ಭೌತಶಾಸ್ತ್ರದಲ್ಲಿ ಪ್ರಥಮ ತರಬೇತಿ ಪಡೆದು ನಂತರ ಜೀವಶಾಸ್ತ್ರಕ್ಕೆ ಬಹುದೊಡ್ಡ ಸೇವೆ ಸಲ್ಲಿಸಿದ ಬಹುಮುಖ ಪ್ರತಿಭೆಯ ಡಾ. ಜಿ. ಎನ್. ರಾಮಚಂದ್ರನ್

ಪ್ರೊ|| ಎಮ್. ಆರ್. ಎನ್. ಮೂರ್ತಿ
ಪ್ರೊಫೆಸರ್, ಅಣು ಜೀವಶಾಸ್ತ್ರ ವಿಭಾಗ
ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು – ೫೬೦ ೦೧೨

# ನೂರು ತುಂಬಿದ ತಾಯಿ






ಮಾನವ ಸಂಬಂಧಗಳಲ್ಲಿ ತಾಯಿಗೆ ಒಂದು ವಿಶಿಷ್ಟ ಸ್ಥಾನ. ಆಕೆಗೆ ಸಂಬಂಧಿಸಿ ಎಲ್ಲರಲ್ಲೂ ಪೂಜ್ಯ ಹಾಗೂ ಗೌರವದ ಭಾವನೆ. ಆಕೆ ನಮಗೆಲ್ಲ ಜನ್ಮ ನೀಡಿದವಳಷ್ಟೆ. ಅಣ್ಣ ತಮ್ಮ, ಅಕ್ಕ ತಂಗಿ ಮತ್ತೆಲ್ಲರದು ರಕ್ತಸಂಬಂಧ. ತಾಯಿಯದಾದರೋ ಕರುಳು ಸಂಬಂಧ. ನಾವೆಲ್ಲ ಆಕೆಯ ಕರುಳ ಕುಡಿಗಳಷ್ಟೆ.

ಸಾಹಿತ್ಯ ಕ್ಷೇತ್ರದಲ್ಲೂ ತಾಯಿಗೆ ಒಂದು ವಿಶಿಷ್ಟ ಸ್ಥಾನ. ಆಕೆಯನ್ನು ಮೆಚ್ಚದಿರುವವರು, ಆಕೆಯಿಂದ ಸ್ಫೂರ್ತಿ ಪಡೆಯದಿರುವವರು ಪ್ರಪಂಚದ ಸಾಹಿತ್ಯ ಕ್ಷೇತ್ರದಲ್ಲಿ ಯಾರೂ ಇಲ್ಲವೆನ್ನಬಹುದು. ೧೯೦೬ರಲ್ಲಿ ಜನ್ಮತಾಳಿದ ಆಕೆಗೆ ಈಗ ನೂರು ತುಂಬಿದೆ. ಈ ಸಂದರ್ಭದಲ್ಲಿ ಆಕೆಯನ್ನು ಸ್ಮರಿಸುವುದು ಆಕೆಗೆ ನುಡಿನಮನ ಸಲ್ಲಿಸುವುದು ಸುಸಂಸ್ಕೃತರೆಲ್ಲರ ಆದ್ಯ ಕರ್ತವ್ಯ.

ನಾನಿಲ್ಲಿ ಉಲ್ಲೇಖಿಸುತ್ತಿರುವುದು ರಷ್ಯದ ಮಹಾನ್ ಸಾಹಿತಿ ಮಕ್ಸಿಂ ಗೋರ್ಕಿಯವರ ಅತ್ಯಂತ ಶ್ರೇಷ್ಠ ಹಾಗೂ ಜನಪ್ರಿಯ ಕಾದಂಬರಿ 'ತಾಯಿ'ಗೆ. ಈಗಾಗಲೇ ತಿಳಿಸಿರುವಂತೆ ಈ ಕೃತಿಯನ್ನು ಮೆಚ್ಚದಿರುವವರು, ಅದರ ಬಗೆಗೆ ಮುಕ್ತ ಕಂಠದ ಪ್ರಶಂಸೆ ಮಾಡದಿರುವವರು ಜಗತ್ತಿನ ಸಾಹಿತ್ಯ ಕ್ಷೇತ್ರದಲ್ಲಿ ಯಾರೂ ಇಲ್ಲವೆನ್ನಬಹುದು. ರಷ್ಯದ ಮತ್ತೊಬ್ಬ ಶ್ರೇಷ್ಠತಮ ಸಾಹಿತಿ ಲೆವ್ ತೋಲ್ಸ್ತೋಯ್, ಜರ್ಮನಿಯ ಸ್ಟೀಫನ್ ಝ್ವೀಗ್, ಆಂಗ್ಲ ಸಾಹಿತಿ ಬರ್ನಾರ್ಡ್ ಷಾ, ಫ್ರಾನ್ಸಿನ ರೊಮ್ಯೆ ರೋಲಾ, ಭಾರತದ ಕಿಶನ್ ಚಂದರ್... ಹೀಗೆ ಪಟ್ಟಿ ಮಾಡುತ್ತ ಹೋದರೆ ಅದಕ್ಕೆ ಕೊನೆ ಮೊದಲೇ ಇಲ್ಲ. ಇವರೆಲ್ಲ ಗೋರ್ಕಿಯವರನ್ನು, ಅವರ ಜ್ವಲಂತ ಕಾದಂಬರಿ 'ತಾಯಿ'ಯನ್ನು ಹೊಗಳಿ ಹಾಡಿದ್ದಾರೆ. ''ಯೂರೋಪಿನಲ್ಲೆಲ್ಲ ಖ್ಯಾತಿ ಪಡೆದ ಶ್ಲಾಘನಾರ್ಹ ಲೇಖಕ'', ''ಗೋರ್ಕಿಯವರ ಪ್ರತಿಭೆಗೆ ಒಂದೇ ಒಂದು ಹೆಸರು. ಅದೇ ಸತ್ಯ'', ''ಗೋರ್ಕಿಯವರ ಕೃತಿಗಳು ಭರವಸೆ ನಂಬಿಕೆ ತುಂಬುತ್ತವೆ'', ''ಗೋರ್ಕಿಯವರು ಬಿರುಗಾಳಿಯ ನಡುವೆ ಜನ್ಮತಾಳಿ ನೂತನ ಜಗತ್ತಿಗೆ ಬೆಸೆದುಕೊಂಡ ಜೀವನ ಸಂಕೇತ'', ''ನೂತನ ಸಾಹಿತ್ಯ ಲಾಂಛನದಲ್ಲಿ ಗೋರ್ಕಿಯವರ ಹೃದಯವಿದೆ'' ಎಂದು ಮುಂತಾದ ಹೇಳಿಕೆಗಳೇ ಅವರ ಹಿರಿಮೆಯನ್ನು ಸಾರಿ ಹೇಳುತ್ತವೆ.


ಗೋರ್ಕಿಯವರ 'ತಾಯಿ' ಕಾದಂಬರಿಯಂತೂ ಇಡೀ ವಿಶ್ವಸಾಹಿತ್ಯ ಇತಿಹಾಸದಲ್ಲೇ ಭಾರಿ ಸಂಖ್ಯೆಯ ಓದುಗರನ್ನು ಪಡೆದ, ಅತ್ಯಂತ ಪರಿಣಾಮಕಾರಿಯಾಗಿ ಹಾಗೂ ನೇರವಾಗಿ ಕೋಟ್ಯಂತರ ಜನರ ಮೇಲೆ ಪ್ರಭಾವ ಬೀರಿದ ಕೃತಿಯೆಂದು ದಾಖಲೆ ಸೃಷ್ಟಿಸಿದೆ. ''ಇದೊಂದು ಅತ್ಯಂತ ಸಕಾಲಿಕ ಹಾಗೂ ಆವಶ್ಯಕ ಕೃತಿ. ಇದನ್ನು ಓದಿ ಪ್ರಭಾವಿತರಾದ ಲಕ್ಷಾಂತರ ಶ್ರಮಿಕರು ತಮಗರಿವಿಲ್ಲದಂತೆಯೇ ಕ್ರಾಂತಿಕಾರಿ ಚಳುವಳಿಯಲ್ಲಿ ಪಾತ್ರವಹಿಸಿದ್ದಾರೆ'' ಎಂದು ವಿ.ಐ. ಲೆನಿನರೇ ಈ ಕೃತಿಯ ಹೆಗ್ಗಳಿಕೆಯನ್ನು ಪ್ರಶಂಸಿಸಿದ್ದಾರೆ.



ಕೆ. ಎಲ್. ಗೋಪಾಲಕೃಷ್ಣ ರಾವ್




ಗೋರ್ಕಿಯವರ 'ತಾಯಿ' ಕಾದಂಬರಿಯಂತೂ ಇಡೀ ವಿಶ್ವಸಾಹಿತ್ಯ ಇತಿಹಾಸದಲ್ಲೇ ಭಾರಿ ಸಂಖ್ಯೆಯ ಓದುಗರನ್ನು ಪಡೆದ, ಅತ್ಯಂತ ಪರಿಣಾಮಕಾರಿಯಾಗಿ ಹಾಗೂ ನೇರವಾಗಿ ಕೋಟ್ಯಂತರ ಜನರ ಮೇಲೆ ಪ್ರಭಾವ ಬೀರಿದ ಕೃತಿಯೆಂದು ದಾಖಲೆ ಸೃಷ್ಟಿಸಿದೆ. ''ಇದೊಂದು ಅತ್ಯಂತ ಸಕಾಲಿಕ ಹಾಗೂ ಆವಶ್ಯಕ ಕೃತಿ. ಇದನ್ನು ಓದಿ ಪ್ರಭಾವಿತರಾದ ಲಕ್ಷಾಂತರ ಶ್ರಮಿಕರು ತಮಗರಿವಿಲ್ಲದಂತೆಯೇ ಕ್ರಾಂತಿಕಾರಿ ಚಳುವಳಿಯಲ್ಲಿ ಪಾತ್ರವಹಿಸಿದ್ದಾರೆ'' ಎಂದು ವಿ.ಐ. ಲೆನಿನರೇ ಈ ಕೃತಿಯ ಹೆಗ್ಗಳಿಕೆಯನ್ನು ಪ್ರಶಂಸಿಸಿದ್ದಾರೆ.

೧೯೦೫-೧೯೦೭ರಲ್ಲಿ ಜರುಗಿದ ಪ್ರಥಮ ರಷ್ಯನ್ ಕ್ರಾಂತಿಯ ಸಮಯದಲ್ಲಿ ರಚಿತವಾದ ಈ ಕಾದಂಬರಿ ಜಗತ್ತಿನ ಅನೇಕ ದೇಶಗಳಲ್ಲಿ ಓದುಗರ ಅಚ್ಚುಮೆಚ್ಚಿನ ಕೃತಿಯಾಗಿದೆ. ಬಹುಶಃ ಜಗತ್ತಿನ ಎಲ್ಲ ಭಾಷೆಗಳಲ್ಲೂ ಭಾಷಾಂತರಗೊಂಡು ಮಿಲಿಯಾಂತರ ಪ್ರತಿಗಳು ಮಾರಾಟವಾಗಿವೆ.

ಕನ್ನಡದಲ್ಲೂ ಈ ಕೃತಿ ಮೊತ್ತಮೊದಲ ಬಾರಿಗೆ ೧೯೪೦ರ ದಶಕದಲ್ಲಿ ಕಾಣಿಸಿಕೊಂಡಿತು. ಆರಂಭದಲ್ಲಿ ಶ್ರೀ ಕೆ. ವಿ. ರಾವ್ ಹಾಗೂ ನಿರಂಜನರಿಂದ ಭಾಷಾಂತರಿತವಾದ ಈ ಕೃತಿ ''ಚಿತ್ರಗುಪ್ತ'' ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡು ತುಂಬ ಜನಪ್ರಿಯತೆ ಗಳಿಸಿತು. ಅನಂತರ ೧೯೫೦ರ ದಶಕದಲ್ಲಿ ಮೈಸೂರು ಪ್ರಿಂಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್‌ನ ಶ್ರೀ ಜಿ. ಎಚ್. ರಾಮರಾವ್ ಹಾಗೂ ''ಭಾರತಿ ಪ್ರಕಾಶನ''ದ ಶ್ರೀ ನರಸಿಂಗರಾಯರ ಉತ್ಸಾಹದ ಪರಿಣಾಮವಾಗಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಇದೇ ಬಹುಶಃ ಕನ್ನಡದಲ್ಲಿ ಪ್ರಕಟವಾದ ತೆಳುರಟ್ಟಿನ ಅತ್ಯಂತ ಕಮ್ಮಿ ಬೆಲೆಯ ಹಾಗೂ ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಮುದ್ರಿತವಾದ ಪ್ರಪ್ರಥಮ ಕೃತಿಯಾಗಿದ್ದಿತು. ಇದಕ್ಕೆ ಹೆಸರಾಂತ ಕಲಾವಿದ ಆರ್. ಎಸ್. ನಾಯಿಡುರವರು ಮುಖಪುಟ ರಚಿಸಿ ಕೊಟ್ಟಿದ್ದರು. ಎಲ್ಲ ಪ್ರತಿಗಳೂ ಬಹು ಬೇಗನೆಯೇ ಮಾರಾಟವಾಗಿಹೋದವು.

ಅದು ಅತ್ಯಂತ ಜನಪ್ರಿಯ ನಾಟಕವಾಗಿ ರಂಗದ ಮೇಲೆ ಪ್ರದರ್ಶಿತವಾಯಿತು. ಕೊನೆಗೆ ಮಾಸ್ಕೋದ 'ರಾದುಗ ಪ್ರಕಾಶನ' ಇದನ್ನು ೧೯೮೧ರಲ್ಲಿ ಅತ್ಯಂತ ಅಚ್ಚುಕಟ್ಟಾಗಿ, ಇದಕ್ಕಾಗಿಯೇ ಬರೆದ ವಿಶೇಷ ಮುನ್ನುಡಿ-ಹಿನ್ನುಡಿಗಳೊಂದಿಗೆ ಕನ್ನಡದಲ್ಲಿ ಮಾಸ್ಕೋದಲ್ಲೇ ಮುದ್ರಿಸಿ ಪ್ರಕಟಿಸಿ ಬೆಂಗಳೂರಿನ 'ನವಕರ್ನಾಟಕ ಪ್ರಕಾಶನ'ಕ್ಕೆ ಮಾರಾಟಮಾಡಲು ಕಳಿಸಿಕೊಟ್ಟಿತು. ಇದು ಸಾವಿರಾರು

ಪ್ರತಿಗಳಲ್ಲಿ ಈಗಾಗಲೇ ಸಂಪೂರ್ಣವಾಗಿ ಮಾರಾಟವಾಗಿ ಹೋಗಿದೆ. ಇದನ್ನು ಸಿ. ವೀರಣ್ಣನವರು ರಂಗಕ್ಕೆ ಅಳವಡಿಸಿದರು. 'ಸಮುದಾಯ' ತಂಡದವರು ಅದ್ಭುತವಾಗಿ ರಂಗಪ್ರದರ್ಶನ ನೀಡಿದರು. ಇದು ಹಲವಾರು ತಿಂಗಳ ಕಾಲ ಪ್ರದರ್ಶಿತವಾಗಿ ಅತ್ಯಂತ ಜನಾನುರಾಗ ಗಳಿಸಿತು.

ಇತ್ತೀಚೆಗೆ ಚಿತ್ರ ನಿರ್ಮಾಪಕ ಪ್ರೊ|| ಬರಗೂರು ರಾಮಚಂದ್ರಪ್ಪನವರು 'ತಾಯಿ' ಕಥೆಯನ್ನು ಆಧರಿಸಿ ಕನ್ನಡದಲ್ಲಿ ಚಲನಚಿತ್ರ ತಯಾರಿಸಿದ್ದಾರೆ.

'ತಾಯಿ' ಭಾರತದ ಇತರ ಭಾಷೆಗಳಲ್ಲೂ ಪ್ರಕಟವಾಗಿ ತುಂಬ ಜನಪ್ರಿಯತೆ ಗಳಿಸಿತು. – ತಮಿಳಿನಲ್ಲಿ ಶ್ರೀ ಕರುಣಾನಿಧಿಯವರು 'ತಾಯಿ'ಯನ್ನು ಕವನರೂಪದಲ್ಲಿ ರಚಿಸಿ ಪ್ರಕಟಿಸಿದರು. ಈ ಕವನ ರೂಪದ ಆಂಗ್ಲ ರೂಪಾಂತರವೂ ಈಚೆಗೆ ಪ್ರಕಟವಾಗಿದೆ.

ಗೋರ್ಕಿಯವರು 'ತಾಯಿ' ಬರೆಯಲು ನಿರ್ಧರಿಸಿದುದು ೧೯೦೨ರಲ್ಲಿ. ನಿಝ್ನಿ-ನೊವ್ಗೊರೋದ್‌ನ ಕಾರ್ಮಿಕರು ಉಪನಗರ ಸೋರ್ಮೋವೋದಲ್ಲಿ ನಡೆಸಿದ 'ಮೇ ದಿನ'ದ ಪ್ರದರ್ಶನದ ನಂತರ ಅಂದಿನ ತ್ಸಾರ್‌ಶಾಹಿ ಸರಕಾರ ಆ ಪ್ರದರ್ಶನವನ್ನು ಹತ್ತಿಕ್ಕಿ ಅದರಲ್ಲಿ ಭಾಗವಹಿಸಿದ ಅನೇಕರ ಮೇಲೆ ನ್ಯಾಯಾಲಯದಲ್ಲಿ ಕಟ್ಲೆ ಹೂಡಿತು. ಗೋರ್ಕಿಯವರು ಆ ಪ್ರದರ್ಶನದಲ್ಲಿ ಭಾಗವಹಿಸಿದ್ದ ಅನೇಕರನ್ನು ತಿಳಿದಿದ್ದರು. ಅದರಲ್ಲೂ ಪ್ರದರ್ಶನದಲ್ಲಿ ಕೆಂಬಾವುಟ ಹಿಡಿದು ಮುಂದೆ ನಡೆದಿದ್ದ ಕಾರ್ಮಿಕ ನಾಯಕ ಪ್ಯೋತ್ರ ಜಲೋಮೋವ್ ಹಾಗೂ ಅವನ ತಾಯಿ ಆನ್ನಾ ಕಿರೀಲ್ಲೊವ್ನ ಜಲೋಮೋವಳನ್ನು ಗೋರ್ಕಿಯವರು ವೈಯಕ್ತಿಕವಾಗಿ ತಿಳಿದಿದ್ದರು. ಇವರೇ 'ತಾಯಿ' ಕಾದಂಬರಿಯ ಪಾವೆಲ್ ವ್ಲಾಸೋವ್ ಹಾಗೂ ಪೆಲಗೇಯ ನೀಲೊವ್ನ ವ್ಲಾಸೋವ ಪಾತ್ರಗಳ ಮೂಲವ್ಯಕ್ತಿಗಳು.

ಹಾಗಾಗಿ 'ತಾಯಿ' ಕಾದಂಬರಿ ಸಾಹಿತಿಯ ಕೇವಲ ಕಾಲ್ಪನಿಕ, ಕೃತಕ ಸೃಷ್ಟಿಯೇನಲ್ಲ. ವಾಸ್ತವಿಕ ನೆಲಗಟ್ಟು ಉಳ್ಳದ್ದು. ಆದರೂ ಇದೇನೂ ಸಾಕ್ಷ್ಯಚಿತ್ರದಂತಿಲ್ಲ. ಕಲಾವಂತಿಕೆಯ ಎಲ್ಲ ಗುಣಗಳಿಂದಲೂ ಪೂರಿತವಾಗಿದೆ. ಯಾವುದೇ ಕಾದಂಬರಿಯಲ್ಲೂ ಪಾತ್ರಗಳೇ ಬಹು ಮುಖ್ಯವಷ್ಟೇ. ಈ ಕಾದಂಬರಿಯಲ್ಲೂ ಎಲ್ಲ ಪಾತ್ರಗಳೂ ಜೀವಂತವಾಗಿ ತಮ್ಮವೇ ವಿಶಿಷ್ಟ ಗುಣ-ಲಕ್ಷಣಗಳಿಂದ ವಿಜೃಂಭಿಸುತ್ತವೆ. ಅಂತೆಯೇ ಕಥಾ ನಿರೂಪಣೆಯೂ ತುಂಬ ಸಹಜವಾಗಿದ್ದು ನಿರಾಳವಾಗಿ ಓದಿಸಿಕೊಂಡು ಹೋಗುತ್ತದೆ.



ಮಕ್ಸಿಂ ಗೋರ್ಕಿಯವರು ಈ ಕಾದಂಬರಿಯನ್ನು ರಚಿಸುವ ಕಾರ್ಯವನ್ನು ೧೯೦೬ರ ಜೂನ್‌ನಲ್ಲಿ ಅಮೆರಿಕದಲ್ಲಿ ಪ್ರವಾಸದಲ್ಲಿದ್ದಾಗ ಕೈಗೊಂಡರು. ಸೆಪ್ಟೆಂಬರ್ ಆರಂಭದ ಹೊತ್ತಿಗೆ ಮೊದಲ ಭಾಗ ಪೂರೈಕೆಗೊಂಡಿತು. ಎರಡನೆಯ ಭಾಗವನ್ನು ಅವರು ಇಟಲಿಯ ಕಾಪ್ರಿ ದ್ವೀಪದಲ್ಲಿದ್ದಾಗ ಡಿಸೆಂಬರ್ ಹೊತ್ತಿಗೆ ಪೂರೈಸಿದರು. 'ತಾಯಿ' ಕಾದಂಬರಿ ಮೊದಲು ಇಂಗ್ಲಿಷ್ ಭಾಷೆಯಲ್ಲಿ ೧೯೦೬ರ ಡಿಸೆಂಬರ್ – ೧೯೦೭ರ ಫೆಬ್ರವರಿಯಲ್ಲಿ ನ್ಯೂಯಾರ್ಕ್‌ನಲ್ಲಿ ಪ್ರಕಟವಾಯಿತು. 'ಆಪ್ಲ್‌ಟನ್ ಮ್ಯಾಗಜೀನ್' ಅದನ್ನು ಪ್ರಕಟಿಸಿತು. ಅನಂತರ ಈ ಕಾದಂಬರಿ ೧೯೦೭ರಲ್ಲಿ 'ಜ್ಞಾನಿಯೆ' ಸಂಗ್ರಹದ ೧೬-೨೧ನೇ ಸಂಪುಟಗಳಲ್ಲಿ ಪ್ರಕಟವಾಯಿತು.

ರಷ್ಯದಲ್ಲೇ ಈ ಕೃತಿ ೧೯೧೭ಕ್ಕೂ ಮುನ್ನ ಸೆನ್ಸಾರ್‌ಷಿಪ್‌ನ ಮೊಟಕು ಮಾಡಿದ ರೂಪದಲ್ಲಷ್ಟೆ ಪ್ರಕಟವಾಗಲು ಸಾಧ್ಯವಿದ್ದಿತು. ಕೃತಿ ಕರ್ತೃ ಆಲೆಕ್ಸೇಯ್ ಮಾಕ್ಸಿಮೋವಿಚ್ ಪೆಷ್ಕೋವ್ (ಮಕ್ಸಿಂ ಗೋರ್ಕಿ) ಮೇಲೆ ಮೊಕದ್ದಮೆಯನ್ನೂ ಹೂಡಲಾಯಿತು.

ಪ್ರಕಟವಾದ ಕೂಡಲೇ ಕಾದಂಬರಿ ತುಂಬ ಜನಪ್ರಿಯವಾಯಿತು. ೧೯೦೭-೧೯೦೮ರ ಹೊತ್ತಿಗಾಗಲೇ ಅದು ಅಮೆರಿಕ, ಬ್ರಿಟನ್, ಬಲ್ಗೇರಿಯ, ಜರ್ಮನಿ, ಹಾಲೆಂಡ್, ಡೆನ್‌ಮಾರ್ಕ್, ಸ್ಪೈನ್, ಇಟಲಿ, ಸೇರ್ಬಿಯ, ಟರ್ಕಿ, ಫಿನ್ಲೆಂಡ್, ಫ್ರಾನ್ಸ್, ಸ್ವೀಡನ್ ಮತ್ತಿತರ ದೇಶಗಳಲ್ಲಿ ಪ್ರಕಟವಾಗಿ ಅತ್ಯಂತ ಜನಪ್ರಿಯವಾಗಿ ಅನೇಕ ಆವೃತ್ತಿಗಳಲ್ಲಿ ಮುದ್ರಿತವಾಯಿತು.

ಐರೋಪ್ಯ ಶ್ರಮಜೀವಿಗಳಿಗೆ ಅದು ಒಂದು ರೀತಿಯ 'ಕೈಪಿಡಿ' ಯಾದಂತೆ ಇತರ ಖಂಡಗಳ ಕೋಟ್ಯಾಂತರ ಜನರ ಮೆಚ್ಚಿಗೆಗೆ ಪಾತ್ರವಾಯಿತು. ಕಾದಂಬರಿಯಲ್ಲಿ ತಾಯಿ ಪ್ರಧಾನ ಪಾತ್ರವಾದರೂ ಕಥಾವಸ್ತು ವಿಶಾಲವ್ಯಾಪ್ತಿಯದು. ಅದು ಆ ಕಾಲದ ಶ್ರಮಜೀವಿ ಜನರ ದುರ್ಭರ ಬಾಳಿನ ಹೃದಯಂಗಮ ಚಿತ್ರಣ ನೀಡುತ್ತದೆ. ಅಂಥ ಸನ್ನಿವೇಶದಲ್ಲಿ ಸರಳ ಮುಗ್ಧ ಮಾತೆಯೊಬ್ಬಳು ಹೇಗೆ ತನಗರಿವಿಲ್ಲದಂತೆಯೇ ಕಾರ್ಮಿಕ ವರ್ಗದ ಚಳವಳಿಯೊಳಕ್ಕೆ ಸೆಳೆಯಲ್ಪಟ್ಟು ವೀರಮಾತೆಯಾಗಿ ಮೆರೆದಳೆಂಬುದನ್ನು ಗೋರ್ಕಿಯವರು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಹೀಗಾಗಿ ಈ ಕಾದಂಬರಿ ವ್ಯಕ್ತಿಯ ಅಂತರಂಗದಲ್ಲಾಗುವ ಕ್ರಾಂತಿಕಾರಿ ಪರಿವರ್ತನೆಯ ಒಳನೋಟವನ್ನೂ ನೀಡುತ್ತದೆ.

ಗೋರ್ಕಿಯವರು ಆರಂಭದಿಂದಲೂ ತಾವು ಸೃಜಿಸಿದ ಸ್ತ್ರೀ ಪಾತ್ರಗಳಲ್ಲಿ ಅತ್ಯಂತ ಆದರದ ಆತ್ಮೀಯತೆಯ ಹಾಗೂ ಗೌರವದ ಭಾವನೆಗಳನ್ನು ಬಿಂಬಿಸಿದ್ದಾರೆ. ಅವರು ತಾಯ್ತನವನ್ನು ಅತ್ಯಂತ ಉದಾತ್ತ ರೀತಿಯಲ್ಲಿ ಕಂಡಿದ್ದಾರೆ. ''ತಾಯಿ – ಎಲ್ಲವನ್ನು ಗೆಲ್ಲಬಲ್ಲ ಜೀವನದ ಅಕ್ಷಯ ಆಕರವಾದ ಮಹಾಮಾತೆ. ಆಕೆಯನ್ನು ಹಾಡಿ ಹೊಗಳೋಣ'' ಎಂದವರು ತಮ್ಮ ''ಇಟಾಲಿಯನ್ ಕಥೆಗಳು'' ಎಂಬ ಗ್ರಂಥದ ಕಥೆಯೊಂದರಲ್ಲಿ ಉದ್ಗರಿಸಿದ್ದಾರೆ.

ಎಲ್ಲ ಮಾತೆಯರಂತೆ ಈ ಕಾದಂಬರಿಯ ತಾಯಿ ಪೆಲಗೇಯ ನೀಲೊವ್ನಳೂ ಇಡೀ ಜೀವಮಾನ ಹೆದರಿಕೆಯಲ್ಲೇ ಕಳೆದವಳು. ದಿಗಿಲು ತುಂಬಿಕೊಂಡೇ ಬಾಳಿ ಬೆಳೆದವಳು.

ಗೋರ್ಕಿಯವರೇ ಹೇಳುವಂತೆ, ''ಆಕೆ ಎತ್ತರವಾಗಿದ್ದಳು. ಸ್ವಲ್ಪ ಬಾಗಿದ ಮೈ. ಶ್ರಮದ ದುಡಿತದಿಂದಲೂ ಗಂಡನ ಹೊಡೆತದಿಂದಲೂ ಆಕೆಯ ದೇಹ ಹಣ್ಣಾಗಿತ್ತು. ಸದ್ದಿಲ್ಲದೆ ಸ್ವಲ್ಪ ಪಕ್ಕಕ್ಕೆ ವಾಲಿಕೊಂಡೇ ನಡೆಯುತ್ತಿದ್ದಳು – ಏನನ್ನಾದರೂ ಕೆಡವಿ ಬಿಡಬಹುದೆಂಬ ಭೀತಿ ಇದ್ದಹಾಗೆ. ಆಕೆಯ ಅಗಲವಾದ ದುಂಡುಮುಖ ತುಂಬಿಕೊಂಡಿತ್ತು, ಸುಕ್ಕುಗಟ್ಟಿತ್ತು. ಅಂಜಿಕೆ ಮತ್ತೆ ದುಃಖಗಳಿಂದ ತುಂಬಿದ್ದ ಕಪ್ಪನೆಯ ಕಣ್ಣುಗಳು... ...ಕೆಟ್ಟಸುದ್ದಿಯನ್ನೇ ಯಾವಾಗಲೂ ಅಂಜಿಯಂಜಿ ಕೇಳುತ್ತಿರುವಂಥ ಮುಖಮುದ್ರೆ... ಕೋಮಲತೆಯ, ದುಃಖದ, ಮೂಕ ವಿಧೇಯತೆಯ ಮೂರ್ತ ಸ್ವರೂಪಳಾಗಿದ್ದಳಾಕೆ...''

ಅವಳ ಮಗ ಪಾವೆಲ್ ವ್ಲಾಸೋವ್ ಒಬ್ಬ ಕ್ರಾಂತಿಕಾರಿ ನಾಯಕ, ಒಬ್ಬ ಉಕ್ಕಿನ ಮನುಷ್ಯ. ಸೈನಿಕ ಪೊಲೀಸರು ಮೊದಲ ಬಾರಿ ಅವನ ಮನೆ ಝಡತಿ ಮಾಡಲಿದ್ದಾರೆಂದು ತಿಳಿದಾಗ ತಾಯಿ ನೀಲೊವ್ನಳಿಗೆ ಅಂಜಿಕೆಯಾಗುತ್ತದೆ. ''...ಮನೆಯಲ್ಲಿದ್ದ ನಿಷೇಧಿತ ಪುಸ್ತಕಗಳನ್ನೆಲ್ಲ ಆಕೆ ಒಟ್ಟುಗೂಡಿಸಿದಳು. ಅವುಗಳನ್ನು ತನ್ನ ಎದೆಗೆ ಅವಚಿಕೊಂಡು ಅತ್ತಿತ್ತ ಓಡಿಯಾಡಿದಳು... ಅಡುಗೆ ಮನೆಯಲ್ಲಿ ಬೆಂಚಿನ ಮೇಲೆ ಪುಸ್ತಕಗಳನ್ನಿಟ್ಟು ಅವುಗಳ ಮೇಲೆ ತಾನೇ ಕುಳಿತುಕೊಂಡಳು...'' ಕೊನೆಗೆ ಸೈನಿಕ ಪೊಲೀಸರು ಬಂದು ಮನೆಯಲ್ಲಿದ್ದ ಪುಸಕಗಳನ್ನೆಲ್ಲ ವಶಪಡಿಸಿಕೊಂಡು ಹೊರಹೊರಟಾಗ ಆಕೆಯ ಕಣ್ಣುಗಳಲ್ಲಿ ಕಂಬನಿ ತುಂಬಿಬಂದಿತು. ಅದನ್ನು ಕಂಡ ಸೈನಿಕಾಧಿಕಾರಿ ಚೇಷ್ಟೆಯ ಮಾತನಾಡಿದಾಗ ತಾಯಿ ದಿಟ್ಟತನದಿಂದ ಹೇಳುತ್ತಾಳೆ : ''ಒಬ್ಬ ತಾಯಿಯ ಹತ್ತಿರ ಸಾಕಷ್ಟು ಕಣ್ಣೀರು ಇರುತ್ತವೆ... ನಿಮಗೂ ಒಬ್ಬ ತಾಯಿ ಇದ್ದರೆ ಆಕೆಗೆ ಖಂಡಿತ ಗೊತ್ತಿರುತ್ತೆ.'' ತದನಂತರ ತಾಯಿ ದುಃಖ-ಅಳುವಿನ ಸ್ಥಿತಿಯಿಂದ ಒಂದು ಹೆಜ್ಜೆ ಮುಂದೆ ಹೋಗುತ್ತಾಳೆ – ತಾನೇ ನಿಷಿದ್ಧ ಕರಪತ್ರ, ಘೋಷಣೆ, ಪತ್ರಿಕೆಗಳನ್ನು ಜನರ ಮಧ್ಯೆ ಗುಟ್ಟಾಗಿ ಹಂಚತೊಡಗುತ್ತಾಳೆ.

## ಕನ್ನಡದಲ್ಲಿ ಗೋರ್ಕಿಯವರ ಕೃತಿಗಳು

೧. **ಮಕ್ಸಿಂ ಗೋರ್ಕಿ-ಜೀವನ ಮತ್ತು ಕೃತಿ**
ಸಂ : ಅ. ನ. ಕೃಷ್ಣರಾವ್
ಪ್ರಗತಿಶೀಲ ಸಾಹಿತ್ಯ ಪ್ರಕಾಶನ, ಬೆಂಗಳೂರು.
೧೯೪೮

೨. **ತಾಯಿ**
ಅನುವಾದ : ನಿರಂಜನ
ಭಾರತಿ ಪ್ರಕಾಶನ, ಮೈಸೂರು.
೧೯೪೯

೨ಎ. **ತಾಯಿ**
ಅನುವಾದ : ನಿರಂಜನ
(ಮರು ಪ್ರಕಟಣೆ)
ರಾದುಗ ಪ್ರಕಾಶನ, ಮಾಸ್ಕೋ
ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೯೮೧

೩. **ಗೋರ್ಕಿಯವರ ಕಥೆಗಳು**
ಅನುವಾದ : ಕೆ. ವಿ. ಸುಬ್ಬಣ್ಣ
ಜನಶಕ್ತಿ ಪ್ರಕಾಶನ, ಬೆಂಗಳೂರು.
೧೯೫೨

೪. **ನನ್ನ ಬಾಲ್ಯ**
ಅನುವಾದ : ನಿರಂಜನ
ಜನಶಕ್ತಿ ಪ್ರಕಾಶನ, ಬೆಂಗಳೂರು.
೧೯...

೫. **ನನ್ನ ವಿಶ್ವವಿದ್ಯಾಲಯ**
ಅನುವಾದ : ನಿರಂಜನ
ಜನಶಕ್ತಿ ಪ್ರಕಾಶನ, ಬೆಂಗಳೂರು.

೬. **ನನ್ನ ಪ್ರಪಂಚ**
ಅನುವಾದ : ನಿರಂಜನ
ಜನಶಕ್ತಿ ಪ್ರಕಾಶನ, ಬೆಂಗಳೂರು.

೭. **ಅಧಃಪತನ**
ಅನುವಾದ : ನಿರಂಜನ
ಜನಶಕ್ತಿ ಪ್ರಕಾಶನ, ಬೆಂಗಳೂರು.

೮. **ನನ್ನ ಬಾಲ್ಯ**
ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್
(ಮರು ಪ್ರಕಟಣೆ)
ಪ್ರಗತಿ ಪ್ರಕಾಶನ, ಮಾಸ್ಕೋ
ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೯೮೨

೯. **ಜನರ ಮಧ್ಯೆ**
ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್
ರಾದುಗ ಪ್ರಕಾಶನ, ಮಾಸ್ಕೋ
ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೯೮೩

೧೦. **ನನ್ನ ವಿಶ್ವವಿದ್ಯಾಲಯಗಳು**
ಅನುವಾದ : ಕೆ. ಎಲ್. ಗೋಪಾಲಕೃಷ್ಣ ರಾವ್
(ಮರು ಪ್ರಕಟಣೆ)
ರಾದುಗ ಪ್ರಕಾಶನ, ಮಾಸ್ಕೋ
ನವಕರ್ನಾಟಕ ಪ್ರಕಾಶನ, ಬೆಂಗಳೂರು.
೧೯೮೪

ಎರಡನೆಯ ಬಾರಿ ಝಡತಿ ಮಾಡಿ ಮಗನನ್ನು ಕರೆದೊಯ್ದಾಗ ಆಕೆಗೆ ಸೈನಿಕ ಪೊಲೀಸರ ಬಗೆಗೆ... ಆ ಬೂದು ಬಣ್ಣದ ನಿಶಾಚರ ಅತಿಥಿಗಳ ಬಗೆಗೆ... ದ್ವೇಷ ಉಂಟಾಗಿ ಈ ದ್ವೇಷದಲ್ಲಿ ಅವಳ ಅಂಜಿಕೆ ಸಂಪೂರ್ಣವಾಗಿ ಕರಗಿಹೋಗುತ್ತದೆ. ಇದನ್ನು ಗೋರ್ಕಿಯವರು ಕೆಳಗಿನ ಭಾಗದಲ್ಲಿ ಮನಮುಟ್ಟುವಂತೆ ಚಿತ್ರಿಸಿದ್ದಾರೆ :

''ಹೋಗಿ ಬಾ, ಪಾಷ . ನಿನಗೆ ಬೇಕಾದುದನ್ನೆಲ್ಲ ತೆಗೆದುಕೊಂಡೆಯ ?''

''ಹೂಂ. ಬೇಸರ ಮಾಡಿಕೊಳ್ಳಬೇಡವಮ್ಮ.''

''ಇಲ್ಲಪ್ಪ. ದೇವರು ನಿನ್ನನ್ನು ಕಾಪಾಡಲಿ, ಮಗೂ...''

''ಅವರು ಆತನನ್ನು ಕರೆದುಕೊಂಡು ಹೋದಬಳಿಕ ಒಂದು ಬೆಂಚಿನ ಮೇಲೆ ಕುಸಿದು ಕುಳಿತು ಆಕೆ ನರಳಾಡಿದಳು. ತನ್ನ ಗಂಡ ಹಿಂದೆ ವಾಡಿಕೆಯಾಗಿ ಕುಳಿತುಕೊಳ್ಳುತ್ತಿದ್ದಂತೆ ಬೆನ್ನನ್ನು ಗೋಡೆಗೊರಗಿಸಿ ಕೊಂಡು ಅವಳು ಕುಳಿತಳು. ದುಃಖದಿಂದಲೂ ತಾನು ಅಸಹಾಯಕಳೆಂಬ ಅರಿವಿನ ನೋವಿನಿಂದಲೂ ಆಕೆ ಸಂಕಟ ಅನುಭವಿಸಿದಳು. ತನ್ನ ತಲೆಯನ್ನು ಹಿಂದಕ್ಕೆ ಬಾಗಿಸಿ ದೀರ್ಘ ಕಾಲದವರೆಗೆ ಮೆಲುದನಿಯಲ್ಲಿ ಅಳತೊಡಗಿದಳು. ಗಾಯಗೊಂಡ ಹೃದಯದ ನೋವೆಲ್ಲವೂ ಆ ರೋದನದಲ್ಲಿ ಬೆರೆತಿತ್ತು. ಆದರೆ ಆಕೆಯ ಒಳಗಣ್ಣಿನೆದುರು, ಅಧಿಕಾರಿಯ ತೆಳ್ಳಗಿನ ಮೀಸೆಯ, ಸಂತೋಷ ವ್ಯಕ್ತಮಾಡುತ್ತಿದ್ದ ಕಿರುಗಣ್ಣುಗಳ ನಿಶ್ಚಲವಾದ ಹಳದಿ ಮುಖ ಮತ್ತೆ ಮತ್ತೆ ಬಂದು ನಿಲ್ಲುತ್ತಿತ್ತು. ನ್ಯಾಯಕ್ಕಾಗಿ ಆಗ್ರಹಿಸಿದ ಕಾರಣದಿಂದ ಮಕ್ಕಳನ್ನು ತಾಯಂದಿರಿಂದ ಎಳೆದೊಯ್ಯುವ ಜನರ ವಿಷಯವಾಗಿ, ಕ್ರೋಧದ ದ್ವೇಷದ ಮೋಡವೊಂದು ಆಕೆಯ ಹೃದಯದಲ್ಲಿ ಮೂಡಿಬಂದು ಬಲಗೊಂಡಿತು...''

ಕೊನೆಯಲ್ಲಿ, ನ್ಯಾಯಾಲಯದಲ್ಲಿ ಮಗನ ವಿಚಾರಣೆಯಾಗಿ ಅವನ ಮೇಲೆ ಗಡೀಪಾರು ಶಿಕ್ಷೆ ಘೋಷಿಸಿದ ನಂತರ ಪೊಲೀಸರು ನೆರೆದಿದ್ದ ಜನಸಮೂಹದ ಮೇಲೆ ಹಲ್ಲೆ ಪ್ರಾರಂಭಿಸಿದಾಗ, ಮಗನ ಭಾಷಣವನ್ನು ಮುದ್ರಿಸಿದ್ದ ಕರಪತ್ರಗಳಿದ್ದ ಪೆಟ್ಟಿಗೆಯನ್ನು ಅಲ್ಲಿಯೇ ಬಿಟ್ಟುಹೋಗೋಣವೇ ಎಂಬ ಅಂಜಿಕೆ ತಾಯಿಯ ಮನಸ್ಸಿನಲ್ಲಿ ಮೊದಲು ಉಂಟಾದರೂ ಅವಳು ಅದನ್ನು ಹತ್ತಿಕ್ಕಿ ''ಎಷ್ಟು ನಾಚಿಕೆಗೇಡು ! ಮಗನನ್ನು ಅವಮಾನಗೊಳಿಸುವುದೆ ? ನನಗೆ ಯಾರ ಅಂಜಿಕೆಯೂ ಇಲ್ಲ'' ಎಂದು ಹೇಳಿಕೊಳ್ಳುತ್ತ ತಾನೇ ಕರಪತ್ರಗಳನ್ನು ಜನರ ಮಧ್ಯೆ ಬಹಿರಂಗವಾಗಿಯೇ ಹಂಚುತ್ತಾಳೆ. ಅವಳು ಎಸೆಯುತ್ತಿದ್ದ ಕರಪತ್ರಗಳನ್ನು ಜನರು ಹಾರಿ ಹಿಡಿದು ಅವನ್ನು ತಮ್ಮ ಕೋಟಿನ ಜೇಬುಗಳೊಳಕ್ಕೆ ತುರುಕಿಕೊಳ್ಳುತ್ತಿದ್ದುದನ್ನು ಕಂಡ ತಾಯಿಗೆ ಹೆಮ್ಮೆಯ ಸಂತೋಷದ ಭಾವನೆಯಾಯಿತು. ಆಕೆ ಪೆಟ್ಟಿಗೆಯಿಂದ ಕರಪತ್ರಗಳನ್ನು ಒಂದೇ ಸಮನೆ ತೆಗೆದು ಎಸೆಯುತ್ತ ಶಾಂತವಾಗಿ ಶಕ್ತಿಪೂರ್ಣವಾಗಿ ಮಾತನಾಡತೊಡಗಿದಳು. ಪೊಲೀಸರು ಆಕೆಯ ಮೇಲೂ ಕೈ ಮಾಡಿದಾಗ, ''ಮೂರ್ಖರೆ ! ನಾವು ನಿಮ್ಮನ್ನು ದ್ವೇಷಿಸೋ ಹಾಗೆ ಮಾತ್ರ ನೀವು ಮಾಡಬಲ್ಲಿರಿ ! ಇದೆಲ್ಲ ನಿಮ್ಮ ತಲೆಯ ಮೇಲೆಯೇ ಬರುತ್ತೆ!'' ಎಂದು ಘೋಷಿಸುತ್ತಾಳೆ. ಹೀಗೆ ಅವಳು ಅಂಜಿಕೆಯ ವಿರುದ್ಧ ದಿಗ್ವಜಯ ಸಾಧಿಸಿದ ವೀರಮಾತೆಯಾಗಿ ವಿಜೃಂಭಿಸುತ್ತಾಳೆ.

'ತಾಯಿ' ಕಾದಂಬರಿಯಲ್ಲಿ ತಾಯಿ ಪಾತ್ರದ ಚಿತ್ರಣಕ್ಕೆ, ಆಕೆಯಲ್ಲಾದ ಕ್ರಾಂತಿಕಾರಿ ಬದಲಾವಣೆಗೆ ಹೆಚ್ಚು ಮಹತ್ತ್ವ ನೀಡಿದಾಗಲೇ ಗೋರ್ಕಿಯವರು ಕ್ರಾಂತಿಕಾರಿ ಚಳವಳಿಯ ಬಗೆಗೆ ಜನಸಾಮಾನ್ಯರಲ್ಲಿದ್ದ ಕೆಲವು ತಪ್ಪು ಕಲ್ಪನೆಗಳನ್ನು ಹೋಗಲಾಡಿಸಲೂ, ಅದರ ನಿಜ ಧ್ಯೇಯ ಸ್ವರೂಪಗಳನ್ನು ಬಹಿರಂಗಪಡಿಸಲೂ ಯತ್ನಿಸಿದ್ದಾರೆ. ನ್ಯಾಯಾಲಯದ ವಿಚಾರಣೆಯಲ್ಲಿ ಪಾವೆಲ್ ಆಡಿದ ಈ ಮಾತುಗಳು ಇದನ್ನು ಸ್ಪಷ್ಟಪಡಿಸುತ್ತವೆ : ''ನಾವು ಕ್ರಾಂತಿಕಾರರು. ಎಲ್ಲಿಯವರೆಗೆ ಸಮಾಜದಲ್ಲಿ ಕೆಲವರು ಯಜಮಾನರಾಗಿ ಉಳಿದವರೆಲ್ಲ ಕೆಲಸಗಾರರಾಗಷ್ಟೆ ಇರುವ ಪದ್ಧತಿ ಇರುವುದೋ ಅಲ್ಲಿಯವರೆಗೆ ನಾವು ಕ್ರಾಂತಿಕಾರಿಗಳಾಗಿಯೇ ಉಳಿದಿರುತ್ತೇವೆ. ಯಾವ ಸಮಾಜದ ಹಿತಗಳನ್ನು ರಕ್ಷಿಸುವುದಕ್ಕೆ ನೀವು ಆಜ್ಞಾಧಾರಿಗಳಾಗಿದ್ದೀರೋ ಆ ಸಮಾಜದ ವಿರೋಧಿಗಳು ನಾವು. ಅವರ ಹಾಗೂ ನಿಮ್ಮ ಬದ್ಧ ವೈರಿಗಳು. ಹೋರಾಟದಲ್ಲಿ ನಾವು ವಿಜಯಿಗಳಾಗುವವರೆಗೂ ರಾಜಿ ಸಾಧ್ಯವಿಲ್ಲ... ಕಾರ್ಮಿಕರಾದ ನಾವು ವಿಜಯ ಗಳಿಸುವುದು ಖಂಡಿತ !... ನಿಮ್ಮ ಸುಳ್ಳು, ದುರಾಸೆ, ದುಷ್ಟತನಗಳು ಒಂದು ಪೈಶಾಚಿಕ ಪ್ರಪಂಚ ಸೃಷ್ಟಿಸಿವೆ... ನೀವು ಬದುಕಿನಿಂದ ಮನುಷ್ಯನನ್ನು ಹರಿದೆಳೆದು ಆತನನ್ನು ನಾಶಗೊಳಿಸಿದ್ದೀರಿ... ಸಮಾಜವಾದವು, ನೀವು ನಾಶಗೊಳಿಸಿದ ಪ್ರಪಂಚವನ್ನೆತ್ತಿಕೊಂಡು ಅದನ್ನು ಪುನಃ ಒಂದು ಅಖಂಡ ಮಹಾವಲಯವನ್ನಾಗಿ ಕಟ್ಟುತ್ತದೆ. ಹೌದು, ಅದು ಹಾಗೆಯೇ ಆಗುತ್ತದೆ !''

ಇಂಥ ರೋಚಕ ಅಂಶಗಳನ್ನುಳ್ಳ 'ತಾಯಿ' ಜಗತ್ತಿನಾದ್ಯಂತ ಕೋಟ್ಯಂತರ ಜನರ ಹೃನ್ಮನಗಳಲ್ಲಿ ಚಿರಸ್ಥಾಯಿಯಾಗಿ ನೆಲಸಿದ್ದಾಳೆ. ಅವರು ಅನ್ಯಾಯದ ವಿರುದ್ಧ ಹೋರಾಡುವಂತೆ ಸ್ಫೂರ್ತಿಗೊಳಿಸುತ್ತಿದ್ದಾಳೆ. ಕಾದಂಬರಿಯ ತಾಯಿಗೆ ೪೬ ವರ್ಷ ವಯಸ್ಸಾಗಿದ್ದರೂ, ಈ 'ತಾಯಿ'ಗೆ ಇದೀಗ ನೂರು ತುಂಬಿದೆ. ಈ 'ತಾಯಿ' ಹೀಗೆಯೇ ಇನ್ನೂ ನೂರಾರು ವರ್ಷ ಜೀವಂತವಾಗಿದ್ದು ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು ಎಂಬಂಥ ಸಮಾಜವಾದಿ ಸಮಾಜ ನಿರ್ಮಾಣದಲ್ಲಿ ಸ್ಫೂರ್ತಿಸೆಲೆಯಾಗಿದ್ದುಕೊಂಡು ಬರಲಿ ಎಂದು ಹಾರೈಸೋಣ.

**ಕೆ. ಎಲ್. ಗೋಪಾಲಕೃಷ್ಣ ರಾವ್**
೨೬೧, ೨ನೇ ಅಡ್ಡ ರಸ್ತೆ, ಸಿ. ಟಿ. ಬೆಡ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಶಾಸಕಾಂಗ - ನ್ಯಾಯಾಂಗ ಸಂಬಂಧಗಳು

ವಿಷ್ಣು ನಾಯ್ಕ

ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗಗಳ ಮಧ್ಯೆ ಇರಬೇಕಾದ ಸಂಬಂಧದ ಕುರಿತಾಗಿ ಮತ್ತು ಅವು ತಮ್ಮ ತಮ್ಮ ಕರ್ತವ್ಯಪಾಲನೆಯಲ್ಲಿ ತೊಡಗಿಕೊಂಡಿರಬೇಕಾದ ವಿಚಾರವಾಗಿ ಸಂವಿಧಾನದ ಒಳಗಡೆಯೇ ವಿವರಣೆಗಳು ಸಿಗುತ್ತವೆ. ಆದಾಗ್ಯೂ ಇವುಗಳ ಮಧ್ಯೆ ಆಗಾಗ ಸಂಘರ್ಷ ನಡೆದದ್ದಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಇಂಥ ಸಂಭವಗಳನ್ನು ತಳ್ಳಿಹಾಕುವಂತಿಲ್ಲ. ಈ ವ್ಯವಸ್ಥೆಯೇ ಹಾಗೆ. ಅದು ಮರುವಿಮರ್ಶೆಗೆ ಒಳಪಡುತ್ತಲೇ ಇರಬೇಕಾದದ್ದು. ಕಳೆದ ಐವತ್ತು ವರ್ಷಗಳಲ್ಲಿ ೮೦ರಷ್ಟು ತಿದ್ದುಪಡಿಗಳಿಗೆ ನಮ್ಮ ಸಂವಿಧಾನ ಒಳಪಟ್ಟಿರುವುದೇ ಇದಕ್ಕೊಂದು ಉತ್ತಮ ಉದಾಹರಣೆ.

ಪ್ರಸ್ತುತ ಇಲ್ಲಿ ಚರ್ಚೆಗೆ ಎತ್ತಿಕೊಳ್ಳಬಯಸಿದ ವಿಷಯ ನಮ್ಮ ಶಾಸಕಾಂಗ ಮತ್ತು ನ್ಯಾಯಾಂಗಗಳ ಸಂಬಂಧಗಳ ಕುರಿತಾದದ್ದು. ವಿಶೇಷವಾಗಿ ಕಳೆದ ಒಂದೆರಡು ವರ್ಷಗಳಿಂದ ನಮ್ಮ ನ್ಯಾಯಾಂಗ ವ್ಯವಸ್ಥೆ ಶಾಸಕಾಂಗದ ಕೆಲಸವನ್ನೂ ಭಾಗಶಃ ತಾನೇ ನಿರ್ವಹಿಸುತ್ತಿದೆಯೇ ಎಂಬಂಥ ಭಾವನೆ ಬರುವಂತೆ ಆಗಾಗ ಸುದ್ದಿಗಳನ್ನು ಮಾಡಿದ್ದಿದೆ. ಇದಕ್ಕೆ ಮುಖ್ಯ ಕಾರಣ ನಾನಂದುಕೊಂಡಂತೆ, ನ್ಯಾಯಾಂಗದ ಅತ್ಯುತ್ಸಾಹವಾಗಿರದೆ, ಶಾಸನಸಭೆಯಲ್ಲಿ ಕುಳಿತುಕೊಳ್ಳುವವರಲ್ಲಿ ದೇಶದ ಬಗ್ಗೆ ಅಲ್ಲಿಯ ಜನಸಾಮಾನ್ಯರ ಬಗ್ಗೆ ಇರಲೇಬೇಕಾಗಿರುವ ಕರ್ತವ್ಯಪ್ರಜ್ಞೆಯಲ್ಲಿಯ ಲೋಪವೇ ಆಗಿದೆ ಎನ್ನಬಹುದಾಗಿದೆ. ವಿಶೇಷವಾಗಿ, ಭಾರತದಂಥ ಸಂಕೀರ್ಣಮಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ತಾವು ನಿರ್ವಹಿಸಬೇಕಾದ ಗುರುತರ ಕರ್ತವ್ಯದಲ್ಲಿ ವಿರೋಧಪಕ್ಷಗಳು ವಿಫಲವಾಗಿರುವುದರಿಂದ ಸಾರ್ವಜನಿಕ ಹಿತಾಸಕ್ತಿಯ ಚರ್ಚೆಗಳು ಪಾರ್ಲಿಮೆಂಟಿನಲ್ಲಿ ಅಥವಾ ರಾಜ್ಯ ವಿಧಾನಸಭೆಗಳಲ್ಲಿ ಕಡಿಮೆಯಾಗಿ ಜನರು ನ್ಯಾಯಾಲಯಕ್ಕೆ ಮೊರೆಹೋಗುವಂಥ ನಿದರ್ಶನಗಳು ಇತ್ತೀಚಿನ ವರ್ಷಗಳಲ್ಲಿ ಹೆಚ್ಚುತ್ತಿವೆ. ಉದಾಹರಣೆಗೆ, ದೇಶದ ವಿಧಾನಸಭೆ ಮತ್ತು ಪಾರ್ಲಿಮೆಂಟುಗಳಲ್ಲಿ ನೆಹರೂ ಮತ್ತು ಲಾಲ್‌ಬಹಾದ್ದೂರ ಶಾಸ್ತ್ರಿ ಅವರ ಕಾಲದಲ್ಲಿ ನಡೆಯುತ್ತಿದ್ದಂಥ ರಚನಾತ್ಮಕ ಚರ್ಚೆಗಳೊಂದಿಗೆ ಅನಂತರದ ಕಾಲಾವಧಿಯ ಚರ್ಚೆಗಳನ್ನು ತುಲನೆಮಾಡಿ ನೋಡಿದರೆ ಸತ್ಯವೇನೆಂಬುದು ಹೊರಬೀಳುತ್ತದೆ. ಅಂದಿನ ವಿರೋಧಿ ಬಣದಲ್ಲಿದ್ದ ನಾಯಕರ ಬಗ್ಗೆ ದೇಶದ ಪ್ರಧಾನಿಗೂ, ಮುಖ್ಯಮಂತ್ರಿಗಳಿಗೂ ಸದಾ ಭಯ ಕಾಡುತ್ತಿತ್ತು. ಪ್ರಜಾಪ್ರಭುತ್ವದ ತಾಯ್ನೆಲವೆನ್ನಲಾದ ಇಂಗ್ಲೆಂಡಿನಲ್ಲಿ ಚಾಲ್ತಿಯಲ್ಲಿರುವ, 'The Prime Minister knows the opposition leader better than his wife' ಎಂಬ ಮಾತಿಗೆ ಇರುವ ಅರ್ಥವಿಸ್ತಾರವನ್ನು ಗಮನಿಸಬೇಕಿದೆ. ಭಾರತದ ಪ್ರಧಾನಿಗೆ ವಿರೋಧಿ ನಾಯಕನ ಬಗ್ಗೆ ಅಂಥ ಯಾವುದೇ ಕಾಳಜಿ ಯಾಕಿಲ್ಲ ಎಂದರೆ, ಆತನೂ ಕೂಡ ಇವನಂತೇ ತನ್ನ ಪಕ್ಷ, ತಾನು, ತನ್ನ ನೆಲ ಇಷ್ಟಕ್ಕೇ ಆಸಕ್ತಿಯನ್ನು ಹೊಂದಿದವನಾಗಿದ್ದಾನೆ. ಆಗಲೇ ಹೇಳಿದಂತೆ, ಇದೇ ಮಾತು ರಾಜ್ಯ ಶಾಸಕಾಂಗಗಳ ನಾಯಕರಿಗೂ ಅನ್ವಯಿಸುತ್ತದೆ. ಯಾರು ಎಷ್ಟು ಪ್ರಮಾಣದಲ್ಲಿ ಭ್ರಷ್ಟರು ಎಂಬುದು ನಿಷ್ಕರ್ಷೆಯಾಗಬೇಕೇ ಹೊರತು ನೂರಕ್ಕೆ ನೂರು ಜನಪರ ಪ್ರಾಮಾಣಿಕ ಮತ್ತು ಸಮಗ್ರ ನಾಡಿನ ಹಿತಚಿಂತನೆಯುಳ್ಳ ನಾಯಕರೇ, – ಆಳುವ ಪಕ್ಷದಲ್ಲಾಗಲೀ, ವಿರೋಧಿ ಪಕ್ಷದಲ್ಲಾಗಲೀ ಕಾಣುತ್ತಿಲ್ಲ. ಹೀಗಾಗಿ ಎಷ್ಟೋ ಸಂದರ್ಭಗಳಲ್ಲಿ ಶಾಸನಸಭೆಗಳಲ್ಲಿ ನಡೆಯಬೇಕಾಗಿದ್ದಂಥ ಸಂಪೂರ್ಣ ಜನಹಿತಕ್ಕೆ ಮೀಸಲಾದ ಚರ್ಚೆ ಇಂದು ನ್ಯಾಯಾಲಯಗಳಲ್ಲಿ ನಡೆಯುತ್ತಿರುವುದನ್ನು ಕಾಣುತ್ತೇವೆ.

ಶಾಸನಸಭೆಗಳಲ್ಲಿ ಕುಳಿತವರ ಈ ಬಗೆಯ ದೌರ್ಬಲ್ಯಗಳಿಂದಾಗಿ ಕೆಲವು ಸಂದರ್ಭಗಳಲ್ಲಿ ನ್ಯಾಯಾಲಯಗಳು ತಮ್ಮ ಚೌಕಟ್ಟನ್ನು ಮೀರಿ ಶಾಸಕಾಂಗವನ್ನು ವಿಮರ್ಶಿಸುವಷ್ಟರ ಮಟ್ಟಿಗೆ ಇತ್ತೀಚಿನ ಕೆಲವು ವರ್ಷಗಳ ಬೆಳವಣಿಗೆಗಳು ಜರುಗುತ್ತಿರುವುದು ಚಿಂತನೆಗೆ ಒಳಪಡಬೇಕಾದ ಸಂಗತಿ ಕೂಡ. ರಾಜಕೀಯ ಇಚ್ಛಾಶಕ್ತಿಯನ್ನು ಪ್ರದರ್ಶಿಸುವಲ್ಲಿ ಆಳುವ ಸರ್ಕಾರ ಸೋತಾಗ, ಅದನ್ನು ತಿವಿದು ಕಣ್ಣು ತೆರೆಯಿಸುವ ಕರ್ತವ್ಯದಲ್ಲಿ ವಿರೋಧ ಪಕ್ಷಗಳು ವಿಫಲವಾದಾಗ ಜನತೆಯ ಹಿತ ಕಾಯುವ ಕರ್ತವ್ಯ ನ್ಯಾಯಾಲಯಗಳದೇ ಆಗಿದೆ ಎಂಬಂಥ





ಶಾಸಕಾಂಗ ಮತ್ತು ಕಾರ್ಯಾಂಗದ ನಡುವೆ ಇತ್ತೀಚಿನ ವರ್ಷಗಳಲ್ಲಿ ಸಂಘರ್ಷದ ಸಂದರ್ಭಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿರುವುದು ನಿಜವಾಗಿಯೂ ಆತಂಕಕಾರಿ ಬೆಳವಣಿಗೆಯೇ ಆಗಿದೆ. ಜಾರ್ಖಂಡ್ ಸರ್ಕಾರ ರಚನೆ ಸಂದರ್ಭದಲ್ಲಿಯೆ ಸುಪ್ರೀಂ ಕೋರ್ಟಿನ ಮಧ್ಯಪ್ರವೇಶ ಕೇಂದ್ರ ಸರ್ಕಾರಕ್ಕೆ ಸಾಕಷ್ಟು ಮುಜುಗರ ಉಂಟುಮಾಡಿದ್ದಿದೆ. ಆದರೆ ಆ ಸಂದರ್ಭದಲ್ಲಿ ನ್ಯಾಯಾಂಗ ಮಧ್ಯಪ್ರವೇಶ ಮಾಡದಿದ್ದರೆ ಅರಾಜಕತೆ ಉಂಟಾಗುತ್ತಿತ್ತು ಎನ್ನುವ ಅಭಿಪ್ರಾಯವನ್ನೂ ಕೂಡ ಪೂರ್ತಿ ತಳ್ಳಿಹಾಕುವಂತಿರಲಿಲ್ಲ. ಪ್ರಜಾತಂತ್ರ ವ್ಯವಸ್ಥೆಯಲ್ಲಿಯ ಮೌಲ್ಯಗಳನ್ನು ರಕ್ಷಿಸುವಲ್ಲಿ ರಾಜಕೀಯ ಪಕ್ಷಗಳು ವಿಫಲವಾದಾಗ ನ್ಯಾಯಾಲಯಗಳ ಮಧ್ಯಪ್ರವೇಶ ಅನಿವಾರ್ಯವಾಗುತ್ತದೆಂಬ ಅಭಿಪ್ರಾಯ ಆ ಸನ್ನಿವೇಶದಲ್ಲಿ ದೇಶದೆಲ್ಲೆಡೆ ವ್ಯಕ್ತವಾಗಿದ್ದನ್ನು ನಿರ್ಲಕ್ಷಿಸುವಂತಿಲ್ಲ.

ತೀರ್ಮಾನಕ್ಕೆ ಬಹಳಷ್ಟು ನ್ಯಾಯವಾದಿಗಳು ಮತ್ತು ನ್ಯಾಯಾಧೀಶರು ಬಂದಂತೆ ತೋರುತ್ತದೆ. ಈ ಭಾವನೆ ಕೆಲವು ಅತಿರೇಕದ ತೀರ್ಪುಗಳಿಗೂ ಕೂಡ ಆಸ್ಪದ ಮಾಡಿಕೊಟ್ಟಿರಬಹುದೇ ಎಂಬ ಸಂಶಯ ಈಗೀಗ ಪ್ರಜ್ಞಾವಂತ ವಲಯವನ್ನು ಕಾಡದೇ ಬಿಟ್ಟಿಲ್ಲ.

ನ್ಯಾಯಾಲಯಗಳು ಸಂವಿಧಾನದ ನಿರ್ದೇಶಕ ತತ್ವಗಳಿಗೆ ಅದು ಹೇಳುವ ವಿಧಿ-ವಿಧಾನಗಳಿಗೆ ಒತ್ತುಕೊಟ್ಟು ತೀರ್ಪು ನೀಡುತ್ತಿವೆ ಎನ್ನುವುದು ಸಾಮಾನ್ಯ ಗ್ರಹಿಕೆ. ಸಂವಿಧಾನದಲ್ಲಿ ಎಲ್ಲವನ್ನೂ ಎಳೆಎಳೆಯಾಗಿ ಹಿಂಜಿ ಹೇಳಿರುವುದಿಲ್ಲ. ಆ ಕೆಲಸವನ್ನು ನ್ಯಾಯಾಲಯಗಳು ನಿರ್ವಹಿಸುವಾಗ ಕೆಲವು ಅತಿರೇಕದ ವ್ಯಾಖ್ಯಾನಗಳೂ ಪ್ರಕಟವಾಗುವಂಥ ಸಾಧ್ಯತೆ ಇಲ್ಲದೇ ಇಲ್ಲ.

ನ್ಯಾಯಾಲಯದಲ್ಲಿರುವವರೇ ಆಗಲಿ, ಪಾರ್ಲಿಮೆಂಟಿನಲ್ಲಿ ಕುಳಿತುಕೊಳ್ಳುವವರೇ ಆಗಲಿ ಆಕಾಶದಿಂದ ಇಳಿದುಬಂದವರೇನೂ ಅಲ್ಲ. ಹಾಗಿದ್ದರೆ ಒಂದು ಕೋರ್ಟು ನೀಡಿದ ತೀರ್ಮಾನವನ್ನು ಇನ್ನೊಂದು ಕೋರ್ಟು ತಡೆಹಿಡಿದು ಪುನರ್‌ವಿಮರ್ಶೆಗೆ ಒಳಪಡಿಸುತ್ತಿರಲಿಲ್ಲ. ಸುಪ್ರೀಂ ಕೋರ್ಟಿನ ಮೇಲೆ ಇನ್ನೊಂದು ಕೋರ್ಟು ಇದ್ದಿದ್ದರೆ ಅಲ್ಲಿಯ ತೀರ್ಪುಗಳೂ ಕೂಡ ಅದೆಷ್ಟು ಬಾರಿ ತಿರಸ್ಕರಣೆಗೆ ಒಳಗಾಗುತ್ತಿದ್ದವೋ!

ಇಲ್ಲಿ ಇನ್ನೂ ಒಂದು ಅಂಶವನ್ನು ಚರ್ಚಿಸಬೇಕಾದದ್ದಿದೆ. ಸಂವಿಧಾನದ ಮೂಲಭೂತ ರಚನೆ ಸದಾ ಕಾಲಕ್ಕೂ ಒಂದೇ ತೆರನಾಗಿರಬೇಕೇ?... ಅಥವಾ ಕಾಲದ ಕರೆಗೆ ತಕ್ಕಂತೆ ಅದರ ವ್ಯಾಖ್ಯಾನ ಬದಲಾಗಬೇಕೇ? – ಎಂಬುದು. ಬದಲಾಗಬೇಕೆಂದಾದಲ್ಲಿ ಅದನ್ನು ಬದಲಾಯಿಸುವ ಪರಮೋಚ್ಚ ಅಧಿಕಾರ ಇರುವುದು ಯಾರಿಗೆ?... ಪಾರ್ಲಿಮೆಂಟಿಗೆ ತಾನೆ?... ಈ ಸತ್ಯವನ್ನು ನಮ್ಮ ನ್ಯಾಯಾಲಯಗಳು ತಿಳಿದಿಲ್ಲವೆಂದಲ್ಲ. ಆದರೆ ಅವು ಶಾಸಕಾಂಗದ ಅನೇಕ ಬಹುಮತದ ತೀರ್ಮಾನಗಳನ್ನು ಪ್ರಶ್ನಿಸುತ್ತ ಬಂದಿರುವುದೂ ಕೂಡ ಅಷ್ಟೇ ಸತ್ಯ.

ಸಂವಿಧಾನದ ೧೨೧ ಮತ್ತು ೨೧೧ನೇ ವಿಧಿಗಳ ಪ್ರಕಾರ ಸಂಸತ್ತಿನಲ್ಲಾಗಲಿ, ರಾಜ್ಯದ ಶಾಸನಸಭೆಗಳಲ್ಲಾಗಲಿ ಸುಪ್ರೀಂ ಕೋರ್ಟಿನ ನ್ಯಾಯಾಧೀಶರ ಕರ್ತವ್ಯಗಳ ನಿರ್ವಹಣೆಗೆ ಸಂಬಂಧಪಟ್ಟಂತೆ ಚರ್ಚಿಸುವಂತಿಲ್ಲ; ಹೊರಗೂ ಟೀಕಿಸುವಂತಿಲ್ಲ. ಅನಗತ್ಯವಾಗಿ ನ್ಯಾಯಾಲಯಗಳನ್ನು ಟೀಕಿಸುವವರ ವಿರುದ್ಧ ಮೊಕದ್ದಮೆ ಹೂಡಬಹುದು. ಇಂಥ ಒಂದು ಪ್ರಕರಣ ೧೯೬೭ರಲ್ಲಿ ನಡೆದದ್ದಿದೆ. ಅಂದಿನ ಕೇರಳದ ಮುಖ್ಯಮಂತ್ರಿಯಾಗಿದ್ದ ಇ.ಎಂ.ಎಸ್. ನಂಬೂದ್ರಿಪಾದ್ ಅವರು ಪತ್ರಿಕಾ ಸಮ್ಮೇಳನವೊಂದರಲ್ಲಿ ಮಾತನಾಡುತ್ತ, ನ್ಯಾಯಾಧೀಶರು ಸಾಮಾನ್ಯವಾಗಿ ಶ್ರೀಮಂತರ ಪರವಾಗಿ ವರ್ತಿಸುತ್ತಾರೆ ಅಂದಿದ್ದರು. ಇದರಿಂದಾಗಿ ಅವರು ನ್ಯಾಯಾಲಯ ನಿಂದನೆ ಆರೋಪ ಎದುರಿಸಬೇಕಾಗಿ ಬಂತು. ಕೇರಳ ಹೈಕೋರ್ಟು ಅವರಿಗೆ ಒಂದು ಸಾವಿರ ರೂ. ದಂಡ ಅಥವಾ ಒಂದು ತಿಂಗಳ ಸಜೆಯ ಶಿಕ್ಷೆಯನ್ನು ನೀಡಿತ್ತು. ಈ ತೀರ್ಪನ್ನು ಸುಪ್ರೀಂ ಕೋರ್ಟು ಕೂಡ ಎತ್ತಿ ಹಿಡಿದಿತ್ತು. ದಂಡದ ಮೊತ್ತವನ್ನು ಮಾತ್ರ ಸಾಂಕೇತಿಕವಾಗಿ ೫೦ ರೂ.ಗೆ ಇಳಿಸಿತ್ತು. (*Indian Government* and Politics by D.C. Gupta, Page 262)

ಸಂವಿಧಾನದ ವಿಧಿಗೆ ಮತ್ತು ಶಾಸಕಾಂಗವು ಅಂಗೀಕರಿಸಿದ ಕಾನೂನಿಗೆ ಅರ್ಥವಿವರಣೆ ನೀಡುವ ಅಧಿಕಾರವನ್ನು ಬಳಸಿಕೊಂಡು ರಾಜ್ಯ ಮತ್ತು ರಾಷ್ಟ್ರದ ಅತ್ಯುನ್ನತ ನ್ಯಾಯಾಲಯಗಳು ಕೊಡುತ್ತ ಬಂದ ತೀರ್ಪನ್ನು ಪ್ರಶ್ನಿಸುವುದಕ್ಕೆ ಸಮಸ್ಯೆ ಇರುವುದೇ ಇಲ್ಲಿ. ಈ ಸಂದರ್ಭದಲ್ಲಿ ನನಗೆ ಸಂವಿಧಾನದ ೧೪೩ನೇ ವಿಧಿ ನೆನಪಾಗುತ್ತದೆ. ಸಾರ್ವಜನಿಕವಾಗಿ ಅತಿ ಮಹತ್ವವೆನಿಸಿದ ಯಾವುದೇ ವಿದ್ಯಮಾನದ ಬಗ್ಗೆ ರಾಷ್ಟ್ರಪತಿಗಳಾದವರು ಸುಪ್ರೀಂ ಕೋರ್ಟಿನ ಸಲಹೆ ಕೇಳಬಹುದು. ಆದರೆ ಅಂಥ ಸಂದರ್ಭದಲ್ಲಿ ಸುಪ್ರೀಂ ಕೋರ್ಟ್ ನೀಡುವ ಸಲಹೆಯನ್ನು ಕೇಂದ್ರ ಸರ್ಕಾರ ಒಪ್ಪಲೇಬೇಕೆಂದಿಲ್ಲ. ಇದರ ಅರ್ಥವೇನು? ದೇಶದ ಸಂಸತ್ತು (ಸುಪ್ರೀಂ ಕೋರ್ಟೂ ಸೇರಿದಂತೆ) – ಪ್ರಜಾಪ್ರಭುತ್ವದ ಎಲ್ಲ ಅಂಗಗಳಿಗಿಂತ ಅತ್ಯುನ್ನತ ಸಂಸ್ಥೆಯಾಗಿದೆಯೆಂಬುದು ತಾನೇ?...




ಚರ್ಚೆಯ ಅನುಕೂಲಕ್ಕಾಗಿ ಕಳೆದ ವರ್ಷ ಸುಪ್ರೀಂ ಕೋರ್ಟಿನ ಮುಂದೆ ಬಂದ 'ಕಳಂಕಿತ' ಸಚಿವರ ಕುರಿತಾದ ವಿವಾದವನ್ನು ತುಸು ಹಿಂಜಿ ನೋಡಬಹುದೇನೊ. ಸಾರ್ವಜನಿಕ ಹಿತಾಸಕ್ತಿಯ ಅರ್ಜಿಯನ್ನು ವಿಚಾರಣೆಗೆ ಎತ್ತಿಕೊಂಡ ಸುಪ್ರೀಂ ಕೋರ್ಟು, ಕಳೆದ ಆಗಸ್ಟ್ ೧೧ರಂದು ಸರ್ಕಾರದಿಂದ ಕೇಳಿದ ವಿವರಣೆ ಇಂತಿದೆ: ''ಪ್ರಾಮಾಣಿಕ ಆಡಳಿತವೆಂದರೇನೆಂಬುದನ್ನು ನಿರ್ಧರಿಸಬೇಕಾದವರು ಯಾರು?... ಇಂಥ ಸಂವಿಧಾನಾತ್ಮಕ ಅಂಶಗಳಿರುವ ವಿಚಾರಗಳ ಬಗ್ಗೆ ನ್ಯಾಯಾಲಯ ಮಧ್ಯ ಪ್ರವೇಶಿಸಬಹುದೆ?'' – ಇದು ನ್ಯಾಯಮೂರ್ತಿ ಆರ್. ಸಿ. ಲಹೋಟಿ ನೇತೃತ್ವದ ನ್ಯಾಯಪೀಠ ಕೇಳಿದ ವಿವರಣೆ. 'ತನ್ನನ್ನು ಯಾರು ಆಳಬೇಕೆಂಬುದನ್ನು ಆಯ್ಕೆಮಾಡಿಕೊಳ್ಳುವ ಹಕ್ಕು ದೇಶದ ನಾಗರಿಕನಿಗೆ ಇದೆಯೇ ಇಲ್ಲವೇ' ಎಂದು ನ್ಯಾಯಾಲಯ ಅಟಾರ್ನಿ ಜನರಲ್ ಅವರಿಂದ ತಿಳಿಯ ಬಯಸಿತು. ಈ ಸಂದರ್ಭದಲ್ಲಿ ಸರ್ಕಾರದ ಪರವಾಗಿ ವಾದಿಸಿದ ಅಟಾರ್ನಿ ಜನರಲ್ ಮಿಲನ್ ಬ್ಯಾನರ್ಜಿ ಮತ್ತು ಸಾಲಿಸಿಟರ್ ಜನರಲ್ ಜಿ.ವಿ. ವಹನವತಿ ಅವರು ಸುಪ್ರೀಂ ಕೋರ್ಟಿನ ನ್ಯಾಯಪೀಠಕ್ಕೆ ಕೊಟ್ಟ ವಿವರಣೆ ಗಮನಿಸತಕ್ಕಂಥದ್ದಾಗಿದೆ: ''ಸಚಿವ ಸಂಪುಟವನ್ನು ರಚಿಸುವುದು ಪ್ರಧಾನಿಯವರ ವಿಶೇಷಾಧಿಕಾರ. ಸದನದ ಸದಸ್ಯನಾಗಲು ಒಬ್ಬನಿಗೆ ಯಾವ ಅರ್ಹತೆಗಳು ಸಾಕೋ, ಅದೇ ಅರ್ಹತೆಗಳು ಸಚಿವನಾಗುವವನಿಗೂ ಸಾಕಾಗುತ್ತದೆ; ಇದು ಸಂಸತ್ತಿನ ಅಧಿಕಾರವ್ಯಾಪ್ತಿಗೆ ಬರುವುದರಿಂದ ಈ ಪ್ರಕರಣದಲ್ಲಿ ನ್ಯಾಯಾಲಯ ಹಸ್ತಕ್ಷೇಪ ಮಾಡುವುದಕ್ಕೆ ಸಂವಿಧಾನದ ನಿಯಮಗಳ ಪ್ರಕಾರವೇ ಅವಕಾಶವಿಲ್ಲ.'' ಈ ವಿವರಣೆಯ ಬೆಳಕಿನಲ್ಲಿ ಸಂಸತ್ತು ಮತ್ತು ಸುಪ್ರೀಂ ಕೋರ್ಟಿನ ಸ್ಥಾನಮಾನಗಳ ಚರ್ಚೆಯೂ ನಡೆಯಬೇಕಾಗುತ್ತದೆ.

ಖಾಸಗಿ ಹಾಗೂ ಅನುದಾನರಹಿತ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿಯ ಸೀಟು ಮೀಸಲು (ಕೋಟಾ) ಕುರಿತಾಗಿ ಇತ್ತೀಚೆಗೆ ಸುಪ್ರೀಂ ಕೋರ್ಟು ನೀಡಿದ ತೀರ್ಪಿನ ಬಗ್ಗೆ ಕೂಡ ಕೇಂದ್ರ ಸರ್ಕಾರದ ಆಕ್ಷೇಪ ಹೊರಬಿತ್ತು. ಸಂಸತ್ತಿನ ಪರಮಾಧಿಕಾರವನ್ನು ಯಾರೂ ಪ್ರಶ್ನಿಸುವಂತಿಲ್ಲ ಎಂದು ಸ್ಪೀಕರ್ ಆದಿಯಾಗಿ ಪಕ್ಷಭೇದ ಮರೆತು ಎಲ್ಲರೂ ಒತ್ತಿ ಹೇಳಿದರು. ಇದನ್ನು ಕಳೆದ ೨೩-೮-೨೦೦೫ರಂದು ತರಾಟೆಗೆ ತೆಗೆದುಕೊಂಡ ಸುಪ್ರೀಂ ಕೋರ್ಟು, 'ಸರ್ಕಾರದ ನಿಲುವು ಇದೇ ಆಗಿದ್ದಲ್ಲಿ ಅದು ನ್ಯಾಯಾಲಯಗಳನ್ನು ಮುಚ್ಚಬಹುದು' ಎಂದು ಖಾರವಾಗಿ ಪ್ರತಿಕ್ರಿಯಿಸುತ್ತ, ''ಸರ್ಕಾರವೂ ಕೂಡ ಸಂವಿಧಾನವೇ ಹೇಳಿರುವಂತೆ ನ್ಯಾಯಾಲಯಕ್ಕೆ ಸಲ್ಲಬೇಕಾಗಿರುವ ಗೌರವವನ್ನು ನೀಡಬೇಕು. ಸಂಘರ್ಷದ ಮನೋಭಾವ ಒಳ್ಳೆಯದಲ್ಲ; ಸಂಯಮದಿಂದ ಇರುವಂತೆ ಸಂಬಂಧಿಸಿದವರಿಗೆ ಕಿವಿ ಮಾತು ಹೇಳಬೇಕು'' ಎಂದದ್ದಿದೆ.

ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಸೀಟು ಮೀಸಲಾತಿ ಕುರಿತಂತೆ ವಿವಾದವು ತಾರಕಕ್ಕೇರಲು ಕೇಂದ್ರ ಸರ್ಕಾರದ ದಿವ್ಯ ನಿರ್ಲಕ್ಷ್ಯ ಧೋರಣೆಯೇ ಕಾರಣವೆಂಬುದು ಸುಪ್ರೀಂ ಕೋರ್ಟಿನ ನಿಲುವು. ಉನ್ನತ ಶಿಕ್ಷಣ ಕುರಿತಂತೆ ಒಂದು ರಾಷ್ಟ್ರವ್ಯಾಪಿ ನೀತಿಯನ್ನು ರೂಪಿಸುವ ಹಾಗೆ ಸುಪ್ರೀಂ ಕೋರ್ಟಿನ ಹನ್ನೊಂದು ನ್ಯಾಯಾಧೀಶರುಳ್ಳ ವಿಭಾಗೀಯ ಪೀಠ ಮೂರು ವರ್ಷಗಳಷ್ಟು ಹಿಂದೆಯೇ ಕೇಂದ್ರ ಸರ್ಕಾರಕ್ಕೆ ಸಲಹೆ ಮಾಡಿದಾಗ್ಯೂ, ಆ ದಿಶೆಯಲ್ಲಿ ಏನೂ ಕ್ರಮ ಕೈಗೊಳ್ಳದೆ ಇದ್ದುದು ಸರ್ಕಾರದಿಂದಾದ ದೊಡ್ಡ ಲೋಪ ಅನ್ನುವ ಸುಪ್ರೀಂ ಕೋರ್ಟ್ ವಾದದಲ್ಲಿ ಹುರುಳಿಲ್ಲದೇ ಇಲ್ಲ. ವೃತ್ತಿಪರ ಸೀಟು ಹಂಚಿಕೆ ವಿಚಾರದಲ್ಲಿ ಇತ್ತೀಚೆಗೆ ಸುಪ್ರೀಂ ಕೋರ್ಟ್ ನೀಡಿದ ತೀರ್ಪು ಪರಿಶಿಷ್ಟ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳನ್ನು ಅತಿಯಾದ ಕಷ್ಟಕ್ಕೆ ನೂಕುತ್ತದೆ; ಇದು ಸಾಮಾಜಿಕ ನ್ಯಾಯದ ವಿರುದ್ಧವಾಗಿದೆ ಎಂಬ ಅಭಿಪ್ರಾಯವನ್ನು-ದೇಶಾದ್ಯಂತ ಸಾಮಾಜಿಕ ನ್ಯಾಯದ ಪರವಾಗಿರುವ ಚಿಂತಕರು ಮತ್ತು ಕೆಲವು ಪತ್ರಿಕೆಗಳು (ಸಂಪಾದಕೀಯದಲ್ಲಿ) ಬರೆದಿರುವುದನ್ನು ಸುಪ್ರೀಂ ಕೋರ್ಟೂ ಗಮನಿಸಿದೆ ಎಂಬುದು ಅದು ಕೊಟ್ಟ ವಿವರಣೆಯಲ್ಲೇ ವ್ಯಕ್ತವಾಗಿದ್ದುಂಟು.

''ನ್ಯಾಯಾಲಯಗಳು ಶಾಸನಗಳನ್ನು ವ್ಯಾಖ್ಯಾನಿಸುತ್ತವೆ. ಅವುಗಳ ಸಾಮಾಜಿಕ ಪರಿಣಾಮಗಳನ್ನು ನ್ಯಾಯಾಲಯಗಳು ಗಮನಿಸಿ ತೀರ್ಪು ನೀಡಬೇಕೆಂದು ಶಾಸಕಾಂಗ ಬಯಸುವುದು ಸರಿಯಲ್ಲ; ಹಾಗೇನಾದರೂ ಸಾಮಾಜಿಕ ಪರಿಣಾಮಗಳಿದ್ದರೆ ಅವುಗಳನ್ನು ನ್ಯಾಯಾಲಯದ ಗಮನಕ್ಕೆ ತರುವ ಎಲ್ಲ ಅವಕಾಶವೂ ಸರ್ಕಾರಕ್ಕಿದೆ. ಈ ವಿಚಾರದಲ್ಲಿ ಸರ್ಕಾರಗಳೂ ತಮ್ಮ ಕರ್ತವ್ಯಗಳನ್ನು ಸರಿಯಾಗಿ ನಿರ್ವಹಿಸಿಲ್ಲ'' ಎಂಬ ('ಪ್ರಜಾವಾಣಿ' ಸಂಪಾದಕೀಯ) ಅಭಿಪ್ರಾಯ ಇಲ್ಲಿ ಚಿಂತನೆಗೆ ಯೋಗ್ಯವಾಗಿದೆ.

ಶಾಸಕಾಂಗ ಮತ್ತು ಕಾರ್ಯಾಂಗದ ನಡುವ ಇತ್ತೀಚಿನ

ವರ್ಷಗಳಲ್ಲಿ ಸಂಘರ್ಷದ ಸಂದರ್ಭಗಳು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತಿರುವುದು ನಿಜವಾಗಿಯೂ ಆತಂಕ ಕಾರಿ ಬೆಳವಣಿಗೆಯೇ ಆಗಿದೆ. ಜಾರ್ಖಂಡ್ ಸರ್ಕಾರ ರಚನೆ ಸಂದರ್ಭದಲ್ಲಿಯೆ ಸುಪ್ರೀಂ ಕೋರ್ಟಿನ ಮಧ್ಯ ಪ್ರವೇಶ ಕೇಂದ್ರ ಸರ್ಕಾರಕ್ಕೆ ಸಾಕಷ್ಟು ಮುಜುಗರ ಉಂಟು ಮಾಡಿದ್ದಿದೆ. ಆದರೆ ಆ ಸಂದರ್ಭದಲ್ಲಿ ನ್ಯಾಯಾಂಗ ಮಧ್ಯಪ್ರವೇಶ ಮಾಡದಿದ್ದರೆ ಅರಾಜಕತೆ ಉಂಟಾಗುತ್ತಿತ್ತು ಎನ್ನುವ ಅಭಿಪ್ರಾಯವನ್ನೂ ಕೂಡ ಪೂರ್ತಿ ತಳ್ಳಿ ಹಾಕುವಂತಿರಲಿಲ್ಲ. ಪ್ರಜಾತಂತ್ರವ್ಯವಸ್ಥೆಯಲ್ಲಿಯ ಮೌಲ್ಯ ಗಳನ್ನು ರಕ್ಷಿಸುವಲ್ಲಿ ರಾಜಕೀಯ ಪಕ್ಷಗಳು ವಿಫಲವಾದಾಗ ನ್ಯಾಯಾಲಯಗಳ ಮಧ್ಯಪ್ರವೇಶ ಅನಿವಾರ್ಯವಾಗುತ್ತದೆ ಎಂಬ ಅಭಿಪ್ರಾಯ ಆ ಸನ್ನಿವೇಶದಲ್ಲಿ ದೇಶದೆಲ್ಲೆಡೆ ವ್ಯಕ್ತ ವಾಗಿದ್ದನ್ನು ನಿರ್ಲಕ್ಷಿಸುವಂತಿಲ್ಲ.

ಕೆಲವು ಸಂದರ್ಭಗಳಲ್ಲಿ ಶಾಸಕಾಂಗದ ತೀರ್ಮಾನಕ್ಕೆ ಸಂಬಂಧಪಟ್ಟಂತೆ ಸುಪ್ರೀಂ ಕೋರ್ಟು ನೀಡಿರುವ ಕೆಲವು ಮಹತ್ವದ ತೀರ್ಪುಗಳು ನನ್ನ ಕಣ್ಮುಂದಿವೆ. ಉದಾಹರಣೆಗೆ, ಮಿಜೋರಾಂ ಸರ್ಕಾರದ ಕಾನೂನು ಇಲಾಖೆಯಲ್ಲಿ ಕಾರ್ಯದರ್ಶಿಯಾಗಿದ್ದ ಕೆ. ಎನ್. ಶ್ರೀವಾಸ್ತವ ಅವರನ್ನು ಸರ್ಕಾರದ ಶಿಫಾರಸಿನ ಮೇರೆಗೆ ಗೌಹಾತಿಯ ಹೈಕೋರ್ಟಿನ ನ್ಯಾಯಾಧೀಶರನ್ನಾಗಿ ಭಾರತದ ರಾಷ್ಟ್ರಪತಿಗಳು ನೇಮಕ ಮಾಡಿದಾಗ, ಶ್ರೀವಾಸ್ತವ ಅವರು ಹೈಕೋರ್ಟ್ ಮುಖ್ಯ ನ್ಯಾಯಾಧೀಶ ಸ್ಥಾನಕ್ಕೆ ಅಗತ್ಯವಿರುವಂಥ ಅರ್ಹತೆಗಳನ್ನು (ಸಂವಿಧಾನದ ನಿಯಮದಡಿಯಲ್ಲಿ) ಹೊಂದಿಲ್ಲ ವೆಂಬುದನ್ನು ಎತ್ತಿ ತೋರಿಸಿದ ಸುಪ್ರೀಂ ಕೋರ್ಟು ಆ ನೇಮಕವನ್ನೇ ಅನೂರ್ಜಿತಗೊಳಿಸಿದ್ದನ್ನು (೧೯೯೨, ಮಾರ್ಚ್ ೧೦ರ ತೀರ್ಪಿನಲ್ಲಿ) ಇಲ್ಲಿ ನೆನೆಯಬಹುದು.

ಮಂಡಲ್ ಆಯೋಗದ ವರದಿಯನ್ನು ವಿ. ಪಿ. ಸಿಂಗ್ ನೇತೃತ್ವದ ಸರ್ಕಾರ ಜಾರಿಗೆ ತರಲು ನಿರ್ಧರಿಸಿದಾಗ ಆಸಕ್ತ ವರ್ಗವೊಂದು ದೇಶವ್ಯಾಪಿ ಪ್ರತಿಭಟನೆಗೆ ತೊಡಗಿದ ಸಂದರ್ಭದಲ್ಲಿ ಸುಪ್ರೀಂ ಕೋರ್ಟಿನಲ್ಲೂ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆ ದಾಖಲಾಗಿತ್ತು. ಅದನ್ನು ವಿಚಾರಣೆಗೆ ಎತ್ತಿಕೊಂಡ ಸುಪ್ರೀಂ ಕೋರ್ಟು, ವಿ. ಪಿ. ಸಿಂಗ್ ಸರ್ಕಾರವು ಸ್ವೀಕರಿಸಿದ ನಿರ್ಧಾರವನ್ನು ಎತ್ತಿ ಹಿಡಿಯುತ್ತಲೇ, ಒಟ್ಟು ಮೀಸಲು ಪ್ರಮಾಣ ಶೇಕಡ ೫೦ಕ್ಕೆ ಮೀರಬಾರದೆಂದು ಸಲಹೆ ನೀಡಿತು.

ಕಾವೇರಿ ನೀರಿನ ವಿವಾದಕ್ಕೆ ಸಂಬಂಧಪಟ್ಟಂತೆ ತೀರ್ಪೊಂದನ್ನು ನೀಡಿದ ಸುಪ್ರೀಂ ಕೋರ್ಟು (೨೮-೧೨-೧೯೯೫) ಎರಡು ದಿನಗೊಳಗೆ ಸಂಬಂಧ ಪಟ್ಟ ಮುಖ್ಯಮಂತ್ರಿಗಳ ಸಭೆ ಕರೆದು ತುರ್ತು ತೀರ್ಮಾನ ಕೈಗೊಳ್ಳುವಂತೆ ಸರ್ಕಾರಕ್ಕೆ ಸ್ಪಷ್ಟ ಮಾತುಗಳಲ್ಲಿ ಸಲಹೆ ನೀಡಿದ್ದಿದೆ ಮತ್ತು ಅದನ್ನು ಅಂದಿನ ಪ್ರಧಾನಿ ಪಾಲಿಸಿದ್ದೂ ಇದೆ.

ಹೀಗೆ ಸರ್ಕಾರದ ನೀತಿನಿರೂಪಣೆಗಳನ್ನು ಕಾಲ ಕಾಲಕ್ಕೆ ವಿಮರ್ಶಿಸುವ ಮತ್ತು ಸಲಹೆ ನೀಡುವ ಸಂವಿಧಾನ ದತ್ತವಾದ ತನ್ನ ಕರ್ತವ್ಯವನ್ನು ನ್ಯಾಯಾಂಗ – ತನಗೆ ಸಿಕ್ಕಿರುವ ಎಲ್ಲ ಅವಕಾಶಗಳನ್ನು ಬಳಸಿಕೊಂಡು ನಿಭಾಯಿಸಿ ದ್ದನ್ನು ಕಾಣುತ್ತೇವೆ. ಅಂಥ ಸಂದರ್ಭದಲ್ಲಿ ಶಾಸಕಾಂಗ ದಿಂದ ನ್ಯಾಯಾಂಗದ ವಿರುದ್ಧ ಆಕ್ರೋಶವೇನೂ ವ್ಯಕ್ತವಾದದ್ದಿಲ್ಲ ಮತ್ತು ಕೋರ್ಟಿನ ಇಂಥ ಈ ಬಗೆಯ ಎಲ್ಲ ಸಲಹೆ ಅಥವಾ ತೀರ್ಮಾನಗಳ ಬಗ್ಗೆ ಸಾರ್ವಜನಿಕ ವಲಯದಲ್ಲೂ ವಿಶೇಷ ಚರ್ಚೆ ನಡೆದದ್ದಿಲ್ಲ. ಆದರೆ ಸರ್ಕಾರಿ ನೌಕರರು ಮುಷ್ಕರದಲ್ಲಿ ಭಾಗವಹಿಸುವಂತಿಲ್ಲ ಮತ್ತು ರಾಜಕೀಯ ಪಕ್ಷಗಳು 'ಬಂದ್'ಗೆ ಕರೆ ನೀಡುವಂತಿಲ್ಲ ಎಂಬಂಥ ಕೋರ್ಟ್ ತೀರ್ಮಾನವನ್ನು ಸಾರ್ವಜನಿಕ ವಲಯ ಗಂಭೀರವಾಗಿಯೇ ಪರಿಗಣಿಸಿ ಚರ್ಚೆಗೆ ಒಡ್ಡಿದ್ದಿದೆ. ಸಂವಿಧಾನವು ಈ ದೇಶದ ಪ್ರಜೆಗಳಿಗೆ ನೀಡಿದ ಮೂಲಭೂತ ಹಕ್ಕುಗಳ ಬಗೆಗಿನ ಅರ್ಥ ವ್ಯಾಖ್ಯಾನ ನ್ಯಾಯಾಲಯಗಳಲ್ಲಿ ನಡೆದಾಗ ಅದು ಪ್ರಜಾಪ್ರಭುತ್ವದ ಮೂಲಭೂತ ಆಶಯಕ್ಕೆ ವ್ಯತಿರಿಕ್ತವಾದುದಾಗಿದೆಯೆಂದು ಮೇಲ್ನೋಟಕ್ಕೆ ಕಂಡುಬಂದಾಗಲೆಲ್ಲ ಪ್ರಜ್ಞಾವಂತ ವಲಯ ಅದನ್ನು ಸಾರ್ವಜನಿಕ ಚರ್ಚೆಗೆ ಎತ್ತಿಕೊಂಡದ್ದಿದೆ. ಈ ದಿಶೆಯಲ್ಲೂ ಕೂಡ ಸಂಸತ್ತು ತನ್ನ ಪಾಲಿನ ಕರ್ತವ್ಯ ನಿರ್ವಹಿಸುವಲ್ಲಿ ಅಗತ್ಯವಿದ್ದಷ್ಟು ಉತ್ಸಾಹ ತೋರಿದಂತಿಲ್ಲ.

ಈ ಚರ್ಚೆಯ ತಾತ್ಪರ್ಯವಿಷ್ಟೆ: ಸರ್ಕಾರಗಳು ತಮ್ಮ ಕಾಲೋಚಿತ ಕರ್ತವ್ಯಗಳಲ್ಲಿ ವಿಫಲವಾದಾಗ ಅದನ್ನು ಮತ್ತೆ ಹಳಿಗೆ ತರುವ ಹೊಣೆಗಾರಿಕೆ ವಿರೋಧ ಪಕ್ಷಗಳದ್ದು. ಇತ್ತೀಚಿನ ದಶಕಗಳಲ್ಲಿ ವಿರೋಧ ಪಕ್ಷಗಳು ಆ ಕರ್ತವ್ಯ ವನ್ನು ಸರಿಯಾಗಿ ನಿಭಾಯಿಸುತ್ತಿಲ್ಲ. ಇದರ ಅರ್ಥ, ಅವರು ಸಂಸತ್ತಿನಲ್ಲಾಗಲಿ, ವಿಧಾನಸಭೆಗಳಲ್ಲಾಗಲಿ ಬಾಯಿಬಿಟ್ಟೇ ಇಲ್ಲವೆಂದಲ್ಲ. ಕೆಲವು ವಿರೋಧ ಪಕ್ಷಗಳು ವಾರಗಟ್ಟಲೆ ಸದನದ ಕಲಾಪ ನಡೆಯದ ಹಾಗೆ ನೋಡಿಕೊಂಡ ನಿದರ್ಶನಗಳು ಒಂದೆರಡಲ್ಲ; ಅದೇ ಸಂದರ್ಭದಲ್ಲಿ ಅಂಥ ಕೋಲಾಹಲಗಳು ನಡೆದದ್ದು ಯಾವ ವಿಚಾರಗಳ ಬಗ್ಗೆ ಎಂಬುದೇ ಮುಖ್ಯ. ಈ ನಿಟ್ಟಿನಲ್ಲಿ ಕೇವಲ ರಾಜಕೀಯ ಶಕ್ತಿಪ್ರದರ್ಶನ, ಚುನಾವಣೆಗಳಲ್ಲಿಯ ಲಾಭದ ಲೆಕ್ಕಾಚಾರ, ವ್ಯಕ್ತಿಪ್ರತಿಷ್ಠೆಗಳೇ ಮುಖ್ಯವಾದವೇ ಹೊರತು ಸಾಮಾಜಿಕ ನ್ಯಾಯಕ್ಕೆ ಸಂಬಂಧಪಟ್ಟಂಥ, ಸಾರ್ವಜನಿಕ ಹಿತಾಸಕ್ತಿಗೆ ಸಂಬಂಧಪಟ್ಟಂಥ, ದೇಶದ ಒಟ್ಟಾರೆ ಅಭಿವೃದ್ಧಿಗೆ ಸಂಬಂಧಪಟ್ಟಂಥ ಕೆಚ್ಚನ್ನು ಅವು ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಪ್ರದರ್ಶಿಸಲೇ ಇಲ್ಲ.

ಈ ಬಗೆಯ ದೌರ್ಬಲ್ಯದ ದುರುಪಯೋಗವನ್ನು ಆಳುವ ಪಕ್ಷ ಮಾಡಿಕೊಳ್ಳಲು ಮುಂದಾದಾಗ, ಅಂದರೆ, ಯಾವುದು ಅತಿಮುಖ್ಯವೋ ಅದನ್ನೇ ಮರೆತು, ಆಳುವ ಸರ್ಕಾರ ಜನರ ಹಿತವನ್ನು ಬಲಿಕೊಟ್ಟಾಗ ಸಹಜವಾಗಿಯೇ ಪ್ರಜ್ಞಾವಂತ ವಲಯ ತಮಗೆ ಬೇಕಾದ ಸಾಮಾಜಿಕ ನ್ಯಾಯ ವನ್ನು ನ್ಯಾಯಾಲಯದ ಮೂಲಕ ಕೇಳತೊಡಗಿದೆ. ಇಂಥ ಪ್ರಕರಣಗಳು ಹೆಚ್ಚತೊಡಗಿದಂತೆ ನ್ಯಾಯಾಲಯಗಳ ಧ್ವನಿ ಕೂಡ ಶಾಸಕಾಂಗ ಮತ್ತು ಕಾರ್ಯಾಂಗದ ಧ್ವನಿ ಎಂಬಂತೆ ಭಾಸವಾಗತೊಡಗಿದೆ. ಲೋಕಶಾಹಿ ವ್ಯವಸ್ಥೆಯಲ್ಲಿ ಪ್ರಜೆಯೇ ಪರಮ ಪ್ರಭುವಾಗಿರುವುದರಿಂದ ಅಂಥ ಕೋಟಿ ಕೋಟಿ ಪ್ರಜೆಗಳನ್ನು ಪ್ರತಿನಿಧಿಸುವ ಸಂಸತ್ತು ಜನರ ಒಟ್ಟಾರೆ ಹಿತದೃಷ್ಟಿಯಿಂದ ಆಯಾ ಕಾಲದ ಕರೆಗೆ ತಕ್ಕಂತೆ ಸಂವಿಧಾನವನ್ನೂ ಕೂಡ ತನ್ನ ರಕ್ಷಣೆಗೆ ನಿಲ್ಲುವ ನಿಟ್ಟಿನಲ್ಲಿ ಹೊಸ ತಿದ್ದುಪಡಿಗಳನ್ನು ತರುವುದಕ್ಕೆ ಹಿಂದೆಮುಂದೆ ನೋಡಬಾರದು. ದೇಶದ ಬಹುಸಂಖ್ಯಾತರ ಹಿತ ಅಡಗಿರುವಂಥ ಪ್ರಕರಣಗಳಲ್ಲಿ ಪಕ್ಷಭೇದ ಮರೆತು ಅಲ್ಲಿರುವ ಎಲ್ಲ ಸದಸ್ಯರು ಹೊಸ ಕಾನೂನಿನ ರಚನೆಗೆ ಕೈಜೋಡಿಸಬೇಕು. ಸಂಸತ್ತು ನ್ಯಾಯದ ಪಕ್ಷಪಾತಿಯಾಗಿ ತನ್ನ ಪರಮಾಧಿಕಾರವನ್ನು ಚಲಾಯಿಸಿದಲ್ಲಿ ಯಾವ ಕೋರ್ಟೂ ಏನೂ ಮಾಡಲಾಗದು.

ವಿಷ್ಣು ನಾಯ್ಕ
'ಪರಿಮಳ', ಅಂಬಾರಕೊಡ್ಲ
ಅಂಕೋಲ - ೫೮೧ ೩೧೪, ಉ.ಕ. ಜಿಲ್ಲೆ



# ಶಾಸಕಾಂಗ ನ್ಯಾಯಾಂಗ ಸಮನ್ವಯದತ್ತ



ಕೋ. ಚೆನ್ನಬಸಪ್ಪ

**ಜು**ಲೈ ೩೦, ೧೯೯೮ರಂದು ಕರ್ನಾಟಕ ರಾಜ್ಯ ಸರ್ಕಾರ, ಕಬ್ಬನ್ ಪಾರ್ಕ್‌ಗೆ ಸೇರಿದ ವಿಶಾಲ ಪ್ರದೇಶದಲ್ಲಿ ೩೨ ಎಕರೆ ಭೂಮಿಯನ್ನು ಅದರಿಂದ ಪ್ರತ್ಯೇಕಿಸಿ ಅನ್ಯ ಉಪಯೋಗಕ್ಕಾಗಿ ಅಧಿಸೂಚನೆಯನ್ನು ಪ್ರಕಟಿಸಿತು. ಆ ಆಜ್ಞೆಯನ್ನು ವಿರೋಧಿಸಿ, ನಿವೃತ್ತ ಶ್ರೀ ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸ ರಾವ್ (ಆಗ ೯೫ ವರ್ಷ) ಆದಿಯಾಗಿ ಬೆಂಗಳೂರಿನ ಪ್ರತಿಷ್ಠಿತ ನಾಗರಿಕರು ವಿಕ್ಟೋರಿಯಾ ರಾಣಿ ವಿಗ್ರಹದ ಮುಂದೆ ಧರಣಿ ಸತ್ಯಾಗ್ರಹ ಹೂಡಿದರು. ಸರ್ಕಾರ ಈ ಪ್ರತಿಭಟನೆ, ಪ್ರದರ್ಶನವನ್ನು ಲೆಕ್ಕಿಸದೆ ಪಾರ್ಕ್ ಪ್ರದೇಶವನ್ನು ಇತರ ಉದ್ದೇಶಗಳಿಗೆ ಉಪಯೋಗಿಸಲು ಕ್ರಮ ಕೈಕೊಂಡಾಗ ಡಾ|| ಜಿ. ಕೆ. ಗೋವಿಂದ ರಾವ್ ಕರ್ನಾಟಕ ಉಚ್ಚ ನ್ಯಾಯಾಲಯದ ಶ್ರೇ. ನ್ಯಾ. ಮೂರ್ತಿಗಳಿಗೆ ಒಂದು ಮನವಿ ಪತ್ರವನ್ನು ಬರೆದು, ಅದನ್ನೇ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಎಂದು ಪರಿಗಣಿಸಿ ಸೂಕ್ತ ಪರಿಹಾರ ಕೊಡಬೇಕೆಂದು ಪ್ರಾರ್ಥಿಸಿದರು. ಉಚ್ಚ ನ್ಯಾಯಾಲಯ ಅದನ್ನು ಅಂಗೀಕರಿಸಿ ದಿನಾಂಕ ೦೨-೧೧-೧೯೯೮ರಂದು ಸರ್ಕಾರದ ಅಧಿಸೂಚನೆಗೆ ಮಧ್ಯಂತರ ತಡೆ ಆಜ್ಞೆಯನ್ನು ನೀಡಿತು. ಆ ಸುದ್ದಿ ಮರುದಿನದ ಪತ್ರಿಕೆಗಳಲ್ಲಿ ಪ್ರಕಟವಾಯಿತು.

ಆಗ ವಿಧಾನ ಮಂಡಲದ ಚಳಿಗಾಲದ ಅಧಿವೇಶನ ನಡೆಯುತ್ತಿತ್ತು. ದಿನಾಂಕ ೩-೧೧-೧೯೯೮ರಂದು ವಿಧಾನಸಭೆ ಸಮಾವೇಶ ಆದ ಕೂಡಲೆ, ಉಚ್ಚ ನ್ಯಾಯಾಲಯದ ತಡೆ ಆಜ್ಞೆಯನ್ನು ಶಾಸಕರು ಕಠೋರ ಮಾತುಗಳಲ್ಲಿ ಖಂಡಿಸತೊಡಗಿದರು. ಅವರಾಡಿದ ಮಾತುಗಳನ್ನು ಅವರು ವಿಧಾನಸಭೆಯ ಹೊರಗಡೆ ಆಡಿದ್ದಿದ್ದರೆ ಅದು ನಿಃಸಂದಿಗ್ಧವಾಗಿ ನ್ಯಾಯಾಲಯದ ನಿಂದನೆಯಾಗುತ್ತಿತ್ತು. ಆರ್ಟಿಕಲ್ ೨೧೫ರ ಪ್ರಕಾರ ಅಂಥ ಮಾತನಾಡಿದವರೆಲ್ಲ ಶಿಕ್ಷೆಗೆ ಗುರಿಯಾಗುತ್ತಾರೆ. ಅಂದು ಆ ವಿಷಯವನ್ನು ಕುರಿತು ಚರ್ಚಿಸುವುದು ಕಾರ್ಯಕ್ರಮ ಪಟ್ಟಿಯಲ್ಲಿರಲಿಲ್ಲ. ಉಚ್ಚ ನ್ಯಾಯಾಲಯದ ನ್ಯಾಯ ಪರಿಪಾಲನಾ ಪ್ರಕ್ರಿಯೆಯನ್ನು ಆರ್ಟಿಕಲ್ ೨೧೧ರ ಪ್ರಕಾರ ಶಾಸಕಾಂಗ ಚರ್ಚಿಸ ಕೂಡದೆಂಬ ಸಂವಿಧಾನ ಶಾಸನವನ್ನು ಉಲ್ಲಂಘಿಸಿ ಶಾಸಕರು ಬಾಯಿಗೆ ಬಂದಂತೆ ನ್ಯಾಯಮೂರ್ತಿಗಳ ವೈಯಕ್ತಿಕ ಜೀವನದ ಸಂಗತಿಗಳನ್ನು ಎತ್ತಿ ನಿಂದಿಸಿದರು. ಈ ನ್ಯಾಯಮೂರ್ತಿಗಳು ಹೇಗೆ ರಾಜಕೀಯ, ಜಾತೀಯ ವಸೂಲಿ - ಆಧಾರದ ಮೇಲೆ ನೇಮಕಗೊಂಡರು, ನಿವೇಶನಗಳನ್ನು ಹೇಗೆ ಪಡೆದಿದ್ದಾರೆ, ಮಕ್ಕಳುಮರಿಗಳಿಗೆ ಅನುಕೂಲತೆಗಳನ್ನು ಕಲ್ಪಿಸಿದ್ದಾರೆ ಇತ್ಯಾದಿ ಕಂಡಾಬಟ್ಟೆ ನಿಂದಾರೋಪ ಮಾಡಿದರು! ಅಗೌರವದ ಮಾತನಾಡಿದರು.

ಸಂವಿಧಾನದ ಆರ್ಟಿಕಲ್ ೨೧೧ರಲ್ಲಿ: ''ಸರ್ವೋಚ್ಚ ನ್ಯಾಯಾಲಯ ಅಥವಾ ಉಚ್ಚ ನ್ಯಾಯಾಲಯದ ನ್ಯಾಯ ಪರಿಪಾಲನಾ ಕರ್ತವ್ಯ ನಿರ್ವಹಣೆಯ ನ್ಯಾಯಮೂರ್ತಿಗಳ ನಡತೆಯನ್ನು ರಾಜ್ಯದ ಶಾಸನಸಭೆಗಳಲ್ಲಿ ಚರ್ಚಿಸತಕ್ಕದ್ದಲ್ಲ'' ಎಂದು ಸುಸ್ಪಷ್ಟವಾಗಿ ಠರಾಯಿಸಲಾಗಿದೆ. ಸಂವಿಧಾನ ಈ ರೀತಿ ಶಾಸಕಾಂಗದ ಮೇಲೆ ನಿರ್ಬಂಧ ಹಾಕಿದ್ದರೂ ನಮ್ಮ ಶಾಸಕರು ಹೀಗೇಕೆ ಸಂವಿಧಾನೋಲ್ಲಂಘನೆ ಮಾಡಿದರು? ಯಾಕೆಂದರೆ, ಅದೇ ಸಂವಿಧಾನದ ಆರ್ಟಿಕಲ್ ೧೯೪ರಲ್ಲಿ ಶಾಸಕರಿಗೆ ವಾಕ್‌ಸ್ವಾತಂತ್ರ್ಯವನ್ನು ಕೊಡಲಾಗಿದೆ. ಆರ್ಟಿಕಲ್ ೧೯೪ರ ಉಪಕಲಂ (೨)ರ ಪ್ರಕಾರ ಶಾಸಕರು ವಿಧಾನಸಭೆಯಲ್ಲಿ ಆಡಿದ ಯಾವ ಮಾತನ್ನೂ, ಅವರು ಕೊಡುವ ಮತದ ವಿಚಾರವನ್ನು ಯಾವ ನ್ಯಾಯಾಲಯದಲ್ಲೂ ಯಾರೂ ಪ್ರಶ್ನಿಸುವಂತಿಲ್ಲ!

ಆರ್ಟಿಕಲ್ ೧೯೪ರಲ್ಲಿ ಶಾಸಕರಿಗೆ ಅನಿರ್ಬಂಧ ಆತ್ಯಂತಿಕ ವಾಕ್‌ಸ್ವಾತಂತ್ರ್ಯವನ್ನು ಕೊಡಲಾಗಿದೆ. ಹಾಗೆಯೆ ಆರ್ಟಿಕಲ್ ೨೧೧ರ ಪ್ರಕಾರ ನ್ಯಾಯಮೂರ್ತಿಗಳ ಕರ್ತವ್ಯ ನಿರ್ವಹಣೆಯ ವಿಚಾರದಲ್ಲಿ ಸರ್ವಸ್ವಾತಂತ್ರ್ಯವನ್ನು ಕೊಡಲಾಗಿದೆ. ಒಬ್ಬ ಶಾಸಕ ವಿಧಾನ ಮಂಡಲದಲ್ಲಿ – ಇಂಥ ನ್ಯಾಯಮೂರ್ತಿ ಲಂಚ ತಿಂದು, ಇಲ್ಲವೆ ತನ್ನ ಪ್ರೇಯಸಿಯ ಪ್ರೇರಣೆಯಿಂದ ತೀರ್ಪು ಕೊಟ್ಟ ಎಂದು ಹೆಸರೆತ್ತಿ ನಿಂದಿಸಿದರೂ, ಅಂಥವರನ್ನು ಯಾವ ನ್ಯಾಯಾಲಯದಲ್ಲೂ ವಿಚಾರಣೆಗೆ ಗುರಿಪಡಿಸುವಂತಿಲ್ಲ. ಆದರೆ ಅಂಥ ಮಾತನ್ನು ಆಡದಂತೆ ಆರ್ಟಿಕಲ್ ೨೧೧ ನಿರ್ಬಂಧ ವಿಧಿಸಿದೆ. ಒಂದು ವೇಳೆ ಆ ನಿರ್ಬಂಧವನ್ನು ಕಡೆಗಣಿಸಿದರೆ ಅವರನ್ನು ಯಾರೂ, ಏನೂ ಮಾಡುವಂತಿಲ್ಲ. ಆದರೆ ಅಂಥ ಮಾತನ್ನಾಡಲು ಅವಕಾಶ ಕೊಡದಿರಲು ಸಭಾಧ್ಯಕ್ಷರಿಗೆ ಅಧಿಕಾರವಿದೆ. ಮತ್ತು ವಿಧಾನ ಮಂಡಲದ ಕಾರ್ಯಕಲಾಪಗಳ ನಿಯಮಾವಳಿಯಲ್ಲಿ ನ್ಯಾಯಾಲಯದ ಮುಂದೆ ವಿಚಾರಣೆಗೆ ಒಳಪಟ್ಟ ವಿಷಯದ ಬಗ್ಗೆ ಚರ್ಚಿಸಬಾರದೆಂಬ ಕಟ್ಟಳೆಯೂ ಇದೆ. ಆ ಕಟ್ಟಳೆಯನ್ನೂ ಮೀರಿ ಶಾಸಕರು ಮಾತನಾಡಿದರೆ, ಸಭಾಧ್ಯಕ್ಷರು ಅನುಮತಿ ಕೊಟ್ಟರೆ/ ಅಂಕುಶ ಹಾಕದಿದ್ದರೆ ಅಂಥ ಶಾಸಕರನ್ನು ಯಾರೇನೂ ಮಾಡುವಂತಿಲ್ಲ! ಒಂದು ವೇಳೆ ವಿಧಾನಮಂಡಲದ ಹೊರಗೆ ಬಹಿರಂಗ ಸಭೆಗಳಲ್ಲಿ, ಪತ್ರಿಕೆಗಳಲ್ಲಿ, ನ್ಯಾಯಾಲಯಗಳಲ್ಲಿ ಟೀಕಿಸಿ ಆಕ್ಷೇಪಿಸಿದ್ದೇ ಆದರೆ, ವಿಧಾನಮಂಡಲ ಅಂಥವರ ಬಗ್ಗೆ ಹಕ್ಕುಚ್ಯುತಿ ನಿರ್ಣಯ ತಂದು ಅಂಥವರಿಗೆ ಶಿಕ್ಷೆ ವಿಧಿಸುವ ಅಧಿಕಾರವನ್ನು ಶಾಸಕಾಂಗಕ್ಕೆ ಕೊಡಲಾಗಿದೆ. ಹಾಗೆಯೆ ನ್ಯಾಯಪರಿಪಾಲನಾ ಕರ್ತವ್ಯ ನಿರ್ವಹಣೆಯಲ್ಲಿ ನ್ಯಾಯಾಧೀಶರ ನಡತೆಯನ್ನು ಕುರಿತು ಯಾರೂ ಪ್ರಶ್ನಿಸುವಂತಿಲ್ಲ. ಹಾಗೇನಾದರೂ ಮಾಡಿದರೆ ಅಂಥವರನ್ನು ನ್ಯಾಯಾಲಯ ನಿಂದನೆಯ ಅಪರಾಧಕ್ಕೆ ಆರ್ಟಿಕಲ್ ೨೧೫ರ ಪ್ರಕಾರ ನ್ಯಾಯಾಲಯಕ್ಕೆ ಅಧಿಕಾರ ಕೊಡಲಾಗಿದೆ.

ಹಾಗಾದರೆ ನ್ಯಾಯಾಲಯ ಏನೇ ಮಾಡಿದರೂ ಯಾರೂ ಅವರನ್ನು ಪ್ರಶ್ನಿಸುವಂತೆಯೇ ಇಲ್ಲವೇ? ಇತ್ತೀಚೆಗೆ – ಮಾರ್ಚ್ ೨೦೦೫ರಲ್ಲಿ – ಝಾರ್ಖಂಡ್ ವಿಧಾನಸಭಾ ಕಾರ್ಯ ಕಲಾಪಗಳ ವಿಚಾರದಲ್ಲಿ ಸುಪ್ರೀಂ ಕೋರ್ಟ್ ತನ್ನ ಅಧಿಕಾರ ವ್ಯಾಪ್ತಿಯನ್ನು ಮೀರಿ ವರ್ತಿಸಿದ ಸಂಗತಿಯನ್ನು ಲೋಕಸಭೆ ಬಹು ಗಂಭೀರವಾಗಿ ಪರಿಗಣಿಸಿದ್ದು ದೊಡ್ಡ ಸುದ್ದಿ ಆಯಿತು. ಸಂವಿಧಾನದ ೧೨೨ನೇ ಆರ್ಟಿಕಲ್ ಪ್ರಕಾರ, ಸಂಸತ್ತಿನ ಮತ್ತು ಆರ್ಟಿಕಲ್ ೨೧೨ರ ಪ್ರಕಾರ ವಿಧಾನಮಂಡಲದ ಕಾರ್ಯಕಲಾಪಗಳ ಸಿಂಧುತ್ವವನ್ನು ಯಾವ ನ್ಯಾಯಾಲಯವೂ ಪ್ರಶ್ನಿಸತಕ್ಕದ್ದಲ್ಲ ಎಂದು ಸ್ಪಷ್ಟವಾಗಿ ಠರಾಯಿಸಲಾಗಿದೆ. ಅಂದರೆ ಸಂಸತ್ತು ಮತ್ತು ವಿಧಾನಮಂಡಲಗಳು ಯಾವ ವಿಚಾರವನ್ನು, ಯಾವಾಗ ಚರ್ಚಿಸಬೇಕು, ಯಾವ ಶಾಸನವನ್ನು ಮಾಡಬೇಕು, ಯಾವ ನಿಯಮಗಳನ್ನು ಅನುಸರಿಸಬೇಕು, ಯಾರು ಅಧಿವೇಶನದಲ್ಲಿ ಭಾಗವಹಿಸಬೇಕು, ಯಾರು ಭಾಗವಹಿಸಕೂಡದು... ಎಂಬಿತ್ಯಾದಿ ನಡವಳಿಕೆ ಶಾಸಕಾಂಗಕ್ಕೆ ಬಿಟ್ಟ ವಿಚಾರ. ಆ ವಿಚಾರವಾಗಿ ಯಾವ ನ್ಯಾಯಾಲಯವೂ ವಿಚಾರ ಮಾಡಕೂಡದು. ಇದು ಸಂವಿಧಾನ ಶಾಸನ.

ಕಳೆದ ಚುನಾವಣೆಗಳಲ್ಲಿ (೨೦೦೪) ಝಾರ್ಖಂಡ್‌ನಲ್ಲಿ ಯಾವ ಪಕ್ಷಕ್ಕೂ ಸ್ಪಷ್ಟ ಬಹುಮತ ದೊರೆತಿರಲಿಲ್ಲ. ಮಾರ್ಚ್ ೨ರಂದು ರಾಜ್ಯಪಾಲರು ಶಿಬು ಸೊರೇನ್‌ರವರನ್ನು ಮಂತ್ರಿಮಂಡಲ ರಚನೆಮಾಡಲು ಆಮಂತ್ರಿಸಿದರು. ಮಾರ್ಚ್ ೧೫ರಂದು ವಿಧಾನಸಭೆಯಲ್ಲಿ ಬಹುಮತ ಸಾಬೀತು ಮಾಡಲು ದಿನ ನಿಗದಿ ಮಾಡಿದರು. ಆದರೆ ಎನ್‌ಡಿಎ ನಾಯಕ ಅರ್ಜುನ ಮುಂಡ ಸರ್ವೋಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲುಮಾಡಿ ರಾಜ್ಯಪಾಲರು ಅನುಸರಿಸಿದ ಕ್ರಮವನ್ನು, ಮುಂದೆ ಮಾರ್ಚ್ ೧೫ರಂದು ನಡೆಯಬೇಕಾಗಿದ್ದ ಕಾರ್ಯಕ್ರಮಗಳ ಕ್ರಮಬದ್ಧತೆಯನ್ನು ಪ್ರಶ್ನಿಸಿದರು. ಸರ್ವೋಚ್ಚ ನ್ಯಾಯಾಲಯ ಮಧ್ಯಂತರ ಆಜ್ಞೆಯನ್ನು ನೀಡಿ ವಿಧಾನಸಭೆ ಮಾರ್ಚ್ ೧೧ರಂದೇ ನಡೆಯಬೇಕು. ಆ ದಿನ

ಬಹುಮತ ಸಾಬೀತು ಮಾಡುವ ಒಂದೇ ಒಂದು ವಿಷಯದ ಮೇಲೆ ನಿರ್ಣಯ ತೆಗೆದುಕೊಳ್ಳಬೇಕು ಎಂದು ಆಜ್ಞೆಮಾಡಿತು.

ಇಲ್ಲಿ ಗಮನಿಸಬೇಕಾದ ಮುಖ್ಯವಾದ ಅಂಶ – ಸಂವಿಧಾನದ ೧೨೨ನೆ ಆರ್ಟಿಕಲ್‌ನ ನಿರ್ದೇಶನ, ವಿಧಾನಸಭೆಯ ಕಾರ್ಯಕಲಾಪಗಳನ್ನು ಯಾವ ನ್ಯಾಯಾಲಯವೂ ಪ್ರಶ್ನಿಸತಕ್ಕದ್ದಲ್ಲ ಎಂಬ ನಿರ್ದೇಶನವನ್ನು ಸರ್ವೋಚ್ಚ ನ್ಯಾಯಾಲಯ ಉಲ್ಲಂಘಿಸಿದಂತೆ ಆಗಲಿಲ್ಲವೆ ? ವಿಧಾನಸಭೆ ಎಂದು, ಎಷ್ಟು ಹೊತ್ತಿಗೆ ಸಮಾವೇಶ ಆಗಬೇಕು ? ಸಮಾವೇಶದಲ್ಲಿ ಯಾವ ವಿಷಯವನ್ನು ಕೈಗೆತ್ತಿಕೊಳ್ಳಬೇಕು ? ಆ ಸಭೆಯಲ್ಲಿ ಯಾರ್‍ಯಾರು ಪಾಲ್ಗೊಳ್ಳಬೇಕು ಎಂಬುದು ಅಂದಿನ ಸರ್ಕಾರ ನಿರ್ಧರಿಸಿದಂತೆ ನಿರ್ದೇಶಿಸುವ ಅಧಿಕಾರ ರಾಜ್ಯಪಾಲರಿಗಿದೆ. ಆ ನಿರ್ದೇಶನ ಸರಿಯೇ ತಪ್ಪೇ ಎಂದು ನಿರ್ಧರಿಸುವ ಅಧಿಕಾರ ಯಾವ ನ್ಯಾಯಾಲಯಕ್ಕೂ ಇಲ್ಲ. ಆದರೂ ಸರ್ವೋಚ್ಚ ನ್ಯಾಯಾಲಯ ಆರ್ಟಿಕಲ್ ೧೨೨ ಅನ್ನು ಉಲ್ಲಂಘಿಸಿ ಆಜ್ಞೆಮಾಡಿತು.

ಒಂದುವೇಳೆ ಅಂದಿನ ರಾಜ್ಯಪಾಲ ಸೈಯದ್ ಸಿಬ್ತೆ ರಜ್ವಿ ಮತ್ತು ಶಾಸನ ಸಭಾಧ್ಯಕ್ಷ ಪಿ. ಕೆ. ಬಲು ಮುಚು ಸರ್ವೋಚ್ಚ ನ್ಯಾಯಾಲಯದ ಆಜ್ಞೆಯನ್ನು ಧಿಕ್ಕರಿಸಿದ್ದರೆ ನ್ಯಾಯಾಲಯ ಏನು ಮಾಡಬಹುದಿತ್ತು? ನ್ಯಾಯಾಲಯ ನಿಂದನೆಯ ಕ್ರಮ ಜರುಗಿಸಬೇಕಾಗುತ್ತಿತ್ತು! ಒಂದು ವೇಳೆ ರಾಜ್ಯಪಾಲರು ಮತ್ತು ಸಭಾಧ್ಯಕ್ಷರು ಅದನ್ನು ಧಿಕ್ಕರಿಸಿ ನ್ಯಾಯಾಲಯಕ್ಕೆ ಹಾಜರಾಗದಿದ್ದರೆ ನ್ಯಾಯಾಲಯ ಏನು ಮಾಡುವಂತಿತ್ತು? ಏಕಪಕ್ಷೀಯವಾಗಿ ತೀರ್ಪು ನೀಡಿ ಅವರನ್ನು ಶಿಕ್ಷಿಸಬಹುದಾಗಿತ್ತೆ? ಒಂದು ವೇಳೆ ಸಭಾಧ್ಯಕ್ಷರೇ ಶಾಸನಸಭೆಯ ಹಕ್ಕಿಗೆ ಚ್ಯುತಿ ತಂದಿದೆ ಎಂದು ನ್ಯಾಯಮೂರ್ತಿಗಳ ವಿರುದ್ಧ ಹಕ್ಕುಚ್ಯುತಿ ನಿರ್ಣಯ ಅಂಗೀಕರಿಸಿ ಅವರನ್ನು ಸದನಕ್ಕೆ ಕರೆತರಲು ವಾರೆಂಟ್‌ಕೊಡಲು ಬರುತ್ತಿತ್ತು! ಆಗ ಏನಾಗುತ್ತಿತ್ತು? ಆಗ ಶಾಸಕಾಂಗಕ್ಕೂ ನ್ಯಾಯಾಂಗಕ್ಕೂ ಹಣಾಹಣಿ ಉಂಟಾಗುತ್ತಿತ್ತು!!

ಇಂಥಾದ್ದು ಹಿಂದೆ ನಡೆದಿತ್ತು. ಉತ್ತರ ಪ್ರದೇಶದ ವಿಧಾನಸಭೆಯಲ್ಲಿ ಕೇಶವದೇವ ಶರ್ಮ ಎಂಬ ಒಬ್ಬಾತ ಪ್ರೇಕ್ಷಕರ ಗ್ಯಾಲರಿಯಿಂದ ಕರಪತ್ರಗಳನ್ನು ತೂರಿ ಘೋಷಣೆ ಕೂಗಿದ. ಅವನನ್ನು ಸದನದ ಹಕ್ಕುಚ್ಯುತಿ ಮಾಡಿದ ಅಪರಾಧಕ್ಕಾಗಿ ಶಿಕ್ಷೆ ವಿಧಿಸಿದರು. ಈ ತೀರ್ಪನ್ನು ಪ್ರಶ್ನಿಸಿ ಅಲಹಾಬಾದ್ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ದಾಖಲು ಮಾಡಿದ. ನ್ಯಾಯಾಲಯದ ದ್ವಿಸದಸ್ಯ ಪೀಠ ರಿಟ್ ಅರ್ಜಿಯನ್ನು ವಿಚಾರಣೆಗೆ ಅಂಗೀಕರಿಸಿ ಸದನದ ತೀರ್ಪಿಗೆ ತಡೆ ಆಜ್ಞೆ ನೀಡಿತು. ನ್ಯಾಯಾಲಯದ ಈ ಆಜ್ಞೆ ಸದನದ ಹಕ್ಕುಚ್ಯುತಿ ಎಂದು ಪರಿಗಣಿಸಿ, ತಡೆ ಆಜ್ಞೆ ಕೊಟ್ಟ ಆ ಇಬ್ಬರು ನ್ಯಾಯಮೂರ್ತಿಗಳನ್ನು ಸದನದ ಮುಂದೆ ಹಾಜರುಪಡಿಸಲು ಅರೆಸ್ಟ್ ವಾರೆಂಟ್ ಹೊರಡಿಸಿದರು! ಇದಕ್ಕೆ ಪ್ರತಿಯಾಗಿ ಉಚ್ಚ ನ್ಯಾಯಾಲಯದ ಅಂದಿನ ೨೪ ಎಲ್ಲ ನ್ಯಾಯ ಮೂರ್ತಿಗಳೂ, ನ್ಯಾಯಾಲಯದ ನಿಂದನೆ ಮಾಡಿದ ಅಪರಾಧಕ್ಕಾಗಿ ಸದನದ ಸಭಾಧ್ಯಕ್ಷರಿಗೆ ವಾರೆಂಟ್ ಹೊರಡಿಸಿದರು !! ಸದನದೊಳಗೆ ಕಾಲಿಡಲು ಯಾವ ಪೊಲೀಸ್ ಅಧಿಕಾರಿಗೂ ಅಧಿಕಾರ ವಿಲ್ಲ. ಹಾಗೂ ನ್ಯಾಯಾಲಯದ ಹುಕುಂ ಕಾರ್ಯಗತಗೊಳಿಸಲು ಸರ್ಕಾರದ ಯಾವ ಪೊಲೀಸನಿಗೆ ಧೈರ್ಯವಿದೆ ? ಶಾಸಕಾಂಗವನ್ನು ಧಿಕ್ಕರಿಸುವ ಎದೆಗಾರಿಕೆ ಕಾರ್ಯಾಂಗಕ್ಕೆ ಇದೆಯೇ ? ಹಾಗೆಯೇ ಸಭಾಧ್ಯಕ್ಷರು ಹೊರಡಿಸಿದ ಆಜ್ಞೆಯಂತೆ ನ್ಯಾಯಮೂರ್ತಿಗಳನ್ನು ಹಿಡಿದುತರುವ ಪೊಲೀಸರು ಎಲ್ಲಿದ್ದಾರೆ ?

ಈ ಪರಿಸ್ಥಿತಿಯನ್ನು ಎದುರಿಸಲು, ಸಮಸ್ಯೆಯನ್ನು ಪರಿಹರಿಸಲು ರಾಷ್ಟ್ರಪತಿಗಳು ಈ ಸಮಸ್ಯೆಗೆ ದಾರಿತೋರಿಸಲು ಸರ್ವೋಚ್ಚ ನ್ಯಾಯಾಲಯಕ್ಕೆ ವಹಿಸಿದರು. ಆಗ ಸರ್ವೋಚ್ಚ ನ್ಯಾಯಾಲಯ – ಶಾಸಕಾಂಗ, ನ್ಯಾಯಾಂಗ ತಮ್ಮ ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ತಾವೇ ಸಾರ್ವಭೌಮ. ಯಾರೂ (ಯಾವನೂ) ಯಾರಿಗಿಂತ ಹೆಚ್ಚಲ್ಲ ಕಡಮೆಯಲ್ಲ. ಆದ್ದರಿಂದ ಅಂತಹವರು ತಮ್ಮ ತಮ್ಮ ಕ್ಷೇತ್ರದಲ್ಲಿ ಔಚಿತ್ಯ ಮೀರದಂತೆ – ಲಕ್ಷ್ಮಣರೇಖೆ ದಾಟದಂತೆ – ವರ್ತಿಸಬೇಕು ಎಂದು ಬುದ್ಧಿವಾದದ 'ತೀರ್ಪು' ನೀಡಿತು. ಹಾಗೆ ವರ್ತಿಸದಿದ್ದರೆ ಸಂವಿಧಾನವೇ ಕುಸಿಯುತ್ತದೆ. ಪ್ರಜಾಸತ್ತೆ ಉಳಿಯುವುದಿಲ್ಲ. ಪ್ರಜಾಸತ್ತೆ ಉಳಿಯಬೇಕಾದರೆ ರಾಜ್ಯದ ಶಾಸಕಾಂಗ ಮತ್ತು ನ್ಯಾಯಾಂಗ ಒಂದನ್ನೊಂದು ಗೌರವದಿಂದ ಕಾಣಬೇಕು; ಒಂದಕ್ಕೊಂದು ಮರ್ಯಾದೆ ಕೊಡಬೇಕು. ನಾನೇ ಹೆಚ್ಚು, ನಾನೇ ಶ್ರೇಷ್ಠ ಎಂದು ವರ್ತಿಸಬಾರದು. ಮೌಲ್ಯಗಳನ್ನು ಮನ್ನಿಸುವ ಪ್ರಜ್ಞಾವಂತರಾಗಬೇಕು. ನಾಗರಿಕ ನಡವಳಿಕೆ ಆಳುವವರಲ್ಲಿ ಇರಬೇಕು. ಔಚಿತ್ಯ ಪ್ರಜ್ಞೆ ನ್ಯಾಯ ಪರಿಪಾಲನೆಯ ಹೊಣೆಹೊತ್ತವರಿಗಿರಬೇಕು. ಇದೆ ಸುವರ್ಣ ಮಧ್ಯಮಾರ್ಗ.

**ಕೋ. ಚೆನ್ನಬಸಪ್ಪ**

ನಂ ೧೨೭, ವೆಸ್ಟ್ ಆಫ್ ಕಾರ್ಡ್ ರೋಡ್, ರಾಜಾಜಿನಗರ, ಬೆಂಗಳೂರು - ೫೬೦ ೦೮೬

ಪ್ರೊ॥ ಕ. ವೆಂ. ರಾಜಗೋಪಾಲ



# ಎರಡು ಮೂಕ ನಾಟಕಗಳು

ಸ್ಯಾಮ್ಯುಯಲ್ ಬೆಕೆಟ್ ಐರ್ಲೆಂಡಿನ ಡಬ್ಲಿನ್‌ನಲ್ಲಿ ೧೯೦೬ರಲ್ಲಿ ಹುಟ್ಟಿ ೧೯೨೭ರಲ್ಲಿ ಪ್ಯಾರಿಸ್ಸಿಗೆ ಹೋದನು. ಇವನು ಕಥೆ, ಕಾದಂಬರಿ ಹಾಗೂ ವಿಮರ್ಶೆಯನ್ನು ಬರೆದರೂ ಅಂತರರಾಷ್ಟ್ರೀಯ ಖ್ಯಾತಿಗೆ ಬಂದದ್ದು ನಾಟಕಗಳ ರಚನೆಯಿಂದ. 'ವೈಟಿಂಗ್ ಫಾರ್ ಗೋಡೋ' ಅವನಿಗೆ ಹೆಸರು ತಂದುಕೊಟ್ಟ ನಾಟಕ. ಇದನ್ನು ಮೊದಲು ಫ್ರೆಂಚ್ ಭಾಷೆಯಲ್ಲಿ ಬರೆದು, ತಾನೇ ಇಂಗ್ಲಿಷಿಗೆ ಅನುವಾದಿಸಿದನು. ಮನುಷ್ಯನ ಅಸಂಗತ ಬದುಕಿನ ವ್ಯಾಖ್ಯಾನವೇ ಈ ನಾಟಕ. 'ಎಂಡ್‌ಗೇಮ್', 'ಕ್ರ್ಯಾಪ್‌ಸ್ ಲಾಸ್ಟ್ ಟೇಪ್', 'ಹ್ಯಾಪಿ ಡೇಸ್' ಮುಂತಾದ ನಾಟಕ ಕೃತಿಗಳನ್ನು ರಚಿಸಿದ್ದಾನೆ. 'ಆ್ಯಕ್ಟ್ ವಿಥೌಟ್ ವರ್ಡ್ಸ್ – ೧ ಮತ್ತು ೨' ವಿಶಿಷ್ಟ ಪ್ರಯೋಗಗಳು. ಮಾತಿಲ್ಲದ ನಾಟಕಗಳು. ಈತನಿಗೆ ೧೯೬೯ರಲ್ಲಿ ನೊಬೆಲ್ ಪಾರಿತೋಷಕ ಪ್ರಾಪ್ತವಾಯಿತು. ಮಾತಿಲ್ಲದ ನಾಟಕಗಳು ಭಾರತೀಯ ಭಾಷೆಗಳಲ್ಲಿ ಮೊದಲ ಬಾರಿಗೆ, ೧೯೭೭ರಲ್ಲಿ ರಚಿಸಿದವರು ಚಿ. ಶ್ರೀನಿವಾಸರಾಜು. ಈಗ ನಾಟಕಗಳು 'ಫೀನಿಕ್ಸ್' ಶೀರ್ಷಿಕೆಯಲ್ಲಿ ಇಂಗ್ಲಿಷಿಗೆ ಅನುವಾದಗೊಂಡು ಪ್ರಕಟಗೊಂಡಿವೆ. ಇದನ್ನು ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸಿದೆ.

### ಮಾತಿಲ್ಲದ ಅಂಕ : ೧ ಒಬ್ಬ ನಟನಿಗಾಗಿ ಒಂದು ಮೂಕನಾಟಕ

ಫ್ರೆಂಚ್ ಭಾಷೆಯಲ್ಲಿ ೧೯೫೬ರಲ್ಲಿ ಜಾನ್ ಬೆಕೆಟ್‌ರ ಸಂಗೀತದಿಂದ ಕೂಡಿದ್ದು ನಾಟಕಕಾರನ ಕಸಿನ್‌ನಿಂದ ರಚಿತವಾಯಿತು. ಪ್ಯಾರಿಸ್‌ಲ್ಲಿ ೧೯೫೭ರಲ್ಲಿ ಮೊದಲು ಪ್ರಕಟವಾಯಿತು. ಈ ಕರ್ತೃವಿಂದ ಅನುವಾದವಾಗಿ ಇಂಗ್ಲಿಷ್‌ನಲ್ಲಿ ಪ್ರಕಟವಾಯಿತು. ಇದನ್ನು ಗ್ರೋವ್ ಪ್ರೆಸ್ ನ್ಯೂಯಾರ್ಕಿನಲ್ಲಿ ೧೯೫೮ರಲ್ಲಿ ಪ್ರಕಟಿಸಿತು. ರಾಯಲ್ ಕೋರ್ಟ್ ಥಿಯೇಟರಿನಲ್ಲಿ ೩ನೇ ಏಪ್ರಿಲ್ ೧೯೫೭ರಂದು ಇದನ್ನು ಅಭಿನಯಿಸಲಾಯಿತು.

### ಮೂಕಾಭಿನಯ : ೨ ಇಬ್ಬರಿಂದ ಅಭಿನಯಕ್ಕಾಗಿ

ಬೆಕೆಟ್ ಹೇಳುವಂತೆ ಮೂಕಾಭಿನಯ ೧ರ (೧೯೫೬) ವೇಳೆಗೇ ರಚಿತವಾದ ಒಂದು ಮೂಕನಾಟಕ. ಈ ಸಾಹಿತಿಯು ಫ್ರೆಂಚ್ ಭಾಷೆಯಿಂದ ಅನುವಾದಿಸಿ ಮೊದಲಬಾರಿಗೆ ನ್ಯೂ ಡಿಪಾರ್ಚರ್ಸ್, ಸಂಪುಟ ೧ (ಬೇಸಿಗೆ ೧೯೫೯)-ರಲ್ಲಿ ಪ್ರಕಟಣೆಯಾಗಿದೆ. ಇದು ಲಂಡನ್‌ನಲ್ಲಿ ಇನ್‌ಸ್ಟಿಟ್ಯೂಟ್ ಆಫ್ ಕಾಂಟೆಂಪೊರರಿ ಆರ್ಟ್-೨೫ನೇ ಜನವರಿ ೧೯೬೦ರಂದು ಪ್ರದರ್ಶನಗೊಂಡಿದೆ.

**ಟಿಪ್ಪಣಿ :**

ಈ ಮೂಕನಾಟಕವನ್ನು ಒಂದು ಎತ್ತರವಿಲ್ಲದ ಸಣ್ಣರಂಗ ಜಗಲಿಯ ಮೇಲೆ ಹಿಂಬದಿಗೆ – ಪ್ರದರ್ಶಿಸಬೇಕು. ಅದರ ಉದ್ದಗಲಕ್ಕೆ ದಟ್ಟ ಬೆಳಕಾಗಬೇಕು; ಉಳಿದ ಭಾಗವು ಕತ್ತಲೆಯಲ್ಲಿರಬೇಕು. ಫ್ರೀಜ್ ಎಫೆಕ್ಟ್ ಬೇಕು.

A ನಿಧಾನಿ, ವಕ್ರರೀತಿಯಲ್ಲಿ (ಉಡಿಗೆಯನ್ನು ತೊಡುತ್ತಾ ಕಳಚುತ್ತಾ) ಮೈಮರೆತು. B ಚೂಟಿಯಾಗಿ ವೇಗವಾಗಿ ಅಚ್ಚುಕಟ್ಟಾದ ವರ್ತನೆ. ಈ ಎರಡೂ ಅಭಿನಯದಲ್ಲಿ A ಗಿಂತ B ಯ ಪಾಲು ಹೆಚ್ಚಾಗಿದ್ದರೂ ಸರಿಸುಮಾರಿಗೆ ಇಬ್ಬರದೂ ಒಂದೇ ಅವಧಿಗೆ ಸಲ್ಲುತ್ತದೆ.

**ವಿಚಾರಣೆ :**

ಇಬ್ಬರೂ ರಂಗದ ಮೇಲೆ ಇರುವಾಗಲೇ ರಂಗದ ಬಲಗಡೆಯಿಂದ ಎರಡು ಗಜಗಳ ದೂರದಲ್ಲಿ ಎರಡು ಚೀಲಗಳು, A ಗೆ ಮತ್ತು B ಗೆ ಸೇರಿದ್ದವು – A-ಚೀಲವು (ಪ್ರೇಕ್ಷಾಗೃಹದಿಂದ)



ಬಲಭಾಗಕ್ಕೆ ಇದ್ದು ಅದರಲ್ಲೂ B-ಚೀಲವು ರಂಗದ ಬಲಕ್ಕೆ ಸಮೀಪವಾಗಿದೆ. ರಂಗದಲ್ಲಿ B-ಚೀಲಕ್ಕೆ ಸಮೀಪದಲ್ಲಿ ಉಡಿಗೆಯ ಒಂದು ಗುಪ್ಪೆ (C) ಇದೆ. ಚೆನ್ನಾಗಿ ಮಡಿಚಿಟ್ಟ (ಕೋಟು ಮತ್ತು ಟ್ರೌಷರು ಇದು) ಅದರ ಮೇಲೆ ಬೂಟ್ಸ್ ಮತ್ತು ಹ್ಯಾಟ್-ಇವೆ.



ಬಲಭಾಗದಿಂದ, ಬಡಿಗೆಯಾಗಿ ನೆಲದಮೇಲೆ ಮಲಗಿದಂತೆ ಪ್ರವೇಶ. ಒಂದು ಅಡಿಯ ಅಂತರಕ್ಕೆ A-ಚೀಲದ ಬಳಿ ಯಾ ತಡೆದು-ಮೌನ. ಆ ಗುರುತು (೦) ಹಿಂದಕ್ಕೆ ಸರಿಯುತ್ತದೆ. - ಮೌನ. ಚೀಲದೊಳಕ್ಕೆ ನುಗ್ಗಿ ಕೂಡಲೆ ಹಿಂಜರಿದು ಒಂದು ಅಡಿಯಷ್ಟಕ್ಕೆ ಉಳಿಯುತ್ತದೆ (ಚೀಲದಿಂದ). ಮೌನ. ಚೀಲವು ಜರುಗುವುದಿಲ್ಲ. ಆ(೦) ಗುರುತು ಮತ್ತೆ ಹಿಂದಕ್ಕೆ ಸರಿಯುತ್ತದೆ.- ಈಗ ಕೊಂಚ ಮುಂದಕ್ಕೆ-ಮೌನ. ಮತ್ತೆ ಚೀಲದೊಳಕ್ಕೆ ನುಗ್ಗಿ ಕೂಡಲೆ ಹಿಂಜರಿದು ಆ ಚೀಲಕ್ಕೆ ಒಂದು ಅಡಿ ಅಂತರದಲ್ಲಿ ಉಳಿಯುತ್ತದೆ - ಮೌನ. ಈಗ ಚೀಲವು ಜರುಗುತ್ತದೆ. ಬಡಿಗೆಯು ರಂಗದಿಂದ ಮರೆಯಾಗುತ್ತದೆ (ಎಕ್ಸಿಟ್).

A ಯು ಷರ್ಟ್‌ಧರಿಸುತ್ತಾ ಚೀಲದೊಳಗಿಂದ ಹೊರಕ್ಕೆ ತೆವಳುತ್ತಾ, ತಡೆದುಳಿದು ಚಿಂತಿಸುತ್ತಾ ಪ್ರಾರ್ಥಿಸುತ್ತ(ದೆ) ತನ್ನ ಕಾಲಿನ ಮೇಲೆ ನಿಂತು ಚಿಂತಿಸುತ್ತಾ ತನ್ನ ಷರ್ಟಿನ ಜೇಬಿನಿಂದ ಒಂದು ಸಣ್ಣ ಗುಳಿಗೆಯ ಸೀಸೆ (ಬಾಟಲ್) ತೆಗೆದು, ಚಿಂತಿಸುತ್ತಾ ಉಡಿಗೆಗಳನ್ನು ಧರಿಸಿಕೊಳ್ಳುತ್ತಾ ಚಿಂತಿಸುತ್ತಾ ಕೋಟಿನ ಜೇಬಿನಿಂದ ಒಂದು ಸ್ವಲ್ಪ ತಿಂದ ಕ್ಯಾರೆಟ್ (ಗಜ್ಜರಿ) ಅನ್ನು - ದೊಡ್ಡದು – ಒಂದು ಚೂರು ಕಡಿದು ಒಂದು ಬಾರಿ ಅಗಿದು ಬೇಸರದಿಂದ ಉಗಿಯುತ್ತ ಉಳಿದ ಕ್ಯಾರೆಟ್ಟನ್ನು ಜೇಬಿಗೆ ಸೇರಿಸಿ, ಚಿಂತಿಸುತ್ತ ಎರಡು ಚೀಲಗಳನ್ನು ಎತ್ತಿಕೊಂಡು ಹೆಗಲೇರಿಸಿ ಬಾಗಿ ಭಾರದಿಂದ ಜಗ್ಗಿದಂತೆ ರಂಗದ ಎಡಗಡೆಗೆ ಸ್ವಲ್ಪ ನಡೆದು ಅವುಗಳನ್ನಿಟ್ಟು ಚಿಂತಿಸುತ್ತಾ ಷರ್ಟನ್ನು ಮಾತ್ರ ತೆಗೆಯದೆ ಉಳಿದ ಉಡಿಗೆಗಳನ್ನು ಬಿಚ್ಚುತ್ತಾ ಕೊಳಕನ್ನು ರಾಶಿ ಹಾಕಿದಂತೆ ಚಿಂತಿಸುತ್ತಾ ಮತ್ತೊಂದು ಗುಳಿಗೆಯನ್ನು ನುಂಗಿ ಚಿಂತಿಸುತ್ತಾ ಮಂಡಿಯೂರಿ ಪ್ರಾರ್ಥಿಸಿ ಚೀಲದೊಳಕ್ಕೆ ಸರಿದು ತೆಪ್ಪಗಾಗುವಲ್ಲಿ A-ಚೀಲವು B ಚೀಲಕ್ಕೆ ಎಡಗಡೆಗೆ ಉಳಿಯುತ್ತದೆ.

### ಮೌನ

ಈಗ ಬಲಗಡೆಯಿಂದ ಒಂದು ಚಕ್ರದ ಆಧಾರದಿಂದ ಒಂದು ವ್ಯಕ್ತಿಯು ಪ್ರವೇಶಿಸಿ B-ಚೀಲದಿಂದ ಒಂದು ಅಡಿ ಅಂತರದಲ್ಲಿ ನಿಂತು-ಮೌನ. ಈಗ ಆ ಗುರುತು ಜರುಗುತ್ತದೆ. ಮೌನ ತಾಳಿ ಕೂಡಲೆ ಚೀಲದೊಳಕ್ಕೆ ತೂರಿಕೊಂಡು ಹಿಂದಕ್ಕೆ ಸರಿದು ಆ ಚೀಲದಿಂದ ಒಂದು ಅಡಿ ಹಿಂದಕ್ಕೆ ಜರುಗಿ ನಿಂತಾಗ ಮೌನ-ಚೀಲವು ಜರುಗುತ್ತದೆ. ವ್ಯಕ್ತಿಯೂ ಎಕ್ಸಿಟ್ ಆಗುತ್ತದೆ (ನಿಷ್ಕ್ರಮಣ). ಈಗ B-ಷರ್ಟಿನಲ್ಲಿ ಚೀಲದಿಂದ ಹೊರಕ್ಕೆ ತೆವಳಿಕೊಂಡುಬರುತ್ತದೆ. ಕೂಡಲೆ ಎದ್ದು ನಿಂತು ಷರ್ಟಿನ ಜೇಬಿಂದ ತೆಗೆದ ಒಂದು ದೊಡ್ಡ ಕೈಗಡಿಯಾರದಲ್ಲಿ ನೋಡಿಕೊಂಡು ಅದನ್ನು ಮತ್ತೆ ಜೇಬಿಗೆ ಸೇರಿಸಿ ವ್ಯಾಯಾಮ (ಸಾಮು) ಮಾಡಿ ಕೈಗಡಿಯಾರವನ್ನು ತೆಗೆದು ನೋಡಿ ಷರ್ಟಿನ ಜೇಬಿಂದ ಒಂದು ಟೂತ್‌ಬ್ರಷ್ ತೆಗೆದು ಹಲ್ಲುಗಳನ್ನು ಬೇಗಬೇಗ ತಿಕ್ಕುತ್ತಾ ಆ ಬ್ರಷನ್ನು ಜೇಬಿಗಿರಿಸಿ ನೆತ್ತಿಯನ್ನು ಕೆರೆದುಕೊಳ್ಳುತ್ತಾ ಷರ್ಟಿನ ಜೇಬಿಂದ ಒಂದು ಕೂಂಬನ್ನು ತೆಗೆದು ತಲೆಬಾಚಿಕೊಂಡು ಕೂಂಬನ್ನು ಮರಳಿ ಜೇಬಿಗೆ ಸೇರಿಸಿ ಕೈಗಡಿಯಾರವನ್ನು ನೋಡಿ ಕೊಂಡು ಒಂದು ಬ್ರಷ್‌ನ್ನು ಕೋಟಿನ ಜೇಬಿಂದ ತೆಗೆದು ಕೋಟನ್ನು ಬ್ರಷ್ ಮಾಡಿ ತಲೆಗೂದಲನ್ನೂ ಬೇಗನೆ ಬ್ರಷ್ ಮಾಡುತ್ತಾ ಬ್ರಷ್‌ನ್ನು ಮತ್ತೆ ಕೋಟಿನ ಜೇಬಿಗೆ ಸೇರಿಸಿ, ಕೋಟಿನ ಜೇಬಿಂದ ಒಂದು ಸಣ್ಣ ಕನ್ನಡಿಯನ್ನು ತೆಗೆದು ಮುಖದ ಅಂದವನ್ನು ನೋಡಿಕೊಂಡು ಅದನ್ನು ಮತ್ತೆ ಜೇಬಿಗೆ ಸೇರಿಸಿ, ಕೋಟಿನ ಜೇಬಿಂದ ಒಂದು ದೊಡ್ಡ

ಕ್ಯಾರೆಟ್ ತೆಗೆದು ಒಂದು ಚೂರು ಕಡಿದು ಹಸಿವನ್ನು ನೀಗಿಸುವಂತೆ ಅಗಿದು ನುಂಗಿ ಕ್ಯಾರೆಟನ್ನು ಮತ್ತೆ ಜೇಬಿಗೆ ಸೇರಿಸಿ, ಕೈಗಡಿಯಾರನ್ನು ನೋಡಿಕೊಂಡು ಕೋಟಿನ ಜೇಬಿಂದ ಒಂದು ಮ್ಯಾಪನ್ನು ತೆಗೆದು ಕೈಗಡಿಯಾರವನ್ನೂ ನೋಡಿಕೊಂಡು ಕೋಟಿನ ಜೇಬಿಂದ ಒಂದು ಕಂಪಾಸು (ದಿಕ್ಸೂಚಿ = ಉತ್ತರ ಮುಖಿ) ತೆಗೆದು ನೋಡಿಕೊಂಡು ಅದನ್ನೂ ಜೇಬಿಗೆ ಸೇರಿಸಿ ಕೈಗಡಿಯಾರವನ್ನೂ ನೋಡಿಕೊಂಡು ಎರಡೂ ಚೀಲಗಳನ್ನು ಎತ್ತಿಕೊಂಡು ಹೆಗಲಿಗೇರಿಸಿ (ಭಾರಕ್ಕೆ) ಬಾಗಿ ಜಗ್ಗಿದಂತೆ ಮುಂದಕ್ಕೆ ನಡೆದು ರಂಗದ ಎಡಭಾಗಕ್ಕೆ (ಎಡರಂಗ) ಎರಡು ಗಜ ಅಂತರಕ್ಕೆ ತಡೆದು ನಿಂತು ಚೀಲಗಳನ್ನು ಕೆಳಕ್ಕಿಳಿಸಿ ಕೈಗಡಿಯಾರವನ್ನು ನೋಡಿಕೊಂಡು ಷರ್ಟನ್ನು ಮಾತ್ರ ತೆಗೆಯದೆ ಉಳಿದ ಅರಿವೆಯನ್ನು ಕಳಚಿ ನೀಟಾಗಿ ಮಡಿಚಿಟ್ಟು ಕೈಗಡಿಯಾರವನ್ನು ನೋಡಿಕೊಂಡು ವ್ಯಾಯಾಮ ಮಾಡಿ ಕೈಗಡಿಯಾರವನ್ನು ನೋಡಿಕೊಂಡು ನೆತ್ತಿಯನ್ನು ಕೆರೆದುಕೊಳ್ಳುತ್ತಾ ತಲೆಬಾಚಿಕೊಂಡು ಹಲ್ಲುಜ್ಜಿಕೊಳ್ಳುತ್ತಾ ನಡೆದು ಕೈಗಡಿಯಾರವನ್ನು ನೋಡಿಕೊಂಡು ಅದಕ್ಕೆ ವೈಂಡ್ ಮಾಡಿ ಚೀಲದೊಳಕ್ಕೆ ಸೇರಿಕೊಂಡು ತೆಪ್ಪಗಾಗುವಲ್ಲಿ B-ಚೀಲವು A-ಚೀಲಕ್ಕೆ ಎಡಭಾಗದಲ್ಲಿ ಉಳಿದು ಮೊದಲಿದ್ದಂತೆ ತೆಪ್ಪಗಿರುತ್ತದೆ.

ಮೌನ

ಈಗ ವ್ಯಕ್ತಿಯು (ದಡಿಯ!) ಬಲಗಡೆಯಿಂದ ಪ್ರವೇಶಿಸಿ (ಎರಡು ಚಕ್ರಗಳ ನೆರವಿನಿಂದ)ದಾಗ ಚೀಲದಿಂದ ಒಂದು ಅಡಿ ಅಂತರದಲ್ಲಿ ಉಳಿದು ಮೌನ-ಅದೂ ಹಿಂದಕ್ಕೆ ಸರಿಯುತ್ತದೆ. ಮೌನ. ಚೀಲದೊಳಕ್ಕೆ ಸೇರಿಕೊಂಡು ಹಿಂಜರಿದು ನಿಂತು ಚೀಲದಿಂದ ಒಂದು ಅಡಿ ಅಂತರಕ್ಕೆ ಉಳಿಯುತ್ತದೆ. ಮೌನ- ಚೀಲ ಜರುಗುವುದಿಲ್ಲ. ಈಗ ನಡುವಿನ ಅಂತರವೇ ಜರುಗಿದಂತೆ ಮೊದಲಿಗಿಂತ ಕೊಂಚ (ದೂರ) ಹಿಂದಕ್ಕೆ ಉಳಿದು ಮೌನ-ಮತ್ತೆ ಚೀಲದೊಳಕ್ಕೆ ತೂರಿಕೊಂಡಂತೆ ಸೇರಿಕೊಂಡು ಹಿಂಜರಿದು ನಿಂತು ಆ ಚೀಲಕ್ಕೆ ಒಂದಡಿ ಅಂತರದಲ್ಲಿ ಉಳಿಯುತ್ತದೆ.

ಮೌನ

ಈಗ ಚೀಲ ಜರುಗುತ್ತದೆ. ವ್ಯಕ್ತಿಯ ನಿರ್ಗಮನ.

A ಯು ಚೀಲದಿಂದ ಹೊರಬಂದು ಎದ್ದುನಿಲ್ಲುತ್ತದೆ. ಚಿಂತೆಯಲ್ಲಿ ಉಳಿದು ಪ್ರಾರ್ಥನೆ ಮಾಡುತ್ತದೆ.

– ಪರದೆ –

ಮರಳುಗಾಡು. ಕೋರಯಿಸುವ ಬೆಳಕು.

ರಂಗದ ಬಲ ವಿಂಗಿನಿಂದ ಒಬ್ಬಾತನನ್ನು ರಂಗಕ್ಕೆ ಹಿಂಗಡೆಗೆ ಒಗೆಯಲಾಯಿತು. ಆತನು ಬೀಳುತ್ತಾನೆ. ಕೂಡಲೆ ಎದ್ದುನಿಂತು. ಮೈ ಧೂಳನ್ನು ಕೊಡವಿಕೊಂಡು ಅತ್ತಿತ್ತ ನೋಡುತ್ತಾನೆ, ತಲೆ ಕೆರೆದುಕೊಳ್ಳುತ್ತಾನೆ.

ಈಗ ರಂಗದ ಬಲಗಡೆಯಿಂದ ಶಿಳ್ಳೆ ಕರೆಯುತ್ತದೆ. ತಲೆ ಕೆರೆದುಕೊಳ್ಳುತ್ತಾ, ಆ ಕಡೆಗೆ ಹೋಗುತ್ತಾನೆ. ಕೂಡಲೆ ರಂಗದ ಮಧ್ಯಕ್ಕೆ (ಹಿಂಬದಿಗೆ) ಒಗೆಯಲ್ಪಟ್ಟು ಬೀಳುತ್ತಾನೆ. ಕೂಡಲೆ ಎದ್ದುನಿಲ್ಲುತ್ತಾನೆ. ಮೈ ಧೂಳನ್ನು ಕೊಡವಿಕೊಳ್ಳುತ್ತಾ ಅತ್ತಿತ್ತ ನೋಡುತ್ತಾನೆ. ತಲೆ ಕೆರೆದುಕೊಳ್ಳುತ್ತಾನೆ.

ಈಗ ರಂಗದ ಎಡಬದಿಯಿಂದ ಶಿಳ್ಳೆ ಕರೆಯುತ್ತದೆ. ತಲೆ ಕೆರೆದುಕೊಳ್ಳುತ್ತಾ ಅತ್ತಕಡೆಗೆ ಹೋಗುತ್ತಾನೆ. ಕಸಿವಿಸಿಗೊಂಡು ಆದರೂ ಒಳ್ಳಿತನ್ನು ಕುರಿತು ನಿಂತು ಅತ್ತಿತ್ತ ನೋಡುತ್ತಾ ತಲೆ ಕೆರೆದುಕೊಳ್ಳುತ್ತಾನೆ.

ಈಗ ರಂಗದ ಅಣಕು ಪರದೆ (ಫ್ಲೈಸ್)ಯಿಂದ ಒಂದು ಸಣ್ಣ ಮರವು ಇಳಿಬೀಳುತ್ತಾ ನೆಲಮುಟ್ಟುತ್ತದೆ. ಅದರಲ್ಲಿ ಒಂದೇ ಕೊಂಬೆಯಿದೆ. ಅದು ನೆಲದಿಂದ ಸುಮಾರು ಮೂರು ಗಜದೆತ್ತರಕ್ಕಿದೆ. ಅದರ ತುದಿಗೆ ಒಂದು ಸಣ್ಣಗೊಂಚಲು ಇದೆ. ಅದರ ನೆರಳು ನೆಲದಲ್ಲಿ ಒಂದು ವೃತ್ತವನ್ನು ಮಾಡಿದೆ.

ಅವನು ತಲೆ ಕೆರೆದುಕೊಳ್ಳುತ್ತಾ ನಿಲ್ಲುತ್ತಾನೆ.

ಈಗ ಮೇಲಿಂದ ಶಿಳ್ಳೆ ಕರೆಯುತ್ತದೆ. ಸುತ್ತಲೂ ನೋಡುವಲ್ಲಿ ಮರವನ್ನು ಕಾಣುತ್ತಾನೆ. ತಲೆ ಕೆರೆದುಕೊಳ್ಳುತ್ತಾ ಅದರ ಸಮೀಪಕ್ಕೆ ಹೋಗಿ ಕೆಳಗಿನ ನೆರಳಲ್ಲಿ ಕುಳಿತುಕೊಳ್ಳುತ್ತಾನೆ. ತನ್ನ ಕೈಗಳನ್ನು ನೋಡಿಕೊಳ್ಳುತ್ತಾನೆ.

ಈಗ ಒಂದು ಹೊಲಿಗೆಯ ಕತ್ತರಿಯು ಮೇಲಿಂದ ಇಳಿಬೀಳುತ್ತದೆ. ಮತ್ತು ಮರದ ಮುಂದೆ ನೆಲದಿಂದ ಒಂದು ಗಜದ ಎತ್ತರಕ್ಕೆ ನಿಲ್ಲುತ್ತದೆ. ಅವನು ತನ್ನ ಕೈಗಳನ್ನು ನೋಡಿಕೊಳ್ಳುತ್ತಿರುತ್ತಾನೆ.

ಈಗ ಮೇಲಿಂದ ಶಿಳ್ಳೆ ಕರೆಯುತ್ತದೆ. –

ಕತ್ತೆತ್ತಿ ನೋಡುತ್ತಾನೆ. ಕತ್ತರಿಯನ್ನು ನೋಡಿ, ತೆಗೆದುಕೊಂಡು ತನ್ನ ಉಗುರನ್ನು ಕತ್ತರಿಸತೊಡಗುತ್ತಾನೆ.

ಅವನ ಕೈಬೆರಳುಗಳು ಮುಗಿದುಕೊಳ್ಳುತ್ತವೆ. ನೆರಳು ಮಾಯವಾಗುತ್ತದೆ. ಕತ್ತರಿಯನ್ನು ಬಿಟ್ಟುಕೊಟ್ಟು ತಲೆಕೆರೆದುಕೊಳ್ಳುತ್ತಾನೆ.

ಈಗ ಒಂದು ಸಣ್ಣ ಹೂಜಿಯು – 'ನೀರು' ಎಂದು ಬರೆದ ದೊಡ್ಡ ಪಟ್ಟಿಯನ್ನು ಕಟ್ಟಿದ್ದು – ಮೇಲಿಂದ ಇಳಿಯುತ್ತದೆ. ಒಂದು ಮೂರು ಗಜದೆತ್ತರಕ್ಕೆ ತೂಗುತ್ತದೆ.

ಅವನು ಈಗಲೂ ತಲೆಕೆರೆದುಕೊಳ್ಳುತ್ತಿದ್ದಾನೆ.

ಈಗ ಮೇಲಿಂದ ಶಿಳ್ಳೆ ಕರೆಯುತ್ತದೆ.

ಅವನು ಕತ್ತೆತ್ತಿ ನೋಡುತ್ತಾನೆ. ಹೂಜಿಯನ್ನು ಕಂಡು ತಲೆಕೆರೆದುಕೊಳ್ಳುತ್ತಾನೆ. ಮುಂದೆ ಹೋಗಿ ಅತ್ತಿತ್ತ ತಿರುಗಿ ನೋಡಿ ಅದರ ಕೆಳಗಡೆ ನಿಂತು ಕೈಯಿಂದ ಕತ್ತರಿಯನ್ನು ಎಟುಕಿಸಲು ಸೋಲುತ್ತಾನೆ. ಅಷ್ಟಕ್ಕೆ ಬಿಟ್ಟುಕೊಟ್ಟು ಅತ್ತಿತ್ತ ತಿರುಗಿ ನೋಡುತ್ತಾ ತಲೆ ಕೆರೆದುಕೊಳ್ಳುತ್ತಾನೆ.

ಈಗ ಮೇಲಿಂದ ಒಂದು ಘನವಸ್ತು (ಕ್ಯೂಬ್) ಇಳಿಬಿದ್ದು ನೆಲ ಮುಟ್ಟುತ್ತದೆ. ಅವನು ತಲೆ ಕೆರೆದುಕೊಳ್ಳುತ್ತಾ ಇರುವಾಗ –

ಮೇಲಿಂದ ಶಿಳ್ಳೆ ಕರೆಯುತ್ತದೆ.

ಅವನು ಅತ್ತ ತಿರುಗಿ ನೋಡುವಲ್ಲಿ ಆ ಕ್ಯೂಬನ್ನು ಕಂಡು, ದಿಟ್ಟಿಸಿ ನೋಡಿ ಹೂಜಿಯನ್ನೊಮ್ಮೆ ನೋಡಿ ತಲೆ ಕೆರೆದುಕೊಳ್ಳುತ್ತಾ ಆ ಕ್ಯೂಬನ್ನು ಸಮೀಪಿಸಿ ಕೈಗೆತ್ತಿಕೊಂಡು ಹೆಗಲಿಗೇರಿಸಿ ನಡೆದು ಹೂಜಿಯ ಕೆಳಗಡೆ ಅದನ್ನು ಇಳಿಸುತ್ತಾನೆ, ಅಲ್ಲದೆ ಅದನ್ನು ಅಲುಗಿಸಿ ಸರಿಯಾಗಿ ಕುಳಿತಿರುವುದನ್ನು ಖಾತರಿಪಡಿಸಿಕೊಂಡು ಅದರ ಮೇಲೆ ನಿಂತು ಆ ಹೂಜಿಯನ್ನು ಎಟುಗಿಸಲು ಸಾಹಸಪಡುತ್ತಾನೆ; ಸೋತು ಬಿಟ್ಟುಕೊಡುತ್ತಾನೆ ಮತ್ತು ಕ್ಯೂಬಿನಿಂದಿಳಿದು ಅದನ್ನು ಮೊದಲಿದ್ದ ಜಾಗಕ್ಕೆ ಒಯ್ದು ಇರಿಸುತ್ತಾನೆ. ಅತ್ತಿತ್ತ ಹೊರಳಿನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಈಗ ಎರಡನೆಯ ಕ್ಯೂಬು ಮೊದಲಿನದಕ್ಕಿಂತ ಕೊಂಚ ಚಿಕ್ಕಗಾತ್ರದ್ದು, ಮೇಲಿಂದ ಇಳಿಬಿದ್ದು ನೆಲಮುಟ್ಟುತ್ತದೆ.

ಅವನು ತಲೆ ಕೆರೆದುಕೊಳ್ಳುತ್ತಾ ನಿಲ್ಲುತ್ತಾನೆ.

ಈಗ ಮೇಲಿಂದ ಶಿಳ್ಳೆ ಕರೆಯುತ್ತದೆ.

ಅವನು ಅತ್ತಕಡೆ ತಿರುಗಿ ಎರಡನೆಯ ಕ್ಯೂಬನ್ನು ದಿಟ್ಟಿಸಿ ನೋಡಿ ಹೂಜಿಯನ್ನೂ ನೋಡಿ ಆ ಎರಡನೆಯ ಕ್ಯೂಬನ್ನು ಸಮೀಪಿಸಿ ಅದನ್ನು ಎತ್ತಿಕೊಂಡು ಹೆಗಲೇರಿಸಿಕೊಂಡು ಮುಂದೆ ನಡೆದು ಹೂಜಿಯ ಅಡಿಯಲ್ಲಿ ಆ ಕ್ಯೂಬನ್ನು ಇರಿಸಿ ಅದರ ಗಟ್ಟಿತನವನ್ನು ಅಲುಗಿಸಿ ನೋಡಿ ಅದರ ಮೇಲೆ ನಿಂತುಕೊಂಡು ಹೂಜಿಯನ್ನು ಕೈಯಿಂದ ಎಟುಕಿಸಲು ಸಾಹಸ ಮಾಡಿ ಸೋಲುತ್ತಾನೆ. ಅಲ್ಲಿಗೆ ಬಿಟ್ಟುಕೊಟ್ಟು ಕೆಳಕ್ಕಿಳಿದು ಆ ಎರಡನೆಯ ಕ್ಯೂಬನ್ನು ಎತ್ತಿಕೊಂಡು ಅದರ ಮೊದಲ ಜಾಗಕ್ಕೆ ಒಯ್ದು ಹಿಂದೆಮುಂದೆ ನೋಡುತ್ತಾ ಸರಿಯಾದುದನ್ನು ಕಂಡವನಾಗಿ ಕೆಳಗಿಳಿಸುತ್ತಾನೆ.

ಈಗ ದೊಡ್ಡ ಕ್ಯೂಬಿನ ಬಳಿಗೆ ಹೋಗಿ ಅದನ್ನು ಎತ್ತಿಕೊಂಡು ಮುಂದೆ ನಡೆದು ಅಲ್ಲಿದ್ದ ಸಣ್ಣ ಕ್ಯೂಬಿನ ಮೇಲಿರಿಸಿ ಅವುಗಳ ಗಟ್ಟಿತನವನ್ನು ಅಲುಗಿಸಿ ನೋಡಿ ಅವುಗಳ ಮೇಲೆ ಹತ್ತಿ ನಿಲ್ಲುತ್ತಾನೆ. ಆ ಕ್ಯೂಬುಗಳು ಉರುಳಿ ಬೀಳುತ್ತವೆ. ಅವನೂ ಬೀಳುತ್ತಾನೆ. ಕೂಡಲೆ ಎದ್ದುನಿಲ್ಲುತ್ತಾನೆ.

ತನ್ನ ಮೈ ಧೂಳು ಕೊಡವಿಕೊಳ್ಳುತ್ತಾನೆ. ತಲೆಕೆರೆದುಕೊಳ್ಳುತ್ತಾನೆ.



ಈಗ ಮೂರನೆಯ ಹಾಗೂ ಇನ್ನಷ್ಟು ಸಣ್ಣ ಕ್ಯೂಬೊಂದು ಮೇಲಿಂದ ಇಳಿ ಬೀಳುತ್ತಾ ನೆಲ ಮುಟ್ಟುತ್ತದೆ.

ಅವನು ಮತ್ತೆ ಚಿಂತೆಯಲ್ಲಿ ಮುಳುಗುತ್ತಾನೆ.

ಈಗ ಆ ಸಣ್ಣ ಕ್ಯೂಬನ್ನು ದೊಡ್ಡದರ ಮೇಲಿರಿಸಿ ಅವುಗಳ ಗಟ್ಟಿತನವನ್ನು ಅಲುಗಿಸಿ ನೋಡಿ ಅವುಗಳ ಮೇಲೆ ಹತ್ತಿನಿಂತಾಗ ಹೂಜಿಯು ಕೈಗೆಟಕತೊಡಗುತ್ತದೆ, ಅದನ್ನು ತೆಗೆದುಕೊಳ್ಳಲು ಪ್ರಯತ್ನಿಸಿದಾಗ ಅದು ಕೊಂಚ ದೂರಕ್ಕೆ ಬಿದ್ದು ಉಳಿಯುತ್ತದೆ. ಹಾಗೂ ಕೈಗೆಟುಕದಂತಾಗಿ ಉಳಿಯುತ್ತದೆ.

ಈಗ ಅವನು ಕ್ಯೂಬುಗಳಿಂದ ಕೆಳಕ್ಕಿಳಿದು ನಿಂತು ತಲೆ ಕೆರೆದು ಕೊಳ್ಳುತ್ತಾ ನೋಡುತ್ತಾನೆ. ಆ ಕ್ಯೂಬು ಗಳನ್ನು ಅವುಗಳಿದ್ದ ಮೊದಲ ಜಾಗಕ್ಕೆ ಒಂದೊಂದನ್ನಾಗಿ ಒಯ್ದು ಇರಿಸಿ ಅತ್ತಿತ್ತ ತಿರುಗಿ ನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಈಗ ಮೂರನೆಯ ಹಾಗೂ ಮತ್ತಷ್ಟು ಸಣ್ಣದಾದ ಕ್ಯೂಬೊಂದು ಮೇಲಿಂದ ಇಳಿಬಿದ್ದು ನೆಲಮುಟ್ಟುತ್ತದೆ.

ಅವನು ತಲೆ ಕೆರೆದುಕೊಳ್ಳುತ್ತಾ ನಿಲ್ಲುತ್ತಾನೆ.

ಮೇಲಿಂದ ಶಿಳ್ಳೆ ಕರೆಯುತ್ತದೆ.

ಅತ್ತಕಡೆ ತಿರುಗಿ ನೋಡಿ ಆ ಮೂರನೆಯ ಕ್ಯೂಬನ್ನು ಕಂಡು ಅದನ್ನು ಚೆನ್ನಾಗಿ ನೋಡಿ ತಲೆ ಕೆರೆದುಕೊಂಡು ಅತ್ತಿತ್ತ ತಿರುಗಿನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಈಗ ಆ ಮೂರನೆಯ ಕ್ಯೂಬನ್ನು ಮತ್ತೆ ಮೇಲುಗಡೆಗೆ ಎಳೆಯಲಾಗುತ್ತದೆ. ಹಾಗೂ ಕಾಣದಂತಾಗುತ್ತದೆ.

ಈಗ ಹೂಜಿಯ ಪಕ್ಕದಲ್ಲಿ ಒಂದು ಹಗ್ಗವು ಇಳಿಯಬೀಳುತ್ತದೆ. ಅದರಲ್ಲಿ ಮೇಲೇರಲು ಅನುಕೂಲವಾಗುವಂತೆ ಗಂಟುಗಳಿವೆ.

ಅವನು ಅದನ್ನು ನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಆಗ ಮೇಲಿಂದ ಶಿಳ್ಳೆ ಕರೆಯುತ್ತದೆ.

ಅತ್ತಿತ್ತ ತಿರುಗಿ ನೋಡುತ್ತಾನೆ. ಹಗ್ಗವು ಕಾಣಿಸುತ್ತಿದೆ. ತಲೆ ಕೆರೆದುಕೊಳ್ಳುತ್ತಾನೆ. ಅದರ ಬಳಿಗೆ ಹೋಗಿ ಹಗ್ಗದ ಮೇಲೇರಿದಾಗ ಹೂಜಿಯು ಕೈಗೆಟಕಿತು – ಎನ್ನುವಲ್ಲಿ ಆ ಹಗ್ಗವೇ ಕೆಳಕ್ಕಿಳಿದುದರಿಂದ ಅವನು ನೆಲದ ಮೇಲೆ (ಬಂದು) ನಿಲ್ಲುತ್ತಾನೆ.

ತಲೆ ಕೆರೆದುಕೊಳ್ಳುತ್ತಾ ಅತ್ತಿತ್ತ ಹೊರಳಿ ಕತ್ತರಿಗಾಗಿ ನೋಡಿದಾಗ ಅದು ಕಣ್ಣಿಗೆ ಬೀಳುತ್ತದೆ. ಅದರ ಬಳಿ ಸಾರಿ ಅದನ್ನು ಎತ್ತಿಕೊಳ್ಳುತ್ತಾನೆ. ಹಾಗೂ ಹಗ್ಗದ ಬಳಿ ಸಾರಿ ಅದನ್ನು ಕತ್ತರಿಸತೊಡಗುತ್ತಾನೆ.

ಈಗ ಹಗ್ಗವು ಎಳೆತದಿಂದ ಮೇಲೇರುತ್ತದೆ. ಅವನನ್ನು ನೆಲದಿಂದ ಮೇಲಕ್ಕೇರಿಸಿದ್ದಾಗಿ ತೂಗಾಡುತ್ತಾನೆ. ಆದರೂ ಅವನಿಗೆ ಹಗ್ಗವನ್ನು ಕತ್ತರಿಸಲು ಸಾಧ್ಯವಾಗುತ್ತದೆ. ಕೂಡಲೆ ನೆಲಕ್ಕೆ ಬೀಳುತ್ತಾನೆ ಕತ್ತರಿಯನ್ನು ಬೀಳಿಸುತ್ತಾನೆ. ಎದ್ದುನಿಂತು ತನ್ನ ಮೈ ಸವರಿಕೊಳ್ಳುತ್ತಾನೆ. ತಲೆ ಕೆರೆದುಕೊಳ್ಳುತ್ತಾನೆ.

ಕೂಡಲೇ ಮೇಲಕ್ಕೆಳೆದುದರಿಂದ ಹಗ್ಗವು ಬೇಗನೆ ಮರೆಯಾಗುತ್ತದೆ. ಅವನು ಒಂದು ತುಂಡು ಹಗ್ಗವನ್ನು ಹಿಡಿದುಕೊಂಡು ನೋಡಿ ಅದರಲ್ಲಿ ಒಂದು ಜೀರು ಕುಣಿಕೆಯನ್ನು ಹಾಕಿ ಆ ಹೂಜಿಯನ್ನು ಅದರಲ್ಲಿ ಸೇರಿಸಲು ಯತ್ನಿಸುತ್ತಾನೆ.

ಕೂಡಲೇ ಮೇಲಕ್ಕೇರಿಸಿದ ಸೆಳೆತದಿಂದಾಗಿ ಹೂಜಿಯು ಮರೆಯಾಗುತ್ತದೆ.

ಈಗ ಅವನು ಅತ್ತಿತ್ತ ತಿರುಗಿ ತಲೆ ಕೆರೆದುಕೊಳ್ಳುತ್ತಾನೆ.

ತನ್ನ ಕೈಲಿದ್ದ ಜೀರುಕುಣಿಕೆಯ ಸಹಿತ ಮರದ ಕಡೆಗೆ ಹೊರಟು ಅದರ ಕೊಂಬೆಯನ್ನು ನೋಡಿ ಅತ್ತಕಡೆ ಇನ್ನೂ ಇದ್ದ ಕ್ಯೂಬುಗಳನ್ನು ದಿಟ್ಟಿಸಿ ನೋಡಿ ಮತ್ತೆ ಹೊರಳಿ ಆ ಮರದ ಕೊಂಬೆಯನ್ನು ನೋಡಿ ನೋಡಿ ಜೀರುಕುಣಿಕೆಯನ್ನೂ ನೆಲಕ್ಕೆ ಬೀಳಿಸಿ ಆ ಕ್ಯೂಬುಗಳ ಕಡೆಗೆ ಸರಿಯುತ್ತಾನೆ. ಅಲ್ಲಿನ ಸಣ್ಣ ಕ್ಯೂಬನ್ನು ಎತ್ತಿ ಹೆಗಲಿಗೇರಿಸಿಕೊಂಡು ಮುಂದೆ ನಡೆದು ಆ ಕೊಂಬೆಯ ಕೆಳಕ್ಕೆ ಇರಿಸಿ ದೊಡ್ಡ ಕ್ಯೂಬಿನ ಬಳಿಗೆ ಹೋಗಿ ಅದನ್ನು ಎತ್ತಿ ಹೆಗಲಿಗೇರಿಸಿಕೊಂಡು ನಡೆದು ಆ ಕೊಂಬೆಯ ಕೆಳಗಡೆಯಲ್ಲಿ ಇಳಿಸಿ ಅದನ್ನು ಸಣ್ಣ ಕ್ಯೂಬಿನ ಮೇಲಿರಿಸಿ ನೋಡಿ ಹಿಂದುಮುಂದೆ ನೋಡುತ್ತಾ ತಲೆ ಕೆರೆದುಕೊಳ್ಳುತ್ತಾನೆ. ಪರಿಹಾರವನ್ನು ಕಂಡುಕೊಂಡು ಅದನ್ನು ಕೆಳಕ್ಕಿರಿಸಿ ಸಣ್ಣ ಕ್ಯೂಬನ್ನು ದೊಡ್ಡದರ ಮೇಲಿರಿಸಿ ಅಲುಗಾಡಿಸಿ ನೋಡಿ ಪಕ್ಕಕ್ಕೆ ಹೊರಳಿ ಅಲ್ಲಿ ಬಿದ್ದಿದ್ದ ಜೀರುಕುಣಿಕೆಯನ್ನು ಎತ್ತಿಕೊಳ್ಳಲು ಬಾಗುತ್ತಾನೆ.

ಈಗ ಆ ಕೊಂಬೆಯು ಆ ಮರದ ಕಾಂಡದ ಕಡೆಗೆ ಜೋಲುತ್ತದೆ. ಅವನು ಆ ಜೀರುಕುಣಿಕೆಯನ್ನು ಹಿಡಿದು ಕೊಂಡು ಎಳೆದಾಗ ಅದರಿಂದ ಏನಾಯಿತೆಂಬುದನ್ನು ಕಾಣುತ್ತಾನೆ.

ಆ ಜೀರುಕುಣಿಕೆಯನ್ನು ಬೀಳಿಸಿ ಅಲ್ಲಿಂದ ಹೊರಳಿ ನೋಡುತ್ತಾ ತಲೆ ಕೆರೆದುಕೊಳ್ಳುತ್ತಾನೆ.

ಈಗ ಆ ಕ್ಯೂಬುಗಳನ್ನು ಅವು ಮೊದಲಿದ್ದ ಜಾಗಕ್ಕೆ ಒಂದಾದ ಮೇಲೊಂದನ್ನು ಒಯ್ದಿರಿಸುತ್ತಾನೆ. ಆ ಜೀರುಕುಣಿಕೆಗಾಗಿ ಸರಿದುಹೋಗಿ ಅದನ್ನೂ ಆ ಕ್ಯೂಬುಗಳ ಮೇಲೆ ನೀಟಾಗಿ ಆ ಸಣ್ಣ ಕ್ಯೂಬಿನ ಮೇಲಿರಿಸಿ ಅತ್ತಿತ್ತ ತಿರುಗಿನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಈಗ ರಂಗದ ಬಲಗಡೆಯಿಂದ ಶಿಳ್ಳೆ ಕರೆಯುತ್ತದೆ.

ಅವನು ತಲೆ ಕೆರೆದುಕೊಳ್ಳುತ್ತಾ ಆ ಕಡೆಗೆ ಹೋಗುತ್ತಾನೆ. ಕೂಡಲೆ ಹಿಂದಕ್ಕೆ ಒಗೆಯಲ್ಪಟ್ಟವನಾಗಿ ರಂಗದ ಮೇಲೆ ಅಂಗಾತ ಬೀಳುತ್ತಾನೆ. ಕೂಡಲೆ ಎದ್ದುನಿಂತು ಮೈಕೈ ಒರೆಸಿಕೊಂಡು ಅತ್ತಿತ್ತ ತಿರುಗಿನೋಡಿ ತಲೆ ಕೆರೆದುಕೊಳ್ಳುತ್ತಾನೆ.

ಈಗ ರಂಗದ ಎಡಬದಿಯಿಂದ ಶಿಳ್ಳೆ ಕರೆಯುತ್ತದೆ.

ಅವನು ಕದಲುವುದಿಲ್ಲ.

ತನ್ನ ಕೈಗಳನ್ನು ನೋಡಿಕೊಳ್ಳುತ್ತಾನೆ. ಕತ್ತರಿಗಾಗಿ ಸುತ್ತಲೂ ಹುಡುಕಿ ನೋಡುತ್ತಾನೆ. ಅದನ್ನು ಕಂಡು ಬಳಿ ಸಾರಿ ಕೈಗೆತ್ತಿಕೊಳ್ಳುತ್ತಾನೆ. ಕೂಡಲೆ ಅದರಿಂದ ತನ್ನ ಬೆರಳುಗುರನ್ನು 'ಟ್ರಿಂ' ಮಾಡತೊಡಗುತ್ತಾನೆ. ಹಾಗೆಯೇ ಕೊಂಚ ತಡೆಯುತ್ತಾನೆ. ತಲೆ ಕೆರೆದು ಕೊಳ್ಳುತ್ತಾನೆ. ತನ್ನ ಉಗುರನ್ನು ಕತ್ತರಿಯ ಬಾಯಿಗೆ ಕೂಡಿಸಿ ಸರಿಸುತ್ತಾನೆ. ಹಾಗೇ ಮುಂದುವರಿದು ಕತ್ತರಿಯನ್ನು ಆ ಸಣ್ಣ ಕ್ಯೂಬಿನ ಮೇಲಿರಿಸುತ್ತಾನೆ. ಅತ್ತಿತ್ತ ನೋಡುತ್ತಾ ತನ್ನ ಕೊರಳಪಟ್ಟಿ(ಕಿ) ಯನ್ನು ಸರಿಸಿಕೊಂಡು ಕೊರಳನ್ನು ಸೇರ್ಪಡಿಸಿಕೊಂಡು ಬೆರಳಿಂದ ಸವರಿಕೊಳ್ಳುತ್ತಾನೆ.

ಈಗ ಸಣ್ಣ ಕ್ಯೂಬು ಮೇಲಿಂದ ಎಳೆತವಾಗಿ ಕಣ್ಮರೆಯಾಗುತ್ತದೆ. ಸಂಗಡ ಹಗ್ಗ ಮತ್ತು ಕತ್ತರಿಯನ್ನೂ ಒಯ್ದಿರುತ್ತದೆ.

ಅವನು ಕೂಡಲೆ ಕತ್ತರಿಗಾಗಿ ಮುಂದೆ ಜಿಗಿದರೂ ದಕ್ಕುವುದಿಲ್ಲ. ಅದರಿಂದಾಗಿ ಅತ್ತಿತ್ತ ತಿರುಗಿ ನೋಡುತ್ತಾ ತಲೆ ಕೆರೆದುಕೊಳ್ಳುತ್ತಾನೆ.

ಈಗ ಇನ್ನೂ ಅಲ್ಲೇ ಇದ್ದ ದೊಡ್ಡ ಕ್ಯೂಬಿನ ಬಳಿ ಸಾರಿ ಅದರ ಮೇಲೆ ಕೂಡುತ್ತಾನೆ.

ಕೂಡಲೆ ಆ ದೊಡ್ಡ ಕ್ಯೂಬು ಕೂಡ ಮೇಲಿಂದ ಎಳೆತಕ್ಕೆ ಸಿಕ್ಕಿದ ಕಾರಣ ಅವನು ಕೆಳಕ್ಕೆ ಬೀಳುತ್ತಾನೆ. ಆ ದೊಡ್ಡ ಕ್ಯೂಬು ಮೇಲಿಂದ ಸೆಳೆತಕ್ಕೆ ಸಿಕ್ಕಂತೆ ಏರುತ್ತಾ ಕಣ್ಮರೆಯಾಗುತ್ತದೆ.

ಈಗ ಅವನು ರಂಗದ ಮೇಲೆ ಒಂದು ಮಗ್ಗುಲಾಗಿ ಬಿದ್ದಿರುತ್ತಾನೆ. ಅವನ ಮುಖವು ಪ್ರೇಕ್ಷಾಗೃಹದ ಕಡೆಗಿರುತ್ತದೆ.

ಅದು ಅವನನ್ನೇ ನೋಡುತ್ತಿರುತ್ತದೆ.

ಈಗ ಹೂಜಿಯು ಮೇಲಿಂದ ಇಳಿಯುತ್ತಾ ಬಂದು ಅವನಿಗೆ ಕೊಂಚ ದೂರದಲ್ಲಿ ತಂಗುತ್ತದೆ.

ಅವನು ಮಾತ್ರ ಜರುಗುವುದಿಲ್ಲ.

ಈಗ ಮೇಲಿಂದ ಶಿಳ್ಳೆ ಕರೆಯುತ್ತದೆ.

ಅವನು ಮಾತ್ರ ಎಳ್ಳಷ್ಟೂ ಜರುಗುವುದಿಲ್ಲ.

(ಟಿಪ್ಪಣಿ :
ಚಿಂತಿಸುವುದು = ತಲೆ ಕೆರೆದುಕೊಳ್ಳುವುದು.)

**ಪ್ರೊ|| ಕ. ವೆಂ. ರಾಜಗೋಪಾಲ**
ಎಂಐಜಿ - ೪೧, ೮೦ ಅಡಿ ರಸ್ತೆ, ೨ನೇ ಹಂತ, ಕೆಂಗೇರಿ ಉಪನಗರ
ಬೆಂಗಳೂರು - ೫೬೦ ೦೬೦

# ಇಪ್ಪತ್ತನೆಯ ಶತಮಾನದಲ್ಲಿ ಭೌತಶಾಸ್ತ್ರ



**ಡಾ|| ಎಸ್. ಚಟರ್ಜಿ**

**ಭೌ**ತಶಾಸ್ತ್ರದಲ್ಲಿ ಆಗಲಿದ್ದ ಕ್ರಾಂತಿಯ ಬಗೆಗೆ ಬರೆಯುತ್ತ ೧೯೩೫ರಲ್ಲಿ ಸತ್ಯೇಂದ್ರನಾಥ ಬೋಸ್‌ರವರು, ೨೦ನೆಯ ಶತಮಾನವು ಭೌತಶಾಸ್ತ್ರದ ಆತ್ಮಸಾಫಲ್ಯದ ಯುಗವಾಗಲಿರುವುದೆಂದು ತಿಳಿಸಿದರು. ಎಪ್ಪತ್ತು ವರ್ಷಗಳ ನಂತರ ೨೦೦೫ನೆಯ ವರ್ಷವನ್ನು 'ಅಂತಾರಾಷ್ಟ್ರೀಯ ಭೌತಶಾಸ್ತ್ರ ವರ್ಷ' ವೆಂದು ಘೋಷಿಸಲಾಯಿತು. ೧೯೦೫ರಲ್ಲಿ ಐನ್‌ಸ್ಟೈನ್‌ರು ಪ್ರಕಟಿಸಿದ ಐದು ಮೂಲಭೂತ ಪ್ರಬಂಧಗಳ ಶತಮಾನೋತ್ಸವದ ಸ್ಮರಣಾರ್ಥ ಹಾಗೆ ಘೋಷಿಸಲಾಯಿತು. ಐನ್‌ಸ್ಟೈನರ ಈ ಪ್ರಬಂಧಗಳ ಸ್ಥೂಲ ವಿಮರ್ಶೆಯನ್ನು ೨೦೦೫ರ ಜನವರಿ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಕಾಣಬಹುದು. ಇದೀಗ ಭೌತಶಾಸ್ತ್ರ ಹೇಗೆ ತನ್ನನ್ನು ತಾನೇ ಪರಿವರ್ತಿಸಿಕೊಂಡಿತು, ಆತ್ಮ ಸಾಫಲ್ಯತೆಯನ್ನು ಸಾಧಿಸಿತು ಎಂಬುದನ್ನು ವಿವೇಚಿಸುವುದು ಉಚಿತ.

ಐನ್‌ಸ್ಟೈನರ ಜೀವನದಿಂದಲೇ ಒಂದು ಮುಖ್ಯ ಸಂಗತಿ ಹೊರ ಹೊಮ್ಮುತ್ತದೆ. ಅವರು ಐದು ಪ್ರಬಂಧಗಳನ್ನೂ ತಾವು ಒಬ್ಬ ಪೇಟೆಂಟ್ ಕಾರಕೂನರಾಗಿ ಕೆಲಸ ಮಾಡುತ್ತಿದ್ದಾಗ ರಚಿಸಿದರು. ಇಂಥ ಸಣ್ಣ ಹುದ್ದೆಯಲ್ಲಿರುವವರು ಅಷ್ಟು ಪ್ರಗಾಢ ಚಿಂತನೆಯ ಪ್ರಬಂಧಗಳನ್ನು ರಚಿಸುವುದು ಈಗಂತೂ ಅಸಂಭವ. ಅದು ಹಾಗಿರಲಿ. ಆ ಹಿಂದಿನ ಯುಗದ ಖ್ಯಾತ ವಿಜ್ಞಾನಿಗಳ ಬಾಳಿನತ್ತ ಕ್ಷಣ ನೋಟ ಹರಿಸೋಣ. ರೋಜರ್ ಬೇಕನ್‌ರು ಕ್ರೈಸ್ತ ಪಾದ್ರಿಯಾಗಿದ್ದರು. ಫ್ರಾನ್ಸಿಸ್ ಬೇಕನ್‌ರು ವಕೀಲರಾಗಿದ್ದರು, ರಾಬರ್ಟ್ ಬಾಯ್ಲ್‌ರು ವೈದ್ಯರೂ ಭಾಷಾ ವಿಜ್ಞಾನಿಯೂ ಆಗಿದ್ದರು. ಥಾಮಸ್ ಯಂಗ್‌ರವರೂ ದೃಗ್ವಿಜ್ಞಾನ ಕ್ಷೇತ್ರದಲ್ಲಿ ಶ್ರೇಷ್ಠ ಕೊಡುಗೆ ಸಲ್ಲಿಸಿದಾಗ ವೈದ್ಯರೂ ಈಜಿಪ್ಟ್ ಶಾಸ್ತ್ರಜ್ಞರೂ ಆಗಿದ್ದರು. ಅಭಿಜಾತ ದೃಗ್ವಿಜ್ಞಾನದ ಆಧಾರ ಸ್ತಂಭವೆನಿಸಿದ 'ಬೆಳಕಿನ ಅಲೆ ಸಿದ್ಧಾಂತ'ವನ್ನು, ಐನ್‌ಸ್ಟೈನರು ತಮ್ಮ ಫೋಟಾನ್ ಪ್ರಕಲ್ಪನೆಯನ್ನು ನೀಡುವ ಮುನ್ನವೇ ನೀಡಿದ್ದ ಕ್ರಿಶ್ಚಿಯನ್ ಹ್ಯೂಗೆನ್ಸ್‌ರು ಒಬ್ಬ ನ್ಯಾಯವಾದಿಯಾಗಿ ಜೀವನ ಸಾಗಿಸುತ್ತಿದ್ದರು. ನಿಕೋಲಾಸ್ ಕೊಪರ್ನಿಕಸ್‌ರೂ ಗ್ರಿಗೋರ್ ಮೆಂಡಲ್‌ರೂ ಕ್ರೈಸ್ತ ಸೆಮಿನರಿಗಳಲ್ಲಿ ದುಡಿಯುತ್ತಿದ್ದರು. ಇಂದು ನಾವು ಈ ಮಾದರಿ ಕ್ರಾಂತಿಕಾರಿ ಆವಿಷ್ಕಾರಗಳನ್ನು ಧಾರ್ಮಿಕ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವವರಿಂದ ನಿರೀಕ್ಷಿಸುವುದು ಸಾಧ್ಯವೇ? ಖಂಡಿತ ಇಲ್ಲ. ಏಕೆಂದರೆ ಇಂದು ವಿಜ್ಞಾನ ಆ ರೋಮಾಂಚಕಾರಿ ಮಜಲಿನಿಂದ ದೂರ ಸರಿದಿದೆ. ಆ ಕಾಲದಲ್ಲಿ ವಿಖ್ಯಾತ ವ್ಯಕ್ತಿಗಳು ತಮ್ಮ ಬಿಡು ವೇಳೆಯಲ್ಲಿ ತಮ್ಮ ಸ್ವಂತ ಖರ್ಚಿನಲ್ಲೇ ಕೆಲಸ ಮಾಡುತ್ತ ವಿಜ್ಞಾನದ ಮೂಲಭೂತ ಸಮಸ್ಯೆಗಳಿಗೆ ಪರಿಹಾರ ಕಂಡು ಹಿಡಿಯಲು ಯತ್ನಿಸಿದರು. ಹಿಂದೆ ವೈಜ್ಞಾನಿಕ ಚಿಂತನೆ, ಸಂಶೋಧನೆ ವೈಯಕ್ತಿಕವಾಗಿದ್ದರೆ, ಇಂದು ವಿಜ್ಞಾನ ಹೆಚ್ಚು ಸಾಮಾಜಿಕವಾಗಿದೆ. ಇಂದು ವಿಜ್ಞಾನಿಯನ್ನು ಹೆಚ್ಚು ಸರಿಯಾಗಿ ಒಬ್ಬ ವೈಜ್ಞಾನಿಕ ಕಾರ್ಯಕರ್ತ ಎಂದು ಕರೆಯಬಹುದು. ಅದೊಂದು ವೃತ್ತಿಯಾಗಿದೆ. ವಿಜ್ಞಾನಿಗೆ ರಾಜ್ಯ ಇಲ್ಲವೇ ಯಾವುದಾದರೊಂದು ಕೈಗಾರಿಕೆ ಪಗಾರ ನೀಡುತ್ತದೆ. ಇಂದು ವಿಜ್ಞಾನಿಯ ಕೆಲಸ ಹಿಂದೆಂದಿಗಿಂತ ಹೆಚ್ಚು ಸಾಮುದಾಯಿಕವಾಗಿದೆ.

ನಾವು ೨೦ನೆಯ ಶತಮಾನವನ್ನು ವೈಜ್ಞಾನಿಕ ಕ್ರಾಂತಿಯ ಯುಗವೆಂದು ಕರೆಯುತ್ತೇವೆ. ಇದರಲ್ಲಿ ಭೌತಶಾಸ್ತ್ರದ ಪಾತ್ರವೇನು ? ವಾಸ್ತವವಾಗಿ ಭೌತಶಾಸ್ತ್ರದಲ್ಲಾದ ಕ್ರಾಂತಿಯೇ ಈ ಯುಗಕ್ಕೆ ನಾಂದಿ ಹಾಡಿದುದು. ೧೯ನೆಯ ಶತಮಾನದ ಭೌತಶಾಸ್ತ್ರದಲ್ಲಿನ ಮುಗ್ಗಟ್ಟನ್ನು ಪರಿಹರಿಸುವ ಯತ್ನದಲ್ಲಿ ಈ ಕ್ರಾಂತಿ ಉಂಟಾಯಿತು. ಸಾಪೇಕ್ಷತಾ ಸಿದ್ಧಾಂತ ಹಾಗೂ ಕ್ವಾಂಟಮ್ ಮೆಕ್ಯಾನಿಕ್ಸ್‌ನ ಪ್ರಗಲ್ಭ ಸೂತ್ರಗಳನ್ನು ರೂಪಿಸಲು ಹೆಚ್ಚುಕಡಿಮೆ ಮೂವತ್ತು ವರ್ಷಗಳೇ ಬೇಕಾದವು. ಸಾಪೇಕ್ಷತಾ ಸಿದ್ಧಾಂತವು ಬೆಳಕಿನ ವೇಗ 'c' ಎಂಬ ಮೂಲಭೂತ ಸ್ಥಿರಾಂಕವನ್ನೂ, ಕ್ವಾಂಟಮ್ ಮೆಕ್ಯಾನಿಕ್ಸ್ 'h' ಎಂಬ ಪ್ಲಾಂಕ್ ಸ್ಥಿರಾಂಕವನ್ನೂ ನೀಡಿದವು. ಬೆಳಕಿನ ವೇಗ 'c'ಯೇ ಯಾವುದೇ ಭೌತಿಕ ಕಾಯ ಅಥವಾ ಸಂಜ್ಞೆ ಪ್ರಸರಿಸಬಲ್ಲ ವೇಗಕ್ಕಿಂತ ಅತ್ಯಂತ ಹೆಚ್ಚಿನ ವೇಗವೆಂದೂ ಸಂಸ್ಥಾಪಿಸಲಾಯಿತು.

೨೦ನೆಯ ಶತಮಾನದ ಭೌತಶಾಸ್ತ್ರವು ನ್ಯೂಟನ್ನನ ಸೂತ್ರಗಳನ್ನು ತಪ್ಪೆಂದು ಸಾಧಿಸಿದೆಯೆಂದು ಸಾಮಾನ್ಯವಾಗಿ ನಂಬಲಾಗುತ್ತದೆ. ಆದರೆ ಅದು ಹಾಗಲ್ಲವೇ ಅಲ್ಲ. ಅದು ನಿಜಕ್ಕೂ ನ್ಯೂಟನ್ ವಿಜ್ಞಾನದ ತಥ್ಯತೆಯನ್ನು ಸಂಸ್ಥಾಪಿಸಿದೆ. $v \ll c$ ವೇಗಗಳಿಗೆ ಸಂಬಂಧಿಸಿದಂತೆ, ಅಥವಾ ೨$\pi r m \upsilon \gg h$ ಎನ್ನುವ ಹಾಗೆ $r$ ತ್ರಿಜ್ಯದ ಕಕ್ಷೆಗಳಲ್ಲಿ ಚಲಿಸುವ ಕಣಗಳಿಗೆ ಸಂಬಂಧಿಸಿದಂತೆ ನ್ಯೂಟನ್ನನ ಸಿದ್ಧಾಂತಗಳು ಸರಿಯಾದ ಫಲಿತಾಂಶಗಳನ್ನೇ ನೀಡುತ್ತವೆ. ಹಾಗಾಗಿ ಕಾರುಗಳು, ರೈಲುಗಾಡಿಗಳು, ಹಡಗುಗಳು, ವಾಯುನೌಕೆಗಳು ಅಥವಾ ಗ್ರಹಗಳು ಇಲ್ಲವೇ ನಕ್ಷತ್ರಗಳು – ಇವುಗಳ ಚಲನೆಗಳಿಗೆ ಸಂಬಂಧಿಸಿ ನ್ಯೂಟನ್ ಭೌತಶಾಸ್ತ್ರ ಸಾಕಾಗುತ್ತದೆ. ಆದರೆ ನಾವಿಂದು ತಿಳಿದಿರುವ ಅನೇಕ ಇತರ ವಿದ್ಯಮಾನಗಳಿಗೆ ಸಂಬಂಧಿಸಿದಂತೆ, ಉದಾಹರಣೆಗೆ,. ಬೀಟ ಕ್ಷಯದಲ್ಲಿ ಹೊರಹೊಮ್ಮುವಂಥ ಬೀಟ ಕಣಗಳಿಗೆ ಇಲ್ಲವೇ ನಮ್ಮ ಗ್ಯಾಲಕ್ಸಿಗೂ ಹೊರಗಿರುವ ಪ್ರದೇಶಗಳಿಂದ ಬರುವ ವಿಶ್ವಕಿರಣ ಕಣಗಳಿಗೆ ಸಂಬಂಧಿಸಿದಂತೆ, ನ್ಯೂಟನ್ ಭೌತಶಾಸ್ತ್ರ ಅಸಿಂಧುವಾಗುತ್ತದೆ. ಏಕೆಂದರೆ ಅವು ಬೆಳಕಿನ ವೇಗಕ್ಕೆ ಸಮೀಪವಾದಂಥ ವೇಗಗಳಲ್ಲಿ ಚಲಿಸುತ್ತವೆ. ಆದ್ದರಿಂದ ಇಲ್ಲಿ ಸಾಪೇಕ್ಷತಾ ಸಿದ್ಧಾಂತ ನುಸುಳುತ್ತದೆ. ಅದೇ ರೀತಿ ಪರಮಾಣುವೊಂದರ ಒಳಗಿನ ಎಲೆಕ್ಟ್ರಾನ್‌ನ ಚಲನೆಯನ್ನು ಪರಿಗಣಿಸಿದಾಗ ೨$\pi r m \upsilon$ಯು $h$ಗೆ ತುಂಬ ಸಮೀಪ ಬರುತ್ತದೆ. ಹಾಗಾಗಿ ಈ ಚಲನೆಯನ್ನು ಪರಿಶೀಲಿಸುವಾಗ ನ್ಯೂಟನ್ ಸಿದ್ಧಾಂತ ನೆರವಾಗದು. ನಾವು ಕ್ವಾಂಟಮ್ ಮೆಕ್ಯಾನಿಕ್ಸ್ ಬಳಸ ಬೇಕಾಗುತ್ತದೆ. ಆದರೆ ಹೆಚ್ಚು ನಿಕಟವಾಗಿ ಪರಿಶೀಲಿಸಿದಾಗ ಪರಮಾಣುಗಳಲ್ಲಿನ ಎಲೆಕ್ಟ್ರಾನ್ ಚಲನೆಯೂ ಸಾಪೇಕ್ಷತಾ ವೇಗಗಳನ್ನು ಪಡೆಯುತ್ತದೆ. ಆದ್ದರಿಂದ ಅವುಗಳ ಬಲಶಾಸ್ತ್ರವನ್ನು ವಿವರಿಸಲು ಸಾಪೇಕ್ಷತಾ ಸಿದ್ಧಾಂತ ಹಾಗೂ ಕ್ವಾಂಟಮ್ ಮೆಕ್ಯಾನಿಕ್ಸ್ ಎರಡನ್ನೂ ಸಂಯೋಜಿಸಿ ಬಳಸಬೇಕಾಗುತ್ತದೆ. ೧೯೩೦ರಲ್ಲಿ ಡಿರಾಕ್‌ರವರು ಮಾಡಿದ್ದು ಇದನ್ನೇ. ಅದು ಅನಿರೀಕ್ಷಿತ ಫಲಿತಾಂಶ ನೀಡಿತು. ಎಲೆಕ್ಟ್ರಾನ್‌ನ ಆಂತರಿಕ ಗಿರಕಿಯನ್ನು ವಿವರಿಸುವ ತುಂಬ ಕಾಲದ ಕೇಳಿಕೆಯನ್ನು ಪೂರೈಸಿತು. ಇದರೊಂದಿಗೆ ಭೌತಶಾಸ್ತ್ರದಲ್ಲಿನ ಕ್ರಾಂತಿ ಹೆಚ್ಚುಕಡಿಮೆ ಪೂರ್ಣಗೊಂಡಿತು.

ಭೌತಶಾಸ್ತ್ರದಲ್ಲಿ ಸಂದಿಗ್ಧತೆ ಉಂಟಾದುದು (೧) ಬೆಳಕಿನ ವೇಗದ ಸ್ಥಿರತೆಯಿಂದ, (೨) ರೋಹಿತದ ರೇಖೆಗಳ ವಿಚ್ಛಿನ್ನ ಸ್ವರೂಪದಿಂದ. ಎಲೆಕ್ಟ್ರಾನನ್ನು ಕಂಡುಹಿಡಿದುದರೊಂದಿಗೆ ಈ ಸಂದಿಗ್ಧತೆ ನಿಜಕ್ಕೂ ಒಂದು ಕ್ರಾಂತಿಯಾಗಿ ಪರಿಪಕ್ವಗೊಂಡಿತು. ನ್ಯೂಕ್ಲಿಯಸ್ಸನ್ನೂ ಎಲೆಕ್ಟ್ರಾನನ್ನೂ ಪರಮಾಣುಗಳ ಸಾರ್ವತ್ರಿಕ ರಚನಾಂಗಗಳೆಂದು ಪರಿಗಣಿಸಿದಲ್ಲಿ – ಹಾಗೆಯೇ ಪರಿಗಣಿಸಬೇಕು – ಆಗ ನ್ಯೂಟನ್ ಭೌತಶಾಸ್ತ್ರವು ಪರಮಾಣುವಿನ ಸ್ಥಿರತೆಯನ್ನು ಅಲ್ಲಗಳೆಯುತ್ತದೆಂದು ಕಂಡುಬರುತ್ತದೆ. ಸಾಪೇಕ್ಷತಾ ಸಿದ್ಧಾಂತವೂ ಕ್ವಾಂಟಮ್ ಮೆಕ್ಯಾನಿಕ್ಸೂ ಈ ಸಂದಿಗ್ಧತೆಯನ್ನು ನಿವಾರಿಸಿದವು ಮತ್ತು ನಿಸರ್ಗದ ಬಗೆಗೆ ನಮ್ಮ ತಿಳುವಳಿಕೆಯನ್ನು ಗಾಢಗೊಳಿಸಿದವು. [illegible]ರವರೆಗೂ ಎಲೆಕ್ಟ್ರಾನ್ ಮತ್ತು ಪ್ರೋಟಾನ್‌ಗಳಷ್ಟೇ ಮೂಲಕಣಗಳೆಂದು ಭಾವಿಸಲಾಗಿದ್ದಿತು. ೧೯೩೦ರ ದಶಕದ ಆರಂಭದಲ್ಲಿ ಇದಕ್ಕೆ ಇನ್ನೆರಡು ಮೂಲಕಣಗಳನ್ನು

ಸೇರಿಸಲಾಯಿತು : ಚಾಡ್ವಿಕ್‌ರು ನ್ಯೂಟ್ರಾನನ್ನು ಕಂಡುಹಿಡಿದರು, ಆಂಡರ್‌ಸನ್‌ರು ಪಾಸಿಟ್ರಾನನ್ನು ಕಂಡುಹಿಡಿದರು. ಡಿರಾಕ್‌ರ ಸಿದ್ಧಾಂತವೇ ಪಾಸಿಟ್ರಾನ್ ಮೂಲಕಣದ ಅಸ್ತಿತ್ವವನ್ನು ಮುನ್ಸೂಚಿಸಿದ್ದಿತ್ತೆನ್ನಿ. ನ್ಯೂಟ್ರಾನು ಬೈಜಿಕ ವಿದಳನಕ್ಕೆ ಹಾಗೂ ಉಷ್ಣ ಬೈಜಿಕ ಯಂತ್ರಸ್ಥಾವರಗಳಲ್ಲಿ ಇಲ್ಲವೇ ಪರಮಾಣುಬಾಂಬಿನಲ್ಲಿ ಕಂಡುಬರುವ ಸರಣಿ ಪ್ರತಿಕ್ರಿಯೆಗಳಿಗೆ ಅನಿವಾರ್ಯ ಸಾಧನವಾಯಿತು. ಪಾಸಿಟ್ರಾನನ್ನು ಕಂಡುಹಿಡಿದ ನಂತರ ಈಗ ಇನ್ನೂ ಅನೇಕ ಮೂಲಕಣಗಳನ್ನು ಪತ್ತೆಹಚ್ಚಲಾಗಿದೆ.

ಇಂತಹ ಮುನ್ನಡೆ ಇತರ ಕ್ಷೇತ್ರಗಳಲ್ಲೂ ಕಂಡುಬಂದಿತು. ೧೯೧೫ರಲ್ಲಿ ಐನ್‌ಸ್ಟೈನ್‌ರು ತಮ್ಮ ಸಾಪೇಕ್ಷತಾ ಸಿದ್ಧಾಂತವನ್ನು ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವನ್ನಾಗಿ ವಿಸ್ತರಿಸಿದರು. ಅದು ಬೇಗನೆಯೇ ತನ್ನ ತಥ್ಯತೆಯನ್ನೂ ಸಾಧಿಸಿತು. ಹೀಗೆ ಕ್ವಾಂಟಮ್ ಮೆಕ್ಯಾನಿಕ್ಸ್ ನಮಗೆ ಸೂಕ್ಷ್ಮ ಜಗತ್ತಿನ ಒಳನೋಟ ಪಡೆಯಲು ಒಂದು ಕಿಟಕಿ ಒದಗಿಸಿಕೊಟ್ಟಿದೆ. ಸಾರ್ವತ್ರಿಕ ಸಾಪೇಕ್ಷತಾ ಸಿದ್ಧಾಂತವು ಬೃಹತ್ ಜಗತ್ತಿನ ಪರಿಶೋಧನೆಗೆ ಕಿಟಕಿ ಒದಗಿಸಿತು. ೨೦ನೆಯ ಶತಮಾನದಲ್ಲಿ ಈ ಎರಡೂ ದಿಶೆಗಳಲ್ಲಿ... ಸೂಕ್ಷ್ಮ ಜಗತ್ತು ಹಾಗೂ ಬೃಹತ್ ಜಗತ್ತುಗಳ ದಿಶೆಗಳಲ್ಲಿ... ಸಂಶೋಧನೆ ಮುಂದುವರಿದಿದೆ. ಇವು ತುಂಬ ಸರ್ವವ್ಯಾಪಿಯಾದ ಹಾಗೂ ಅತ್ಯವಶ್ಯವಾದ ಪರಿಶೋಧನೆಗಳಾಗಿವೆ. ವಾಸ್ತವವಾಗಿ, ನಕ್ಷತ್ರಗಳ ಸ್ಥಿರತೆಯನ್ನು ಅರ್ಥಮಾಡಿಕೊಳ್ಳಲು (ಪರಮಾಣು ಭೌತಶಾಸ್ತ್ರ ಸಂದರ್ಭದಲ್ಲಿ ಪತ್ತೆಹಚ್ಚಲಾದ) ಬೈಜಿಕ ಭೌತಶಾಸ್ತ್ರ ಹಾಗೂ ಸಾಪೇಕ್ಷತಾವಾದಿ ಕ್ವಾಂಟಮ್ ಮೆಕ್ಯಾನಿಕ್ಸ್‌ಗಳು ಮೂಲ ಸಾಧನಗಳಾಗಿವೆ. ನಕ್ಷತ್ರಗಳ ಶಕ್ತಿ ಆಕರವನ್ನು ಅರ್ಥಮಾಡಿಕೊಳ್ಳಲು ಬೈಜಿಕ ಭೌತಶಾಸ್ತ್ರವನ್ನು ಬಳಸಬೇಕು. ಹ್ಯಾನ್ಸ್ ಬೇಥೆಯವರು (ಇವರು ಈಚೆಗೆ ತೀರಿಹೋದರು) ಮಾಡಿದ್ದು ಇದನ್ನೇ. ಅದೇ ರೀತಿ ನಕ್ಷತ್ರಗಳ ಅಂತಿಮ ಗತಿಯನ್ನು ಅರ್ಥಮಾಡಿಕೊಳ್ಳಲು, ಚಂದ್ರಶೇಖರ್‌ರವರು ಮಾಡಿದಂತೆ, ಸಾಪೇಕ್ಷತಾವಾದಿ ಕ್ವಾಂಟಮ್ ಮೆಕ್ಯಾನಿಕ್ಸ್‌ನ ನೆರವು ಪಡೆಯಬೇಕು.

ಆದರೆ ಎಕ್ಸ್-ರೇ ಸ್ಫಟಿಕ ವಿಜ್ಞಾನ ಪರಿಶೋಧನೆಯಷ್ಟೇ ೧೯ನೆಯ ಶತಮಾನದ ಭೌತಶಾಸ್ತ್ರ ಸಂದಿಗ್ಧತೆಯ ನೇರ ಪರಿಣಾಮವಾಗಿರಲಿಲ್ಲ. ಎಕ್ಸ್-ಕಿರಣಗಳನ್ನು ಪತ್ತೆಹಚ್ಚಿದ ಎರಡು ದಶಕಗಳ ನಂತರ ವಾನ್‌ಲೌಯೆಯವರೂ ಅನಂತರ ಬ್ರಾಗ್ಸ್‌ರವರೂ, ಎಕ್ಸ್-ಕಿರಣಗಳನ್ನು ಸ್ಫಟಿಕಗಳ ಮೂಲಕ ಹಾಯಿಸಿ ಘನವಸ್ತುಗಳಲ್ಲಿ ಪರಮಾಣುಗಳ ಹಾಗೂ ಅಣುಗಳ ವ್ಯವಸ್ಥೆಯನ್ನು ಪತ್ತೆಹಚ್ಚಬಹುದೆಂದು ಕಂಡುಹಿಡಿದರು. ಈ ವಿಧಾನವು ಇಂದು ವಸ್ತುವಿಜ್ಞಾನಿಗಳಿಗೂ ಜೀವವಿಜ್ಞಾನಿಗಳಿಗೂ ಅತ್ಯವಶ್ಯ ಸಾಧನವಾಗಿದೆ.

ಭೌತಶಾಸ್ತ್ರದಲ್ಲಿನ ಕ್ರಾಂತಿಯು ರಸಾಯನಶಾಸ್ತ್ರದಲ್ಲಿನ ಕ್ರಾಂತಿಗೆ ಎಡೆ ಮಾಡಿಕೊಟ್ಟಿತು – ವೇಲೆನ್ಸಿ ಪ್ರಕಲ್ಪನೆಯನ್ನು ಹೊಸಬೆಳಕಿನಲ್ಲಿ ವಿವರಿಸಲು ಅವಕಾಶವಾಯಿತು. ಅಂತೆಯೇ ಜೀವ ವಿಜ್ಞಾನಿಗಳು ಅಂಗವೊಂದರ ಸಂರಚನೆಯು ಅದರ ಕ್ರಿಯೆಯನ್ನು ಹೇಗೆ ನಿರ್ಧರಿಸುತ್ತದೆ ಎಂಬ ಬಗೆಗೆ ಚಿಂತಿಸುವಂತೆ ಅದು ಮಾಡಿತು. ಇದರ ಫಲಿತಾಂಶವೇ ಡಿಎನ್‌ಎ ಸಂರಚನೆಯ ಆವಿಷ್ಕಾರ – ಐವತ್ತೆರಡು ವರ್ಷಗಳ ಹಿಂದೆ ಎಕ್ಸ್-ಕಿರಣ ಸ್ಫಟಿಕ ವಿಜ್ಞಾನವನ್ನು ಹೊಸದಾಗಿ ಪತ್ತೆಹಚ್ಚಿದ ಅಣುಬಂಧದ ಕ್ವಾಂಟಮ್ ಸಿದ್ಧಾಂತದೊಂದಿಗೆ ಸಂಯೋಜಿಸುವ ಮೂಲಕ ಡಿಎನ್‌ಎ ಸಂರಚನೆಯನ್ನು ಪತ್ತೆಹಚ್ಚಲಾಯಿತು.

೨೦ನೆಯ ಶತಮಾನವನ್ನು ವೈಜ್ಞಾನಿಕ ಕ್ರಾಂತಿಯ ಶತಮಾನವೆಂದು ಕರೆಯಲಾದರೂ ಈ ಶತಮಾನದ ದ್ವಿತೀಯಾರ್ಧದಲ್ಲಿ ಯಂತ್ರಕಲಾ ಕ್ರಾಂತಿಯೂ ಉಂಟಾಯಿತು. (ಕಳೆದ ಎರಡು ದಶಕಗಳಲ್ಲಿ ಅನೇಕ ನೊಬೆಲ್ ಪ್ರಶಸ್ತಿಗಳು ಹೊಸ ಯಂತ್ರಕಲಾ ಹಾಗೂ ಹೊಸ ಶೋಧಕಗಳ ಆವಿಷ್ಕಾರಗಳಿಗೇ ಸಂದಿವೆ.) ಟ್ರಾನ್ಸಿಸ್ಟರ್‌ನ ಅನ್ವೇಷಣೆ ಈ ನಿಟ್ಟಿನಲ್ಲಿ ಒಂದು ಪ್ರಧಾನ ಹೆಗ್ಗುರುತಾಗಿದ್ದಿತು. ಇದು ಸಾಧನಗಳ ಗಾತ್ರಗಳನ್ನು ಕನಿಷ್ಠಗೊಳಿಸುವುದಕ್ಕಷ್ಟೆ ಅಲ್ಲ, ಶಕ್ತಿ ಬಳಕೆಯನ್ನು ಅತ್ಯಲ್ಪಗೊಳಿಸಲೂ ನೆರವಾಯಿತು. ಇಂದು ಜನರ ಮನೆಗಳಲ್ಲಿ ವಾಹನಗಳಿಗಿಂತ ಹೆಚ್ಚಾಗಿ ಟ್ರಾನ್ಸಿಸ್ಟರ್‌ಗಳು ಕಂಡುಬರುತ್ತವೆ. ೧೯೫೦ರ ದಶಕದಲ್ಲಿ ಲೇಸರ್ ಮತ್ತು ಮೈಕ್ರೋಚಿಪ್ಸ್‌ಗಳ ಅನ್ವೇಷಣೆಯು ಮತ್ತೊಂದು ಯಂತ್ರಕಲಾ ಹೆಗ್ಗುರುತಾಯಿತು. ಮೈಕ್ರೋಚಿಪ್ಸ್‌ಗಳ ವಿಜ್ಞಾನವು ಸಾರಭೂತವಾಗಿ ಟ್ರಾನ್ಸಿಸ್ಟರ್‌ಗಳ ವಿಜ್ಞಾನವೇ ಆಗಿದ್ದರೂ, ಲೇಸರ್‌ನ ವಿಜ್ಞಾನವು ಪರಮಾಣು ಅಣು ಹಾಗೂ ಘನ ವಸ್ತುಗಳ ಭೌತವಿಜ್ಞಾನವನ್ನು ಫೋಟಾನ್‌ನ ವಿಜ್ಞಾನದೊಂದಿಗೆ ಸಂಯೋಜಿಸುತ್ತದೆ. ಐನ್‌ಸ್ಟೈನರು ತಮ್ಮ ಜೀವಿತದ ಕೊನೆಯ ಭಾಗದಲ್ಲಿ ಹೇಳಿದರು : ''ಐವತ್ತು ವರ್ಷಗಳಿಂದ ನಾನು ಬುದ್ಧಿಪೂರ್ವಕವಾಗಿ ಚಿಂತನೆ ನಡೆಸಿದರೂ ಬೆಳಕಿನ ಕ್ವಾಂಟಮ್‌ಗಳು ಯಾವುವು ಎಂಬುದು ನನಗೆ ತಿಳಿಯಲೇ ಇಲ್ಲ. ಈಗ ಪ್ರತಿಯೊಬ್ಬ ಪೋಕರಿಯೂ ತಾನು ಅದನ್ನು ಬಲ್ಲೆನೆಂದು ನಂಬಿದ್ದಾನೆ.

ಆದರೆ ಅವನ ನಂಬಿಕೆ ಸುಳ್ಳು.'' (ಐನ್‌ಸ್ಟೈನ್‌ರು ೧೯೫೧ರಲ್ಲಿ ಎಂ. ಬೆಸ್ಸೋರಿಗೆ ಬರೆದ ಪತ್ರ). ಫೋಟಾನ್ ಇನ್ನೂ ಅನೇಕ ಆಶ್ಚರ್ಯಗಳನ್ನು ಮುಚ್ಚಿಟ್ಟಿದೆ. ಬೋಸ್‌ರವರು ಢಾಕ್ಕಾದಲ್ಲಿ ಫೋಟಾನ್‌ಗಳ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಯತ್ನಿಸುತ್ತ ಮೊದಲು ಆವಿಷ್ಕರಿಸಿದ ಬೋಸ್-ಐನ್‌ಸ್ಟೈನ್ ಸಂಖ್ಯಾಶಾಸ್ತ್ರವು ವಸ್ತುವಿನ ಅಸ್ತಿತ್ವದಲ್ಲಿ ಹಲವಾರು ತೋರ್ಕೆಗಳನ್ನು ಕೊನೆಗೆ ತೋರಿಸಿಕೊಟ್ಟಿತು. ಐನ್‌ಸ್ಟೈನ್‌ರು ೧೯೨೫ರಲ್ಲಿ ಬೋಸ್-ಐನ್‌ಸ್ಟೈನ್ ಸಾಂದ್ರೀಕರಣವನ್ನು ಮುನ್ಸೂಚಿಸಿದರು. ಈ ಸಾಂದ್ರೀಕರಣವು ಅಧಿತರಲ ಹೀಲಿಯಮ್ – ೪ರಲ್ಲಿ ಅಸ್ತಿತ್ವದಲ್ಲಿದ್ದು ಅದರ ರೋಧರಹಿತ ಹರಿವಿಗೆ ಕಾರಣವೆಂದು ಸಾಧಿತವಾಯಿತು. ಇಂದು ಯಂತ್ರಕಲೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿದೆ. ಇಂದು ನಾವು ಅಂತಹ ಸಾಂದ್ರ ವಸ್ತುಗಳನ್ನು ನಿರ್ಮಿಸಲು ಪ್ರಯೋಗ ಶಾಲೆಯಲ್ಲೇ ಪರಿಸ್ಥಿತಿಯನ್ನು ಸೃಜಿಸಬಹುದಾಗಿದೆ. ಹೀಗೆ ಬೋಸ್‌ರವರು ಹೇಳಿದ ''ಭೌತವಿಜ್ಞಾನದ ಆತ್ಮಸಾಫಲ್ಯತೆ'' ನಿಲ್ಲದೆ ಮುಂದುವರಿಯುತ್ತಲೇ ಇದೆ.

೨೦ನೆಯ ಶತಮಾನದ ಭೌತಶಾಸ್ತ್ರವು ನಮಗೆ ಏನು ಒದಗಿಸಿತು ? ಯಂತ್ರಕಲಾ ಪ್ರಗತಿಯನ್ನಲ್ಲದೆ ಅದು ನಮಗೆ ಈ ಕೆಳಗಿನ ಮೂಲ ಸ್ಥಿರಾಂಕಗಳನ್ನು ನೀಡಿತು : c, h, $m_e$ (ಎಲೆಕ್ಟ್ರಾನ್ ರಾಶಿ), $m_p$ (ಪ್ರೋಟಾನ್ ರಾಶಿ), $m_n$ (ನ್ಯೂಟ್ರಾನ್ ರಾಶಿ) ಮತ್ತು G (ಗುರುತ್ವ ಸ್ಥಿರಾಂಕ). ಇವು ಸೂಕ್ಷ್ಮ ಜಗತ್ತಿನಿಂದ ಹಿಡಿದು ಸ್ಥೂಲಜಗತ್ತಿನವರೆಗೆ ಈ ಜಗತ್ತನ್ನು ಅರ್ಥಮಾಡಿಕೊಳ್ಳಲು ನಮಗೆ ನೆರವಾಗಿವೆ. ನಾವೀಗ ೨೧ನೆಯ ಶತಮಾನದಲ್ಲಿ ಬಾಳುತ್ತಿದ್ದರೂ ನಮ್ಮ ಭೌತಶಾಸ್ತ್ರವು ೨೦ನೆಯ ಶತಮಾನದ್ದೇ ಆಗಿದೆ, ಏಕೆಂದರೆ, ನಾವು ಈ ಜಗತ್ತನ್ನು ಮೇಲೆ ತಿಳಿಸಿದ ಮೂಲ ಸ್ಥಿರಾಂಕಗಳ ಮೂಲಕವಷ್ಟೇ ಅರ್ಥ ಮಾಡಿಕೊಳ್ಳುತ್ತಿದ್ದೇವೆ. ನಿಸರ್ಗವನ್ನು ಅರ್ಥಮಾಡಿಕೊಳ್ಳಲು ಮೇಲಿನ ಸ್ಥಿರಾಂಕಗಳು ಸಾಲವು ಎಂದು ಕಂಡುಬರುವ ದಿನ ಭೌತಶಾಸ್ತ್ರವು ಮತ್ತೆ ಮತ್ತೊಂದು ಕ್ರಾಂತಿಕಾರಿ ಮಜಲನ್ನು ಪ್ರವೇಶಿಸುತ್ತದೆ.

ಭೌತಶಾಸ್ತ್ರ ಬದಲಾದಂತೆ ನಮ್ಮ ಸುತ್ತಲಿನ ಜಗತ್ತೂ ಬದಲಿದೆ ಎಂಬುದನ್ನೂ ನಾವು ತಿಳಿದಿರಬೇಕು. ವಿಜ್ಞಾನದಲ್ಲಿ ಭಾರಿ ಪ್ರಗತಿಯು ಕೈಗಾರಿಕೀಕೃತ ಬಂಡವಾಳಶಾಹಿ ಆರ್ಥಿಕತೆಗಳಲ್ಲಷ್ಟೇ ಅಲ್ಲ ಸಮಾಜವಾದೀ ಯೋಜನೆಯ ದೇಶಗಳಲ್ಲೂ ಆಗಿದೆ ಎಂಬುದನ್ನು ನಾವು ಕಾಣಬೇಕು. ಹಿಂದಿನ ಸೋವಿಯತ್ ಒಕ್ಕೂಟ ಭೌತಶಾಸ್ತ್ರಕ್ಕೆ ನೀಡಿರುವ ಕೊಡುಗೆ ನಿಜಕ್ಕೂ ಅಮೋಘವಾದುದು, ಮೂಲಭೂತವಾದುದು. ಭಾರತದಂಥ ಬಡದೇಶಗಳೂ ಗಮನಾರ್ಹ ಕೊಡುಗೆ ನೀಡಿವೆ. ಆದರೆ ಬೃಹತ್ ಕಾರ್ಖಾನೆಗಳು ಬಂದು ಬಹು ಭಾರಿ ಬಂಡವಾಳ ಹಾಕುವ ಆವಶ್ಯಕತೆ ಉಂಟಾಗಿರುವಾಗ ಅಭಿವೃದ್ಧಿಶೀಲ ದೇಶಗಳಲ್ಲಿ ಅಂತಹ ಮುನ್ನಡೆಗೆ ಅವಕಾಶ ಕಮ್ಮಿಯಾಗಿದೆ. ಕಳೆದ ೨೦ ವರ್ಷಗಳಲ್ಲಿ ಚೀಣೀ ಜನತಾ ಗಣತಂತ್ರ ಭಾರಿ ಮುನ್ನಡೆ ಸಾಧಿಸಿದ್ದರೂ ಭಾರತ ಸ್ವಲ್ಪ ಹಿಂದೆ ಬಿದ್ದಿದೆ. ವಿಜ್ಞಾನದ ಪ್ರಗತಿಗೆ ಮಹೋನ್ನತ ವ್ಯಕ್ತಿಗಳು ಕಾರಣ ಎನ್ನುವುದು ನಿಜ, ಆದರೆ ಅಂತಹ ಮಹೋನ್ನತ ವ್ಯಕ್ತಿಗಳು ಹುಟ್ಟುವುದಕ್ಕೆ ವಿಜ್ಞಾನದ ಸಾಮಾಜಿಕ ಬುನಾದಿಯನ್ನು ವಿಸ್ತರಿಸುವುದೂ ಅತಿ ಮುಖ್ಯ. ಹಾಗಾಗಿ ಈ ಆತ್ಮ ಸಾಫಲ್ಯತೆಯ ಪ್ರಕ್ರಿಯೆಯಲ್ಲಿ ವೈಜ್ಞಾನಿಕ ಕಾರ್ಯಕರ್ತನು ತನ್ನ ಅಧ್ಯಯನದಲ್ಲಿ ಆಂತರಿಕ ನೋಟವನ್ನು ಸೂಕ್ಷ್ಮಗೊಳಿಸಬೇಕು, ಇತರ ಅಧ್ಯಯನ ಕ್ಷೇತ್ರಗಳೊಂದಿಗೆ ಸಂಪರ್ಕ ಬೆಳೆಸಿಕೊಳ್ಳಬೇಕು. ವಿಜ್ಞಾನ ಯಂತ್ರಕಲೆಗಳು ಬೃಹತ್ ಮಿಲಿಟರಿ ದೇಶಗಳ ಏಕಸ್ವಾಮ್ಯಕ್ಕೊಳಗಾಗದಂತೆ ಎಚ್ಚರಿಕೆ ವಹಿಸಬೇಕು. ಆತ್ಮಸಾಫಲ್ಯತೆಯ ಪ್ರಕ್ರಿಯೆಯಲ್ಲಿ ಈ ಕೊನೆಯ ಕಾರ್ಯಭಾರ ಅತ್ಯಂತ ಮುಖ್ಯವಾದುದು.

ಮೂಲ : [redacted] ಎಸ್. ಚಟರ್ಜಿ
ಭಾರತೀಯ ಖಭೌತ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೩೪
ಅನುವಾದ : **ಕೆ. ಎಲ್. ಗೋಪಾಲಕೃಷ್ಣ ರಾವ್**
ನಂ. ೨೬೧, ೨ನೇ ಕ್ರಾಸ್, ಬನಶಂಕರಿ ೨ನೇ ಹಂತ, ೩ನೇ ಬ್ಲಾಕ್, ತ್ಯಾಗರಾಜನಗರ, ಬೆಂಗಳೂರು - ೨೮

# ಸಾದರ ಸ್ವೀಕಾರ

**ಕ್ವಿಜ್ : ಸ್ಪರ್ಧಾ ಲೋಕಕ್ಕೊಂದು ಬೆಳಕಿಂಡಿ**
*ಬೇದ್ರೆ ಎನ್. ಮಂಜುನಾಥ*
*ಪುಟ : ೧೭೬* *ಬೆಲೆ : ರೂ. ೭೫*

**ಜೀವಜಗತ್ತಿನ ಕೌತುಕಗಳು : ಲಾಲನೆ - ಪಾಲನೆ**
*ಡಾ॥ ಎನ್. ಎಸ್. ಲೀಲಾ*
*ಪುಟ : ೭೨* *ಬೆಲೆ : ರೂ. ೬೦*

**ಜೀವಜಗತ್ತಿನ ಕೌತುಕಗಳು : ಪ್ರೀತಿ - ಪ್ರಣಯ**
*ಡಾ॥ ಎನ್. ಎಸ್. ಲೀಲಾ*
*ಪುಟ : ೮೮* *ಬೆಲೆ : ರೂ. ೬೦*
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಅಮೃತವರ್ಷ - ೭೫** *(ಕರ್ನಾಟಕ ಸಂಘ - ಶಿವಮೊಗ್ಗ)*
*ಸಂ. ಪ್ರೊ॥ ಪಾಂಡುರಂಗ ಉಡುಪ, ಶ್ರೀ ಜಯದೇವಪ್ಪ ಜೈನಕೇರಿ*
*ಪುಟ : ೪೦೮* *ಬೆಲೆ : ರೂ. ೨೦೦*
**ಕರ್ನಾಟಕ ಸಂಘ (ರಿ)**, ಬಿ.ಹೆಚ್. ರಸ್ತೆ, ಶಿವಮೊಗ್ಗ-೧

**ಸಾಹಿತ್ಯ ಸಂಪ್ರೀತಿ** (ಲೇಖನಗಳ ಸಂಗ್ರಹ) ಕವಿತಾ ಮಲ್ಲಪ್ಪ
*ಪುಟ : ೬೮* *ಬೆಲೆ : ರೂ. ೫೦*
**ಅಮರ ಪ್ರಕಾಶನ**, ಎಲ್ಐಜಿ, ೧೭೫, ೩ನೇ ಹಂತ, ಬಡೇಪುರ ಕಾಲೋನಿ, ಗುಲ್ಬರ್ಗಾ - ೫೮೫ ೧೦೫

**ದೇವರ ಸಾಹಿತ್ಯ** (ರಾಮಚಂದ್ರದೇವ ಕುರಿತ ಲೇಖನಗಳು)
*ಸಂ. ಕೆ. ನ. ಶಿವತೀರ್ಥನ್, ಕೃಷ್ಣಮೂರ್ತಿ ಹನೂರು*
*ಪುಟ : ೨೦೬* *ಬೆಲೆ : ರೂ. ೧೦೦*
**ನೈರುತ್ಯ ಪ್ರಕಾಶನ**, ೪೩, ಮಾಂದಳಿರು, ೨ನೇ ಹಂತ, 'ಎಂ' ಬ್ಲಾಕ್, ಕುವೆಂಪುನಗರ, ಮೈಸೂರು - ೫೭೦ ೦೨೩

**ಮಾನಜ್ಜ ಮತ್ತು ಇತರ ಕತೆಗಳು** (ಕಥಾಸಂಕಲನ) ಕಚ
*ಪುಟ : ೧೧೮* *ಬೆಲೆ : ರೂ. ೭೦*
**ನಂದಗುಡಿ ಪ್ರಕಾಶನ**, ನಂದಗುಡಿ - ವಾಸನ (ಅಂಚೆ), ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ

**ಪೋಕ್ರಿ** (ವ್ಯಂಗ್ಯಚಿತ್ರಗಳು) ಹರಿಣಿ
*ಪುಟ : ೯೬* *ಬೆಲೆ : ರೂ. ೬೦*
**ಹರಿಶ್ಚಂದ್ರ ಶೆಟ್ಟಿ**, 'ಚಿತ್ತಾರ', ೩-೫೦/೫, ಗಾಂಧಿನಗರ, ಕಾವೂರು, ಮಂಗಳೂರು - ೫೭೫ ೦೧೫

**ನಮ್ಮ ಹಕ್ಕಿಗಳು** (ವೈಜ್ಞಾನಿಕ ಕವನಗಳು) ಹ. ನಾಗರಾಜು
*ಪುಟ : ೧೨೪* *ಬೆಲೆ : ರೂ. ೧೦೦*
**ಹನುಮಂತಯ್ಯ ಪ್ರಕಾಶನ**, ೮೯, ೪ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ೧ನೇ ಹಂತ, ಪಶ್ಚಿಮ ಕಾರ್ಡ್ ರಸ್ತೆ, ಮಹಾ ಗಣಪತಿ ನಗರ, ರಾಜಾಜಿನಗರ, ಬೆಂಗಳೂರು - ೪೪

**ಸಂತೆ ಬೆಟ್ಟ ಝರಿ** (ಕವನ ಸಂಕಲನ) ಮೀನಾ ಸದಾಶಿವ
*ಪುಟ : ೧೨೮* *ಬೆಲೆ : ರೂ. ೯೦*
ಸಿ.ವಿ.ಜಿ. ಪಬ್ಲಿಕೇಷನ್ಸ್, ನಂ. ೭೦, ೨ನೇ ಮುಖ್ಯರಸ್ತೆ, ಜಬ್ಬಾರ್ ಬ್ಲಾಕ್, ವಯ್ಯಾಲಿಕಾವಲ್, ಬೆಂಗಳೂರು - ೩

**ಬಾ ಬೆಳಕೆ** (ಸಾಮಾಜಿಕ ನಾಟಕ) ರೋಹಿದಾಸ ಮಹಾಲೆ
*ಪುಟ : ೧೩೭* *ಬೆಲೆ : ರೂ. ೪೦*
**ರೋಹಿದಾಸ ಜಿ. ಮಹಾಲೆ**, ಕೂಜಳ್ಳಿ - ೫೮೧ ೩೩೨, ಕುಮಟಾ

**ಪಾಟಿಚೀಲ** (ಮಕ್ಕಳ ಕವನಗಳು) ಅರುಣಾ ನರೇಂದ್ರ
*ಪುಟ : ೫೬* *ಬೆಲೆ : ರೂ. ೪೦*
**ಸಿದ್ಧಾರ್ಥ ಪ್ರಕಾಶನ** ನಂದಿನಗರ, ಕೊಪ್ಪಳ - ೫೮೩ ೨೩೧

**ನಿರ್ಗತಿಕರಿಗಾಗಿ ಮಾರ್ಕ್ಸ್ - ಅಂಬೇಡ್ಕರ್** (ಲೇಖನಗಳು)
ರವೀಂದ್ರ ಹಳಿಂಗಳಿ
*ಪುಟ : ೫೮* *ಬೆಲೆ : ರೂ. ೪೦*
**ಸಮತಾ ಪ್ರಕಾಶನ**, ಬಿ.ಟಿ.ಎಂ. ಲೇಔಟ್, ಬೆಂಗಳೂರು- ೬೬

**ಶ್ರೀ ಮಾತಾ** (ಶರಣಾಗತಿ ಯೋಗದೀಪಿಕೆ)
ಅನು. ವ್ಯಾಖ್ಯಾನ. ಕೋ. ಚೆನ್ನಬಸಪ್ಪ
*ಪುಟ : ೧೧೬* *ಬೆಲೆ : ರೂ. ೫೦*
**ಕರ್ನಾಟಕ ನಿಲಯಂ ಟ್ರಸ್ಟ್**, ನಂ. ೧, ಮೊಂಟೋರ್ ಸಿಯರ್ ಬೀದಿ, ಪಾಂಡಿಚೆರಿ - ೬೦೫೦೦೧

**ನಮ್ಮ ನಾಡು, ನುಡಿ ಮತ್ತು ಗಡಿ** (ಲೇಖನಗಳು)
ಎಸ್. ವಿ. ಪಾಟೀಲ
*ಪುಟ : ೧೩೦* *ಬೆಲೆ : ರೂ. ೮೦*

**ಕನ್ನಡದ ಕೂಲಿ ರಾಮ ಜಾಧವ** (ಪರಿಚಯ)
ವಿಜಯಲಕ್ಷ್ಮಿ ಭೋಸಲೆ
*ಪುಟ : ೭೬* *ಬೆಲೆ : ರೂ. ೫೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕನ್ನಡ ಜಾಗೃತಿ ಪುಸ್ತಕ ಮಾಲೆ**, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧ ಸಂಸ್ಥಾನಮಠ, ಚಿಂಚಣಿ - ೫೯೧ ೨೭೨, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ.

**ಹೈದ್ರಾಬಾದ ಕರ್ನಾಟಕದ ಮಹಿಳಾ ಕಾವ್ಯ** (ಪರಿಚಯ)
ಜಯದೇವಿ ಎಂ. ಗಾಯಕವಾಡ
*ಪುಟ : ೧೧೧* *ಬೆಲೆ : ರೂ. ೫*

**ಮಾರುತೇಶ ಮಾಂಡ್ರೆ** (ಲೇಖನಗಳು)
*ಡಾ॥ ಗವಿಸಿದ್ಧ ಎಚ್. ಪಾಟೀಲ*
*ಪುಟ : ೧೦೮* *ಬೆಲೆ : ರೂ. ೫*

**ಆಯ್ದ ಹೊಸಗನ್ನಡ ಕವಿತೆಗಳು**
*ಸಂ. ಡಾ॥ ಡಿ. ಬಿ. ನಾಯಕ*
*ಪುಟ : ೯೬* *ಬೆಲೆ : ರೂ. ೫೦*
ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ

# ಸುಳ್ಳಿನ ಬಲೆ

**ಅ. ರಾ. ಮಿತ್ರ**

After all, what is a lie ?
It's but truth in masquerade.

ಎಂದು ಬೈರನ್ ಹೇಳಿದ್ದಾನೆ. ಸುಳ್ಳು ಎಂಬುದು ಸತ್ಯದ ಮುಖಕ್ಕೆ ಹಾಕಿರುವ ಮೊಗವಾಡ ಎಂಬುದು ಅವನ ಭಾವನೆ. ಹಾಗೆ ನೋಡಿದರೆ ನಮ್ಮೆಲ್ಲ ಸುಳ್ಳಿದೆ ಎಂಬುದು ಸುಳ್ಳಲ್ಲ. ಕೆಲವರ ಸುಳ್ಳುಗಳನ್ನೆಲ್ಲ ತೆಗೆದುಹಾಕಿದರೆ ಪಾಪ ಅವರಿಗೆ ಏನೂ ಉಳಿಯುವುದಿಲ್ಲ. ಸುಳ್ಳಿನ ಪ್ರಮಾಣ ಹೆಚ್ಚಾದಂತೆಲ್ಲ ನಿಮ್ಮ ಗೌರವವೂ ಹೆಚ್ಚಾಗುತ್ತದೆ. ಸಣ್ಣ ಸುಳ್ಳಿಗಿಂತ ದೊಡ್ಡ ಸುಳ್ಳಿಗೇ ಹೆಚ್ಚು ಜನ ಮರಳಾಗುತ್ತಾರೆ ಎಂದು ಆಲ್ಬರ್ಟ್ ಕಾಮು ಹೇಳುತ್ತಾನೆ. ವಾಸ್ತವಕ್ಕೆ ಬಹುಶಃ ಬಣ್ಣವಿಲ್ಲ, ಕಾಂತಿಯಿಲ್ಲ, ಆಕರ್ಷಣ ಶಕ್ತಿಯಿಲ್ಲ. ಆದಕ್ಕೇ ಬೇಂದ್ರೆಯವರು

ಸುಣ್ಣ ಬಣ್ಣ ಮಾಡಬೇಕು
ತೋರಣ ಕಟ್ಟಿ ನೋಡಬೇಕು

ಎಂದು ಹೇಳಿದ್ದಾರೆಯೇ ? ಡಯೋಜಿನಿಸ್ ಎಂಬಾತ ಪಾಪ ಹಗಲಲ್ಲೇ ದೀವಟಿಕೆ ಕೈಯಲ್ಲಿ ಹಿಡಿದು ಸುಳ್ಳು ಹೇಳದಿರುವ ಪ್ರಾಮಾಣಿಕರನ್ನು ಹುಡುಕಿಕೊಂಡು ಹೋಗುತ್ತಿದ್ದನಂತೆ. ಆದರೆ ಸಿಡಿಲು ಹೊಯ್ದ ಬಾವಿಗೆ ಸೋಪಾನ ಯಾಕೆ, ಎಂಬ ಗಾದೆಮಾತಿನಂತೆ ಸುಳ್ಳುಗಾರನನ್ನು ಹುಡುಕಲು ಯಾವ ಸಾಧನಗಳೂ ಬೇಕಿಲ್ಲ.

ಸುಳ್ಳಿನ ವಿಚಾರವಾಗಿ ನನ್ನ ಪ್ರಾಮಾಣಿಕ ಚಿಂತನೆಗಳು ಹರಿಯುತ್ತವೆ. ಮನುಷ್ಯ ಏಕೆ ಸುಳ್ಳು ಹೇಳುತ್ತಾ(ಳೆ)ನೆ ? ಆ ಸುಳ್ಳಿನ ಹಿಂದೆ ಲೋಕಕಲ್ಯಾಣ ಚಿಂತನೆ, ಆತ್ಮಪ್ರಶಂಸೆ, ಎದುರಿಗಿದ್ದವರನ್ನು ಪ್ರಸನ್ನಗೊಳಿಸುವ ಬುದ್ಧಿ, ಮಾತ್ಸರ್ಯ, ತನ್ನ ಅಸಮರ್ಥತೆಯನ್ನು ಮುಚ್ಚಿಟ್ಟುಕೊಳ್ಳುವ ಬುದ್ಧಿ, ನಾಲಗೆಯ ಚಪಲ, ಇನ್ನೊಬ್ಬರ ಮನಸ್ಸನ್ನು ನೋಯಿಸಲಾಗದ ಒಳ್ಳೆಯ ಮನಸ್ಸು , ಮುಗ್ಧರ ಮನಸ್ಸಿಗೆ ಹುಳಿ ಹಿಂಡುವ ನಿಂಬೆ ಬುದ್ಧಿ, ಅದು ಮನೆದೇವರಾಗಿರುವುದರಿಂದ ದಿನವೂ ಅದಕ್ಕೆ ಕೈಂಕರ್ಯ ಸಲ್ಲಿಸಬೇಕೆಂಬ ವ್ರತಬುದ್ಧಿ , ಸಾವಿರ ಸುಳ್ಳು ಹೇಳಿದರೂ ಚಿಂತೆಯಿಲ್ಲ , ಒಂದು ಮದುವೆ ನೆರವೇರಲಿ ಎಂಬ ಸದಾಶಯ, ಸುಣ್ಣ ಬಣ್ಣ ಹಚ್ಚಿ ಕೊಚ್ಚಿಕೊಂಡರೆ ಜನ ಮೆಚ್ಚಬಹುದು ಎಂಬ ಭ್ರಮೆ – ಹೀಗೆ ಹೇಳುತ್ತ ಹೋದರೆ ಅದು ಅಕ್ಷಯ ತೂಣೀರವಾಗುವುದರಿಂದ ನನ್ನ ಚಿಂತನೆಯ ಮಾಲೆಯನ್ನು ಇಲ್ಲಿಗೇ ಹರಿಯುತ್ತೇನೆ.

ಸುಳ್ಳಿನ ಬಲೆಯನ್ನು ನೇಯುವುದರಲ್ಲಿ ನಾವು ನಿಷ್ಣಾತರು ಎಂದು ಸರ್ ವಾಲ್ಟರ್ ಸ್ಕಾಟ್ ಹೇಳುತ್ತಾನೆ :

Oh what a tangle web we weave
When first we practice to deceive !

ಜನರಿರಲಿ ಇತಿಹಾಸ ಕೂಡ ಸುಂದರ ಸುಳ್ಳುಗಳ ಜಾಲವನ್ನೇ ನೇಯುತ್ತ ಬಂದಿದೆ. ರಾಮರಾಜ್ಯ ಎಂಬ ಸುಂದರ ರಾಜ್ಯವನ್ನು ಅದು ಸೃಷ್ಟಿಸಿಕೊಟ್ಟಿದೆ. 'ರಾಮನಿಗೆ ರಾಜ್ಯ ಬಂದರೆ ರಾಗಿ ಬೀಸೋದು ತಪ್ಪೀತೇ ?' ಇದು ನಿಜವಾದ ಜನಸತ್ಯ. ಆದರೆ ಸಾಮಾನ್ಯರ ದೃಷ್ಟಿಯಿಂದ ಯಾರೂ ಇತಿಹಾಸವನ್ನು ನೋಡುವುದಿಲ್ಲ. ರಾಜಸ್ಥಾನದ ಕವಿಗಳು ಇತಿಹಾಸಕಾರರು ಅಂಥ ಸ್ವಪ್ನ ಸೀಮೆಯನ್ನು ಸೃಷ್ಟಿಸುತ್ತಾರೆ. ''ನರಜಾತಿ ಚರಿತ್ರ ಸಮಸ್ತಂ ಪರಪೀಡನ ಪರಾಯಣತ್ವಂ'' ಎಂದು ತೆಲುಗು ಕವಿಯೊಬ್ಬ ಉದ್ಗರಿಸಿದ್ದಾನೆ. ಸುಳ್ಳು ಸುದ್ದಿಯನ್ನು ಹರಡಿ ಶತ್ರುಗಳ ಸೇನೆಯಲ್ಲಿ ವಿಶ್ವಾಸವನ್ನು ಛಿದ್ರಿಸುವುದನ್ನೇ ಯುದ್ಧ ನೀತಿಯಾಗಿಸಿಕೊಂಡಿರುವ ರಾಜರುಗಳಿರುವ ತನಕ, ಅಧಿಕಾರಿಗಳಿರುವ ತನಕ ಸುಳ್ಳಿನ ಆಯುಷ್ಯಕ್ಕೆ ಬಾಧೆಯಿಲ್ಲ. ಜರ್ಮನಿಯ ಮೇಲೆ ಯುದ್ಧ ಹೂಡಿದ ಬ್ರಿಟಿಷರು ವ್ಯವಸ್ಥಿತವಾದ ಸುಳ್ಳಿನ ಪ್ರಸಾರವನ್ನು ಮಾಡುತ್ತಿದ್ದರೆಂದು ಇತಿಹಾಸ ಹೇಳುತ್ತದೆ. ಬಿಬಿಸಿ ರೇಡಿಯೋ ಪ್ರಸಾರದಲ್ಲಿ ಇಂದು ನಾಲ್ಕು ಜರ್ಮನ್ ಹಡಗುಗಳನ್ನು ಸಮುದ್ರದಲ್ಲಿ ಮುಳುಗಿಸಿದೆವು, ಇಂದು ಎಂಟು ಹಡಗುಗಳು, ಇಂದು ಹನ್ನೆರಡು ಎಂದು ದಿನವೂ ಸುಳ್ಳು ಸುದ್ದಿ ಬರುತ್ತಲೇ ಇದ್ದದ್ದನ್ನು ಕಂಡು ಜರ್ಮನರು ತಡೆಯಲಾಗದೆ

'These ships were not drowned in sea
But only in BBC'

ಎಂದು ಪ್ರತಿದಾಳಿಯನ್ನಾರಂಭಿಸಬೇಕಾಯಿತು. ಏನು ಮಾಡುವುದು ಯುದ್ಧದ ಹೊಲದ ಮೇಲೆ ಕೋಟ್ಯಂತರ ಸುಳ್ಳು ಮಿಡಿತೆಗಳು ಆಕ್ರಮಣ ನಡೆಸುವುದು ಸಾಮಾನ್ಯವಲ್ಲವೇ ?

ಈ ಸುಳ್ಳು ಎಂಬುದು ಮತ್ಸ್ಯಯಂತ್ರದ ಮೀನಿನಂತೆ. ಮೇಲುಭಾಗದಲ್ಲಿ ಅದು ಫೇರಿ ಹೊಡೆಯುತ್ತಲೇ ಇರುತ್ತದೆ. ಸಮಾಜದ ಎಣ್ಣೆ ಕೊಪ್ಪರಿಗೆಯಲ್ಲಿ ಅದರ ಚಲನೆಯನ್ನು ಗಮನಿಸುತ್ತ ಬಿಲ್ಲಿಗೆ ಬಾಣ ಹೂಡಿ ಈ ಮಿಥ್ಯಾಮತ್ಸ್ಯವನ್ನು ಭೇದಿಸಿ ಸತ್ಯ ದ್ರೌಪದಿಯ ಕೈ ಹಿಡಿಯಬಲ್ಲವರೇ ನಮಗೆ ಕಾಣುತ್ತಿಲ್ಲ. ಸುಂದರವಾದ ಸುಳ್ಳಿನ ಮೋಡಗಳು ಸತ್ಯ ಸೂರ್ಯನನ್ನು ಮುಚ್ಚಿಡುತ್ತವಲ್ಲ. ಸತ್ಯ ಒಂದೇ ಆದರೆ ಸುಳ್ಳಿಗೆ ಎಷ್ಟೊಂದು ವೇಷ ? ಅದು ದೊಡ್ಡ ಅವಿಭಕ್ತ ವಿಶ್ವಕುಟುಂಬದ ವೃಕ್ಷ. ಅದಕ್ಕೆ ಎಷ್ಟು ಬಿಳಲುಗಳು ! ಅಪ್ಪಟ ಸುಳ್ಳು, ಹಸಿ ಸುಳ್ಳು, ಮರಿಸುಳ್ಳು, ಉಪಸುಳ್ಳು, ಒಳಸುಳ್ಳು , ಕರೀಸುಳ್ಳು ! ''ಬರೀ ಸುಳ್ಳನ ಮನೆಗೆ ಹಸಿಸುಳ್ಳ ಹೋದರೆ ಹೊರಿಸಿ ಕಳಿಸಿದ್ದನಂತೆ ಮೊರಸುಳ್ಳ'' ಎಂಬ ಗಾದೆಯೇ ಇಲ್ಲವೇ ? ಹೀಗೆ ಸುಳ್ಳು ಶಾಖೋಪಶಾಖೆಗಳನ್ನು ತನ್ನಲ್ಲಿ ಅಡಗಿಸಿಕೊಂಡು ಆರಾಮವಾಗಿ ಮೆರೆಯುತ್ತಿದೆ.

ನೀತಿ ವಿಶಾರದರು ಸುಳ್ಳಿನ ಬಗೆಗೆ ಆಕ್ರೋಶ ವ್ಯಕ್ತಪಡಿಸುತ್ತಾರೆ. ಅದನ್ನು ಒಂದು ಹುಚ್ಚು ನಾಯಿಗೆ ಹೋಲಿಸಿ ಅದರಿಂದ ಕಚ್ಚಿಸಿಕೊಂಡರೆ ಅಪಾಯ ಎಂದು ಎಚ್ಚರಿಸುತ್ತಾರೆ. ಮಾತುಗಾರರ ಬಾಯ ಹೊಲದಲ್ಲಿ ಬೆಳೆಗಿಂತ ಸುಳ್ಳಿನ ಕಳೆಯೇ ಜಾಸ್ತಿ ಬೆಳೆದಿರುತ್ತದೆ ಎಂದು ಪ್ರಮಾಣ ಮಾಡಿ ಹೇಳುತ್ತಾರೆ. ಆಗಾಗ ಈ ಸುಳ್ಳಿನ ಕಳೆಯನ್ನು ಬೇರು ಸಹಿತ ಹೆಕ್ಕಿ ಎಸೆಯದಿದ್ದರೆ ಬೆಳೆಗೆ ಹಾಕಿದ ಗೊಬ್ಬರವೆಲ್ಲ ಇವರ ಹೊಟ್ಟೆಗೆ ಹೋಗಿ ಬೆಳೆಯ ಪ್ರಮಾಣ ತಗ್ಗಿ ಕಳೆಯ ಆಧಿಪತ್ಯ ವಿಜೃಂಭಿಸುತ್ತದೆ ಎಂಬುದು ಇವರ ಆಕ್ಷೇಪ.

ದ್ವೈಭಾಷಿಕತನ ಜನತೆಗೆ ಭೂಷಣ
ದ್ವಿಜಿಹ್ವರಾಗುವುದು ಆವ ಗುಣ ?

ಎಂದು ಬೇಂದ್ರೆಯವರೂ ಇವರ ಅಭಿಪ್ರಾಯವನ್ನು ಅನುಮೋದಿಸುತ್ತಾರೆ. ಅವರ ದೃಷ್ಟಿಯಲ್ಲಿ ಎರಡು



ಭಾಷೆಗಳನ್ನು ಕಲಿತರೆ ತಪ್ಪಿಲ್ಲ, ಅದು ಶೋಭೆ. ಆದರೆ ದ್ವಿಜಿಹ್ವರಾಗುವುದು ಎಂದರೆ ಎರಡು ನಾಲಗೆಯ ಸರ್ಪಗಳಾಗುವುದು, ಅಪ್ರಾಮಾಣಿಕರಾಗುವುದು ಭೂಷಣವಲ್ಲವಂತೆ! ಎಲ್ಲೋ ಬಸವಣ್ಣನಂಥ ಕೆಲವರು ಮಾತೆಲ್ಲ ಮುತ್ತಿನ ಹಾರ ಎಂದು ಭಾವಿಸಿದ್ದರೆಂದು ಡಾ॥ ಜಿ. ಎಸ್. ಶಿವರುದ್ರಪ್ಪನವರು ಹೇಳುತ್ತಾರೆ. ಅವರು

... ಒಳಗು ಹೊರಗು
ಗಳನ್ನು ಮುಚ್ಚು ಮರೆಯಿಲ್ಲದೆಯೆ ದಿನವೂ ಬಚ್ಚಿಟ್ಟು
ಒಗೆದು ಮಡಿಮಾಡಿ ಇಷ್ಟದೈವದ ಗುಡಿಗೆ ನಡೆ
ಮಡಿಯಾಗಿ ಹಾಸಿದವರು.

ಇವೆಲ್ಲ ಹೇಳುವುದು ಸುಲಭ. ಆದರೆ ವಾಸ್ತವ ಸಂಗತಿ ಎಂದರೆ ನಾವು ಬದುಕಿನುದ್ದಕ್ಕೂ ಸುಳ್ಳಿನ ಕವಚವನ್ನು ಹೊತ್ತುಕೊಂಡೇ ಓಡಾಡುತ್ತೇವೆ. ಆ ಸುಳ್ಳಿಗೆ ವಯಸ್ಸು, ಮುಪ್ಪು, ಆಯಾಸ ಎಂಬುದೇ ಇಲ್ಲ. ಅದು ನಿತ್ಯ ಯೌವನವನ್ನು ಕಾಪಾಡಿಕೊಳ್ಳುವಂತೆ ವಜ್ರಕಲ್ಪ ವಿಧಿಗೆ ಒಳಗಾಗಿರುತ್ತದೆ. ಸುಳ್ಳಿನ ಪೊರೆಯನ್ನು ಬಿಡಿಸಲು ಇತಿಹಾಸ, ಕಾವ್ಯಗಳು ಹೆಣಗುತ್ತವೆ. ಕಾವ್ಯ, ಸತ್ಯಹರಿಶ್ಚಂದ್ರ ಕಥೆಯನ್ನು ಹೇಳಿ ಸತ್ಯವು ಅಚಲವಾದದ್ದು ಎನ್ನುತ್ತದೆ. ಆದರೆ ಪುರಾಣ ಉಪಾಖ್ಯಾನಗಳಲ್ಲಿ ಬರುವ ಹರಿಶ್ಚಂದ್ರ ಮಹಾಸುಳ್ಳುಗಾರ. ವರುಣನ ಕೃಪೆಯಿಂದ ಅವನು ಒಬ್ಬ ಮಗನನ್ನು ಪಡೆದ. ಆ ಮಗನನ್ನು ಕೆಲವು ವರ್ಷಗಳಾದ ಮೇಲೆ ವರುಣನಿಗೆ ಹಿಂದಿರುಗಿಸುವುದಾಗಿ ಪ್ರತಿಜ್ಞೆ ಮಾಡಿದ. ಆದರೆ ಪುತ್ರಮೋಹದಿಂದ ವರುಣನಿಗೆ ನಾನಾ ಬಗೆಯ ಸುಳ್ಳು ಹೇಳಿ ತಪ್ಪಿಸಿಕೊಳ್ಳಲು ನೋಡಿದ. ತನ್ನ ಮಗನಿಗೆ ಬದಲಾಗಿ ಒಬ್ಬರ ಬಡಮಗನನ್ನು ಬಲಿಕೊಡುವ ತಂತ್ರವನ್ನೂ ಹೂಡಿದ. ಕೊನೆಗೆ ವರುಣ ಶಾಪಕ್ಕೆ ಗುರಿಯಾಗಿ 'ಜಲೋದರ' ರೋಗದಿಂದ ನರಳಿದ. ರಾಘವಾಂಕನ ಹರಿಶ್ಚಂದ್ರ ಕಾವ್ಯವು ಈ ವಿಷಯದಲ್ಲಿ ಮೌನವಾಗಿದೆ. ''ಅಶ್ವತ್ಥಾಮೋ ಹತಃ'' ಎಂದು ಸ್ಪಷ್ಟವಾಗಿ ಉಚ್ಚಕಂಠದಲ್ಲಿ ಕೂಗಿದ ಧರ್ಮರಾಯನು ಕುಂಜರಃ ಎಂಬ ಮಾತನ್ನು ಸೇರಿಸಿದ್ದಾನೆ ನಿಜ. ಆದರೆ ಪಾಂಡವ ಸೇನೆಯ ಮಹಾ ಆರ್ಭಟದಲ್ಲಿ ಆ ಶಬ್ದ ದ್ರೋಣರ ಕಿವಿ ತಲುಪದಂತೆ ಕೃಷ್ಣ ನೋಡಿಕೊಂಡಿದ್ದನಲ್ಲ, ಇದು ಸುಳ್ಳು, ಅಪ್ಪಟ ಸುಳ್ಳು. ಇದರ ಪರಿಣಾಮವಾಗಿ ಅದುವರೆಗೆ ನೆಲದಿಂದ ನಾಲ್ಕು ಅಂಗುಲ ಎತ್ತರದಲ್ಲೇ ಚಲಿಸುತ್ತಿದ್ದ ಧರ್ಮರಾಯನ ರಥವು ಈ ಸುಳ್ಳಿನ ಪರಿಣಾಮವಾಗಿ ನೆಲದ ಮೇಲೇ ಚಲಿಸುವಂತಾಯಿತು ಎಂದು ವ್ಯಾಸರು ಹೇಳುತ್ತಾರೆ. ಅಲ್ಲದೆ ಸ್ವರ್ಗಾರೋಹಣ ಪರ್ವದಲ್ಲಿ ಧರ್ಮರಾಯನಿಗೆ ಮೊದಲು ನರಕದರ್ಶನ, ಅನಂತರ ಸ್ವರ್ಗವಂತೆ! ಇದಕ್ಕೆ ಕಾರಣ ಹೇಳುತ್ತ ಇಂದ್ರನು ಧರ್ಮರಾಯನಿಗೆ ''ವ್ಯಾಜೇನ ಹಿ ತ್ವಯಾ ದ್ರೋಣ ಉಪಚೀರ್ಣಃ ಸುತಂ ಪ್ರತಿ... ಒಂದು ನೆಪ ಹಿಡಿದು ನೀನು ದ್ರೋಣರನ್ನು ವಂಚಿಸಿದ್ದೀಯೆ. ಆದುದರಿಂದ ನೀನು ನರಕದರ್ಶನ ಮಾಡಿ ಅನಂತರ ಸ್ವರ್ಗಕ್ಕೆ ಹೋಗಬೇಕಾಗಿದೆ'' ಎಂದು ಹೇಳುತ್ತಾನೆ. ಆಗುವ ಅನಾಹುತ ಆಗಿಯೇ ಹೋಯಿತು. ದ್ರೋಣರ ಅವಸಾನಕ್ಕೆ ಈ ಸುಳ್ಳೇ ಕಾರಣವಾದರೂ ಧರ್ಮರಾಯನಿಗೆ ಅಂಥ ಪ್ರಮಾದವೇನೂ ಆಗಲಿಲ್ಲ. ಮಹಾಭಾರತದ ಕೃಷ್ಣ ಮತ್ತು ವ್ಯಾಖ್ಯಾನಕಾರರು ಈ ಸುಳ್ಳನ್ನು ಸಮರ್ಥಿಸುತ್ತಾರೆ. ಇದಕ್ಕೆ ಒಂದು ದೃಷ್ಟಾಂತ ಕತೆಯನ್ನು ಹೇಳುತ್ತಾರೆ. ಒಬ್ಬ ಸಾಧು. ಅವನ ಕಣ್ಣ ಮುಂದೆಯೇ ಕೆಲವರು ಓಡುತ್ತಾರೆ. ಸ್ವಲ್ಪ ಸಮಯಕ್ಕೇ ಅವರನ್ನು ಅಟ್ಟಿಸಿಕೊಂಡು ಕೆಲವರು ಧಾವಿಸುತ್ತಾರೆ. ಆದರೆ ಆ ಸಾಧು ಸುಳ್ಳು ದಿಕ್ಕನ್ನು ತೋರಿಸಿ ಆ ಕಡೆ ಹೋದರು ಎನ್ನುತ್ತಾನೆ. ಇದು ಕೃಷ್ಣನ ಅಥವಾ ವ್ಯಾಖ್ಯಾನಕಾರರ ದೃಷ್ಟಿಯಲ್ಲಿ ಸುಳ್ಳಲ್ಲ. ಏಕೆಂದರೆ, ನಿಜ ಹೇಳದಿದ್ದರೆ ಅವರು ಅಟ್ಟಿಸಿಕೊಂಡು ಹೋಗಿ ಕೊಲ್ಲುತ್ತಿದ್ದರು. ಜೀವ ಉಳಿಸಲು ಹೇಳುವ ಸುಳ್ಳು ಕ್ಷಮಾರ್ಹವಾದುದು ಎಂಬ ವ್ಯಾಖ್ಯಾನವೂ ಅಲ್ಲಿದೆ. ಆದರೆ




ತತ್ವಜ್ಞಾನಿ ಕಾಂಟ್ ಇಂಥದೇ ಒಂದು ಸನ್ನಿವೇಶವನ್ನು ವರ್ಣಿಸಿ ಸುಳ್ಳು ಹೇಳುವುದು ಸರಿಯಲ್ಲ ಎನ್ನುತ್ತಾನೆ. ಸತ್ಯವೊಂದೇ ಮುಖ್ಯ. ಫಲಾಫಲಗಳನ್ನು ಕುರಿತು ಚಿಂತಿಸಲೇ ಬಾರದು ಎನ್ನುತ್ತಾನೆ ಆತ. ಹೀಗೆ ಸತ್ಯ-ಮಿಥ್ಯೆಗಳ ಜಿಜ್ಞಾಸೆ ತುಂಬ ಸೂಕ್ಷ್ಮವಾಗಿದೆ.

ಫಲಾಫಲಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಸುಳ್ಳು ಹೇಳಿದರೆ ಏನೂ ಅಪಾಯವಿಲ್ಲ ಎಂಬುದು ಭಾರತೀಯರ ಮತ. ನೀವು ಸಂಜೆ ಹೊರಗೆ ಹೊರಟಾಗ ನಾನೂ ಬರುತ್ತೇನೆ ಎಂದು ಹೇಳುವ ಮಗಳಿಗೆ ''ನಾವು ಆಸ್ಪತ್ರೆಗೆ ಹೋಗುತ್ತಿದ್ದೇವೆ'' ಎಂದು ಸುಳ್ಳು ಹೇಳಿ ಅವಳನ್ನು ಮನೆಯಲ್ಲೇ ಬಿಟ್ಟು ಹೋಗುವುದಿಲ್ಲವೆ? ಒಬ್ಬ ಸಂಗೀತಗಾರ್ತಿ ತುಂಬ ಕಷ್ಟಪಟ್ಟು ಹಾಡುತ್ತಾಳೆ. ಆ ಶ್ರವಣ ಭಯಂಕರ ನಾದ ನಿಮಗೆ ಹಿಂಸೆ ತರುವಂಥದು. ಆದರೂ ಆಕೆಯ ಮನಸ್ಸನ್ನು ನೋಯಿಸಲು ಇಷ್ಟವಿಲ್ಲದೆ 'ತುಂಬಾ ಚೆನ್ನಾಗಿತ್ತು' ಎಂದು ನೀವು ಮಿಥ್ಯಾಲಾಪನೆ ಮಾಡುವುದಿಲ್ಲವೆ? ಯಾರೋ ಬಂದು ತಮ್ಮ ತಾಪತ್ರಯ ಹೇಳಿಕೊಂಡು ಸಾಲ ಕೇಳುತ್ತಾರೆಂದುಕೊಳ್ಳಿ. ನಿಮ್ಮಲ್ಲಿ ಆ ನಿಮಿಷಕ್ಕೆ ಹಣವೂ ಇದೆ ಎಂದಿಟ್ಟುಕೊಳ್ಳಿ. ಆದರೆ ಸತ್ಯನಿಷ್ಠುರನಾಗಿ ''ನನ್ನಲ್ಲಿ ಹಣವಿದೆ. ಆದರೆ ನಿನಗೆ ಎರವಲು ಕೊಡಲು ಸಾಧ್ಯವಿಲ್ಲ'' ಎನ್ನುತ್ತೀರೋ? ಅಥವಾ ''ಇಲ್ಲರೀ, ಖಂಡಿತ ನನ್ನಲ್ಲಿ ಹಣ ಇಲ್ಲ. ಇದ್ದರೆ ಕೊಡುತ್ತಿದ್ದೆ'' ಎನ್ನುತ್ತೀರೋ? ಸತ್ಯದ ನೇರಮಾರ್ಗದಲ್ಲಿ ನಡೆಯಲಾಗದೆ ನೀವು ಸುಳ್ಳಿನ ಕಿರುದಾರಿ ಹಿಡಿದು ಬಚಾವಾಗುವುದಿಲ್ಲವೆ? ಹೊತ್ತು ಮೀರಿ ನೆಂಟರ ಮನೆಗೆ ಹೋದಾಗ ಪಾಪ ಮನೆಯಾಕೆ ಮತ್ತೆ ಅಡಿಗೆಗಿಡುತ್ತಾರಲ್ಲ ಎಂಬ ಕಾರಣಕ್ಕೆ ''ಊಟವಾಯಿತು'' ಎಂದು ಸುಳ್ಳು ಹೇಳಿದರೆ ಇಬ್ಬರಿಗೂ ಕ್ಷೇಮವಲ್ಲವೇ? ಹೀಗೇ ತಡವಾಗಿ ಕಚೇರಿಗೆ ಹೋದಾಗ ನಯವಾದ ಸುಳ್ಳು ಹೇಳಿ ಜಾರಿಕೊಳ್ಳುತ್ತೀರಲ್ಲವೆ? ಕಚೇರಿಗೆ ರಜೆ ಹಾಕುವವರು ಎಷ್ಟು ಬಗೆಯ ಸುಳ್ಳು ಕಾರಣಗಳನ್ನು ಕೊಡುತ್ತಾರೆ ಎಂಬುದನ್ನು ಪಟ್ಟಿ ಮಾಡಿ ನೋಡೋಣ!

ರಾಜಕೀಯ ಉಪನ್ಯಾಸಗಳಲ್ಲಿ ಈ ಸುಳ್ಳು ವಿಜೃಂಭಿಸುವ ಬಗೆಯನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ.

''ಮಹಾಜನಗಳೇ... ಜಿಗಣೆಗಳು ಸಮೃದ್ಧವಾದ ಜೌಗು ಪ್ರದೇಶಗಳಲ್ಲಿ ವಸತಿ ಹೂಡಿ ಸುತ್ತಮುತ್ತ ಇರುವ ಬಡ ಎತ್ತು, ದನ, ಜನಗಳ ರಕ್ತವನ್ನು ಹೀರುತ್ತವೆಯಂತೆ! ಹಾಗೆಯೇ ಇಂದು ಶೋಷಕ ಜಿಗಣೆಗಳು ಬಡವರ್ಗಗಳನ್ನು ಹೀಗೆ ಹೀರುತ್ತಿವೆ. ಇತಿಹಾಸವೇ ಇಂಥ ಕ್ರೂರ ಜಿಗಣೆಗಳಿಂದ ತುಂಬಿಹೋಗಿದೆ. ಬಡವಾ, ನೀನು ಎಚ್ಚೆತ್ತುಕೊಳ್ಳುವುದು ಯಾವಾಗ...''

ಇದು ಐವತ್ತು ವರ್ಷಗಳ ಹಿಂದೆ ನಾನು ಕೇಳಿದ ಒಂದು ಭಾಷಣ. ಈಗ ಕಾಲ ಬದಲಾಗಿದೆ. ತುಳಿಸಿಕೊಂಡವರಲ್ಲಿ ಅನೇಕ ರಾಜಕಾರಣಿಗಳು ಬಲಿಷ್ಠವಾಗಿ ಬೆಳೆದಿದ್ದಾರೆ. ಆರ್ಥಿಕವಾಗಿ ಸಾಮಾಜಿಕವಾಗಿ ಸಾಂಸ್ಕೃತಿಕವಾಗಿ ಮೇಲ್ವರ್ಗಕ್ಕೇ ಸೇರಬಲ್ಲ ಶಕ್ತಿ ಹೊಂದಿದ್ದಾರೆ ಅಂಥವರ ಉಪನ್ಯಾಸ ಕೇಳಿ. ನಾನು ಮೇಲೆ ಹೇಳಿದ ಮಾತುಗಳೇ ಅಲ್ಲೂ. ಹೀಗೆ ಒಂದೇ ಮಾತ್ರ ಸುಳ್ಳನ್ನು ರಾಜಕೀಯ ಇತಿಹಾಸ ಪ್ರಚಾರ ಮಾಡಿಕೊಂಡೇ ಬಂದಿದೆ. ಇದು ಎಂಥ ಸುಳ್ಳಾದರೂ ಇದರ ಹಿಂದೆ ಸಮಾಜಕಲ್ಯಾಣದ ಸ್ಪಂದನ ಶೂನ್ಯವಾಗಿದೆಯಲ್ಲ ಎಂಬುದೇ ನನ್ನ ಸಂಕಟ. ಒಬ್ಬ ಬ್ರಿಟಿಷ್ ಕಲಾವಿದ ಮಾತ್ರ ರಾಜಕಾರಣಿಯೊಬ್ಬನ ಬಗೆಗೆ ಸತ್ಯವನ್ನೇ ಹೇಳಿದ್ದುಂಟು. ಪಾರ್ಲಿಮೆಂಟ್‌ನಲ್ಲಿ ಆ ರಾಜಕಾರಣಿ ಭಾಷಣಕ್ಕೆ ನಿಂತಾಗ ಅವನ ವರ್ಣಚಿತ್ರ ಬರೆಯುವುದಾಗಿ ಒಪ್ಪಿ ಬಂದ ಆತ ಕೊನೆಗೆ ಪಡೆದಿದ್ದ ಮುಂಗಡವನ್ನು ಹಿಂದಿರುಗಿಸಿ ''ಈ ಮುಖ ಬಣ್ಣ ಹಚ್ಚಿಸಿಕೊಳ್ಳಲು ಯೋಗ್ಯವಾಗಿಲ್ಲ. ಬೇಕಾದರೆ ಸುಣ್ಣ ಹಚ್ಚಬಹುದು ಅಷ್ಟೇ'' ಎಂದನಂತೆ! ಎಲ್ಲರೂ ಧೈರ್ಯವಾಗಿ ಹೀಗೆ ಹೇಳಲು ಸಾಧ್ಯವೇ?

ಬೇಕನ್ ಎಂಬ ಪ್ರಬಂಧಕಾರ ಹೇಳುತ್ತಾನೆ:

It is not the lie that passeth through the mind, but lie that sinketh in and settles in it, that doth the hurt"

(ಮನಸ್ಸಿನಲ್ಲಿ ಸುಳಿದು ಸಾಗುವ ಸುಳ್ಳಿನ ಭಾವನೆಗಿಂತ, ಅಂತರಂಗದಲ್ಲಿ ಬದವಾಗಿ

ಬೇರೂರಿ ನಿಲ್ಲುವ ಸುಳ್ಳು ಮನೋವೇದಕವಾದದ್ದು.)

ಸುಳ್ಳು ವದಂತಿಗಳನ್ನು ಹಬ್ಬಿಸುವವರು ದೇಶಕ್ಕೆ ಅನರ್ಥ ತರುತ್ತಾರೆ. ಮೊನ್ನೆ ತಾನೇ ಜೋರ್ಡಾನ್ ನದಿಯ ಸೇತುವೆಯ ಮೇಲೆ ಸಾಗುತ್ತಿದ್ದ ಷಿಯಾ ಭಕ್ತರು ಇಲ್ಲಿ ಮಾನವ ಬಾಂಬುಗಳಿವೆ ಎಂಬ ಸುಳ್ಳು ಸುದ್ದಿ ನಂಬಿ ಧಾವಿಸಿ ಸಾವಿರ ಸಂಖ್ಯೆಯಲ್ಲಿ ಸಾಯಲಿಲ್ಲವೆ ? ಸುಳ್ಳು ನೋಟುಗಳು ವಿದೇಶದಲ್ಲಿ ತಯಾರಾಗಿ ನಮ್ಮ ತಾಜಾ ನೋಟುಗಳಂತೆ ಮೆರೆಯುತ್ತವೆ ಎಂಬ ಸುದ್ದಿ ಕೇಳಿ ನನ್ನ ಮನಸ್ಸಿಗೆ ತುಂಬ ಕಸಿವಿಸಿಯಾಯಿತು. ಇಂಥ ಸುಳ್ಳು ಕಪಟಗಳೆಲ್ಲ ಸೇರಿ

*ಕೆಳಗೆ ಬೇರಾದೆ ಮ್ಯಾಲೆ ಮರಾ ಆದೆ*

ಎಂದು ಆರ್ಭಟಿಸಲು ಬಿಟ್ಟರೆ ದೇಶದ ಗತಿ ಏನು ?

ಕೋಳಿ ತನ್ನ ರೆಕ್ಕೆಯೊಳಗೆ ಮರಿಗಳನ್ನೆಲ್ಲ ಅಡಗಿಸಿಟ್ಟುಕೊಳ್ಳುವಂತೆ ನಮ್ಮ ಬಾಯಿ, ಮನಸ್ಸಿನ ಸುಳ್ಳುಗಳನ್ನೆಲ್ಲ ತನ್ನ ಗುಹೆಯೊಳಗೆ ಅಡಗಿಸಿಟ್ಟುಕೊಂಡರೆ ಸಮಾಜಕ್ಕೆ ಕ್ಷೇಮವಲ್ಲವೆ ? ಸೌಜನ್ಯ ರಕ್ಷಣೆಗೆ ಸುಳ್ಳು ಹೇಳಿದರೆ ಪರವಾಗಿಲ್ಲ ಎಂದು ಪರವಾನಗಿ ಕೊಟ್ಟು ಅದರ ದುಷ್ಫಲಗಳನ್ನು ನಾವು ಅನುಭವಿಸುತ್ತಿದ್ದೇವೆ. ಕೆಲವರು ಸ್ತುತಿಯ ನೆಪದಲ್ಲಿ ಎಲ್ಲೆ ಮೀರುವ ಸುಳ್ಳು ಹೇಳಿಬಿಡುತ್ತಾರೆ. ಕವಿಗಳು, ಕಲಾವಿದರು, ಸನ್ಮಾನದ ಬೆಂಕಿಗೆ ಬೀಳುವ ಮರ್ಯಾದಸ್ಥರು ಇಂಥವರೆಲ್ಲ ಈ ಸಂಕಟದ ಪರಿಯನ್ನು ಬಲ್ಲರು. ಒಬ್ಬ ಪಾದ್ರಿ ಇದ್ದನಂತೆ. ಆತ ತುಂಬ ಸತ್ಯಸಂಧ. ಸರಳಜೀವಿ, ಹೆಚ್ಚು ಮಾತಿನವನಲ್ಲ, ಸದಾ ಕ್ರಿಯಾಶೀಲನಾಗಿದ್ದವನು. ಚರ್ಚಿಗೆ ಬರುವ ಎಲ್ಲ ಭಕ್ತರ ನೈಜ ಹಿತಚಿಂತಕ. ಇವನಿಗೆ ಬೇರೊಂದು ಊರಿನ ಚರ್ಚ್‌ಗೆ ವರ್ಗವಾಯಿತು. ಒಂದು ಬೀಳ್ಕೊಡುಗೆಯ ಸಮಾರಂಭ. ಒಬ್ಬ ವಾಚಾಳಿ ಭಕ್ತ ಅವರನ್ನು ಬಾಯಿಗೆ ಬಂದಂತೆ ಹೊಗಳಿದ. ಅರ್ಧ ಗಂಟೆ ಒಂದೇ ಸಮನೆ ಗುಣಗಾನ ಮಾಡಿ ಕ್ರಿಸ್ತ, ಪೀಟರ್‌ರ ನಂತರ ಈ ಪಾದ್ರಿಯೇ ಶ್ರೇಷ್ಠ ಎನ್ನುವವರೆಗೆ ಅವನ ನಾಲಿಗೆ ಹರಿದಿತ್ತು. ಭಾಷಣ ಮುಗಿದ ಮೇಲೆ ಪಾದ್ರಿ ಎದ್ದು ನಿಂತ. ಅವರಿಗೆ ಹಾಸ್ಯಪ್ರಜ್ಞೆಯೂ ಇತ್ತು. ಅವನು ಎಲ್ಲರ ಕಡೆಗೆ ತಿರುಗಿ ಹೇಳಿದ್ದು ಇಷ್ಟೇ ಮಾತು :

*''ದೇವರೇ, ಅಳತೆ ಮೀರಿದ ಅವರ ಹೊಗಳಿಕೆಯ ಮಾತುಗಳನ್ನು ಕ್ಷಮಿಸು. ಭಕ್ತರು ಇದನ್ನೆಲ್ಲ ಕೇಳಿ ಸಂತೋಷಪಟ್ಟರಲ್ಲ ಅವರನ್ನು ಕ್ಷಮಿಸು. ಮಧ್ಯಕ್ಕೆ ನಿಲ್ಲಿಸಲು ಹೇಳದೆ ನಾನೂ ಅರ್ಧಗಂಟೆ ಈ ಮಾತನ್ನೆಲ್ಲ ಆನಂದವಾಗಿ ಕೇಳಿದೆನಲ್ಲ, ನನ್ನನ್ನೂ ಕ್ಷಮಿಸು.''*

ಈಚೆಗೆ ನ್ಯಾಯಾಲಯಗಳಲ್ಲಿ ಸಾಕ್ಷಿ ಸುಳ್ಳು ಹೇಳುತ್ತಿದ್ದಾನೆ(ಳೆ)ಯೋ ಇಲ್ಲವೋ ಎಂಬುದನ್ನು ಪರೀಕ್ಷಿಸಲು ಸುಳ್ಳನ್ನು ಪತ್ತೆ ಹಚ್ಚುವ ಯಂತ್ರವೊಂದು ಸೃಷ್ಟಿಯಾಗಿದೆ. ಇದು ಸರಿಯಾಗಿ ಕಾರ್ಯಾರಂಭ ಮಾಡುವ ಮುನ್ನವೇ ಇದರಿಂದ ಸಾಕ್ಷಿಯ ಮೇಲಾಗುವ ಮಾನಸಿಕ ದೈಹಿಕ ಹಿಂಸೆ ಮುಜುಗರಗಳ ಬಗೆಗೆ ಈಗಾಗಲೇ ನಾನಾ ಸುಳ್ಳು ಸುದ್ದಿಗಳು ದಟ್ಟವಾಗಿ ಹಬ್ಬಿವೆ. ಅಲ್ಲದೆ ಇದರ ಫಲಶ್ರುತಿ ಏನು ಎಂಬುದೂ ಇನ್ನೂ ವೈಜ್ಞಾನಿಕವಾಗಿ ನಿರ್ಧಾರವಾಗಿಲ್ಲ. ಇದು ಒಂದು ವೇಳೆ ಯಶಸ್ವಿಯಾಯಿತು ಎಂದಿಟ್ಟುಕೊಳ್ಳಿ. ಆದರೆ ಮುಂದೆ ಈ ಯಂತ್ರಗಳಿಗೇ ಚಳ್ಳೆಹಣ್ಣು ತಿನ್ನಿಸಬಲ್ಲ ಶಬ್ದ ಮೇಧಾವಿಗಳು ಹುಟ್ಟಿ ಬಂದಾರೆಂಬ ಸಂಶಯವೂ ಸುಳ್ಳಲ್ಲವಲ್ಲ. ಆಗ ಆಗುವ ಅನಾಹುತವೂ ಇದೇ ಸುಳ್ಳನ್ನು ಹೇಳಬಾರದು ಎಂಬ ಸಂಕಲ್ಪದ ಬದಲು ಸುಳ್ಳು ಹೇಳಿಯೂ ಬಚಾವಾಗುವುದು ಹೇಗೆ ಎಂಬ ಕಡೆಗೆ ನಮ್ಮ ಲಕ್ಷ್ಯ ಹರಿಯುತ್ತದೆ. ಶತಶತಮಾನಗಳಿಂದ ತೆರಿಗೆಯನ್ನು ವಂಚಿಸುತ್ತ ಬಂದಿರುವ ನಮ್ಮ ಜನಾಂಗಕ್ಕೆ ಪ್ರೇರಕ ದೇವತೆಗಳಾದ ಸರಕಾರ, ಮನೆ, ಶಾಲೆ, ಸುದ್ದಿಲೋಕಗಳ ಗತಿ ಏನಾಗಬೇಕು ಹೇಳಿ. ಈ ಚಟ ಹೇಗೆ ಬಿಡಿಸಲಾಗದ್ದು ಎಂಬುದನ್ನೂ ಸುಳ್ಳು ಹರಡುವ ವೇಗವನ್ನೂ ಕುರಿತು ನಾನೇ ಒಂದು ಪದ್ಯ ಬರೆದಿದ್ದೆ. ಒಬ್ಬ ಸುಳ್ಳುಗಾರ. ಗುಟ್ಟಾಗಿಡು ಎಂದು ಹೇಳಿ ಒಬ್ಬ ಗೆಳೆಯನ ಬಳಿಗೆ ಹೋಗಿ ಒಂದು ಭಯಂಕರ ಸುಳ್ಳು ಹೇಳಿದ್ದ. ಆದರೆ ಒಂದೇ ವಾರದಲ್ಲಿ ಆ ಸುದ್ದಿ ಗುಟ್ಟಾಗಿ ಇವನ ಕಿವಿಗೇ ಬೀಳಬೇಕೆ. ಈತ ಮೊದಲು ಹೇಳಿದ್ದ ಗಿರಾಕಿಯನ್ನು ಹುಡುಕಿ ಆಕ್ಷೇಪಿಸಿದ.

ಸುಳ್ಳು ಹೇಳಿ ಯಾರಿಗೂನೂ
*ಹೇಳಬೇಡ ಎಂದರೂ*
ಎಲ್ಲ ಮಂದಿಗೂನೂ ನೀನು
*ಹೇಳಿಕೊಂಡು ಬಂದೆಯಾ ?*

ಆದರೆ ಎರಡನೆಯವನು ಈ ಸಲ ಮಾತ್ರ ಪ್ರಾಮಾಣಿಕವಾಗಿ ತನ್ನ ಅನ್ನಿಸಿಕೆಗಳನ್ನು ತಿಳಿಸಿದ.

*ಶುದ್ಧ ಸುಳ್ಳು ! ಎಲ್ಲ ಮಂದಿ*
*ಗೆಂತು ಪೇಳಲಪ್ಪುದೈ ?*
*ದಾರಿಯಲ್ಲಿ ಸಿಕ್ಕ ಮಂದಿ*
*ಗಷ್ಟೆ ಪೇಳ್ದುದುಂಟು ನಾಂ.*

ಅವನ ಪ್ರಾಮಾಣಿಕತೆಗೆ ನಗಬೇಕೋ ಸುಳ್ಳಿನ ಪ್ರಬಲ ಪ್ರಸಾರ ಶಕ್ತಿಗೆ ಬೆಚ್ಚಬೇಕೋ ಇನ್ನೂ ನನಗೆ ಅರ್ಥವಾಗಿಲ್ಲ. ಆದರೆ ಯಾರೂ ಹೆದರಬೇಕಾಗಿಲ್ಲ. ಈ ಪವಿತ್ರ ಭರತ ಭೂಮಿಯಲ್ಲಿ ವೈದ್ಯರು, ವಕೀಲರು, ಭಾಷಣಕಾರರು, ಬಜೆಟ್ ಮಂಡಕರು, ಅಂಕಿ ಅಂಶ ಇಲಾಖೆಯವರು ಜೀವಂತವಾಗಿರುವ ತನಕ ಈ ಅಮೂಲ್ಯ ನಿಧಿಗೆ ಅಪಾಯವಿಲ್ಲ. ಆದುದರಿಂದ ಜಿ. ಎಸ್. ಶಿವರುದ್ರಪ್ಪನವರಂತೆ




*ಆದರ್ಶ... ಗೀದರ್ಶ*
*ಬರಿ ಬಣಗು ಕಂಥೆ*
*ಪುಸ್ತಕದ ಬದನೆಕಾಯ್*
*ತಿನ್ನುವುದಕೆ ಬಂತೆ ?*

ಎಂದುಕೊಂಡು ಕೈಬಿಡುವುದು ಒಳ್ಳೆಯದು. 'Religions of the East' ಎಂಬ ಗ್ರಂಥದಲ್ಲಿ ಶ್ನೆಡರ್ ಕೇಳಿರುವ ''ಮನುಷ್ಯ ಸತ್ಯವನ್ನು ಎಷ್ಟು ಅರ್ಥಮಾಡಿಕೊಳ್ಳಬಲ್ಲ, ಸತ್ಯವನ್ನು ಎಷ್ಟು ತಡೆದುಕೊಳ್ಳಬಲ್ಲ' ಎಂಬ ಪ್ರಶ್ನೆಗೆ ಉತ್ತರ ಕಂಡುಕೊಂಡರೆ ಸುಳ್ಳಿನ ತವರುಮನೆಯನ್ನು ಶೋಧಿಸಬಹುದು.

*ಗರ್ಭವಿದ್ದಂಗನೆಗೆ*
*ಒಮ್ಮೆ ಸಂಭ್ರಮವಲ್ಲದೆ*
*ಗರ್ಭಗರ್ಭಕ್ಕೊಮ್ಮೆ*
*ಸಂಭ್ರಮವಿಲ್ಲ ನೋಡಾ*

ಎಂಬ ಸಿದ್ಧರಾಮನ ವಚನವನ್ನು ಸುಳ್ಳಿಗರಿಗೆ ಅನ್ವಯಿಸಿ ಅವರು ಮತ್ತೆ ಸುಳ್ಳು ಹೆರುವಾಗ ಸಂಭ್ರಮಿಸುವುದಿಲ್ಲ ಎಂದು ಭಾವಿಸಬೇಡಿ. ಪ್ರತಿ ಬಾರಿಯೂ ಹೊಸ ಹೊಸ ಬಗೆಯ ಸುಳ್ಳುಗಳನ್ನೇ ಹೆರುತ್ತೇವೆಂಬ ನಂಬಿಕೆ ಅವರಿಗಿರುವುದರಿಂದ ಅವರ ಸುಳ್ಳುತ್ಸಾಹ ನಂದುವುದೇ ಇಲ್ಲ.

ಆದರೆ ಯಾರನ್ನಾದರೂ 'ಸುಳ್ಳುಗಾರ-ಸುಳ್ಳುಗಾರ್ತಿ' ಎಂದು ಧೈರ್ಯವಾಗಿ ಹೇಳಿ ನೋಡೋಣ. ನೀವು ಯುದ್ಧಪ್ರಿಯರು ಎಂದು ಅಮೆರಿಕನ್ನರಿಗೆ ಹೇಳಿದರೆ ಅವರಿಗೆ ಎಷ್ಟು ಕೋಪ ಬರುತ್ತದೋ ಅಷ್ಟು ಕೋಪ ಸುಳ್ಳಿನ ಮಾಲಿಕರಿಗೆ ಬರುತ್ತದೆ. ನೀನು ಸ್ವಾರ್ಥಿ ಎಂದು ರಾಜಕಾರಣಿಗೆ ಹೇಳಲಾದೀತೆ ? ಜ್ಯೋತಿಷಿಗಳ ಸುಳ್ಳಿನ ಬಗೆಗೆ ತೆಲುಗಿನಲ್ಲಿ ಒಂದು ಕಥೆಯೇ ಇದೆ. ಜ್ಯೋತಿಷಿಗಳು ವಾಸ್ತವವಾಗಿ ಭವಿಷ್ಯ ಬಲ್ಲವರು. ಆದರೆ ಪಾರ್ವತಿಯ ಶಾಪದಿಂದಾಗಿ ಅವರ ಹೇಳಿಕೆಗಳೆಲ್ಲ ಸತ್ಯದಿಂದ ನಾಲ್ಕು ಅಂಗುಲ ಆಚೆ ಅಥವಾ ನಾಲ್ಕು ಅಂಗುಲ ಈಚೆ ಇರುತ್ತವೆ ಅಷ್ಟೇ !

ಹಸನು ಮಾಡಿ ಹರಗಿದ ಹೊಲದಲ್ಲಿ ಮರುಳರು ಕಸ ಬಿತ್ತುವಂತೆ ದುಷ್ಟರು ಹುಸಿಯನ್ನು ಬಿತ್ತುತ್ತಾರೆ ಎಂದು ಒಬ್ಬ ವಚನಕಾರ ಹೇಳಿದ್ದಾನೆ. ಆದರೆ ಕೆಲವರು ಸತ್ಯವನ್ನು ಸುಳ್ಳಿಗೆ ಬೆರೆಸಿ ಹೇಳುವ ಸಂಕರ ಪದ್ಧತಿಯನ್ನು ಒಲ್ಲದ ಶುದ್ಧವಾದಿಗಳು. ಆದುದರಿಂದ ಸತ್ಯವನ್ನು ಬೆರೆಸುವ ಪಾಪಕ್ಕೆ ಕೈಹಾಕದೆ ಶುದ್ಧವಾದ ಸುಳ್ಳಿನ ಪಾವಿತ್ರ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ.

*ಮಕ್ಕಳ ತೊಟ್ಟಿಲ ಮೇಲೆ*
*ಕಟ್ಟಿದ ಕೆಂಪು ಹಣ್ಣಿರ್ದು*
*ನಿಲುಕಲು ಬಾರದು*

ಎಂಬಂತೆ ಸತ್ಯದ ಕೆಂಪು ಹಣ್ಣನ್ನು ದೂರದಿಂದ ನೋಡಿ ಸಂತಸಪಡುವುದಕ್ಕೆ ಮಾತ್ರ ನಮಗೆ ಅವಕಾಶವಿದೆಯೇ ಹೊರತು ಅದನ್ನು ಎಟುಕಿಸಿಕೊಳ್ಳಲು ಅವಕಾಶವಿಲ್ಲ.

ಅ. ರಾ. ಮಿತ್ರ
ಬಿ - ೬, ಕೆ ಎಚ್ ಬಿ ಕಾಲನಿ, ಪುಟ್ಟೇನಹಳ್ಳಿ, ಯಲಹಂಕ, ಬೆಂಗಳೂರು - ೫೬೦ ೦೬೪



ಸ್ಥಾಪನೆ: 1946

ಗಾಂಧೀಜಿಯವರ ಕರೆ, ನೆಹರೂರವರ ವೈಜ್ಞಾನಿಕ ದೃಷ್ಟಿಕೋನ
ಸ್ವಾತಂತ್ರ್ಯ ಹೋರಾಟಗಾರರ ಶ್ರಮ - ತ್ಯಾಗ
ಸಹ್ಯಾದ್ರಿ ಮಡಿಲಿನ ಮಲೆನಾಡು ಪ್ರಾಂತದ ವಿದ್ಯಾಕ್ಷೇತ್ರ.

# ರಾಷ್ಟ್ರೀಯ ಶಿಕ್ಷಣ ಸಮಿತಿ (ರಿ.)


ಬಾಲರಾಜ್ ಅರಸ್ ರಸ್ತೆ ಶಿವಮೊಗ್ಗ 577201

ಫೋನ್: 273469, 272178. ಫ್ಯಾಕ್ಸ್: 08182-222450

ವೆಬ್‌ಸೈಟ್:www.nes-shimoga.org www.jnnce.ac.in ಇ-ಮೈಲ್:nescec@sancharnet.in


1. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1946
2. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1954
3. ರಾಷ್ಟ್ರೀಯ ಹಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ 1956
4. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, (ಪ್ರೌಢಶಾಲಾ ವಿಭಾಗ) ಕೋಣಂದೂರು. 1960
5. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಬಿ.ಆರ್. ಪ್ರಾಜೆಕ್ಟ್. 1962
6. ಜಯಪ್ರಕಾಶ್‌ನಾರಾಯಣ ಪದವಿ ಪೂರ್ವ ಕಾಲೇಜು (ಪ್ರೌಢಶಾಲಾ ವಿಭಾಗ) ಶಿವಮೊಗ್ಗ 1963
7. ರಾಷ್ಟ್ರೀಯ ಶಿಕ್ಷಣ ಮಹಾವಿದ್ಯಾಲಯ, ಶಿವಮೊಗ್ಗ. 1963
8. ರಾಷ್ಟ್ರೀಯ ಪ್ರೌಢಶಾಲೆ, ಚೀಲೂರು. 1964
9. ರಾಷ್ಟ್ರೀಯ ಪ್ರೌಢಶಾಲೆ, ಕುಂಸಿ. 1964
10. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪ್ರೌಢಶಾಲೆ, ಬೆಳಗುತ್ತಿ. 1964
11. ಶ್ರೀ ಪದ್ಮಾಂಬ ಪ್ರೌಢಶಾಲೆ, ಹುಂಚ. 1964
12. ಕಮಲಾ ನೆಹರು ಸ್ಮಾರಕ , ರಾಷ್ಟ್ರೀಯ ಕಲಾ, ವಾಣಿಜ್ಯ ಮತ್ತು ವಿಜ್ಞಾನ ಮಹಿಳಾ ಕಾಲೇಜು, ಶಿವಮೊಗ್ಗ 1965
13. ಆಚಾರ್ಯ ತುಳಸಿ ರಾಷ್ಟ್ರೀಯ ವಾಣಿಜ್ಯ ಕಾಲೇಜು, ಶಿವಮೊಗ್ಗ 1966
14. ರಾಷ್ಟ್ರೀಯ ಕಾನೂನು ಕಾಲೇಜು, ಶಿವಮೊಗ್ಗ 1966
15. ರಾಷ್ಟ್ರೀಯ ಸಂಜೆ ವಾಣಿಜ್ಯ ಕಾಲೇಜು, ಶಿವಮೊಗ್ಗ. 1968
16. ರಾಷ್ಟ್ರೀಯ ಔಷಧ ಮಹಾವಿದ್ಯಾಲಯ, ಶಿವಮೊಗ್ಗ 1969
17. ಶರಾವತಿ ರಾಷ್ಟ್ರೀಯ ಪ್ರೌಢಶಾಲೆ, ಹರಿಗೆ. 1969
18. ಶಾರದಾದೇವಿ ಬಾಲಿಕ ಪ್ರೌಢಶಾಲೆ , ಶಿವಮೊಗ್ಗ 1970
19. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು,ಶಿವಮೊಗ್ಗ 1972
20. ಕಸ್ತೂರಬಾ ಬಾಲಿಕಾ ಪದವಿ ಪೂರ್ವ ಕಾಲೇಜು. ಶಿವಮೊಗ್ಗ 1972
21. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಕೋಣಂದೂರು. 1972
22. ಜವಾಹರಲಾಲ್‌ನೆಹರು ರಾಷ್ಟ್ರೀಯ ತಾಂತ್ರಿಕ ಮಹಾವಿದ್ಯಾಲಯ, ಶಿವಮೊಗ್ಗ 1980
23. ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬಿ.ಆರ್.ಪ್ರಾಜೆಕ್ಟ್. 1983
24. ಶರಾವತಿ ಪ್ರಥಮ ದರ್ಜೆ ಕಾಲೇಜು, ಕೋಣಂದೂರು. 1983
25. ರಾಷ್ಟ್ರೀಯ ಕಿರಿಯ ಪ್ರಾಥಮಿಕ ಶಾಲೆ, ಶಿವಮೊಗ್ಗ 1983
26. ಇಂಡಿಯನ್ ಪ್ರೌಢಶಾಲೆ, ಶಿವಮೊಗ್ಗ. 1983
27. ಜಯಪ್ರಕಾಶನಾರಾಯಣ ಪದವಿ ಪೂರ್ವ ಕಾಲೇಜು, ಶಿವಮೊಗ್ಗ 1984
28. ಎಸ್.ಆರ್.ನಾಗಪ್ಪ ಶೆಟ್ಟಿ ಸ್ಮಾರಕ ರಾಷ್ಟ್ರೀಯ ಅನ್ವಯಿಕ ವಿಜ್ಞಾನ ಕಾಲೇಜು, ಶಿವಮೊಗ್ಗ. 1991
29. ಶ್ರೀ ತೀರ್ಥಲಿಂಗೇಶ್ವರ ರಾಷ್ಟ್ರೀಯ ಪದವಿ ಪೂರ್ವ ಕಾಲೇಜು, ಬೆಳಗುತ್ತಿ 1994
30. ಎನ್.ಇ.ಎಸ್. ಕಂಪ್ಯೂಟರ್ ಶಿಕ್ಷಣ ಕೇಂದ್ರ, ಶಿವಮೊಗ್ಗ 1998
31. ರಾಷ್ಟ್ರೀಯ ಸ್ವತಂತ್ರ ವಸತಿ ವಿಜ್ಞಾನ ಕಾಲೇಜು, ಕೋಣಂದೂರು. 2000



Ramadhyani / S.B.WEB-VISION

## ಸಾಹಿತ್ಯ-ಸಂಸ್ಕೃತಿ; ಅನನ್ಯತೆ

ಸಾಮ್ರಾಜ್ಯಗಳು, ಬ್ರಿಟಿಷರು, ಪ್ರಾಯಃ ಆಳಿದ ಎಲ್ಲರೂ ಅವರವರಿಗೆ ಬೇಕಾದಂತೆ ಹರಿದು ಹಂಚಿಕೊಂಡ ನಾಡು ಭಾಷಿಕನೆಲೆಯಲ್ಲಾದರೂ ಒಂದಾಗಬೇಕೆಂಬ ಜನಾಭಿಪ್ರಾಯದ ಹಿಂದೆ ನೆಲ-ನುಡಿ, ಸಂಸ್ಕೃತಿಗೆ ಸಂಬಂಧಿಸಿದಂತೆ ಮಹತ್ವಾಕಾಂಕ್ಷೆಯೊಂದು ಕೆಲಸ ಮಾಡುತ್ತಿತ್ತು. ಆಂಧ್ರ, ಕರ್ನಾಟಕಗಳೆರಡೂ ಈ ದಿಕ್ಕಿನಲ್ಲಿ ವಿಶೇಷವಾದ ಪ್ರಯತ್ನ ನಡೆಸಿದವು.

ಕರ್ನಾಟಕ ಏಕೀಕರಣದ ಬೇಡಿಕೆಯು ಆಂಧ್ರದ ಪೊಟ್ಟಿ ಶ್ರೀರಾಮುಲು ಅವರ ವಿಶಾಲಾಂಧ್ರದ ಬೇಡಿಕೆ, ಅದಕ್ಕಾಗಿ ನಡೆಸಿದ ತೀವ್ರ ಹೋರಾಟದ ಹಿನ್ನೆಲೆಯಲ್ಲಿ ಮತ್ತಷ್ಟು ಗಟ್ಟಿಗೊಂಡಿತ್ತು. ಈ ಅಪೇಕ್ಷೆ ಸ್ವಾತಂತ್ರ್ಯಾನಂತರದ್ದಲ್ಲ, ಬಹಳ ಹಿಂದಿನಿಂದಲೂ ಅಂಥದೊಂದು ಅಪೇಕ್ಷೆ ನಾಡು ಕಟ್ಟುವವರ ಮನಸ್ಸಿನಲ್ಲಿ ಇತ್ತು. ಸೈಮನ್ ಕಮಿಷನ್‌ನ ಮುಂದೆಯೇ ಈ ಪ್ರಸ್ತಾಪ ತಂದು ಒತ್ತಾಯಿಸುವ ಪ್ರಯತ್ನಗಳು ಸೈಮನ್ ಕಮಿಷನ್ ಅನ್ನೇ ಬಹಿಷ್ಕರಿಸುವವರನ್ನು ಬೆಂಬಲಿಸಬೇಕಾದ ಅನಿವಾರ್ಯ ಸಂದರ್ಭದಿಂದಾಗಿ ನೆನೆಗುದಿಗೆ ಬಿದ್ದಿತು. ಆದರೆ ಕರ್ನಾಟಕ ಪ್ರಾಂತದ ಪರಿಕಲ್ಪನೆ, ವಿಶಿಷ್ಟವಾದ ಕನ್ನಡ ಪ್ರಜ್ಞೆ ಅಂತರ್ಗತವಾಗಿ ಇದ್ದೇ ಇದ್ದಿತು. ಇದನ್ನು ಪ್ರಧಾನವಾಗಿ ಕೈಗೆತ್ತಿಕೊಂಡವರು ಮೈಸೂರು ರಾಜ್ಯದ ಹೊರಗಿನ ಪ್ರದೇಶಗಳವರು. ಅವರೊಂದಿಗೆ ತಾವೂ ಇರಬಯಸಿದ ಮೈಸೂರು ಪ್ರದೇಶದವರು ಜವಾಬ್ದಾರಿ ಸರ್ಕಾರ ಬಂದ ಮೇಲೆ ಅಂಥ ಪ್ರಯತ್ನವನ್ನು ಒಪ್ಪದಿರುವ ವಿರೋಧಾಭಾಸವೂ ಒದಗಿಬಂದಿತ್ತು! ಕರ್ನಾಟಕ ಏಕೀಕರಣದ ಒತ್ತಾಯ ಒಂದು ದೊಡ್ಡ ಚಳವಳಿಯ ರೂಪ ಪಡೆದುಕೊಂಡದ್ದು, ಮಹನೀಯರನೇಕರು ಇದಕ್ಕಾಗಿ ಹೋರಾಡಿದ್ದು ಇಂದು ಇತಿಹಾಸ. ಭಾಷಾವಾರು ಪ್ರಾಂತಗಳ ವಿಂಗಡಣೆಗೆ ಅಷ್ಟೇನೂ ಒಲವು ತೋರಿಸದಿದ್ದ ಜವಹರಲಾಲ್ ನೆಹರೂ ಅವರನ್ನು ಬಹು ಪ್ರಯಾಸದಿಂದಲೇ ಭೇಟಿಮಾಡಿ ಅವರ ಮನಸ್ಸು ಈ ವಿಂಗಡಣೆಯ ಅನುಕೂಲಗಳತ್ತ ಗಮನಹರಿಸುವಂತೆ ಮಾಡಿದ ಮಹಾ ಸಾಹಸಿ ಶ್ರೀರಂಗರು. 'ಭಾಷಾನ್ವಯ ಪ್ರಾಂತೀಕರಣ ಪ್ರಜಾಪ್ರಭುತ್ವಕ್ಕೆ ಅಗತ್ಯ. ಇಲ್ಲವಾದರೆ ಬ್ರಿಟಿಷರ ಕಾಲದಲ್ಲಿಯಂತೆ ಆಳುವವರು ಅರಸರು, ಪ್ರಜೆಗಳು ದಾಸರು ಎಂಬ ವಾತಾವರಣ ಖಂಡಿತ. ಸದ್ಯಕ್ಕಿದ್ದ ಅವಸ್ಥೆಯಲ್ಲಿ ನಾವು ಎಲ್ಲ ಕಡೆಗಳಲ್ಲೂ ಅಲ್ಪಸಂಖ್ಯಾತರು; ಇಷ್ಟೆ ಅಲ್ಲ, ಪ್ರಜಾಪ್ರಭುತ್ವ ತತ್ವಕ್ಕೆ ವಿರುದ್ಧವಾಗಿ ಎಂದಿಗೂ ಬಹುಸಂಖ್ಯಾತರಾಗದ ಶಾಶ್ವತ ಅಲ್ಪ ಸಂಖ್ಯಾತತ್ವ ನಮ್ಮದು. ಈ ಶಾಶ್ವತ ಅಲ್ಪ ಸಂಖ್ಯಾಕತೆಯ ದುರ್ಗುಣ ನಮ್ಮಲ್ಲೂ ಬಂದು ಮುಂಬಯಿಯಲ್ಲಿ ಮರಾಠೀ-ಗುಜರಾತಿಯವರಲ್ಲಿ, ಮದ್ರಾಸದಲ್ಲಿ ತಮಿಳು-ಆಂಧ್ರರಲ್ಲಿ ಜಗಳವನ್ನು ಹುಟ್ಟಿಸುವ ಚಾತುರ್ಯ ಬರತೊಡಗಿದೆ...' ಎಂದು ವಾದ ಮಂಡಿಸಿದ ಶ್ರೀರಂಗರ ಮಾತಿಗೆ ಗಮನ ಕೊಟ್ಟ ನೆಹರೂ ಅವರು '...ಇದು ನನಗೆ ಹೊಳೆದಿರಲಿಲ್ಲ. ಆದರೆ, ಮೈಸೂರನ್ನು ಬಿಟ್ಟು ಉಳಿದ ಕರ್ನಾಟಕವು ಆರ್ಥಿಕವಾಗಿ ತನ್ನ ಕಾಲ್ಗಳ ಮೇಲೆ ತಾನು ನಿಲ್ಲಲು ಸಮರ್ಥವಿದೆಯೆ?' ಎಂದರು. ಆನಂತರ ಆ ಕುರಿತ ಮಾಹಿತಿಯನ್ನೆಲ್ಲ ಗಮನಿಸಿ ಅದೇ ದಿನ ಭಾಷಾನ್ವಯ ಪ್ರಾಂತರಚನೆಯ ಬಗ್ಗೆ ವರದಿ ಮಾಡಲು ಎಂಟು ಜನರ ಉಪಸಮಿತಿಯನ್ನೇ ರಚಿಸಿದರು. ಇದು ನಡೆದದ್ದು ೧೯೪೬ನೇ ಡಿಸೆಂಬರ್‌ನಲ್ಲಿ.

# ಸುವರ್ಣ ಕರ್ನಾಟಕ ಸಾಹಿತ್ಯ - ಸಂಸ್ಕೃತಿ

## ಹೋರಾಟ ಇನ್ನೂ ಇದೆ ; ಇನ್ನೂ ಇದೆ ಸಾಧನಾ

ಕರ್ನಾಟಕವು ಒಂದು ರಾಜ್ಯವಾಗಿ ಅವತರಿಸಿ ಐವತ್ತು ವರ್ಷಗಳು ಕಳೆದಿವೆ. ನಮ್ಮ ರಾಜ್ಯದ ಎಲ್ಲೆಗಳು ಇನ್ನೂ ವಿಸ್ತಾರವಾಗಿರಬೇಕೆಂಬ ಮಾತು ಕೇಳಿ ಬರುವಂತೆ, ಅವನ್ನು ಕುಗ್ಗಿಸಬೇಕೆಂಬ ಇರಾದೆಯೂ ಆಗಾಗ್ಗೆ ಪ್ರಕಟವಾಗುವುದುಂಟು. ಕನ್ನಡ ಭಾಷೆಯ ಪ್ರಾಚೀನತೆಯಿಂದಾಗಿ ಅದಕ್ಕೆ 'ಶಾಸ್ತ್ರೀಯ' ಎಂಬ ಮನ್ನಣೆ ದೊರಕಬೇಕೆಂಬ ಆಶಯ ಕಳೆದ ಕೆಲವು ತಿಂಗಳುಗಳಲ್ಲಿ ಗಂಭೀರವಾಗಿ ಅಭಿವ್ಯಕ್ತವಾಗಿದೆ. ಅದೇ ಸಮಯದಲ್ಲಿ, ಇನ್ನಷ್ಟು ವರ್ಷಗಳಲ್ಲಿ ನಮ್ಮ ಭಾಷೆ ಕೇವಲ ಗ್ರಂಥಸ್ಥವಾಗಿಬಿಡುವುದೆಂಬ ಆತಂಕವನ್ನು ವ್ಯಕ್ತಪಡಿಸುವವರೂ ಇದ್ದಾರೆ. ಸಾವಿರಾರು ವರ್ಷಗಳ ಇತಿಹಾಸವಿರುವ ಕರ್ನಾಟಕಕ್ಕೆ ಐವತ್ತು ವರ್ಷಗಳು ಅಷ್ಟೇನೂ ಹೆಚ್ಚಲ್ಲವೆನಿಸಿದರೂ ಅವು ಮಹತ್ವದ ವರ್ಷಗಳೆಂದು ಖಂಡಿತವಾಗಿ ಹೇಳಬಹುದು. ಚಿನ್ನದ ನಡಗೆ ಆರಂಭಿಸಿರುವ ನಮ್ಮ ರಾಜ್ಯವು ತನ್ನ ಸಾಧ್ಯತೆಗಳನ್ನೆಲ್ಲಾ ಸಿದ್ಧಿಸಿಕೊಂಡಿಲ್ಲ. ಅದಕ್ಕೆ ಬೇಕಾದ ಯೋಜನೆ ಮತ್ತು ಕ್ರಿಯಾಶಾಲಿತ್ವ ಇಂದಿನ ತುರ್ತು ಅಗತ್ಯಗಳು. ಸಾಹಿತ್ಯ - ಸಂಸ್ಕೃತಿ ಕ್ಷೇತ್ರಗಳಲ್ಲಿ ನಮ್ಮ ರಾಜ್ಯವು ಅಸಾಧಾರಣವಾಗಿಯಲ್ಲದಿದ್ದರೂ ಗಮನಾರ್ಹವಾಗಿ ಮುನ್ನಡೆ ಸಾಧಿಸಿದೆ. ಅದರ ಪಕ್ಷಿನೋಟವನ್ನಿಲ್ಲಿ ಪರಿಣತರು ನೀಡಿದ್ದಾರೆ. ಅವರಿಗೆ ಹಾಗೂ ಈ ವಿಭಾಗವನ್ನು ಸಂಯೋಜಿಸಿ ಸಂಪಾದಿಸಿಕೊಟ್ಟಿರುವ ಡಾ|| ವಿಜಯಾ ಅವರಿಗೆ 'ಹೊಸತು' ಕೃತಜ್ಞತೆಯನ್ನು ಸಲ್ಲಿಸುತ್ತದೆ.



ಮುಂದೆ ಕರ್ನಾಟಕ ಏಕೀಕರಣವಾದದ್ದು ಇತ್ಯಾದಿ ಇತಿಹಾಸ.

ಇದೇ ಹೊತ್ತಿನಲ್ಲಿ ಭಾಷೆಯಲ್ಲೊಂದು ಏಕರೂಪತೆಯ ಅಗತ್ಯದ ಬಗ್ಗೆ ಸಾಕಷ್ಟು ಚರ್ಚೆಯಾಗುತ್ತಿತ್ತು. ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕನ್ನಡವೇ ಬಳಕೆಯಲ್ಲಿರುವ ಹಿನ್ನೆಲೆಯಲ್ಲಿ ಈ ಪ್ರಮಾಣ ಕನ್ನಡವೊಂದರ ಅಗತ್ಯವಿದೆ ಎಂದು ಹಿರಿಯರು ಯೋಚಿಸಿದರು. ಭಾಷಾವಾರು ಪ್ರಾಂತ ವಿಭಜನೆಯ ಅಗತ್ಯದ ಪ್ರತಿಪಾದನೆಯ ಜೊತೆಗೆ ಪ್ರಮಾಣ ಭಾಷೆಯ ಚಿಂತನೆಯೂ ನಡೆಯಿತು. 'ಕನ್ನಡದ ಆಡುಮಾತಿನ ವೈವಿಧ್ಯಗಳು ಅದರ ಬೆಳವಣಿಗೆಗೆ ಅಡ್ಡಿಯಾಗಬಾರದು. ಪ್ರಮಾಣ ಕನ್ನಡವೊಂದನ್ನು ಬರೆಹದ ಭಾಷಾ ರೂಪವಾಗಿ ಚರ್ಚಿಸುವ ಅಗತ್ಯವಿದೆ...' ಎಂದು ಬಿ.ಎಂ.ಶ್ರೀ. ೧೯೧೧ರಲ್ಲೇ ಪ್ರತಿಪಾದಿಸಿದ್ದರು.

ಶ್ರೀರಂಗರು, ಶಿವರಾಮ ಕಾರಂತರು ಸಮೂಹ ಮಾಧ್ಯಮಗಳಿಗೂ ಹೀಗೊಂದು ಪ್ರಮಾಣಿತ ಭಾಷೆಯ ಅಗತ್ಯವಿದೆಯೇ ಅಥವಾ ಆಯಾ ಪ್ರದೇಶದ ಆಡುಮಾತನ್ನೇ ಬಳಸಿಕೊಳ್ಳಬೇಕೇ ಎಂದು ಚರ್ಚೆ ಮಾಡಿದ್ದಾರೆ. ಪ್ರಾದೇಶಿಕ ಆಡುನುಡಿಯ ಸೊಗಡು, ಲಯವನ್ನು ಉಳಿಸಿಕೊಂಡೂ ಪ್ರಮಾಣಿತ ಬರೆಹದ ಭಾಷೆಯೊಂದನ್ನು ಕಟ್ಟುವ ಪ್ರಯತ್ನವನ್ನು ಮಾಡಿದ ಶ್ರೀರಂಗರು, ಶಿವರಾಮ ಕಾರಂತ ಮೊದಲಾದವರು ಭಾಗಶಃ ಯಶಸ್ವಿಯೂ ಆದರು. ಕನ್ನಡ ಭಾಷಿಕರಿರುವ ಪ್ರಾಂತಗಳೆಲ್ಲ ಒಂದೇ ಆಡಳಿತ ವ್ಯಾಪ್ತಿಗೊಳಪಡುವ ಸಂದರ್ಭದಲ್ಲಿ ಸಂವಹನದ ಸಾಧ್ಯತೆಗಳು ಕೈತಪ್ಪಿ ಹೋಗಬಾರದು ಮತ್ತು ಅದೇ ಕಾರಣಕ್ಕಾಗಿ ಕನ್ನಡ ಭಾಷಿಕರು ದ್ವೀಪಗಳಾಗದಿರಲಿ ಎಂಬ ಮುನ್ನೆಚ್ಚರಿಕೆಯೂ ಈ ತುಡಿತದ ಹಿಂದೆ ಕೆಲಸ ಮಾಡಿರಬೇಕು.

ಏಕೀಕರಣ ಅಥವಾ ಈ ಭಾಷಾವಾರು ಪ್ರಾಂತಗಳ ರಚನೆಯೇ ನಾಡಿನ ಎಲ್ಲ ಬೆಳವಣಿಗೆಗೆ ಕಾರಣವಾಯಿತೇ ಎಂಬುದು ಚರ್ಚೆಗೆ ಒಡ್ಡುವಂಥ ಸಂಗತಿ. ಈ ನಾಡಿನ ಸಾಹಿತ್ಯ, ಸಂಸ್ಕೃತಿಯ ಮೇಲೆ ಏಕೀಕರಣ ಪ್ರಭಾವಿಸಿತೆ? ಈ ಐವತ್ತು ವರ್ಷಗಳಲ್ಲಿ ಸಾಹಿತ್ಯ-ಕಲೆಗಳು ಕಂಡುಕೊಂಡಿರಬಹುದಾದ ಪ್ರಾದೇಶಿಕ ಅನನ್ಯತೆ ಯಾವುದು? ಆಗಿರುವ, ಆಗದೆ ಉಳಿದ ಕಾರ್ಯಗಳಿಗೆ ಈ ಭಾಷಾವಾರು ಪ್ರಾಂತರಚನೆ ಎಷ್ಟುಮಟ್ಟಿಗೆ ಕಾರಣವಾಗುತ್ತದೆ ಎಂಬ ಹಿನ್ನೆಲೆಯಲ್ಲಿ ಒಂದು ಅವಲೋಕನದ ಅಗತ್ಯ ಕಂಡುಬಂದಿತು.



'ಹೊಸತು' ಪತ್ರಿಕೆಗಾಗಿ ವಿವಿಧ ಕ್ಷೇತ್ರದ ಗಣ್ಯರು ಸಾಹಿತ್ಯ-ಸಂಸ್ಕೃತಿ ಕುರಿತು ಚಿಂತನ ನಡೆಸಿದ್ದಾರೆ. ಏಕೀಕರಣವಾದ ಐವತ್ತು ವರ್ಷಗಳು ಎಂಬುದು ಅನೇಕ ಸಂದರ್ಭದ ಒಂದು ಕಾರಣವೋ ನೆಪವೋ ಮಾತ್ರ ಆಗಬಹುದು. ಚಲನಶೀಲವಾದ ಸಂಸ್ಕೃತಿ, ಕಲೆ ಸಾಹಿತ್ಯಗಳು ಯಾವುದಕ್ಕೂ ಕಾಯುವಂಥವಲ್ಲ. ಯಾವುದೇ ಚೌಕಟ್ಟಿನ ಪರಿಧಿಗೆ ಕಟ್ಟುಪಾಡಿಗೆ ಬಾರದ ಕಾಲ ದೇಶಾತೀತವಾಗಿ ಸಾಗುವ ಪ್ರಕಾರಗಳಿವು. ಹಾಗಿದ್ದೂ ಇಂಥದೊಂದು ಪ್ರಕ್ರಿಯೆಗೆ ಅಥವಾ ತನ್ನ ನೆಲದ ಜಾಯಮಾನವನ್ನು ಒಳಗೊಂಡ ಅಸ್ಮಿತೆಯನ್ನು ತೋರುವ ಪ್ರಯತ್ನಗಳು ಯಾದೃಚ್ಛಿಕವಾಗಿಯೋ ಒಂದು ಪ್ರಯೋಗವೆಂದೋ ಆಗಿರುವ ಸಾಧ್ಯತೆಗಳೂ ಇವೆ.

'ಭಾಷೆ ಮತ್ತು ಸಂಸ್ಕೃತಿ ಒಂದನ್ನೊಂದು ಅವಲಂಬಿಸಿರುತ್ತವೆ. ಭಾಷೆಯು ಈ ದೃಷ್ಟಿಯಿಂದ ಸಂಸ್ಕೃತಿಯೊಂದರ ಪರಿಪೂರ್ಣ ಸಂಪರ್ಕ ಮಾಧ್ಯಮವಾಗಿದ್ದು ಅದರ ಎಲ್ಲ ಒಳಾರ್ಥ ಹೊರಾರ್ಥಗಳನ್ನೂ ವಿನಿಮಯ ಮಾಡಬಲ್ಲದ್ದಾಗಿರುತ್ತದೆ...' (ಅ. ಶ್ರೀಧರ ಸಂಕ್ರಮಣ ೩೨೫). ಈ ಹಿನ್ನೆಲೆಯಲ್ಲಿ ಡಾ.ಎಚ್.ಎಸ್. ರಾಘವೇಂದ್ರರಾಯರು ಹೇಳುವ '...ಭಾಷೆ ಎನ್ನುವುದು ಕೇವಲ ಅನುಭವಗಳಿಗೆ ತೊಡಿಸಿದ ಅಂಗಿಯಲ್ಲ, ಅದು ಹೊರ ಜಗತ್ತು – ಒಳ ಜಗತ್ತುಗಳನ್ನು ಕಟ್ಟಿಕೊಡುವ ಅಂತೆಯೇ ಸಂಹವನ ಮಾಡುವ ಸೃಷ್ಟಿಕರ್ತ...' ಎಂಬ ಮಾತನ್ನು ಗಮನಿಸಬಹುದಾಗಿದೆ.

'ಸುವರ್ಣ ಕರ್ನಾಟಕ : ಸಾಹಿತ್ಯ' ಕುರಿತು ಮಾತನಾಡುತ್ತಾ ಅದನ್ನು 'ಹಲವು ಬಣ್ಣದ ಹಕ್ಕಿ'ಗೆ ಹೋಲಿಸುವ ಲೇಖಕರು ಇಪ್ಪತ್ತನೆಯ ಶತಮಾನದ ಉತ್ತರಾರ್ಧವು ಹತ್ತಾರು ಸಂಗತಿಗಳಿಗೆ ತೆರೆದುಕೊಂಡ ಬಾಗಿಲೆಂದು ಗುರುತಿಸುತ್ತಾರೆ. ಮುಖ್ಯವಾಗಿ ಇಡೀ ಅವಲೋಕನವು '...ಅವನತಿ ಮುಖವಾಗಿ ಚಲಿಸುತ್ತಿರುವ ಸಮಾಜದ ಪ್ರಳಯ ಘೋಷಣೆ ಮಾಡುವವನಂತೆ ಮಾತನಾಡುವುದು ನನಗೆ ಇಷ್ಟವಿಲ್ಲ. ಬಿಡುಗಡೆಯನ್ನು ಪಡೆಯುತ್ತಿರುವ ಸಮುದಾಯಗಳ ಕರ್ತೃತ್ವ ಶಕ್ತಿಯಲ್ಲಿ ನನಗೆ ನಂಬಿಕೆಯಿದೆ...' ಎಂಬ ಭರವಸೆಯಿಂದಲೇ ಮಾತನಾಡುತ್ತಿರುವುದು ಮುಖ್ಯವೆನ್ನಿಸುತ್ತದೆ. ಅರೆ ಕೊರೆಗಳ ಕಾರ್ಯ ಕಾರಣ ಸಂಬಂಧವನ್ನು ಮುಕ್ತಮನಸ್ಸಿನಿಂದಲೇ ಚರ್ಚಿಸುತ್ತ ಕನ್ನಡ ಸಾಹಿತ್ಯವು ಒಟ್ಟಂದದಲ್ಲಿ ಹಲವು ತಂಗುದಾಣಗಳನ್ನು ಒದಗಿಸಿದೆ ಎಂದಿರುವುದು ಸಮಾಧಾನವನ್ನು ತರುವ ಸಂಗತಿ.

ನೃತ್ಯ ಕ್ಷೇತ್ರವನ್ನು ಕುರಿತು ಮಾತನಾಡಿರುವ ಶ್ರೀಧರ್ ಅವರು ಸ್ವತಃ ನೃತ್ಯಪಟು, ಅನೇಕ ಪ್ರಯೋಗಗಳನ್ನು ಮಾಡಿರುವವರು. ನೃತ್ಯೇತಿಹಾಸವನ್ನು ಸ್ಥೂಲವಾಗಿ ವಿವರಿಸುತ್ತಾ 'ಕಲೆಗೆ ಯಾವುದೇ ಪರಿಧಿಗಳಿಲ್ಲ' ಎಂದು ಸರಿಯಾಗಿಯೇ ಗುರುತಿಸುತ್ತಾರೆ. ಅನ್ಯಭಾಷಾ ಪ್ರಭಾವದ ಅಬ್ಬರದಲ್ಲಿ ಕರಗಿಹೋಗದೆ ತನ್ನತನವನ್ನು ಉಳಿಸಿಕೊಳ್ಳುವ ನಿರಂತರ ಪ್ರಯತ್ನಗಳನ್ನು ಕುರಿತೂ ವಿವರಿಸುತ್ತಾರೆ. ತಮಿಳುನಾಡಿನಲ್ಲಿ ಭಾಷೆಯ ಯಾಜಮಾನ್ಯ ಕಲೆಯನ್ನು ನಿಯಂತ್ರಿಸಲು ಯತ್ನಿಸಿದಾಗ ಕಲೆಗೆ ಚೌಕಟ್ಟನ್ನು ಹಾಕುವವರನ್ನು ವಿರೋಧಿಸಿದವರೂ ಇದ್ದರು; ಸ್ವಾಗತಿಸಿ ಚಂದವನ್ನುಳಿಸಿಕೊಂಡವರೂ ಇದ್ದರು. ಯಾವುದೇ ಕಲೆ ಇಕ್ಕಟ್ಟುಗಳನ್ನು ನಿವಾರಿಸಿಕೊಳ್ಳುತ್ತಲೇ ಶ್ರೇಷ್ಠವಾಗಿ ಉಳಿಯಬಲ್ಲದು ಎಂಬುದೇ ಮುಖ್ಯ. ಕರ್ನಾಟಕದಲ್ಲಿ ನೃತ್ಯ ಕಲೆಯು ತನ್ನ ಚೆಲುವನ್ನು ಬಿಟ್ಟುಕೊಡದೆಯೂ ಪ್ರಾದೇಶಿಕ ಸೊಗಡನ್ನು ತುಂಬಿಕೊಳ್ಳುವ ಪ್ರಯತ್ನ ಮಾಡಿದೆ. ಅಂಥ ಪ್ರಯತ್ನಗಳಾದಾಗ ವಿರೋಧಿಸಿದ ಮಡಿವಂತರೂ ಉಂಟು. ಕರ್ನಾಟಕದಲ್ಲಿ ಈ ಹೊತ್ತಿನವರೆಗೂ ವಿಶೇಷ ಪ್ರಯೋಗಗಳಾಗುತ್ತಲೇ ಇವೆ. ಭಾಷಿಕ ಚಳವಳಿಯಲ್ಲಿ ಅಪಾರ ವಿಶ್ವಾಸವಿರಿಸಿದ್ದ ಅ.ನ. ಕೃಷ್ಣರಾಯರು ಸಾಹಿತ್ಯ-ಚಳವಳಿಗೆ ಮಾತ್ರ ಸೀಮಿತಗೊಳಿಸದೇ ಎಲ್ಲ ಕ್ಷೇತ್ರಗಳಿಗೂ ಕನ್ನಡತನದ ಆಸಕ್ತಿಯನ್ನು ವಿಸ್ತರಿಸಿದರು. ಅವರ ಕಲೆಗಳ ಬಗೆಗಿನ ತಿಳಿವಳಿಕೆ ಕೂಡ ಅವರಿಗೆ ಆ ಅಧಿಕಾರವನ್ನು ತಂದುಕೊಟ್ಟಿದ್ದಿರಬಹುದು. ಹೀಗಾಗಿ ವಚನಗಾಯನ, ಶಾಸ್ತ್ರೀಯ ಸಂಗೀತದಲ್ಲಿ ದಾಸರ ಪದಗಳ ಅಳವಡಿಕೆ ಮೊದಲಾದ ಕಾರ್ಯಗಳು ನಡೆದವು. ಈ ಆಸಕ್ತಿ ಕರ್ನಾಟಕದ ಕಲಾವಿದರಿಗೆ ವಿಪುಲ ಅವಕಾಶ ಒದಗಿಸುವವರೆಗೆ ವಿಸ್ತರಿಸಿತು. ನೃತ್ಯಕ್ಷೇತ್ರದಲ್ಲಿ ಆಗಿರುವ ಪ್ರಯೋಗಗಳನ್ನು ಕುರಿತು ಶ್ರೀಧರ್ ವಿವರಿಸಿದ್ದಾರೆ. ಕೆಲವು ವರ್ಷಗಳ ಹಿಂದೆ ಚಿತ್ರನಟ ಲೋಕೇಶ್ ಅವರು ಅವರ ಮಗಳು ಶಿಲ್ಪಾ ಲೋಕೇಶ್ ಅವರ ರಂಗಪ್ರವೇಶ (ಅರಂಗೇಟ್ರಂ)ದ ದಿನಕ್ಕೆ ನೃತ್ಯದ ಎಲ್ಲ ಗೀತ ಭಾಗವನ್ನೂ ಕನ್ನಡಕ್ಕೆ ಅನುವಾದಿಸಿಬಿಟ್ಟಿದ್ದರು! ತಿರುವನಂತಪುರದ ಕನ್ನಡ ಸಂಘವೊಂದು ಸ್ವಾತಿ ತಿರುನಾಳ್ ಅವರ ಕೃತಿಗಳನ್ನು ಕನ್ನಡಕ್ಕೆ – ಲಯಬದ್ಧವಾಗಿಯೇ – ಅನುವಾದಿಸಿ ಪ್ರಕಟಿಸಿತು! ಮಾಯಾರಾವ್ ಅವರು ಎ.ಎನ್.ಮೂರ್ತಿರಾಯರ 'ದೇವರು' ಕೃತಿಯನ್ನು ನೃತ್ಯಕ್ಕೆ ಅಳವಡಿಸಿದರು. ಶ್ರೀಧರ್ ಅವರು ಪ್ರಸ್ತಾಪಿಸಿರುವ ಪ್ರಯೋಗಗಳು ಇವೆಲ್ಲದರ ಹಿಂದೆ



ಕನ್ನಡತನದ ಅಪೇಕ್ಷೆಯೇ ಕೆಲಸಮಾಡಿದೆ. ಆದರೆ ಅಂಥ ಪ್ರಯತ್ನಗಳೇ ಕಲೆಯ ಸರ್ವಶ್ರೇಷ್ಠತೆಗೆ ಧಕ್ಕೆಯಾಗದ ಹಾಗೆ ಎಚ್ಚರವಹಿಸಲಾಗಿತ್ತು.

ಬ್ರಿಟಿಷರನ್ನು ಕಲೆ-ಸಂಸ್ಕೃತಿಯ ಪುನರುತ್ಥಾನದ ಮೂಲಕ ಪ್ರತಿಭಟಿಸಿದರಷ್ಟೇ. ಹಾಗೆಯೇ ಈ ಪ್ರಾದೇಶಿಕತೆಯ ಸೊಗಡನ್ನು ತುಂಬಿಕೊಳ್ಳುವ ಪ್ರಕ್ರಿಯೆಯಲ್ಲೂ ಒಂದು ನುಡಿ-ನೆಲದ ಅಭಿಮಾನವೇ ಇರುತ್ತದೆ. ಶುದ್ಧವೂ ಕಲಾತ್ಮಕವೂ ಆಗಿರುವುದನ್ನು ಅಂದಗೆಡದಂತೆ ಪರಿವರ್ತಿಸಿಕೊಳ್ಳಲು ಸಾಧ್ಯವಾದರೆ ವಿರೋಧಿಸಬೇಕೆಂದೇನಿಲ್ಲವಲ್ಲ. ಶ್ರೇಷ್ಠತೆಯನ್ನು, ಸೌಂದರ್ಯವನ್ನು, ಕಳೆದುಕೊಳ್ಳದೆ ಯಾವ ಸೇರ್ಪಡೆಯಾದರೂ ಸ್ವಾಗತಾರ್ಹವೇ ಅಲ್ಲವೆ ?

ಸಂಗೀತಕಲೆಯನ್ನು ಪ್ರಸ್ತಾಪಿಸಿರುವ ಪ್ರೊ. ಮನು ಚಕ್ರವರ್ತಿ ವಿಷಯ ಪರಿಣತರು ಮತ್ತು ಖಚಿತವೂ ನಿಷ್ಠುರವೂ ಆದ ನಿಲುವಿಗೆ ಬದ್ಧರಾದವರು. ಯಾವುದೇ ರಾಜ, ಅನುಸಂಧಾನದಂಥ ಸಂಗತಿಗಳು ಶ್ರೇಷ್ಠ ಕಲೆಯನ್ನು ಬಾಧಿಸಕೂಡದೆಂಬ ಅವರ ನಿಲುವು ಮತ್ತೊಮ್ಮೆ ಇಲ್ಲಿ ಸ್ಪಷ್ಟವಾಗಿದೆ.

ಶ್ರೇಷ್ಠವಾದ ಕಲೆ, ಅದು ಎಲ್ಲಿಂದಲೇ ಬಂದಿರಲಿ ಸ್ವೀಕೃತವಾಗಬೇಕು ಎಂಬ ನಿಲುವು, ಕೃತಿಯನ್ನು ಸ್ವೀಕರಿಸಲು ಕೃತಿಕಾರನನ್ನು ಪರಿಗಣಿಸಬೇಕಿಲ್ಲ ಎಂಬ ಮಾತು ಬಹುಕಾಲದಿಂದ ಚರ್ಚೆಯಾಗುತ್ತಲೇ ಬಂದಿದೆ. ಒಂದಷ್ಟು ಅಭಿಪ್ರಾಯ ಭೇದವಂತೂ ಇದ್ದೇ ಇದೆ. ಆದರೆ ಮನು ಅವರು ಎತ್ತಿರುವ ಪ್ರಶ್ನೆಗಳೂ ಅಷ್ಟೇ ಸಂಗತವಾಗುತ್ತವೆ. ಶ್ರೇಷ್ಠ ಕಲೆಯೇ ಹಾಗೆ, ಎಲ್ಲ ಮಿತಿಗಳಾಚೆಗೆ ತನ್ನ ಅನನ್ಯತೆಯನ್ನು ಸಾಧಿಸಿಬಿಡುವಂಥದ್ದು.

ಸಂಗೀತಕ್ಕೆ ಬಂದಾಗ ಸಾಹಿತ್ಯವು ಅರ್ಥವನ್ನು ಬಿಟ್ಟುಕೊಡುವಾಗಿನ ಸಂಕಟಗಳನ್ನು ಲೇಖಕರು ಸೊಗಸಾಗಿ ಹೇಳಿದ್ದಾರೆ. ಹೊಂದಿಕೊಂಡಾಗಿನ ಸುಖ, ಇಲ್ಲದಾಗಿನ ಹಿಂಸೆ ಎರಡನ್ನೂ ಗಮನಕ್ಕೆ ತೆಗೆದುಕೊಂಡಿರುವ ರೀತಿ ಮತ್ತು ಕಲೆ ಸಾಮಾಜಿಕ ವಿಜ್ಞಾನದ ವಸ್ತುವಲ್ಲ ಎಂಬ ನಿಲುವು ತಲೆದೂಗುವಂಥದ್ದೇ. ಹಾಗಿದ್ದಾಗಲೂ ಮನ್ಸೂರರ ವಚನಗಾಯನ, ಶ್ರೀಕಂಠನ್‌ರ ಪ್ರಯೋಗಗಳು, ಕಾಳಿಂಗರಾಯದಿಂದಾರಂಭಿಸಿ ಇತ್ತೀಚಿನ ಕೆಲವು ಸುಗಮ ಸಂಗೀತ ಗಾಯಕರವರೆಗೆ ಸಾಹಿತ್ಯ-ಸಂಗೀತದ ಅಪರೂಪದ ಸಂಗಮಗಳನ್ನು ನೆನೆದಾಗ ಮನಸ್ಸು ಅರಳಿಕೊಳ್ಳುವುದೂ ಅಷ್ಟೇ ನಿಜ. ಸಾಧ್ಯವಾಗದ್ದನ್ನು ತುರುಕುವ ಬದಲು ಸಾಧ್ಯವಾಗುವಂಥದರಿಂದ ಸುಖವಿದ್ದರೆ ಆಸ್ವಾದಿಸೋಣ. ಅದು ನಮ್ಮ ನೆಲದ್ದೆಂಬ ಹೆಮ್ಮೆಗೆ ಭಾಜನವಾದರೆ ಸಂತೋಷ. ಒಡೆಯರ್ ಅವರೇ ಕೃತಿ ರಚಿಸಿದ್ದು, ಪು.ತಿ.ನ. ಮೊದಲಾದವರನ್ನು ವಾಗ್ಗೇಯಕಾರರೆಂದು ಗುರುತಿಸುವುದು ಇವೆಲ್ಲ ಅಂದಿನಿಂದ ಇಂದಿನವರೆಗೆ ಕನ್ನಡದ ಅಸ್ಮಿತೆಗಾಗಿನ ತುಡಿತವೇ ಆಗಿದೆಯಲ್ಲವೇ?

ಮನು ಅವರು ಹೇಳುವಹಾಗೆ ಕಪ್ಪು ಜನರು ಬಳಸಿಕೊಂಡ ಜಾಜ್ ಸಂಗೀತದ ಮಾದರಿಯಲ್ಲಿ ನಮ್ಮ ಕಲೆಯ ಪ್ರಕಾರಗಳನ್ನು ಬಳಸಿಕೊಂಡು ಉತ್ತರಿಸಲು ಸಾಧ್ಯವಾಗುವುದಾದರೆ ಅಥವಾ ಸಾಧ್ಯವಾಗಿಸುವ ಛಲ ಮೂಡಿದರೆ ಕನ್ನಡನುಡಿಗೆ ಮಾತ್ರವಲ್ಲ ಜಾಗತೀಕರಣದ ಕಾರಣದಿಂದ ಆಕ್ರಮಣಕ್ಕೊಳಗಾಗುತ್ತಿರುವ ಎಲ್ಲ ಅಪಾಯಗಳಿಗೂ ಉತ್ತರ ಸಿಗಬಹುದೇನೋ.

ವಿಮರ್ಶಕ, ರಂಗತಜ್ಞ ಜಿ. ಶ್ರೀನಿವಾಸಮೂರ್ತಿಯವರು ರಂಗಭೂಮಿಯು ಸಾಂಸ್ಥಿಕವಾಗುತ್ತ ನಡೆದದ್ದನ್ನು ಗುರುತಿಸುತ್ತಾರೆ. ಇದೊಂದು ಹೊಸ ನೋಟ. ಪ್ರಧಾನವಾಗಿ ರಂಗಭೂಮಿಯಲ್ಲಿ ಭಾಷೆ ಪಡೆದುಕೊಂಡ ಪಲ್ಲಟಗಳನ್ನು ಗುರುತಿಸಿದ್ದಾರೆ. ಬದಲಾಗುತ್ತಲೆ ನಡೆದ, ಆಯಾ ಸಂದರ್ಭಕ್ಕೆ ಹಿತವೆನಿಸಿದ್ದನ್ನು ಅತಿಯಾಗಿಸಿ, ಜಾಳುಜಾಳಾಗಿಸಿಕೊಳ್ಳುತ್ತಾ ನಡೆದ ರಂಗಭೂಮಿಯು ಪ್ರಯೋಗದಲ್ಲೇ ನಿಲ್ಲುತ್ತದಾಗಲೀ ಯಾವುದನ್ನೂ ಪರಂಪರೆಯಾಗಿ ಉಳಿಸಿಕೊಳ್ಳಲಾಗದೆ ಹೋದುದನ್ನು ಗುರುತಿಸುತ್ತಾರೆ. ರಾಷ್ಟ್ರೀಯತೆಯ ಹಿಂದೆ ಬಿದ್ದು, ಪ್ರಾದೇಶಿಕ ರೂಪಗಳನ್ನು ಕಟ್ಟಲಾಗದೆ ಸದಾ ಶೋಧದಲ್ಲಿ ನಿರತವಾಗುವುದೇ ರಂಗಭೂಮಿಯ ಗುಣವಾಗಿರಬಹುದೆ ಎಂದು ಚಿಂತಿಸುತ್ತಾರೆ. ಏಕೀಕೃತ ಕರ್ನಾಟಕ ಹೇಗೆ ಆಧುನಿಕ ಕರ್ನಾಟಕ ಮತ್ತು ಅದರೊಳಗೇ ರಾಷ್ಟ್ರೀಯ ಅಂತಾರಾಷ್ಟ್ರೀಯ ಮಾದರಿಗಳು ಇದ್ದರೂ ಹಲವು ಕಾರಣಕ್ಕೆ ಈ ಆಧುನಿಕತೆಯಲ್ಲಿ 'ಒಂದೇ ರೀತಿ'ಯನ್ನು ಹುಡುಕಿದ್ದಾರೆ. ಅಧಿಕಾರಶಾಹಿಯೊಂದಿಗಿನ ಸೆಣಸಾಟ, ಪ್ರಜಾಪ್ರಭುತ್ವದ ಒಲವಿನಲ್ಲಿ ರಂಗಭೂಮಿಯ ಮುನ್ನಡೆಯನ್ನು ಕಂಡಿದ್ದಾರೆ.




ಸಂಘಟನೆಗಳು ಸಾಂಸ್ಥಿಕವಾಗುತ್ತ ಸ್ಥಗಿತ ಮಾದರಿಗಳಾಗಿ ನಿಲ್ಲುತ್ತಿರುವ ಬಗ್ಗೆ ಅವರ ತೆರೆದ ಮನಸ್ಸು ಚಿಂತಿಸಿದೆ.

ಇಷ್ಟಾದರೂ ಭಾಷಾವಾರು ಪ್ರಾಂತ ರಚನೆಯಿಂದಾಗಿ ಕೆಲವು ಕೊಡುಕೊಳುವಿಕೆಗಳಾಗಿವೆ. ಕರಾವಳಿಯ ಯಕ್ಷಗಾನ ಬಯಲು ಸೀಮೆಯಲ್ಲಿ ಮೆಚ್ಚುಗೆಗಳಿಸಿದ್ದಾಗಲೀ, ಹಿಂದೂಸ್ತಾನೀ ಸಂಗೀತ ಇತ್ತಲವರಿಗೂ ಕರ್ನಾಟಕ ಸಂಗೀತ ಅತ್ತಲವರಿಗೂ ಆಪ್ತವಾಗುತ್ತಿರುವುದು ಸರಳ ಸಂಗತಿಯೂ ಅಲ್ಲ; ಆಕಸ್ಮಿಕವೂ ಅಲ್ಲ, ಎನ್ನುವ ತಜ್ಞರೂ ಇದ್ದಾರೆ. ಎಲ್ಲ ಒಳ್ಳೆಯದನ್ನೂ ಸ್ವೀಕರಿಸುವ ತೆರೆದ ಮನಸ್ಸು ಕನ್ನಡಿಗರಿಗಿದೆ. ಕರ್ನಾಟಕ ಕಲೆ ಮೈತುಂಬಿಕೊಳ್ಳಲು ಎಂದೂ ಸಂಕೋಚಪಡುವುದಿಲ್ಲ. ಏಕೀಕರಣದ ನಂತರವೇ ಪ್ರಾರಂಭವಾದ ಅಕಾಡೆಮಿ, ಸಂಸ್ಕೃತಿ ಇಲಾಖೆಯಂಥ ಸಂಸ್ಥೆಗಳು ಗಡಿನಾಡು ಹೊರನಾಡು ಕನ್ನಡಿಗರ ಸಂಘ ಸಂಸ್ಥೆ, ಶಾಲೆಗಳತ್ತ ಗಮನಹರಿಸಿದ್ದೂ ಹೌದು. ಅದರಿಂದಾಗಿ ಕನ್ನಡದ ಕೆಲಸಗಳು ಆಗಿವೆ ಎಂಬುದೂ ನಿಜ. ಏಕೀಕರಣವಾಗದಿದ್ದರೆ ಈ ಸಂಸ್ಥೆಗಳು ಉದಯಿಸುತ್ತಿರಲಿಲ್ಲವೆ ? ಎಂಬ ಪ್ರಶ್ನೆಯೂ ಇದೆ. ಖಂಡಿತಾ ಆಗುತ್ತಿತ್ತು. ಏಕೀಕರಣದಂಥ ಸಂಗತಿ ಒಂದು ದೃಷ್ಟಿಕೋನ, ಉದ್ದೇಶವನ್ನಂತೂ ಕಲ್ಪಿಸಿಕೊಟ್ಟಿತು. ಇಲ್ಲವಾದರೆ ಈ ಹಿಂದೆ ಶ್ರೀರಂಗರ ಮಾತನ್ನು ಉದ್ಧರಿಸಿರುವ ಹಾಗೆ ಯಾರೋ ಆಳುವವರು, ಅವರ ದಾಸರಾದ ಪ್ರಜೆಗಳ ಜೊತೆಗೆ ಕನ್ನಡಿಗರೂ ಇರುತ್ತಿದ್ದರು, ಅಷ್ಟೇ. ಅಷ್ಟರಮಟ್ಟಿಗೆ ಹಿರಿಯರ ಮುಂದಾಲೋಚನೆ, ಹೋರಾಟದಿಂದಾಗಿ ದೊರೆತ ಭಾಷಿಕ ಪ್ರಾಂತ ರಚನೆಯ ಫಲಿತ ಗುಣಾತ್ಮಕವೇ ಆಗಿದೆ.

ಚಿತ್ರಕಲೆಯೇ ಮೊದಲಾದ ಪ್ರಕಾರಗಳ ಬಗ್ಗೆ ಮಾತನಾಡಿರುವ ಪ್ರೊ. ಎಂ.ಎಚ್. ಕೃಷ್ಣಯ್ಯನವರು ಈವರೆಗಿನ ಬೆಳವಣಿಗೆಗಳನ್ನು ಗುರುತಿಸುತ್ತಾರೆ. ಕಲಾಶಾಲೆಗಳು, ಕಲಾಶಿಕ್ಷಕರ ಸಾಧನೆ-ಪರಿಣಾಮಗಳನ್ನು ಗುರುತಿಸುತ್ತಾರೆ. ಚಿತ್ರ-ಶಿಲ್ಪ ಮೊದಲಾದ ಕಲೆಗಳಂತೂ ಯಾವ ಭಾಷಿಕ ಹಂಗಿಗೂ ಒಳಪಡವು. ಸಂಗೀತ-ನೃತ್ಯಗಳಿಗಿರುವಷ್ಟು ಸಾಹಿತ್ಯದ ಸಂಬಂಧವೂ ಇವುಗಳಿಗೆ ಇರುವ ಅಗತ್ಯ ಕಾಣುವುದಿಲ್ಲ. ಮತ್ತು ಇಲ್ಲಿ ಆಯ್ಕೆಯೂ ಸಾರ್ವತ್ರಿಕ (ಯೂನಿವರ್ಸಲ್). ಇಲ್ಲಿಯೂ ಜನಪದ, ಯಕ್ಷಗಾನ, ಬಯಲಾಟ, ರಂಗನಾಟಕಗಳಿಂದ ಕೊಳು-ಕೊಡೆಗಳಾಗಿವೆ ಎಂಬುದನ್ನು ಮರೆಯುವಂತಿಲ್ಲ (ಚಿತ್ರಕಲೆಯೊಂದರ ಪ್ರಾದೇಶಿಕತೆಯನ್ನು ಅದರ ವರ್ಣ ಸಂಯೋಜನೆಯ ಮೂಲಕ ಗುರುತಿಸಿದ್ದೂ ಉಂಟು). ಹಡಪದ್ ಅವರು ರಂಗನಾಟಕಗಳನ್ನು, ವಾಸುದೇವ್ ಅವರು ಕವಿತೆಗಳನ್ನು ಆಧರಿಸಿ ಚಿತ್ರಿಸಿದ್ದಾಗಲಿ, ಈಚೆಗೆ ಕುವೆಂಪು ಅವರ ಕೃತಿಗಳನ್ನಾಧರಿಸಿ ರಚಿತವಾದ ಚಿತ್ರಗಳಾಗಲಿ ಪ್ರಾದೇಶಿಕ ಅನನ್ಯತೆಯನ್ನು ಮೆರೆದಿಲ್ಲ ಎನ್ನಲಾದೀತೆ? ಇವೆಲ್ಲ ಪ್ರಯೋಗಗಳು, ಖುಷಿಗಳು. ಅದೇ ಎಲ್ಲವೂ ಅಲ್ಲ ಎಂಬ ಎಚ್ಚರ ಇಟ್ಟುಕೊಂಡೇ ಆಗಿರುವ ಎಲ್ಲ ಕೆಲಸದಲ್ಲೂ ಕಲಾವಿದರು - ಕಲೆ ನಮ್ಮ ಇಂದಿನ ಅನುಭವಗಳಿಗೆ ಅನ್ಯ, ಹೊರತು ಎನಿಸುವಂತಹವಲ್ಲ. '...ಪದಪುಂಜಗಳು, ಶೀರ್ಷಿಕೆಗಳು ಪರಸ್ಪರ ಕೂಡಿ ಚಿಂತನೆಗೆ ಎಡೆಮಾಡಿಕೊಡುತ್ತವೆ ಮತ್ತು ಪ್ರಯೋಗಗಳು ಯಾವುದೇ ಪಂಥ, ಸಿದ್ಧಾಂತಗಳ ಪರಿಣಾಮವಾಗಿ ಆದುವಲ್ಲ, ಕಲಾವಿದನ ವ್ಯಕ್ತಿಗತ ಅನುಭವಗಳಿಗೆ ಒಡ್ಡಿದ ರೂಪಗಳು ರಚನೆಗಳು' ಎಂಬ ಲೇಖಕರ ಮಾತು ನಿತ್ಯ ಸತ್ಯ; ಅದೇ ನಿಜವಾದ ಬೆಳವಣಿಗೆ, ತನ್ನತನ.

ಚಲನಚಿತ್ರ ರಂಗವಂತೂ ಹಲವು ಹನ್ನೊಂದು ತಡೆಗಳನ್ನು ದಾಟಿಕೊಂಡೇ ಬಂದಿದೆ. ವಿದ್ಯಾಶಂಕರ್ ಅವರು ಗುರುತಿಸುವ ಹಾಗೆ ಒಂದಾಗುವಿಕೆ ಒಟ್ಟುಗಾರಿಕೆ ಭಾಷೆಯ ಮೂಲಕ ಸಾಧ್ಯವಾಗಬಲ್ಲುದೆಂಬ ಆಶಯ ಸಾಕಾರವಾಗಿಲ್ಲವೆಂಬ ಮಾತು ಚಿತ್ರರಂಗದ ಮಟ್ಟಿಗಂತೂ ಅಕ್ಷರಶಃ ಸತ್ಯ. ಆದರೆ ಆ ದಿಕ್ಕಿನಲ್ಲಿ ಕೆಲವು ಮನಸ್ಸುಗಳಾದರೂ ತುಡಿದವು, ಪ್ರಯತ್ನಿಸಿದವು ಎಂಬುದೂ ನಿಜ. ಏಕೀಕರಣದಂಥ ಮಹತ್ವದ ಘಟನೆ ನಡೆದರೂ ಚಿತ್ರರಂಗಕ್ಕೆ ಅಗತ್ಯವಾದ ಯಾವುದರತ್ತಲೂ ಪ್ರಭುತ್ವ ಗಮನ ಹರಿಸಲಿಲ್ಲ. ಚಿತ್ರರಂಗ ತಮಿಳು ಭಾಷಿಕರ, ಔದಾರ್ಯದ ನಡುವೆ ಅಸ್ತಿತ್ವಕ್ಕಾಗಿ ಹೋಡೆದಾಡುತ್ತಿತ್ತು. ೬೦ರ ದಶಕದಲ್ಲೂ ಇದೇ ಪಡಿಪಾಟಲು. ಆಗಲೂ ಸಾಹಿತ್ಯ, ಸಂಸ್ಕೃತಿ, ಕಲೆ ಎಂದು ತೊಡಗಿಸಿಕೊಂಡ ಕೆಲವರಾದರೂ

ಪ್ರಾದೇಶಿಕತೆಯನ್ನು ಬಿಂಬಿಸಲು ಯತ್ನಿಸಿದ್ದುಂಟು. ಅಂತಃಸತ್ವ ಎಷ್ಟು ಎಂಬ ಮಾತಿಗಿಂತ ಹೊರಮೈಯಲ್ಲಾದರೂ ಆ ಛಾಯೆಗಳನ್ನು ತಂದರು. (ಮದರಾಸಿನ ಸೆಟ್‌ಗಳಲ್ಲಿದ್ದ ಭತ್ತದ ತೆನೆ, ಬಾಳೆಹೂವುಗಳ ಅಲಂಕಾರದ ಹೊರತಾಗಿ ಮಾವಿನಸೊಪ್ಪಿನ ತೋರಣ ಕಟ್ಟುವ ಮಟ್ಟಿಗಾದರೂ...). ಕನ್ನಡದ ಅಭಿಮಾನ ಮೂಡಿಸುವ ಗೀತೆಗಳು, ಸಂಭಾಷಣೆಗಳನ್ನು ತಂದರು, ಕೆಲವು ಆಚರಣೆಗಳಲ್ಲಾದರೂ ಕನ್ನಡನಾಡನ್ನು ನೆನಪಿಸಿದರು. ಪ್ರಾರಂಭದಲ್ಲಿ ಅಭಿಮಾನ-ಆಸೆಯಾಗಿ ಮೂಡಿದ ಈ ಕನ್ನಡ ಭಾಷೆ, ಪ್ರದೇಶಾಭಿಮಾನಗಳು ಕ್ರಮೇಣ ಧನಾರ್ಜನೆಯ ಸರಕುಗಳಾದವೆಂಬುದೇ ವಿಪರ್ಯಾಸ. ಆರ್ಥಿಕ ನೆಲೆಗಟ್ಟೇ ಉಸಿರಾದ ಚಿತ್ರರಂಗದ ಪ್ರಧಾನವಾಹಿನಿಗೆ ಕನ್ನಡತನ ಕೇವಲ ಮಾರುಕಟ್ಟೆಯ ಸರಕು. ಉದ್ದೇಶವೇನಾದರೂ ಇರಲಿ ಅಲ್ಲೂ ಕನ್ನಡತನದ ಅಭಿಮಾನ – 'ಒಂದು ಕಾಲಕ್ಕೆ, ಈಚೆಗೆ ಆಗೀಗ ಮಾತ್ರ' ತೂರಿ ಬರುತ್ತಿದೆ ಎಂಬುದನ್ನು ಗಮನಿಸಬೇಕು. ವಿದ್ಯಾಶಂಕರ್ ಅವರು ಗುರುತಿಸುವ ಹಾಗೆ ಅದೊಂದು ಅಂತರ್ವಾಹಿನಿಯಾಗಿ ಆಳದಿಂದೆದ್ದು ಬಂದದ್ದು ಕಾಣಲಿಲ್ಲ; ಅಲ್ಲಿ ಪೈಪೋಟಿಯನ್ನು ಮೀರಿದ ಕ್ರಿಯಾಶೀಲತೆ, ತನ್ನತನ ಕಾಣುವ ದಿನ ಬರುವ ಕ್ಷಣಗಳನ್ನು ಕೇವಲ ಆಶಾವಾದದಿಂದ ಕಾಯಬೇಕಷ್ಟೇ.

ಜನಪದ ಕ್ಷೇತ್ರ ವರ್ತಮಾನದ ಪ್ರತಿ ಕ್ಷಣವೂ ಭೂತಕಾಲಕ್ಕೆ ಸರಿಯುವುದನ್ನು ಹಿಡಿದಿಡುತ್ತಲೇ ಇರುತ್ತದೆ. ಎಲ್ಲವನ್ನೂ ತನ್ನ ತೆಕ್ಕೆಯೊಳಗಿಟ್ಟುಕೊಳ್ಳಬಲ್ಲ ಶಕ್ತಿ ಅದಕ್ಕಿದೆ. ಹಾಗಾಗಿ ಯಾವ ಭೌಗೋಳಿಕ ಬದಲಾವಣೆಯೂ ಅದನ್ನು ವಿಶೇಷವಾಗಿ ಪ್ರಭಾವಿಸಲಾರದು. ತನ್ನಂತೆ ಎಲ್ಲವನ್ನೂ ಅರಗಿಸಿಕೊಂಡು ಅಂದಂದಿನ ಸಂದರ್ಭಕ್ಕೆ ಜೋಡಿಸಿಕೊಳ್ಳುತ್ತ ಕಟ್ಟುವ ವಿಶಿಷ್ಟ ಚಲನಶೀಲತೆ ಜನಪದದ್ದು. ಅದು ಈ ಹೊತ್ತಿನ ಐ.ಟಿ., ಬಿ.ಟಿ.ಗಳನ್ನೂ ಅರಗಿಸಿಕೊಂಡು ಹೊಸ ಗಾದೆ, ಹೊಸ ಗೀತೆಗಳನ್ನು ಹೊರಹೊಮ್ಮಿಸುವವರೆಗೂ ಮುನ್ನುಗ್ಗಿದೆ. ಅಲ್ಲಿ ಪರಂಪರೆಯೂ ಇದೆ; ಹೊಸ ಆವಿಷ್ಕಾರಗಳಿಗೆ ಸ್ವಾಗತವೂ ಇದೆ ಎಂಬುದನ್ನು ಜಾನಪದ ತಜ್ಞ ಚಕ್ಕೆರೆ ಶಿವಶಂಕರ್ ಅವರ ಲೇಖನ ಹೇಳುತ್ತಿದೆ.

ಕಿರುತೆರೆ ನಮಗೆ ಇತ್ತೀಚಿನ ಕೊಡುಗೆ. ಅದರ ಅತಿವೇಗವಾಗಿ ಅಷ್ಟೂ ವರ್ಷಗಳ ಇತರ ಕಲೆಗಳ ಬೆಳವಣಿಗೆಯನ್ನೂ ಮೀರಿದ್ದು. ಆದರೆ ಈ ಕಲೆ ಬಹಳ ಬೇಗ ಕಲೆಯಾಗಿ ಉಳಿಯುವ ತನ್ನ ಶಕ್ತಿಯನ್ನೂ ಮರೆತು ಉದ್ಯಮವಾಗುತ್ತಿದೆ, ಕೇವಲ ಮಾರುಕಟ್ಟೆಯ ಸರಕಾಗಿ ಹೋಗಿದೆ. ಮಾರುಕಟ್ಟೆಗಾಗಿ ಪ್ರೇಕ್ಷಕನನ್ನು ಸದಾ ಉತ್ಕಂಠ ಸ್ಥಿತಿಯಲ್ಲೇ ಇಡುವ ಪ್ರಯತ್ನದಿಂದಾಗಿ ಮಾಧ್ಯಮವೊಂದಕ್ಕಿರಬೇಕಾದ ಸಾಮಾಜಿಕ ಜವಾಬ್ದಾರಿಯಿಂದ ದೂರವಾಗುತ್ತಿದೆ ಅನ್ನಿಸುತ್ತಿದೆ. ಸದಾ ಉತ್ಕಂಠ ಸ್ಥಿತಿಯಲ್ಲಿರುವುದು ಪ್ರೇಕ್ಷಕನ ಮಾನಸಿಕ ಆರೋಗ್ಯಕ್ಕೆ ಒಳ್ಳೆಯದಲ್ಲ ಎಂಬ ಎಚ್ಚರಿಕೆ ಬಿ. ಸುರೇಶರ ಲೇಖನದಲ್ಲಿದೆ.

ಈ ಎಲ್ಲವೂ ಸೃಜನಶೀಲ ಅಂದುಕೊಳ್ಳುವ ಧಾರಾವಾಹಿಗಳು, ಅಪರಾಧವನ್ನು ವೈಭವೀಕರಿಸುವ ಕಾರ್ಯಕ್ರಮಗಳಿಗೆ ಅನ್ವಯವಾಗುವಂಥ ವಿಷಯಗಳು. ಹಾಗಲ್ಲದ ಕೆಲವು ಗಂಭೀರವಾದ ವಿಚಾರಗಳಿಗೆ ತೆರೆದುಕೊಳ್ಳುವ ಕಾರ್ಯಕ್ರಮಗಳೂ ಇವೆ. ಇವು ಹೆಚ್ಚು ಪ್ರದರ್ಶನಗೊಳ್ಳುವಂತೆ ಮಾಡಬೇಕಾದವರು ಪ್ರೇಕ್ಷಕರು ಮಾತ್ರ. ಈ ವಿಷಯದಲ್ಲಿ ಪ್ರೇಕ್ಷಕರ ಜವಾಬ್ದಾರಿಯೂ ಹೆಚ್ಚಾಗಿದೆ. ಪ್ರೇಕ್ಷಕ ಸಕಾಲದಲ್ಲಿ ಎಚ್ಚರಗೊಂಡರೆ ಮಾತ್ರ ಬಹುದೊಡ್ಡ ಅಪಾಯದಿಂದ ಪಾರಾಗಬಹುದು.

ಪ್ರತಿ ಕ್ಷಣವೂ ಹೊಸ ಆಕ್ರಮಣಗಳಿಗೆ ತಲೆಯೊಡ್ಡುತ್ತಿರುವಾಗ ಕಳೆದ ೫೦ ವರ್ಷದ ಬೆಳವಣಿಗೆ ಬಹಳ ದೊಡ್ಡದಾಗೇನೂ ಕಾಣುತ್ತಿಲ್ಲ. ಆ ಬಗ್ಗೆ ಚರ್ಚಿಸಿರುವ ಚಿಂತಕರಲ್ಲಿ ಆಕ್ರಮಣ, ಗುಣ-ದೋಷಗಳ ನಡುವೆಯೂ ಶ್ರೇಷ್ಠತೆಯನ್ನುಳಿಸಿಕೊಂಡು ಬಂದ ಸಂಸ್ಕೃತಿಯ ಬಗ್ಗೆ ವಿಶೇಷ ಪ್ರೀತಿಯನ್ನು ಕಾಣುತ್ತೇವೆ. ಎಲ್ಲವನ್ನೂ ಏಕಾಪೋಶನ ತೆಗೆದುಕೊಂಡೂ ಜೀವಂತವಾಗಿರುವ, ಕ್ಷುಬ್ಧಗೊಳ್ಳುತ್ತಿರುವ ಬದುಕು-ಮನಸ್ಸುಗಳನ್ನು ತಹಬಂದಿಗೆ ತರಬಲ್ಲ ಸಂಸ್ಕೃತಿಯಾಗಿಯೇ ಉಳಿಯುತ್ತವೆಂಬ ಆಶಾವಾದವನ್ನು ಎತ್ತಿ ಹಿಡಿಯುವ ಈ ಚಿಂತನೆಗಳು ಭವಿಷ್ಯಕ್ಕೊಂದು ಬೆಳಕು.

ಕನ್ನಡದ ಜಾಯಮಾನವೇ ವಿಶಿಷ್ಟ. ತನ್ನ ಸ್ವಭಾವ ಸಹಜ ಅನುಸಂಧಾನ ಮಾರ್ಗದಲ್ಲಿ ನಡೆಯುತ್ತದೆ. ಪರಿಹಾರ ಸಿಗದಿದ್ದಾಗ ಸಂಘರ್ಷಕ್ಕಿಳಿಯುತ್ತದೆ. ಪ್ರಭುತ್ವವು ಒತ್ತಡ-ಸಂಘರ್ಷವಿಲ್ಲದೆ ಇತ್ತ ಗಮನ ಹರಿಸಿದ್ದೇ ಇಲ್ಲ. ಸಂಸ್ಕೃತಿಗೆ ಪರಂಪರೆಯ ಪ್ರೇರಣೆಯೂ ಇದೆ; ಕನ್ನಡ ಸಂಸ್ಕೃತಿ ತನ್ನ ಅಂತಃಸತ್ವದಿಂದಲೇ ಅನನ್ಯತೆ ಉಳಿಸಿಕೊಂಡು ಬಂದಿದೆ. ಅದು ಸದಾ ಭೂತ, ವರ್ತಮಾನಗಳೊಡನೆ ಅನುಸಂಧಾನ ಮಾಡುತ್ತಿದೆ; ನಾಳೆಗಳನ್ನು ಚಂದಗೊಳಿಸಲು ಪ್ರಯತ್ನಿಸುತ್ತಲೇ ಇರುತ್ತದೆ.

ಡಾ|| ವಿಜಯಾ
ನಂ. ೩೬, ರಾಘವ ನಗರ, ಮುನೇಶ್ವರ ಬ್ಲಾಕ್, ಟಿಂಬರ್‌ಯಾರ್ಡ್ ಲೇಔಟ್, ಬೆಂಗಳೂರು ೫೬೦ ೦೨೬

# ಹಲವು ಬಣ್ಣದ ಹಕ್ಕಿ : ಸುವರ್ಣ ಕರ್ನಾಟಕ : ಸಾಹಿತ್ಯ

ಹಲವು ಸಮುದಾಯಗಳ ಒಕ್ಕೂಟವಾದ ಸಮಾಜದ ಜೀವನಕ್ರಮಕ್ಕೂ ಅದರ ಕಲಾಸೃಷ್ಟಿಗೂ ಇರುವ ಸಂಬಂಧವು, ಮೇಲೆ ಕಾಣುವಷ್ಟು ನಿಕಟವಾದುದೇನೂ ಅಲ್ಲ. ಬದಲಾಗಿ, ಕಲೆಯ ನಿರ್ವಚನ, ನಿರ್ಮಿತಿ, ಪ್ರಸಾರ ಮುಂತಾದ ಸಂಗತಿಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿರುವ ವರ್ಗಗಳ ಅಭಿವ್ಯಕ್ತಿಯೇ ಯಾವಾಗಲೂ ಮುಂಚೂಣಿಯಲ್ಲಿ ಇರುತ್ತದೆ. ವಿದ್ಯಾವಂತ ಮಧ್ಯಮವರ್ಗದಲ್ಲಿ ನೆಲೆನಿಂತವರ ಮತ್ತು ಅದರೊಳಗೆ ಹೊಸದಾಗಿ ಪ್ರವೇಶ ಪಡೆದವರ ನಡುವಿನ ಅಂತರವು ಬಾಲ್ಯಾನುಭವಗಳ ಲೋಕದ್ದೇ ವಿನಾ ದೃಷ್ಟಿಕೋನಕ್ಕೆ ಸಂಬಂಧಿಸಿದ್ದಲ್ಲ. ಎಂದರೆ ಹೊಸ ವರ್ಗಾಸಕ್ತಿಗಳದೇ ಮೇಲುಗೈ ಆಗಿ ಹಳೆಯದರ ಬಗ್ಗೆ ಹಳಹಳಿಕೆ ಮಾತ್ರ ಉಳಿಯುತ್ತದೆ. ಕರ್ನಾಟಕದ ಭಾಷಿಕ ಏಕೀಕರಣವೆಂಬ ರಾಜಕೀಯ ಪ್ರಕ್ರಿಯೆ ನಡೆದು ಐವತ್ತು ವರ್ಷಗಳು ಕಳೆದಿವೆಯೆನ್ನುವ ಮಾತು ಒಂದು ಅಂಕಿ ಅಂಶ ಮಾತ್ರ. ಅದರಲ್ಲಿ ಸುವರ್ಣರೇಖೆಗಳನ್ನು ಕಂಡು ಸಂಭ್ರಮಪಡುವುದೂ ಅನೇಕರಿಗೆ ಸುವರ್ಣಸಂಪಾದನೆಯ ಸುವರ್ಣಾವಕಾಶ ವಷ್ಟೇ. ಸಾಹಿತ್ಯವೆಂಬ ಸಂಸ್ಥೆಗೂ ಈ ಸಂಧಿಯು ಅನೇಕ ಬೀರುಭೂಷಣವಾದ ಸಂಕಲನಗಳನ್ನು ಸೃಷ್ಟಿಸುವ, ಅದೇ ಅದೇ ತಂಗಳು ಕೃತಿಗಳನ್ನು ಬಿಸಿಮಾಡಿ ಬಡಿಸುವ ಪ್ರಕ್ರಿಯೆಯಾದರೆ, ಆಶ್ಚರ್ಯವಿಲ್ಲ.

ಸರಿಯಾಗಿ ಇಪ್ಪತ್ತೈದು ವರ್ಷಗಳ ಹಿಂದೆ, ಕರ್ನಾಟಕ ರಾಜ್ಯಸ್ಥಾಪನೆಯಾಗಿ ಕಾಲು ಶತಮಾನದ ನಂತರ ಸೃಜನಸಾಹಿತ್ಯ ಪ್ರಗತಿ ಎಂಬ ಶೀರ್ಷಿಕೆಯಲ್ಲಿ, ಡಾ|| ಕೆ. ವಿ. ನಾರಾಯಣ ಬಹಳ ಉಪಯುಕ್ತವಾದ ಲೇಖನವೊಂದನ್ನು ಬರೆದಿದ್ದಾರೆ. ಅವರ ಅನೇಕ ಆತಂಕಗಳು ಮತ್ತು ಅನಿಸಿಕೆಗಳು ಈಗ ಇನ್ನಷ್ಟು ನಿಜವೆನಿಸುತ್ತವೆ. ಬೇರೆ ಕೆಲವು ನಿರೀಕ್ಷೆಗಳು ಈಗ ಸಫಲವಾಗಿವೆ. ನನ್ನ ಈ ಬರೆಹವು ಆಶಯಗಳ ಹಾಗೂ ವೈಧಾನಿಕತೆಯ ನೆಲೆಯಲ್ಲಿ ಆ ಸುದೀರ್ಘ ಲೇಖನದ ಮುಂದುವರಿಕೆಯೂ ಹೌದು. (ನೋಡಿ : ಕೆ. ವಿ. ನಾರಾಯಣ, ಬೇರು ಕಾಂಡ ಚಿಗುರು, ೧೯೮೨, ಪುಟ ೨೭-೪೧)

ಸಂಸ್ಕೃತಿಸೃಷ್ಟಿ ಹಾಗೂ ಅದರ ವಿತರಣೆಯಲ್ಲಿದ್ದ ಅಸಮತೋಲನಗಳನ್ನು ಸರಿಪಡಿಸುವ ನಿಟ್ಟಿನಲ್ಲಿ ಈ ಏಕೀಕರಣವು ಒಂದಷ್ಟು ಕೆಲಸಮಾಡಿದೆ. ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸುವ ರಾಜಕಾರಣದ ಹುಯ್ಯಲುಗಳಷ್ಟೇ ಮುಖ್ಯವಾದುದು, ಅಲ್ಲಿನ ಕಲಾವಿದರಿಗೆ ದೊರೆತ, ಮುಖ್ಯವಾಹಿನಿಯೊಂದಿಗೆ ಬೆರೆಯುವ ಅವಕಾಶ. ಅದರಲ್ಲಿಯೂ ಉತ್ತರ ಕರ್ನಾಟಕಕ್ಕಿಂತ ಹೆಚ್ಚಾಗಿ ಹೈದರಾಬಾದ್ ಕರ್ನಾಟಕಕ್ಕೆ ಈ ಮಾತು ಹೆಚ್ಚಾಗಿ ಅನ್ವಯಿಸುತ್ತದೆ. ಕಾಲನಿಷ್ಠವಾದ ಪಲ್ಲಟಗಳ ಪರಿಣಾಮವಾಗಿ, ಯಾರದೇ ವಾಸ್ತವಾನುಭವಗಳ ಖಜಾನೆ ಬರಿದಾಗುವುದಿಲ್ಲವೆನ್ನುವ ಮಾತು ನಿಜ. ಆದ್ದರಿಂದಲೇ ಸಮಾಜದ ಕೆಲವು ವರ್ಗಗಳಿಗೆ ಸೇರಿಸುವ ಸಾಹಿತ್ಯ ರಚನೆಯ ಸಾಧ್ಯತೆಗಳನ್ನು ಬರಿದು ಮಾಡಿಕೊಂಡು ದಣಿದಿದ್ದಾರೆ ಎನ್ನುವ ಮಾತು ನಿಜವಲ್ಲ. ಆದರೆ ನಿರ್ದಿಷ್ಟವೂ ವಿಶಿಷ್ಟವೂ ಆದ ಚರಿತ್ರೆ-ಭೂಗೋಳಗಳು ಸಮುದಾಯಗಳ ಅನುಭವವನ್ನು ವಿಶಿಷ್ಟ ಬಗೆಗಳಲ್ಲಿ ಕಂಡರಿಸಿರುವುದೂ ಅಷ್ಟೇ ನಿಜ. ಇಂಥ ಹೊಸದಾಗಿ ಪ್ರವೇಶ ಪಡೆದ ಪ್ರದೇಶಗಳಿಂದ ಬರುವ ಸಾಹಿತ್ಯವು, ವ್ಯಕ್ತಿಯ ಜಂಜಡಗಳಿಗಿಂತ ತನ್ನ ಸಮುದಾಯಗಳ ಕಥನದಲ್ಲಿ ಹೆಚ್ಚು ಆಸಕ್ತವಾಗಿರುತ್ತದೆ. ನವ್ಯಸಾಹಿತ್ಯದ ತೀವ್ರ ಪ್ರಭಾವಕ್ಕೆ ಅನಾವರಣವಾಗದ ಈ ಪ್ರದೇಶವು ರಿಪ್ ವ್ಯಾನ್ ವಿಂಕಲ್ ಹಾಗೆ, ಗ್ರಾಮೀಣ ಅನುಭವಗಳ ಸ್ವರೂಪವನ್ನು ಮರುರೂಪಿಸಿತು, ಮರುಮಂಡಿಸಿತು. ಕನ್ನಡದ ಒಟ್ಟು ವಾಚಕಸಮುದಾಯವು ಇಂಥ ವಾಸ್ತವವಾದೀ ಕಥಾನಕಗಳನ್ನು ಇನ್ನೂ ತನ್ನೊಳಗೆ ಕರಗಿಸಿಕೊಂಡಿಲ್ಲ. ಆದರೆ, ಲಿಂಗಸುಗೂರು-ನೀರಮಾನ್ವಿ, ಕೊಡಗು, ಸುರತ್ಕಲ್, ಕುದುರೆಡವು-ಕಲ್ಬುರ್ಗಿಗಳು ನಮ್ಮ ಓದಿನ ಅನುಭವದ ಭಾಗವಾಗಿದ್ದು ಮತ್ತು ತಮತಮಗೆ ಸೂಕ್ತವಾದ ಭಾಷಿಕ ವೈವಿಧ್ಯವನ್ನು ತಮ್ಮ ಜೊತೆಯಲ್ಲಿಯೇ ತಂದಿದ್ದು ಈ ಅರ್ಧ ಶತಮಾನದ ಸಾಧನೆಯೇ ಸರಿ. ಇದರ ಸಂಗಡವೇ ದಕ್ಷಿಣ ಕರ್ನಾಟಕದ ಗ್ರಾಮೀಣ ಜಗತ್ತು ಕೂಡ ಹೊಸ ಲೋಕಗಳನ್ನು ನಿರ್ಮಿಸಿತು.

ಏಕೆಂದರೆ, ಭಾಷೆ ಎನ್ನುವುದು ಕೇವಲ ಅನುಭವಗಳಿಗೆ ತೊಡಿಸಿದ ಅಂಗಿಯಲ್ಲ. ಅದು ಹೊರಜಗತ್ತು-ಒಳಜಗತ್ತುಗಳನ್ನು ಕಟ್ಟಿಕೊಡುವ ಅಂತೆಯೇ ಸಂವಹನಮಾಡುವ ಸೃಷ್ಟಿಕರ್ತ. ಶಿಕ್ಷಣದ ಸ್ವರೂಪ ಮತ್ತು ಸಾಫಲ್ಯಗಳ ಬಗ್ಗೆ ನಮ್ಮ ಗೊಣಗಾಟಗಳು ಏನೇ ಇರಲಿ, ಇಪ್ಪತ್ತನೆಯ ಶತಮಾನದ ಉತ್ತರಾರ್ಧವು ಹಲವು ಸಮುದಾಯಗಳಿಗೆ ಸಾಕ್ಷರತೆಯ ಬಾಗಿಲುಗಳನ್ನು ತೆರೆಯಿತು. ಪರಿಣಾಮವಾಗಿ, ಮೂಕನಿಗೆ ಬಾಯಿ ಬಂದಾಗ ಘಟಿಸುವ ಪವಾಡಗಳೆಲ್ಲವೂ ನಮ್ಮ ಕಾಲದಲ್ಲಿಯೇ, ನಮ್ಮ ಕಣ್ಣೆದುರಿಗೇ ನಡೆದಿವೆ. ಈ ಹೊಸಬರು ಮೊದಲಿನಿಂದಲೂ ಸುಶಿಕ್ಷಿತರೇ ಆದ ಮೇಲುಜಾತಿಗಳವರಲ್ಲ, ಭೂಮಾಲಿಕ ಜಮೀನ್ದಾರ ವರ್ಗಗಳಿಗೆ ಸೇರಿದವರೂ ಅಲ್ಲ. 'ಮೇಲ್' ಜಾತಿಯವರಷ್ಟೇ ಅಲ್ಲ, ಫೀಮೇಲ್ ಜಾತಿಯವರೂ ಈ ಪವಾಡದಲ್ಲಿ ಮಾತುಪಡೆದರು. ಸಾಹಿತ್ಯಲೋಕವನ್ನು ಪ್ರವೇಶಿಸಿದ ಈ ಸಾಮಾಜಿಕ ವೈವಿಧ್ಯವನ್ನು ಕಳೆದ ಐವತ್ತು ವರ್ಷಗಳ ಬಹುದೊಡ್ಡ ಸಾಧನೆ ಯೆಂದು ನಾನು ತಿಳಿಯುತ್ತೇನೆ. ಅಲ್ಲಿಯವರೆಗೆ, ಒಂದು ಅಪವಾದದಂತೆ ಮಿಂಚುತ್ತಿದ್ದ 'ಕಾನೂರು ಹೆಗ್ಗಡಿತಿ'ಯು ತನ್ನ ಸಹಜ ಸಂತಾನವನ್ನು ಅಧಿಕಾಧಿಕವಾಗಿ ಪಡೆದು ಕೊಂಡಿತು. ಸಹಜವಾಗಿಯೇ ಈ ವೈವಿಧ್ಯವು, ಅಮೂರ್ತತೆಯೇ ಪ್ರಧಾನನೆಲೆಯಾದ ಕವಿತೆಗಿಂತ ಹೆಚ್ಚಾಗಿ ಮೂರ್ತ ವಿವರಗಳ ಕಟ್ಟೋಣವಾದ ಕಥಾಸಾಹಿತ್ಯದಲ್ಲಿ ಶ್ರೀಮಂತ ವಾಗಿ ಕಂಡುಬಂತು. ಕವಿತೆಯಲ್ಲಿ ಕಂಡ ಆಶಯಗಳು ಕಥೆ-ಕಾದಂಬರಿಗಳಲ್ಲಿ ಆಕೃತಿ ಸಂಪಾದನೆ ಮಾಡಿದ್ದು ಅಚ್ಚರಿಯೇನೂ ಅಲ್ಲ. ಅದು ಹಾಗಿರುವುದೇ ಸಹಜ. ಅನುಭವಗಳ ನಿರೂಪಣೆಯು ಕಲೆಯಲ್ಲವೆಂಬ ಆಕ್ಷೇಪಣೆಯ ಸಿಪ್ಪೆಸುಲಿದು ನೋಡಿದರೆ, ನಾನು ಹೇಳುವುದು ಮಾತ್ರವೇ ಕಲೆಯೆಂಬ ಅಹಂಕಾರವೂ ಕಾಣಬಹುದು. ಪರಿಣಾಮ ವಾಗಿ, ವಾಸ್ತವವಾದೀ ನಿರೂಪಣೆಯ ಸಾಧ್ಯತೆಗಳು ಮುಗಿದುಹೋದವೆಂಬ ತೀರ್ಮಾನದ ನಂತರವೇ ಅದು ಹಾಗಲ್ಲವೆಂಬ ತಿಳಿವಳಿಕೆಯೂ ಬಂತು.

ಒಂದು ಭಾಷಿಕ ಸಮುದಾಯದ ಭಾಷಿಕ ಆಸಕ್ತಿಗಳ ಮುಖ್ಯವಾದ ಅಳತೆಗೋಲು ಗಳಲ್ಲಿ ಒಂದು ಅದು ತನ್ನ ಪ್ರಾಚೀನ ಸಾಹಿತ್ಯವನ್ನು ತನ್ನೊಳಗೆ ತೆಗೆದುಕೊಳ್ಳುವ ಬಗೆ. ಶಾಲೆ-ಕಾಲೇಜುಗಳ ಪಠ್ಯಕ್ರಮಗಳ ಕಡ್ಡಾಯದ ಹೊರಗೆ, ಸಾಹಿತ್ಯವು ಒಂದು ಸಂಸ್ಥೆಯಾಗಿ ಕೆಲಸಮಾಡುವಾಗ, ತನಗಿರುವ ಸಾತತ್ಯವನ್ನು ಉಳಿಸಿಕೊಳ್ಳುವ ಹಾಗೂ ಹೊಸ ಓದುಗರಿಗೆ ಅದನ್ನು ಸಾಗಿಸುವ ಬಗೆಗಳು ಕುತೂಹಲಕರ. ಓದುಗರಂತೂ ಇಂದು ರಚಿತವಾಗಿ, ಇಂದೇ ತಾವು ಓದುವ ಸಾಹಿತ್ಯವೂ, ಕಳೆದ ನೆನ್ನೆಗಳನ್ನು ತನ್ನೊಳಗೆ ಬಚ್ಚಿಟ್ಟುಕೊಂಡು ಇರಬೇಕೆಂದು ಬಯಸುತ್ತಾರೆ : ಮೂಲದ ಮರುನಕಲಾಗಿ ಅಲ್ಲ, ಮರುವ್ಯಾಖ್ಯಾನವಾಗಿ. ಸಂಸ್ಕೃತ ಭಾರತಗಳನ್ನು ಪಂಪ, ಪಂಪನನ್ನು ಕುಮಾರವ್ಯಾಸ-ರತ್ನಾಕರರು, ಅವರನ್ನು ಕುವೆಂಪು ತಮ್ಮೊಳಗೆ ತೆಗೆದುಕೊಂಡ ಹಾಗೆ. ಇಪ್ಪತ್ತನೆಯ ಶತಮಾನದ ಪೂರ್ವಾರ್ಧ ದಲ್ಲಿಯೇ ಉಂಟಾದ ಅಕ್ಷರಪ್ರಧಾನವಾದ ಸಂವಹನವಿಧಾನಗಳು, ಏಕೀಕರಣದ ನಂತರವಂತೂ ಇನ್ನಷ್ಟು ಎಕ್ಸ್‌ಕ್ಲೂಸಿವ್ ಆದವು. ನವ್ಯಸಾಹಿತ್ಯದ ಮೇಲುದಿನಗಳಲ್ಲಿ ಈ ಪ್ರಕ್ರಿಯೆಯು ಶಿಖರವನ್ನೇ ತಲುಪಿತು. ಈಚಿನ ದಶಕಗಳಲ್ಲಿ ದಾಪುಗಾಲಿಟ್ಟು ಬೆಳೆದ ಜಾನಪದ ಅಧ್ಯಯನಗಳು, ಮೌಖಿಕಸಾಹಿತ್ಯದ ಮರುಹುಟ್ಟುಗಳು, ದಲಿತ-ಕೆಳ ವರ್ಗಗಳ-ಮಹಿಳೆಯರ ಪುರಾಣಗಳನ್ನು ಪ್ರಸ್ತುತಗೊಳಿಸುವ ಪ್ರಯತ್ನಗಳು, ವಚನಗಳು – ತತ್ವದ ಪದಗಳು ಮಾತ್ರವೇ ಆಧುನಿಕರ ಆಸಕ್ತಿಯನ್ನು ಕೊಂಚಮಟ್ಟಿಗೆ ಕೆರಳಿಸುವ ಸನ್ನಿವೇಶ ಇವೆಲ್ಲವನ್ನೂ ಒಟ್ಟಂದದಲ್ಲಿ ನೋಡಬೇಕಾಗುತ್ತದೆ. ಪರಸ್ಪರ ಜೀವಂತವಾದ ಸಂಬಂಧವಿಲ್ಲದ ಸಾಹಿತ್ಯಕ ಓದುಗಳ ಸಮುಚ್ಚಯವೊಂದು ನಮ್ಮಲ್ಲಿ ಸೃಷ್ಟಿಯಾಗಿದೆ. ಚಿ. ಉದಯಶಂಕರ ಅವರ ಹಾಡುಗಳು, ಜಗ್ಗೇಶ್ ಅವರ ಚಲನಚಿತ್ರ, ಸೀತಾರಾಮ್ ಅವರ ಮಾಯಾಮೃಗ, ಮನ್ವಂತರಗಳನ್ನು ಸಾಹಿತ್ಯ ವಿಮರ್ಶೆಯ ಕ್ಯಾನನ್‌ಗಳು ಗ್ರಹಿಸುವ ಬಗೆಯು ಯಾವುದೇ ಇದ್ದರೂ ಅವು ಸಾಹಿತ್ಯಕ ಪಠ್ಯಗಳಾಗಿ ಪರಿವರ್ತನೆ ಹೊಂದಿರುವ, ಓದು-ನೋಟ-



ಕೇಳುವಿಕೆಗಳಿಗೆ ಒಳಗಾಗುತ್ತಿರುವ ವಾಸ್ತವವನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಜನಪ್ರಿಯ ಸಾಹಿತ್ಯವೆಂದು ನಾವೆಲ್ಲರೂ ಡಿಸ್‌ಮಿಸ್ ಮಾಡುತ್ತಿದ್ದ ಬರವಣಿಗೆಯು ಇಂದಿನ ಸಾಂಸ್ಕೃತಿಕ ಸನ್ನಿವೇಶದಲ್ಲಿ ವಹಿಸುತ್ತಿರುವ ಪಾತ್ರವನ್ನು ಕುರಿತು ಗಂಭೀರ ಚಿಂತನೆ ಮಾಡದೆ ಪರ್ಯಾಯವಿಲ್ಲ.

ಸಮುದಾಯದ ಬಗ್ಗೆ ಅನಾಸಕ್ತನಾದ ವ್ಯಕ್ತಿ ಮತ್ತು ವ್ಯಕ್ತಿಯ ಬಗ್ಗೆ ಯಾವುದೇ ಕಾಳಜಿ ವಹಿಸದ ಸಮುದಾಯ ಇವೆರಡರ ನಡುವಿನ ಕರ್ಷಣಗಳು, ನಮ್ಮ ಕಾಲದ ಹಾಗೂ ನಮ್ಮ ಸಾಹಿತ್ಯದ ಮುಖ್ಯ ಲಕ್ಷಣಗಳಲ್ಲಿ ಒಂದು. ಇಲ್ಲಿ ಅನಾಸಕ್ತಿ ಎಂದರೆ, ಅಪರಿಚಿತವೂ ಹೌದು ಮತ್ತು ಪರಿಚಿತವಾದುದರ ಬಗೆಗಿನ ದಿವ್ಯ ನಿರ್ಲಕ್ಷ್ಯವೂ ಹೌದು. ಇವೆರಡರ ಜೊತೆಗೆ ಸಾಮಾಜಿಕ ಕಾಳಜಿಯ ತುಟಿಮರುಕ ಮತ್ತು ಹುಸಿಮುಂಡನೆಗಳೂ ಸೇರಿದಾಗ ಸನ್ನಿವೇಶವು ಇನ್ನಷ್ಟು ಬಿಗಡಾಯಿಸುತ್ತದೆ. ಸಮಕಾಲೀನ ರಾಜಕೀಯದ ವಿವರಗಳ ಬಗೆಗಿನ ಕೋಪವು, ರಾಜಕೀಯ ಕ್ರಿಯೆ, ಮತ್ತು ಹೋರಾಟಗಳ ಅಗತ್ಯ/ಔಚಿತ್ಯಗಳನ್ನೇ ಪ್ರಶ್ನಿಸಿಬಿಡುವ ಅತಿರೇಕಕ್ಕೆ ಹೋಗಿಬಿಡುತ್ತದೆ. ಆಗ ಬರುವ ಬರವಣಿಗೆಯು, ಆತ್ಮಮರುಕದಲ್ಲಿ ಮುಳುಮುಳು ಅಳುವ, ಹಾಗೆಮಾಡಿಯೇ ರಂಜಿಸುವ ಸಕ್ಕರೆಪಾನಕವಾಗುತ್ತದೆ. ಇದು ತನ್ನದೇ ಜೀವನವಿಧಾನಗಳ ಬಗ್ಗೆ ಯಾವುದೇ ಪ್ರಶ್ನೆಯನ್ನು ಕೇಳಿಕೊಳ್ಳದೆ ಇರುವುದರಿಂದ, ನೈತಿಕ ಒತ್ತಾಯದ ಬಲವನ್ನು ಕಳೆದುಕೊಂಡಿರುತ್ತದೆ. ಸತ್ಯವೆನ್ನುವುದೇ ಸಾಪೇಕ್ಷ ಹಾಗೂ ನಿರ್ಮಿತ ಎಂದುಬಿಡುವ ಆಧುನಿಕೋತ್ತರ ಆಲೋಚನಾವಿಧಾನಗಳು ಇಂಥ ಆಷಾಢಭೂತಿತನಕ್ಕೆ ತಾತ್ವಿಕತೆಯ ಲೇಪವನ್ನು ಕೊಡುತ್ತವೆ.

ಈ ವರ್ಣಪಟಲದ ಇನ್ನೊಂದು ಅಂಚಿನಲ್ಲಿ ವ್ಯಕ್ತಿಯೆಂದರೆ, ತಾನು ಉತ್ಪಾದಿಸುವ ಸರಕುಗಳ ಗ್ರಾಹಕ ಮಾತ್ರವೆಂದು ತಿಳಿಯುವ ವಾಣಿಜ್ಯಸಂಸ್ಕೃತಿಯ ಕಬಂಧಬಾಹುಗಳು ಮುಂದೆ ಚಾಚಿರುತ್ತವೆ. ತನ್ನನ್ನು ವಿರೋಧಿಸುವ ಕಲೆಯನ್ನೂ ಮಾರಾಟದ ಸರಕಾಗಿಯೇ ಮಾಡಿಬಿಡುವ ಜಾಣ್ಮೆ ಇದಕ್ಕೆ ಇದೆ. ಮೂರ್ತಘಟಕವಾದ ವ್ಯಕ್ತಿಯ ಹೊರಚಾಚುಗಳು, ಅಮೂರ್ತವಾದ ಸಾಮಾಜಿಕ, ರಾಜಕೀಯ ಘಟಕಗಳ ಸಂಗಡ ಪಡೆಯುವ ಸಂಪರ್ಕಗಳು, ನಡೆಸುವ ಸಂಘರ್ಷಗಳು ಗಾಳಿಗೀಳುಗಳೇ ಆಗಿರುತ್ತವೆ. ಇಂಥ ಕಡೆ ನಿಜವಾದ ಏಟು ಬೀಳುವುದು ಮನುಷ್ಯಸಂಬಂಧಗಳಿಗೆ. ಆದ್ದರಿಂದಲೇ *ಸಂಬಂಜ ಅನ್ನೋದು ದೊಡ್ಡದು ಕಣಾ* ಎಂಬ ದೇವನೂರ ಮಹಾದೇವರ ಒಂಟಿದನಿಯು ನಮ್ಮ ಕಾಲದ ಅಳಲುಗಳ ಸಂಗ್ರಹರೂಪವೆಂದು ನನಗೆ ತೋರುತ್ತದೆ.



ಈಗಾಗಲೇ ಚರ್ವಿತಚರ್ವಣವಾಗಿರುವ ಸಾಹಿತ್ಯಕ ಚಳುವಳಿಗಳ ಪರಿಭಾಷೆಯಲ್ಲಿ ಈ ಸನ್ನಿವೇಶವನ್ನು ಪರಿಶೀಲಿಸುವುದರಿಂದ ಹೆಚ್ಚು ಪ್ರಯೋಜನವಾಗುವುದಿಲ್ಲ. ಆಧುನಿಕತೆಯ ದೀಕ್ಷೆಯನ್ನು ಮುಂಚಿತವಾಗಿ ಅಥವಾ ತಡವಾಗಿ ಪಡೆದ ವಿಭಿನ್ನ ಸಮುದಾಯಗಳ ಹಾಡುಪಾಡುಗಳನ್ನೇ ಈ ಕಾಲಮಾನದ ಸಾಹಿತ್ಯವು ಕಂಡರಿಸಿದೆ. ಗ್ರಾಮೀಣ ಸಮಾಜವು ತನ್ನ ಫ್ಯೂಡಲ್ ಪದ್ಧತಿಯಿಂದ ಪಡೆದ ಬಿಡುಗಡೆಯು, ದೂರನಿಯಂತ್ರಣ ಮಾಡುವ ಬಂಡವಾಳಶಾಹಿಗಳ ಕೈಯಲ್ಲಿ ಮರೆಯಾದುದರ ಕಥನವು ತನ್ನೆಲ್ಲ ವಿವರಗಳಲ್ಲಿ ದಾಖಲೆಯಾಗಿದೆ. ಸಿದ್ಧಲಿಂಗಯ್ಯನವರು ಹೇಳಿದ 'ಅಲ್ಲೇ ಕುಂತವ್ರೆ ಅವರು ಅಲ್ಲೇ ಕುಂತವ್ರೆ' ಎನ್ನುವುದು ಬಹಳ ಸರಿಯಾದ ಭಾಷ್ಯ. ಪ್ರಜಾಪ್ರಭುತ್ವ, ಪ್ರಗತಿಯ ಪರಿಕಲ್ಪನೆ, ಎಡಪಂಥೀಯ ರಾಜಕೀಯ ಚಿಂತನೆಗಳು ಎದುರಿಸಿದವೆನ್ನಲಾದ ಹಿಂಜರಿತ, ತಂತ್ರಜ್ಞಾನವೆಂಬ ಮಾಯಾಮೃಗ ಎಲ್ಲವೂ ಈ ಸ್ಥಿತಿಗೆ ತಮ್ಮದೇ ಆದ ಕಾಣಿಕೆಯನ್ನು ನೀಡಿವೆ. ಆಧುನಿಕತೆ, ಅಸ್ತಿತ್ವವಾದ, ವಿಜ್ಞಾನ ಮತ್ತು ಮನಶ್ಶಾಸ್ತ್ರಗಳನ್ನು ತನ್ನ ತಾತ್ವಿಕನೆಲೆಗಟ್ಟಾಗಿ ಹೊಂದಿದ ಸಾಹಿತ್ಯವು ಸ್ವಾನುಭವದ ಅಧಿಕೃತತೆಗೆ ನೀಡಿದ ಒತ್ತು, ಆಧುನಿಕ ಸಮಾಜದ ವಿಘಟನೆಯ ಪ್ರಕ್ರಿಯೆಗೂ ಕನ್ನಡಿ ಹಿಡಿಯಲು ನೆರವಾಯಿತು.

ಇವೆಲ್ಲದರ ನಡುವೆ ವ್ಯಕ್ತಿಯ ಅಂತರಂಗಕ್ಕೆ ಏನಾಯಿತು ಎನ್ನುವುದು ಕುತೂಹಲಕರ. ನಿಜ, ಈ ಅಂತರಂಗವು ಹೊರಗಿನಿಂದ ಪ್ರಭಾವಿತವಾಗದ, ಪಾವಿತ್ರ್ಯವೇ ಮೂಲ ನೆಲೆಯಾದ ಗರ್ಭಗುಡಿಯೇನೂ ಅಲ್ಲ. ಬದಲಾಗಿ ಸಮುದಾಯದ ನಡಾವಳಿಗಳಿಂದಲೇ ದತ್ತವಾದ ಮೌಲ್ಯಗಳು ಅದರ ಸ್ವರೂಪವನ್ನು ರೂಪಿಸುತ್ತವೆ. ಆಧುನಿಕಪೂರ್ವ ಸಮಾಜಗಳು ರೂಪಿಸಿಕೊಂಡಿದ್ದ ಸಹಿಷ್ಣುಸಾಧ್ಯತೆಗಳನ್ನು ಪಾಶ್ಚಾತ್ಯಪ್ರಣೀತವಾದ ಮೌಲ್ಯ ಸಂಹಿತೆಯು ನಾಶಮಾಡಿದವು. ನಾನು ಇಲ್ಲಿ ಪ್ರಸ್ತಾಪಿಸುತ್ತಿರುವುದು ಸಂಘಪರಿವಾರವು ಬಡಾಯಿ ಕೊಚ್ಚಿಕೊಳ್ಳುವ ಹಿಂದೂ ಮೌಲ್ಯಸಂಹಿತೆಯನ್ನಲ್ಲ. ಬದಲಾಗಿ ಅದನ್ನು ಎದುರಿಸಲೆಂದೇ, ಅಂಚಿನಲ್ಲಿರುವ ಗ್ರಾಮೀಣ ಸಮುದಾಯಗಳು ಕಟ್ಟಿಕೊಂಡಿದ್ದ ಬದುಕಿನ ಕ್ರಮವನ್ನು. ಅದು ಗಾಂಧೀಜಿಯವರು ಕನಸಿದ ಹಿಂದ್ ಸ್ವರಾಜ್ಯವೂ ಹೌದು. ಕಳೆದ ಐವತ್ತು ವರ್ಷಗಳ ಮುಖ್ಯ ವಿಘಟನೆಯೆಂದರೆ ನಂಬಿಕೆಯಲ್ಲಿ ಉಂಟಾದ ಕ್ರೈಸಿಸ್. ಇಲ್ಲಿ, ನಂಬಿಕೆಯೆಂದರೆ ದೈವಭಕ್ತಿಯಲ್ಲ. ಬದಲಾಗಿ, ಅದು ಮನುಷ್ಯಸಂಬಂಧಗಳಲ್ಲಿ ಇದ್ದ ನಂಬಿಕೆಯ ಸ್ಫೋಟ. ಕಳೆದುಹೋದ ತಮ್ಮ ತಂಗಿಯರನ್ನು ಹುಡುಕುವ ಪ್ರಕ್ರಿಯೆಯು, ಕಳೆದಿರುವುದನ್ನು ಖಚಿತಪಡಿಸುವ ಹಾಗೆ, ಕಳೆದುದು ಸಿಕ್ಕಿದೆ ಎನ್ನುವುದನ್ನಲ್ಲ. ಧರ್ಮವು ವಂಚನೆಯಾಗಿ, ಭಕ್ತಿಯು ಅಸಾಧ್ಯವಾಗಿ, ಪ್ರೀತಿಯು ಹುನ್ನಾರವಾದಾಗ ಮಾನವೀಯತಾವಾದವು ಬಹಳ ನಿರುಪಯುಕ್ತವಾದ ಕರವಸ್ತ್ರವಾಗಿ ಕಣ್ಣೀರನ್ನು ಒರಸುತ್ತದೆ, ಅಷ್ಟೆ. ಕನ್ನಡ ಸಾಹಿತ್ಯವು ಈ ದುರಂತ ಮತ್ತು ಅದರ ಇಲಾಜುಗಳನ್ನು (?) ಹುಡುಕುವ ಪ್ರಯತ್ನಗಳನ್ನು ಮಾಡುತ್ತಲೇ ಬಂದಿದೆ. ಅವನತಿಮುಖವಾಗಿ ಚಲಿಸುತ್ತಿರುವ ಸಮಾಜದ ಪ್ರಳಯ ಘೋಷಣೆ ಮಾಡುವವನಂತೆ ಮಾತನಾಡುವುದು ನನಗೆ ಇಷ್ಟವಿಲ್ಲ. ಬಿಡುಗಡೆಯನ್ನು ಪಡೆಯುತ್ತಿರುವ ಸಮುದಾಯಗಳ ಕರ್ತೃತ್ವಶಕ್ತಿಯಲ್ಲಿ ನನಗೆ ನಂಬಿಕೆಯಿದೆ. ಆದರೆ ಇತಿಹಾಸದ ನಿಷ್ಕರುಣೆಯು, ನಿರ್ನಾಮವಾಗಿರುವ ನೀಲನಗರಾವಳಿಗಳ ನೆನಪನ್ನು ಮಾಡಿಕೊಡುತ್ತದೆ. ಪಶ್ಚಿಮವು ತನ್ನ ಪ್ರವೇಶದಿಂದಲೇ ಆಗಿರುವ ಅವನತಿಯನ್ನು ನೋಡಿ, ತಾನೇ ಗೇಲಿಮಾಡಿ ನಗುವ, ನಮಗೆ ನೀತಿಪಾಠ ಹೇಳುವ ನಾಟಕವನ್ನು ಆಡುತ್ತಿರುವುದು ಇತಿಹಾಸದ ವ್ಯಂಗ್ಯ. ಈ ಕಾಲಖಂಡದ ಸ್ಥಿತ್ಯಂತರಗಳನ್ನು ಕಲ್ಲುಕರಗುವ ಸಮಯವೆಂದು ವರ್ಣಿಸಬೇಕೋ ಕಲ್ಲಗಾಣದಲ್ಲಿ ಅರೆಯುವ ಸಮಯವೆಂದು ಹೇಳಬೇಕೋ ತಿಳಿಯುವುದಿಲ್ಲ. ಟ್ರಾಜಿಕ್ ಆಪ್ಟಿಮಿಸಂ ಎಂದು ಕರೆದಿದ್ದು ಇದನ್ನೇ ಇರಬೇಕು.

ಸಾಹಿತ್ಯಸೃಷ್ಟಿ ಮತ್ತು ವಿತರಣೆಯ ಕಾರಣಮೀಮಾಂಸೆಯನ್ನು ಕೊಂಚ ಬದಿಗಿರಿಸಿ ಏನಾಗಿದೆ ಎನ್ನುವುದನ್ನು ನೋಡಿದಾಗ, ಕಾವ್ಯ ಎನ್ನುವ ಪ್ರಕಾರವು ತನ್ನ ಕೇಂದ್ರಸ್ಥಾನದಿಂದ ಬದಿಗೆ ಸರಿದು ಕಥಾಸಾಹಿತ್ಯಕ್ಕೆ ಎಡೆಮಾಡಿಕೊಟ್ಟಿರುವುದು ಢಾಳಾಗಿ ಕಾಣುತ್ತದೆ. ನಿಯತ ಲಯಗಳ ಫಲವಾದ ಕಾವ್ಯದ ಸಂವಹನಶೀಲತೆಗೂ ಹಾಗಲ್ಲದ ಗದ್ಯಾಂತರ್ಗತವಾದ ಲಯಗಳ ಸಂವಹನಶೀಲತೆಗೂ ವ್ಯತ್ಯಾಸವಿದೆ. ಕಾವ್ಯಕ್ಕೆ ಸಹಜವೆಂದು ಪರಿಗಣಿತವಾದ ನಾದ-ಲಯ ಸಂಬಂಧಿಯಾದ ಬಾಹ್ಯ ಆಕೃತಿಗಳ ನಿರಾಕರಣೆಯು ಒಂದು ಬಗೆಯ ಬಿಕ್ಕಟ್ಟಿಗೆ ಕಾರಣವಾಗಿರುವುದಂತೂ ನಿಜ. ಅವುಗಳನ್ನು ಮರುಸ್ಥಾಪಿಸುವ ಪ್ರಯತ್ನಗಳು ಕಡಿಮೆಯಾಗಿರುವುದರಿಂದಲೇ ಗಮನಕ್ಕೆ ಬಾರದಂತೆ ಆಗಿವೆ. ಈಗ ಕಾವ್ಯವು ನಮ್ಮ ಸ್ಮೃತಿಯ ಭಾಗವಾದ ಸಂಗಾತಿಯಾಗದೆ, ನಾವು ವಿಸಿಟ್ ಮಾಡಿ ಹಿಂದಿರುಗಬೇಕಾದ ಲಿಖಿತ ದಾಖಲೆಯಾಗಿದೆ. ಇಂದು ಕಾವ್ಯಗಳ ಮೂಲಕ ಸಂವಹನವಾಗಬೇಕಾಗಿರುವ, ಕಥೆಯಾಗಲೀ ಕಥನವಾಗಲೀ ಅಲ್ಲದ ಸಂಗತಿಗಳಿಗೆ ಅವೇ ಸರಿಯಾದ ರೂಪವೂ ಇರಬಹುದು. ಆದರೆ, ಕಾವ್ಯಕ್ಕೆ ಒದಗಿರುವ ಓದುಗರ ಅಭಾವವು ಸುಗಮಸಂಗೀತದ



ಗ್ರಾಹಕರಿಂದ ಸರಿಹೋಗುವುದಿಲ್ಲ ಎನ್ನುವುದೂ ನಿಜ. ಇಂಥ ಕವಿತೆಯಲ್ಲಿ ಇರುವ ಕಾವ್ಯತ್ವವನ್ನು ಕಥೆ-ಕಾದಂಬರಿಗಳೇ ಹೊಂದಿರಬಹುದಾದ ಸಾಧ್ಯತೆಗಳು ಸ್ಪಷ್ಟವಾಗಿವೆ, ಕುಸುಮಬಾಲೆ ಮತ್ತು ಚಕೋರಿಗಳು ಹೇಳುವುದೂ ಇದೇ ಸತ್ಯವನ್ನು. ಸಾಮುದಾಯಿಕವಾದ ಅನುಭವದ ತುಣುಕುಗಳನ್ನು ವೈಯಕ್ತಿಕವಾದ ಅನುಭವದ ಶೋಧಕಗಳಲ್ಲಿ ಸೋಸಿ ತೆಗೆದು, ಅವು ತಮಗಿರುವ ಪ್ರಾತಿನಿಧಿಕ ಸ್ವರೂಪದಿಂದಲೇ ಸಂವಹನವಾಗಬೇಕೆಂದು ನಂಬುವುದು ಇಂದಿನ ಕಾವ್ಯದ ಲಕ್ಷಣ. ಬದಲಾಗಿ, ವೈಯಕ್ತಿಕವಾದುದನ್ನು ಬದಿಗೆ ಸರಿಸಿ ಸಮುದಾಯದ ಕೆಲವು ವರ್ಗಗಳ ವಿಷಾದ-ಆಕ್ರೋಶಗಳ ದಾಖಲೆಯಾದ ಕಾವ್ಯವು, ಬಹುಬೇಗ ಅಸಹಾಯಕತೆ, ವಿಷಾದಗಳಿಗೆ ಎಡೆಮಾಡಿಕೊಟ್ಟಿದ್ದನ್ನು ಕಾಣುತ್ತೇವೆ. ಇಂಥ ಕಡೆ ಕಾವ್ಯದ ಸಾಮಾಜಿಕ ಪರಿಣಾಮಗಳ ಬಗ್ಗೆ ಆ ಕವಿಗಳು ಬಳಸಿಕೊಂಡ ರೆಟರಿಕ್ ಅನ್ನು, ಅದೇ ಕವಿಗಳ ಮುಖಕ್ಕೆ ರಾಚುವ ಪ್ರಯತ್ನ ನಡೆಯಿತು. ಎಂದರೆ ಬೇಂದ್ರೆಯವರನ್ನೋ ಕುವೆಂಪು ಅವರನ್ನೋ ಕೇಳದ ಪ್ರಶ್ನೆಗಳನ್ನು, ಅವರ ಕಾವ್ಯದಿಂದ ಮಾಡದ ನಿರೀಕ್ಷೆಗಳನ್ನು ಸಿದ್ಧಲಿಂಗಯ್ಯನವರ ಕಾವ್ಯದಿಂದ ಮಾಡುವ ಕೆಲಸ. ಅದೇ ರೀತಿ ಸಾಹಿತಿಗಳ ಸ್ವಂತಜೀವನದ ಸೋಲು-ಹೊಂದಾಣಿಕೆಗಳನ್ನು ಮುಂದೆಮಾಡಿಕೊಂಡು ಅವರ ಬರವಣಿಗೆಯ ಅಧಿಕೃತತೆ ಪ್ರಾಮಾಣಿಕತೆಗಳನ್ನು ಪ್ರಶ್ನಿಸುವ, ಅಗ್ನಿದಿವ್ಯವನ್ನು ಈ ಪೀಳಿಗೆಯ, ಈ ಚಹರೆಗಳ ಲೇಖಕರು ಎದುರಿಸಿದರು. ತಪ್ಪು ರಾಜಕೀಯವು, ತಟಸ್ಥತೆಗಿಂತ ಅಪಾಯಕರವೆನಿಸಿತು. ಇದೆಲ್ಲದರ ನಡುವೆಯೂ ಇತಿಹಾಸಗಳು, ಪುರಾಣಗಳು ಮರುವ್ಯಾಖ್ಯಾನ ಮತ್ತು ಮರುಮಂಡನೆಗಳಿಗೆ ಒಳಗಾದವು. ಅಂಥ ಪ್ರಯತ್ನಗಳು ನಿರ್ದಿಷ್ಟ ಆಶಯಗಳ ಚೌಕಟ್ಟಿಗೆ ಅಳವಡಿಸಲ್ಪಟ್ಟವು. ಇದು ಸಹಜವೂ ಸರಿ. ಎಲ್ಲ ಇತಿಹಾಸ ಲೇಖನವೂ ವರ್ತಮಾನದ ಒತ್ತಡಗಳ, ಹುನ್ನಾರಗಳ ಪರಿಣಾಮವೇ ಹೌದು. ಇತಿಹಾಸದ ಭಾರವನ್ನು ಹೊರಬೇಕಾದ ಮನುಷ್ಯನು ಹಿಡಿದ ಹಲವು ದಿಕ್ಕುಗಳ ದಾಖಲೆಯಾಗಿ ಕನ್ನಡ ಸಾಹಿತ್ಯವು ಸಾಕಷ್ಟು ಕೆಲಸ ಮಾಡಿದೆ. ಆದರೆ ಸಾಹಿತ್ಯಕ ಪಠ್ಯಗಳ ಅನನ್ಯ ಲಕ್ಷಣವೆನ್ನಲಾದ ಬಹುಮುಖತೆ ಹಾಗೂ ವಿದ್ರೋಹ ಸಾಧ್ಯತೆಗಳು (ಸಬ್‌ವರ್ಶನ್) ಓದಿನಲ್ಲಿ ಇವೆಯೋ ಅಥವಾ ಪಠ್ಯದಲ್ಲಿ ಇವೆಯೋ ಎಂಬ ನಿಗೂಢವನ್ನು ಇನ್ನೂ ಬಿಡಿಸಬೇಕಾಗಿದೆ. ಆದರೆ, ಲೇಖಕನ ಆಶಯವು ಏಕಮುಖವಾದಷ್ಟೂ ಅದು ಸಂಕೀರ್ಣತೆಯನ್ನು ಕಳೆದುಕೊಳ್ಳುವುದೇ? ಅವನು ಕಾಣಿಸುವ ವಿಧಾನದಲ್ಲಿಯೇ ಕಾಣ್ಕೆಯೂ ಇದ್ದುಬಿಡುತ್ತದೆಯೇ? ಇದು ಎಲ್ಲ ಸಾಹಿತ್ಯಪ್ರಕಾರಗಳಿಗೂ ಪ್ರಸ್ತುತವಾದ ಪ್ರಶ್ನೆಯೇ. ಏಕೆಂದರೆ, ವಾಸ್ತವದ ಪ್ರತಿನಿಧೀಕರಣವಾಗಿಯೂ, ಅದನ್ನು ಮರುರೂಪಿಸುವ ಭಾಷೆಯೆಂಬ ಮಾಧ್ಯಮವನ್ನು, ಮತ್ತಷ್ಟು, ದತ್ತವೋ ನಿರ್ಮಿತವೋ ಆದ ಶಿಲ್ಪಸಾಧ್ಯತೆಗಳಲ್ಲಿ ಅಳವಡಿಸಿಕೊಡುವ ಸಾಹಿತ್ಯವು, ವಾಸ್ತವದಿಂದ ಸಾಕಷ್ಟು ದೂರ ಸರಿದಿರುವುದು (ಟ್ವೈಸ್ ರಿಮೂವ್ಡ್ ಫ್ರಂ ರಿಯಾಲಿಟಿ ಆಗಿರುವುದು) ಅನಿವಾರ್ಯ. ಆದ್ದರಿಂದ ಈ ಅರೆ – ಶತಮಾನದ ಸಾಹಿತ್ಯಕೃತಿಗಳಲ್ಲಿ ಮನೆಮಾಡಿರುವ ಕರ್ನಾಟಕದ ಜನಜೀವನದಲ್ಲಿ, ಸಂಪೂರ್ಣ ಸತ್ಯ ಅಥವಾ ಅಧಿಕೃತತೆಯನ್ನು ಹುಡುಕುವ ಪ್ರಯತ್ನ ಕೂಡ ನಿಷ್ಫಲವೇ ಆದೀತು. ಅದಕ್ಕೆ ಸಾಕ್ಷಿಯೆಂದರೆ, ನಮ್ಮ ಕಣ್ಣೆದುರಿಗೆ ಹೊಸಹೊಸದಾಗಿ ಅನಾವರಣವಾಗುತ್ತಿರುವ ಲೋಕಗಳೆಲ್ಲವೂ ಮೊದಲಿನಿಂದಲೂ ಇದ್ದವೇ ತಾನೆ? ಅಂತಿಮವಾಗಿ ಪರಿಮಿತಿಯಿರುವುದು ನೋಟದಲ್ಲಿಯೇ ವಿನಾ ಲೋಕದಲ್ಲಿ ಅಲ್ಲ.

ಕಥಾಸಾಹಿತ್ಯಕ್ಕೆ ವಿಶಿಷ್ಟವಾಗಿ ಹೇಳುವುದಾದರೆ, ಸಾಹಿತಿಯಾದವನಿಗೆ ಸತ್ಯವನ್ನು ಹೇಳುವ ಉರಿಯ ನಾಲಗೆ ಬೇಕು. ಸಾಹಿತಿಯಾದವನಿಗೆ ಸತ್ಯವು ಗೊತ್ತಾಗುವುದೆಂದಲ್ಲ, ಸತ್ಯವು ಗೊತ್ತಿರುವ ಹಲವರಿಗೆ ಸಾಹಿತ್ಯರಚನೆಯ ಅವಕಾಶಗಳು ಇರಬೇಕು. ಇಲ್ಲವಾದರೆ ಮೂಲಕ ಮಹಾಶಯರ ರಾಜ್ಯಭಾರವೇ ಮುಂದುವರಿಯುತ್ತದೆ. ನಮ್ಮಲ್ಲಿ ಲಾರ್ಜರ್ ದ್ಯಾನ್ ಲೈಫ್ ಆದ ನಾಯಕರಿಗೆ ಸಿಕ್ಕ ಮಹತ್ವವು ಸಾಮಾನ್ಯನಿಗೆ ಸಿಕ್ಕಲಿಲ್ಲ. ಪುರುಷೋತ್ತಮನ ರೂಪರೇಖೆಗಳನ್ನು ಕಟ್ಟುವ ಕೆಲಸದಲ್ಲಿ ತಲ್ಲೀನವಾಗಿಬಿಟ್ಟಾಗ ಶ್ರೀಸಾಮಾನ್ಯನೆಂಬುವನು ಅದೃಶ್ಯನಾಗಿಬಿಟ್ಟ. ಕೆ. ವಿ. ನಾರಾಯಣ ಅವರು ಈ ಮಾತನ್ನು ಬಹಳ ಚೆನ್ನಾಗಿ ಗುರುತಿಸಿದ್ದಾರೆ: ಪ್ರಜಾಪ್ರಭುತ್ವದ ಚೌಕಟ್ಟನ್ನು ಆರಿಸಿಕೊಂಡರೂ ಸಾಹಿತ್ಯದಲ್ಲಿ ನಾವು, ವ್ಯಕ್ತಿಯ ವಿಶಿಷ್ಟತೆ ಹಾಗೂ ವಿಭಿನ್ನತೆಗಳನ್ನು ಪ್ರತಿಪಾದಿಸುತ್ತಾ ಬಂದಿದ್ದೇವೆ. ಹಾಗೆ ನೋಡಿದರೆ ನಮ್ಮ ಪ್ರಜಾಪ್ರಭುತ್ವದ ಆಚರಣೆಯೂ ವ್ಯಕ್ತಿಯ ಸಮಾನತೆಯನ್ನು ನೂರಕ್ಕೆ ನೂರು ಪ್ರಮಾಣದಲ್ಲಿ ತೋರಿಸುವಂತದಾಗಿಲ್ಲ. ಅಂದರೆ ಅರೆಬರೆ ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿಯೂ ನಾವು ಅದರ ಸುಳಿವನ್ನು ಸಾಹಿತ್ಯಕೃತಿಗಳ ವಲಯದಿಂದ ಹೊರಗಿರಿಸಿದ್ದೇವೆ. ಈ ಮಾತು ಆರೋಪದಂತೆ ತೋರಬಹುದು. ಆದರೆ, ವಿಚಾರಿಸಿ ನೋಡಿದರೆ ಇದು ಆರೋಪವಲ್ಲ; ವಾಸ್ತವವೆಂಬುದು ತಿಳಿಯುತ್ತದೆ. ಏಕೆಂದರೆ ಪ್ರಜಾಪ್ರಭುತ್ವ ನಿರೀಕ್ಷಿಸುವುದು ಕೊಟ್ಟುಕೊಳ್ಳುವ ಮಾನವರನ್ನು, ಕಟ್ಟಿಕೊಳ್ಳುವ ಮಾನವರನ್ನಲ್ಲ. (ಬೇರು ಕಾಂಡ ಚಿಗುರು ಕೆ. ವಿ. ನಾರಾಯಣ, ೧೯೯೭, ಪುಟ ೪). ಕಳೆದ ಕೆಲವು ದಶಕಗಳಲ್ಲಿ ಈ ಕೊರತೆಯು ಕೊಂಚವಾದರೂ ನೀಗಿದೆಯೆಂದು ನಾನು ತಿಳಿಯುತ್ತೇನೆ. ಅದು ಸಾಧ್ಯವಾಗಿರುವುದು, ಸಾಧನೆ ಎಂದರೆ ಯಾವುದು ಮತ್ತು ಯಾರದು ಎಂಬುದನ್ನು ನಮ್ಮ ತಿಳಿವಳಿಕೆಯು ಕೊಂಚ ಬದಲಾಗಿರುವುದರಿಂದ ಅಥವಾ ಸಾಧನೆಗಳನ್ನು ವಿವರಿಸುವ ಗುತ್ತಿಗೆ ತೆಗೆದುಕೊಂಡವರ ವಲಯವು ವಿಸ್ತರಿಸಿದ್ದರಿಂದಲೂ ಇರಬಹುದು. ಆದರೂ ಗತಕಾಲವು ನಮ್ಮ ಸೃಜನಶೀಲತೆಯ ತೆಕ್ಕೆಗೆ ದೊರಕುವಷ್ಟು ಸುಲಭವಾಗಿ ವರ್ತಮಾನವು ಸಿಗುವುದಿಲ್ಲವೇನೋ. ಏಕೆಂದರೆ, ಚಲನಶೀಲವಾದ ಬದುಕನ್ನು ಪೂರ್ವಗ್ರಹಶೀಲವಾದ ದೃಷ್ಟಿಕೋನಗಳು ಹಿಡಿಯಹೊರಟಾಗ ಉಂಟಾಗುವ ಸಮಸ್ಯೆಗಳನ್ನು ಬಿಡಿಸಿಕೊಳ್ಳುವುದು ಕಷ್ಟ.

ಪಶ್ಚಿಮದ ಕಡೆಗಿನ ಚಲನೆ ಮತ್ತು ಭ್ರಮನಿರಸನಗಳು ಕಳೆದ ಐವತ್ತು ವರ್ಷಗಳ ಬಹುಮುಖ್ಯ ಕರ್ಷಣಗಳಲ್ಲಿ ಒಂದು. ಪ್ರತಿಷ್ಠಿತ ಶಕ್ತಿಗಳ ಆಯ್ಕೆ ಮತ್ತು ಅವುಗಳನ್ನು ನಿಯಂತ್ರಿಸುವ/ಬಲಪಡಿಸುವ ಅಂತಾರಾಷ್ಟ್ರೀಯ ಒತ್ತಡಗಳ ಆಯ್ಕೆಯು ಪಶ್ಚಿಮೀಕರಣವಾಗಿ, ಸಮುದಾಯಗಳು ಅನುಭವಿಸುತ್ತಿರುವ ದುರಂತಗಳು ಪಶ್ಚಿಮದ ಬಗೆಗಿನ ಭ್ರಮನಿರಸನಕ್ಕೆ ಒತ್ತಾಸೆ ನೀಡಿದಾಗ, ಕಲೆಗಳು ತಳೆಯುವ ನಿಲುವುಗಳು ಸಂಕೀರ್ಣವಾದರೂ ನಿರ್ವೀರ್ಯವಾಗಬಹುದು. ಪ್ರಶ್ನೆಯಿರುವುದು, ತಂತ್ರಜ್ಞಾನ/ವಿಜ್ಞಾನಗಳ ವಿವರಗಳಲ್ಲಿಯೋ ಅಥವಾ ಅವುಗಳು ಮುಂದಿಟ್ಟಿರುವ ಆಧುನಿಕವೆನ್ನಲಾದ ಮೌಲ್ಯ ವ್ಯವಸ್ಥೆಯಲ್ಲಿಯೋ ಎನ್ನುವುದು ನಿರ್ಣಾಯಕವಾದ ಸಾಹಿತ್ಯವು ಎದುರಾಗಬೇಕಾದ ಪ್ರಶ್ನೆ. ಬಡವರೇ ಭಾಗ್ಯವಂತರು, ಸರಳತೆಯೇ ಸುಖ ಎನ್ನುವ ನಿಲುವುಗಳು ಶೋಷಣೆ/ಯಥಾಸ್ಥಿತಿವಾದಗಳಿಗೆ ಸಮರ್ಥನೆಯಾಗಬಾರದು. ಆದರೆ, ಬಡತನವು ಒಂದು ಅಪರಾಧ, ಅನುಭೋಗವೇ ಆನಂದ ಎಂಬ ನಿಲುವು ಹುಟ್ಟಿಸುವ ಧೋರಣೆಯು ಉಂಟುಮಾಡುವ ಸ್ಪರ್ಧಾಮನೋಭಾವದ ಬಗ್ಗೆಯೂ ನಾವು ಯೋಚಿಸಬೇಕು. ಪ್ರಾಯಶಃ ಸಮಾಜವನ್ನು ನೋಡುವ ನಿಲುವುಗಳಿಗೂ ಜೀವನವನ್ನು ನೋಡುವ ನಿಲುವುಗಳಿಗೂ ಇರಬೇಕಾದ ಅಂತರದ ಅರಿವು ನಮ್ಮಲ್ಲಿ ಮಾಸುತ್ತಿದೆಯೆಂದು ತೋರುತ್ತದೆ. ನಮ್ಮ ಸಾಹಿತ್ಯವು ತನ್ನೆಲ್ಲ ಪರಿಮಿತಿಗಳ ನಡುವೆಯೂ ಇಂಥ ಒಂದು ದಿಕ್ಕಿನಲ್ಲಿ ತಡಕಾಡುತ್ತಿದೆ. ಸಮುದಾಯಗಳಿಗೆ ಇಲ್ಲದ ವಿವೇಕವು ಸಾಹಿತಿಗಳಲ್ಲಿ ನಿಕ್ಷಿಪ್ತವಾಗಿರಬೇಕೆಂಬ ನಿರೀಕ್ಷೆ ಮತ್ತು ಇರುತ್ತದೆ ಎಂಬ ಭ್ರಮೆ ಎರಡೂ ನಮಗೆ ಬೇಕಾಗಿಲ್ಲ. ಹಾಗೆಂದು, ಪರಿವರ್ತನೆಯ ತಲ್ಲಣಗಳನ್ನು ಪ್ರಳಯದ ಮುನ್ಸೂಚನೆಯೆಂದು ತಿಳಿಯುವ ನಿರಾಶಾವಾದವೂ ಬೇಡ. ಒಲವೇ ನಮ್ಮ ಬದುಕು, ಇನ್ನಿದಕ್ಕಿಂತ ಸರಳತೆ ಸಾಧ್ಯವೇ ಇಲ್ಲ ಮುಂತಾದ ಮಾತುಗಳು ಸೋತವರ, ಹೋರಾಡದವರ ತತ್ವಜ್ಞಾನವೇನೂ ಅಲ್ಲ. ಸಾಹಿತ್ಯವು ಕಾಣಿಸುವುದನ್ನು ಕಾಣುವ/ಕಾಣಬೇಕಾದ ವಾಚಕವರ್ಗವು, ತನ್ನ ಕಣ್ಣುಗಳನ್ನು ಕಳೆದುಕೊಳ್ಳುವ ದುರಂತವೂ ಸಂಭವಿಸುತ್ತಿರಬಹುದಲ್ಲವೇ?? ಸರಿಯಾಗಿ ಕಾಣುವುದರಿಂದ ಅವರ ಬದುಕಿನ ಬವಣೆಗಳು ದೂರವಾಗುವುದಿಲ್ಲ. ಆದರೆ, ಅವುಗಳನ್ನು ಕಾಣುವ ವೈಯಕ್ತಿಕ ದೃಷ್ಟಿಕೋನದಲ್ಲಿ ಕೊಂಚವೇ ಕೊಂಚ ಬದಲಾವಣೆಯಾಗಬಹುದು. ಅದಕ್ಕಿಂತ ಮುಖ್ಯವಾಗಿ, ಅವರಿಗೆ, ತಾತ್ಕಾಲಿಕವೇ ಇರಲೊಲ್ಲದೇಕೆ, ಕೆಲವು ತಂಗುದಾಣಗಳು ದೊರೆಯಬಹುದು. ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯವು ಒಟ್ಟಂದದಲ್ಲಿ ಇಂಥ ಹಲವು ತಂಗುದಾಣಗಳನ್ನು ಒದಗಿಸಿದೆಯೆಂದೇ ನನ್ನ ಭಾವನೆ. ಅವುಗಳಿಂದ ದೂರ ಸೆಳೆಯುವ ಕೆರಳಿಸುವ ಕೇಂದ್ರಗಳೂ ಸಾಕಷ್ಟಿವೆ. ಕನ್ನಡವನ್ನು ಕಳೆದುಕೊಳ್ಳುತ್ತಿರುವವರಿಗೆ ಕೆಲವು ಕೇಂದ್ರಗಳಾದರೆ, ಅದನ್ನೇ ಉಳಿಸಿಕೊಂಡವರಿಗೆ ಬೇರೆಯದೇ ಕೆಲವು ಕೇಂದ್ರಗಳು. ಇಂಥ ಸನ್ನಿವೇಶದಲ್ಲಿ ಆಯ್ಕೆಯು ವ್ಯಕ್ತಿಯದ್ದೋ ಕಾಲದ್ದೋ ಹೇಳುವುದು ಹೇಗೆ??

ಡಾ|| ಎಚ್. ಎಸ್. ರಾಘವೇಂದ್ರ ರಾವ್
ನಂ. ೭, ಶ್ರೀಮಾತಾ, ೧೫ನೆಯ ಕ್ರಾಸ್, ಐದನೆಯ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

# ಸಂಘಟನೆಯಿಂದ ಸಂಸ್ಥೆಯ ಕಡೆಗೆ – ಸುವರ್ಣ ಕರ್ನಾಟಕ

**ಕ**ರ್ನಾಟಕದ ಏಕೀಕರಣ ಎಂದರೆ ಭಾರತದ ಭಾಷಾವಾರು ಪ್ರಾಂತರಚನೆ, ನೆಹರೂ ಯುಗದ ಆದರೆ ನೆಹರುಗೆ ಒಲ್ಲದ ಮನಸ್ಸಿನ ರಚನೆ. ಸ್ವಾತಂತ್ರ್ಯಸಂಗ್ರಾಮದ ಜತೆಗೇ ಏಕೀಕರಣದ ಚಳವಳಿಯೂ ನಡೆದಿತ್ತು. ಆಗಿನ ಆಶಯಗಳ ಹಿಂದಿನ ಧೋರಣೆ ನಮ್ಮ ಸಂಸ್ಕೃತಿಯ ಬಲದಿಂದ ನಾಡನ್ನು ಕಟ್ಟುವುದಾಗಿತ್ತು. ಸ್ವಾತಂತ್ರ್ಯ ಏಕೀಕರಣಗಳ ನಂತರ ಇದು ಬದಲಾಯಿತು. ಸಂಸ್ಕೃತಿಯ ಉಳಿವು ಸರಕಾರದಿಂದ ಎಂಬ ಧೋರಣೆ ಮುಖ್ಯವಾಯಿತು. ಸರಕಾರವೂ ಕೇಂದ್ರದ ಮಾದರಿಯಲ್ಲಿ ಅಕಾಡೆಮಿ, ಸಂಸ್ಕೃತಿ ಇಲಾಖೆಗಳನ್ನು ಹುಟ್ಟುಹಾಕಿತು. ಸಾಹಿತ್ಯಪರಿಷತ್ತಿನಂತಹ ಸಂಸ್ಥೆ ಅನುದಾನಕ್ಕೆ ಒಳಗಾಯಿತು. ಇದಕ್ಕೆ ಪ್ರತಿಯಾಗಿ ಸಂಸ್ಕೃತಿ ಪ್ರಭುತ್ವದೊಡನೆ ಸೆಣಸಾಟ ಎಂಬ ಧೋರಣೆ ಬೆಳೆಯಿತು. ಇದರ ಅಭಿವ್ಯಕ್ತಿ ಒಮ್ಮೆ ವ್ಯಕ್ತಿಗತ ಅನುಭವದ ಹತಾಶೆಯಾಗಿ ಸ್ಫೋಟಗೊಂಡರೆ ಮತ್ತೊಮ್ಮೆ ಸಾಮುದಾಯಿಕ ಪ್ರತಿರೋಧವಾಗಿ ಕೆಲಸ ಮಾಡಿತು. ಈ ಪ್ರತಿರೋಧಗಳೂ ಕ್ರಮೇಣ ಸಾಂಸ್ಕೃತಿಕ ಸಂಘಟನೆಯಿಂದ ಸಾಂಸ್ಥಿಕ ಸ್ವರೂಪಕ್ಕೆ ತಿರುಗಿದ್ದು ಪ್ರಜಾಪ್ರಭುತ್ವದ ಹಿರಿಮೆ ಹೌದು. ಆದರೆ ಇದು ಆರ್ಥಿಕ ರಾಜಕೀಯದ ದುರಂತವೋ ತಾಂತ್ರಿಕ ಜಗತ್ತಿನ ಪ್ರಭಾಮಂಡಲದ ಅನಿವಾರ್ಯತೆಯೋ ? ಬೆದಕಿ ನೋಡಬೇಕು.

ಏಕೀಕರಣ ಭಾಷೆ ಭಾಷಾಸಂಸ್ಕೃತಿಗಳನ್ನು ಆಧರಿಸಿ ನಡೆಯಿತು. ಆದರೆ ಅದರ ಪ್ರಕ್ರಿಯೆ ಫಲಿತಗಳೆರಡೂ ರಾಜಕೀಯ ಸ್ವರೂಪದ್ದು. ರಾಜಕೀಯ ಕೇವಲ ಸರಕಾರದ ರಾಜಕೀಯವಲ್ಲ. ಅದು ಎಲ್ಲ ಸಾಂಸ್ಥಿಕ ರಚನೆಗಳ ರಾಜಕೀಯ ಮತ್ತು ಇದನ್ನು ಅಂತರಂಗಕ್ಕೆ ತೆಗೆದುಕೊಂಡ ವ್ಯಕ್ತಿ ಮತ್ತು ಸಮುದಾಯಗಳ ಆಲೋಚನೆಗಳಲ್ಲಿನ ರಾಜಕೀಯ, ಸಾಮಾಜಿಕ, ಆರ್ಥಿಕ, ರಾಜಕೀಯ ಪಲ್ಲಟಗಳಿಂದ ಸಾಂಸ್ಕೃತಿಕ ಅಭಿವ್ಯಕ್ತಿ ಸಪಾಟಾಗುತಿದೆ ಛಿದ್ರವಾಗುತ್ತಿದೆ ಎಂದು ತಲ್ಲಣಗಳನ್ನೇ ಲಕ್ಷಿಸುವ ಆತಂಕಗೊಳ್ಳುವ ಪರಿಪಾಟಿ ವಿಮರ್ಶನ ಪ್ರಪಂಚದಲ್ಲಿದೆ. ಇನ್ನೊಂದು ದೃಷ್ಟಿಯಿಂದ ನೋಡಿದರೆ 'ಕನ್ನಡಂಗಳು' ಹಿಂದೆಂದಿಗಿಂತಲೂ ಹೆಚ್ಚು ಸಮರ್ಥವಾಗಿ ಮುಖಾಮುಖಿಯಾಗಿವೆ. ಕರ್ನಾಟಕದ ವಿವಿಧ ಎಡೆಗಳ ಮಧ್ಯೆ ಸಂಪರ್ಕ, ಸಂಚಾರ ಸಂವಹನ ಮಿಲನ ಹಿಂದೆಂದಿಗಿಂತ ಹೆಚ್ಚಾಗಿದೆ. ಇಂಥ ಮುಖಾಮುಖಿಯಲ್ಲಿ ಜಗಳಗಳೂ ಮನಸ್ತಾಪಗಳೂ ಇರಬಹುದು. ಮದುವೆ ಬೇಕು ಜಗಳ ಬೇಡ ಎಂದರೆ ನೀರಸತೆಯೇ ಗತಿ. 'ಎಲ್ಲ ಸುಖೀ ಕುಟುಂಬ ಒಂದೇ ರೀತಿ ಸುಖಿ, ದುಃಖಿಗಳು ಮಾತ್ರ ತಮ್ಮ ತಮ್ಮ ರೀತಿಯಲ್ಲಿ ದುಃಖಿ' ಅಲ್ಲವೇ ?

ಏಕೀಕೃತ ಕರ್ನಾಟಕ ಆಧುನಿಕ ಕರ್ನಾಟಕವೂ ಹೌದು. ಈ ಆಧುನಿಕತೆಯಲ್ಲಿ ರಾಷ್ಟ್ರೀಯ ಅಂತಾರಾಷ್ಟ್ರೀಯ ಮಾದರಿಗಳು ಹುದುಗಿವೆ. ಆಧುನಿಕತೆಯ ಆವಿಷ್ಕಾರ ಅಳವಡಿಕೆಗಳು ಸಮಾನ ಪ್ರಮಾಣದಲ್ಲಿ ಅಲ್ಲದಿದ್ದರೂ ಸಮಾನ ರೀತಿಯಲ್ಲಿ ಸರ್ವವ್ಯಾಪಿಯಾಗಿವೆ. ಕಡಲತೀರದ ಯಕ್ಷಗಾನವಾಗಲಿ, ಬಯಲ ಸೀಮೆಯ ದೊಡ್ಡಾಟವಾಗಲಿ, ಮಲೆಮಾದೇಶ್ವರನ ಜಾತ್ರೆಯಾಗಲಿ, ಭೂತಕೋಲವೆ ಆಗಲಿ ಸೀರಿಯಲ್ ಸೆಟ್ ಅಲಂಕರಣ ವಿದ್ಯುದ್ದೀಪಗಳ ಬಳಕೆ ಒಂದೇ ರೀತಿ. ಕಂಸಾಳೆಗೂ, ಚಂಡೆಗೂ, ಮದ್ದಳೆಗೂ ಡಪ್ಪಿಗೂ ಒಂದೇ ರೀತಿಯ ಧ್ವನಿವರ್ಧಕಗಳ ಬಳಕೆ. ಆಧುನಿಕತೆ ಕೇವಲ ಹೊರ ನೋಟದ್ದಷ್ಟೆ ಅಲ್ಲ ಒಳನೋಟದ್ದೂ ಕೂಡ. ಎಲ್ಲ ಗ್ರಾಮೀಣ ಸಮಾಜದಲ್ಲೂ ಪಾಳೇಗಾರಿಕೆಯಿಂದ ಪ್ರಜಾಪ್ರಭುತ್ವದ ಕಡೆಗೇ ತುಡಿತ, ಆದ್ದರಿಂದ ವ್ಯತ್ಯಾಸಗಳೆಲ್ಲ ಊಳಿಗಮಾನ್ಯ ಪದ್ಧತಿಯವೇ. ನಗರದ ತೊಳಲಾಟವೆಲ್ಲ ಅಧಿಕಾರಶಾಹಿ ಜತೆಗೆ ಸೆಣಸಾಟದಲ್ಲೆ. ಆದರೆ ಇವೆರಡರ ಸೂತ್ರ ಆಡಿಸುವವರು ಅತ್ಯಾಧುನಿಕ ತಂತ್ರಜ್ಞಾನ ಮತ್ತು ಮಾರುಕಟ್ಟೆಯ ಒಡೆಯರು. ಈ ವಿಷಯ ನಮ್ಮ ಸಾಂಸ್ಕೃತಿಕ ವಲಯದಲ್ಲಿ ಅದರಲ್ಲೂ ರಂಗಭೂಮಿಯಲ್ಲಿ ಪ್ರಮುಖ ಪ್ರಜ್ಞೆಯಾಗಿಲ್ಲ.

ಕಳೆದ ಐವತ್ತು ವರ್ಷಗಳಲ್ಲಿ ಕನ್ನಡ ರಂಗಭೂಮಿ ಭಾರತದಲ್ಲಿಯೇ ಹೆಸರುವಾಸಿಯಾಗಿದೆ. ಇಲ್ಲಿನ ರಂಗ ಚಟುವಟಿಕೆಗಳೂ, ರಂಗಕರ್ಮಿಗಳೂ ಇದಕ್ಕೆ ಮುಖ್ಯ ಕಾರಣರು. ಇವರ ಆಶಯ, ಅಭಿವ್ಯಕ್ತಿ ಮತ್ತು ಅದರ ಫಲಿತಾಂಶಗಳ ಪಕ್ಷಿನೋಟ ನಾಡಿನ ಸಾಂಸ್ಕೃತಿಕತೆ ಹಿಡಿದ ದಾರಿಯ ದಿಕ್ಕು ದೆಸೆ ತೋರಿಸೀತು.



*ನಾಟಕ- ಭಾಷೆ – ಹೊಸ ಮಾರ್ಗ ಹೊಸ ದೇಶೀ*

*ಕಾವೇರಿ ಅತ್ತ ಕೃಷ್ಣೆಯೆಡೆಗೆ ಕೈಯ ಚಾಚಿ,*
*ಈ ಅರಬ್ಬಿಕಡಲ ರುದ್ರಗೀತ ತಬ್ಬಿ ಬಾಚಿ,...*

– ಅಡಿಗ

ನಾಟ್ಯಶಾಸ್ತ್ರದ ಕಾಲದಿಂದಲೂ ನಾಟಕದಲ್ಲಿ ಹಲವು ಪ್ರಾಕೃತಗಳ ಮಿಶ್ರಣವಿದೆ. ಪ್ರಾಕೃತ, ಡಯಲೆಕ್ಟ್ ಅಥವಾ ಉಪಭಾಷೆ ಪ್ರಾದೇಶಿಕವಾದದ್ದೆ ಸಾಮಾಜಿಕವೂ ಆಗಿಬಿಡುತ್ತದೆ. ಆದರೆ ಕನ್ನಡದ ಸಂದರ್ಭದಲ್ಲಿ ಪ್ರಾದೇಶಿಕ ಉಪಭಾಷೆಯೇ ಬೇರೆ, ಸಾಮಾಜಿಕ ಉಪಭಾಷೆಯೇ ಬೇರೆ. ಪ್ರತಿಯೊಂದು ಪ್ರಾಂತದ ಉಪಭಾಷೆಗಳೊಳಗೆ ಸಾಮಾಜಿಕ ತರತಮದಿಂದಾದ ಉಪಭಾಷೆಗಳಿರುತ್ತವೆ. ಇಪ್ಪತ್ತರ ದಶಕದಲ್ಲಿ ಕೈಲಾಸಂ ಸಾಮಾಜಿಕ ನಾಟಕ ಬರೆಯುವಾಗ ಮೈಸೂರು ಪ್ರಾಂತ್ಯದ ಮಧ್ಯಮವರ್ಗದ ಬ್ರಾಹ್ಮಣ ಕುಟುಂಬದ ಭಾಷೆಯನ್ನು 'ಶಿಷ್ಟ'ವಾಗಿಯೂ, ಅದರ ಸುತ್ತ ಆಧುನಿಕತೆಗೆ ಮುಖಮಾಡಿದ ಇಂಗ್ಲಿಷಿನ ಬಳಕೆಯ ಮಿಶ್ರಣವನ್ನೂ ಕಾಣುತ್ತೇವೆ. ಪೋಲಿಕಿಟ್ಟಿಯಂತಹ ನಾಟಕದಲ್ಲಿ ಉರ್ದು ಮಿಶ್ರಣ ಕೆಳವರ್ಗದ ಭಾಷೆಯಾಗಿರುತ್ತಿತ್ತು. ಇದು ಮೈಸೂರು ಪ್ರಾಂತ್ಯಕ್ಕೆ ಹೊಂದಿದ್ದರೂ ಮುಗಳಿಯವರು ಅರವತ್ತರ ದಶಕಕ್ಕೆ ಬಂಡ್ವಾಳವಿಲ್ಲದ ಬಡಾಯಿ ನಾಟಕವನ್ನು ದೇಶಿ ರೂಪಕ್ಕೆ ಎಂದು ಉತ್ತರ ಕರ್ನಾಟಕದ ಭಾಷೆಗೆ ಅನುವಾದಿಸಿದ್ದರು. ಎಂದರೆ ಅವರ ಪಾಲಿಗೆ ಕೈಲಾಸಂರ ಭಾಷೆ ದೇಶಿ ಅಲ್ಲ. ಇದಕ್ಕೆ ಪ್ರತಿಯಾಗಿ ಮೂವತ್ತು ನಲವತ್ತರ ದಶಕದಲ್ಲಿ ಶ್ರೀರಂಗರು ಬರೆದ ಸಾಮಾಜಿಕ ನಾಟಕಗಳು ಉತ್ತರ ಕರ್ನಾಟಕದ ದೇಶೀ ನುಡಿಗಟ್ಟನ್ನು ಸಹಜವಾಗಿ ಬಳಸಿರುವುದು ಗಮನಾರ್ಹ. ಅಲ್ಲಿಯೂ ಮಧ್ಯಮವರ್ಗದ ಬ್ರಾಹ್ಮಣರ ಭಾಷೆಯೇ ಶಿಷ್ಟ ಮಾನ್ಯವಾದರೂ ಅಲ್ಲಿನ ಸಾಮಾಜಿಕ ಸ್ತರಗಳಲ್ಲಿನ ಉಪಭಾಷೆ ಮೈಸೂರು ಪ್ರಾಂತದಲ್ಲಿನಷ್ಟು ವಿಭಿನ್ನವಲ್ಲ. ಬಿಜಾಪುರ ಜಿಲ್ಲೆಯಲ್ಲಿನ ಜನಗಳಿಗೆ (ಶ್ರೀರಂಗರು ಹುಟ್ಟಿದ್ದು ಮತ್ತು ಅವರ ಬಾಲ್ಯ ಕಳೆದದ್ದು ಬಿಜಾಪುರ ಜಿಲ್ಲೆಯಲ್ಲೇ) ಉರ್ದು ಪದಗಳ ಬಳಕೆ ತುಂಬಾ ಫರಕ್ ಆದದ್ದಲ್ಲ. ಬೇಂದ್ರೆ ಕಾವ್ಯದಲ್ಲಿ ಹೇಗೋ ಶ್ರೀರಂಗರ ಸಂಧ್ಯಾಕಾಲ, ಹರಿಜನ್ವಾರಗಳಲ್ಲಿಯೂ ಹಾಗೆ ದೇಸೀ ನುಡಿಕಟ್ಟು ಹಾಸುಹೊಕ್ಕಾಗಿದ್ದವು. ಅವು ಬೆಂಗಳೂರು ಮುಂಬಯಿಗಳಲ್ಲದೆ ಮಲೆನಾಡಿನ ಸಾಗರದಲ್ಲಿ ಮಾಸೂರರಿಗೆ ಪ್ರಿಯವಾಗಿತ್ತು. ಅದೇ ಸಂಸರು ಮೈಸೂರ ಒಡೆಯರ ಅರಮನೆಯ ವಸ್ತು ಅದಕ್ಕಾಗಿ ಅಲ್ಲಿನ ಶೈಲೀಕೃತ ಭಾಷೆ ಬಳಸಿದಾಗ ಉಳಿದ ಕರ್ನಾಟಕದವರ ಕಲ್ಪನಾಲೋಕದಲ್ಲಿ ಅದು ಪ್ರವೇಶ ಪಡೆಯಲಿಲ್ಲ. ಹೀಗೆ ಪು.ತಿ.ನ. ಕವಿಯಾಗಿ, ಶಿವರಾಮ ಕಾರಂತರು ಕಾದಂಬರಿಕಾರರಾಗಿ ಹೆಸರಾದರೇ ಹೊರತು ಗೀತ ನಾಟಕಕಾರರಾಗಿ ಪ್ರಯೋಗದಿಂದ ಪ್ರಸಿದ್ಧರಾಗಲಿಲ್ಲ.

ಏಕೀಕರಣದ ನಂತರ ಬೆಂಗಳೂರು ಸರಕಾರದ ಸ್ಥಾನವಾದದ್ದರಿಂದಲೇ ಕರ್ನಾಟಕದ ವಿವಿಧ ಎಡೆಗಳಿಂದ ಬೆಂಗಳೂರಿಗೆ ಜನ ಬಂದರು. ಶ್ರೀರಂಗರು ಧಾರವಾಡದಿಂದ ದೆಹಲಿಗೆ ಹೋಗಿ ಬೆಂಗಳೂರಿಗೆ ಬಂದು ನೆಲೆಸಿದರು. ಕೇಳು ಜನಮೇಜಯ ಮತ್ತು ಅಲ್ಲಿಂದ ಅಗ್ನಿಸಾಕ್ಷಿವರೆಗಿನ ನಾಟಕಗಳ ಸ್ಥಳ ಯಾವುದೇ ಬೆಳೆಯುತ್ತಿರುವ ಪಟ್ಟಣ ಮತ್ತು ಪಾತ್ರಗಳು ಇಂಥದೇ ಎಂದು ಹೇಳಲಾಗದ ವ್ಯಕ್ತಿಗಳು. ಇದಕ್ಕೆ ಅನುಗುಣವಾಗಿ ಭಾಷೆಯೂ ಅವರವೇ ಹಿಂದಿನ ನಾಟಕಗಳ ಭಾಷೆಗಿಂತ ತೆಳುವಾದ ದೇಸಿಗುಣ ಹೊಂದಿವೆ. ದಕ್ಷಿಣ ಕರ್ನಾಟಕದವರಿಗೆ ಉತ್ತರ ಕರ್ನಾಟಕದವರ ಉಪಭಾಷೆ ಕೆಲವು ಸಿದ್ಧಪದಗಳ ಬಳಕೆ ಮತ್ತು ಉಚ್ಚಾರಣೆಯ ವ್ಯತ್ಯಾಸ ಎಂದಷ್ಟೆ ಆಯಿತು. ಇದು ಎಂ.ಆರ್.ಶ್ರೀ., ಕುವೆಂಪು ಅವರ ನಾಟಕಗಳೊಳಗಿನ ಭಾಷೆಗೆ ತದ್ವಿರುದ್ಧವಾದರೂ ನಟರಿಗೆ ಮತ್ತು ಕೇಳುಗರಿಗೆ ಸಮಾನವಾಗಿ ಕೃತಕವೆನಿಸಿತು. ಬೇಂದ್ರೆ ಬರೆದ ಸಾಯೋಆಟ ಬಿಟ್ಟು ಉಳಿದ ನಾಟಕಗಳು ಮೈಸೂರಿನ ಕಡೆಯವರಿಗೆ ಅಪರಿಚಿತವಾಗಿಯೇ ಉಳಿದವು. ಅವರ 'ಮಂದೀಮದುವೆ' ಕೇವಲ ಒಂದು ಆಸೆಯಷ್ಟೆ ಆಯಿತು. ನಿರ್ದಿಷ್ಟ ಕಾಲ ದೇಶದಲ್ಲಿನ ಭಾಷಾಮಿಲನಕ್ಕಿಂತ ಕಾಲದೇಶಾತೀತವಾದ ನವ್ಯಕನ್ನಡ ೬೦ರ ದಶಕದಲ್ಲಿ ಹದಗೊಂಡಿತು. ಇದಕ್ಕೆ ಉತ್ತಮ ಉದಾಹರಣೆ ಉತ್ತರಕನ್ನಡ ಜಿಲ್ಲೆಯವರಾಗಿ, ಧಾರವಾಡ ವಿದೇಶಗಳ ಮುಖಾಂತರ ಬೆಂಗಳೂರಿಗೆ ಬಂದು ನೆಲೆಸಿದ ಗಿರೀಶ ಕಾರ್ನಾಡರ ಪೌರಾಣಿಕ, ಮತ್ತು ಐತಿಹಾಸಿಕ ಭಿತ್ತಿಯಲ್ಲಿ ರಚಿತವಾದ ನಾಟಕಗಳು. ಸಾಹಿತ್ಯದ ಭಾಷೆಯ ಬಗ್ಗೆ ಕಾಳಜಿ ವಹಿಸಿದ ಲಂಕೇಶರ ನಾಟಕಗಳಲ್ಲೂ ಇಂತಹ ನ್ಯೂಟ್ರಲ್ ಗುಣವಿದೆ. ಮೈಸೂರಿನ ನ. ರತ್ನರ ಅಸಂಗತ ನಾಟಕ ಓದಿ ಹೈದರಾಬಾದಿನಲ್ಲಿ ಕೊಡೆಗಳು ಬರೆದ ಚಂಪಾ ಉತ್ತರ ಕರ್ನಾಟಕದ ಭಾಷೆಯ ಕೆಲವು ಗುಣ ಉಳಿಸಿಕೊಂಡರೂ ನವ್ಯ-ಕನ್ನಡದ ಧಾರೆಗೇ ಸೇರುವ ತೊರೆಯ ಗುಣದವರು. ನವ್ಯ ಕನ್ನಡದ ಈ ಧಾಟಿಗೆ ಭಿನ್ನವಾಗಿ ಕಂಬಾರರು ಜೋಕುಮಾರಸ್ವಾಮಿಯನ್ನು ಬರೆದಾಗ ಕನ್ನಡ ನಾಟಕದಲ್ಲಿ ಕೃತಕ ದೇಸೀ ಪರಂಪರೆ

ಯೊಂದು ಹೊಸ ರಂಗಭಾಷೆಯೊಂದಿಗೇ ಆರಂಭವಾಯಿತು.

**ಹೊಸ ರಂಗ-ಭಾಷೆ : ಅನ್ಯತೆ ಅನನ್ಯತೆ**

ಕರ್ನಾಟಕದಲ್ಲಿ ಉಪಭಾಷೆಗಳಂತೆ ಪ್ರದರ್ಶನಕಲಾ ರೂಪಗಳೂ ಅನೇಕವಿವೆ. ಅದರಲ್ಲೂ ಹಿರಿಯ ಕಿರಿಯ ಪರಂಪರೆಗಳಿವೆ. ಕಡಲತೀರದ ಯಕ್ಷಗಾನಗಳು, ಮೂಡಲಪಾಯ, ದೊಡ್ಡಾಟ, ಸಣ್ಣಾಟ ಮುಂತಾಗಿ ಆಟಗಳೇ ಇವೆ. ಈ ಬಯಲ ಆಟಗಳಿಗೆ ಪ್ರತಿಯಾಗಿ ದೇವಾಲಯ, ಅರಮನೆಗಳ ನೃತ್ಯ/ನೃತ್ಯನಾಟಕಗಳಿದ್ದವು. ಇವೆರಡನ್ನೂ ಮೆಟ್ಟಿ ಕಂಪೆನಿ ನಾಟಕಗಳು ಸರ್ವೇಸಾಮಾನ್ಯವಾದ ಪ್ರೊಸೀನಿಯಂ ರಂಗ ಮತ್ತು ಅದರೊಳಗೆ ಪರದೆ, ವೇಷಭೂಷಣ, ಸಿದ್ಧವಾದ ಗದ್ಯಪದ್ಯ ಮಿಶ್ರಣದ ಸಂಭಾಷಣೆ, ಕುಣಿತವಿಲ್ಲದ ಹಾಡು ಮುಂತಾಗಿ ಹೊಸ ಹಳೆಯದರ ಚಿತ್ರಾನ್ನವನ್ನು ಸಿದ್ಧಮಾಡಿತ್ತು. ಆಧುನಿಕವೆನ್ನಿಸಿಕೊಂಡ ಸಾಮಾಜಿಕ ನಾಟಕಗಳು ಡ್ರಾಯಿಂಗ್ರೂಂ, ಆಫೀಸ್ ರೂಂ ಸೆಟ್ಗಳ ನಾಟಕವಾಗಿದ್ದವು. ಇದಕ್ಕೆ ತಕ್ಕನಾದಂತೆ ಹಿಂದಿನ ಅತಿಭಾಷಿತ ಅತಿರಂಜಿತ ನಾಟ್ಯರೂಪಗಳಿಗಿಂತ ಭಿನ್ನವಾಗಿ ವಾಸ್ತವತೆ ಪ್ರಮುಖವೆನ್ನಿಸಿತು. ಆದರೆ ಇದು ಬರಿಯ ಹೊರ ಆವರಣದ ವಾಸ್ತವತೆ. ಇದಕ್ಕೆ ಸ್ಪಷ್ಟವಾಗಿಯೇ ಪಾಶ್ಚಾತ್ಯಪ್ರಭಾವಗಳಿದ್ದವು ಮತ್ತು ಇದು ಅಖಿಲಭಾರತ ಮಾದರಿಯೂ ಆಯಿತು. ಇದೇ ಕಾಲಕ್ಕೆ ವಿದ್ಯುದ್ದೀಪಕ್ಕೆ ಮುಖಮಾಡುವ ಧ್ವನಿವರ್ಧಕಕ್ಕೆ ಬಾಯಿಡುವ ಪ್ರವೃತ್ತಿಯೂ ಬೆಳೆಯಿತು. ಇದಕ್ಕೆ ತಕ್ಕನಾದಂತೆ ಚಲನವಲನಗಳಲ್ಲಿ ಕೃತಕ ವಾಸ್ತವತೆ ಮೂಡಿತು. ರಂಗದ ಮೇಲೆ ಬೆಳಕು, ಪ್ರೇಕ್ಷಾಗೃಹದಲ್ಲಿ ಕತ್ತಲು ಎಂಬ ವಿಭಾಗ ಆಡುವವರ ನೋಡುವವರ ನಡುವಿನ ಅಂತರವನ್ನು ಸನ್ಮಾನ್ಯಗೊಳಿಸಿತ್ತು. ಈ ಎಲ್ಲ ವಿಷಯಗಳಲ್ಲಿ ೬೦ರ ದಶಕ ಸುಧಾರಣೆ, ಬದಲಾವಣೆಗಳನ್ನು ಕಂಡಿತು. ಒಂದುಕಡೆ ಡಿಮ್ಮರ್ಗಳು, ಸ್ಪಾಟ್‌ಲೈಟ್‌ಗಳು ದೂರವಿದ್ದು ಧ್ವನಿಗ್ರಹಿಸುವ ಧ್ವನಿವರ್ಧಕಗಳು ಬರಲಾರಂಭಿಸಿದವು. ನಟರಿಗೆ ತರಬೇತಿ, ನಿರ್ದೇಶಕನ ಪ್ರಾಮುಖ್ಯತೆ, ವಿನ್ಯಾಸಕಾರರಿಂದ ಹೊಸ ವಿನ್ಯಾಸಗಳ ರಚನೆ ಈ ಕಾಲದ ಆಧುನಿಕ ಸೃಷ್ಟಿಶೀಲತೆಯ ದ್ಯೋತಕಗಳಾದವು. ಶ್ರೀರಂಗರು ಸಂಸ್ಕೃತನಾಟಕಗಳ ಪರಂಪರೆ ಮತ್ತು ಬಯಲಾಟಗಳ ಸೂತ್ರಧಾರ ವಿದೂಷಕ ಪಾತ್ರಗಳನ್ನು ತಂದು ನಾಟಕಕಾರ-ಪ್ರಯೋಗ; ನಟ-ಪ್ರೇಕ್ಷಕ ಇವರ ನಡುವೆ ಉಂಟಾದ ಕಂದರಗಳಿಗೆ ಸೇತುವೆ ಹಾಕುವ ಪ್ರಯತ್ನ ಮಾಡಿದರು. ಪಾತ್ರಗಳು ಪ್ರೇಕ್ಷಕರ ಹಿಂದಿನಿಂದ, ಮಧ್ಯದಿಂದ ಬರುವ ತಂತ್ರ ಆರಂಭಿಸಿ ಪ್ರೊಸೇನಿಯಂನ ನಾಲ್ಕನೇ ಗೋಡೆ ಒಡೆಯುವ ಪ್ರಯತ್ನಕ್ಕೆ ಕೈಯಿಟ್ಟರು. ಆಧುನಿಕ ಆದರೆ ಭಾರತೀಯ ಎಂಬ ರಾಷ್ಟ್ರೀಯ ರಂಗಭೂಮಿಗೆ ಶ್ರೀರಂಗ ಮತ್ತು ಕಾರ್ನಾಡರ ಕೊಡುಗೆ ದೊಡ್ಡದು. ಹಾಗೆಯೇ ಇದನ್ನು ಆಗುಮಾಡಿಸಿದ್ದು ದೆಹಲಿಯಲ್ಲಿ ಕೇಂದ್ರ ಸರಕಾರದ ಕೃಪಾಪೋಷಿತ ರಾಷ್ಟ್ರೀಯ ನಾಟಕಶಾಲೆ. ದಕ್ಷಿಣ ಕನ್ನಡದಿಂದ ಮೈಸೂರಿಗೆ ಬಂದು ಗುಬ್ಬಿ ಕಂಪೆನಿಯಲ್ಲಿ ಕೆಲಸಮಾಡಿದ್ದ ಬಿ. ವಿ. ಕಾರಂತ, ಗುಬ್ಬಿವೀರಣ್ಣನವರ ಮಗ ಶಿವಾನಂದ ಮುಂತಾದವರು ಎನ್. ಎಸ್. ಡಿ. ಗೆ ಹೋಗಿಬಂದು ನವ್ಯರಾಷ್ಟ್ರೀಯ ಮಾದರಿ ರಂಗಭಾಷೆ ಕಲಿತು ಬರುವ ವೇಳೆಗೆ ಶ್ರೀರಂಗರು ಆರಂಭಿಸಿದ್ದ ರಂಗತರಬೇತಿ ಶಿಬಿರಗಳು ಹೊಸ ಪ್ರಯೋಗ ಶೀಲತೆಗೆ ರಂಗವನ್ನು ಸಿದ್ಧಗೊಳಿಸಿತ್ತು. ಸ್ವರ್ಗಕ್ಕೆ ಮೂರೇ ಬಾಗಿಲು ನಾಟಕದಲ್ಲಿ ಭವ್ಯವಾದ ರಂಗಸಜ್ಜಿಕೆ ಹಾಕಿ ಕೆಡಹುವ ರೀತಿ ಸಾಂಕೇತಿಕತೆಗೆ ಇದ್ದ ಸಾಮರ್ಥ್ಯ ರಂಗವಿನ್ಯಾಸದಲ್ಲಿ ಹೊಸಹುರುಪನ್ನು ಮೂಡಿಸಿತು. ರಂಗಭೂಮಿಯಲ್ಲಿ ಪ್ರಾಧಾನ್ಯ ನಾಟಕಕಾರ ನಟರಿಂದ ನಿರ್ದೇಶಕರ ಕಡೆಗೆ ವಾಲಿತು. ಇದೇ ಕಾಲಕ್ಕೆ ರಾಷ್ಟ್ರೀಯಮಟ್ಟದ ರವೀಂದ್ರ ಕಲಾಕ್ಷೇತ್ರವೂ ಎಲ್ಲ ರಾಜ್ಯಗಳ ರಾಜಧಾನಿಯಲ್ಲೂ ನಿರ್ಮಾಣವಾಯಿತೆನ್ನುವುದನ್ನೂ ಅದೂ ನೆಹರುವಿನ ಕನಸೆನ್ನುವುದನ್ನೂ ನೆನೆಯಬೇಕು. ೭೨ರಲ್ಲಿ ಕಲಾಕ್ಷೇತ್ರ ದುರಸ್ತಿಯಲ್ಲಿದ್ದಾಗ ಅದರ ಹಿಂದಿನ ಬಯಲಿನಲ್ಲಿ ಕಾರಂತರು ನಾಟಕವಾಡಿಸಿದ್ದು ಹಲವು ಬದಲಾವಣೆಗಳಿಗೆ ಕಾರಣವಾಯಿತು. ಪ್ರೋಸೇನಿಯಂ ಬಂಧನ ಅನಿವಾರ್ಯವಲ್ಲವೆಂದು ತೋರಿಸಿತು. ಅಲ್ಲಿನ ವಿ. ರಾಮಮೂರ್ತಿ ಬೆಳಕು, ತಂತ್ರಜ್ಞಾನದ ಸೃಷ್ಟಿಶೀಲತೆ ತೋರಿಸಿತು. ಅದರೊಟ್ಟಿಗೆ ಕಂಬಾರರ ಜೋಕುಮಾರಸ್ವಾಮಿ ಜಾನಪದದ ಆಧುನಿಕ ವ್ಯಾಖ್ಯಾನ ಸಮೇತ ಪ್ರಸ್ತುತಿಯ ಸಾಧ್ಯತೆ ಮೆರೆಯಿತು. ಆಧುನಿಕ ರಂಗಭೂಮಿಯಲ್ಲಿ ಗದ್ಯ, ಪದ್ಯ, ಹಾಡು ಕುಣಿತ ವಿಜೃಂಭಿಸಿತು. ಇದು ದೇಸೀ ರಂಗರೂಪಗಳಿಗೆ ಗಮನಹರಿಸುವಂತೆ ಮಾಡಿತು. ನಿಜ, ಆದರೆ ಇದೇ ಒಂದು ಪ್ಯಾಷನ್ ಆಗಿ ಪರ್ಯಾಯ ರಾಷ್ಟ್ರೀಯ ರೂಪ ತಾಳಿತು. ರಾಷ್ಟ್ರೀಯತೆಯ ಬಗ್ಗೆ ಇದ್ದ ಕಲ್ಪನೆಯನ್ನೆ ಸುಧಾರಿಸುವ ಪ್ರಯತ್ನ ಎಂದು ಕಾಣಬಹುದಾದರೂ ಜಾನಪದ



ರೂಪಗಳು ತನ್ನ ಮೂಲ ಕಲಾಕಾರರು ಪ್ರೇಕ್ಷಕರಿಗೆ ಎರವಾಗಿ ಆಧುನಿಕ ರಂಗಕರ್ಮಿಗಳ ಸರಕಾಯಿತು ಎನ್ನುವುದೂ ವಿಪರ್ಯಾಸ.

ಆಧುನಿಕ ತಂತ್ರಜ್ಞಾನ, ಮಧ್ಯಮವರ್ಗದ ಸಮಸ್ಯೆ, ಮಾನಸಿಕ ತುಮುಲಗಳಲ್ಲದೆ ಸಾಮಾಜಿಕ ನ್ಯಾಯ, ವೈಜ್ಞಾನಿಕತೆ, ಸಮಾನತೆ, ಪ್ರಜಾಪ್ರಭುತ್ವ, ಜಾತ್ಯತೀತತೆಯಂತಹ ಆಧುನಿಕ ಮೌಲ್ಯಕ್ಕೆ ಬದ್ಧತೆ ಸಾರಿದ, ವ್ಯಾಪಕಾರ್ಥದಲ್ಲಿ ಸಾಮಾಜಿಕ ವಾಸ್ತವತೆಗೆ ವಾಲಿದ ನಾಟಕಗಳು ಸಮುದಾಯದಿಂದ ಬಂದವು. ೭೬ರಿಂದ ಬಂದ ಈ ಸಂಘಟನೆ ರಾಜ್ಯವ್ಯಾಪಿಯಾಯಿತು ಮತ್ತು ದುಡಿಯುವವರ್ಗದ ಜನರನ್ನು ವಿಶೇಷವಾಗಿ ಒಳಗುಮಾಡಿಕೊಂಡಿತು. ಇದರೊಟ್ಟಿಗೆ ಬೀದಿನಾಟಕಗಳು ಆರಂಭವಾದವು. ಅಲ್ಲಿ ಹಾಡು ಕುಣಿತ ಅದರಲ್ಲಿಯೂ ಜನಸಾಮಾನ್ಯರ ಹಲಗೆ, ತಮಟೆ, ಜಾಗಟೆ ಗಮನ ಸೆಳೆಯುವ ಸಾಧನಗಳಾದವು. ರಾಮಕೃಷ್ಣ ಹೆಗಡೆಯವರ ಸರಕಾರದ ಕಾಲದಲ್ಲಿ ಬೀದಿ ನಾಟಕದ ಪ್ರಕಾರವೇ ಸರಕಾರದ ಪ್ರಚಾರದ ಸಾಧನವಾಗಿಬಿಟ್ಟಿತು. ಅದನ್ನು ಮುಂದಿನ ಸರಕಾರಗಳೂ ಸಂಸ್ಥೆಗಳೂ ಹಾಗೇ ಬಳಸಿದವು. ಹೀಗೆ ಅದು ತನ್ನ ಕಾವನ್ನು ಕಳೆದುಕೊಂಡಿತು.

ಇಷ್ಟೂ ಕಾಲ ಬೆಂಗಳೂರಿನ ಮೂಲಕ ದೆಹಲಿಯ ಸಂಪರ್ಕ ಸಾಧಿಸಿದ ಮಂಗಳೂರು, ಧಾರವಾಡ, ಗದಗ, ಬೆಳಗಾವಿ, ಚಿತ್ರದುರ್ಗ, ಮೈಸೂರಿನ ರಂಗಾಸಕ್ತರು ಮೇಲೆ ಹೇಳಿದ ಮಾದರಿಗಳನ್ನೇ ಅನುಸರಿಸಿದರು. ಏತನ್ಮಧ್ಯೆ ಕರ್ನಾಟಕದ ಹಳ್ಳಿಯಲ್ಲೇ ವಿಶ್ವಾತ್ಮಕತೆ ಸೃಷ್ಟಿಸುವ ಹಂಬಲದಿಂದ ನೀನಾಸಂ ರಂಗ ಶಿಕ್ಷಣ ಕೇಂದ್ರ ಆರಂಭವಾಯಿತು. ಇಡೀ ಕರ್ನಾಟಕವನ್ನು ಸುತ್ತುವ ತಿರುಗಾಟವನ್ನೂ ಆರಂಭಿಸಿತು. ಇದು ಯಕ್ಷಗಾನ ಮೇಳಗಳ ತಿರುಗಾಟದ ಮಾದರಿಯನ್ನು ಕೊಂಚ ಅನುಸರಿಸಿದೆ. ಆದರೆ ಎನ್.ಎಸ್.ಡಿ.ಯಂತೆ ಇದರ ಗಮನವೂ ರಾಷ್ಟ್ರೀಯ ಅಂತಾರಾಷ್ಟ್ರೀಯತೆ ಕಡೆಗೆ. ಆದ್ದರಿಂದ ೨೦ ವರ್ಷ ಬೆನವಿಟ್ಜ್, ರುಸ್ತುಂ ಬರೂಚ, ಕನ್ಹಯ್ಯಾಲಾಲ್‌ಗಳು ಬಂದಂತೆ ಸ್ಥಳೀಯ ಪ್ರತಿಭಾವಂತ ನಿರ್ದೇಶಕರು ಅಲ್ಲಿಗೆ ಬರಲಿಲ್ಲ. ಆದರೆ ಇದರ ಪ್ರದರ್ಶನವ್ಯಾಪ್ತಿ ಮಾತ್ರ ಕರ್ನಾಟಕವೇ. ಪರ್ಯಾಯ ವ್ಯವಸ್ಥೆಗಳೇ ಸಾಂಸ್ಥಿಕಗೊಂಡುಬಿಡುವುದಕ್ಕೆ ಇದೊಂದು ಉದಾಹರಣೆ.

೮೦ರ ಕೊನೆಗೆ ಕಾರಂತರ ನಿರ್ದೇಶಕತ್ವದಲ್ಲೇ ಮೈಸೂರಿನಲ್ಲಿ ರಂಗಾಯಣ ಸಂಸ್ಥೆ ರೆಪರ್ಟರಿಯಾಗಿ ಆರಂಭವಾಯಿತು. ಶಿಕ್ಷಣವಿಲ್ಲದೆ ಆರಂಭವಾದ ರೆಪರ್ಟರಿಯಲ್ಲಿ ಮತ್ತೆ ಹಲವು ಅಭಿನಯ ಮಾದರಿಗಳ ಚೌಚೌ ಪ್ರಯತ್ನವಾಯಿತು. ನಾಟಕ ಕರ್ನಾಟಕದಲ್ಲಿ ಅನನ್ಯ ಕನ್ನಡ ರಂಗಭೂಮಿ ರೂಪಗೊಳ್ಳಬಹುದೆನ್ನಿಸುವುದಿಲ್ಲ. ಅದನ್ನು ಕಟ್ಟುವಾಗ ಕಾರಂತರು ಕರ್ನಾಟಕಕ್ಕೆ ಒಂದಲ್ಲ ಐದಾದರೂ ರೆಪರ್ಟರಿ ಬೇಕೆಂದರು ನಿಜ. ಆದರೆ ಮೈಸೂರಿನ ರಂಗಾಯಣ ಮೈಸೂರಿನ ವಿಶಿಷ್ಟ ರಂಗಭೂಮಿಯೂ ಅಲ್ಲ, ಕರ್ನಾಟಕದ್ದೂ ಅಲ್ಲ.

ಭಾರತೀಯತೆ ಪ್ರಾದೇಶಿಕತೆಗಳ ಜಗ್ಗಾಟಕ್ಕೆ ಸ್ವಲ್ಪ ಸಮಾಧಾನಗೊಳಿಸುವ ರೀತಿಯಲ್ಲಿ ರಾಷ್ಟ್ರೀಯ ನಾಟಕ ಶಾಲೆಯ ಪ್ರಾದೇಶಿಕ ಸಂಪನ್ಮೂಲ ಕೇಂದ್ರ ಬೆಂಗಳೂರಿನಲ್ಲಿದೆ. ಇದು ಯಾವ ಪ್ರಾದೇಶಿಕರೂಪವನ್ನೂ ಸಂಪದ್ಭರಿತಗೊಳಿಸಿಲ್ಲ.

ಈ ಎಲ್ಲ ಹಿನ್ನೆಲೆಯಲ್ಲಿ ತೀರ ಸ್ಥಳೀಯ ರಂಗರೂಪಗಳನ್ನು ಆಚರಣೆಗಳನ್ನು ಅಲ್ಲಿನ ಅಭಿನಯಾಂಶಗಳನ್ನು ಬಳಸಿ ಪ್ರಾಚೀನ ಭಾರತೀಯ ನಾಟಕಗಳನ್ನು ಪ್ರಯೋಗಿಸುವ ನಾಯರಿ, ಮಾಸ್ತಿ – ಎಂ. ಆರ್. ಶ್ರೀಯಂತಹ ಹಳೆಯ ನಾಟಕಕಾರರಿಗೆ ಆಧುನಿಕ ಅರ್ಥವಂತಿಕೆ ಕೊಡುವ ಯಶಸ್ವಿ ಪ್ರಯೋಗಗಳನ್ನು ನಡೆಸಿರುವ ರಘುನಂದನ, ಆಧುನಿಕ ಸಂಕೇತಗಳನ್ನು ಸ್ಥಳೀಯ ಲಾಲಿತ್ಯದಲ್ಲಿ ಬಳಸುವ ಸುರೇಶ ಆನಗಳ್ಳಿ ಮುಂತಾದವರು ಹೊಸ ಶೋಧದಲ್ಲಿರುವುದು ನಿಜ. ಆದರೆ ಸಾಂಸ್ಥಿಕ ಬೆಂಬಲವಿಲ್ಲದೆ ಇವರ ಪ್ರಯತ್ನ ಆವಿಯಾಗುತ್ತಿರುವುದೂ ನಿಜ. ಅನನ್ಯ ಪ್ರಯೋಗಗಳು ವೈಯಕ್ತಿಕವಾಗಿ ಮಿಂಚಿದರೂ ಒಂದು ಪರಂಪರೆ ಸೃಷ್ಟಿಸುತ್ತಿಲ್ಲ. ಸಾಂಸ್ಥಿಕ ಕೇಂದ್ರಗಳು ಯಾದೃಚ್ಛಿಕವೂ ಸ್ಥಗಿತ ಮಾದರಿಗಳೂ ಆಗಿವೆ. ಚೆಲ್ಲಾಪಿಲ್ಲಿಯಾಗುತ್ತಿರುವ ಸೃಷ್ಟಿಶೀಲ ಪ್ರಯತ್ನಗಳನ್ನು ಹಿಡಿದಿಡುವ ಕೇಂದ್ರ ಪ್ರಜ್ಞೆಗೆ ಕಾತರದಿಂದ ಕಾಯಬೇಕೆ? ಅಥವಾ 'ನೂರು ಮರ ನೂರು ಥರ ಒಂದೊಂದು ಅತಿಮಧುರ ಬಂಧವಿಲ್ಲದ ಬಂಧುರ' ಎನ್ನಬೇಕೆ ?

ಜಿ. ಶ್ರೀನಿವಾಸಮೂರ್ತಿ
ಸಂಸ್ಕೃತ ಪ್ರಾಧ್ಯಾಪಕರು, ಎಂಇಎಸ್. ಪ್ರಥಮ ದರ್ಜೆ ಕಾಲೇಜು, ಬೆಂಗಳೂರು - ೫೬೦ ೦೫೫

# ಕರ್ನಾಟಕದಲ್ಲಿ ನೃತ್ಯಕ್ಷೇತ್ರ



*॥ ಭಾರತಿ-ಸಾತ್ವತಿ-ಕೈಶಿಕೆ-*
*ಯಾರಭಟಿಯುಮೆಂಬ ವೃತ್ತಿಯೊಳ್ ರಸಮಂ ಸಂ- ।*
*ಚಾರಿಸುವ ಭಾವಮಂ ವಿ-*
*ಸ್ತಾರಿಸುವ ಬೆಡಂಗು ಬೇಱೆ ನೀಲಾಂಜನೆಯಾ ॥*

ಎಂದು ಆದಿಪುರಾಣದಲ್ಲಿ, ನೀಲಾಂಜನೆಯ ನೃತ್ಯವನ್ನು, ನಾಟ್ಯಶಾಸ್ತ್ರದ ಪಾರಿಭಾಷಿಕ ಶಬ್ದಗಳಲ್ಲಿ, ಸೊಗಸಾಗಿ ವರ್ಣಿಸಿದ ಮಹಾಕವಿ ಪಂಪನಿಂದ ಹಿಡಿದು ಅನೇಕ ಪ್ರಾಚೀನ ಕವಿಗಳ ಕಾವ್ಯಗಳಿಂದ ಗತಕಾಲದಲ್ಲಿ ಕರ್ನಾಟಕದಲ್ಲಿ ನೃತ್ಯಕಲೆಗೆ ಇದ್ದ ಸ್ಥಾನಮಾನ, ಮತ್ತು ಶಾಸ್ತ್ರಜ್ಞಾನದ ಅರಿವಾಗುತ್ತದೆ. ಕದಂಬ, ರಾಷ್ಟ್ರಕೂಟ, ಚಾಳುಕ್ಯ, ಹೊಯ್ಸಳ, ವಿಜಯನಗರದ ಅರಸರು ನೃತ್ಯಕಲೆಯನ್ನು ಬಹು ಅಕ್ಕರೆಯಿಂದ ಪೋಷಿಸುತ್ತಿದ್ದರು. ಅವರು ನಿರ್ಮಿಸಿದ ದೇವಾಲಯಗಳ ನೃತ್ಯಶಿಲ್ಪಗಳು, ಆ ಕಾಲದ ಸಾಂಸ್ಕೃತಿಕ ವೈಭವದ ದ್ಯೋತಕವಾಗಿ ನಿಂತಿವೆ. ಚಾಳುಕ್ಯರ ಕಾಲದಲ್ಲಿ ನಿರ್ಮಿಸಲ್ಪಟ್ಟ ಬಾದಾಮಿಯ ಮೊದಲ ಗುಹಾಂತರ ದೇವಾಲಯದ ನರ್ತಿಸುತ್ತಿರುವ ಶಿವನ ಶಿಲ್ಪವು ನಾಟ್ಯಾಗಮವನ್ನು ಪ್ರತಿಬಿಂಬಿಸುವ ಪ್ರಥಮ ಶಿಲ್ಪವೆಂದು ಖ್ಯಾತಿ ಪಡೆದಿದೆ. ಹದಿನೆಂಟು ಕೈಗಳನ್ನು ಹೊಂದಿ, 'ಚತುರ' ಕರಣದಲ್ಲಿ ರೂಪುಗೊಂಡಿರುವ ಈ ಶಿಲ್ಪ, ಮುಂದೆ ಚೋಳರ ಕಾಲದ 'ನಟರಾಜ' ಶಿಲ್ಪಕ್ಕೆ ಮಾದರಿಯಾಯಿತು. ಹೊಯ್ಸಳ ವಂಶದ ರಾಜ, ವಿಷ್ಣುವರ್ಧನನ ಪತ್ನಿ ರಾಣಿ ಶಾಂತಲಾದೇವಿ ಅಪ್ರತಿಮ ನರ್ತಕಿಯಾಗಿದ್ದಳೆಂದು, ಜಗದ್ವಿಖ್ಯಾತ ಬೇಲೂರು, ಹಳೇಬೀಡು ದೇವಾಲಯಗಳ ನಿರ್ಮಾಣಕ್ಕೆ ಕಾರಣಕರ್ತಳಾದಳೆಂದು ಇತಿಹಾಸದಿಂದ ತಿಳಿದುಬರುತ್ತದೆ. 'ನಟಸೇವ್ಯ'ನೆಂಬ ನರ್ತಕನ ಅದ್ಭುತ ನರ್ತನದ ಬಗ್ಗೆ ಪಟ್ಟದಕಲ್ಲಿನ ಶಿಲಾಶಾಸನದಲ್ಲಿ ಲಿಖಿತವಾಗಿದೆ.

ಪ್ರಾಚೀನ ರಾಜವಂಶಗಳ ನಂತರ ನೃತ್ಯಕಲೆಯನ್ನಾದರಿಸಿ, ಪೋಷಿಸಿದವರು ಮೈಸೂರಿನ ಅರಸರು. ಮುಮ್ಮಡಿ ಕೃಷ್ಣರಾಜರ ಕಾಲದಲ್ಲಿ (ಕ್ರಿ.ಶ. ೧೮೧೧-೧೮೬೮) ಮೈಸೂರು ಬಹುದೊಡ್ಡ ಸಾಂಸ್ಕೃತಿಕ ಕ್ಷೇತ್ರವಾಯಿತು. ಅವರು ಕಲಾಪೋಷಕರು ಮಾತ್ರವಲ್ಲದೆ ಸ್ವತಃ ಅನೇಕ ಕೃತಿಗಳನ್ನು ರಚಿಸಿರುವುದು ವಿಶೇಷ. ಇಪ್ಪತ್ತನೇ ಶತಮಾನದಲ್ಲಿ, ಜಟ್ಟಿತಾಯಮ್ಮ, ಮೂಗೂರು ಸುಬ್ಬಣ್ಣ, ಕೋಲಾರ ಕಿಟ್ಟಪ್ಪ ಮುಂತಾದ ಕಲಾವಿಧರು ಪ್ರಸಿದ್ಧರಾಗಿದ್ದರು. ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ, ಆಸ್ಥಾನ ನರ್ತಕಿಯಾಗಿ ಮೆರೆದ 'ಪದ್ಮಭೂಷಣ' ಡಾ॥ ಕೆ. ವೆಂಕಟಲಕ್ಷ್ಮಮ್ಮನವರು, ಅನಂತರ ಮೈಸೂರಿನ ಲಲಿತಕಲಾ ಕಾಲೇಜಿನ ಪ್ರಾಧ್ಯಾಪಕರಾಗಿ ದುಡಿದರು.

ಇಂದು ಪ್ರಚಲಿತವಾಗಿರುವ ಭರತನಾಟ್ಯ ಸಂಪ್ರದಾಯ ತಂಜಾವೂರಿನಿಂದ ಪ್ರಾರಂಭವಾಗಿ ದಕ್ಷಿಣ ಭಾರತದಲ್ಲಿ ಹರಡಿತು. ೧೮ನೇ ಶತಮಾನದಲ್ಲಿ ತಂಜಾವೂರಿನ ಶರಭೋಜಿ ಮಹಾರಾಜರ ಆಸ್ಥಾನದಲ್ಲಿದ್ದ ಚಿನ್ನಯ್ಯ, ಪೊನ್ನಯ್ಯ, ಶಿವಾನಂದಂ, ವಡಿವೇಲು, ತಂಜಾವೂರು ಸಹೋದರರರೆಂದೇ ಖ್ಯಾತರಾಗಿದ್ದರು. ಸಂಗೀತ, ನೃತ್ಯ ಕ್ಷೇತ್ರಗಳಲ್ಲಿ ಅಪ್ರತಿಮ ಪಾಂಡಿತ್ಯಹೊಂದಿದ್ದ ಈ ಸಹೋದರರು ಭರತನಾಟ್ಯಕ್ಕೆ ಹೊಸ ರೂಪುರೇಷೆ ಸಿದ್ಧಪಡಿಸಿದರು ಎಂಬುದು ಗಮನಾರ್ಹ ವಿಷಯ. ಇಂದು ಭರತನಾಟ್ಯ ಕಾರ್ಯಕ್ರಮದಲ್ಲಿ ನಾವು ನೋಡುವ ಅಲರಿಪು, ಜತಿಸ್ವರಂ, ಶಬ್ದಂ, ವರ್ಣಂ, ಪದಂ, ಜಾವಳಿ, ಅಷ್ಟಪದಿ, ತಿಲ್ಲಾನ ಇತ್ಯಾದಿಗಳನ್ನೊಳಗೊಂಡ ಸಂಪ್ರದಾಯವನ್ನು ಸಂಯೋಜಿಸಿದವರು ಅವರೇ. ಅವರಲ್ಲಿ ಹಿರಿಯರಾದ ಚಿನ್ನಯ್ಯ, ಮುಮ್ಮಡಿ ಕೃಷ್ಣರಾಜರ ಆಸ್ಥಾನದಲ್ಲಿ

ನೆಲೆಸಿದರು. ಕಲಾವಿದರು ಕಲೆಯಲ್ಲಿ ಉನ್ನತ ಶಿಕ್ಷಣಕ್ಕಾಗಿ, ಶ್ರೇಷ್ಠ ಗುರುಗಳನ್ನು ಅರಸುತ್ತಾ ತಮಿಳುನಾಡಿಗೆ ಹೋಗಿ ಕಲಿಯುವುದು ಸಾಮಾನ್ಯವಾಗಿತ್ತು. ಕಳೆದ ಶತಮಾನದ ಪ್ರಥಮಾರ್ಧದಲ್ಲಿ ತಮಿಳುನಾಡಿನ ಅನೇಕ ಮಂದಿ ಮಹಾನ್ ಕಲಾವಿದರ ಪ್ರಭಾವ ಕರ್ನಾಟಕದ ಕಲಾವಿದರ ಮೇಲೆ ಆಯಿತೆನ್ನುವುದನ್ನು ಗಮನಿಸಬಹುದು.

ಆದರೆ ಗತಕಾಲದಲ್ಲಿ ವೈಭವದಿಂದ ಮೆರೆದ ನೃತ್ಯಕಲೆ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಅತ್ಯಂತ ಕ್ಷೀಣದಶೆ ತಲುಪಿತು. ಆಶ್ರಯದಾತರೂ, ಕಲಾಪೋಷಕರೂ ಆಗಿದ್ದ ರಾಜವಂಶಗಳು ಪತನವಾದವು. ಜೊತೆಗೆ ಬ್ರಿಟಿಷರ ಶಿಕ್ಷಣ ಪದ್ಧತಿಯಿಂದ ವೃತ್ತಿ ವ್ಯವಸ್ಥೆ ಬದಲಾಯಿತು. ನೃತ್ಯಕಲೆಯನ್ನು ಕರಗತಮಾಡಿಕೊಂಡು ಉತ್ಕೃಷ್ಟಮಟ್ಟದ ಕಲಾವಿದರಾಗಿ, ಕಲೆಯನ್ನು ಶತಶತಮಾನಗಳಿಂದ ಕಾಪಾಡಿಕೊಂಡುಬಂದಿದ್ದ ದೇವದಾಸಿಯರು, ನಟುವನಾರ್‌ಗಳು ನಿರಾಶ್ರಿತರಾದರು. ಬೇರೆ ಗತ್ಯಂತರವಿಲ್ಲದೆ ಕಲೆಯನ್ನು ಬಿಟ್ಟು ಅನ್ಯ ಮಾರ್ಗಗಳನ್ನು ಹುಡುಕಿಕೊಂಡು ಹೋಗಬೇಕಾಯಿತು. ಹೊಟ್ಟೆಪಾಡಿಗಾಗಿ ಕೆಲವು ದೇವದಾಸಿಯರು ವೇಶ್ಯಾವೃತ್ತಿಗಿಳಿದರು. ಸಮಾಜದಲ್ಲಿ ನೃತ್ಯ ಕಲೆಯೇ ಪತನಜೀವನದ ಮತ್ತೊಂದು ಮುಖ ಎಂಬ ಭಾವನೆ ಬೆಳೆಯಿತು. ಸಂಪ್ರದಾಯಸ್ಥರು, ನೃತ್ಯ ನೋಡುವುದು ಕೂಡ ಅಸಭ್ಯ ಎಂದು ಭಾವಿಸಿದರು.



ಸ್ವಾತಂತ್ರ್ಯದ ನಂತರ ಬ್ರಿಟಿಷ್ ಶಿಕ್ಷಣಪದ್ಧತಿಯಲ್ಲಿ ಬೆಳೆದ ಪ್ರಾಜ್ಞ ವರ್ಗ ರಾಷ್ಟ್ರೀಯ ಸಂಸ್ಕೃತಿಯನ್ನು ಪುನರ್ರಚಿಸುವ ಕೆಲಸಮಾಡಿತು. ಅವರು ನಮ್ಮ ಸಂಗೀತ, ನೃತ್ಯ ಕಲೆಗಳನ್ನು ನಮ್ಮ ಸಂಸ್ಕೃತಿಯ ಪ್ರತೀಕವಾಗಿ ಸ್ವೀಕರಿಸಿ, ಈ ಕಲೆಗಳನ್ನು ಪುನರ್ನಿರ್ಮಿಸುವ ಕೆಲಸ ಪ್ರಾರಂಭಿಸಿದರು. ಇವರಲ್ಲಿ, ಭಾರತೀಯ ನೃತ್ಯದ ಔನ್ನತ್ಯವನ್ನು, ಪಾವಿತ್ರ್ಯತೆಯನ್ನು ತಿಳಿಸಿ 'ದಾಸಿ ಅಟ್ಟಂ' ಎಂದು ಕರೆಯಲ್ಪಡುತ್ತಿದ್ದ ನೃತ್ಯಕಲೆಯನ್ನು ಪುನರುಜ್ಜೀವಗೊಳಿಸಿದವರು ಇ. ಕೃಷ್ಣಯ್ಯರ್ ಮತ್ತು ರುಕ್ಮಿಣೀದೇವಿ ಅರುಂಡೇಲ್. ಅವರ ಶ್ರಮದಿಂದ, ನಿಷ್ಠೆಯಿಂದ ಇಂದು 'ಭರತನಾಟ್ಯ' ಪುನಶ್ಚೇತನ ಪಡೆದು ಬೆಳೆಯುತ್ತಿದೆ. ಸಂಪ್ರದಾಯಸ್ಥ ಕುಟುಂಬದಲ್ಲಿ ಜನಿಸಿದ ರುಕ್ಮಿಣಿ ದೇವಿಯವರು (ಕ್ರಿ. ಶ. ೧೯೦೪-೧೯೮೬) ಆ ಕಾಲದಲ್ಲಿ ಸಮಾಜದ ಅವಹೇಳನವನ್ನೆದುರಿಸಿ ನೃತ್ಯಕಲಿತದ್ದು ಬಹು ದೊಡ್ಡ ಸಾಹಸವೇ ಸರಿ. ಮದರಾಸಿನಲ್ಲಿ, ವಿಶ್ವವಿಖ್ಯಾತ ಕಲಾ ಶಾಲೆ 'ಕಲಾಕ್ಷೇತ್ರ'ವನ್ನು ಸ್ಥಾಪಿಸಿದ್ದು ಮಾತ್ರವಲ್ಲ, ತಮ್ಮ ಅದ್ಭುತ ನೃತ್ಯನಾಟಕಗಳಿಂದ ಸಮಾಜದಲ್ಲಿ ನೃತ್ಯಕಲೆಯ ಬಗ್ಗೆ ಇದ್ದ ಕೀಳು ಭಾವನೆಯನ್ನು ತೊಡೆದುಹಾಕಿ, ಮತ್ತೆ ಈ ಕಲೆಗೆ ಗೌರವಾದರಗಳು ಲಭಿಸುವಂತೆ ಮಾಡಿದ್ದು ಆಕೆಯ ಮಹತ್ತರ ಸಾಧನೆ.

ತಮಿಳುನಾಡಿನಲ್ಲಿ ನಡೆದ ಈ ಸಾಂಸ್ಕೃತಿಕ ಪುನರುತ್ಥಾನದ ಪ್ರಭಾವ ಕರ್ನಾಟಕದಲ್ಲೂ ಆಯಿತು. ಆ ದಿನಗಳಲ್ಲಿ ಕರ್ನಾಟಕದವರೇ ಆದ ರಾಂಗೋಪಾಲ್ ನೃತ್ಯಕ್ಷೇತ್ರದ ತಾರೆಯೆನಿಸಿದರೂ, ಇಲ್ಲಿಯ ಜನ ನೃತ್ಯಕಲೆಯ ಕಡೆ ಆಕರ್ಷಿತರಾದದ್ದು, ನೃತ್ಯಕ್ಷೇತ್ರದ ಆದಿದಂಪತಿಗಳೆಂದೇ ಖ್ಯಾತರಾಗಿದ್ದ ದಿವಂಗತ ಯು. ಎಸ್. ಕೃಷ್ಣರಾವ್ ಮತ್ತು ಚಂದ್ರಭಾಗಾದೇವಿಯವರ ಪರಿಶ್ರಮದಿಂದ. ಸಮಾಜದ ಕಟುಟೀಕೆ, ಅವಹೇಳನಗಳನ್ನು ಲೆಕ್ಕಿಸದೆ, ನೃತ್ಯಕ್ಷೇತ್ರವನ್ನೇ ತಮ್ಮ ಬದುಕನ್ನಾಗಿ ಸ್ವೀಕರಿಸಿ, ರಾಜ್ಯದ ಎಲ್ಲೆಡೆ ಶಾಲಾ ಕಾಲೇಜುಗಳಲ್ಲಿ ಸೋದಾಹರಣ ಭಾಷಣಗಳನ್ನು ನೀಡಿ, ಕರ್ನಾಟಕದಲ್ಲಿ ನೃತ್ಯಕಲೆಗೆ ಮಾನ್ಯತೆಯನ್ನು ತಂದುಕೊಟ್ಟರು ಈ ದಂಪತಿಗಳು. ಇವರಿಂದ ಸ್ಫೂರ್ತಿಪಡೆದು ಅನೇಕ ಮಂದಿ ನೃತ್ಯಕಲೆಯ ಬಗ್ಗೆ ಆಕರ್ಷಿತರಾದರು. ಮೈಸೂರಿನ ಡಾ॥ ವೆಂಕಟಲಕ್ಷ್ಮಮ್ಮ, ಹೆಚ್. ಆರ್. ಕೇಶವಮೂರ್ತಿ, ದಿವಂಗತ ಕೌಶಿಕ್, ಅನಂತರ ಅನೇಕ ಮಂದಿ ಗುರುಗಳು ಕಲೆಯ ಅಭ್ಯುದಯಕ್ಕೆ ಅಡಿಪಾಯವನ್ನು ಹಾಕಿದರು. ಎಸ್. ಎನ್. ಚಂದ್ರಶೇಖರ್, ದಿವಂಗತ ಬಿ. ವಿ. ಕೆ. ಶಾಸ್ತ್ರಿ, ಮತ್ತು ಅನೇಕ ಕಲಾ ವಿಮರ್ಶಕರು ನೃತ್ಯಕಲೆಯ ಸೂಕ್ಷ್ಮತೆಗಳ ಅರಿವು ಮೂಡಿಸಿ, ಸದಭಿರುಚಿ ಬೆಳೆಯುವಂತೆ ಮಾಡಿದರು. ಡಾ॥ ರಾ. ಸತ್ಯನಾರಾಯಣ, ಪ್ರೊ॥ ಎಸ್. ಕೆ. ರಾಮಚಂದ್ರರಾಯರು, ಮುಂತಾದ ವಿದ್ವಾಂಸರು ಸೊಗಸಾದ ಲಕ್ಷ್ಯ, ಲಕ್ಷಣಗ್ರಂಥಗಳನ್ನು ಬರೆದರು. ಯು. ಎಸ್. ಕೃಷ್ಣರಾವ್, ಕೌಶಿಕ್, ಮುಂತಾದ ಹಿರಿಯ ಗುರುಗಳು ನೃತ್ಯಗ್ರಂಥಗಳನ್ನು ರಚಿಸಿದರು.

ಕ್ರಿ.ಪೂ. ೨ನೆಯ ಶತಾಬ್ದದಲ್ಲಿ ರಚಿಸಲ್ಪಟ್ಟಿತೆಂದು ಹೇಳಲಾಗುವ ಭರತನ ನಾಟ್ಯಶಾಸ್ತ್ರದ ಮೂಲದಿಂದ, ಪ್ರಾಂತೀಯ ಸಂಸ್ಕೃತಿ, ಸೊಗಡನ್ನು ಪಡೆದು ಕಾಲಕ್ರಮೇಣ ಅನೇಕ ಶಾಸ್ತ್ರೀಯ ನೃತ್ಯಪ್ರಕಾರಗಳು ಭಾರತದಲ್ಲಿ ಬೆಳೆದವು. ಇವು, ತಮಿಳುನಾಡಿನ ಭರತನಾಟ್ಯಂ, ಆಂಧ್ರದ ಕೂಚಿಪುಡಿ, ಕೇರಳದ ಕಥಕ್ಕಳಿ ಮತ್ತು ಮೋಹಿನಿ ಆಟ್ಟಂ, ಒರಿಸ್ಸಾ ಪ್ರಾಂತದ ಒಡಿಸ್ಸಿ, ಉತ್ತರ ಭಾರತದ ಕಥಕ್, ಮಣಿಪುರದ ಮಣಿಪುರಿ, ಅಸ್ಸಾಮಿನ ಸತ್ರಿಯಾ ಇತ್ತೀಚೆಗೆ ಈ ಪಟ್ಟಿಯಲ್ಲಿ ಸೇರ್ಪಡೆಯಾಯಿತು. ಕರ್ನಾಟಕದಲ್ಲಿ ಭರತನಾಟ್ಯವೆಂಬ ಪ್ರಕಾರ ಇತ್ತೆಂದು ೧೧ರಿಂದ ೧೫ನೆಯ ಶತಮಾನದ ಕಾವ್ಯಗಳಿಂದ, ಶಿಲಾಶಾಸನಗಳಿಂದ ತಿಳಿದುಬರುತ್ತದೆ. ಆ ಕಾಲದಲ್ಲಿ ದ್ವಾಡ, ಚಿಂದು, ಜಕ್ಕಿಣಿ, ಗೋಂದಲ, ಪೇರಿಣಿ ಮುಂತಾದ ನೃತ್ಯಪ್ರಕಾರಗಳು ಅಸ್ತಿತ್ವದಲ್ಲಿದ್ದವು ಎಂಬ ವಿಷಯ ನಮಗೆ ತಿಳಿದುಬರುತ್ತದೆ. ಆದರೆ ದುರದೃಷ್ಟವಶಾತ್ ಇಂದು ಆ ಪ್ರಕಾರಗಳು ಕಣ್ಮರೆಯಾಗಿವೆ. ಆಗಿನ ನೃತ್ಯ ಪದ್ಧತಿಗೂ ಇಂದಿನ ಭರತನಾಟ್ಯಕ್ಕೂ ಬಹಳ ವ್ಯತ್ಯಾಸವಿದೆ. ಕಳೆದ ಎರಡು ಶತಮಾನಗಳಿಂದ ಭರತನಾಟ್ಯ ಪ್ರಕಾರ ಅತ್ಯಂತ ಪ್ರಸಿದ್ಧಿಯನ್ನು ಪಡೆದು ಕರ್ನಾಟಕದ ಪ್ರಮುಖ ನೃತ್ಯಪ್ರಕಾರವಾಗಿದೆ. ಕಳೆದ ಮೂರು ದಶಕಗಳಿಂದೀಚೆಗೆ ಕೂಚಿಪುಡಿ, ಕಥಕ್ ನೃತ್ಯಪ್ರಕಾರಗಳೂ ಇಲ್ಲಿ ನೆಲೆಸಿವೆ.

ಕ್ರಿ.ಶ. ೧೫, ೧೬, ೧೭ನೇ ಶತಮಾನಗಳಲ್ಲಿ, ಭಕ್ತಿಪಂಥದ ಪ್ರಭಾವದಿಂದ ಅನೇಕ ನಾಟ್ಯ ಪ್ರಕಾರಗಳು ಹುಟ್ಟಿಕೊಂಡವು. ಅವುಗಳಲ್ಲಿ ಪ್ರಸಿದ್ಧವಾದವು ತಮಿಳುನಾಡಿನ ಭಾಗವತಮೇಳ ನಾಟಕಂ, ಕೇರಳದ ಕೃಷ್ಣನಾಟ್ಟಂ ಮತ್ತು ಕಥಕ್ಕಳಿ, ಆಂಧ್ರದ ಕೂಚಿಪುಡಿ, ಕರ್ನಾಟಕದ ಯಕ್ಷಗಾನ ಮುಂತಾದವು. ಕರ್ನಾಟಕದಲ್ಲೇ ಹುಟ್ಟಿ ಬೆಳೆದ 'ನಾಟ್ಯ' ಪ್ರಕಾರದ ಕಲೆ ಯಕ್ಷಗಾನ. ತನ್ನದೇ ಆದ ವೈಶಿಷ್ಟ್ಯಪೂರ್ಣ ಕುಣಿತ, ಆಂಗಿಕ, ಸಾತ್ವಿಕಾಭಿನಯಗಳ ಜೊತೆ ವಾಚಿಕಾಭಿನಯವೂ ಸೇರಿದ ಅಪ್ಪಟ ಕನ್ನಡ ಕಲೆ ಯಕ್ಷಗಾನ. ಈ ಕಲೆ ಹಿಂದೆ ದಕ್ಷಿಣ ಕನ್ನಡ, ಕರಾವಳಿ ಪ್ರಾಂತಕ್ಕೆ ಸೀಮಿತವಾಗಿದ್ದರೂ, ಇಂದು ಕರ್ನಾಟಕದ ಇತರ ಪ್ರಾಂತಗಳಲ್ಲಿ ಮಾತ್ರವಲ್ಲ, ವಿದೇಶಗಳಲ್ಲೂ ಅಪಾರ ಮೆಚ್ಚುಗೆ ಪಡೆದಿದೆ. ಅನೇಕ ಮಹಾನ್ ಕಲಾವಿದರಿಂದ ಸಮೃದ್ಧವಾಗಿದೆ. ಈ ಕಲೆಗೆ ಕನ್ನಡನಾಡಿನ ಮಹಾಪುರುಷರಲ್ಲೊಬ್ಬರಾದ ಶಿವರಾಮ ಕಾರಂತರ ಕೊಡುಗೆಯನ್ನು ಸ್ಮರಿಸಬೇಕು.

೨೦ನೆಯ ಶತಮಾನದ ಪ್ರಾರಂಭದಲ್ಲಿ ತಮಿಳುನಾಡಿನಲ್ಲಿ ನಡೆದ ತಮಿಳು ಇಸೈ ಚಳವಳಿ ತಮಿಳುನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಮುಖ್ಯ ಘಟನೆಯಾಗಿತ್ತು. ಸಂಗೀತ ಕಚೇರಿಗಳಲ್ಲಿ ತಮಿಳು ಕೃತಿಗಳನ್ನೇ ಹಾಡಬೇಕೆಂದು ಆಗ್ರಹಪಡಿಸಲಾಯಿತು. ಸಂಗೀತ ನೃತ್ಯ ಕಲೆಗಳ ಪುನರುತ್ಥಾನಕ್ಕಾಗಿ ೧೯೨೮ರಲ್ಲಿ ಸ್ಥಾಪಿಸಲ್ಪಟ್ಟ 'ಮದ್ರಾಸ್ ಮ್ಯೂಸಿಕ್ ಅಕಾಡೆಮಿ', ಮತ್ತು ಅನೇಕ ವಿದ್ವಾಂಸರು ಈ ಚಳವಳಿಯ ಬಗ್ಗೆ ಸಹಾನುಭೂತಿ ವ್ಯಕ್ತಪಡಿಸಿದರು. ಆದರೆ ಸಂಗೀತ ಕಚೇರಿಗಳಿಂದ ತೆಲುಗು ಕನ್ನಡ ಕೃತಿಗಳನ್ನು ತೆಗೆದುಹಾಕಲು ನಿರಾಕರಿಸಿದರು. ಇಂದಿನ ಸಂಗೀತ ಕಚೇರಿಯ ರೂಪುರೇಷೆ ಸಿದ್ಧಪಡಿಸಿದ ಹಿರಿಯ ವಿದ್ವಾಂಸರಾದ ಅರ್‍ಯಕುಡಿ ರಾಮಾನುಜ ಐಯಂಗಾರ್ ಕಚೇರಿಯಲ್ಲಿ ಸಂಪೂರ್ಣವಾಗಿ ತಮಿಳು ಕೃತಿಗಳನ್ನೇ ಹಾಡಬೇಕೆಂಬ ಒತ್ತಾಯವನ್ನು ತಾವು ಅಂಗೀಕರಿಸುವುದಿಲ್ಲವೆಂದು ಖಡಾಖಂಡಿತವಾಗಿ ಹೇಳಿದರು. ಸಂಗೀತಕ್ಕೆ ಭಾಷೆಯ ಚೌಕಟ್ಟನ್ನು ನಿರ್ಮಿಸುವುದು ತಪ್ಪೆಂದು, ಅದರಿಂದ ಶಾಸ್ತ್ರೀಯ ಸಂಗೀತದ ಔನ್ನತ್ಯಕ್ಕೆ, ಆರೋಗ್ಯಕರ ಬೆಳವಣಿಗೆಗೆ ಧಕ್ಕೆಯಾಗುತ್ತದೆಂದು ಪ್ರತಿಭಟಿಸಿದರು. ಆದರೆ ಈ ಚಳವಳಿಯ ನಂತರ ಅನೇಕ ಮಂದಿ ವಾಗ್ಗೇಯಕಾರರು ತಮಿಳುಭಾಷೆಯಲ್ಲಿ ಕೃತಿರಚನೆ ಮಾಡಿದರು. ಪಾಪನಾಶಂ ಶಿವನ್, ಗೋಪಾಲಕೃಷ್ಣಭಾರತಿ, ಭಾರತೀಯಾರ್ ಮುಂತಾದವರ ಕೃತಿಗಳು ಸಂಗೀತ ಕಚೇರಿಯ ಪಟ್ಟಿಯಲ್ಲಿ ಸೇರಿಸಲಾಯಿತು.

ಏಕೀಕರಣಕ್ಕೆ ಮುಂಚೆ ಕನ್ನಡನಾಡಿನ ನೃತ್ಯಕಲಾವಿದರು ತಮಿಳುನಾಡಿನ ಸಂಪ್ರದಾಯವನ್ನೇ ಅನುಸರಿಸಿ ಸಂಸ್ಕೃತ, ತೆಲುಗು, ತಮಿಳುಭಾಷೆಯ ಕೃತಿಗಳನ್ನೇ ಅಭಿನಯಿಸುತ್ತಿದ್ದರು. ಏಕೀಕರಣದ ನಂತರ ಕರ್ನಾಟಕದಲ್ಲಿ ಕನ್ನಡ ಪ್ರಜ್ಞೆ ಜಾಗೃತವಾಯಿತು. ಇಲ್ಲಿಯ ಕೆಲವು ಪ್ರಯೋಗಶೀಲ ಕಲಾವಿದರು ಈ ಬೆಳವಣಿಗೆಗೆ ಸ್ಪಂದಿಸಿದರು. ಕನ್ನಡಭಾಷೆಯ ನೃತ್ಯಬಂಧಗಳನ್ನು ನರ್ತಿಸಬೇಕೆಂಬ ತುಡಿತ ಕಲಾವಿದರಲ್ಲಿ ಶುರುವಾಯಿತು. ಕೆಲವು ವರ್ಗದ ಪ್ರೇಕ್ಷಕರ ಅಪೇಕ್ಷೆಯೂ ಅದಾಗಿತ್ತು. ಆದರೆ ಕನ್ನಡದಲ್ಲಿ ನೃತ್ಯಸಂಪ್ರದಾಯದ ವರ್ಣಂ, ಪದಂ ಮುಂತಾದ ಕೃತಿಗಳ ಕೊರತೆ ಮುಖ್ಯ ತೊಡಕಾಗಿತ್ತು. ಶಾಸ್ತ್ರೀಯ ನೃತ್ಯದಲ್ಲಿ ಎರಡು ಮುಖ್ಯ ವಿಭಾಗಗಳಿವೆ. ಒಂದು – ಲಯಬದ್ಧ, ಸುಂದರ ಅಂಗಹಾರಗಳಿಂದ ಕೂಡಿದ, ಅಭಿನಯರಹಿತ ನೃತ್ತ. ಮತ್ತೊಂದು, ಆಂಗಿಕ, ವಾಚಿಕ, ಸಾತ್ವಿಕ, ಆಹಾರ್ಯಗಳಿಂದ ಕೂಡಿದ ಅಭಿನಯವಿರುವ ನೃತ್ಯ. ಶೃಂಗಾರಾದಿ ನವರಸಗಳು, ವಾಸಕಸಜ್ಜ, ವಿರಹೋತ್ಕಂಠಿತ ಇತ್ಯಾದಿ ಅಷ್ಟನಾಯಿಕೆಯರು ಮತ್ತು ನಾಯಕರ ಮನೋವ್ಯಾಪಾರವನ್ನು

ಅಭಿವ್ಯಕ್ತಗೊಳಿಸುವ ಈ ನೃತ್ಯಬಂಧಗಳು ಸಾಹಿತ್ಯವನ್ನು ಅವಲಂಬಿಸಿರುತ್ತವೆ.

ತಂಜಾವೂರು ಸಹೋದರರು ಮತ್ತು ತಮಿಳುನಾಡಿನ ಹಲವು ವಾಗ್ಗೇಯಕಾರರು ಈ ಪ್ರಕಾರದಲ್ಲಿ ಅನೇಕ ನೃತ್ಯಬಂಧಗಳನ್ನು ರಚಿಸಿದ್ದರು. ಈ ಕೃತಿಗಳು ಮುಖ್ಯವಾಗಿ ಸಂಸ್ಕೃತ, ತೆಲುಗು, ತಮಿಳು ಭಾಷೆಗಳಲ್ಲಿ ರಚಿತವಾಗಿದ್ದವು. ತಮಿಳು ಇಸೈ ಚಳುವಳಿಯ ನಂತರ ಪಾಪನಾಶಂ ಶಿವನ್. ಗೋಪಾಲಕೃಷ್ಣಭಾರತಿ, ಊತ್ತುಕ್ಕಾಡು ವೆಂಕಟಸುಬ್ಬ ಅಯ್ಯರ್, ದಂಡಾಯುಧಪಾಣಿ ಪಿಳ್ಳೈ ಮುಂತಾದವರು ತಮಿಳಿನಲ್ಲಿ ಅನೇಕ ಕೃತಿಗಳನ್ನು ರಚಿಸಿದರು. ಕಳೆದ ನಾಲ್ಕು ದಶಕಗಳಲ್ಲಿ ಲಾಲ್ಗುಡಿ ಜಯರಾಮನ್, ಮಧುರೈ ಕೃಷ್ಣನ್ ಮುಂತಾದ ವಿದ್ವಾಂಸರು ನೃತ್ಯಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಇಂದು ಭರತನಾಟ್ಯ ಪ್ರಕಾರದಲ್ಲಿ ಎಲ್ಲೆಡೆ ಈ ಕೃತಿಗಳನ್ನು ಅಭಿನಯಿಸಲಾಗುತ್ತಿದೆ. ತಮಿಳುನಾಡಿನಿಂದ ಪ್ರಭಾವಿತವಾದ ಕರ್ನಾಟಕದ ನೃತ್ಯಕ್ಷೇತ್ರ, ಇದೇ ಸಂಪ್ರದಾಯವನ್ನು ಅನುಸರಿಸಿತು. ಆದರೆ ಕನ್ನಡದಲ್ಲಿ ನೃತ್ಯ ಸಂಪ್ರದಾಯಕ್ಕೆ ಸೂಕ್ತವಾದ ಕೃತಿಗಳ ರಚನೆ ಹೆಚ್ಚಾಗಿ ಆಗಲಿಲ್ಲ. ವೀಣೆ ಶೇಷಣ್ಣ, ಮೈಸೂರು ವಾಸುದೇವಾಚಾರ್ಯರು ಮುಂತಾದ ಸುಪ್ರಸಿದ್ಧ ವಾಗ್ಗೇಯಕಾರರು ಸಹ ತ್ಯಾಗರಾಜರು, ಶ್ಯಾಮಾಶಾಸ್ತ್ರಿ, ದೀಕ್ಷಿತರ ಮಾರ್ಗದಲ್ಲಿ ಸಂಸ್ಕೃತ, ತೆಲುಗು ಭಾಷೆಗಳಲ್ಲಿ ರಚಿಸಿದರು. ತಮಿಳುನಾಡಿನಲ್ಲಿ ಆದ ರೀತಿ ಸಂಗೀತಕ್ಷೇತ್ರದ ದಿಗ್ಗಜರ ಕೊಡುಗೆ ಕರ್ನಾಟಕ ನೃತ್ಯಕ್ಷೇತ್ರಕ್ಕೆ ಲಭಿಸಲಿಲ್ಲ. ಇತ್ತೀಚೆಗೆ ಕೆಲವು ವಿದ್ವಾಂಸರು ಈ ಕೊರತೆಯನ್ನು ನೀಗಿಸಲು ನೃತ್ಯಬಂಧಗಳನ್ನು ರಚಿಸುತ್ತಿದ್ದಾರೆ ಎನ್ನುವುದು ಸಮಾಧಾನಕರ ವಿಷಯ.

ಇನ್ನು ಹರಿದಾಸ ಸಾಹಿತ್ಯವಿಲ್ಲವೆ ? ಕರ್ನಾಟಕ ಸಂಗೀತದ ಪಿತಾಮಹರೆನಿಸಿದ ಪುರಂದರದಾಸರು, ಕನಕದಾಸರು ಇತ್ಯಾದಿ ಅನೇಕ ದಾಸಶ್ರೇಷ್ಠರು 'ದೇವರನಾಮ ಗಳನ್ನು' ಸುಲಲಿತ, ಲಯಬದ್ಧ, ಕನ್ನಡದಲ್ಲಿ ರಚಿಸಿದರೂ, ಇಂದಿನ ಸಂಗೀತ, ನೃತ್ಯ ಸಂಪ್ರದಾಯದಲ್ಲಿ ಸ್ಥಾನ ಪಡೆಯಲು ಬಹಳಕಾಲಬೇಕಾಯಿತು. ದಾಸರ ಪದಗಳು ಕಳೆದ ಐದು ದಶಕಗಳಲ್ಲಿ ನೃತ್ಯಮಾಧ್ಯಮದಲ್ಲಿ ಮುಖ್ಯಸ್ಥಾನ ಪಡೆದಿವೆಯಾದರೂ ಭಗವದ್ಭಕ್ತಿ, ದೈವಸ್ತುತಿಯೇ ಮುಖ್ಯ ವಸ್ತುವಾಗಿರುವುದರಿಂದ, ನೃತ್ಯ ಸಂಪ್ರದಾಯದ ನಾಯಕ ನಾಯಕಿ ಮನೋಭಿವ್ಯಕ್ತಿ ಇರುವ ವರ್ಣಂ, ಪದಂ, ಜಾವಳಿಗಳಿಗೆ ಪರ್ಯಾಯವಾಗಿ ಬೆಳೆಯಲಿಲ್ಲ. ಸಂಗೀತ ಸಂಪ್ರದಾಯ ದಲ್ಲೂ ದೇವರನಾಮಗಳು ವಾಗ್ಗೇಯಕಾರರಿಂದ ರಚಿಸಲ್ಪಟ್ಟ 'ವರ್ಣಂ', 'ಕೃತಿ'ಗಳ ಸಾಲಿಗೆ ಸೇರದೆ, ಕಚೇರಿಯ ಉತ್ತರಾರ್ಧದಲ್ಲಿ ತುಳಸೀದಾಸ, ಮೀರಾಬಾಯಿ, ಜಯದೇವನ ಅಷ್ಟಪದಿ ಮತ್ತು ಇತರ ತಮಿಳು ಕೃತಿಗಳ ಸಾಲಿನಲ್ಲಿ ಲಲಿತ ಸಂಗೀತದ ಸ್ಥಾನದಲ್ಲಿವೆ.

ಕನ್ನಡ ನವ್ಯ ಕಾವ್ಯ ಕಲಾವಿದರು ಶೋಧಿಸಬಹುದಾದ ದೊಡ್ಡ ಗಣಿ. ಇವುಗಳಲ್ಲಿ ನೃತ್ಯಕ್ಕೆ ಸೂಕ್ತವಾದವುಗಳನ್ನು ಆರಿಸಿಕೊಂಡು, ಸಂಗೀತವನ್ನು ಅಳವಡಿಸಿ, ನರ್ತಿಸುವ ಸಾಧ್ಯತೆ ಇದೆ. ಹಲವು ಕಲಾವಿದರು ಈ ನಿಟ್ಟಿನಲ್ಲಿ ಕೆಲಸಮಾಡುತ್ತಿದ್ದಾರೆ. ಈ ಪ್ರಕಾರದಲ್ಲಿ ಡಿವಿಜಿಯವರ ಅಂತಃಪುರಗೀತೆಗಳು ಬಹು ಪ್ರಸಿದ್ಧಿಯನ್ನು ಪಡೆದಿವೆ. ಪುಷ್ಪಾಂಜಲಿ ಎನ್ನುವ ಪ್ರಾರಂಭಿಕ ನೃತ್ಯಬಂಧದಲ್ಲಿ ಯಾವುದಾದರೂ ಸಂಸ್ಕೃತ ಶ್ಲೋಕವನ್ನು ಅಭಿನಯಿಸುತ್ತಿದ್ದ ನಾನು ಈಗ 'ವಚನ'ಗಳನ್ನು ಅಭಿನಯಿಸುವ ಸಂಪ್ರದಾಯ ಮಾಡಿಕೊಂಡು ಬಂದಿದ್ದೇನೆ. ಇಂದು ಹಲವು ಕಲಾವಿದರು ವಚನಗಳನ್ನು ಅಭಿನಯಿಸುತ್ತಿದ್ದಾರೆ.

ಪ್ರೇಕ್ಷಕರ ದೃಷ್ಟಿಯಿಂದ ನೋಡಿದರೆ, ವಿದ್ವಾಂಸರು, ನೃತ್ಯಶಾಸ್ತ್ರ ಪರಿಜ್ಞಾನವುಳ್ಳ ಪ್ರೇಕ್ಷಕರು, ನೃತ್ಯಕಾರ್ಯಕ್ರಮದಲ್ಲಿ ಭಾಷೆಯ ಚೌಕಟ್ಟನ್ನು ಹಾಕಿಕೊಳ್ಳುವುದಿಲ್ಲ. ನರ್ತಿಸಲ್ಪಡುವ ಕೃತಿ ಸಂಸ್ಕೃತ, ತೆಲುಗು, ತಮಿಳು, ಹಿಂದಿ, ಮರಾಠಿ ಹೀಗೆ ಭಾರತದ ಯಾವುದೇ ಭಾಷೆಯಲ್ಲಿರಲಿ, ಅದನ್ನು ಸ್ವೀಕರಿಸುತ್ತಾರೆ. ಬೆಂಗಳೂರಿನಂತಹ ಕಾಸ್ಮೊಪಾಲಿಟನ್ ನಗರಗಳನ್ನು ಬಿಟ್ಟು ಕರ್ನಾಟಕದ ಇತರ ಪ್ರಾಂತಗಳಲ್ಲಿ ಕನ್ನಡವಲ್ಲದೆ ಬೇರೆ ಭಾಷೆ ಗೊತ್ತಿಲ್ಲದ, ನೃತ್ಯಕಲೆಯ ಪರಿಚಯವಿಲ್ಲದ ಸಾಮಾನ್ಯ ಪ್ರೇಕ್ಷಕ ಕನ್ನಡ ಕೃತಿಗಳಿಗೆ ಹೆಚ್ಚು ಸ್ಪಂದಿಸುತ್ತಾನೆ ಎನ್ನುವುದು ಅನುಭವವೇದ್ಯ. ಕನ್ನಡ ಕೃತಿಯೊಂದನ್ನು ಆರಿಸಿಕೊಂಡು ಅದಕ್ಕೆ ಸಂಗೀತ ಸಂಯೋಜಿಸಿ, ನೃತ್ಯಸಂಯೋಜನೆ ಮಾಡಬೇಕಾದರೆ ಕಲಾವಿದರಿಗೆ, ಸಂಗೀತ ನೃತ್ಯ ಕ್ಷೇತ್ರಗಳಲ್ಲಿ ವಿಶೇಷವಾದ ಪಾಂಡಿತ್ಯದ ಅವಶ್ಯಕತೆ ಇರುತ್ತದೆ. ಅಂತಹ ಕಲಾವಿದರು ಮಾತ್ರ ಈ ರೀತಿಯ ಪ್ರಯೋಗಗಳನ್ನು ಮಾಡಲು ಸಾಧ್ಯ. ತಮ್ಮ ಕಲಾಭಿವ್ಯಕ್ತಿಗೆ ಸವಾಲನ್ನು ಎಸಗುವ ವಸ್ತುವಿರುವ, ಉತ್ತಮ ಮಟ್ಟದ ಸಂಗೀತವಿರುವ ಕೃತಿ ಯಾವುದೇ ಭಾಷೆಯಲ್ಲಿರಲಿ ಕಲಾವಿದರಿಗೆ ಎಂದೂ ಪ್ರಿಯವಾಗುತ್ತದೆ. ಇಂತಹ ಸ್ಫೂರ್ತಿದಾಯಕ ರಚನೆಗಳು ಕನ್ನಡದಲ್ಲೇ ಆದರೆ ಕಲಾವಿದರು ಅವನ್ನು ಖಂಡಿತವಾಗಿಯೂ ಅಭಿನಯಿಸುತ್ತಾರೆ.

ನೃತ್ಯ ಕಾರ್ಯಕ್ರಮದಲ್ಲಿ ಕನ್ನಡ ಭಾಷೆಯ ಬಳಸುವಿಕೆಗೆ ಉತ್ತಮ ಅವಕಾಶ ಒದಗಿಸಿಕೊಟ್ಟಿದ್ದು ನೃತ್ಯನಾಟಕಗಳ ಪ್ರಕಾರ. ಪುರಾಣದ ಕಥೆಗಳನ್ನು, ಮಹಾಕವಿಗಳ ಕಾವ್ಯಗಳನ್ನು, ನೃತ್ಯಮಾಧ್ಯಮಕ್ಕೆ ಅಳವಡಿಸಲು ಸೂಕ್ತ ಪ್ರಕಾರವಿದು. ನಾಟ್ಯಶಾಸ್ತ್ರದ ಆಧಾರದಿಂದ ಬೆಳೆದ ಈ ಪ್ರಕಾರ ಸಂಪ್ರದಾಯ ಶೈಲಿಯಿಂದ ಹಿಡಿದು ಸಮಕಾಲೀನ

ಶೈಲಿಯವರೆಗೆ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡಿತು. ಕನ್ನಡತನದ ಹುಡುಕಾಟದಲ್ಲಿರುವ ಕೆಲವು ಗುರುಗಳು, ಕಲಾವಿದರು ಪಂಪ, ಕುಮಾರವ್ಯಾಸ, ಹರಿಹರ, ಕುವೆಂಪು, ಪುತಿನ ಮುಂತಾದ ಮಹಾಕವಿಗಳ ಕಾವ್ಯಗಳನ್ನು ನೃತ್ಯನಾಟಕಗಳಾಗಿ ಸಂಯೋಜಿಸಿ ಯಶಸ್ವಿಯಾಗಿ ಪ್ರದರ್ಶಿಸಿದ್ದಾರೆ. ಮತ್ತು ಕೆಲವು ಪ್ರಯೋಗಶೀಲ ಕಲಾವಿದರು, ಐತಿಹಾಸಿಕ ಸಮಕಾಲೀನ ವಸ್ತುಗಳನ್ನೂ ವಿಶೇಷವಾಗಿ ಬರೆಸಿಕೊಂಡು ಪ್ರಯೋಗ ಮಾಡಿದ್ದಾರೆ. ನಾನು, ನನ್ನ ಪತ್ನಿ ಅನುರಾಧ, ಕನ್ನಡದಲ್ಲಿ ಸಂಯೋಜಿಸಿ ನರ್ತಿಸುವ 'ಮಹಾಭಾರತ' ನೂರಕ್ಕೂ ಹೆಚ್ಚು ಪ್ರದರ್ಶನಗಳನ್ನು ಕಂಡಿದೆ.

ಕಳೆದ ಐದು ದಶಕಗಳಲ್ಲಿ ಅನೇಕ ಕನ್ನಡ ನೃತ್ಯ ನಾಟಕಗಳು ಪ್ರದರ್ಶಿಸಲ್ಪಟ್ಟಿವೆ. ಧರ್ಮಭೂಮಿ, ಕರ್ನಾಟಕ ವೈಭವ, ಇತ್ಯಾದಿ ನೃತ್ಯ ನಾಟಕಗಳಿಂದ ದಿವಂಗತ ಗೋಪಿನಾಥ ದಾಸರ ನೇತೃತ್ವದಲ್ಲಿ ಬೆಂಗಳೂರಿನ ಪ್ರಭಾತ್ ಕಲಾವಿದರು ಜನಪ್ರಿಯತೆ ಗಳಿಸಿದ್ದರು. ಹಿರಿಯ ಗುರುಗಳಾದ ಹೆಚ್. ಆರ್. ಕೇಶವಮೂರ್ತಿ ಕನ್ನಡ ಕಾವ್ಯಪರಂಪರೆಯನ್ನು ನೃತ್ಯ ನಾಟಕಗಳಾಗಿ ಸಂಯೋಜಿಸಿ ಪ್ರದರ್ಶಿಸುತ್ತ ಬಂದಿದ್ದಾರೆ. ರಾಧಾ ಶ್ರೀಧರ್, ಲಲಿತಾ ಶ್ರೀನಿವಾಸನ್ ಮುಂತಾದ ಗುರುಗಳು ಕನ್ನಡ ಕಾವ್ಯಗಳನ್ನು ಪ್ರದರ್ಶಿಸಿದ್ದಾರೆ.

ಪ್ರಾಚೀನ ಕಾವ್ಯಗಳನ್ನು ಸಂಯೋಜಿಸುವಾಗ ನಾವು ಕೆಲವು ತೊಡಕುಗಳನ್ನು ಎದುರಿಸುತ್ತೇವೆ. ಈ ಕಾವ್ಯಗಳಿಗೆ ಸಂಗೀತ ಸಂಯೋಜನೆ ಮಾಡುವುದು, ಮುಖ್ಯವಾಗಿ ತಾಳಕ್ಕೆ ನಿಬದ್ಧವಾಗಿಸುವುದು ಬಹಳ ಕಷ್ಟದ ಕೆಲಸ. ಒಂದು ಚಿಕ್ಕ ಉದಾಹರಣೆ. ಹರಿಹರನ ರಗಳೆ ಖಂಡನಡೆಗೆ ಹೊಂದಿಕೊಳ್ಳುತ್ತದೆ. ಆದರೆ ಸಂಪೂರ್ಣ ಕಥೆ ಇದೇ ನಡೆಯಲ್ಲಿದ್ದರೆ ಏಕತಾನವಾಗಿಬಿಡುತ್ತದೆ. ಬೇರೆ ತಾಳಗಳಿಗೆ ಹೊಂದಿಸುವ ಪ್ರಯತ್ನ ಮಾಡಿದರೆ ಸಾಹಿತ್ಯದ ಮಾಧುರ್ಯ ಕೆಡುತ್ತದೆ. ಎರಡನೆಯದಾಗಿ, ಹಳೆಗನ್ನಡ ಸಾಮಾನ್ಯ ಪ್ರೇಕ್ಷಕನಿಗೆ ಸುಲಭಗ್ರಾಹ್ಯವಲ್ಲ. ಆದರೂ ಇದು ಅಸಾಧ್ಯವೇನಲ್ಲ. ಈಗ ಕಲಾವಿದರು ತಮ್ಮ ಪ್ರಯೋಗಗಳಿಗೆ ಸೂಕ್ತವಾದ ಸಾಹಿತ್ಯವನ್ನು ವಿದ್ವಾಂಸರಿಂದ ಬರೆಯಿಸಿಕೊಂಡು ಅದಕ್ಕೆ ಸಂಗೀತ ಸಂಯೋಜನೆ ಮಾಡಿ ಪ್ರದರ್ಶಿಸುತ್ತಿದ್ದಾರೆ. ಶತಾವಧಾನಿ ಡಾ|| ಆರ್. ಗಣೇಶ್ ಮತ್ತು ಕೆಲವರು ವಿದ್ವಾಂಸರು ಹೊಸ ಪ್ರಯೋಗಗಳಿಗೆ ಸಾಹಿತ್ಯವನ್ನು ರಚಿಸುತ್ತಿದ್ದಾರೆ. ಇಂದಿನ ಶಿಕ್ಷಣ ಪದ್ಧತಿಯಲ್ಲಿ ಯುವಪೀಳಿಗೆ ಕನ್ನಡಭಾಷೆಯಿಂದ ದೂರ ಸರಿಯುತ್ತಿದೆ ಎನ್ನುವುದು ಶೋಚನಿಯ ಸಂಗತಿ. ಇಂದಿನ ಕಲಾವಿದರು ಕನ್ನಡ ಕಾವ್ಯವನ್ನು ಓದುವ ಆಸ್ವಾದಿಸುವ ರಸಜ್ಞತೆಯನ್ನು ಬೆಳೆಸಿಕೊಳ್ಳಬೇಕಾಗಿದೆ.

ಹಿಂದೆ ರಾಜವಂಶಗಳು ಮಾಡಿದ ಕಲಾಪೋಷಣೆಯನ್ನು ಬಹುಮಟ್ಟಿಗೆ ನಮ್ಮ ರಾಜ್ಯ ಸರ್ಕಾರ ಮುಂದುವರಿಸುತ್ತಿರುವುದು ಸ್ತುತ್ಯರ್ಹ. ಕರ್ನಾಟಕ ಸರ್ಕಾರ, ಹಂಪಿ, ಪಟ್ಟದಕಲ್, ಬೇಲೂರು, ಹಳೆಬೀಡು, ಬನವಾಸಿ ಮುಂತಾದ ಐತಿಹಾಸಿಕ ಸ್ಥಳಗಳಲ್ಲಿ ಸಾಂಸ್ಕೃತಿಕ ಉತ್ಸವಗಳನ್ನೇರ್ಪಡಿಸಿ, ಗತಕಾಲದ ವೈಭವವನ್ನು ನೆನಪಿಗೆ ತರುವುದು ಮಾತ್ರವಲ್ಲ, ಸ್ಥಳೀಯ ಕಲಾವಿದರಿಗೆ ಅವಕಾಶನೀಡಿ ಪ್ರೋತ್ಸಾಹಿಸುತ್ತಿದೆ. ಇಂದು ಈ ಉತ್ಸವಗಳು ರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಪಡೆದಿರುವುದು ಹೆಮ್ಮೆಯ ವಿಷಯ. ರಾಜ್ಯದ ಸಂಗೀತ ನೃತ್ಯ ಅಕಾಡೆಮಿ ಕೂಡ ಉತ್ಸವಗಳನ್ನು, ಸೋದಾಹರಣ ಭಾಷಣಗಳನ್ನು ಏರ್ಪಡಿಸಿ, ರಚನಾತ್ಮಕ ಕೆಲಸ ಮಾಡುತ್ತಿದೆ. ಹಿರಿಯ ಕಿರಿಯ ಗುರುಗಳ, ಕಲಾವಿದರ ಸಂಘಟನೆಯಾಗಿ, 'ಕರ್ನಾಟಕ ನೃತ್ಯಕಲಾ ಪರಿಷತ್ತು' ಸ್ಥಾಪಿಸಲ್ಪಟ್ಟು ನೃತ್ಯಕ್ಷೇತ್ರದ ಆಗುಹೋಗುಗಳ ಬಗ್ಗೆ ಚಿಂತಿಸಲು ಸಹಕಾರಿಯಾಗಿದೆ.

ರಾಜ್ಯ ಸರ್ಕಾರ, ನೃತ್ಯಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಕಲಾವಿದರಿಗೆ 'ಶಾಂತಲಾ' ಪ್ರಶಸ್ತಿ, 'ರಾಜ್ಯೋತ್ಸವ' ಪ್ರಶಸ್ತಿ, 'ಕಲಾಶ್ರೀ' ಪ್ರಶಸ್ತಿಗಳನ್ನು ನೀಡಿ ಗೌರವಿಸುತ್ತಿದೆ. ಇಂದು ರಾಜ್ಯದ ವಿಶ್ವವಿದ್ಯಾಲಯಗಳಲ್ಲಿ ನೃತ್ಯವಿಭಾಗವಿದ್ದು, ಸ್ನಾತಕೋತ್ತರ ಪದವಿ ಪಡೆಯಬಹುದಾಗಿದೆ. ಕರ್ನಾಟಕದ ಹಲವು ಮಂದಿ ಕಲಾವಿದರು ಪಿಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ.

ಕೆಲವು ದಶಕಗಳ ಹಿಂದೆ ನೃತ್ಯಕಲೆ ಕೇವಲ ಸ್ತ್ರೀಯರಿಗೆ ಮಾತ್ರ ಮೀಸಲು ಎಂಬ ತಪ್ಪು ಅಭಿಪ್ರಾಯವಿತ್ತು. ಆದರೆ ಕರ್ನಾಟಕದ ರಾಂಗೋಪಾಲ್, ಯು. ಎಸ್. ಕೃಷ್ಣರಾವ್, ಚೆನ್ನೈನ ಧನಂಜಯನ್, ಸಿ. ವಿ. ಚಂದ್ರಶೇಖರ್, ಜನಾರ್ದನನ್, ಬಾಲಗೋಪಾಲನ್ ಮುಂತಾದ ಮಹಾನ್ ಕಲಾವಿದರಿಂದ ಅನೇಕ ಮಂದಿ ಹುಡುಗರು ಸ್ಫೂರ್ತಿಪಡೆದು, ನೃತ್ಯಕಲೆಯ ಕಡೆ ಆಕರ್ಷಿತರಾದರು. ಇಂದು ಕರ್ನಾಟಕದಲ್ಲಿ ಅನೇಕ ಪುರುಷ ನೃತ್ಯಪಟುಗಳು ರಾರಾಜಿಸುತ್ತಿದ್ದಾರೆ.

ಹಿನ್ನೆಲೆ ಸಂಗೀತ ನೃತ್ಯಕ್ಷೇತ್ರದ ಬಾಹ್ಯಪ್ರಾಣ. ಏಕೀಕರಣದ ಹಿಂದಿನ ಅವಧಿಯಲ್ಲಿ, ನೃತ್ಯಕ್ಕೆ ಹಿನ್ನೆಲೆ ಕಲಾವಿದರ ಸಂಖ್ಯೆ ಬಹಳ ಕಡಿಮೆಯಿತ್ತು. ನುರಿತ ವಿದ್ವಾಂಸರು ನೃತ್ಯಕ್ಕೆ ಸಹಕರಿಸಲು ಇಚ್ಛಿಸುತ್ತಿರಲಿಲ್ಲ. ಆದರೆ, ಕಳೆದ ಐದು ದಶಕಗಳಲ್ಲಿ ಅನೇಕ ಪ್ರತಿಭಾನ್ವಿತ ಕಲಾವಿದರು ಈ ಕ್ಷೇತ್ರದಲ್ಲಿ ದುಡಿಯುತ್ತಿದ್ದಾರೆ, ಖ್ಯಾತಿಗಳಿಸಿದ್ದಾರೆ.

ಇಂದಿನ ಕಲಾವಿದರು ಪ್ರಯೋಗ ವಿಧಾನದಲ್ಲಿ ಪರಿಣತಿಯನ್ನು ಗಳಿಸುತ್ತಿದ್ದಾರೆ. ಶಾಸ್ತ್ರೀಯ ಅಂಶಗಳಾದ ಅಡವು ಮಾಡುವ ವಿಧಾನ, ಹಸ್ತ ವಿನಿಯೋಗ, ನರ್ತನ ಕ್ರಮ, ಇತ್ಯಾದಿಗಳ ಬಗ್ಗೆ ಶ್ರದ್ಧೆ ತೋರುತ್ತಿದ್ದಾರೆ ಎನ್ನುವುದು ಮೆಚ್ಚತಕ್ಕ ವಿಷಯ. ಆದರೆ, ಕೆಲವು ಸಲ ಕಲೆಯ ಔನ್ನತ್ಯಗಳಿಗಿಂತ ವ್ಯಾಪಾರಿ ವಿಷಯಗಳಿಗೆ ಒತ್ತುಕೊಡುತ್ತಿದ್ದಾರೆ ಅನಿಸುತ್ತದೆ. ಪಾಶ್ಚಾತ್ಯ ಕಲೆಗಳಿಂದ ನಮ್ಮ ಕಲಾವಿದರು ಸ್ಫೂರ್ತಿಪಡೆದು ವಸ್ತುನಿಷ್ಠತೆ, ಅಂಗಸಾಧನೆಗಳ ಕಡೆ ಗಮನಕೊಡುತ್ತಿದ್ದಾರೆ. ಪ್ರದರ್ಶನದಲ್ಲಿ, ಹವ್ಯಾಸಿ ಮನೋಭಾವದ ಜಾಗದಲ್ಲಿ ವೃತ್ತಿಪರ ದಕ್ಷತೆ ಕಂಡುಬರುತ್ತಿದೆ. ರಂಗಸಜ್ಜಿಕೆ, ಬೆಳಕು ವ್ಯವಸ್ಥೆಗಳಲ್ಲಿ ಬದಲಾವಣೆಗಳಾಗಿವೆ. ಸಾಕಷ್ಟು ಪ್ರಗತಿಯನ್ನೂ ಕಂಡಿದ್ದೇವೆ. ಆದರೆ ಎಚ್ಚರ, ಹಿಡಿತವಿಲ್ಲದಿದ್ದರೆ ತಾಂತ್ರಿಕತೆ, ಕಲೆಯನ್ನೇ ನಿಸ್ತೇಜಗೊಳಿಸುವ ಅಪಾಯವಿದೆ.

ನೃತ್ಯ ಒಂದು ಪುರಾತನವಾದ, ಕೇವಲ ಭಕ್ತಿ ಪುರಾಣಗಳನ್ನು ಪ್ರತಿಪಾದಿಸುವ ಅಪ್ರಸ್ತುತ ಕಲೆಯೆಂಬ ಅಭಿಪ್ರಾಯ ಕೆಲವರಲ್ಲಿದೆ. ಇಂತಹ ಭಾವನೆ ಮೂಡುವುದಕ್ಕೆ ಒಂದು ರೀತಿಯಲ್ಲಿ ಕಲಾವಿದರೂ ಹೊಣೆಯೆ. ನಾಟ್ಯಶಾಸ್ತ್ರದ ೩೬ ಅಧ್ಯಾಯಗಳಲ್ಲಿ ಅರ್ಧಕ್ಕಿಂತಲೂ ಹೆಚ್ಚು ಅಭಿನಯಕ್ಕೇ ವಿನಿಯೋಗಿಸಲಾಗಿದೆ. ನೃತ್ಯ, ಮನುಷ್ಯನ ಅಂತರಂಗ ಸಂವೇದನೆಗಳನ್ನು, ಜೀವನದ ನೋವು ನಲಿವುಗಳನ್ನು ವ್ಯಕ್ತಗೊಳಿಸುವ, ವಿಶ್ಲೇಷಿಸುವ ಮಾಧ್ಯಮ ಕೂಡ. ನಮ್ಮ ಅಂತಃಕರಣಕ್ಕೆ ಅತ್ಯಂತ ಹತ್ತಿರವಾದ ಮಾಧ್ಯಮ ನಮ್ಮ ದೇಹ. ಈ ದೇಹವೇ ಕಲಾಭಿವ್ಯಕ್ತಿಗೆ ಸಾಧನ. ದೇಹದಿಂದ ಹೊರಹೊಮ್ಮುವ ಕಲೆ ನೃತ್ಯಕಲೆ. ಇದರಿಂದ ಯಾವುದನ್ನು ಬೇಕಾದರೂ ನಾವು ಅಭಿನಯಿಸಲು ಸಾಧ್ಯ. ಜೀವನವನ್ನು ಸೂಕ್ಷ್ಮವಾಗಿ ಗಮನಿಸುವ ಶಕ್ತಿ, ಸೃಜನಶೀಲತೆ ಇರಬೇಕಷ್ಟೆ.

ನಾಟ್ಯಶಾಸ್ತ್ರದಿಂದ ಬೆಳೆದ ಕಲೆ, ಕಾಲಗತಿಯಲ್ಲಿ ಅನೇಕ ಬದಲಾವಣೆಗಳನ್ನು ಕಂಡಿದೆ. ಕೆಲವನ್ನು ತನ್ನ ಪ್ರವಾಹದೊಳಗೆ ಸೇರಿಸಿಕೊಂಡಿದೆ, ಕೆಲವನ್ನು ಕಳೆದುಕೊಂಡಿದೆ. ಹಲವು ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳ ಪ್ರಭಾವದಿಂದ ಹೊಸರೂಪ ಪಡೆದಿದೆ. ಶಾಸ್ತ್ರೀಯವಾದ ನೃತ್ಯರೂಪಕ, ಉಪರೂಪಕಗಳನ್ನು ಸೇರಿಸಿಕೊಂಡಿತು. ವಿಸ್ತಾರವಾದ ಕಥಾನಕಗಳನ್ನೊಳಗೊಂಡ 'ಶಾಸ್ತ್ರೀಯ' ಪದ್ಧತಿಯಿಂದ ಒಂದು ನಿರ್ದಿಷ್ಟವಾದ ವಿಷಯವನ್ನೇ ಸೂಕ್ಷ್ಮವಾಗಿ ಅಭಿನಯಿಸುವ ಪ್ರವೃತ್ತಿ ಬೆಳೆದು ಕೂಡಿಯಾಟ್ಟಂನಂತಹ 'ನವಶಾಸ್ತ್ರೀಯ' ಪದ್ಧತಿಗಳು ಬೆಳೆದವು. ಭಕ್ತಿಪಂಥದ ಪ್ರಭಾವದಿಂದ ನೃತ್ಯಕಲೆ ತನ್ನ ಗತಿ ಬದಲಾಯಿಸಿತು. ಅನಂತರ ೧೮ನೆಯ ಶತಮಾನದಿಂದ ಇಂದಿನ ನೃತ್ಯ ಸಂಪ್ರದಾಯಗಳು ಬೆಳೆದವು. ಈ 'ಸಂಪ್ರದಾಯ' ಎನ್ನುವುದು ನಿಂತ ನೀರಲ್ಲ. ಅದು ನಿರಂತರ ಹರಿಯುವ ಜೀವನದಿ. ಒಂದು ನಿರ್ದಿಷ್ಟ ಕಾಲಘಟ್ಟದಲ್ಲಿ ಒಬ್ಬ ಮಹಾನ್ ಕಲಾವಿದನ ಅಥವಾ ಕೆಲವು ಕಲಾವಿದರ ಸೃಜನಶೀಲ ಕಲೆಯೇ ಮುಂದಿನ ಪೀಳಿಗೆಗೆ ಹೊಸ ಸಂಪ್ರದಾಯವಾಗುತ್ತದೆ ಎನ್ನುವುದನ್ನು ನೃತ್ಯಕಲೆಯ ಇತಿಹಾಸದ ತಿರುವುಗಳಿಂದ ನಾವು ತಿಳಿದುಕೊಳ್ಳಬಹುದು.

ಶಾಸ್ತ್ರೀಯ ಕಲೆಯ ಪ್ರಾರಂಭದ ಸಂದರ್ಭದಲ್ಲಿ ಮಾತ್ರ ಇದು ಈ ಪ್ರಾಂತದ್ದು ಎಂದು ಹೇಳುತ್ತೇವೆ. ಆ ಕಲೆ ಬೆಳೆದಂತೆ ಭೌಗೋಳಿಕ ಸರಹದ್ದುಗಳನ್ನು ಮೀರಿ ನಿಲ್ಲುತ್ತದೆ. ಅಧ್ಯಯನ ದೃಷ್ಟಿಯಿಂದ ನಾವು ಈ ರೀತಿಯ ಪರಿಧಿಗಳನ್ನು ಮಾಡಿಕೊಳ್ಳುವುದು ಅನಿವಾರ್ಯ. ಭರತನಾಟ್ಯದಂತಹ ಶಾಸ್ತ್ರೀಯ ಕಲೆಯನ್ನು ರಾಷ್ಟ್ರೀಯ ಕಲೆಯೆಂದು ಪರಿಗಣಿಸಬಹುದಷ್ಟೆ. ಇಂದು ಭಾರತದೇಶದ ಕಲೆಗಳನ್ನು ನಮ್ಮ ದೇಶದಲ್ಲಿ ಮಾತ್ರವಲ್ಲ ವಿದೇಶಗಳಲ್ಲೂ ಕಲಿಯುತ್ತಿದ್ದಾರೆ. ಎಲ್ಲೇ ಕಲಿತರೂ ಕಲಾವಿದ ಈ ಕಲಾಸಾಗರದ ಒಂದು ಬಿಂದುವಾಗುತ್ತಾನೆ. ಇದರಿಂದ ಕಲಾಕ್ಷೇತ್ರದ ವಿಸ್ತಾರದ ಜೊತೆಗೆ ಕಲಾವಿದನ ಮೇಲಿರುವ ಜವಾಬ್ದಾರಿಯೂ ಅರಿವಾಗುತ್ತದೆ.

ಕಳೆದ ಐದು ದಶಕಗಳಲ್ಲಿ ಕರ್ನಾಟಕದ ನೃತ್ಯಕ್ಷೇತ್ರ ಅನೇಕಮಂದಿ ಶ್ರೇಷ್ಠಗುರುಗಳಿಂದ, ಉತ್ತಮ ಕಲಾವಿದರಿಂದ ಸಮೃದ್ಧವಾಗಿದೆ. ಇಂದು ಕರ್ನಾಟಕದ ಕಲಾವಿದರು ತಮ್ಮ ಪ್ರತಿಭೆಯಿಂದ, ಸಾಧನೆಯಿಂದ, ದೇಶದಲ್ಲಿ ಮಾತ್ರವಲ್ಲ, ಅಂತರರಾಷ್ಟ್ರೀಯ ಮಟ್ಟದಲ್ಲಿ ಸಹ ಗೌರವಾದರಗಳನ್ನು ಪಡೆಯುತ್ತಿದ್ದಾರೆ.

ಬ್ರಿಟಿಷರ ಆಳ್ವಿಕೆಯನಂತರ ದೇಶದ ಎಲ್ಲೆಡೆ ಶಾಸ್ತ್ರೀಯ ನೃತ್ಯಕಲೆಯ ಪುನರುತ್ಥಾನದ ಕೆಲಸ ನಡೆಯಿತು. ಹಂತಹಂತವಾಗಿ ನೃತ್ಯಕ್ಷೇತ್ರ ಮತ್ತೆ ಗೌರವಸ್ಥಾನ ಪಡೆದು ಬೆಳೆಯುತ್ತಿದೆ. ಈ ಸಂಕ್ರಮಣ ಕಾಲದಲ್ಲೇ ಏಕೀಕರಣವಾಗಿದ್ದು, ಈ ಬೆಳವಣಿಗೆಗೆ ಮತ್ತಷ್ಟು ಪುಷ್ಟಿ ಸಿಕ್ಕಿತೆಂದು ಹೇಳಬಹುದು. ವಿಶ್ವಾದ್ಭುತ ಸಂಸ್ಕೃತಿ, ಸತ್ವ, ಚಿಂತನೆ ಇರುವ ನಮ್ಮ ನೃತ್ಯಕಲೆ ಮತ್ತಷ್ಟು ಉಜ್ವಲವಾಗಿ ಪ್ರಕಾಶಿಸಲಿ, ಕನ್ನಡ ಕಲಾವಿದರು ಕಲೆಯ ಉತ್ಕೃಷ್ಟ ಮಟ್ಟಗಳನ್ನಧಿಗಮಿಸಲಿ ಎಂದು ಆಶಿಸುತ್ತೇನೆ.

ಶ್ರೀಧರ್
ನ. ೭೨, ೨ನೇ ಅಡ್ಡರಸ್ತೆ, ಎಸ್. ಬಿ. ಎಮ್. ಕಾಲೋನಿ, ಕೋಣನಕುಂಟೆ, ಬೆಂಗಳೂರು-೬೨

# ಏಕೀಕರಣ; ಕನ್ನಡ ಚಿತ್ರಗಳ ಅನನ್ಯತೆ

**ಸ**ಮುದಾಯದ ಏಕೀಕರಣ, ಒಂದಾಗುವಿಕೆ, ಒಟ್ಟಾಗಿ ಕೂಡಿಸುವಿಕೆ ಭಾಷೆಯ ಮೂಲಕ ಸಾಧ್ಯವಾಗಬಲ್ಲದೆಂಬ ಆಶಯ ಕನ್ನಡನಾಡಿನ ಮಟ್ಟಿಗೆ ಸಾಕಾರವಾಗಿಲ್ಲವೆಂಬುದು ಇಂದಿನ ಸತ್ಯ. ಭಾಷಾವಾರು ಏಕೀಕರಣ ಪ್ರಕ್ರಿಯೆ ಪ್ರಾರಂಭವಾದ ೫೦ ವರ್ಷಗಳ ನಂತರವೂ ಕನ್ನಡ ಜನ ಭಾವುಕರಾಗಿಯೂ ಸಹ ಒಂದಾಗಿಲ್ಲವೆಂಬ ಸಂಗತಿಯನ್ನು ದೈನಂದಿನ ಸುದ್ದಿ ಸಮಾಚಾರಗಳು ನಮಗೆ ತಿಳಿಸಿ ಹೇಳುತ್ತಿವೆ. ಇದಕ್ಕೆ ಎರಡು ಮುಖ್ಯ ಕಾರಣಗಳನ್ನು ಗುರುತಿಸಬಹುದು. ನೂರಾರು ವರ್ಷಗಳ ಕಾಲ ಬೇರೆ ಬೇರೆ ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕನ್ನಡ ಜನ ಆಯಾಯ ಪ್ರಾಂತಗಳಲ್ಲಿ ಭಾಷಾ ಅಲ್ಪಸಂಖ್ಯಾತರಾಗಿದ್ದರಿಂದ, ಪ್ರಭುತ್ವದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಒತ್ತಡಗಳಿಗೆ ಗುರಿಯಾಗಿದ್ದರಿಂದ, ಅವರಲ್ಲುಂಟಾಗಿರಬಹುದಾದ ಸ್ಮೃತಿ ವಿಭೇದ ಸ್ಥಿತಿ ಒಂದು ಕಡೆಯಾದರೆ, ಕನ್ನಡನಾಡಿನ ವೈವಿಧ್ಯದ ಸ್ವರೂಪವೇ ಇನ್ನೊಂದು ಕಾರಣವಿರಬಹುದು. ನೆರೆಯ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕ ಏಕರೂಪದ, ಸಾಮರಸ್ಯದ ನಾಡಲ್ಲ. ಇದು ವೈವಿಧ್ಯ ಸಂಸ್ಕೃತಿಗಳ, ಭಾಷೆಗಳ, ಉಪಭಾಷೆಗಳ, ಹವಾಗುಣಗಳ, ಭೌಗೋಳಿಕ ಏರುಪೇರುಗಳ ರಾಜ್ಯ. ರಾಜಕೀಯವಾಗಂತೂ ಕನ್ನಡ ನೆಲ ಏಕಸ್ವರೂಪದ ಮಾದರಿಯಲ್ಲಿಲ್ಲ. ಐತಿಹಾಸಿಕವಾಗಿಯೂ, ಕರ್ನಾಟಕದಲ್ಲಿ ಆಳಿಹೋದ ವಂಶಗಳು ಬೇರೆ ಬೇರೆ ಭೌಗೋಳಿಕ ಪ್ರದೇಶದಲ್ಲಿ ತಮ್ಮ ಪ್ರಭುತ್ವವನ್ನು ಎತ್ತಿ ತೋರಿದವರೇ ಹೊರತು ಒಟ್ಟು ಕನ್ನಡ ಭಾಷಿಕರ ಆಶೋತ್ತರಗಳನ್ನು ಪ್ರತಿನಿಧಿಸಿದವರಲ್ಲ. ಆಧುನಿಕ ಅಭಿವೃದ್ಧಿಯ ಮಾನದಂಡಗಳಿಂದಲೂ ಕರ್ನಾಟಕದಲ್ಲಿ ಏಕಸೂತ್ರದ ಬೆಳವಣಿಗೆಯಿಲ್ಲ. ರಾಜಧಾನಿಗೆ ದೂರದ ಮುಂಬೈ-ಹೈದರಾಬಾದ್-ಕರ್ನಾಟಕವಿರಲಿ, ಹಳೆಯ ಮೈಸೂರು ಸಂಸ್ಥಾನದ ಭೂಪಟದಲ್ಲೂ ಬೆಂಗಳೂರಿಗೂ, ಮಿಕ್ಕ ಪ್ರದೇಶಕ್ಕೂ ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಸಂಘರ್ಷದ ಸ್ಥಿತಿ ಉಂಟಾಗಿರುವುದನ್ನು ಗಮನಿಸಬಹುದು. ಈ ಸಂಘರ್ಷ ಆರ್ಥಿಕ ಅಭಿವೃದ್ಧಿಯ ವಾರಸುದಾರಿಕೆ ಮತ್ತು ಕನ್ನಡ ಸಂಸ್ಕೃತಿಯ ವಿಸ್ತರಣೆಯ ಮಧ್ಯೆ ಆಳವಾಗಿ ಬೆಳೆಯುತ್ತಿರುವ ಕಂದಕವನ್ನು ತನ್ನೊಳಗೆ ಒಳಗೊಂಡಿದೆ. ಬಹಳಷ್ಟು ಸಮಾಜಶಾಸ್ತ್ರಜ್ಞರು, ವಿದ್ವಾಂಸರು ಭಾಷಾವಾರು ವಿಭಜನೆಯನ್ನು, ಅದರಲ್ಲೂ ಮುಖ್ಯವಾಗಿ ಕರ್ನಾಟಕದ ಸಂದರ್ಭದಲ್ಲಿ – ಪ್ರಶ್ನೆ ಮಾಡಿದ್ದಾರೆ. ಆದರೆ ಚಾರಿತ್ರಿಕವಾಗಿ ನೋಡಿದರೆ, ಜಗತ್ತಿನಾದ್ಯಂತ, ಎಲ್ಲ ರಾಷ್ಟ್ರಗಳಲ್ಲಿ, ಪ್ರದೇಶಗಳಲ್ಲಿ ವಿಭಜನೆಯಾಗಿರುವುದು ಭಾಷೆ ಅಥವಾ ಧರ್ಮದ ಅನನ್ಯತೆಯಲ್ಲಿ. ಆದ್ದರಿಂದ ಈ ರೀತಿಯ ಭಾಷಾವಾರು ಪ್ರಾಂತಗಳ ಏಕೀಕರಣ ನಮ್ಮ ದೇಶಕ್ಕೇ ವಿಶೇಷವಾದುದಲ್ಲ. ಪ್ರದೇಶಗಳ ಚಹರೆಯನ್ನು ಗುರುತಿಸುವುದು ಹೆಚ್ಚಾಗಿ ಅದರ ಭಾಷೆಯಿಂದ. ಈ ವಿಶಾಲ ದೃಷ್ಟಿಯಿಂದ ನೋಡಿದರೆ ಕರ್ನಾಟಕದ ಅಸ್ತಿತ್ವವನ್ನು ಕನ್ನಡದ ಮೂಲಕ ಗುರುತಿಸುವುದರ ಬಗ್ಗೆ ಇರಬಹುದಾದ ಅನುಮಾನಗಳನ್ನು ನಾವು ಇನ್ನಾದರೂ ಬಿಡಬಹುದು. ಆದರೆ ಭಾಷೆಯಿಂದ ತನ್ನ ಅಸ್ತಿತ್ವವನ್ನು, ಚಹರೆಯನ್ನು ಪಡೆದ ಒಂದು ಪ್ರದೇಶದಲ್ಲಿ ಆ ಭಾಷೆಗಿರಬೇಕಾದ ಪ್ರಭುತ್ವದ ಶಕ್ತಿ, ಸಾಂಸ್ಕೃತಿಕವಾಗಿ ಒಂದುಗೂಡಲು ಬೇಕಾದ ಸಮುದಾಯ ಸಾಧನಗಳು, ಪರಿಕರಗಳನ್ನು ಗುರುತಿಸಿಕೊಳ್ಳಬೇಕಾದ ಅಗತ್ಯ ಕರ್ನಾಟಕದ ಮಟ್ಟಿಗಂತೂ ಹೆಚ್ಚಾಗಿದೆ.

ಕರ್ನಾಟಕ ಸಂಸ್ಕೃತಿಯಲ್ಲಿನ ಪ್ರಾದೇಶಿಕ ವೈವಿಧ್ಯವನ್ನು ನಾವು ಗುರುತಿಸಿ ಉಳಿಸಿಕೊಳ್ಳದೇ ಹೋದರೆ ಒಂದು ಸಮೃದ್ಧ ನಾಗರಿಕತೆಯ ವಾರಸುದಾರಿಕೆಯನ್ನು ನಾವು ಕಳೆದುಕೊಳ್ಳುತ್ತೇವೆ. ಉತ್ತರ ಕರ್ನಾಟಕದಲ್ಲಿ ಹೆಚ್ಚು ಪ್ರಚಲಿತವಿರುವ ಉತ್ತರಾದಿ ಮತ್ತು ಹಳೆ ಮೈಸೂರು ಪ್ರಾಂತದ ದಕ್ಷಿಣಾದಿ ಸಂಗೀತ ಪರಂಪರೆಗಳು, ಕರಾವಳಿಯ ಯಕ್ಷಗಾನ ನೃತ್ಯ, ಬಯಲುಸೀಮೆಯ ನಾಟಕ, ಬಯಲಾಟ ಸಂಪ್ರದಾಯಗಳು, ತುಳು, ಕೊಂಕಣಿ, ಕೊಡವ ಹಾಗೂ ಇನ್ನಿತರ ಭಾಷಿಕರ, ಉಪಭಾಷಿಕರ ಆಚಾರ, ವಿಚಾರ, ಪರಂಪರೆಗಳು, ಜಾನಪದೀಯ, ಕೆಲವೊಮ್ಮೆ ಜಾತೀಯ ಎನ್ನಬಹುದಾದ ಸಾಂಸ್ಕೃತಿಕ ಆಚರಣೆಗಳೂ ಒಟ್ಟು ಕನ್ನಡ ನಾಗರಿಕತೆಯನ್ನು ಶ್ರೀಮಂತಗೊಳಿಸಿರುವುದನ್ನು ಗುರುತಿಸುತ್ತಲೇ, ಕನ್ನಡ ಭಾಷೆಯ ರಾಜಕೀಯ, ಸಾಮಾಜಿಕ ನಾಯಕತ್ವವನ್ನು ಬೆಳೆಸಬೇಕಾದ ಸಂಧಿಕಾಲದಲ್ಲಿ ನಾವಿದ್ದೇವೆ.

ವೈವಿಧ್ಯವನ್ನು ನಿರಾಕರಿಸದೆಯೇ, ಕರ್ನಾಟಕದ ಏಕೀಕರಣದ ಪ್ರಕ್ರಿಯೆಗೆ ಪೂರಕವಾಗಿರುವ ಎರಡು ಪ್ರಮುಖ ಸಾಧನಗಳೆಂದರೆ ಕನ್ನಡ ಸಾಹಿತ್ಯ ಪರಂಪರೆ ಮತ್ತು ಆಧುನಿಕ ಕನ್ನಡ ಸಿನಿಮಾ. ಸಾಹಿತ್ಯ ಸಾವಿರ ವರ್ಷಗಳಿಂದ ಆಗಾಗ್ಗೆ ಈ ಕೆಲಸವನ್ನು ಮಾಡುತ್ತಾ ಬಂದಿದ್ದರೆ ಕನ್ನಡ ಚಲನಚಿತ್ರ ಇದನ್ನು ಕಳೆದ ೫೦ ವರ್ಷಗಳಿಂದ ಸತತವಾಗಿ ಯಶಸ್ವಿಯಾಗಿ ನಿರ್ವಹಿಸಿದೆ. ಸಾವಿರ ವರ್ಷಕ್ಕೂ ಮಿಕ್ಕಿದ ಚಾರಿತ್ರಿಕ, ಸಾಂಸ್ಕೃತಿಕ ಪರಂಪರೆಯಿರುವ ಕನ್ನಡ ಸಾಹಿತ್ಯಕ್ಕೆ ಇಂದಿನ ವಿಶಾಲ ಕರ್ನಾಟಕದ ಎಲ್ಲ ಭಾಗದ ಜನರ ಮಹತ್ವದ ಕೊಡುಗೆಯಿದೆ. ಹಾಗೆಯೇ ಚಲನಚಿತ್ರ ಮಾಧ್ಯಮಕ್ಕೆ ಸಂಬಂಧಿಸಿದಂತೆ ಇರಬಹುದಾದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ಕಲಾತ್ಮಕ ವಿನ್ಯಾಸಗಳ ಬಗ್ಗೆ ತೀವ್ರವಾದ ಭಿನ್ನಾಭಿಪ್ರಾಯ, ಚರ್ಚೆಗೆ ಆಸ್ಪದ ಇದ್ದರೂ ಒಂದು ಪ್ರಭುತ್ವದ ಮತ್ತು ಸಾಮಾನ್ಯ ಸಾಂಸ್ಕೃತಿಕ ಅಗತ್ಯದ ಸಾಧನವಾಗಿ ಚಲನಚಿತ್ರ ಕರ್ನಾಟಕವನ್ನು ಒಂದುಗೂಡಿಸಿದೆ. ಹಿಂದಿ ಸಿನಿಮಾಗಳು ಹೇಗೆ ಆ ಭಾಷೆಯನ್ನು ದೇಶದ ರಾಜಭಾಷೆಯಾಗಿ ಸ್ವೀಕರಿಸಲು ಒಂದು ಮನೋವೇದಿಕೆಯನ್ನು ರಾಷ್ಟ್ರದ ಇತರ ಎಲ್ಲಾ ಭಾಷಿಕರಲ್ಲಿ ಮೂಡಿಸಲು ಸಹಾಯ ಮಾಡಿದೆಯೋ ಅದೇ ರೀತಿಯಲ್ಲಿ ಕನ್ನಡ ಚಲನಚಿತ್ರಗಳು, ಇತ್ತೀಚೆಗೆ ಕನ್ನಡ ದೂರದರ್ಶನದ ವಿವಿಧ ಛಾನಲ್‌ಗಳ ಧಾರಾವಾಹಿಗಳು ಕನ್ನಡ ಭಾಷೆಯನ್ನು ರಾಜ್ಯಭಾಷೆಯಾಗಿ ಸ್ವೀಕರಿಸುವ ಮನಸ್ಥಿತಿಯನ್ನು ತಯಾರು ಮಾಡಲು ಪ್ರಯತ್ನಿಸುತ್ತಿವೆ. ಈ ಒಂದು ಹಿನ್ನೆಲೆಯಲ್ಲಿ ಸುವರ್ಣ ಕರ್ನಾಟಕ ಆಚರಣೆಯ ಸಂಭ್ರಮದಲ್ಲಿ ಕನ್ನಡ ಚಲನಚಿತ್ರಗಳ ಸಮೀಕ್ಷೆ ಈ ಲೇಖನದ ಆಶಯ.

ಭಾರತದ ಬೇರೆ ಬೇರೆ ಭಾಷೆಗಳಂತೆಯೇ, ಕನ್ನಡ ಚಿತ್ರಗಳೂ ೧೯೩೦ರ ಮಧ್ಯಭಾಗದ ಸುಮಾರಿಗೆ ನಿರ್ಮಾಣವಾಗಲು ಪ್ರಾರಂಭವಾದರೂ ಅವು ತನ್ನ ಅನನ್ಯತೆಯನ್ನು ಪಡೆದದ್ದು ೫೦ರ ದಶಕದ ನಂತರವೇ. ಅಂದರೆ ಕರ್ನಾಟಕ ರಾಜಕೀಯ ಏಕೀಕರಣವಾದ ನಂತರದಲ್ಲೇ. ಅದಕ್ಕೆ ಮುಂಚೆ, ಬಹಳ ಹಿಂದೆಯೇ ಬೆಂಗಳೂರಿನಲ್ಲಿ ಹಲವು ಸಂಸ್ಥೆಗಳು ಮೂಕಿ ಚಿತ್ರಗಳ ನಿರ್ಮಾಣದ ಮಂಚೂಣಿಯಲ್ಲಿದ್ದರೂ, ಕನ್ನಡ ಚಿತ್ರ ನಿರ್ಮಾಣಕ್ಕೆ ಯಾವುದೇ ಸಂಸ್ಥೆಯೂ ಮುಂದೆ ಬರಲಿಲ್ಲವೆಂಬುದು ಚಾರಿತ್ರಿಕವಾಗಿ ಗುರುತಿಸಬೇಕಾದ ಸಂಗತಿ. ಮೊದಲ ಕನ್ನಡ ಚಿತ್ರ ನಿರ್ಮಾಣವಾದದ್ದು ದೂರದ ಕೊಲ್ಲಾಪುರದಲ್ಲಿ ಒಬ್ಬ ಕನ್ನಡೇತರ ಲೋಹ ವ್ಯಾಪಾರಿಯ ಒತ್ತಾಸೆಯಿಂದ. ನಂತರದ ಎರಡು ದಶಕಗಳಲ್ಲೂ ಕನ್ನಡ ಚಿತ್ರಗಳು ನಿರ್ಮಾಣಗೊಂಡಿದ್ದು ದೂರದ ಮುಂಬೈ, ಕಲ್ಕತ್ತಾ, ಮದ್ರಾಸಿನಲ್ಲಿ. ಅದು ಕನ್ನಡೇತರರ ವ್ಯಾಪಾರಿ ಸಾಮರ್ಥ್ಯದಿಂದ, ಆರ್ಥಿಕ ಚಟುವಟಿಕೆಯಾಗಿ. ಈ ಚಿತ್ರಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಅನನ್ಯತೆಯ ಸೂಚನೆಗಳೇನೂ ಇರಲಿಲ್ಲ. ಈ ಚಿತ್ರಗಳು ಇತರ ಭಾರತೀಯ ಚಿತ್ರಗಳಂತೆಯೇ ಆ ಕಾಲಕ್ಕೆ ಜನಪ್ರಿಯವಾಗಿದ್ದ ನಾಟಕಗಳನ್ನು ಅವಲಂಬಿಸಿದ್ದವು. ಚಲನಚಿತ್ರ ಮಾಧ್ಯಮ ರಂಗಭೂಮಿಯ ವಿಸ್ತರಣೆಯಾಗಿ ತಾಂತ್ರಿಕ ಅಂಶಗಳಿಗೆ ಮಾತ್ರ ಸೀಮಿತವಾಗಿತ್ತು. ಆಗ್ಗೆ ಪ್ರಚಲಿತವಿರುವ ದೃಶ್ಯ ಕಲೆಗಳಿಗೆ ಪೂರಕವಾಗಿ ವಾಸ್ತವತೆಯನ್ನು ನಕಲುಮಾಡುವ ಸಾಧನವಾಗಿ ಕೆಲಸ ಮಾಡಿತೇ ಹೊರತು ಸ್ವಾಯತ್ತ ಮಾಧ್ಯಮವಾಗಿ ರೂಪುಗೊಂಡಿರಲಿಲ್ಲ. ಮಾಧ್ಯಮದ ಕಲಾತ್ಮಕತೆಯ ಸಾಧ್ಯತೆಗಳ ಮತ್ತು ನಿರ್ದಿಷ್ಟ ಸಂಸ್ಕೃತಿಯ



ನೆಲೆಗಳ ಹುಡುಕಾಟದ ಅಭಾವವಿದ್ದುದರಿಂದಲೇ ನಮ್ಮ ದೇಶದ ಎಲ್ಲಾ ಭಾಷೆಗಳ ಪ್ರಾರಂಭದ ಚಿತ್ರಗಳು ಒಂದೇ ಮಾದರಿಯನ್ನು ಅನುಕರಿಸಿದವು. ವಸ್ತುವಿನ ದೃಷ್ಟಿಯಿಂದಲೂ, ಈಗಾಗಲೇ ರಂಗಭೂಮಿಯಲ್ಲಿ, ಸಾಂಪ್ರದಾಯಿಕ ದೃಶ್ಯ ಮಾಧ್ಯಮಗಳಲ್ಲಿ ಜನಪ್ರಿಯವಾಗಿದ್ದ ಐತಿಹಾಸಿಕ, ಪೌರಾಣಿಕ ಕಥಾವಸ್ತುಗಳನ್ನೇ ಮತ್ತೆಮತ್ತೆ ಬಳಸಲಾಯಿತು. ಸಾಮಾಜಿಕವೆನ್ನಬಹುದಾದ ವಸ್ತುಗಳನ್ನುಳ್ಳ ಚಿತ್ರಗಳ ಸಂಖ್ಯೆ ತೀರಾ ಬೆರಳೆಣಿಕೆಯಷ್ಟಾಗಿದ್ದು, ಅವು ಕೂಡ ತಮಿಳು, ತೆಲುಗು ಚಿತ್ರಗಳ ಕನ್ನಡ ಅವತರಣಿಕೆಯಾಗಿರುತ್ತಿದ್ದವು.

ಸಾಹಿತ್ಯ ಮತ್ತು ಸಂಗೀತದಂತಹ ಇತರ ಪಾರಂಪರಿಕ ಕಲಾ ಪ್ರಕಾರಗಳನ್ನು ಚಿತ್ರ ಮಾಧ್ಯಮದೊಡನೆ ಸಂಯೋಜಿಸಲು ಪ್ರಾರಂಭಿಸಿದ್ದು, ಭಾರತದ ಚಲನಚಿತ್ರ ಒಂದು ವಿಶಿಷ್ಟ ಮಾಧ್ಯಮವಾಗಿ ರೂಪುಗೊಳ್ಳಲು ಪ್ರಾರಂಭವಾದದ್ದು, ಸ್ವಾತಂತ್ರ್ಯೋತ್ತರ ವರ್ಷಗಳಲ್ಲಿ. ಕನ್ನಡದ ಸಂದರ್ಭದಲ್ಲಿ ಈ ಬೆಳವಣಿಗೆ ಸ್ಪಷ್ಟವಾಗಿ ಕಾಣಲಾರಂಭಿಸಿದ್ದು ಕನ್ನಡನಾಡು ಉದಯವಾದ ನಂತರದ ದಿನಗಳಲ್ಲಿ. ಕನ್ನಡ ಮಾತನಾಡುವ ಜನರೆಲ್ಲಾ ಒಟ್ಟಿಗೆ ಸೇರಿ ವಿಶಿಷ್ಟವಾದ ಸಾಂಸ್ಕೃತಿಕ, ರಾಜಕೀಯ ವ್ಯವಸ್ಥೆಯನ್ನು ರಚಿಸಬೇಕೆಂಬ ಹಂಬಲ, ಅನಕೃ – ರಾಮಮೂರ್ತಿ ಇಂತಹವರು ನಡೆಸಿದ ಕನ್ನಡಪರ ಚಳುವಳಿ, ಕನ್ನಡ ಪತ್ರಿಕೆಗಳ ವ್ಯಾಪಕ ಪ್ರಕಟಣೆ, ಈ ಎಲ್ಲ ಸಂಗತಿಗಳು ಚಿತ್ರ ಮಾಧ್ಯಮದಲ್ಲಿ ಬದಲಾವಣೆಗಳುಂಟಾಗಲು ಪ್ರೇರಕವಾದ ಬೆಳವಣಿಗೆಗಳಾದವು. ಆ ಹೊತ್ತಿಗಾಗಲೆ ಆಧುನಿಕ ಕನ್ನಡ ಸಾಹಿತ್ಯ, ಜಗತ್ತಿನಲ್ಲೇ ವಿಶಿಷ್ಟ ಎನ್ನಬಹುದಾದ ಸಾಹಿತ್ಯ ಸಮೂಹವಾಗಿ ಬೆಳೆದಿತ್ತು. ಚಿತ್ರಮಾಧ್ಯಮಕ್ಕೆ ಹತ್ತಿರವೆನ್ನಬಹುದಾದ ಕಥಾಸಾಹಿತ್ಯ ವಿಪುಲವಾಗಿ, ಕಲಾತ್ಮಕವಾಗಿ, ಯಶಸ್ವಿಯಾಗಿ ಬೆಳೆದಿದ್ದ ಕಾಲ ಅದು. ಟಿ. ವಿ. ಸಿಂಗ್ ಠಾಕೂರ್‌ರಂತಹವರು ಸಾಹಿತ್ಯ ಕೃತಿಗಳನ್ನಾಧರಿಸಿದ, ವಿಶೇಷವಾಗಿ ಜನಪ್ರಿಯ ಕಾದಂಬರಿಗಳನ್ನಾಧರಿಸಿದ ಚಿತ್ರಗಳನ್ನು ಮಾಡಲು ಮುಂದೆ ಬಂದರು. ಕೃಷ್ಣಮೂರ್ತಿ ಪುರಾಣಿಕರ ಕಾದಂಬರಿ ಆಧಾರಿತ 'ಕರುಣೆಯೇ ಕುಟುಂಬದ ಕಣ್ಣು' ಚಿತ್ರದ ಯಶಸ್ಸು ಅದೇ ರೀತಿಯ ಮತ್ತಷ್ಟು ಪ್ರಯತ್ನಗಳಿಗೆ ಪ್ರಚೋದನೆಯಾಯಿತು. ಪುರಾಣಿಕರ 'ಕುಲವಧು', ತರಾಸು ಅವರ 'ಚಂದವಳ್ಳಿಯ ತೋಟ', ಅನಕೃ ಅವರ 'ಸಂಧ್ಯಾರಾಗ' ಇಂತಹ ಹಲವಾರು ಕಾದಂಬರಿ ಆಧಾರಿತ ಚಿತ್ರಗಳು ಕನ್ನಡ ಚಿತ್ರರಂಗದ ಅನನ್ಯತೆಯನ್ನು ರೂಪಿಸಲು, ಮೆರೆಸಲು ಸಾಧನಗಳಾದುವು. ಅದರ ಜೊತೆಗೇ ಚಿತ್ರ ನಿರ್ಮಾಣದಲ್ಲಿ ಚಿತ್ರ ಕತೆ, ಚಿತ್ರ ಸಾಹಿತಿ, ನಿರ್ದೇಶಕನ ಪಾತ್ರದ ಮಹತ್ವವನ್ನು ಗುರುತಿಸಲು ಸಹಾಯಕವಾದುವು. ಇಂತಹ ಚಿತ್ರಗಳು ಮಾಧ್ಯಮದ ಕಲಾತ್ಮಕ ಅಭಿವ್ಯಕ್ತಿಗೆ ಉದಾಹರಣೆಗಳಾಗದಿದ್ದರೂ ಮಾಧ್ಯಮಕ್ಕೇ ವಿಶಿಷ್ಟವಾದ ಕೆಲವು ಅಂಶಗಳನ್ನಾದರೂ ಹೊಂದಿದ್ದವು ಮತ್ತು ಸೃಜನಶೀಲ ಆಶಯಗಳು ಸ್ವಲ್ಪಮಟ್ಟಿಗಾದರೂ ಮಾಧ್ಯಮದಲ್ಲಿ ಪ್ರವೇಶಿಸಿದ್ದವು ಎಂಬುದನ್ನು ಗುರುತಿಸಬೇಕು. ಆ ಕಾಲದಲ್ಲಿ ತಯಾರಾದ ಹಲವಾರು ಚಿತ್ರಗಳು ವಾಣಿಜ್ಯ ದೃಷ್ಟಿಯಿಂದ ಯಶಸ್ವಿಯಾಗುತ್ತಲೇ 'ಸಾಂಸ್ಕೃತಿಕ ಘಟನೆ'ಗಳಾಗಿದ್ದುದನ್ನು ಚಾರಿತ್ರಿಕವಾಗಿ ಗಮನಿಸಬಹುದು. ಮಿಸ್ ಲೀಲಾವತಿ, ಬಂಗಾರದ ಹೂವು, ಚಕ್ರತೀರ್ಥ, ಸರ್ವಮಂಗಳಾ, ಹಣ್ಣೆಲೆ ಚಿಗುರಿದಾಗ, ಕಪ್ಪು ಬಿಳುಪು, ಎರಡು ಮುಖ, ಉಯ್ಯಾಲೆ, ಗೆಜ್ಜೆಪೂಜೆ, ಶರಪಂಜರ, ಬಂಗಾರದ ಮನುಷ್ಯ, ನಾಗರಹಾವು ಇತ್ಯಾದಿ ಚಿತ್ರಗಳು ಆ ಒಂದು ದಶಕದಲ್ಲಿ ಕನ್ನಡ ಚಿತ್ರರಂಗ ಕಂಡ ಜನಾನುರಾಗಿ ಸಾಂಸ್ಕೃತಿಕ ಕೃತಿಗಳು.

ಕರ್ನಾಟಕ ಏಕೀಕರಣದ ನಂತರದ ಎರಡು ದಶಕಗಳಲ್ಲಿ ಕನ್ನಡ ಚಿತ್ರಗಳು ಕಂಡುಕೊಂಡ ಅನನನ್ಯತೆಯಲ್ಲಿದ್ದ ಇನ್ನು ಮೂರು ವಿದ್ಯಮಾನಗಳನ್ನು ಗುರುತಿಸುವುದು ಅತ್ಯಗತ್ಯ. ಅದರಲ್ಲಿ ಮುಖ್ಯವಾದದ್ದು ಡಾ॥ ರಾಜಕುಮಾರ್ ಕನ್ನಡ ಚಿತ್ರರಂಗದಲ್ಲಿ ಮಾತ್ರವಲ್ಲದೆ ಅಖಂಡ ಕರ್ನಾಟಕಕ್ಕೆ ಸಾಂಸ್ಕೃತಿಕ ಪ್ರತಿನಿಧಿಯಾಗಿ ರೂಪುಗೊಂಡ ಸನ್ನಿವೇಶ. ನಟರು ಸಾಂಸ್ಕೃತಿಕ ಪ್ರತಿನಿಧಿಗಳಾಗಿ ರೂಪುಗೊಂಡಿದ್ದು ಕೆಲವು ಸಂಸ್ಕೃತಿಗಳಲ್ಲಿ ಮಾತ್ರ. ಅದರಲ್ಲಿ ಕನ್ನಡ ಸಂಸ್ಕೃತಿ ಒಂದು. ನೆರೆಯ ರಾಜ್ಯಗಳಲ್ಲಿ ಎನ್.ಟಿ.ಆರ್., ಎಂ.ಜಿ.ಆರ್. ಮೊದಲಾದವರು ಆ ರಾಜ್ಯಗಳಲ್ಲಿ ಸಾಮಾಜಿಕ, ರಾಜಕೀಯ ಪ್ರತಿನಿಧಿಗಳಾಗಿ ಬೆಳೆದರೆ, ಹಿಂದಿ ಚಿತ್ರರಂಗದ ರಾಜ್‌ಕಪೂರ್, ದಿಲೀಪ್ ಕುಮಾರ್, ಅಮಿತಾಭ್ ಬಚ್ಚನ್‌ನಂತಹವರು ಹಾಲಿವುಡ್‌ನಲ್ಲಿಯಂತೆ ನಟರಾಗಿ, ತಾರೆಗಳಾಗಿ, ಆಕರ್ಷಣೆಯಾಗಿ, ಜಾಹಿರಾತು ರೂಪದರ್ಶಿಗಳಾಗಿ ವಾಣಿಜ್ಯ ಮೌಲ್ಯಗಳ ಪ್ರತಿಪಾದಕರಾಗಿ ಹೆಚ್ಚು ಗಮನಾರ್ಹವಾಗಿದ್ದಾರೆಯೇ ಹೊರತು ಭಾಷೆಯ ವಕ್ತಾರರಾಗಿಲ್ಲದಿರುವುದನ್ನು ಗಮನಿಸಬಹುದು. ಇಂತಹವರಿಗಿಂತ, ವೃತ್ತಿನಿರತ ಗಂಭೀರ ಯುರೋಪಿಯನ್ ನಟರ ಧೋರಣೆಗಿಂತ, ವಿಭಿನ್ನವಾದ ನೆಲೆಯಲ್ಲಿ ಡಾ॥ ರಾಜಕುಮಾರ್‌ರವರ ಸಾಂಸ್ಕೃತಿಕ ಪ್ರತಿನಿಧಿತ್ವವನ್ನು ಗುರುತಿಸಬಹುದು. ಇನ್ನೊಂದು ವಿದ್ಯಮಾನ, ಕನ್ನಡದ ಚಿತ್ರಗಳು ಆ ಕಾಲದಲ್ಲಿ ಬಳಸಿದಂತಹ ಕನ್ನಡ ಗೀತೆಗಳು. ಮಹತ್ವದ ಕವಿಗಳ ಪದ್ಯಗಳನ್ನು, ಅದರಲ್ಲೂ ಮುಖ್ಯವಾಗಿ ಕನ್ನಡನಾಡು ನುಡಿಯನ್ನು ಆರಾಧಿಸುವಂತಹ ಸಾಹಿತ್ಯವುಳ್ಳ ಕವನಗಳನ್ನು ಉಪಯೋಗಿಸುವುದರ ಮೂಲಕ ಕನ್ನಡ ಜನರನ್ನು ಭಾವುಕವಾಗಿ ಒಂದುಗೂಡಿಸುವ ಕೆಲಸವನ್ನು ಕನ್ನಡ ಚಿತ್ರ ಮಾಡಿದ್ದನ್ನು ಚಾರಿತ್ರಿಕವಾಗಿ ಗುರುತಿಸಬಹುದು. ಮೂರನೆಯ ವಿದ್ಯಮಾನವೆಂದರೆ, ಅರವತ್ತರ ದಶಕದಲ್ಲಿ ಕನ್ನಡ ಚಿತ್ರಗಳು ಕರ್ನಾಟಕದ ಇತಿಹಾಸವನ್ನು ಮರುವೀಕ್ಷಿಸಿದ ರೀತಿ. ಕಿತ್ತೂರ ಚೆನ್ನಮ್ಮ, ಕೃಷ್ಣದೇವರಾಯ, ಇಮ್ಮಡಿ ಪುಲಿಕೇಶಿ, ಬಸವಣ್ಣ, ಪುರಂದರದಾಸ, ಕನಕದಾಸ ಹೀಗೆ ಹಲವಾರು ಕನ್ನಡ ಸಂಸ್ಕೃತಿಯ ಪ್ರತಿನಿಧಿಗಳನ್ನು ಸಮಸ್ತ ಕನ್ನಡಿಗರಿಗೆ ಮರು ಪರಿಚಯ ಮಾಡಿಕೊಡುವ ಮೂಲಕ ಭಾವನಾತ್ಮಕ ಜಾಗೃತಿಯನ್ನು ಸ್ವಲ್ಪಮಟ್ಟಿಗಾದರೂ ಎಬ್ಬಿಸುವಲ್ಲಿ ಕನ್ನಡ ಚಲನಚಿತ್ರ ಸಹಾಯ ಮಾಡಿತೆಂಬುದನ್ನು ಚಾರಿತ್ರಿಕವಾಗಿ ಗಮನಿಸಬಹುದು.

ಚಿತ್ರಮಾಧ್ಯಮದ ಭಾಷೆಯನ್ನು ವಿಶೇಷವಾಗಿ ಪ್ರೀತಿಸಿದ, ಕನ್ನಡ ಚಿತ್ರ ಭಾಷೆಯ ಬೆಳವಣಿಗೆಗೆ ಕಾರಣರಾದ ಮೂವರು ನಿರ್ದೇಶಕರುಗಳೂ ಕಾಣಿಸಿಕೊಂಡಿದ್ದು ಅರವತ್ತರ ದಶಕದಲ್ಲಿ. ಎಪ್ಪತ್ತರ ದಶಕದ ಮೊದಲ ವರ್ಷಗಳಲ್ಲಿ ಕಾಣಿಸಿಕೊಂಡ 'ಹೊಸ ಅಲೆ' ಸಿನಿಮಾದ ಮುನ್ನೋಟದ ಪ್ರವರ್ತಕರೆಂದೇ ಇವರನ್ನು ಗುರುತಿಸಬಹುದು. ಫ್ರಾನ್ಸ್‌ನಲ್ಲಿ ಚಿತ್ರಮಾಧ್ಯಮವನ್ನು ಅಧ್ಯಯನ ಮಾಡಿದ ಎಂ. ವಿ. ಕೃಷ್ಣಸ್ವಾಮಿ ೧೯೬೬ರಲ್ಲಿ 'ಸುಬ್ಬಾಶಾಸ್ತ್ರಿ' ಚಿತ್ರವನ್ನು ನಿರ್ಮಿಸಿದರು. ಮರು ವರ್ಷದಲ್ಲಿ 'ಬೆಳ್ಳಿಮೋಡ' ಚಿತ್ರದ ಮೂಲಕ ಬೆಳಕಿಗೆ ಬಂದ ಪುಟ್ಟಣ್ಣ ಕಣಗಾಲ್ ನಂತರದಲ್ಲಿ ಹಲವಾರು ಕಾದಂಬರಿ ಆಧಾರಿತ ಚಿತ್ರಗಳನ್ನು ನಿರ್ದೇಶಿಸಿದರು. ಅವುಗಳ ಮೂಲಕ ಮಾಧ್ಯಮದಲ್ಲಿ ನಿರ್ದೇಶಕನ ಪಾತ್ರದ ಮಹತ್ವವನ್ನು ತೋರಿಸುವುದರ ಜತೆಗೆ ಜನಪ್ರಿಯತೆ ಮೌಲ್ಯಗಳು ಮತ್ತು ಚಿತ್ರಮಾಧ್ಯಮಕ್ಕಿರುವ ಕಲಾತ್ಮಕತೆಯ ಅನುಸಂಧಾನ ಸಾಧ್ಯತೆಗಳನ್ನು ಪ್ರಯೋಗಿಸಿದರು. ಎನ್. ಲಕ್ಷ್ಮೀನಾರಾಯಣ್ 'ಉಯ್ಯಾಲೆ'ಯಂತಹ ಚಿತ್ರದಲ್ಲಿ ದೃಶ್ಯ ಭಾಷೆಯ ಲಕ್ಷಣಗಳನ್ನು ಸಾಹಿತ್ಯ ಭಾಷೆಯ ಜತೆ ಸಂವಾದಿಯಾಗಿ ಬಳಸಿದರು. ಇವರೆಲ್ಲರು ಸ್ವತಃ ಪ್ರಯೋಗಶೀಲರಲ್ಲದೆಹೋದರೂ ಆ ಹೊತ್ತಿಗೆ ದೇಶವಿದೇಶಗಳಲ್ಲಿ ನಡೆದಿದ್ದ ಪ್ರಯೋಗಗಳಿಗೆ ತೆರೆದುಕೊಂಡವರಾಗಿದ್ದರಲ್ಲದೆ ಸಾಮಾನ್ಯೀಕೃತಗೊಂಡ ಸಂಕೇತಗಳು, ಪರಿಭಾಷೆಗಳನ್ನು ತಮ್ಮ ಚಿತ್ರಗಳಲ್ಲಿ ವ್ಯಾಪಕವಾಗಿ ಉಪಯೋಗಿಸಿದರು. ಸದಭಿರುಚಿಯ ಪ್ರೇಕ್ಷಕ ವರ್ಗದ ನಿರ್ಮಾಣದಲ್ಲಿ, ಕನ್ನಡ ಭಾಷೆಯನ್ನು ಮಾತನಾಡುವ ಜನರೆಲ್ಲರ ಏಕಸೂತ್ರ ಸಾಂಸ್ಕೃತಿಕ ನೆಲೆಗಳನ್ನು ಗುರುತಿಸುವಲ್ಲಿ, ಬೆಳೆಸುವಲ್ಲಿ ಅರವತ್ತರ ದಶಕದ ಚಿತ್ರಗಳು ಸಾಧನಗಳಾದುವು. ಚಲನಚಿತ್ರ ಮೂಲತಃ ವೈಜ್ಞಾನಿಕ ಮತ್ತು ತಾಂತ್ರಿಕ ಜಗತ್ತಿಗೆ ಸಂಬಂಧಪಟ್ಟ ಆವಿಷ್ಕಾರ. ಯಾವುದೇ ತಂತ್ರಜ್ಞಾನದ ಉಳಿವು ವ್ಯಾವಹಾರಿಕ ಜಗತ್ತಿಗೆ ಸೇರಿದ್ದು. ವ್ಯವಹಾರದ ಯಶಸ್ಸು ಅದು ಹೆಚ್ಚೆಚ್ಚು ಜನರನ್ನು ಆಕರ್ಷಿಸಲು ಸಾಧ್ಯವಾದಾಗ ಏಕಕಾಲಕ್ಕೆ ದೊಡ್ಡ ಜನಸಮೂಹವನ್ನು ಆಕರ್ಷಿಸಲು ಸಾಧ್ಯಮಾಡಬಲ್ಲುದು ಭಾವುಕ ಪ್ರಚೋದನೆ ಮಾತ್ರ. ಈ ಮಾರ್ಗವನ್ನೇ ಚಲನಚಿತ್ರ ಮಾಧ್ಯಮ ತನ್ನ ಆರಂಭದ ಕಾಲದಿಂದಲೂ ಆರಿಸಿಕೊಂಡಿರುವುದು. ಆದರೆ ಯಾವುದೇ ಚಟುವಟಿಕೆಗೆ ಸಾಮಾಜಿಕ ಜವಾಬ್ದಾರಿಯ ಹಂಗನ್ನು ನಿರಾಕರಿಸುವ ಸ್ವಾತಂತ್ರ್ಯವಿಲ್ಲ. ಅದನ್ನು ನಿರಾಕರಿಸದಾಗಲೆಲ್ಲ ಬೌದ್ಧಿಕ ಜಗತ್ತು ಅದಕ್ಕೆ ಪರ್ಯಾಯವಾಗಿ, ಪ್ರತಿರೋಧವಾಗಿ ಪ್ರಯೋಗಗಳನ್ನು ಮಾಡುತ್ತಾ ಎಚ್ಚರಿಸುವುದನ್ನು ತಂತ್ರಜ್ಞಾನದ ಇತಿಹಾಸದುದ್ದಕ್ಕೂ ನಾವು ಕಾಣುತ್ತೇವೆ: ಜನಪ್ರಿಯತೆ ಮತ್ತು ವಾಣಿಜ್ಯ ಕಾರಣಗಳಿಗಾಗಿ ಇತರ ಪ್ರಕಾರಗಳಿಂದ ಎರವಲು ತಂದ ವಸ್ತುಗಳನ್ನು, ಕಲ್ಪನೆಗಳನ್ನು ಸಾಂಸ್ಕೃತಿಕ ಚಟುವಟಿಕೆ ಎಂಬಂತೆ ಬಳಸಿದಾಗಲೆಲ್ಲ. ಚಲನಚಿತ್ರ ಮಾಧ್ಯಮ, ತಂತ್ರಜ್ಞಾನವೇ ಆದರೂ, ಅದಕ್ಕೂ ವಿಶಿಷ್ಟವಾದ ಕಲಾತ್ಮಕ ಸಾಧ್ಯತೆಯಿದೆ ಎಂಬುದನ್ನು ಸೃಜನಶೀಲರು ಜಗತ್ತಿನಾದ್ಯಂತ ಎತ್ತಿ ತೋರಿಸಿದ್ದಾರೆ. ಕನ್ನಡ ಸಿನಿಮಾ ಮಟ್ಟಿಗೂ ಇದು ಅನ್ವಯಿಸುತ್ತದೆ. ಸಿನಿಮಾ ಕೇವಲ ಭಾವುಕ ಸಂವೇದನೆಗೆ ಮಾತ್ರ ಸಂವಾದಿಯಾದ ಮಾಧ್ಯಮವಲ್ಲ, ಅದರಲ್ಲೂ ಬೌದ್ಧಿಕ, ಸಾಮಾಜಿಕ ಆಶಯಗಳ ಅಭಿವ್ಯಕ್ತಿಗೆ ಅವಕಾಶವಿದೆ ಎಂಬುದನ್ನು ಎಪ್ಪತ್ತರ ದಶಕದಲ್ಲಿ ಕಾಣಿಸಿಕೊಂಡ ಕನ್ನಡದ 'ಹೊಸ ಅಲೆ' ಚಿತ್ರಗಳು ನಿರೂಪಿಸಿದವು.

ಕರ್ನಾಟಕದ ಏಕೀಕರಣದ ನಂತರದ ದಿನಗಳಲ್ಲಿ ಕನ್ನಡ ಚಿತ್ರಗಳು ಪಡೆದುಕೊಂಡ ಅನನ್ಯತೆ, ಕನ್ನಡ ಸಾಹಿತ್ಯ ಮತ್ತು ಇತರ ಕಲೆಗಳ ಜೊತೆಗೆ ಅವು ನಡೆಸಿದ ಸಂವಾದದಲ್ಲಿ ಅವುಗಳೊಂದಿಗಿನ ಸಮ್ಮಿಳಿತದಲ್ಲಿ ಸ್ವಾಭಾವಿಕವಾಗಿಯೇ ಕನ್ನಡ ಸಾಹಿತ್ಯಲೋಕದಲ್ಲಿ ಬೀಸಿದ ಹೊಸ ಗಾಳಿಗೆ ಕನ್ನಡ ಚಿತ್ರಗಳೂ ಸ್ಪಂದಿಸಿದ್ದು. ಗೋಪಾಲಕೃಷ್ಣ ಅಡಿಗ, ಗೋಕಾಕ, ರಾಮಚಂದ್ರಶರ್ಮರ ನವ್ಯ ಕಾವ್ಯ ಪ್ರಯೋಗಗಳು ಅವರೆಗಿನ ಕನ್ನಡ ಕಾವ್ಯ ಪರಂಪರೆಯ ಮುಂದುವರಿಕೆಯಾಗಿಯೂ, ಪ್ರತಿ ಸಂವಾದಿಯಾಗಿಯೂ ಬೆಳೆದಂತೆಲ್ಲಾ ಗದ್ಯ ಸಾಹಿತ್ಯದಲ್ಲೂ ಅನೇಕ ಹೊಸ ಪ್ರಯೋಗಗಳು ಕಂಡುಬಂದುವು. ಯು. ಆರ್. ಅನಂತಮೂರ್ತಿ, ಲಂಕೇಶ್, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ ಮೊದಲಾದವರ ಕಾದಂಬರಿ ಪ್ರಪಂಚ ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ಭಾಷೆಯನ್ನು, ಪ್ರತಿಮೆಗಳನ್ನು ಆಧುನಿಕ ಚಿಂತನೆಗಳನ್ನು ಸೇರಿಸಿದವು. ಈ ಎಲ್ಲ ಪ್ರಯೋಗಗಳಿಗೆ ಮಧ್ಯಮ

ವರ್ಗದ ನವ ವಿದ್ಯಾವಂತ ಸಮೂಹವೊಂದು ಸಿದ್ಧವಾಗುತ್ತಿದ್ದ ಕಾಲ ಅದು. ಅದೇ ವೇಳೆಗೆ ಕರ್ನಾಟಕದ ಪ್ರಮುಖ ನಗರಗಳಲ್ಲಿ ಚಿತ್ರ ಸಮಾಜಗಳ ಮೂಲಕ ಜಗತ್ತಿನ ಮಹತ್ವದ ಚಲನಚಿತ್ರಗಳು ಪ್ರದರ್ಶಿತಗೊಳ್ಳುತ್ತಿದ್ದ ಕಾಲ. ಈ ಎರಡು ಪ್ರೇರಣೆಗಳು, ಅಂದರೆ ಪ್ರಾದೇಶಿಕ ಸಾಹಿತ್ಯ ಸಂಸ್ಕೃತಿಯಲ್ಲಿನ ಬದಲಾವಣೆ, ವಿದೇಶಿ ಅದರಲ್ಲೂ ಮುಖ್ಯವಾಗಿ ಯೂರೋಪಿನಲ್ಲಿ ವಿಪುಲವಾಗಿ ನಡೆಯುತ್ತಿದ್ದ ಚಲನಚಿತ್ರ ಮಾಧ್ಯಮದಲ್ಲಿನ ಪ್ರಯೋಗಶೀಲ ಅಭಿವ್ಯಕ್ತಿ ಸಾಧ್ಯತೆಗಳು ಕನ್ನಡ ಚಲನಚಿತ್ರಕ್ಕೆ ಬೌದ್ಧಿಕ ಸಾಮಾಜಿಕ ಆಯಾಮಗಳನ್ನು ಸೇರಿಸಲು ಪ್ರಚೋದಿಸಿದವು.

'ಹೊಸ ಅಲೆ' ಎಂಬ ಪದವನ್ನು ಮೊದಲು ಉಪಯೋಗಿಸಿದವನು ಫ್ರಾಂಕಾಯಿ ಜಿರೊಡ್. ಫ್ರೆಂಚ್ ಸಿನಿಮಾ ರಂಗದಲ್ಲಿ ಹಾಲಿವುಡ್ ಚಿತ್ರಗಳ ಪ್ರಭಾವದಡಿಯಲ್ಲಿ ನಿರ್ಮಾಣಗೊಳ್ಳುತ್ತಿದ್ದ ಏಕಸೂತ್ರದ ಚಿತ್ರಗಳಿಗೆ, ಆರ್ಥಿಕ ಮತ್ತು ತಾಂತ್ರಿಕ ಅಂಶಗಳಿಂದಲೇ ನಿರ್ಧಾರಿತವಾಗುತ್ತಿದ್ದ ಚಿತ್ರಗಳಿಗೆ ಭಿನ್ನವಾಗಿ ಪರ್ಯಾಯವಾಗಿ ಬಂದ ಚಿತ್ರಗಳನ್ನು ವಿವರಿಸಲು ಆತ ಉಪಯೋಗಿಸಿದ ಪದ ಇದು. ಭಾರತದ ಎಲ್ಲಾ ಭಾಷೆಗಳಲ್ಲಿ ಇಂತಹದೇ ಪ್ರಕ್ರಿಯೆ ಪ್ರಾರಂಭವಾದಾಗ ಇಲ್ಲಿಯೂ ಅದೇ ಪದವನ್ನು ಅಂತಹ ಚಿತ್ರಗಳನ್ನು ಗುರುತಿಸಲು ಪ್ರಯೋಗಿಸಲಾಯಿತು. ಹಳೆಯ ಚಿತ್ರಗಳ ಅತಿರಂಜಿತ ದೃಶ್ಯಾವಳಿಗಳನ್ನು ಬಿಟ್ಟು ಸಾಂಪ್ರದಾಯಿಕ ಮತ್ತು ಆಧುನಿಕತೆಯ ಅಂಶಗಳನ್ನು ಮಾನವೀಯ ಸ್ತರದಲ್ಲಿ ಸಮನ್ವಯ ಗೊಳಿಸಲು ಭಾರತ ಹೇಗೆ ಹೆಣಗುತ್ತಿದೆ ಎಂಬುದನ್ನು ತೋರಿಸುವುದೇ ಹೊಸ ಅಲೆಯ ಚಿತ್ರಗಳ ಮುಖ್ಯ ಉದ್ದೇಶವಾಯಿತು. ಚಿತ್ರಮಾಧ್ಯಮವನ್ನು ಉದ್ಯಮವಾಗಿ ಮಾತ್ರ ನೋಡುವ ನಿರ್ದೇಶಕರು ಮಂಡಿಸುವ ಶೈಲೀಕೃತವಾದ ಸಂಗೀತದ ಮತ್ತು ಭಾವೋದ್ವೇಗದ ದುಂದಿಗಿಂತ ಭಿನ್ನವಾದ, ಆಪ್ತವಾದ ವೈಯಕ್ತಿಕ ಶೈಲಿಯನ್ನು ಹೊಸ ಅಲೆಯ ಚಿತ್ರಗಳು ಮಂಡಿಸಲು ಪ್ರಯತ್ನಿಸಿದವು. ಸಾಮಾಜಿಕವಾಗಿ ಅನ್ಯಾಯಕ್ಕೊಳಗಾದವರು, ಆಧುನಿಕ ಬದಲಾವಣೆಗಳ ಆಘಾತದಿಂದ ತತ್ತರಿಸುತ್ತಿರುವವರು, ಸಮಾಜದ ಅಂಚಿನಲ್ಲಿ ಬದುಕುತ್ತಿರುವವರು ಇಂತಹವರೆಲ್ಲರೂ ಹೊಸ ಅಲೆಯ ಚಿತ್ರಗಳ ಕಕ್ಷೆಯೊಳಗೆ ಪ್ರವೇಶಿಸಿದರು.

ಯು. ಆರ್. ಅನಂತಮೂರ್ತಿಯವರ ಕಾದಂಬರಿ ಆಧಾರಿತ 'ಸಂಸ್ಕಾರ'ವೇ ಮೊದಲ ಹೊಸ ಅಲೆಯ ಚಿತ್ರ. ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ವಾದವಿವಾದಗಳಿಗೆ, ಬಿಸಿಬಿಸಿ ಚರ್ಚೆಗೆ ವಸ್ತುವಾಗಿದ್ದ ಕಾದಂಬರಿ ಚಲನಚಿತ್ರವಾಗಿಯೂ ಅದರ ಹೊಸತನ ಮತ್ತು ಕಾಳಜಿಗಳಿಂದಾಗಿ ದೇಶವಿದೇಶಗಳಲ್ಲಿ ಖ್ಯಾತವಾಯಿತು. ನಂತರದ ಒಂದು ದಶಕದಲ್ಲಿ ಈ ಪರಂಪರೆಯ ಚಿತ್ರಗಳು ಕನ್ನಡ ಚಿತ್ರಗಳ ಕಡೆಗೆ ರಾಷ್ಟ್ರದ ಗಮನವನ್ನು ಸೆಳೆಯುವಂತೆ ಮಾಡಿದವು. ನವ್ಯ ಸಾಹಿತ್ಯದ ಬಹುಮುಖ್ಯ ಲೇಖಕರೆಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಈ ಚಟುವಟಿಕೆಯಲ್ಲಿ ಭಾಗವಹಿಸಿದರು. ಅದೇ ಸಮಯದಲ್ಲಿಯೇ ಕನ್ನಡ ನಾಟಕ ಕ್ಷೇತ್ರದಲ್ಲೂ ಒಂದು ಹೊಸ ಅಲೆಯ ಕಾಲ. ನವ್ಯ ಸಂವೇದನೆಯೊಂದನ್ನು ಹವ್ಯಾಸಿ ರಂಗಭೂಮಿಯ ಮೂಲಕ ಯಶಸ್ವಿಯಾಗಿ ನಿರ್ವಹಿಸಿದ ಸಂದರ್ಭ. ಅಲ್ಲಿ ತಮ್ಮ ಛಾಪನ್ನು ಮೂಡಿಸಿದ ಬಿ. ವಿ. ಕಾರಂತ, ಗಿರೀಶ್ ಕಾರ್ನಾಡ್ ಮತ್ತು ಅನೇಕ ನಟರು, ರಂಗಕರ್ಮಿಗಳು ಹೊಸ ಅಲೆ ಚಿತ್ರಗಳಲ್ಲಿಯೂ ತಮ್ಮ ಪ್ರತಿಭೆಯನ್ನು ಮೆರೆದವರೇ. ಚಿತ್ರಮಾಧ್ಯಮದ ವಿವಿಧ ಅಂಶಗಳ ಬಗ್ಗೆ ವಿಶೇಷವಾದ ಜ್ಞಾನ ಮತ್ತು ತರಬೇತಿಯನ್ನು ಪಡೆದ ಒಂದು ಹೊಸ ಸಮೂಹವೂ ಅದೇ ಕಾಲಕ್ಕೆ ಚಿತ್ರನಿರ್ಮಾಣಕ್ಕೆ ಕೈಹಾಕಿದ್ದು ಇನ್ನೊಂದು ವಿಶೇಷ. ಗಿರೀಶ್ ಕಾಸರವಳ್ಳಿ, ಎಸ್. ರಾಮಚಂದ್ರ, ಉಮೇಶ್ ಕುಲಕರ್ಣಿ ಮೊದಲಾದವರು ಕನ್ನಡ ಚಿತ್ರವನ್ನು ಅದರಲ್ಲೂ ಮುಖ್ಯವಾಗಿ ಹೊಸ ಅಲೆಯ ಚಿತ್ರಗಳನ್ನು ತಮ್ಮ ವಿಶೇಷ ಪರಿಣತಿಯಿಂದ ಶ್ರೀಮಂತಗೊಳಿಸಿದವರು.

ಹೊಸ ಅಲೆಯ ಚಿತ್ರಗಳು ಪ್ರಾರಂಭದಲ್ಲಿ ನವ್ಯ ಸಾಹಿತ್ಯ ಚಳವಳಿಯ ವಿಸ್ತರಣೆಯಂತೆ ಕಂಡುಬಂದರೂ ಕ್ರಮೇಣ ಆ ಚೌಕಟ್ಟನ್ನು ಮೀರಿ ಕನ್ನಡ ಸಂಸ್ಕೃತಿಯ ಇತರ ಅಂಶಗಳನ್ನೂ ಒಳಗೊಳ್ಳಲು ಪ್ರಯತ್ನಿಸಿತು. ತರಾಸು, ಎಂ. ಕೆ. ಇಂದಿರಾ, ಎಸ್. ಎಲ್. ಭೈರಪ್ಪನವರಂತಹ ಜನಾನುರಾಗಿ ಲೇಖಕರ ಕೃತಿಗಳನ್ನು ಹೊಸ ಅಲೆ ರೂಪಾಂತರಿಸಲು ಪ್ರಾರಂಭಿಸಿತು. ವಿನ್ಯಾಸದಲ್ಲಿ ನವ್ಯ ರೂಪವನ್ನು ಹೊಂದಿದ್ದರೂ ಆಶಯಗಳಲ್ಲಿ ನವ್ಯೇತರ ಪರಂಪರೆಗಳನ್ನು ಈ ಚಿತ್ರಗಳು ಪ್ರತಿಬಿಂಬಿಸಿದವು.

ಹಲವಾರು ರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದುಕೊಂಡರೂ ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಮನ್ನಣೆ ಗಳಿಸಿದರೂ ಕನ್ನಡ ಹೊಸ ಅಲೆಯ ಚಿತ್ರಗಳು ತಮ್ಮದೇ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗಟ್ಟಿಯಾಗಿ ಉಳಿಯದೇ ಹೋದದ್ದು ವಿಪರ್ಯಾಸವೇ ಸರಿ. ಹೊಸ ಅಲೆ ಹಣೆಪಟ್ಟಿಯನ್ನು ಫ್ರೆಂಚ್ ಮೂಲದಿಂದ ಪಡೆದರೂ, ಕನ್ನಡದ ಹೊಸ ಅಲೆಯ ಚಿತ್ರಗಳು ತಮ್ಮ ಸಂವೇದನೆ ಮತ್ತು ಸ್ವರೂಪದಲ್ಲಿ ಇಟಲಿಯ



ನವವಾಸ್ತವತಾವಾದದ ಚಿತ್ರಗಳಿಗೆ ಹತ್ತಿರವಾದವೇ ಹೊರತು ಫ್ರೆಂಚ್ ಹೊಸ ಅಲೆಯ ಚಿತ್ರಗಳಿಗಲ್ಲ. ಇದು ಸಿನಿಮಾ ಭಾಷೆಯ ವಿಶಿಷ್ಟತೆಗೆ ಸಂಬಂಧಿಸಿದ್ದು. ಇಟಲಿಯ ನವವಾಸ್ತವತಾವಾದದ ಶೈಲಿ ಸಂಕೇತಗಳು, ಪ್ರತಿಮೆಗಳಿಗಿಂತ ವಾಸ್ತವ ವಿವರಗಳಿಗೆ ಹೆಚ್ಚು ಒತ್ತು ಕೊಟ್ಟು ಸಮಾಜಕ್ಕೆ ಕನ್ನಡಿಯಾದರೆ, ಫ್ರೆಂಚ್ ಚಿತ್ರಗಳು ಹಾಗೂ ಇಪ್ಪತ್ತನೆಯ ಶತಮಾನದ ಯೂರೋಪಿಯನ್ ಸಾಹಿತ್ಯ ಮತ್ತು ಅದರಿಂದ ಸಾಕಷ್ಟು ಪ್ರೇರಣೆಗಳನ್ನು ಕನ್ನಡ ನವ್ಯ ಸಾಹಿತ್ಯ ತನ್ನ ಅಭಿವ್ಯಕ್ತಿ ರೂಪಗಳನ್ನು ಕಂಡುಕೊಂಡಿದ್ದು ಪಾರಂಪರಿಕವಾದ ಪ್ರತಿಮೆಗಳು, ಪ್ರತೀಕಗಳಿಂದ ಅದೂ ವೈಯಕ್ತಿಕ ನೆಲೆಗಳಲ್ಲಿ. ಈ ಸೂಕ್ಷ್ಮ ವ್ಯತ್ಯಾಸಗಳನ್ನು ಕಂಡುಕೊಳ್ಳದೇ ಹೋದದ್ದರಿಂದ ಹೊಸ ಅಲೆ ವಿಶಿಷ್ಟವಾಗಬಹುದಾಗಿದ್ದ ತನ್ನದೇ ಭಾಷೆಯೊಂದನ್ನು ರೂಢಿಸಿಕೊಳ್ಳಲಾಗಲಿಲ್ಲ. ಇಟಲಿಯ ನವವಾಸ್ತವತಾವಾದದ ಚಿತ್ರನಿರ್ಮಾಣ ಶೈಲಿ ಹುಟ್ಟಿದ ತನ್ನ ಕಾಲಕ್ಕೆ, ಅಂದರೆ ಎರಡನೇ ಮಹಾಯುದ್ಧದ ನಂತರದ ಯೂರೋಪಿನ ಮನಃಸ್ಥಿತಿಗೆ ಪೂರಕವಾಗಿ ರೂಪುಗೊಂಡರೆ, ಅದೇ ಭಾಷೆ ಎಪ್ಪತ್ತರ ದಶಕದ ಭಾರತಕ್ಕೆ ಹೊಂದಿಕೆಯಾಗುವಂತಹದಾಗಿರಲಿಲ್ಲ. ಆ ಕಾರಣಕ್ಕೆ ಬಹುಶಃ ಹೊಸ ಅಲೆ ಚಿತ್ರಗಳು ಬಹುಪಾಲು ಪ್ರೇಕ್ಷಕರಿಗೆ ಅತಿಯಾದ ವಾಸ್ತವವಾಗಿ ಕಂಡುಬಂದದ್ದು. ಅಂದರೆ ಕೃತಿಯೊಳಗಿನ ನಿಶ್ಚಲ ವಾಸ್ತವಕ್ಕೂ, ವಾಸ್ತವತೆಯಲ್ಲಿನ ಸಾಮಾಜಿಕ ಚಲನೆಗೂ ಇರಬಹುದಾದ ವಿರೋಧಾಭಾಸಗಳನ್ನು ಈ ಚಿತ್ರಗಳು ಸರಿಯಾದ ಪರಿಪ್ರೇಕ್ಷೆಯಲ್ಲಿ ಮಂಡಿಸದೇ ಹೋದದ್ದು ಈ ಚಿತ್ರಗಳ ಒಟ್ಟಾರೆ ಸೋಲಿಗೆ ಕಾರಣವಾಯಿತು. ಇದಕ್ಕಿಂತ ಮುಖ್ಯವಾಗಿ ಕೊರತೆ ಈಗ ಗುರುತಿಸಬಹುದಾದ್ದು ಚಲನಚಿತ್ರ ಮಾಧ್ಯಮದ ಸ್ವರೂಪಕ್ಕೆ ಸಂಬಂಧಿಸಿದ್ದು. ಸಾಮಾನ್ಯವಾಗಿ ದೃಶ್ಯ ಮಾಧ್ಯಮವೆಂದು ಕರೆಯಲ್ಪಡುವುದಾದರೂ ಇದು ಒಂದು ಸಂಯೋಜಿತ ಕಲೆ, ಸಾಹಿತ್ಯ, ಸಂಗೀತ, ಚಿತ್ರಕಲೆ ಮುಂತಾದ ಲಲಿತಕಲೆಗಳ ಜತೆಗೆ ಛಾಯಾಗ್ರಹಣ, ಧ್ವನಿಗ್ರಹಣ, ಸಂಕಲನ ಮುಂತಾದ ಹಲವಾರು ತಾಂತ್ರಿಕ ಪರಿಣಾಮಗಳನ್ನು ಬಯಸುವಂತಹದು. ಆದ್ದರಿಂದಲೇ ಸೃಜನಶೀಲ ಚಿತ್ರನಿರ್ಮಾಣ ಸಮಗ್ರ ಸಾಮುದಾಯಿಕ ಪ್ರತಿಭೆಗಳನ್ನು ಒಳಗೊಳ್ಳುವಂತಹದು. ಅಂತಹ 'ಸಾಮುದಾಯಿಕ ಕಲೆ'ಯ ಚೌಕಟ್ಟಿನಲ್ಲಿ ದುಡಿಸಿ ಕೊಳ್ಳಲಾಗದಿದ್ದುದರಿಂದ ಕೇವಲ ಬೌದ್ಧಿಕವಾಗಿ ಮಾತ್ರ ಕನ್ನಡದ ಹೊಸ ಅಲೆ ಚಿತ್ರಗಳು ಯಶಸ್ವಿಯಾದವು. ಅವು ಜನಪದ ಸಂಸ್ಕೃತಿಯ ಅಂಶಗಳಾದ ಸಂಗೀತ, ನೃತ್ಯ, ಚಿತ್ರಕಲೆಗಳನ್ನಾಗಲಿ ತಾಂತ್ರಿಕ ಪರಿಣತಿಯನ್ನಾಗಲಿ ಒಳಗೊಳ್ಳದೇ ಹೋದದ್ದು ತಾಂತ್ರಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಎಂದು ವಿಶದಪಡಿಸಬಹುದಾದರೂ ಸಂವಹನದ ಅಗತ್ಯದ ದೃಷ್ಟಿಯಿಂದ ಅಸಿಂಧುವಾದ ಮಾರ್ಗವಾಯಿತು. ಬಹುಶಃ ಈ ಕಾರಣಕ್ಕಾಗಿಯೇ ಕನ್ನಡದ ಹೊಸ ಅಲೆಯ ಚಿತ್ರಗಳು ಕರ್ನಾಟಕದ ಏಕೀಕರಣದ ಆಶಯಗಳನ್ನು ಭಾವುಕವಾಗಿಯೇ ಆಗಲಿ, ಬೌದ್ಧಿಕವಾಗಿಯೇ ಆಗಲಿ ಸಾಧಿಸಲು ಸಮರ್ಥವಾಗಲಿಲ್ಲ. ಸಂಸ್ಕೃತಿನಿಷ್ಠ ಭಾಷೆಯಾಗಿದ್ದ ಕನ್ನಡ ೮೦ರ ದಶಕದಲ್ಲಿ ಪ್ರಭುತ್ವದ ಭಾಷೆಯಾಗುವ ಹಂಬಲದತ್ತ ಸಾಗುವುದನ್ನು ನಾವು ಚಾರಿತ್ರಿಕವಾಗಿ ಗುರುತಿಸಬಹುದು. ಆಡಳಿತದಲ್ಲಿ ಕನ್ನಡ ಭಾಷೆಗೆ ಆದ್ಯತೆ, ಪ್ರಾಥಮಿಕ ಶಿಕ್ಷಣದಲ್ಲಿ ಕನ್ನಡದ ಕಲಿಕೆ ಕಡ್ಡಾಯ, ಸ್ಥಳೀಯರಿಗೆ ಹೆಚ್ಚಿನ ಉದ್ಯೋಗಾವಕಾಶ ಮುಂತಾದ ಮಹತ್ವದ ಆಶೋತ್ತರಗಳನ್ನು ಕೇಂದ್ರವಾಗಿಟ್ಟುಕೊಂಡ ಗೋಕಾಕ ಸಮಿತಿ ವರದಿ ಅನುಷ್ಠಾನ ಆಂದೋಲನಕ್ಕೆ ತೀವ್ರ ಸ್ವರೂಪ, ಸಾರ್ವತ್ರಿಕ ಜನ ಬೆಂಬಲ ದೊರೆತಿದ್ದು ಡಾ॥ ರಾಜಕುಮಾರ್ ನೇತೃತ್ವದಲ್ಲಿ ಕನ್ನಡ ಚಿತ್ರರಂಗ ಚಳವಳಿಗೆ ಧುಮುಕಿದಾಗಲೇ. ಆ ಹೊತ್ತಿಗೆ ದೇವರಾಜ ಅರಸು ಅವರ ಸರ್ಕಾರ ಹಿಂದುಳಿದ, ದಲಿತ ವರ್ಗಗಳಿಗೆ ರಾಜಕೀಯ ಶಕ್ತಿ, ಅಧಿಕಾರಗಳ ಪಾಲುದಾರಿಕೆಯನ್ನು ವಹಿಸುವ ಭೂಸುಧಾರಣಾ ಕಾನೂನುಗಳನ್ನು ರಚಿಸುವ ಪ್ರಕ್ರಿಯೆಗಳನ್ನು ಮುಗಿಸಿಯಾಗಿತ್ತು. ಕನ್ನಡ ಸಾಹಿತ್ಯ ಸನ್ನಿವೇಶವೂ ಸಂಪೂರ್ಣ ಬದಲಾಗಿತ್ತು. ಸಾಹಿತ್ಯ ಕೇವಲ ಕಲಾತ್ಮಕ ಅಭಿವ್ಯಕ್ತಿಯಾಗದೇ ಸಾಮಾಜಿಕ, ರಾಜಕೀಯ ಜವಾಬ್ದಾರಿಗಳನ್ನು ನಿರ್ವಹಿಸಬೇಕೆಂಬ ಒತ್ತಾಯ ಎಲ್ಲಕಡೆ ಕೇಳಿಬರಲಾರಂಭಿಸಿತ್ತು. ದಲಿತ, ಬಂಡಾಯ ಸಾಹಿತ್ಯ ಕೃತಿಗಳು ಭಾಷೆ, ಆರ್ಥಿಕ, ಸಾಮಾಜಿಕ ಸಮಾನತೆಯನ್ನು ಸ್ಥಾಪಿಸಲು ಬಳಸಬೇಕಾದ ಸಾಧನವಾಗಬೇಕೆಂದು ವಾದಿಸಿದವು. ಸಾಹಿತ್ಯ ವಸ್ತುವಿನ ಆಶಯಗಳಲ್ಲಿ ತೀವ್ರ ಸ್ವರೂಪದ ಬದಲಾವಣೆ ಕಂಡುಬಂದರೂ ಭಾಷೆಯ ಬಳಕೆ ಮತ್ತು ಸ್ವರೂಪದ ದೃಷ್ಟಿಯಿಂದ ದಲಿತ, ಬಂಡಾಯ ಸಾಹಿತ್ಯ ಕನ್ನಡ ಪರಂಪರೆಯ ಮುಂದುವರಿಕೆಯಾಗಿಯೇ ಬೆಳೆದವು. ಸಾಹಿತ್ಯವು ಸಂಸ್ಕೃತಿ ನಿಷ್ಠತೆಯನ್ನು ಕಳೆದು ಕೊಳ್ಳದೆಯೇ ತನ್ನ ಹೊಸ ಪಾತ್ರವನ್ನು ನಿಭಾಯಿಸಲು ಸಜ್ಜಾಯಿತು. ಆದರೆ ಆಶ್ಚರ್ಯವೆಂದರೆ ಚಲನಚಿತ್ರ ನಂತರದಲ್ಲಿ ಪಡೆದುಕೊಂಡ ಸ್ವರೂಪ. ಕರ್ನಾಟಕ ಏಕೀಕರಣ, ಕನ್ನಡ ಭಾಷಿಕರನ್ನು ಒಂದುಗೂಡಿಸಿದ ಚಲನಚಿತ್ರ ಕನ್ನಡ ಭಾಷೆಗೆ ಪ್ರಭುತ್ವದ ಸ್ಥಾನವನ್ನು ದೊರಕಿಸಿಕೊಡುವಲ್ಲಿ ಮಹತ್ವದ ಭೂಮಿಕೆಯನ್ನು ನಿಭಾಯಿಸಿದ ಚಲನಚಿತ್ರ ತನ್ನ ಸಂಸ್ಕೃತಿ ನಿಷ್ಠತೆಯಿಂದ ದೂರವಾಗಿ ಕೇವಲ ಉದ್ಯಮವಾಗಿರುವುದನ್ನು, ಆರ್ಥಿಕವಾಗಿ ಬಲಾಢ್ಯವಾಗುವುದನ್ನು ಯೋಚಿಸುವುದನ್ನು ಕಾಣಬಹುದು. ಈ ಚಲನೆಯನ್ನು ಭಾರತದ ಸಂದರ್ಭದಲ್ಲಿ ಹಿಂದಿ ಚಿತ್ರರಂಗದಲ್ಲೂ ಕಾಣಬಹುದು. ಅನಿವಾಸಿ ಭಾರತೀಯರ ಆರ್ಥಿಕ ಬೆಂಬಲಕ್ಕೆ ಬಲಿಯಾಗಿರುವ ಇತ್ತೀಚಿನ ಹಿಂದಿ ಚಿತ್ರಗಳಲ್ಲಿ ದೇಶಿ ಸಂಸ್ಕೃತಿಗಳ ಪಾತ್ರಗಳು, ಆಚರಣೆಗಳೇ ನಾಪತ್ತೆ. ಬಹುಪಾಲು ಚಿತ್ರಗಳಲ್ಲಿ ಕಾಣಬರುವುದು ವಿದೇಶಿ ಶ್ರೀಮಂತ ಜೀವನ ಶೈಲಿ, ಹಿನ್ನೆಲೆ. ಇನ್ನು ಮಿಕ್ಕ ಚಿತ್ರಗಳಲ್ಲಿ ಕಾಣಸಿಗುವುದು ಹಿಂಸೆ, ಲೈಂಗಿಕತೆಯ ಆಗರವಾದ ಭೂಗತ ಜಗತ್ತಿನ ಚಿತ್ರಗಳನ್ನು. ಆರ್ಥಿಕ ಉದಾರೀಕರಣ, ಜಾಗತೀಕರಣ ಪ್ರಕ್ರಿಯೆಗಳೂ ಇದಕ್ಕೆ ಕಾರಣವಿರಬಹುದೆಂದು ಗುರುತಿಸಬಹುದಾದರೂ ಸಾಮಾಜಿಕ, ಸಾಂಸ್ಕೃತಿಕ ಜವಾಬ್ದಾರಿ ಗಳಿಗೆ ಸಂಪೂರ್ಣ ವಿಮುಖವಾಗಬೇಕಾದ ಪರಿಸ್ಥಿತಿಯೇನೂ ಕನ್ನಡ ಸಂದರ್ಭದಲ್ಲಿಯೇ ಆಗಲಿ ಭಾರತದ ಸಂದರ್ಭದಲ್ಲಿಯೇ ಆಗಲಿ ಇಲ್ಲವೆನ್ನಬಹುದನ್ನೂ ಗುರುತಿಸಬೇಕು. ಬಂಗಾಳಿ ಚಿತ್ರಗಳು, ಮಲಯಾಳಿ ಚಿತ್ರಗಳು, ಮರಾಠಿ ಚಿತ್ರಗಳು ತಮ್ಮ ಅನನ್ಯತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗ ಬಹುದಾದರೆ ಕನ್ನಡ ಚಿತ್ರಗಳಿಗೂ ಸಾಧ್ಯವಾಗಬೇಕು. ಭಾಷೆ, ಚಿತ್ರ ನಿರ್ಮಾಣದಲ್ಲಿ ಕೇವಲ ಒಂದು ವಿವರವಾಗದೆ, ಕನ್ನಡ ಸಂಸ್ಕೃತಿಯ ಧ್ವನಿಯಾಗದೇ ಹೋದರೆ ಅನನ್ಯತೆಯ ಲಕ್ಷಣಗಳನ್ನು ಚಿತ್ರಗಳಲ್ಲಿ ಕಾಣಲಾಗುವುದಿಲ್ಲ. ತಮಿಳು, ತೆಲುಗು, ಹಿಂದಿ ಚಿತ್ರಗಳಿಗೆ ಸ್ಪರ್ಧಾತ್ಮಕವಾಗಿ ಚಿತ್ರ ನಿರ್ಮಾಣ ಮಾಡಲು ಹೊರಟಾಗ ಆರ್ಥಿಕ ಅಂಶಗಳಿಗೇ ಹೆಚ್ಚು ಗಮನಕೊಡಬೇಕಾಗುವುದು ಅನಿವಾರ್ಯ. ಆದರೆ ಆ ಪ್ರಕ್ರಿಯೆ ಯಲ್ಲಿ ನಾವು ಕಳೆದುಕೊಳ್ಳುವುದು ಕನ್ನಡ ಸಂಸ್ಕೃತಿಯ ವೈವಿಧ್ಯತೆಯನ್ನು, ವಿಶಿಷ್ಟತೆಯನ್ನು. ಹಾಗೆಂದ ಮಾತ್ರಕ್ಕೆ ಕನ್ನಡದಲ್ಲಿ ಕಳೆದ ದಶಕದಲ್ಲಿ ಬೆಳವಣಿಗೆ ಇಲ್ಲವೆಂದೇನೂ ಅಲ್ಲ. ಗಿರೀಶ ಕಾಸರವಳ್ಳಿ, ಪಿ. ಶೇಷಾದ್ರಿಯವರ ಕಲಾತ್ಮಕ ಅಭಿವ್ಯಕ್ತಿಗಳು ರಾಷ್ಟ್ರಮಟ್ಟದಲ್ಲಿ ಮತ್ತೆ ಮತ್ತೆ ಗುರುತಿಸಲ್ಪಡುತ್ತಿರುವುದಾಗಲೀ, ಸುನಿಲ್‌ಕುಮಾರ್ ದೇಸಾಯಿ, ನಾಗಾಭರಣ, ನಾಗತಿಹಳ್ಳಿ ಚಂದ್ರಶೇಖರ್ ಮುಂತಾದವರ ಸದಭಿರುಚಿ ಚಿತ್ರಗಳಾಗಲಿ, ರವಿಚಂದ್ರನ್, ಉಪೇಂದ್ರ ಇವರ ತಾಂತ್ರಿಕ ಪ್ರಯೋಗಗಳಾಗಲೀ ಕನ್ನಡ ಚಿತ್ರಗಳನ್ನು ಪ್ರತಿನಿಧಿಸಿಲ್ಲ ವೆಂದಲ್ಲ. ಆದರೆ ಕನ್ನಡ ಚಿತ್ರರಂಗದ ಒಟ್ಟಾರೆ ಕಲ್ಪನೆ ಹೆಚ್ಚು ಹೆಚ್ಚು ಪ್ರತಿಕ್ರಿಯಾತ್ಮಕ ವಾಗಿವೆಯೇ ಹೊರತು, ಕ್ರಿಯಾಶೀಲ ದಾರಿಯಲ್ಲಿಲ್ಲ ಎಂಬುದನ್ನು ಗುರುತಿಸದೇ ಹೋದರೆ ಆತ್ಮವಿಮರ್ಶೆಯ ಜವಾಬ್ದಾರಿಯಿಂದ ಹಿಂದೆ ಸರಿದಂತಾಗುತ್ತದೆ ಎಂಬುದನ್ನು ನೆನಪಿನಲ್ಲಿಡಬೇಕು. ಕನ್ನಡ ಚಿತ್ರಗಳು ಭವಿಷ್ಯದಲ್ಲಿ ಸಂಖ್ಯೆಯ ಲೆಕ್ಕದಲ್ಲಿ ಉದ್ಯಮದ ಲೆಕ್ಕಾಚಾರಗಳಲ್ಲಿ ಪರಿಗಣಿಸಲಾಗುತ್ತದೆಯೋ ಅಥವಾ ಅದರ ಅನನ್ಯತೆ ಮತ್ತು ಗುಣಮಟ್ಟಗಳಲ್ಲಿ ಗುರುತಿಸಲ್ಪಡುತ್ತದೆಯೋ ಎಂಬುದನ್ನು ವರ್ತಮಾನದ ನಮ್ಮ ಆಯ್ಕೆಗಳು ನಿರ್ಧರಿಸುತ್ತವೆಯೆಂಬುದನ್ನೂ ಗಮನದಲ್ಲಿಟ್ಟುಕೊಳ್ಳುವುದು ಸೂಕ್ತ.

ಎನ್. ವಿದ್ಯಾಶಂಕರ್
ಹೆಚ್-೬, ಕೃಷ್ಣ ಗ್ಲೇಡ್ ಅಪಾರ್ಟ್‌ಮೆಂಟ್, ೧೦೫/೧
ಶೇಷಾದ್ರಿಪುರಂ ೧ನೇ ಮುಖ್ಯ ರಸ್ತೆ, ಬೆಂಗಳೂರು - ೫೬೦ ೦೨೦

# ಸಂರಕ್ಷಣೆ, ಸುರಕ್ಷತೆ ಮತ್ತು ವಿಶ್ವಾಸಾರ್ಹತೆಯ ವೈಶಿಷ್ಟ್ಯತೆಯುಳ್ಳ ಉಗ್ರಾಣ ಸೌಲಭ್ಯಗಳು

ಶಾಂತಿ ಮತ್ತು ಸೌಹಾರ್ದತೆಯ ಸಹಬಾಳ್ವೆಯೊಂದಿಗೆ ಸಮೃದ್ಧಿ ಸಾಧನೆಯನ್ನು ಗುರಿಯಾಗಿಸಿಕೊಂಡು ರಾಜ್ಯದ ಆಡಳಿತ ಚುಕ್ಕಾಣಿ ಹಿಡಿದ ಸನ್ಮಾನ್ಯ ಶ್ರೀ ಎನ್. ಧರ್ಮಸಿಂಗ್‌ರವರ ನೇತೃತ್ವದ ಸರ್ಕಾರ ತನ್ನ ಗುರಿ ಸಾಧನೆಗೆ ಶ್ರಮಿಸಿದೆ ಹಾಗೂ ಶ್ರಮಿಸುತ್ತಿದೆ. ಅದರ ಫಲವಾಗಿ ಕರ್ನಾಟಕ ರಾಜ್ಯ ಉಗ್ರಾಣ ನಿಗಮವು (ಕ.ರಾ.ಉ.ನಿ) ಇವರ ಕ್ರಿಯಾಶೀಲ ನಾಯಕತ್ವದಲ್ಲಿ ರಾಜ್ಯದಾದ್ಯಂತ ಅತ್ಯಾಧುನಿಕ ಉಗ್ರಾಣ ಸೌಲಭ್ಯಗಳನ್ನು ಒದಗಿಸಿ ರೈತರುಗಳಿಗೆ ಉಗ್ರಾಣ ಸೌಲಭ್ಯಗಳ ಅವಶ್ಯಕತೆಗಳನ್ನು ಪೂರೈಸುತ್ತಿದೆ.

ನಿಗಮವು ಅಗತ್ಯಕ್ಕೆ ಅನುಗುಣವಾಗಿ 24 x 7ರ ಮಾದರಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಈ ರೀತಿಯಾಗಿರುವ ಏಕೈಕ ಸಾರ್ವಜನಿಕ ವಲಯದ ಉಗ್ರಾಣ ಎಂಬ ಪ್ರಖ್ಯಾತಿಗೆ ಪಾತ್ರವಾಗಿದೆ. ಅತ್ಯಾಧುನಿಕ ತಂತ್ರಜ್ಞಾನ ಬಳಕೆ, ನಿಯತಕಾಲಿಕವಾಗಿ ದಂಶಕಗಳು ಮತ್ತು ಕೀಟಗಳ ನಿಯಂತ್ರಣ ಕಾರ್ಯ ನಿರ್ವಹಣೆ, ಅತ್ಯಂತ ಉತ್ಸಾಹಿ, ಸ್ವಪ್ರೇರಣೆ ಮತ್ತು ಸಮರ್ಪಣಾ ಮನೋಭಾವನೆಯುಳ್ಳ ಆಡಳಿತ ವರ್ಗ ಮತ್ತು ನುರಿತ ಸಿಬ್ಬಂದಿ ವರ್ಗದ ಸಹಕಾರದಿಂದ ಕಳೆದ 46 ವರ್ಷಗಳಿಂದ ಉಗ್ರಾಣ ವ್ಯವಸ್ಥೆ ಅತ್ಯಂತ ದಕ್ಷತೆಯಿಂದ ಕೂಡಿದೆ, ವ್ಯವಸ್ಥಿತವಾಗಿದೆ ಮತ್ತು ಅಪಘಾತ ಮುಕ್ತವಾಗಿದೆ. ಕ. ರಾ. ಉ. ನಿ. - ಉಗ್ರಾಣ ಸೌಲಭ್ಯ ಒದಗಿಸುವಲ್ಲಿ ವಿಶ್ವಾಸಾರ್ಹತೆಗೆ ಆದರ್ಶಪ್ರಾಯವಾಗಿದೆ. ದಕ್ಷತೆಯಲ್ಲಿ ಸರಿಸಾಟಿ ಇಲ್ಲದ ದಾಖಲೆಗೆ ಹೆಸರಾಗಿದೆ.

### ಮೈಲಿಗಲ್ಲುಗಳು

ಕರ್ನಾಟಕ ರಾಜ್ಯ ಉಗ್ರಾಣ ನಿಗಮವು 1957ರಲ್ಲಿ ಸ್ಥಾಪಿಸಲ್ಪಟ್ಟು ಮೈಸೂರು, ಹುಬ್ಬಳ್ಳಿ ಮತ್ತು ರಾಯಚೂರಿನಲ್ಲಿ ಮೂರು ಉಗ್ರಾಣಗಳೊಡನೆ ತನ್ನ ವಾಣಿಜ್ಯ ಚಟುವಟಿಕೆ ಪ್ರಾರಂಭಿಸಿತು. ಪ್ರಸ್ತುತ ನಿಗಮವು ಕರ್ನಾಟಕದಲ್ಲಿ 109 ಉಗ್ರಾಣ ಜಾಲ ಹೊಂದಿದೆ. ಉಗ್ರಾಣಗಳ ಒಟ್ಟು ಸಂಗ್ರಹಣಾ ಸಾಮರ್ಥ್ಯ 7.03 ಲಕ್ಷ ಮೆ. ಟನ್‌ಗಳು. 2003-04ನೇ ಸಾಲಿನಲ್ಲಿ ನಿಗಮವು ರಾಜ್ಯದ ವಿವಿಧ ಭಾಗಗಳಲ್ಲಿ 25 ಅತ್ಯಾಧುನಿಕ ತಂತ್ರಜ್ಞಾನವನ್ನೊಳಗೊಂಡ ಉಗ್ರಾಣ ಮಳಿಗೆಗಳನ್ನು ರೂ. 44.00 ಕೋಟಿ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದ್ದು, ಇದರಿಂದ ಒಟ್ಟು ಸಂಗ್ರಹಣಾ ಸಾಮರ್ಥ್ಯವು 1.50 ಲಕ್ಷ ಮೆ. ಟನ್‌ಗಳಷ್ಟು ಹೆಚ್ಚಾಗಲಿದೆ.

### ಕ. ರಾ. ಉ. ನಿ. – ರೈತರ ಹಿತ ಕಾಪಾಡುವ ಹಿರೈಷಿ

- ಉಗ್ರಾಣದಲ್ಲಿ ದಾಸ್ತಾನು ಮಾಡಿರುವ ಸರಕುಗಳಿಗೆ ಬೆಂಕಿ, ಕಳವು ಮತ್ತು ಡಕಾಯಿತಿ ಅಪಾಯದ ಬಗ್ಗೆ ವಿಮೆಯಿಂದ ರಕ್ಷಣೆ.
- ಉಗ್ರಾಣಗಳಲ್ಲಿ ರೈತರ ಉತ್ಪನ್ನ ದಾಸ್ತಾನು ಮಾಡಲು ವಿಶೇಷ ಆದ್ಯತೆ.
- ಸುಗ್ಗಿಯಕಾಲದಲ್ಲಿ ಮಾರುಕಟ್ಟೆ ಬೆಲೆ ಕಡಿಮೆಯಾಗುವುದರಿಂದ ರೈತರು ಭ್ರಮ ನಿರಸನರಾಗಿ ತಮ್ಮ ಕೃಷಿ ಉತ್ಪನ್ನ ಮಾರಾಟ ಮಾಡುವುದನ್ನು ತಡೆಯಲು ಉಗ್ರಾಣದಲ್ಲಿ ದಾಸ್ತಾನು ಮಾಡಿದ ಸರಕಿಗೆ ನೀಡುವ ಉಗ್ರಾಣ ರಶೀದಿ ಆಧಾರದ ಮೇಲೆ ರಾಷ್ಟ್ರೀಕೃತ ಬ್ಯಾಂಕುಗಳು ಮತ್ತು ಇತರೆ ಪತ್ತಿನ ಬ್ಯಾಂಕುಗಳ ಮೂಲಕ ಸುಲಭ ಸಾಲ ಸೌಲಭ್ಯ.

### ಸೋಂಕು ನಿವಾರಣೆ ಸೇವೆ

- ಕರ್ನಾಟಕ ರಾಜ್ಯ ಉಗ್ರಾಣ ನಿಗಮವು ಕಳೆದ 46 ವರ್ಷಗಳಿಂದ ವಿಶೇಷತೆಯುಳ್ಳ ಸೋಂಕು ನಿವಾರಕ ಸೇವೆಗಳನ್ನು ಒದಗಿಸುತ್ತಿದೆ. ಈ ಯೋಜನೆ ಅಡಿಯಲ್ಲಿ ನಿಗಮವು ಕೆಳಕಂಡ ನಂಜು ನಿರೋಧಕ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ:
- ಕ್ರಿಮಿ, ಕೀಟಗಳ ನಿರ್ಮೂಲನೆ ಮತ್ತು ಇಲಿ, ಹೆಗ್ಗಣ, ಹುಳು ಹುಪ್ಪಟೆ, ಸೊಳ್ಳೆ, ನೊಣ, ಜಿರಳೆ ಮುಂತಾದ ಕೀಟಗಳ ನಿಯಂತ್ರಣ.
- ಸರಕುಗಳು, ಕಛೇರಿ ದಾಖಲೆಗಳು, ದಾಸ್ತಾನು ಪದಾರ್ಥಗಳಿಗೆ ಕೀಟಗಳು ಮತ್ತು ಗೆದ್ದಲುಗಳಿಂದ ಅಪಾಯ ಉಂಟಾಗದಂತೆ ತಡೆಯಲು ಕೀಟನಾಶಕದ ಉಪಚಾರ.
- ಹೊಸ ಕಟ್ಟಡಗಳ ನಿರ್ಮಾಣ ಪ್ರಾರಂಭಿಸುವ ಮುನ್ನ ಗೆದ್ದಲು, ಇರುವೆಗಳ ನಿರ್ಮೂಲನೆ ಮಾಡಲು ಸೂಕ್ತ ಕ್ರಮ.

ಡಾ|| ಸಿ. ಎಸ್. ಕೇದಾರ್
ಅಧ್ಯಕ್ಷರು, ಕ. ರಾ. ಉ. ನಿ.

**ವಾಣಿಜ್ಯ ದಕ್ಷತೆ** (ಲಕ್ಷ ಮೆ. ಟನ್‌ಗಳಲ್ಲಿ)

| ವರ್ಷ | ಸಂಗ್ರಹಣಾ ಸಾಮರ್ಥ್ಯ ಸ್ವಂತ | ಬಾಡಿಗೆ | ಒಟ್ಟು | ಶೇಕಡವಾರು ಬಳಕೆ |
|---|---|---|---|---|
| 2001 | 3.24 | 5.59 | 8.83 | 91 |
| 2002 | 3.29 | 3.73 | 7.02 | 86 |
| 2003 | 3.82 | 3.21 | 7.03 | 82 |
| 2004 | 4.05 | 2.41 | 6.47 | 66 |
| 2005 | 4.75 | 4.21 | 8.97 | 64 |

**ಆರ್ಥಿಕ ದಕ್ಷತೆ** (ರೂ. ಲಕ್ಷಗಳಲ್ಲಿ)

| ವರ್ಷ | ಆದಾಯ | ಖರ್ಚು | ಲಾಭ |
|---|---|---|---|
| 2000 | 1351.51 | 917.93 | 433.58 |
| 2001 | 1799.60 | 1088.85 | 71.25 |
| 2002 | 2443.89 | 1553.21 | 890.68 |
| 2003 | 2870.00 | 1951.74 | 918.26 |
| 2004 | 2634.48 | 2376.60 | 257.88 |

### ಮುಂದಿನ ಕಾರ್ಯ ಯೋಜನೆಗಳು

- ಉಗ್ರಾಣ ಸೌಲಭ್ಯಗಳಿಲ್ಲದ 85 ತಾಲ್ಲೂಕುಗಳಲ್ಲಿ ಹಂತ ಹಂತವಾಗಿ ಉಗ್ರಾಣ ಕೇಂದ್ರಗಳ ನಿರ್ಮಾಣ.
- ರಾಜ್ಯದ 15 ಸ್ಥಳಗಳಲ್ಲಿ ಪ್ರಥಮ ಬಾರಿಗೆ ಸೈಲೋಸ್ (ಬಹು ಧಾನ್ಯ ಕಣಜ) ನಿರ್ಮಾಣ ಮತ್ತು ಶೈತ್ಯಾಗಾರಗಳ ಸ್ಥಾಪನೆ.
- ಸರಕು ಸಂಗ್ರಹಣೆಯಲ್ಲಿ ಅತ್ಯಾಧುನಿಕ ವೈಜ್ಞಾನಿಕ ಸೌಲಭ್ಯವನ್ನು ಒದಗಿಸುತ್ತಿರುವ ರಾಜ್ಯದ ಏಕೈಕ ಸರ್ಕಾರಿ ಸ್ವಾಮ್ಯದ ಸಂಸ್ಥೆ.

ಡಾ|| ಸಿ. ಸೋಮಶೇಖರ
ವ್ಯವಸ್ಥಾಪಕರು, ಕ. ರಾ. ಉ. ನಿ.

## ಕರ್ನಾಟಕ ರಾಜ್ಯ ಉಗ್ರಾಣ ನಿಗಮ

43, ಪ್ರೀಂ ರೋಸ್ ರಸ್ತೆ ಬೆಂಗಳೂರು - 560 025, ದೂರವಾಣಿ : 25571012, 25571013, ಫ್ಯಾಕ್ಸ್ : 080-25577324
ವೆಬ್‌ಸೈಟ್ : www.karnatakawarehousing.com

# ಟಿ. ವಿ. ಎಂಬ ಆಧುನಿಕ ಪುರಾಣವು – ಬಡ ಮಧ್ಯಮವರ್ಗವು !

**ದೃಶ್ಯ ೧**

ಹಗಲು. ಕಛೇರಿಗೆ ಹೋಗಲೆಂದು ಬಸ್ಸು ಕಾಯುತ್ತಾ ನಿಂತಿರುವ ಹೆಂಗಳೆಯರು ಮಾತಾಡುತ್ತಿದ್ದಾರೆ.

**ಹೆಂಗಸು ೧ :** ರೀ, ನೆನ್ನೆ ಆ ಧಾರಾವಾಹಿ ನೋಡ್‌ದ್ರಾ ?

**ಹೆಂಗಸು ೨ :** ಹ್ಞೂಂ ಕಣ್ರಿ !

**ಹೆಂಗಸು ೧ :** ಅವಳು ಹಾಕ್ಕೊಂಡಿದ್ದ ಸೀರೆ ಎಷ್ಟು ಚೆನ್ನಾಗಿತ್ತು ಅಲ್ವಾ ?

**ಹೆಂಗಸು ೨ :** ಅವಳ ಬಿಂದಿ ಅಂತೂ ನನಗ್ ತುಂಬಾ ಇಷ್ಟ ಆಯ್ತು.

**ಹೆಂಗಸು ೧ :** ನಮ್ಮ ಏರಿಯಾದಲ್ಲಿರೋ ಬ್ಯಾಂಗಲ್ ಸ್ಟೋರ್ಸ್‌ನಲ್ಲಿ ವಿಚಾರ್‍ಸೋಣ. ಆ ಥರಾ ಬಿಂದಿ ಬಂದಿದ್ದರೆ ತಗೋಳೋಣ.

ಎಂದೆನ್ನುತ್ತಾ ಅವರು ಬಸ್ಸನ್ನೇರುತ್ತಾರೆ. ಬಸ್ಸಿನಲ್ಲಿಯೂ ಪ್ರಾಯಶಃ ಇದೇ ಮಾತು ಮುಂದುವರೆಯುತ್ತದೆ.

**ದೃಶ್ಯ ೨**

ಮಧ್ಯಾನ್ನ. ದೇವಸ್ಥಾನದಲ್ಲಿ ಸೇರಿರುವ ಹೆಂಗಸರು. (ಕೆಲವೊಮ್ಮೆ ಗಂಡಸರು ಸಹ ಇರಬಹುದು). ಅಲ್ಲಿ ಆರಾಧನೆ ನಡೆಯುತ್ತಿದೆ. ಹೆಂಗಸರು ತಮ್ಮದೇ ಮಾತಿನಲ್ಲಿ ತೊಡಗಿದ್ದಾರೆ.

**ಹೆಂಗಸು ೧ :** ರೀ, ಬೇಗ ಪೂಜೆ ಮುಗ್‌ಸ್ಕೊಂಡ್ ಹೋಗ್ಬೇಕು ಕಣ್ರೀ !

**ಹೆಂಗಸು ೨ :** ಏನ್ರೀ ಅರ್ಜೆಂಟು ?

**ಹೆಂಗಸು ೧ :** ಆ ಸೀರಿಯಲ್ ಶುರು ಆಗೋಷ್ಟರಲ್ಲಿ ಮನೇಲ್ಲಿರ್‍ಬೇಕು ಕಣ್ರೀ !

**ಹೆಂಗಸು ೨ :** ಹೌದು ಕಣ್ರೀ, ನೆನ್ನೆ ಅವಳ ಗಂಡಾನೇ ಇನ್ನೊಬ್ಬ ಹುಡುಗೀನ ಕರ್‍ಕೊಂಡ್ ಬಂದಿದಾನಲ್ರೀ. ಈಗವಳು ಏನ್ ಮಾಡ್ತಾಳೋ ನೋಡಬೇಕು.

**ಹೆಂಗಸು ೧ :** ಹ್ಞೂಂ. ಇದೊಂದು ಆರತಿ ಮುಗಿದ ತಕ್ಷಣ ಹೊರಟ್‌ಬಿಡೋಣ.

**ಹೆಂಗಸು ೨ :** ಲೇಟಾದ್ರೆ ಆಟೋ ಮಾಡೋಣ ಕಣ್ರೀ. ಇಬ್ಬರೂ ಷೇರ್ ಮಾಡ್ಕೊಂಡ್ರಾಯ್ತು.

ಹೀಗೇ ಆ ಹೆಂಗಸರು ತಮ್ಮ ಮೆಚ್ಚಿನ ಧಾರಾವಾಹಿಯನ್ನು ನೋಡಲು ಧಾವಿಸುತ್ತಾರೆ. ಮಾರನೆಯ ದಿನವೂ ದೇವಸ್ಥಾನದಲ್ಲಿ ಇದೇ ಪುನರಾವರ್ತನೆಯಾಗುತ್ತದೆ. ಯಾಕೆಂದರೆ ಅವರ 'ಆ' ಧಾರಾವಾಹಿ ಅಂದು ಮತ್ತೊಂದು ತಿರುವು ತೆಗೆದುಕೊಂಡಿರುತ್ತದೆ.

**ದೃಶ್ಯ ೩**

ರಾತ್ರಿ. ಲಾಯರರ ಮನೆಯಲ್ಲಿ ಗೆಳೆಯರು ಕೂತು ಲೋಕಾಭಿರಾಮ ಮಾತಿನಲ್ಲಿ ತೊಡಗಿದ್ದಾರೆ. ಅದು ದೇಶದ ರಾಜಕೀಯದ ಚರ್ಚೆ. ಅವರೆದುರಿಗೆ ೨೪/೭ ಎಂಬ ಛಾನೆಲ್ಲಿನ ನ್ಯೂಸ್ ಓಡುತ್ತಿದೆ. ಅವರು ನ್ಯೂಸ್ ಓದುವವನ/ಳ ಡ್ರೆಸ್ ಸೆನ್ಸ್ ಬಗ್ಗೆ ಮಾತಾಡುತ್ತಿದ್ದಾರೆ. ದಿಢೀರನೆ ಅವರಲ್ಲೊಬ್ಬ ಎದ್ದು ಒಳಗೆ ಸಾಗುತ್ತಾನೆ. ಆತನೇ ಆ ಎಲ್ಲರನ್ನೂ ಕರೆದಿರುವ ಲಾಯರ್ ಮಹಾಶಯ. ಉಳಿದವರು ಕೆಲನಿಮಿಷ ನೋಡಿ ನಂತರ ಹಾಗೇ ಹೋದವನ ಕುರಿತು ಮಾತಾಡುತ್ತಾರೆ. ಎಲ್ಲಿಗೆ ಹೋದ ಇವನು ಎಂದು ಚಿಂತಿಸುತ್ತಾರೆ. ಆತನ ಮೊಬೈಲ್‌ಫೋನ್ ಸಂಪರ್ಕಿಸುತ್ತಾರೆ. ಆತ ಉತ್ತರಿಸುವುದಿಲ್ಲ. ಮನೆಯೊಳಗೆ ಇರಬಹುದೇ ಎಂದು ನೋಡುತ್ತಾರೆ.

ಆತ ಮನೆಯೊಳಗೆ ಇರುವ ಮತ್ತೊಂದು ಟಿ.ವಿ.ಯಲ್ಲಿ ಒಬ್ಬ ಪ್ರಖ್ಯಾತ ನಿರ್ದೇಶಕನ ಧಾರಾವಾಹಿಯನ್ನ ನೋಡುತ್ತಾ ಕುಳಿತಿದ್ದಾನೆ. ಅವನೊಂದಿಗೆ ಅವನ ಮನೆಯವರು ಸಹ. (ಮಕ್ಕಳೂ ಅಲ್ಲಿ ಇಲ್ಲ ಎಂಬುದನ್ನ ಗಮನಿಸಬೇಕು.)



ಗೆಳೆಯರು ಕರೆಯುತ್ತಾರೆ. 'ಷ್ !' ಎನ್ನುವ ಆತನ ದನಿಯಲ್ಲಿ 'ಡೋಂಟ್ ಡಿಸ್ಟರ್ಬ್' ಎಂಬ ಗುಣವಿದೆ. ಕೊನೆಗೊಮ್ಮೆ ಆ ಧಾರಾವಾಹಿ ಮುಗಿಯುತ್ತದೆ. ಆಗ ಆತ ಗೆಳೆಯರನ್ನು ಸೇರುತ್ತಾನೆ. ಗೆಳೆಯರು 'ಏನಯ್ಯಾ ?' ಎನ್ನುತ್ತಾರೆ.



**ಆತ :** ಇವತ್ತು ಮಹಾ ಬೋರಾಯ್ತು ಕಣಯ್ಯ.

**ಗೆಳೆಯ ೧ :** ಮತ್ತೆ, ನಮ್ಮ ಜೊತೆ ಮಾತಾಡೋದನ್ನೂ ಬಿಟ್ಟು ಅದನ್ನ್ ಯಾಕ್ ನೋಡ್ತಿದ್ದೆ ?

**ಆತ :** ಅವನು (ಆ ನಿರ್ದೇಶಕ) ಭಾಳ ಬ್ರಿಲಿಯಂಟು ! ಇವತ್ತಲ್ಲ ನಾಳೆ ಏನಾದರೂ ಒಂದು ಮ್ಯಾಜಿಕ್ ಮಾಡ್ತಾನೆ. ಅದಕ್ಕೆ ಕಾಯ್ತಾ ಇದೀನಿ.

**ಗೆಳೆಯ ೨ :** ಅಲ್ಲಯ್ಯ, ಈ ಮಾತನ್ನ ಒಂದು ತಿಂಗಳಿಂದ ಹೇಳ್ತಾನೆ ಇದ್ಯಾ, ಆದ್ರೂ ನಿನಗ್ ಬೇಕಾದ ಮ್ಯಾಜಿಕ್ ಆಗೇ ಇಲ್ವಾ ?



**ಆತ :** ಆಗತ್ತೆ. ಯಾಕೇಂದ್ರೆ ಅವನು (ಆ ನಿರ್ದೇಶಕ) ಮಹಾ ಬುದ್ಧಿವಂತ. ಹೋದ್ಸಲ ಕೂಡ ಐದುನೂರ್‍ನೇ ಎಪಿಸೋಡ್‌ನಲ್ಲಿ ಟರ್ನ್ ಕೊಟ್ಟ. ಎಂಥಾ ಟರ್ನ್ ಗೊತ್ತಾ ?

**ಗೆಳೆಯ ೩ :** ಲೋ ! ಒಂದು ಟರ್ನ್‌ಗೋಸ್ಕರ ಐದುನೂರು ಎಪಿಸೋಡ್‌ವರ್‍ಗೂ ಕಾಯ್ತಿಯಲ್ಲಾ, ನೀನೇ ಕಣೋ ಆಧುನಿಕ ತಪಸ್ವಿ !

ಉಳಿದವರು ನಗುತ್ತಾರೆ. ಲಾಯರ್ ಮಹಾಶಯನ ಕಾಯುವಿಕೆ ಮಾತ್ರ ಸಾಗುತ್ತಲೇ ಇರುತ್ತದೆ. ಇತ್ತಲಿನವರ ನ್ಯೂಸ್ ವರದಿಗಾರ್ತಿಯ ಮೇಕಪ್ ಮತ್ತು ಡ್ರೆಸ್ಸಿನ ಬಗೆಗಿನ ಮಾತು ಮುಂದುವರೆಯುತ್ತದೆ.

**ದೃಶ್ಯ ೪**

ಅದೇ ಲಾಯರ್ ಮನೆಯಿರಬಹುದು. ಅಥವಾ ಮೇಲ್ ಮಧ್ಯಮವರ್ಗದ ಯಾವುದೇ ಮನೆಯಿರಬಹುದು. ಶಾಲೆಯ ಮಕ್ಕಳು ಕೋಣೆಯಲ್ಲಿರುವ ಪ್ರತ್ಯೇಕ ಟಿ.ವಿ. ಎದುರು ಕೂತಿದ್ದಾರೆ. ಅವರು ಪ್ರಖ್ಯಾತ (ಮಕ್ಕಳ ವಲಯದಲ್ಲಿ) ಕಾರ್ಟೂನ್ ಛಾನೆಲ್ ನೋಡುತ್ತಿದ್ದಾರೆ. ಅವರಿಗೆ ಮನೆಗೆ ಬಂದಿರುವ ಅತಿಥಿಗಳು, ಆ ಮಾತು ಯಾವುದೂ ಬೇಕಿಲ್ಲ.



ಹೋಮ್‌ವರ್ಕಿನ ರಾಶಿಯನ್ನು ಎದುರಿಗೆ ಇರಿಸಿಕೊಂಡು ಅವರ ಟಿ.ವಿ. ನೋಡುವ ಅಭ್ಯಾಸ ಮುಂದುವರೆದಿದೆ.

**ದೃಶ್ಯ ೫**

ಕಾಲೇಜು. ಯುವಕ ಯುವತಿಯರು ಕಾಫಿ ಷಾಪಿನ ಎದುರಿಗೆ ನಿಂತಿದ್ದಾರೆ. ಕೆಲವರ ಕೈಯಲ್ಲಿ ಹುಡುಗ, ಹುಡುಗಿ ಎಂಬ ವ್ಯತ್ಯಾಸವಿಲ್ಲದೆ ಸಿಗರೇಟಿದೆ. ಅವರ ಡ್ರೆಸ್ ಕೋಡ್ ಸಂಪೂರ್ಣ ಅಭಾರತೀಯ. ಅವರ ಮಾತು ಕೂಡ ಸಂಪೂರ್ಣ ಅಂಗ್ಲ. ಅವರು ಯಾವುದೋ ಫಾರಿನ್ ಛಾನೆಲ್ಲಿನಲ್ಲಿ ಬರುವ 'ಫ್ರೆಂಡ್ಸ್' ಎಂಬ



ಧಾರಾವಾಹಿಯನ್ನು ಕುರಿತು ಮಾತಾಡುತ್ತಿದ್ದಾರೆ (ಅಥವಾ 'ಆಲಿ ಮ್ಯಾಕ್ಬಿಲ್'). ಅವರೆಲ್ಲರ ಮಾತಲ್ಲಿ ಆ ಧಾರಾವಾಹಿಯ ಹೂರಣಕ್ಕಿಂತ ಅಲ್ಲಿನ ಜೀವನ ರೀತಿಯ ಕುರಿತ ಮಾತಿದೆ. ಅವರ ಅಮೆರಿಕನೈಸೇಷನ್ ಆಗುತ್ತಿದೆ.

ದೃಶ್ಯ ೬

ನವಯುವಕರ ಗುಂಪು ತಮ್ಮ ಬೈಕುಗಳ ಮೇಲೆ ಕೂತಿದೆ. ಯಾರೂ ಮಾತಾಡುತ್ತಿಲ್ಲ. ಎಲ್ಲರ ಕೈಯಲ್ಲೂ ಮೊಬೈಲ್ ಎಂಬ ಉಪಕರಣವಿದೆ. ಅವರು ಎಸ್.ಎಂ.ಎಸ್. ಮಾಡುತ್ತಿದ್ದಾರೆ. ಅದು ತುಂಡು ಇಂಗ್ಲಿಷಿನ ಜಗತ್ತು. ಅವರ ಕೈ ಬೆರಳುಗಳು ಅದೆಷ್ಟು ವೇಗವಾಗಿ ಓಡುತ್ತಿದೆ ಎಂದರೆ, ಪ್ರಾಯಃ ಯಾವುದೇ ಟೈಪಿಸ್ಟನೂ (ಬೆರಳಚ್ಚಿನವನೂ) ಆ ವೇಗದಲ್ಲಿ ಟೈಪ್ ಮಾಡಲಾರ. ಅಲ್ಲಿ ಮಾತು ಎಂಬುದು ಇಲ್ಲ. ಎಲ್ಲವೂ ಸಂದೇಶಗಳು.

ದೃಶ್ಯ ೧೦

ಅದು ವಿಡಿಯೋ ಗೇಮ್ ಪಾರ್ಲರ್. ಅಲ್ಲಿರುವವರೆಲ್ಲರ ಮುಖದಲ್ಲೂ ಕಾತರವಿದೆ. ಏನೋ ದೊಡ್ಡದನ್ನ ಸಾಧಿಸುವ ಅವಸರವಿದೆ. ಅವರು ಯಾವುದೋ ಗೇಮಿನ ಏಳನೆಯ ಲೆವೆಲ್ಲಿನಲ್ಲಿ ಯಾವುದೋ 'ಡೆಮನ್' ಜೊತೆಗೆ ಹೋರಾಡುತ್ತಿದ್ದಾರೆ. ಸುತ್ತಲ ಲೋಕದ ವ್ಯಾಪಾರ ಅವರಿಗೆ ಬೇಕಿಲ್ಲ. ಅವರು ಹತ್ತನೆಯ ಲೆವಲ್ ಮುಟ್ಟಬೇಕು. ಅಲ್ಲಿ ಯಾವುದೋ ರಾಜಕುಮಾರಿಯನ್ನ ಸೆರೆಯಿಂದ ಬಿಡಿಸಬೇಕು. ಆದಾಗುವವರೆಗೆ ಅವರಿಗೆ ಸಮಯದ ಕಾಳಜಿ ಇಲ್ಲ. ಯಾವುದೋ ಹೊತ್ತಿನಲ್ಲಿ ಸೈಬರ್ ಗೇಮ್ ಅಂಗಡಿಯ ಮಾಲೀಕ ಬಾಗಿಲು ಮುಚ್ಚುವಾಗ ಹೊರಗೆ ಬರುವ ಅವರ ಕಣ್ಣುಗಳಲ್ಲಿ ರಕ್ತವಿದೆ. ವಾಸ್ತವ ಲೋಕದ ಯಾವ ಎಚ್ಚರಗಳೂ ಅವರಿಗೆ ಇಲ್ಲ. ಕೈ ಬೆರಳುಗಳು ಮಾತ್ರ ಇನ್ನೂ ಗೇಮ್ ಆಡುತ್ತಲೇ ಇವೆ. ಎದುರಿಗೆ ಸಿಕ್ಕವರಿಗೆ ಅವರು ಹೇಳುವುದಿಷ್ಟೆ: 'ಟುಮಾರೋ ಐ ವಿಲ್ ಕ್ರಾಸ್ ಏಯ್ತ್ ಲೆವೆಲ್ !'

ದೃಶ್ಯ ೧೧

ಪಾರ್ಕಿನಲ್ಲಿ ಕುಳಿತಿರುವ ಹಿರಿಯರ ಮಾತು.

'ಆಗ, ಅಂದರೆ ಸುಮಾರು ೧೯೮೨ರ ಆಸುಪಾಸಿನಲ್ಲಿ ಸಂಜೆಯಾಗುತ್ತಿದ್ದಂತೆ ನಮ್ಮ ಬೀದಿಯಲ್ಲಿದ್ದ ಒಂದು ಮನೆಗೆ ಅನೇಕರು ಹೋಗುತ್ತಿದ್ದರು. ಆ ಮನೆಯಲ್ಲಿ ಮಾತ್ರ ಒಂದು ಕಪ್ಪು ಬಿಳುಪು ಟೆಲಿವಿಷನ್ ಇತ್ತು. ಯಾವುದೋ ತಮಿಳು ಕಾರ್ಯಕ್ರಮಗಳ ನಡುವೆ ಬರುತ್ತಿದ್ದ ಎರಡು ಗಂಟೆಯ ಕನ್ನಡ ಕಾರ್ಯಕ್ರಮವನ್ನ ನೋಡಲು ಬೀದಿಯವರೆಲ್ಲ ಸೇರುತ್ತಿದ್ದರು. ಆನಂತರ ಬೆಂಗಳೂರಿನಲ್ಲಿಯೇ ಒಂದು ದೂರದರ್ಶನ ಕೇಂದ್ರವೂ ಆಯಿತು. ದಿನಕ್ಕೆ ನಾಲ್ಕು-ಐದು ಗಂಟೆಗಳ ಕಾಲ ಕನ್ನಡ ಕಾರ್ಯಕ್ರಮಗಳ ಪ್ರಸಾರ ಆರಂಭವಾಯಿತು. ಕ್ರಿಕೆಟ್ ನೇರಪ್ರಸಾರ ಆರಂಭವಾಯಿತು. ಟಿ.ವಿ. ರಾಮಾಯಣ ಶುರುವಾಯಿತು. ಅಲ್ಲಿಯವರೆಗೆ ಎಲ್ಲಾ ಚೆನ್ನಾಗಿಯೇ ಇತ್ತು. ಆಮೇಲೆ ಈ ಕೇಬಲ್ ಬಂತು. ಆಗ ಶುರುವಾಯಿತು ನೋಡಿ ನಮ್ಮ ಮನೆಯಲ್ಲೂ ಟಿ.ವಿ. ಕೊಳ್ಳುವ ಗಲಾಟೆ. ಹೇಗೋ ಹೊಂದಿಸಿ, ಕಂತು ಕಟ್ಟಿ ಒಂದು ಟಿ.ವಿ. ಬಂತು. ಹಾಗೇ ನಮ್ಮ ಬೀದಿಯ ಎಲ್ಲಾ ಮನೆಯಲ್ಲೂ ಒಂದು ಟಿ.ವಿ. ಬಂತು! ಈಗ ಎಲ್ಲಾ ಬದಲಾಗಿದೆ. ಮಧ್ಯಾಹ್ನ ಆರಂಭವಾದರೆ ರಾತ್ರಿಯ ಹತ್ತರವರೆಗೂ ತರಹೇವಾರಿ ಕಥೆಗಳು, ತರಹೇವಾರಿ ಬಣ್ಣಗಳು. ಎಲ್ಲರಿಗೂ ದೈನಿಕ ಪುರಾಣವನ್ನ ಪ್ರತಿದಿನ ನೋಡುವ ತಲುಬು ಹತ್ತಿಕೊಂಡಿದೆ. ಇನ್ನು ಸಂಸಾರ ಮಾಡುವುದಕ್ಕೆ, ಮಕ್ಕಳೊಡನೆ ಹರಟುವುದಕ್ಕೆ ಸಮಯವೆಲ್ಲಿಯದು ?'

ಈ ಕೆಲವು ದೃಶ್ಯಗಳು ಟಿ.ವಿ. ಎಂಬ ಮಾಯಕ ನಮ್ಮೆದುರಿಗೆ ತಂದಿಡುತ್ತಿರುವ ಆಧುನಿಕ ಪುರಾಣದ ಹಲವು ಮಗ್ಗುಲುಗಳನ್ನ ಹೇಳುತ್ತದೆ. ಈ ಕುರಿತು ಕಾಫ್‌ಮನ್ ಎಂಬ ಅಮೆರಿಕನ್ ಸಾಹಿತಿ ಬರೆದಿರುವ ಪದ್ಯವೊಂದಿದೆ.

I can't get away
I flip through the channels
every night and day
overdose of movies
sit-com's and soaps
I feel my life is tied up in ropes.
The T.V. is a nemesis
I believe it so.
I can't think for myself
have no get up and go.
I'm wasted on commercials

and ads
conned by the the latest fads
buy this buy that
and all that crap.
I'm caged....
.... I'm locked in
the life sucking T.V.
(from the website : www. turnoffyourtv.com)

ಈ ಪದ್ಯದ ವಿವರಗಳಲ್ಲಿ ಸತ್ಯವಿದೆ.

ಅಮೆರಿಕಾ ಅಥವಾ ಇನ್ನಿತರ ದೇಶ-ಭಾಷೆಗಳ ವಿವರ ಒತ್ತಟ್ಟಿಗಿರಿಸಿ ಕೇವಲ ನಮ್ಮ ಸ್ಥಳೀಯ ವಿವರ ಗಮನಿಸಿ. ಕಳೆದ ಸರಿಸುಮಾರು ಹದಿನೈದು ವರ್ಷಗಳಿಂದ ಟೆಲಿವಿಷನ್ ಎಂಬುದು ನಮ್ಮ ಮಧ್ಯಮವರ್ಗದ ಮನೆಗಳಲ್ಲಿ ಕೇಂದ್ರ ಸ್ಥಾನ ಪಡೆದುಕೊಂಡಿದೆ. ಮಲಗಲು ನೆಟ್ಟಗೆ ಒಂದು ಹಾಸಿಗೆ ಇಲ್ಲದವರ ಮನೆಯಲ್ಲೂ ಒಂದು ಟಿ.ವಿ. ಹಗಲಿರುಳೂ ತನ್ನ ಇರವನ್ನ ಸ್ಪಷ್ಟಪಡಿಸುತ್ತಾ ಕೂತಿರುತ್ತದೆ. ಮನೆಗೆ ಬಂದ ಅತಿಥಿಗಳಿಗೆ ಕೇರ್ ಮಾಡದೆ, ಮನೆ-ಮಂದಿಯೆಲ್ಲಾ ಟಿ.ವಿ. ಎಂಬ ಮಾಯಕದ ಎದುರಿಗೆ ಎಲ್ಲಾ ಇಂದ್ರಿಯಗಳನ್ನೂ ಬಂದ್ ಮಾಡಿಕೊಂಡು ಕೂತಿರುವುದನ್ನ ನಾವು ಕಾಣುತ್ತೇವೆ. ಇದನ್ನೇ ರಾನ್ ಕಾಫ್‌ಮನ್ 'ಬ್ಯೂಟಿಫುಲ್ ಪೀಪಲ್ ಸಿಂಡ್ರೋಮ್' ಎಂದು ಗುರುತಿಸುತ್ತಾನೆ. ಇದು ನಿರಂತರವಾಗಿ ಟಿ.ವಿ. ನೋಡುತ್ತಾ ಇರುವವರಿಗೆ ಆಗುವ ಸಮಸ್ಯೆ. ಹಾಗೇ ದಿನವೊಂದಕ್ಕೆ ಟಿ.ವಿ. ನೋಡುವವರನ್ನು ಕುರಿತ ಅಂಕಿ-ಅಂಶವೊಂದರಲ್ಲಿ, ಕೇವಲ ಅಮೆರಿಕಾ ಸಂಯುಕ್ತ ಸಂಸ್ಥಾನವೊಂದರಲ್ಲೇ ಸರಾಸರಿ ದಿನಕ್ಕೆ ೭.೩೦ ಗಂಟೆಗಳ ಅವಧಿಯಷ್ಟು ಟಿ.ವಿ.ಯನ್ನು ನೋಡುತ್ತಾರೆ. ಭಾರತದಲ್ಲಿ ದಿನವೊಂದಕ್ಕೆ ಸರಿಸುಮಾರು ಹತ್ತುಗಂಟೆಗಳ ಕಾಲ ಟಿ.ವಿ. ವೀಕ್ಷಣೆ ಹೆಂಗಸರದ್ದು, ಸರಿಸುಮಾರು ಎಂಟುಗಂಟೆಗಳ ಟಿ.ವಿ. ವೀಕ್ಷಣೆ ಗಂಡಸರದ್ದು. ಅಂದರೆ ವಾರವೊಂದರಲ್ಲಿ ನಮ್ಮ ಹೆಂಗಳೆಯರು ಎಪ್ಪತ್ತು ಗಂಟೆಗಳ ಕಾಲ ಟಿ.ವಿ. ಎದುರು ಇರುತ್ತಾರೆ. ವರ್ಷದಲ್ಲಿ ೩,೬೪೦ ಗಂಟೆಗಳ ಟಿ.ವಿ. ವೀಕ್ಷಣೆ. ಹೀಗಾದಾಗ ತೆರೆಯ ಮೇಲೆ ಬರುತ್ತಾ ಇರುವುದೆಲ್ಲಾ ಸತ್ಯ ಎಂಬ ಭ್ರಮೆ ಉಂಟಾಗುತ್ತದೆ ಅಥವಾ ಟಿ.ವಿ.ಯಲ್ಲಿ ಬರುವ ಎಲ್ಲವನ್ನು ಮುಂದೆ ಹೀಗಾಗಬಹುದು ಎಂದು ಊಹಿಸುವ ಅಥವಾ ಅಲ್ಲಿನಂತೆಯೇ ಬದುಕುವ ಪ್ರಯತ್ನಗಳು ಆಗತೊಡಗುತ್ತವೆ. ಅಂದರೆ ಟಿ.ವಿ.ಯೂ ಬದುಕಿಗೆ ಕನ್ನಡಿಯೋ ಅಥವಾ ನೋಡುಗರೇ ಆ ಟಿ.ವಿ.ಯ ಬದುಕಿನ ಪ್ರತಿರೂಪಗಳೋ ಎಂಬಂತಹ ಸ್ಥಿತಿ ಬರುತ್ತದೆ. (ಮುಂಚೆ ನಾನು ತಿಳಿಸಿದ ಉದಾಹರಣೆಗಳಲ್ಲಿ ಇರುವ ಮಾತುಗಳನ್ನ ಗಮನಿಸಿ. ಅದು ಯಾವುದೇ ಒಂದು ಭಾಷೆ ಅಥವಾ ನುಡಿಗಟ್ಟಲ್ಲ. ಅದು ಸಂಪೂರ್ಣ ಟಿ.ವಿ. ಧಾರಾವಾಹಿಗಳು ಕಲಿಸಿರುವ ಭಾಷೆ.) ಇದಲ್ಲದೆ, ಟಿ.ವಿ.ಯಲ್ಲಿ ಬಿಂಬಿತವಾಗುವ ರೂಪಗಳು (ಇಮೇಜಸ್ ಎಂಬರ್ಥದಲ್ಲಿ) ಸದಾ ಸುಂದರವಾದುದನ್ನೇ ತೋರಿಸುತ್ತವೆ. ಅಲ್ಲಿ ಬರುವವರು ಸೌಂದರ್ಯೋದ್ಯಮ ಪ್ರಣೀತ ಆಕಾರದವರಾಗಿರುತ್ತಾರೆ. (ಇದನ್ನ ಹೆಚ್ಚಾಗಿ ಹಿಂದಿ ಭಾಷಿಕ ಛಾನೆಲ್ಲುಗಳಲ್ಲಿ ಕಾಣಬಹುದು.) ಅವರೆಲ್ಲರೂ ಬುದ್ಧಿವಂತರಂತೆ, ಭಾರೀ ಸೃಜನಶೀಲರಂತೆ, ನೋಡುಗರನ್ನ ಆಕರ್ಷಿಸುವಂತೆ ಕಾಣುತ್ತಾರೆ ಅಥವಾ ಹಾಗೇ ವರ್ತಿಸುತ್ತಾರೆ. ಕಡುಬಡತನವನ್ನು ಕುರಿತ ಕಥೆಯಲ್ಲೂ ಪ್ರಮುಖ ನಟಿಯ ಮುಖದ ತುಂಬಾ ಲಿಪ್‌ಸ್ಟಿಕ್ ಇರುತ್ತದೆ. (ನೋಡಿ : 'ಮಾಂಗಲ್ಯ' ಅಥವಾ 'ರಂಗೋಲಿ'). ಇನ್ನು ಅವರ ಮಾತುಗಳಲ್ಲಿ ಇರುವ ಬುದ್ಧಿವಂತಿಕೆಯನ್ನ ಗಮನಿಸಿ. ಅಲ್ಲಿರುವವರೆಲ್ಲರೂ ಇಡೀ ಜಗತ್ತನ್ನು ಬಲ್ಲವರು. ಆದರೆ ನೋಡುಗನಿಗೆ ತಲ್ಲಣ ಉಂಟುಮಾಡುವ ತಪ್ಪುಗಳನ್ನ ಮಾಡುತ್ತಿರುತ್ತಾರೆ. (ಈ ತಪ್ಪುಗಳನ್ನ ಗುರುತಿಸಿ ಬರೆಯುವ ಪ್ರೇಕ್ಷಕರು ಕೆಲವರಾದರೂ ಇದ್ದಾರೆ. ಅದಕ್ಕಾಗಿ ವಾರಪತ್ರಿಕೆಯೊಂದು ವೇದಿಕೆಯನ್ನೂ ಮಾಡಿಕೊಟ್ಟಿದೆ. ಅದು ಕನ್ನಡದಲ್ಲಿ ಮಾತ್ರ ದೊರೆಯುವಂತಹ ಸಲ್ಲಕ್ಷಣ. ಇನ್ನುಳಿದ ಕಡೆಗಳಲ್ಲಿ ಅದೂ ಇಲ್ಲ. ಜೊತೆಗೆ ಹೀಗೆ ಗುಣಗ್ರಾಹಿಗಳಾದ ಪ್ರೇಕ್ಷಕರು ಬಹುಸಂಖ್ಯಾತರ ಯಾದಿಯಲ್ಲಿ ಬರುವವರಲ್ಲ. ಮತ್ತು ಆ ಬಹುಸಂಖ್ಯಾತರು ನೋಡುವ ಕಾರ್ಯಕ್ರಮ ಕುರಿತ ತಪ್ಪು-ಒಪ್ಪುಗಳ ವಿಮರ್ಶೆ ಆಗುವುದೇ ಇಲ್ಲ.) 'Amusing Ourselves to Death' ಎಂಬ ಪುಸ್ತಕದಲ್ಲಿ ನ್ಯೂಯಾರ್ಕ್ ಯೂನಿವರ್ಸಿಟಿಯ ಮಾಧ್ಯಮ ವಿಭಾಗದವರಾದ ಪ್ರೊ|| ನೀಲ್ ಆರ್ಮ್‌ಸ್ಟ್ರಾಂಗ್ ಹೀಗೆನ್ನುತ್ತಾರೆ, ಟಿ.ವಿ. ಕುರಿತು :

"It is impossible to imagine that anyone like our 27th president, the multi chinned, three hundred pound William Howard Taft, could be put forward as a presidential candidate in today's world. The shape of a man's body is largely irrelevent to the shape of his ideas when he is addressing a public in writing or in radio... but it is quite relevant in television. The grossness of a three hundred pound image, even a talking one, would easily overwhelm any logical or spiritual subtleties conveyed by the speech." (as quoted in www.turnoffyourtv.com)

ಈ ಸತ್ಯವನ್ನ ನೀವು ಪ್ರತಿದಿನ ಟಿ.ವಿ.ಯಲ್ಲಿ ನೋಡಬಹುದು. ಒಂದು ಕಾರ್ಯಕ್ರಮದ ನಿರೂಪಕಿಗೆ ಭಾಷೆ ಬಾರದಿರಬಹುದು. ಆದರೆ ಅವಳು ನೋಡಲು 'ಸುಂದರ'ವಾಗಿದ್ದರೆ ಸಾಕು. (ಉದಾಹರಣೆಗೆ ಕ್ರಿಕೆಟ್ಟನ್ನು ಕುರಿತ ವಿಶೇಷ ಕಾರ್ಯಕ್ರಮಗಳಲ್ಲಿ ಭಾಗವಹಿಸಲಾರಂಭಿಸಿದ ಹೆಂಗಳೆಯರನ್ನು ನೆನಪಿಸಿಕೊಳ್ಳಬಹುದು. ಇದೇ ರೀತಿಯ ಒಂದು ಜಾಹೀರಾತನ್ನ ನೀವು ನೋಡಬಹುದು. ಆ ಜಾಹೀರಾತಿನಲ್ಲಿರುವ ಒಬ್ಬ ಕೃಷ್ಣಸುಂದರಿಗೆ ಮಾತು ಬರುತ್ತದೆ. ಅದಕ್ಕಾಗಿ ಅವಳು ತಾಲೀಮು ಕೂಡ ನಡೆಸುತ್ತಾಳೆ. ಆದರೆ ಅವಳಿಗೆ 'ಸೌಂದರ್ಯ'ದ್ದೇ ಚಿಂತೆ, ಅದಕ್ಕಾಗಿ ಅವಳಿಗೆ ಯಾವುದೋ ವಿದೇಶಿ ಕಂಪನಿಯ ವಿಶೇಷ ಕ್ರೀಮ್ ಕೊಡಲಾಗುತ್ತದೆ. ಅವಳನ್ನು ಟಿ.ವಿ. ಸೌಂದರ್ಯದ ಮಾನದಂಡಕ್ಕಾಗಿ ರೂಪಿಸಲಾಗುತ್ತದೆ. ಇಂತಹದೇ ವಿವರಗಳಿರುವ ಇನ್ನೂ ಅನೇಕ ಜಾಹೀರಾತುಗಳನ್ನ ಗಮನಿಸಬಹುದು.) ಇದರಿಂದಾಗಿ ನಮ್ಮ ಟಿ.ವಿ. ವೀಕ್ಷಕರ ಭಾಷಾಪ್ರಜ್ಞೆಯೂ ನಾಶವಾಗುತ್ತಿದೆ. (ಈಚೆಗೆ ಇದೇ ಭಾಷೆಯ ಝಲುಕ್ಕುಗಳು ಎಫ್.ಎಂ. ರೇಡಿಯೋದಲ್ಲಿಯೂ ಬರುತ್ತಿದೆ. ಅಲ್ಲಿ ಕನ್ನಡ ಬರುವವರೂ ಸಹ 'ಕಾನ್ವೆಂಟ್' ಕನ್ನಡಿಗರಂತೆ ಮಾತಾಡುವುದನ್ನು ಕೇಳಬಹುದು.)

ಒಟ್ಟಾರೆಯಾಗಿ ಗಂಟಾನುಗಟ್ಟಲೆ, ಪುಂಖಾನುಪುಂಖವಾಗಿ ಟಿ.ವಿ. ವೀಕ್ಷಿಸಿದ ನಂತರ ಅದೇ 'ಸೌಂದರ್ಯ' ಪ್ರಜ್ಞೆ ವೀಕ್ಷಕರ ಮನದಾಳಕ್ಕೆ ಇಳಿಯುತ್ತದೆ. ಹೀಗಾಗಿಯೇ ಯಾವುದೋ ಧಾರಾವಾಹಿಯಲ್ಲಿ ಮಾಡುವ ನಟ, ನಟಿಯರು ನಾಡಿನ ನಿಜವಾದ ಶ್ರೇಷ್ಠರಿಗಿಂತ ಹೆಚ್ಚು ಜನಕ್ಕೆ ಪರಿಚಿತರಾಗಿರುತ್ತಾರೆ ಮತ್ತು ಜನಪ್ರಿಯರಾಗಿರುತ್ತಾರೆ. ಇದು ನಿಧಾನವಾಗಿ ನಮ್ಮ ವೀಕ್ಷಕರ ಮನಸ್ಸಿನಲ್ಲಿ 'ಹೊಸ ಪುರಾಣ'ವನ್ನು ಸೃಷ್ಟಿಸತೊಡಗುತ್ತದೆ. ಅದನ್ನ 'ಆಧುನಿಕ ಸೌಂದರ್ಯ ಪುರಾಣ' ಎನ್ನಬಹುದು. ಇದರಿಂದಾಗಿ ನಮ್ಮ ನಗರಗಳು ಮಾತ್ರವಲ್ಲ ಹಳ್ಳಿಗಳು ಕೂಡ ಅದೆಷ್ಟು ಬೇಗ ಅಮೆರಿಕೀಕರಣಕ್ಕೆ ಒಳಗಾಗುತ್ತಿವೆ ಎಂದರೆ ಅಭಿವೃದ್ಧಿ ಎಂಬುದರ ಯಾವುದೇ ಸೂಚನೆ ಇಲ್ಲದ ಹಳ್ಳಿಯಲ್ಲೂ ನಿಮಗೆ ಟಿ.ವಿ.ಯ ಜಾಹೀರಾತುಗಳಲ್ಲಿ ಬರುವ ಎಲ್ಲಾ ಸೌಂದರ್ಯವರ್ಧಕಗಳು ಮತ್ತು ಪಾನೀಯಗಳು ದೊರೆಯುತ್ತವೆ. ಆ ಹಳ್ಳಿ ತಲುಪಲು ಸರಿಯಾದ ರಸ್ತೆಯಿಲ್ಲ ಎಂದು ಜನ ಗೊಣಗುತ್ತಿರುವಾಗಲೇ ಟಿ.ವಿ. ಎಂಬ ಮಾಯಾಯಂತ್ರದ ಮಾರುಕಟ್ಟೆಯು ನಾಡಿನ ಕಟ್ಟಕಡೆಯ ವ್ಯಕ್ತಿಯ ಎದುರು ಪ್ರದರ್ಶನಗೊಳ್ಳುತ್ತಾ ಇರುತ್ತದೆ. ಆ ಪ್ರದರ್ಶನಕ್ಕಾಗಿಯೇ 'ಐಕಾನ್'ಗಳ ಸೃಷ್ಟಿಯನ್ನೂ ಸಹ ಟಿ.ವಿ.ಯೇ ಮಾಡುತ್ತಾ ಇರುತ್ತದೆ. ಅಮಿತಾಬ್ ಬಚ್ಚನ್, ಸಚಿನ್, ಷಾರುಕ್ ಮುಂತಾದವರುಗಳು ಜನರನ್ನು ಕೊಳ್ಳಲು ಪ್ರಚೋದಿಸುವ 'ಅಫೀಮು'ಗಳಾಗಿಬಿಡುತ್ತಾರೆ. (ಒಂದು ಲಘು ಪಾನೀಯದ ಕಂಪನಿಯಂತೂ ಆಯಾ ನಾಡಿನ/ಭಾಷೆಯ ಜನಗಳಿಗೆ ತಕ್ಕಂತೆ ಅಲ್ಲಿನ ಸಿನಿಮಾ ನಾಯಕರುಗಳನ್ನೇ ಬಳಸಿಕೊಳ್ಳುತ್ತಿದೆ. ಆಂಧ್ರದಲ್ಲಿ ಚಿರಂಜೀವಿಯಾದರೆ, ತಮಿಳುನಾಡಿನಲ್ಲಿ ಸೂರ್ಯ ಎಂಬ ನಟ. ಕರ್ನಾಟಕದಲ್ಲಿ ಮಾತ್ರ ಅದಿಲ್ಲ. ಈ ಮಾತು ತೆಗೆದಾಗ ಆ ಲಘು ಪಾನೀಯದ ಸ್ಥಳೀಯ ಮಾರುಕಟ್ಟೆಯ ಮುಖ್ಯಸ್ಥ ಹೀಗೆ ಹೇಳಿದರು : ''ಇಲ್ಲಿನ ಜನಕ್ಕೆ ಹಿಂದಿಯ ಅಥವಾ ತಮಿಳಿನ 'ಐಕಾನ್' ಆದರೂ ಸಾಕು. ಯಾಕೆಂದರೆ ಇವರು ಇಲ್ಲಿನ ಭಾಷೆಯ ಸಿನಿಮಾಗಳಿಗಿಂತ ಇತರ ಭಾಷೆಯದನ್ನೇ ನೋಡುವುದು. ಹಾಗಾಗಿ ನೋ ಕನ್ನಡ ಐಕಾನ್ !'' ಈ ಮಾತಿನ ಹಿಂದಿರುವ ವಿವರಗಳು ಈ ಲೇಖನದ ಪರಿಧಿಯೊಳಗೆ ಬರುವುದಲ್ಲ. ಆದರೂ ಗಮನವಿರಲಿ ಎಂದಷ್ಟೇ ತಿಳಿಸುತ್ತಿದ್ದೇನೆ.)

ಹೀಗೆ ಹುಟ್ಟಿರುವ 'ಆಧುನಿಕ ಪುರಾಣ'ದಲ್ಲಿ ಟಿ.ವಿ. ಎಂಬುದು ಮನೆಯ ಅನಿವಾರ್ಯ ಅಗತ್ಯಗಳಲ್ಲಿ ಒಂದು ಎಂಬಂತಹ ಸ್ಥಿತಿ ಬಂದಿದೆ. ಅದರೊಂದಿಗೆ ಟಿ.ವಿ. ನಮ್ಮ ಜನಗಳ ಕೊಳ್ಳುಬಾಕ ಸಂಸ್ಕೃತಿಯನ್ನೂ ದಿನೇದಿನೇ ಹೆಚ್ಚಿಸುತ್ತಿದೆ. ಇದರಿಂದಾಗಿ ನಮ್ಮ ಬಡಮಧ್ಯಮವರ್ಗದ ಬದುಕಿನಲ್ಲಿ ಆಗಿರುವ ಪಲ್ಲಟಗಳು ಅನೇಕ. ಐರಿಸ್ ಡೆನಿಸ್ ಮಿಲಿಕೆನ್ ಬರೆದಿರುವ ಈ ಪದ್ಯ ಇಂದಿನ ಸಂಸಾರಗಳ ಆಳದೊಳಗೆ ಇರಬಹುದಾದ ಭಾವದ ಸೂಚಕ :

**One Night of Too Many**

Honey,
Please turn off the T.V.
I want to talk

I want to be free
I need to hear my own voice
I need to make a different choice
Stop 'watching' life
Get out there and LIVE IT !

ಇದು ಪ್ರಾಯಶಃ ಎಲ್ಲಾ ಟಿ.ವಿ. ವೀಕ್ಷಕರ ಒಳಗಿನ ಕೂಗಾಗಿರಬಹುದು, ಅವರು ಆಲೋಚಿಸುವವರಾದರೆ. ಆದರೆ ಸದ್ಯಕ್ಕೆ ನಮ್ಮ ನಾಡಲ್ಲಿ ಆ ಪರಿಸ್ಥಿತಿ ಬಂದಿಲ್ಲ. ಇಲ್ಲಿನ ಜನರ ಮಿದುಳನ್ನ ಒಂದು ದಿನದೊಳಗೆ ೩೫ ದೈನಿಕ ಧಾರಾವಾಹಿಗಳು ಹಿಡಿದಿವೆ. ಜೊತೆಗೇ ಸಿನಿಮಾಗಳು, ಸಿನಿಮಾ ಹಾಡುಗಳು, ಸಿನಿಮಾ ನಟರ ಸಂದರ್ಶನಗಳು. ಜನ ಅವೆಲ್ಲವನ್ನೂ ಎವೆಯಿಕ್ಕದೆ ನೋಡುತ್ತಿದ್ದಾರೆ. ಅದಾಗಲೇ ಟೆಲಿಮಾರ್ಕೆಟಿಂಗ್‌ನ ವಿಚಿತ್ರ ರೂಪಗಳು ಆರಂಭವಾಗಿವೆ. ಅವು ಜನರನ್ನ ಮನೆಯಿಂದಲೇ ಕದಲದಂತೆ ಮಾಡಿದರೂ ಆಶ್ಚರ್ಯವಿಲ್ಲ.

ಈ ವಿವರಗಳು ಒಂದೆಡೆಗಾದರೆ ಇದರೊಂದಿಗೆ ಕರ್ನಾಟಕದ ಟೆಲಿವಿಷನ್ ಉದ್ಯಮದಲ್ಲಿ ಆಗಿರುವ ಬದಲಾವಣೆಗಳು ಅನೇಕ. ಅವುಗಳನ್ನ ಗಮನಿಸೋಣ.

**ಸ್ಥಳೀಯ 'ಪುರಾಣಿ'ಕರ ಸ್ಥೂಲ ಚರಿತ್ರೆ**

ಟೆಲಿವಿಷನ್ ಕಾರ್ಯಕ್ರಮಗಳ ತಯಾರಿಕೆ ಒಂದು ಕಾಲಕ್ಕೆ ಕಲಾತ್ಮಕ ಸಿನಿಮಾ ಮಾಡುವ ಶಕ್ತಿ ಇಲ್ಲದ, ಆದರೆ ಏನಾದರೂ ಒಳ್ಳೆಯದನ್ನು ಮಾಡಬೇಕೆಂಬ ತವಕ ಇದ್ದ ಕೆಲವರಿಂದಾಗಿ ನಡೆಯುತ್ತಿತ್ತು. ಹವ್ಯಾಸೀ ರಂಗಭೂಮಿಯ ಅನೇಕರು ಟೆಲಿವಿಷನ್ ಕಾರ್ಯಕ್ರಮಗಳ ತಯಾರಕರಾಗಿದ್ದರು. ನಾಡಿನ ಶ್ರೇಷ್ಠ ಕಥೆಗಳು ಉತ್ತಮ ಕಿರುಚಿತ್ರಗಳಾಗಿ ಹೊರಬರುತ್ತಿದ್ದವು. ಸ್ಯಾಟಲೈಟ್‌ನಿಂದ ಬಿತ್ತರಗೊಳ್ಳುವ ವಾಹಿನಿಗಳು ಹೆಚ್ಚಿದಂತೆ ದೃಶ್ಯ ಬದಲಾಗತೊಡಗಿತು. ಟೆಲಿವಿಷನ್ ಉದ್ಯಮದಲ್ಲಿ ದುಡಿಯುವವರು ವೃತ್ತಿಪರರಾಗಿರಬೇಕಾದ ಅನಿವಾರ್ಯತೆ ಸೃಷ್ಟಿಯಾಯಿತು. ಹೀಗಾಗಿ ಟೆಲಿವಿಷನ್ ಉದ್ಯಮ ಅಂದಿನಿಂದ ಇಂದಿಗೆ ಬೃಹತ್ತಾಗಿದೆ. ಇಂದು ಈ ಉದ್ಯಮದಲ್ಲಿ ಗುತ್ತಿಗೆ ಆಧಾರದ ಮೇಲೆ ದುಡಿಯುತ್ತಿರುವವರ ಸಂಖ್ಯೆಯು (ಕೇವಲ ಕರ್ನಾಟಕದಲ್ಲಿ) ಸರಿಸುಮಾರು ನಾಲ್ಕೂವರೆ ಸಾವಿರ ಜನ. ಅಂದರೆ ಅದೇ ಸಂಖ್ಯೆಯ ಕುಟುಂಬಗಳೂ ಈ ಉದ್ಯಮವನ್ನ ಆಧರಿಸಿ ಬದುಕುತ್ತಿವೆ. (ಈ ಅಂದಾಜಿನಲ್ಲಿ ಕೇಬಲ್ ಆಪರೇಟರ್‌ಗಳು ಮತ್ತು ಎಂ.ಎಸ್.ಒ.ಗಳನ್ನು ಸೇರಿಸಿಲ್ಲ.)

ಕರ್ನಾಟಕದಲ್ಲಿರುವ ನಾಲ್ಕು ಛಾನೆಲ್ಲುಗಳಿಂದ ಆಗುತ್ತಿರುವ ವಾರ್ಷಿಕ ವಹಿವಾಟು ಅಂದಾಜು ಆರುನೂರು ಕೋಟಿ ರೂಪಾಯಿಗಳು. ಇದರಿಂದಾಗಿ ಸಿನಿಮಾ ಎಂಬ ತಾರಾಸಮೂಹದ (ಸ್ಟಾರ್‌ಗಳ ನಾಡು ಎಂಬ ಅರ್ಥದಲ್ಲಿ) ಸಂತೆಯಲ್ಲಿ ಬದುಕಲು ಆಗದೆ, ಆ ತಾರೆಯರ ಮನೆ ಬಾಗಿಲಲ್ಲಿ ನಿಲ್ಲುತ್ತಿದ್ದ ಅನೇಕ ಕಲಾವಿದರೂ ಇಂದು ನೆಮ್ಮದಿಯಾಗಿದ್ದಾರೆ ಮತ್ತು ಅವರ ಕುಟುಂಬಗಳಲ್ಲಿ ತೀರಾ ಐಷಾರಾಮ ಎನ್ನಲಾಗದಿದ್ದರೂ ನಾಳೆ ಹೇಗೆ ಎಂಬ ಚಿಂತೆಯಿಲ್ಲದೆ ಬದುಕು ಸಾಗುತ್ತಿದೆ. ಕನ್ನಡ ಭಾಷೆಯಲ್ಲಿ ಎನ್ನೂ ಎರಡು ಟೆಲಿವಿಷನ್ ವಾಹಿನಿಗಳು ಬರುವ ಸಾಧ್ಯತೆಯಿದೆ. ಈ ವಾಹಿನಿಗಳನ್ನು ಆರಂಭಿಸುತ್ತಿರುವವರ ರಾಜಕೀಯ ಉದ್ದೇಶಗಳೇನೇ ಇರಲಿ ಇವು ಟೆಲಿವಿಷನ್ ಉದ್ಯಮದಲ್ಲಿನ ಕಲಾವಿದರ, ತಂತ್ರಜ್ಞರ, ಕಾರ್ಮಿಕರ ಸಂಖ್ಯೆಯನ್ನು ಹೆಚ್ಚಿಸುವುದಂತೂ ಸತ್ಯ. ಪ್ರಾಯಶಃ ಇನ್ನೆರಡು ವರ್ಷಗಳಲ್ಲಿ ಟೆಲಿವಿಷನ್ ಉದ್ಯಮದಲ್ಲಿ ತೊಡಗಿಕೊಂಡವರ ಸಂಖ್ಯೆ ದುಪ್ಪಟ್ಟಾಗಬಹುದು. ಇದರ ಪರಿಣಾಮವಾಗಿ ಬೆಂಗಳೂರು ನಗರವೊಂದರಲ್ಲೇ ಈಗ ತಾಂತ್ರಿಕ ತರಬೇತಿ ನೀಡುವ ಆರು ಅರೆಕಾಲಿಕ ಶಾಲೆಗಳಾಗಿವೆ. ಇದು ಜಿಲ್ಲಾ ಕೇಂದ್ರಗಳಲ್ಲೂ ಆರಂಭವಾಗುವ ದಿನ ದೂರವಿಲ್ಲ. ಹಾಗಾದಾಗ ಈ ಉದ್ಯಮ ಒದಗಿಸುವ ಉದ್ಯೋಗ ಅವಕಾಶ ಎಷ್ಟು ಎಂದು ಊಹಿಸಬಹುದು. ಒಟ್ಟಾರೆಯಾಗಿ ಮನರಂಜನಾ ಉದ್ಯಮವಂತೂ ಸರಕು ಸಂಸ್ಕೃತಿಯ ಎಲ್ಲಾ ಅವಘಡಗಳನ್ನೂ ಮೈದುಂಬಿಸಿಕೊಂಡು ಸುಪುಷ್ಟವಾಗುತ್ತಿದೆ.

**ಈ ಪರಿಸ್ಥಿತಿಯಲ್ಲಿ ಕಾರ್ಯಕ್ರಮ ತಯಾರಕರ ಧೋರಣೆಗಳೇನು ?**

ಈ ಉದ್ಯಮದಲ್ಲಿ ಆದರ್ಶಗಳಿಗೆ ಅವಕಾಶವಿಲ್ಲ. ಇದು ಸರಕು ಮಾರುವ ಉದ್ದೇಶದಿಂದಲೇ ಆದದ್ದು. ಇಲ್ಲಿ ತಯಾರಕ ಮತ್ತು ಅವನ ಆಲೋಚನೆಗಳೂ ಗೌಣ. ಅವನು ಹೆಣೆಯುವ ಕಥೆಗಳು ಮಕ್ಕಳು ಅಥವಾ ಹೆಂಗಳೆಯರ ಮನಸೆಳೆಯುವಂತಿರ

ಬೇಕು. ಅದಕ್ಕೆ ಕಾರಣ ಹೆಚ್ಚು ಹೆಂಗಸರೇ ಟಿ.ವಿ. ನೋಡುತ್ತಾರೆ ಎಂಬ ಜನಪ್ರಿಯ ನಂಬುಗೆಯಲ್ಲ. ಒಂದು ಮನೆಯಲ್ಲಿ ಏನನ್ನಾದರೂ ಕೊಳ್ಳುವ ನಿರ್ಧಾರ ಮಾಡುವ ಶಕ್ತಿ ಇರುವವರು ಮಕ್ಕಳು ಮತ್ತು ಹೆಂಗಸರು ಮಾತ್ರ.

ಮಕ್ಕಳು ತಾವು ನೋಡಿದ ಜಾಹೀರಾತಿನಲ್ಲಿರುವುದೆಲ್ಲಾ ಬೇಕು ಎನ್ನುತ್ತಾರೆ. ಅದ್ಯಾವುದೋ ಸೋಪು ಕೊಂಡರೆ 'ಭಯ ಇನ್ನೆಲ್ಲಿ?' ಎಂಬ ಜಾಹೀರಾತಿನ ವಾಕ್ಯವೇ ಆ ಮಕ್ಕಳನ್ನು ಅದೇ ಸೋಪು ಕೊಳ್ಳುವಂತೆ ಮಾಡುತ್ತದೆ. ಆ ಭಯಕ್ಕೆ ಕಾರಣವೂ ಟಿ.ವಿ.ಯೇ. ಯಾವುದೇ ಮಕ್ಕಳನ್ನುದ್ದೇಶಿಸಿದ ಕಾರ್ಟೂನ್ ಚಿತ್ರ ಗಮನಿಸಿ. ಅಲ್ಲಿರುವುದು ಒಬ್ಬ ಒಳ್ಳೆಯವನ ಸುತ್ತ ಸಹಸ್ರಾರು ದುಷ್ಟರು. ಇನ್ನು ಅದನ್ನು ಆನಂದದಿಂದ ನೋಡುತ್ತಾ, ಹೊರಜಗತ್ತನ್ನ ಕಾಣದ ಮಕ್ಕಳಿಗೆ ಆಗುವುದೇನು ? 'ಹೊರಗಿನದು' ಎಂದರೆ ಭಯ. ಮನೆಗೆ ಬಂದವರೊಡನೆ ಮಾತಾಡುವುದಕ್ಕೂ ಅವರಿಗೆ ಹಿಂಜರಿಕೆ. ಅವರು ಮುಕ್ತರಾಗುವುದಕ್ಕೆ ಸಾಧ್ಯವೇ ಇಲ್ಲ. ಹೀಗಾಗಿ ಜಾಹೀರಾತಿನ ಒಂದು ಸಾಲು ಅವರ ಕೊಳ್ಳುವಿಕೆಗೆ ಕಾರಣವಾಗಿರುತ್ತದೆ.

ಇನ್ನು ಹೆಂಗಸರು. ಯಾವುದೇ ಮನೆಯ ದಿನಸಿ ಮತ್ತು ದಿನಬಳಕೆಯ ವಸ್ತುವನ್ನು ತರುವವರು ಹೆಂಗಸರೇ ಆಗಿರುತ್ತಾರೆ, ಸಾಮಾನ್ಯವಾಗಿ. ಹೀಗಾಗಿ ಕೊಳ್ಳುವವರನ್ನ ಓಲೈಸುವ ಕಥೆಗಳ ನಡುವೆ ತನ್ನ ಸರಕು ಮಾರುಕಟ್ಟೆಯಾಗಲಿ ಎಂದು ಜಾಹೀರಾತುದಾರ ಬಯಸುತ್ತಾನೆ. ಅಂತೆಯೇ, ಧಾರಾವಾಹಿಯ ನಡುವಣ ಜಾಹೀರಾತು ಸಮಯ ತುಂಬುವವನನ್ನ ಆಧರಿಸಿ ಕಥೆಗಳು ರೂಪುಗೊಳ್ಳುತ್ತವೆ. ಹೀಗಿರುವಾಗ ನಾಡಿನ ರೈತರ ಸಮಸ್ಯೆ ಕುರಿತ ಅಥವಾ ದಲಿತರ ಸಮಸ್ಯೆ ಕುರಿತ ಕಥೆಗಳನ್ನು ಅಥವಾ ಕೋಮುಸೌಹಾರ್ದ ಕುರಿತ ಕಥೆಗಳನ್ನು ಈ ಮಾಧ್ಯಮದ ಮೂಲಕ ಮಾಡುವುದು ದುಸ್ಸಾಧ್ಯವಾಗಿಬಿಡುತ್ತದೆ. (ಈ ಒತ್ತಡಗಳ ನಡುವೆಯೂ ಕೆಲವರು ಹಟಕ್ಕೆ ಬಿದ್ದವರಂತೆ 'ಸಮಾಜಮುಖಿ' ಕಥೆಗಳನ್ನು ಧಾರಾವಾಹಿಯಾಗಿಸುವ ಪ್ರಯತ್ನ ಮಾಡುತ್ತಿದ್ದಾರೆ. ಆದರೆ ಅಂತಹವರು ಎಂದಿಗೂ, ಎಂದೆಂದಿಗೂ ಅಲ್ಪಸಂಖ್ಯಾತರು.) ಇದರಿಂದಾಗಿ ಎಲ್ಲಾ ಧಾರಾವಾಹಿಗಳಲ್ಲೂ ಕಾಣಸಿಗುವದು ಸಾಧ್ವಿ ಶಿರೋಮಣಿಯ ಗಂಡನ ಎರಡನೆಯ ಸಂಬಂಧದ ಕಥೆ (ಗುಪ್ತಗಾಮಿನಿ, ಪ್ರೀತಿ ಇಲ್ಲದ ಮೇಲೆ, ನನ್ನವಳು, ತಕಧಿಮಿತಾ), ಅಥವಾ ಅತ್ತೆ-ಸೊಸೆಯರ ಜಗಳ (ಕನ್ಯಾದಾನ, ಕುಂಕುಮಭಾಗ್ಯ, ಜಗಳಗಂಟಿಯರು) ಅಥವಾ ಹಾಸ್ಯದ ಹೆಸರಲ್ಲಿ ಬರುವ ನಂಬಲಸಾಧ್ಯವೆಂಬಂತೆ ವರ್ತಿಸುವ ಪಾತ್ರಗಳನ್ನುಳ್ಳ ಕಥೆಗಳು (ಸಿಲ್ಲಿಲಲ್ಲಿ, ಕುಬೇರಪ್ಪ ಅಂಡ್ ಸನ್ಸ್, ಇದು ಎಂಥಾ ಲೋಕವಯ್ಯ), ಅಥವಾ ದೆವ್ವ-ಭೂತ, ಮಾಟ-ಮಂತ್ರದ ಕಥೆಗಳು (ಯಾವ ಜನ್ಮದ ಮೈತ್ರಿ, ಮಹಾಮಾಯಿ, ಅಮ್ಮ ನಾಗಮ್ಮ, ಇತ್ಯಾದಿ) ಅಥವಾ ಒಡೆದ ಕುಟುಂಬಗಳ ಕಥೆ (ಪರಂಪರೆ, ಗುಪ್ತಗಾಮಿನಿ, ಕುಟುಂಬ, ಸೂರ್ಯವಂಶ, ಅಪ್ಪ ಇತ್ಯಾದಿ). ಹೀಗೇ ಕೆಲವು ಸಿದ್ಧ ಸೂತ್ರಗಳ ಜೊತೆ ಜಾಹೀರಾತುದಾರನ ಮನಒಲಿಸುವಷ್ಟಕ್ಕೆ 'ಆಧುನಿಕ ಪುರಾಣಿಕ'ರು ಕಥೆ ಹೊಸೆಯುತ್ತಿದ್ದಾರೆ. ಇದು ಆ ಉದ್ಯಮದಾರರ ಅನಿವಾರ್ಯ. ಆದರೆ ವೀಕ್ಷಕರು ತಿಳಿದಿರಬೇಕಾದ ಸತ್ಯ ಒಂದಿದೆ.

ಭಾರತೀಯ ವೀಕ್ಷಕನನ್ನು ಈ ಪರಿಯಲ್ಲಿ ಆವರಿಸಿರುವ ಟಿ.ವಿ. ಕ್ರಾಂತಿಯನ್ನೆಂದೂ ತೋರುವುದಿಲ್ಲ. ಏಕೆಂದರೆ ಅದು ಮಾರಾಟದ ಸರಕಲ್ಲ. ಮುಷ್ಕರದ ಹೆಸರಲ್ಲಿ ಆಕಸ್ಮಿಕವಾಗಿ ಹಿಂಸೆಯನ್ನ, ಕೋಮುದಳ್ಳುರಿಯಲ್ಲಿ ಬೆಂದ, ಬೇಯುತ್ತಿರುವ ಮನೆಗಳನ್ನ ಸುದ್ದಿ ವಾಹಿನಿಗಳು ತೋರಿಸುತ್ತವೆ. ಆದರೆ ಅಲ್ಲಿ ಆ ಹಿಂಸೆಯ ಹಿಂದಿನ ಕಾರಣಗಳ ವಿಶ್ಲೇಷಣೆ ಮೇಲ್‌ಸ್ತರದ್ದಾಗಿರುತ್ತದೆ. ಟಿ.ವಿ. ಸುದ್ದಿ ವಾಹಿನಿಗಳಿಗೆ ರೋಮಾಂಚಕಾರಿ ವಿಷಯಗಳು ಬೇಕು. ಅದಕ್ಕಾಗಿ ಅವರು ಸದಾ ಹುಡುಕುತ್ತಾ ಇರುತ್ತಾರೆ. ೯/೧೧ ತರಹದ ಪ್ರಕರಣಗಳು, ಇರಾಕಿ ಯುದ್ಧ, ಗುಜರಾತ್ ಗಲಭೆ, ಕಾವೇರಿ ನದಿ ನೀರಿನ ಹಂಚಿಕೆ ಕುರಿತ ಬೀದಿಯ ಗಲಾಟೆಗಳನ್ನ ಟಿ.ವಿ. ಸುದ್ದಿಗಳು ತೋರಿಸುತ್ತವೆ. ಆದರೆ ಇಂತಹ ಪ್ರಕರಣಗಳ ಹಿಂದಿರುವ ಎಲ್ಲಾ ಕಾರಣಗಳನ್ನು ಹಾಗೂ ವಿವರಗಳನ್ನು ಅವು ರೋಮಾಂಚನಕಾರಿಯಲ್ಲ ಎಂಬ ಕಾರಣಕ್ಕೆ ಬಿಟ್ಟುಬಿಡುತ್ತವೆ. (ಆ ವಿಶ್ಲೇಷಣೆಗಳನ್ನ ಸದ್ಯಕ್ಕೆ ಮುದ್ರಣ ಮಾಧ್ಯಮಗಳು ಮಾತ್ರ ಒಂದಿಷ್ಟು ಮಾಡುತ್ತಿವೆ. ಅಲ್ಲಿಯೂ ಉದ್ಯಮಪತಿಗಳ ನಿಯಂತ್ರಣ ಬರಲಾರಂಭಿಸಿದರೆ, ಆ ಸಣ್ಣ ಪ್ರಮಾಣದ ಕೆಲಸವೂ ಸಹ ನಿಂತು ಹೋಗಬಹುದು.) ಟಿ.ವಿ. ಸುದ್ದಿವಾಹಿನಿಗಳ ಆಹಾರ ಸಂಗ್ರಹಣೆಯ ಕ್ರಮದಿಂದಲೇ ಆಪರೇಷನ್ ದುರ್ಯೋಧನ ಮತ್ತು ತೆಹೆಲ್ಕಾ. ಕಾಂ ಪ್ರಕರಣಗಳು ಆದದ್ದು ಎಂಬುದನ್ನ ನಾವು ಮರೆಯಬಾರದು. ಇವೇ ಕಾರಣಗಳಿಗೆ ಕನ್ನಡದ ವಾಹಿನಿಗಳಲ್ಲಿ ಬಿತ್ತರವಾಗುತ್ತಿರುವ ಎರಡು ಕ್ರೈಂ ಕುರಿತ ಸುದ್ದಿಚಿತ್ರಗಳು ಜನಪ್ರಿಯವಾಗಿವೆ. ಆದರೆ ಇವುಗಳಾವುವೂ ಸಮಾಜಮುಖಿಯಲ್ಲ. ('ಮುಂದೊಮ್ಮೆ ಈ ಕಾರ್ಯಕ್ರಮ ತಯಾರಕರಿಗೆ ಯಾವ ರೋಮಾಂಚನಕಾರಿ ಸುದ್ದಿಯೂ ಸಿಗದೆ ಹೋದಾಗ ಅವರುಗಳೆ ಒಂದು 'ಸೆನ್ಸೇಷನಲ್' ಕ್ರೈಂ ಮಾಡುವ ಸಾಧ್ಯತೆ ಇದೆ' ಎಂದು ಪತ್ರಕರ್ತ ಮಿತ್ರರೊಬ್ಬರು ತಮಾಷೆಗಾಗಿ ಹೇಳಿದ ಮಾತು ಸತ್ಯವಾಗಬಹುದೇನೋ ಎಂಬ ಆತಂಕವೂ ಇದೆ.)

ಈ ಸಂದರ್ಭದಲ್ಲಿ ಗಿಲ್ ಸ್ಕಾಟ್-ಹೆರಾನ್ ಅವರ ಪದ್ಯವೊಂದರ ಸಾಲುಗಳನ್ನ ಗಮನಿಸಿ :

**The Revolution will not be televised**
You will not be able to stay home, brother,
You will not be able to plug in, turn on and drop out.
You will not be able to lose yourself on skag and skip,
Skip out for beer during commercials,
Because the revolution will not be televised
Revolution will not be brought to you by xerox
In 4 parts without commercial interruption.
The revolution will not show you pictures of Nixon
Blowing a bugle and leading a charge by John
Mitchell, General Abrams and Spiro Agnew to eat
Hog maws confiscated from a harlem sanctuary......
... The revolution will not give your mouth sex appeal.
The revolution will not get rid of the nubs.
The revolution will not make you look 5 pounds thinner...
So Revolution WILL NOT BE TELEVISED.
The revolution will have no re-run brothers;
The revolution will be LIVE,
In front of your eyes
And not through a tube.
(as in : www.turnoffyourtv.com)

ಈ ಮಾತುಗಳು ನಮ್ಮೆದುರಿಗೆ ಇಡುತ್ತಿರುವ ಸತ್ಯವನ್ನ ಕಂಡುಕೊಂಡರೆ ಆಗ ನಮ್ಮ ಆಧುನಿಕ ಸಮಾಜ ತಾನೇ ಸೃಷ್ಟಿಸಿಕೊಳ್ಳುತ್ತಿರುವ ಟಿ.ವಿ. ಲೋಕದ ಆಧುನಿಕ ಪುರಾಣದ ವೃತ್ತಗಳಿಂದ ದೂರ ಸರಿಯಬಹುದು. ಇಲ್ಲವಾದಲ್ಲಿ ನಮ್ಮೆದುರು ದೃಶ್ಯ ೧೨ ಉಳಿಯುತ್ತದೆ.

ಅದು ಹೀಗಿದೆ :

ದುಡಿವ ಗಂಡ ಮನೆಗೆ ಬರುತ್ತಾನೆ. ಅದು ಮಧ್ಯರಾತ್ರಿಯ ಸಮಯ. ಮಡದಿ ಮಾತಾಡದೆ ಬಾಗಿಲು ತೆರೆಯುತ್ತಾಳೆ. ಮತ್ತೆ ಹೋಗಿ ಮಕ್ಕಳೊಂದಿಗೆ ಮಲಗುತ್ತಾಳೆ. ಗಂಡ ತಂಗಳು ಪೆಟ್ಟಿಗೆಯಿಂದ ತಿನ್ನಲು ಬೇಕಾದ್ದನ್ನ ತೆಗೆದುಕೊಂಡು ಎಲೆಕ್ಟ್ರಿಕ್ ಓವನ್‌ನಲ್ಲಿ ಬಿಸಿ ಮಾಡಿಕೊಂಡು, ತಟ್ಟೆ ತುಂಬಿಸಿಕೊಂಡು ಟಿ.ವಿ. ಎದುರು ಕೂರುತ್ತಾನೆ. ಧ್ವನಿಯನ್ನ 'ಮ್ಯೂಟ್' ಮಾಡುತ್ತಾನೆ. ಟಿ.ವಿ. ನಿರಂತರವಾಗಿ ಅವನಿಗೆ ಇಮೇಜಸ್‌ಗಳನ್ನು ತೋರುತ್ತದೆ. ಆದರೆ ಆ ಇಮೇಜ್‌ನ ಹಿಂದಿರುವ ಧ್ವನಿಗಳು ಅದಾಗಲೇ ಮ್ಯೂಟ್ ಆಗಿರುವುದರಿಂದ ನೋಡುತ್ತಿರುವ ಬಳಲಿದ ಮನಸ್ಸಿಗೆ ತಲುಪುವುದೇ ಇಲ್ಲ. ಕಿವಿ ನಿದ್ರಿಸಿ, ಮಿದುಳು ಮಲಗಿರುವ ಸ್ಥಿತಿಯಲ್ಲಿ ಕಣ್ಣು ಮಾತ್ರ ಎಲ್ಲವನ್ನೂ ಸ್ವೀಕರಿಸುತ್ತಾ ಉಳಿದುಬಿಡುತ್ತದೆ. ಹೀಗಾಗುವುದು ಬೇಡ ! ನಾವು ಎಚ್ಚರವಾಗಿರೋಣ !

ಬಿ. ಸುರೇಶ
ನಂ. ೧೦೪೬, ೧೪ನೇ ಅಡ್ಡರಸ್ತೆ, ೨೫ನೇ ಮುಖ್ಯ ರಸ್ತೆ
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

## ರೂಪಾಂತರ

ಕವಿ ಹೇಳಿದ :
ಬಂದೂಕಿನ ನಳಿಕೆಗೆ
ಜೇಡ ಬಲೆ ನೇಯ್ದಿದೆ.

ಇತಿಹಾಸ ಹೇಳಿತು :
ಮೂರ್ಖ, ಅದು
ಬಂದೂಕಿನ
ರೂಪಾಂತರ ಅಷ್ಟೇ.

ಕರ್ನೂಲ್ ಆರೀಫ್
ಪೋಸ್ಟ್ ಅರಕೇರಾ - ೫೮೪ ೧೧೧
ದೇವದುರ್ಗ ತಾಲೂಕು, ರಾಯಚೂರು ಜಿಲ್ಲೆ

# ದೃಶ್ಯಕಲೆಯ ಒಲವು ನಿಲುವುಗಳು

**ಒಂ**ದು ಪರಂಪರೆಯಿಂದ ಮುಂದುವರಿದ ಬಗೆಗಳನ್ನು ಬೆಳವಣಿಗೆಯ ಹೆಸರಿನಲ್ಲಿ ಗುರುತಿಸುತ್ತೇವೆ. ಹಾಗೇ ವಿಭಿನ್ನ ಪರಂಪರೆಯಿಂದ ಬಂದ ಲಕ್ಷಣಗಳೂ ಬದಲಾವಣೆಗೆ ಕಾರಣವಾಗುತ್ತವೆ. ಈ ಬದಲಾವಣೆ ಬೆಳವಣಿಗೆಯ, ಜೀವಂತಿಕೆಯ ಲಕ್ಷಣವೇ. ಕರ್ನಾಟಕ ಕಲೆಯ ಕ್ಷೇತ್ರದಲ್ಲಿ ಸಾವಿರಾರು ವರ್ಷಗಳಲ್ಲಿ ಕಾಣಬರದ ವೈವಿಧ್ಯಪೂರ್ಣ ಬೆಳವಣಿಗೆ ಇಪ್ಪತ್ತನೆಯ ಶತಮಾನದಲ್ಲಿ, ಅದರಲ್ಲೂ ಉತ್ತರಾರ್ಧದಲ್ಲಿ ಕಂಡುಬರುತ್ತವೆ. ಅಜಂತಾ ಭಿತ್ತಿಚಿತ್ರಗಳಿಗಿಂತ ಭಿನ್ನವಾದ ರೇಖಾತ್ಮಕತೆ ಕಡೆಗೆ ಒಲವು ಮತ್ತು ನವುರಾದ ಕೋಮಲವಾದ ವರ್ಣಲೇಪನ, ಸೂಕ್ಷ್ಮ ರೂಪಣ ವಿಧಾನ ಬಾದಾಮಿ ಭಿತ್ತಿಚಿತ್ರಗಳಲ್ಲಿ; ರೇಖಾ ಪ್ರಾಧಾನ್ಯ, ಮುಕ್ಕಾಲು ಮುಖಚಿತ್ರಣ, ಆಚೆಗಣ್ಣಚಾಚು ಮುಂತಾದ ಅಂಶಗಳು ಎಲ್ಲೋರ ಭಿತ್ತಿಚಿತ್ರಗಳಲ್ಲಿ; ಮುಂದೆ ರೇಖಾ ಪ್ರಾಧಾನ್ಯ, ಚಪ್ಪಟೆ ವರ್ಣಲೇಪ ವಿಧಾನವನ್ನು ಹಸ್ತಪ್ರತಿ ಚಿತ್ರಗಳಲ್ಲಿ ಕಾಣಬಹುದು. ಅದರ ಮುಂದಿನ ಬೆಳವಣಿಗೆ ಪ್ರಾಂತೀಯ ಭೇದಗಳುಳ್ಳ ಚಿಕಣಿ ಚಿತ್ರಗಳು. ವಿಜಯನಗರ ಪತನಾನಂತರ ಮೈಸೂರು ಸಾಂಪ್ರದಾಯಿಕ ಚಿತ್ರಕಲೆ ಬೆಳೆಯಲು ಅವಕಾಶವಾಯಿತು. ಇವೆಲ್ಲ ಸಾವಿರಕ್ಕೂ ಮಿಕ್ಕ ವರ್ಷಗಳ ಕಾಲಾವಧಿಯ ಬೆಳವಣಿಗೆಗಳು. ಸಂಪ್ರದಾಯ, ಪರಂಪರೆ ಎಂಬುದು ಯಾವಾಗಲೂ ನಿರ್ಬಂಧಗಳ ಸೀಮಿತತೆಯಲ್ಲೇ ಹೊಸಕಲ್ಪನೆಗೂ ಅವಕಾಶ ನೀಡುವಂಥದು.

ಹಿಂದಿನ ಪಾರಂಪರಿಕ ಚಿತ್ರಕಲೆಗೂ ಇಂದು ನಾವು ಕಾಣುವ ಆಧುನಿಕ ಕಲೆಗೂ ಹಲವು ವ್ಯತ್ಯಾಸಗಳಿವೆ. ಬಹುಮುಖ್ಯವಾಗಿ ಕಾಣಬರುವುದು ಕಲಾವಿದ ಗಳಿಸಿರುವ ವಿಶೇಷವಾದ ಮುಕ್ತವಾದ ಸ್ವಾತಂತ್ರ್ಯ. ಅನುಭವಗಳ ಅಭಿವ್ಯಕ್ತಿಗೆ ಯಾವುದೇ ಬಗೆಯ ಮಿತಿ, ನಿರ್ಬಂಧಗಳಿಲ್ಲ: ಪರಿಕರ, ಮಾಧ್ಯಮ, ತಂತ್ರವಿಧಾನ, ವಿಷಯ, ಚಿಂತನೆಗಳಲ್ಲಿ. ಹೀಗೆ ಹೇಳಿದರೂ ಸಹ, ಎಲ್ಲ ಕಲಾಭಿವ್ಯಕ್ತಿಯಲ್ಲಿ ಅಂತರ್ಗತವಾಗಿ ಮಾನವೀಯ ಮೌಲ್ಯಗಳ ಹುಡುಕಾಟವಿದೆ ಎಂಬುದನ್ನು ಮರೆಯುವಂತಿಲ್ಲ. ಸೌಂದರ್ಯ ಪರಿಕಲ್ಪನೆ, ಕಲಾನುಭವಗಳ ವಿಚಾರಗಳಲ್ಲಿ ಎಷ್ಟೇ ಏರುಪೇರುಗಳಾಗಿದ್ದರೂ ಆಧುನಿಕ ಕಲಾಕೃತಿಗಳು ನೋಡುಗನನ್ನು, ನೋಡುವ ಮೊದಲು ಇದ್ದುದಕ್ಕಿಂತ ಮಾನಸಿಕವಾಗಿ ಜಾಗೃತನನ್ನಾಗಿ ಅನುಭವ ಶ್ರೀಮಂತನನ್ನಾಗಿ ಮಾಡುತ್ತವೆ, ಸೃಜನಶೀಲತೆಯ ಸ್ಪರ್ಶಕ್ಕೆ ಸ್ಪಂದಿಸುವಂತೆ ಮಾಡುತ್ತವೆ ಎಂಬುದರಲ್ಲಿ ಸಂದೇಹವಿಲ್ಲ.



ಸಾಹಿತ್ಯದಲ್ಲಾದಂತೆ ಬ್ರಿಟಿಷರೊಂದಿಗಿನ ಸಾಂಸ್ಕೃತಿಕ ಸಂಘರ್ಷದ ಪರಿಣಾಮ ಕಲೆಯಲ್ಲೂ ಆಯಿತು. ಪಾಶ್ಚಾತ್ಯ ಪ್ರಭಾವಗಳ ನಡುವೆಯೂ ಸ್ವಂತಿಕೆ, ಅನನ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನ ನಡೆಯಿತು. ಅದು ಇಂದಿಗೂ ಸಾಗಿದೆ. ಹಿಂದೆ ಸಮಾಜದೊಂದಿಗೆ ಗುರುತಿಸಿಕೊಂಡಿದ್ದ ಕಲೆ ಕಲಾವಿದ ವೈಯಕ್ತಿಕ ಅನುಭವದ ಅಭಿವ್ಯಕ್ತಿಗೆ, ವ್ಯಕ್ತಿಗತ ಸಂವೇದನೆಗಳ ವಿಶಿಷ್ಟ ಅಭಿವ್ಯಕ್ತಿಗೆ ಎಡೆಗೊಟ್ಟಿದೆ. ಇನ್ನೊಂದು ಮುಖ್ಯ ವ್ಯತ್ಯಾಸವೆಂದರೆ, ಹಿಂದೆ ಪಾಶ್ಚಾತ್ಯರಲ್ಲೂ, ಭಾರತೀಯರಲ್ಲೂ ಶುದ್ಧಕಲೆ, ಕುಶಲಕಲೆ ಎಂಬ ಭೇದವಿರಲಿಲ್ಲ. ನಡುವೆ ಯೂರೋಪಿನ ಪುನರುತ್ಥಾನ ಕಾಲದ ನಂತರ ಭೇದ, ಮೇಲು-ಕೀಳು ಭಾವನೆ ಕಾಣಿಸಿಕೊಂಡಿತ್ತು. ನಮ್ಮಲ್ಲೂ ಸ್ವಲ್ಪ ಕಾಲ ವ್ಯತ್ಯಾಸಭಾವನೆ ನೆಲೆಯೂರಿತ್ತು. ಆ ಭೇದ ಕಲ್ಪನೆ ಇಂದು ಮರೆಯಾಗುತ್ತಿದೆ. ಕೌಶಲವೂ ಕಲಾಸೃಷ್ಟಿಯ ಅವಿನಾಭಾಗ ಎಂಬ ಎಚ್ಚರ ಮೂಡಿದೆ. ಜೊತೆಗೆ ಇಂದಿನ ಕಲಾಕೃತಿಗಳಿಂದಲೂ ಆ ಭೇದ ಅಳಿಸಿಹೋಗಿದೆ. ಗಮನಿಸಬೇಕಾದ ವಿಷಯವೆಂದರೆ, ಇಂದಿನ ಕಲಾರಚನೆಗಳನ್ನು ರೂಢಿಯ, ಸ್ಥಾಪಿತ ವರ್ಗೀಕರಣ ಪದ್ಧತಿಯಲ್ಲಿ, ವಿಂಗಡಿಸಲು, ಹೆಸರಿಸಲು ಸಾಧ್ಯವಿಲ್ಲ. ಕಲೆಯಲ್ಲಿ ಮಿಶ್ರಮಾಧ್ಯಮ ಸಾಮಾನ್ಯವಾಗಿದೆ.

ಇಂದಿನ ಒಲವು ನಿಲುವುಗಳನ್ನು ಗಮನಿಸಿದರೆ ನವ್ಯ, ಆಧುನಿಕ, ಸಮಕಾಲೀನ ಶಬ್ದಗಳು ಪರ್ಯಾಯ ಪದಗಳು ಎನಿಸುತ್ತದೆ. ಪಾಶ್ಚಾತ್ಯರಲ್ಲಿ ಆಧುನಿಕ ಅಥವಾ ನವ್ಯ ಎಂಬುದು ನಿರ್ದಿಷ್ಟ ಚಳವಳಿಯ ಪರಿಣಾಮವಾಗಿ ಮೂಡಿಬಂದದ್ದು. ಕನ್ನಡ ಸಾಹಿತ್ಯದಲ್ಲೂ ಆದಂತೆ. ಆದರೆ ಸಮಕಾಲೀನ ಶಬ್ದವನ್ನು ಇಂದಿನ ಕಲೆಗೆ ಸೀಮಿತಗೊಳಿಸಿ ಬಳಸಲಾಗುತ್ತದೆ. ಇದು ಯಾವುದೇ ಚಳವಳಿಯ ಪರಿಣಾಮವಲ್ಲ. ಅವರಲ್ಲೂ ಆಧುನಿಕೋತ್ತರ ಎನ್ನುವುದು ರೂಢಿಯಲ್ಲಿದೆ. ಆದರೆ ಅದು ಸ್ಥೂಲ ನಿರ್ದೇಶನ ಮಾತ್ರ, ನಿಖರ ಲಕ್ಷಣಗಳನ್ನು ಹೇಳಲಾಗುವುದಿಲ್ಲ.

- ೨ -

ಹತ್ತೊಂಬತ್ತನೇ ಶತಮಾನದ ಮಧ್ಯಭಾಗದಲ್ಲಿ ಯೂರೋಪಿನಲ್ಲಾದ ಕೈಗಾರಿಕಾ ಕ್ರಾಂತಿ ಅನೇಕ ಬದಲಾವಣೆಗಳಿಗೆ ಕಾರಣವಾಯಿತು. ಸಾಮಾನ್ಯ ಜನರಲ್ಲುಂಟಾದ ಜಾಗೃತಿ, ಪಾರಂಪರಿಕ ಶ್ರೀಮಂತ ಪ್ರಭುತ್ವದ ಕುಸಿತ ಮುಂತಾದುವು ಕಲೆಯ ಮೇಲೂ ಪರಿಣಾಮ ಬೀರಿದುವು. ಅರಮನೆ, ಶ್ರೀಮಂತರ ಆಶ್ರಯ ಕಲಾವಿದ ಕಳೆದುಕೊಂಡ. ಅದರಿಂದಾಗಿ ಆತ ಮುಕ್ತ ಅಭಿವ್ಯಕ್ತಿಗೆ ತೊಡಗಿದ. ಹಿಂದಿನ ಕಥನಾತ್ಮಕ, ಪ್ರತಿಪಾದನಾತ್ಮಕ ರಚನೆಗಳಿಂದ ಹೊರಳಿ ಅಭಿವ್ಯಕ್ತಿಯ ಹೊಸ ವಿಧಾನಗಳ ಹುಡುಕಾಟ ನಡೆಸಿದ. ಪರಿಕರಗಳ ಗಮನಕೊಟ್ಟ ಚಿತ್ರದಲ್ಲಿ ಹಿಂದಣ ನೈಜ, ವಾಸ್ತವ ಭ್ರಮೆ ಮೂಡಿಸುವ ವಿಧಾನಕ್ಕೆ ಬೆನ್ನುಮಾಡಿ ಚಪ್ಪಟೆ ವರ್ಣಲೇಪ, ಮೈವಳಿಕೆ, ರೂಪ (ಫಾರ್ಮ್)ಗಳಿಗೆ ಮಹತ್ವ ನೀಡಿದ. ಎಂದರೆ ಅವನಿಗೆ ಕಲೆಯ ಆಂತರಿಕ ಮೌಲ್ಯ ಮುಖ್ಯವಾಯಿತು, ನೈಜ ನಿರೂಪಣೆಯಲ್ಲ. ಶಿಲ್ಪಿಗಳೂ ವಾಸ್ತವತೆಯಿಂದ ಕೃತಿಯ ರಾಶಿ, ತೆರಪು, ಚಲನಶೀಲತೆಗಳ ಕಡೆ ಮನತೆತ್ತರು. ಇವೆಲ್ಲ ಒಮ್ಮೆಗೇ ಆದುದಲ್ಲ. ಅನೇಕ ಚಳವಳಿಗಳ ಪರಿಣಾಮ. ಕ್ರಿಯೆ ಪ್ರತಿಕ್ರಿಯೆ, ಸಿದ್ಧಾಂತ ಪ್ರತಿಸಿದ್ಧಾಂತಗಳ ಪರಿಣಾಮವಾಗಿ ಮೂಡಿಬಂದುವು. ಇವೆಲ್ಲ ಭಾರತದಲ್ಲೂ ಪ್ರಭಾವ ಬೀರಿದುವು. ಅಲ್ಲಿಯ ಕಾಲಾನುಕ್ರಮವಾಗಿ ನಡೆದ ಬದಲಾವಣೆ, ಬೆಳವಣಿಗೆಗಳು ಭಾರತದ, ಕರ್ನಾಟಕದ ಕಲಾವಿದರಿಗೆ ತೆರೆದುಕೊಂಡಿದ್ದುವು. ಕಾಲದುದ್ದಕ್ಕೂ ಬಾಹ್ಯ ನೈಜ ನಿರೂಪಣೆಗೆ ಮಹತ್ವ ಕೊಡದಿದ್ದ ನಮ್ಮ ಕಲಾವಿದರೂ ಸ್ವಲ್ಪಕಾಲ ನೈಜಚಿತ್ರಣಕ್ಕೆ ಮನಸೋತು ರಚನೆ ಮಾಡಿದರು. ಮುಂದಿನ ಪೀಳಿಗೆ ಅದರ ಸೀಮಿತತೆ ಬಗ್ಗೆ ಎಚ್ಚರಗೊಂಡರು. ಹೊಸ ಪ್ರಯೋಗಗಳಿಗೆ ತೊಡಗಿದರು. ಇಂದು ನಮ್ಮಲ್ಲಿ – ದಿನನಿತ್ಯ ಜೀವನದ ಗುಣಲಕ್ಷಣಗಳನ್ನು ಸೆರೆಹಿಡಿಯುವ ಅಮೆರಿಕಾದಿಂದ ತೊಡಗಿದ 'ಸಂಭವ' (ಹ್ಯಾಪನಿಂಗ್ಸ್) ಕಲೆಯೂ ನಡೆಯುತ್ತಿದೆ.

ಇವೆಲ್ಲ ಬೆಳವಣಿಗೆಗಳಿಗೆ ಹತ್ತೊಂಬತ್ತನೇ ಶತಮಾನದಲ್ಲಿ ಪ್ರಾರಂಭವಾದ ಕಲಾಶಾಲೆಗಳು ಬಾಗಿಲು ತೆರೆದುವು. ೧೮೫೦ರಲ್ಲಿ ಮುಂಬಯಿಯಲ್ಲಿ ತಾಂತ್ರಿಕ ಶಾಲೆ ಪ್ರಾರಂಭ. ಮುಂದೆ ೧೮೭೦ರ ದಶಕದಲ್ಲಿ, ಜೆ.ಜೆ. ಕಲಾಶಾಲೆಯಾಗಿ ಮಾರ್ಪಟ್ಟಿತು. ಇದಕ್ಕೆ ಬ್ರಿಟನ್ನಿನ ರಾಯಲ್ ಅಕಾಡೆಮಿ ಮಾದರಿಯಾಯಿತು. ಅಕಾಡೆಮಿಕ್ ಕಲಾಶಿಕ್ಷಣ ನೀಡುವ ಉದ್ದೇಶ. ೧೮೫೦ರಲ್ಲಿ ಮದ್ರಾಸಿನಲ್ಲಿ, ೧೮೫೪ರಲ್ಲಿ ಕಲ್ಕತ್ತಾದಲ್ಲಿ ಶಾಲೆಗಳು ಪ್ರಾರಂಭವಾದುವು. ಮೈಸೂರಿನಲ್ಲಿ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆ ತಡವಾಗಿ ೧೯೧೩ರಲ್ಲಿ ಪ್ರಾರಂಭವಾಯಿತು. ಇಲ್ಲೆಲ್ಲ ಪ್ರಾರಂಭದಲ್ಲಿ, ಇಪ್ಪತ್ತನೇ ಶತಮಾನದ ಪ್ರಾರಂಭದವರೆಗೂ ತೈಲವರ್ಣ, ಜಲವರ್ಣ, ತಂತ್ರಗಳು, ನೈಜಚಿತ್ರಣ ವಿಧಾನ, ನಿಸರ್ಗದೃಶ್ಯ, ವ್ಯಕ್ತಿಚಿತ್ರ, ಸ್ಟಿಲ್‌ಲೈಫ್, ಕಣ್ಣೆಲೆ (ಪರ್‌ಸ್ಪೆಕ್ಟಿವ್), ನೆಳಲು-ಬೆಳಕು ಪರಿಣಾಮಗಳು, ಮಾನವಶರೀರ ರಚನೆ ಇತ್ಯಾದಿ ಶಿಕ್ಷಣ ನೀಡಲಾಗುತ್ತಿತ್ತು. ಭಾರತೀಯತೆ, ಸ್ವಾತಂತ್ರ್ಯ ಹೋರಾಟದ ಕಾವು ಏರಿದಂತೆ ಭಾರತೀಯತನದ ಹುಡುಕಾಟಕ್ಕೂ ತೊಡಗಿತು. ಆ ಹಿನ್ನೆಲೆಯಲ್ಲಿ ಭಾರತೀಯ ಕಲಾಪರಂಪರೆಯ ಅರಿವು ಮೂಡಿಸಿದವರು ಇ. ಬಿ. ಹ್ಯಾವೆಲ್, ಆನಂದಕುಮಾರಸ್ವಾಮಿ, ಹೆನ್ರಿಕ್ ಝಿಮ್ಮರ್. ಇಪ್ಪತ್ತನೆಯ ಶತಮಾನದಲ್ಲಿ ಶಿವರಾಮಮೂರ್ತಿ, ಓ. ಸಿ. ಗಂಗೂಲಿ, ಮೋತಿಚಂದ್ರ, ಮುಲ್ಕ್‌ರಾಜ್ ಆನಂದ್ ಆ ಪರಂಪರೆ ಮುಂದುವರಿಸಿದರು. ಸಾಂಸ್ಕೃತಿಕ ಬೇರುಗಳ ಹುಡುಕಾಟ ಮುಂಬಯಿ, ಕಲ್ಕತ್ತಾ ಕಲಾವಿದರ ಮೇಲೆ ಅಜಂತಾ ಚಿತ್ರ ಸಂಪ್ರದಾಯ ಪ್ರಭಾವವಾಯಿತು. ಬಂಗಾಲಿ ಪಂಥ ರೂಪುತಳೆದದ್ದು ಇವೆಲ್ಲದರ ಪ್ರಭಾವದಿಂದ. ರವಿವರ್ಮ ಈ ವಲಯದಿಂದ ಹೊರಗಿದ್ದರೂ ಭಾರತಾದ್ಯಂತ ಪ್ರಭಾವ ಬೀರಿದ ಕಲಾವಿದ. ಪುರಾಣ, ಮತೀಯ ವಸ್ತುಗಳ ವೈಭವೀಕರಣ, ನಾಟಕೀಯತೆ, ನೈಜಚಿತ್ರಣ, ಓಲಿಯೋಗ್ರಾಫ್ ಪ್ರತಿಕೃತಿಗಳು (ಅವನ ಕೃತಿಗಳು) ಇತ್ಯಾದಿ ಶ್ರೀಮಂತ, ಸಾಮಾನ್ಯ ವರ್ಗಭೇದವಿಲ್ಲದೆ ಪ್ರಭಾವ ಬೀರಿದುವು. ಮುಘಲ್, ರಾಜಸ್ಥಾನಿ ಚಿತ್ರಗಳ ಅಧ್ಯಯನದಿಂದ ವಾಸ್ತವತೆಯಿಂದ ಭಿನ್ನವಾದ ಭಾವನಾತ್ಮಕ ಕಲ್ಪನೆ, ರೂಪಕತೆ, ಸಾಂಕೇತಿಕತೆ, ಜಪಾನೀ ವಾಷ್‌ತಂತ್ರದ ಸ್ವೀಕರಣ, ಚೀನಾದ ತಂತ್ರ ವಿಧಾನವಾದ ಬಹುದಿಗಂತಗಳ ಚಾಚುವಿನ್ಯಾಸ, ರೇಖಾತ್ಮಕತೆ ಮುಂತಾದವು ವಿಶಿಷ್ಟ (ಅವನೀಂದ್ರರು, ನಂದಲಾಲ್ ಬಸು ಮುಂತಾದವರು). ಇದಕ್ಕಿಂತ ಭಿನ್ನ, ವಿಶಿಷ್ಟ ವಿಧಾನಗಳನ್ನು ಕಲಾವಿದರು ಅನುಸರಿಸಿದರು. ಮೂಲ ಚಳವಳಿಗಿಂತ ಭಿನ್ನವಾದ ಕ್ಯೂಬಿಸಂ (ಗಗನೇಂದ್ರನಾಥ ಠಾಕೂರ್) ದೃಶ್ಯಾತ್ಮಕ ಗ್ರಹಿಕೆಗೆ ಪ್ರಾಧಾನ್ಯವಿತ್ತಿತ್ತು. ಕಾಲಿಘಾಟ್ ಮುಂತಾದ ಜನಪದ ಕಲೆಗಳಿಂದ ಪ್ರಭಾವಗೊಂಡ ಜಾಮಿನಿ ರಾಯ್ ವಿಶಿಷ್ಟ ಶೈಲಿ ರೂಪಿಸಿಕೊಂಡರು. ಜೈನ ಹಸ್ತಪ್ರತಿ ಚಿತ್ರಗಳಿಂದಲೂ ಪ್ರಭಾವಿತರಾದರು. ಸರಳರೂಪ,

ದಪ್ಪಗಟ್ಟಿ ಬಾಗುವ ರೇಖೆಗಳು, ಚಪ್ಪಟೆ ವಿನ್ಯಾಸ, ವಿಶಾಲ ಕಣ್ಣುಗಳು, ಬಾದಾಮಿ ಆಕಾರದ ಮುಖಗಳು ಇತ್ಯಾದಿ. ಇಂದಿಗೂ ಅವರ ಪ್ರಭಾವದಿಂದ ಕಾರ್ಖಾನೆಯಿಂದೆಂಬಂತೆ ಕಲಾಕೃತಿಗಳು ತಯಾರಾಗುತ್ತಿವೆ. ಅಮೃತಾ ಶೇರ್‌ಗಿಲ್ ಸಿಜಾನ್, ಗಾಗಿನ್, ಮತೀಸರ ಪ್ರಭಾವ ಅರಗಿಸಿಕೊಂಡು, ಅಜಂತಾ, ಚಿಕಣಿ ಚಿತ್ರಪರಂಪರೆಯ ಅಂಶಗಳನ್ನೂ ಮೈಗೂಡಿಸಿಕೊಂಡ ಭಾರತೀಯ ಅಂತಃಸತ್ವವುಳ್ಳ ಕೃತಿ ರಚಿಸಿದರು. ಮೌನ ವಾತಾವರಣ, ಅಚಲ ಚಿತ್ರಣಗಳು, ತೆರಪಿನ ಸುವ್ಯವಸ್ಥಿತ ವಿತರಣೆ ವಿಶೇಷ.

ಆದರೆ ಮೈಸೂರು ಚಾಮರಾಜೇಂದ್ರ ತಾಂತ್ರಿಕ ಶಾಲೆಯ ಕಲಾವಿಭಾಗದಲ್ಲಿ ಅಕಾಡೆಮಿಕ್ ಶಿಕ್ಷಣ ನೀಡಲಾಗುತ್ತಿತ್ತು. ಇಲ್ಲಿನ ಶಿಕ್ಷಣಾನಂತರ ಉನ್ನತ ವ್ಯಾಸಂಗಕ್ಕೆ ಶಾಂತಿನಿಕೇತನ (ಕೆ. ವೆಂಕಟಪ್ಪ), ಜೆ.ಜೆ. ಕಲಾಶಾಲೆ (ಪಾವಂಜೆ, ಬಸವಯ್ಯ)ಗಳಿಗೆ ಶಿಷ್ಯವೇತನ ನೀಡಿ ಕಳುಹಿಸುವ ವ್ಯವಸ್ಥೆ ಇತ್ತು. (ಪಾವಂಜೆ ಜರ್ಮನಿಗೆ, ಕೆ. ಕೆ. ಹೆಬ್ಬಾರ್ ಜೆ. ಜೆ. ಅಲ್ಲದೆ ಇಂಗ್ಲೆಂಡ್ ಪ್ಯಾರಿಸ್‌ಗೆ ಹೋಗಿ ಉನ್ನತವ್ಯಾಸಂಗ ನಡೆಸಿಬಂದರು). ಉತ್ತರ ಕರ್ನಾಟಕದ ಕಲಾವಿದರಿಗೆ ಜೆ. ಜೆ. ಕಲಾಶಾಲೆ, ದಂಡಾವತಿ ಮಠ ಅವರ ನೂತನ ಕಲಾಶಾಲೆಗಳು ಶಿಕ್ಷಣ ತಾಣಗಳಾದುವು. ಆಗಿನ ನವೋದಯ ಕಾಲದ ಕಲಾವಿದರು ಬಹುವಾಗಿ ವಾಸ್ತವವಾದೀ ಚಿತ್ರಣಕ್ಕೆ ಒಲಿದವರು. ವ್ಯಕ್ತಿಚಿತ್ರ ರಚನೆ (ಕೇಶವಯ್ಯ, ಸುಬ್ಬುಕೃಷ್ಣ ವೈ. ನಾಗರಾಜು, ನರಸಿಂಹಸ್ವಾಮಿ, ಎಸ್. ಆರ್. ಅಯ್ಯಂಗಾರ್, ವಿ. ಆರ್. ರಾವ್, ದಂಡಾವತಿ ಮಠ ಮುಂತಾದವರು), ನಿಸರ್ಗ ದೃಶ್ಯಗಳು (ಕೆ. ವೆಂಕಟಪ್ಪ, ಎಂ. ಎಸ್. ಚಂದ್ರಶೇಖರ್, ಟಂಕಸಾಲೆ, ಇನ್ನೂ ಅನೇಕರು), ಸ್ಟಿಲ್‌ಲೈಫ್, ಜಲವರ್ಣ, ತೈಲವರ್ಣ ಚಿತ್ರಗಳು ಜನಪ್ರಿಯವಾಗಿದ್ದುವು. ಸ್ಥಳೀಯ ದೃಶ್ಯಗಳು, ಹಳ್ಳಿಗಾಡಿನ ಜೀವನ ಪ್ರತಿಪಾದನೆ, ಮೈಸೂರಿನವರಿಗೆ ರಾತ್ರಿದೃಶ್ಯಗಳ, ದೀಪಗಳ ಬೆಳಕಿನ ಮೋಡಿಗಳ ಚಿತ್ರಣ ಪ್ರಿಯವಾಗಿತ್ತು. ಎಫ್.ಎಂ. ಸೂಫಿ ವನ್ಯಮೃಗಗಳ ಚಿತ್ರಣ, ಪರ್ಶಿಯನ್ ಕಲಾ ಪ್ರಭಾವದಿಂದ ಇನ್‌ಲೇ ರಚನೆಗಳತ್ತ ಒಲಿದರು. ದಸರಾ ವಸ್ತು ಪ್ರದರ್ಶನದಲ್ಲಿ ಆಗ್ಗೆ (ಕಲಾಗ್ಯಾಲರಿಗಳಿಲ್ಲದಿದ್ದ ಕಾಲದಲ್ಲಿ) ಕಲಾಪ್ರದರ್ಶನ ಒಂದು ಭಾಗವಾಗಿದ್ದಿತು. ಹೊರಗಡೆಯ ಚಿತ್ರಗಳು, ಪ್ರಯೋಗಗಳು ಗಮನಾರ್ಹವಾಗಿದ್ದರೂ ಆಗಿನವರ ಒಲವು ಸೌಂದರ್ಯ, ರಮ್ಯತೆ, ಆದರ್ಶ ಮುಂತಾದವುಗಳ ಕಡೆಗೇ ಇದ್ದಿತು.

ಸಮಾನಾಂತರವಾಗಿ ಎಂಬಂತೆ ಸಾಂಪ್ರದಾಯಿಕ ಶಿಲ್ಪಕಲೆ, ಮೈಸೂರು ಸಂಪ್ರದಾಯ ಚಿತ್ರಗಳೂ ರಚನೆಯಾಗುತ್ತಿದ್ದುವು. ಶಿಲ್ಪಿ ಸಿದ್ಧಲಿಂಗಸ್ವಾಮಿಗಳ ದೇವರು, ದೇವತಾ ವಿಗ್ರಹಗಳು, ಮೂರ್ತಿಗಳು ಪರಂಪರೆಯನ್ನು ಮುಂದುವರೆಸುವ ಬಗೆಯವು. ಅರಮನೆಯ ಪ್ರೋತ್ಸಾಹವಿತ್ತು. ಮುಂದೆ ಸುಬ್ರಹ್ಮಣ್ಯರಾಜು ಸಾಂಪ್ರದಾಯಿಕ ಚಿತ್ರಕಲೆಯನ್ನು ಅನೇಕರಿಗೆ ಕಲಿಸಿ, ಇಂದಿಗೂ ಉಳಿಯುವಂತೆ ಮಾಡಿದ್ದಾರೆ. (ಸಾಂಪ್ರದಾಯಿಕ ಎಂದರೂ ಆಧುನಿಕ ಅಂಶಗಳೂ ನುಣಿಚಿರುವುದೂ ಉಂಟು.)

- ೩ -

೧೯೪೦ರ ದಶಕದ ನಂತರ ಅನೇಕ ಬದಲಾವಣೆಗಳಾದುವು. ಬಂಗಾಲಿಪಂಥದ ಶೈಲೀಕೃತ, ನೀಳ, ಕೃಶ ಆಕೃತಿಗಳ ಬಗ್ಗೆ ಪ್ರತಿಭಟಿಸುವಂತೆ ಕಲಾವಿದರ ತಂಡಗಳು ರೂಪುಗೊಳ್ಳತೊಡಗಿದುವು. ಕಲ್ಕತ್ತಾ ಗ್ರೂಪ್ (೧೯೪೩), ಪ್ರೋಗ್ರೆಸಿವ್ ಗ್ರೂಪ್ (೧೯೪೮), ಬಾಂಬೆ ಗ್ರೂಪ್ (೧೯೫೭), ದೆಹಲಿ ಶಿಲ್ಪ ಚಕ್ರ (೧೯೪೯) ಇತ್ಯಾದಿ. ೫೦ರ ದಶಕದ ಕೊನೆಯಲ್ಲಿ ದೆಹಲಿ, ಮುಂಬಯಿಯ ಎಂಟು ಕಲಾವಿದರು ಕೂಡಿ ಪ್ರದರ್ಶನವಿತ್ತರು. ಕರ್ನಾಟಕದಲ್ಲಿ ೬೦ರ ದಶಕದಲ್ಲಿ ನಾವು ನಾಲ್ವರು (ಹಡಪದ್, ಮುನ್ನೋಳಿ, ಪಟೇಲ್, ಹುಬ್ಳೀಕರ್), ಪ್ರಗತಿಪರ ಕಲಾವಿದರು (ಅನಂತ ಮೈಸೂರು ಆರ್ಟ್ ಕೌನ್ಸಿಲ್ – ಜಿ. ಎಸ್. ಶೆಣೈ, ಭಾಸ್ಕರರಾವ್ ಮುಂ.), ಸೌತ್ ಕೆನರಾ ಆರ್ಟ್ ಕೌನ್ಸಿಲ್, ಕರ್ನಾಟಕ ಪೇಂಟರ್ಸ್, ರಿದಂ, ಸಂಯೋಜಿತ ಇತ್ಯಾದಿ. ಈ ಕಲಾತಂಡಗಳು ಭಿನ್ನ ಶೈಲಿ, ದೃಷ್ಟಿಯ ಕಲಾವಿದರಿಂದ ಕೂಡಿದ್ದರೂ ಅದನ್ನು ಉಳಿಸಿಕೊಂಡೇ ಕಲಾರಚನೆ ಮಾಡುತ್ತ ಜೊತೆಗಿರುವ ಉದ್ದೇಶವುಳ್ಳವಾಗಿದ್ದುವು. ದೇವದೇವತೆಗಳ ವಸ್ತುಗಳಲ್ಲೇ ನಿರತರಾಗಿರುವ ಕಾಲ ಕಳೆಯಿತು. ಕಲಾವಿದ ತನ್ನ ಸುತ್ತಲ ಆಗುಹೋಗುಗಳತ್ತ ಕುರುಡಾಗುವಂತಿಲ್ಲ. ರಾಜಕೀಯ ತತ್ತ್ವ ಸಿದ್ಧಾಂತಗಳಿಗೆ ಬದ್ಧವಾಗದೆಯೂ ಮಾನವೀಯ ಗುಣ ಮೌಲ್ಯಗಳನ್ನು ತೋರಲು ಸಾಧ್ಯ ಎಂಬುದು ಅವುಗಳ ಗುರಿಯಾಗಿತ್ತು. ಹೀಗಾಗಿ, ಇಂತಹ ತಂಡಗಳಲ್ಲಿ ಪ್ರದೋಶ್‌ದಾಸ್ ಗುಪ್ತ, ಬಿನೋದ್ ಬಿಹಾರಿ ಮುಖರ್ಜಿ, ದೇ. ರಾ. ಚೌಧುರಿ, ಇತ್ತ ಆರಾ, ಸೌಝಾ, ಹುಸೇನ್, ಬೇಂದ್ರೆ, ಅಲಮೇಲ್ಕರ್, ಕೆ. ಕೆ. ಹೆಬ್ಬಾರ್, ಚಾವ್ಡಾ, ಗೈತೊಂಡೆ ಮೊದಲಾದವರೆಲ್ಲ ಇದ್ದರು. ಹೆಬ್ಬಾರರು ದಿನನಿತ್ಯ ಬದುಕಿನ ವಿಷಯಗಳನ್ನು ಆರಿಸಿಕೊಂಡು ಅಪೂರ್ವ ಸಂಯೋಜನೆ, ವರ್ಣದಲ್ಲಿ ಮೈವಳಿಕೆಯ ವಿಶಿಷ್ಟ ಶೈಲಿ ರೂಪಿಸಿಕೊಂಡರು. ಅನಂತರ ಅಮೂರ್ತತೆಗೂ ಹೊರಳಿದರು. ಅವರ ರೇಖಾಚಿತ್ರಗಳೂ ವಿಶಿಷ್ಟ.

೧೯೬೦ರ ದಶಕದಲ್ಲಿ ಮದ್ರಾಸಿನ ಕಲಾಶಾಲೆಯಲ್ಲಿ ದೇವೀಪ್ರಸಾದ್ ರಾಯ್ ಚೌಧುರಿ ನಂತರ ಪಣಿಕ್ಕರ್ ಬಂದರು. ಕಲಾವಿದರು ನೇರವಾಗಿ ಜನರಿಗಾಗಿ ಕಲಾ ಪ್ರದರ್ಶನ ಮಾಡುವುದರಿಂದ ಪ್ರಾರಂಭಿಸಿದ್ದು, ೧೯೬೭ರ ಚೋಳ ಮಂಡಲ್ ಕಲಾಗ್ರಾಮ ಕಲ್ಪನೆ, ಸ್ಥಾಪನೆಗೆ ಕಾರಣವಾಯಿತು. ಎಸ್. ಜಿ. ವಾಸುದೇವ್ ಕಲಾಮಂಡಲದಲ್ಲಿದ್ದವರು. ವಿಶಿಷ್ಟ ಚಿತ್ರಶೈಲಿ, ಉಬ್ಬುಶಿಲ್ಪ ಫಲಕಶೈಲಿ, ಭಿತ್ತಿಚಿತ್ರ ವಿಧಾನ ರೂಪಿಸಿಕೊಂಡವರು.

೧೯೫೦, ೬೦ರ ದಶಕಗಳು ಕಲೆಯ ಕ್ಷೇತ್ರದಲ್ಲಿ ಹೊಸ ಬೆಳವಣಿಗೆಗಳನ್ನು ಕಂಡವು. ಕಲಾ ಚಟುವಟಿಕೆ ಹಿಂದೆಂದಿಗಿಂತ ವ್ಯಾಪಕ ಹಾಗೂ ವೈವಿಧ್ಯವಾಗಲು ಕೆಲವು ಘಟನೆಗಳು, ಸಂಘಟನೆಗಳು ಕಾರಣವಾದುವು. ೧೯೫೦ರಲ್ಲಿ ಬರೋಡದಲ್ಲಿ ಎಂ. ಎಸ್. ವಿಶ್ವವಿದ್ಯಾಲಯದಲ್ಲಿ ಕಲಾವಿಭಾಗ ಪ್ರಾರಂಭವಾಯಿತು. ಅಧ್ಯಾಪಕ ಕಲಾವಿದರ ಪ್ರಭಾವ, ವಿದ್ಯಾರ್ಥಿಗಳ ಮೇಲೂ ಆಗಿ ವಿಭಿನ್ನ ಕಲಾದೃಷ್ಟಿಗಳಿಗೆ ಅವಕಾಶವಾಯಿತು. ಪ್ರಾರಂಭದಲ್ಲಿ ಕ್ಯೂಬಿಸಂ ಪ್ರಭಾವಿತ ಚಿತ್ರರಚನೆ (ಬೇಂದ್ರೆ), ಶಿಲ್ಪರಚನೆ (ಶಂಕೋ ಚೌಧುರಿ), ಮುಂದೆ ೬೦ರ ದಶಕದಲ್ಲಿ, ಅಮೂರ್ತ ರಚನೆಗಳತ್ತ ಒಲವು (ಕೆ. ಜಿ. ಸುಬ್ರಮಣಿಯನ್, ಜೆ. ರಾಮ್ ಪಟೇಲ್, ಗುಲಾಂ ಶೇಖ್) ಕಾಣಬಹುದು. ಮುಂದಿನ ದಶಕಗಳಲ್ಲಿ ಬರೋಡ ಕಲಾವಿದರ ಕಾಶಿ ಎಂಬಂತೆ ಆಯಿತು. ಅಲ್ಲಿ ಶಿಕ್ಷಣ ಪಡೆದವರು ವಿದೇಶಗಳಿಗೆ ಉನ್ನತ ವ್ಯಾಸಂಗಕ್ಕೆ ಹೋಗಿ ಬಂದರು, ಪ್ರಸಿದ್ಧ ಕಲಾವಿದರಾದರು. ೧೯೫೪ರಲ್ಲಿ ದೆಹಲಿಯಲ್ಲಿ ನ್ಯಾಷನಲ್ ಗ್ಯಾಲರಿ ಆಫ್ ಮಾಡರ್ನ್ ಆರ್ಟ್ ಪ್ರಾರಂಭವಾಯಿತು. ೧೯೫೪ರಲ್ಲೇ ಕೇಂದ್ರ ಲಲಿತಕಲಾ ಅಕಾಡೆಮಿಯ ಪ್ರಾರಂಭ. ದೇವೀಪ್ರಸಾದ್ ರಾಯ್ ಚೌಧುರಿ ಅದರ ಪ್ರಥಮ ಅಧ್ಯಕ್ಷರು. ೧೯೫೫ರಲ್ಲಿ ಮೊದಲ ರಾಷ್ಟ್ರೀಯ ಕಲಾಪ್ರದರ್ಶನ. ಆ ಪದ್ಧತಿ ಇಂದಿಗೂ ಮುಂದುವರೆದಿದೆ. ಟ್ರಿನಾಲೆ ಪರಂಪರೆ ಪ್ರಾರಂಭ ೧೯೬೮ರಲ್ಲಿ. ಇವೆಲ್ಲ ಕಲಾ ಚಟುವಟಿಕೆಗೆ, ಕಲಾವಿದರಿಗೆ ಪ್ರೋತ್ಸಾಹದಾಯಕವಾದುವು.



ಕರ್ನಾಟಕದಲ್ಲಿ ೬೦ರ ದಶಕದಲ್ಲಿ ಚಿತ್ರಕಲಾ ಪರಿಷತ್ತು, ಕೆನ್ ಕಲಾಶಾಲೆ ಪ್ರಾರಂಭವಾದುವು. ಕರ್ನಾಟಕ ಲಲಿತಕಲಾ ಅಕಾಡೆಮಿಯೂ ಆರಂಭವಾಯಿತು. ಮುಂದೆ, ಖಂಡೇರಾವ್, ವಿ.ಜಿ. ಅಂದಾನಿ ಅವರಿಂದ ಗುಲ್ಬರ್ಗಾದ ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಪ್ರಾರಂಭ. ಇಂದು ಗುಲ್ಬರ್ಗಾ ಸಹ ಕಲೆಯ ಕೇಂದ್ರವಾಗಿದೆ. ಧಾರವಾಡ, ಗದಗ, ಬಿಜಾಪುರ ಮುಂತಾದ ಸ್ಥಳಗಳಲ್ಲೂ ಕಲಾಶಾಲೆಗಳು ಪ್ರಾರಂಭವಾದುವು. ಕೆನ್ ಕಲಾಶಾಲೆಯಿಂದ ಹಡಪದ ಅವರು ಕಲೆ ಸಮಾಜಮುಖಿಯಾಗಬೇಕಾದ ಜಾಗೃತಿ ಮೂಡಿಸಿದರು. ಸುತ್ತಣ ನೋವು, ಸಂಕಟಗಳಿಗೆ ಸ್ಪಂದಿಸಿ ಕಲೆಯನ್ನು ಜನರತ್ತ ಒಯ್ದರು. ಕಲಾನಿಗೂಢತೆಯ ಭ್ರಮೆಯನ್ನು ಕಳಚಿದರು. ಕೆ. ಕೆ. ಹೆಬ್ಬಾರರು ರಾಜ್ಯ ಲಲಿತಕಲಾ ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಕೈಗೊಂಡ ಹೊಸ ಯೋಜನೆಗಳು ಕರ್ನಾಟಕದಲ್ಲಿ ಕಲೆ ವ್ಯಾಪಕವಾಗಿ ಬೆಳೆಯಲು ಕಾರಣವಾಯಿತು. ಕಾರ್ಯಾಗಾರಗಳು, ವಿದ್ಯಾರ್ಥಿವೇತನ, ಪ್ರದರ್ಶನಕ್ಕೆ ಸಹಾಯ ಇತ್ಯಾದಿ. ಹಲವು ಕಲಾವಿದರು ಶಾಂತಿನಿಕೇತನಕ್ಕೆ ಹೋಗಿ ಗ್ರಾಫಿಕ್‌ನಲ್ಲಿ ಉನ್ನತ ವ್ಯಾಸಂಗ ಮಾಡಿಬಂದರು. ಸಿ. ಚಂದ್ರಶೇಖರ್ ಮುಂತಾದವರಿಂದ ಗ್ರಾಫಿಕ್ ಕಲೆ ಬಗ್ಗೆ ಆಸಕ್ತಿ ಹರಡಿತು. ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಗ್ರಾಫಿಕ್ ಕಾರ್ಯಾಗಾರ, ೧೯೬೫, ೭೪, ೮೫ರಲ್ಲಿ ಕೇಂದ್ರ ಲಲಿತಕಲಾ ಅಕಾಡೆಮಿ ಗ್ರಾಫಿಕ್ ಕಾರ್ಯಾಗಾರ ನಡೆಸಿತು. ರೇಖಾ ರಚನೆಗಳಿಂದ ತೊಡಗಿದ್ದು, ಮುಂದೆ ಗ್ರಾಫಿಕ್‌ನಲ್ಲಿ ವರ್ಣಬಳಕೆ, ವರ್ಣಚಿತ್ರದಂತಹ ಮೈವಳಿಕೆಗಳ ಸಾಧ್ಯತೆಗಳನ್ನು ವಿಸ್ತರಿಸಲಾಯಿತು. ಅಮೂರ್ತ ರಚನೆಗಳೂ ಪ್ರಯೋಗಗೊಂಡವು. ಹೊಸತಲೆಮಾರಿನ ತರುಣ ಕಲಾವಿದರು ಹೊಸ ಪ್ರಯೋಗಗಳಿಗೆ ತೊಡಗಿದರು.

ಪಾಶ್ಚಾತ್ಯ ದೇಶಗಳ ಪ್ರಭಾವವಿದ್ದರೂ ಅದು ಸರ್ವವ್ಯಾಪಿ, ಪೂರ್ಣ ಅನುಕರಣಶೀಲ ಅಲ್ಲ. ಆರೇಳು ದಶಕಗಳಲ್ಲಿ ಇಂಪ್ರೆಷನಿಸಂ (ರುಮಾಲೆ), ಎಕ್ಸ್‌ಪ್ರೆಷನಿಸಂ, ಸರ್ರಿಯಲಿಸಂ,

ಅಮೂರ್ತ ಕಲೆಗಳ ಹಲವಾರು ಅಂಶ, ವಿಧಾನ, ತಂತ್ರಗಳನ್ನು ಸ್ವೀಕರಿಸಿದರೂ ಭಾರತೀಯ ಹಿನ್ನೆಲೆಯಲ್ಲಿ ಸಮನ್ವಯ ಸಾಧಿಸಲಾಯಿತು. ಕಲಾವಿದರು ಇಲ್ಲಿಗೆ ಒಗ್ಗುವಂಥದನ್ನು ಸ್ವೀಕರಿಸಿದರು ಎನಿಸುತ್ತದೆ. ಏಕೆಂದರೆ, ಪಾಶ್ಚಾತ್ಯರ ಅಲ್ಪಕಾಲಾವಧಿಯಲ್ಲಿ ಕಾಣಿಸಿಕೊಂಡು ಮರೆಯಾದ ಫಾವಿಸಂ, ಫ್ಯೂಚರಿಸಂ, ದಾದಾ, ಪಾಪ್ ಮತ್ತು ಆಪ್ ಕಲೆಗಳಾಗಲೀ ಅಥವಾ ಚಲನಶೀಲ ಕಿನೆಟಿಕ್ ಆರ್ಟ್ ಆಗಲಿ ಪ್ರಭಾವ ಬೀರಲಿಲ್ಲ. ಕಾನ್ಸೆಪ್ಚುಯಲ್ ಆರ್ಟ್ ೮೦ರ ದಶಕದ ನಂತರ ಹರಡಿತು.

ಚಿತ್ರಕಲೆಗಿಂತ ಶಿಲ್ಪಕಲೆ ನಿಧಾನವಾಗಿ ಸಾಂಪ್ರದಾಯಿಕ ನಿರ್ಬಂಧಗಳಿಂದ ಮುಕ್ತವಾಯಿತು. ಉಪಯುಕ್ತತೆ, ಸೂಚ್ಯತೆಗಳಿಂದ ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ಮುಕ್ತವಾಯಿತು. ಮತೀಯ ಪ್ರಭಾವದಿಂದಲೂ ಹೊರಬಂದಿತು. ಸಾಂಪ್ರದಾಯಿಕ ಪ್ರತೀಕಾತ್ಮಕತೆಯಿಂದಲೂ ಸರಿಯಿತು. ಶಿಲ್ಪ ಅದರ ರಚನೆ, ಸೃಜನೆಯ ಕಾರಣಕ್ಕಾಗಿಯೇ ಮಹತ್ವ ಪಡೆಯಿತು. ಮೂರು ಆಯಾಮದ ತೆರಪನ್ನು ಆಕ್ರಮಿಸುವ ರಾಶಿ, ಗಾತ್ರ, ಆಕಾರ, ಮೇಲ್ಮೈಯ ಮೈವಳಿಕೆ, ಗ್ರಹಿಕೆಯ ಅನುಭವ, ಅಸ್ತಿತ್ವಗಳಿಂದ ಶಿಲ್ಪದ ಗುಣಮೌಲ್ಯ ಎಂಬ ದೃಷ್ಟಿ ಮುಖ್ಯವಾಯಿತು. ಆಧುನಿಕ ಶಿಲ್ಪ ರೂಪ ನಿರ್ದಿಷ್ಟತೆಯಲ್ಲೇ ಸಂವೇದನೆ, ಅನುಭೂತಿಗಳನ್ನು ವ್ಯಕ್ತಪಡಿಸುವಂಥದು. ವಸ್ತು/ವಿಷಯವನ್ನು ನಿರಾಕರಿಸಿ ಅಮೂರ್ತವಾಗುತ್ತಿರುವುದೂ ವಾಸ್ತವ.

ಪಾರಂಪರಿಕ ಮೂರ್ತಿಶಿಲ್ಪ, ಆಲಂಕಾರಿಕ ಶಿಲ್ಪಗಳು ಒಂದು ಕಡೆ ಮುಂದುವರಿಯುತ್ತಿದ್ದಂತೆ (ಮರ, ಶಿಲೆ, ದಂತ, ಮಣ್ಣು ಇತ್ಯಾದಿ), ಕಳೆದ ಶತಮಾನದ ಪ್ರಾರಂಭದಲ್ಲಿಯೇ ರೂಪಶಿಲ್ಪವೂ (ಮಾಡೆಲಿಂಗ್) ರೂಢಿಗೆ ಬಂದಿತು, ಮೈಸೂರು ಅರಮನೆಯ ಪ್ರೋತ್ಸಾಹದಿಂದ. ಅದುವರೆಗೆ ವಿದೇಶೀ ಶಿಲ್ಪಿಗಳು, ಮುಂಬೈ ಶಿಲ್ಪಿಗಳು ಅಂತಹ ಶಿಲ್ಪ, ಪ್ರತಿಮೆ ಮುಂತಾಗಿ ರಚಿಸುತ್ತಿದ್ದರು (ಮ್ಹಾತ್ರೆ, ವಾಗ್). ಕೆ. ವೆಂಕಟಪ್ಪನವರು ವರ್ಣಶಿಲ್ಪಿ ಮಾತ್ರವಲ್ಲ, ಪ್ಲಾಸ್ಟರ್ ರಚನೆಗಳಲ್ಲೂ ಸಿದ್ಧಹಸ್ತರು (ಇಂದು ಫೋಟೋ ರಿಯಲಿಸಂ ಎಂದು ಕರೆಯುವ ನೈಜಸೂಕ್ಷ್ಮ ಚಿತ್ರ-ರಚನೆಗಳನ್ನೂ ಮಾಡಿದ್ದಾರೆ). ವ್ಯಕ್ತಿಶಿಲ್ಪಗಳು, ಉಬ್ಬುಶಿಲ್ಪ ಫಲಕಗಳನ್ನು ಪ್ಲಾಸ್ಟರಿನಲ್ಲಿ ರಚಿಸಿದ್ದಾರೆ. ಕಾವ್ಯಾತ್ಮಕತೆ ಆ ರಚನೆಗಳ ವಿಶೇಷ. ಬಸವಯ್ಯನವರು ಸಹ ರೂಪಶಿಲ್ಪ ಪರಿಣತರಾಗಿದ್ದರು. ಆಧುನಿಕತೆಯ ನಾಂದಿ ಪೊನ್ನಪ್ಪ ರಾಜಾರಾಮ್‌ರಿಂದಾಯಿತು. ಒಣಮರಗಳ, ಟೊಂಗೆಗಳ ಸಹಜ ರೂಪಗಳನ್ನೇ ಬಳಸಿ ಶಿಲ್ಪ ಸೃಷ್ಟಿಸಿದರು. ಒಣಕೊರಡುಗಳು ಕಲೆಯಾಗಿ ಅರಳಿದುವು. ಎ. ಸಿ. ಎಚ್. ಆಚಾರ್ಯರೂ ಪ್ಲಾಸ್ಟರಿನ ವ್ಯಕ್ತಿಶಿಲ್ಪ ರಚಿಸಿದ್ದಾರೆ. ಎನ್. ಎಚ್. ಕುಲಕರ್ಣಿ ಮತ್ತು ಕೆ. ಪಿ. ಶಿವಪ್ರಸಾದರು ಬೃಹತ್ ಸ್ಮಾರಕಶಿಲ್ಪ ರಚಿಸಿದ್ದಾರೆ. ಕುಲಕರ್ಣಿ ಭಿಲೈನಲ್ಲಿ ಬೃಹತ್ ಉಕ್ಕಿನ ಸ್ಥಾವರವನ್ನು ನಿರ್ಮಿಸಿದರೆ, ಶಿವಪ್ರಸಾದರು ಕುಪ್ಪಳಿಯ ಕವಿ ಶೈಲದಲ್ಲಿ ಕುವೆಂಪು ಅವರ ಸ್ಮಾರಕವಾಗಿ ಒರಟಾದ ಅಲಂಕಾರರಹಿತ ಬೃಹತ್ ಶಿಲಾದ್ವಾರಗಳನ್ನು ಸೃಷ್ಟಿಸಿದ್ದಾರೆ (ಲಂಡನ್ನಿನ ಸ್ಟೋನ್ ಹಿಂಜಸ್ ನೆನಪಿಸುವಂತೆ). ಕುಲಕರ್ಣಿಯವರ ಅಮೂರ್ತ ರಚನೆಗಳೂ ಇವೆ. ಅಪ್ಪುಕುಟ್ಟನ್ ಆಚಾರಿ, ವೆಂಕಟಾಚಲಪತಿ ನವ್ಯಶಿಲ್ಪಗಳನ್ನೂ, ಪರಿಸರ ನಿರ್ದಿಷ್ಟ ಶಿಲ್ಪಗಳನ್ನೂ ರಚಿಸಿದರು. ೧೯೮೦ರಲ್ಲಿ, ಟೆರ್ರೊ ಆರ್ಟ್ ಕ್ಯಾಂಪ್ ಬೆಂಗಳೂರಿನಲ್ಲಿ ನಡೆಯಿತು. ಅನಂತರದಲ್ಲಿ ಚಿತ್ರಕಲಾವಿದರೂ ಶಿಲ್ಪರಚನೆಗೆ ತೊಡಗಿದರು. ಎಲ್. ಪಿ. ಅಂಚನ್‌ರದು ಕೂಬಿಸಂ ಪ್ರಭಾವಿತರಚನೆಗಳು. ಜಾನಪದ ಸತ್ವವನ್ನು ಶಿಲ್ಪಿಗಳು ಬಳಸಿಕೊಂಡರು. ಆಧುನಿಕ ಬೆಸುಗೆ ಶಿಲ್ಪಗಳೂ ರಚಿತವಾದುವು. ಅಲ್ಲದೇ ನೋವು ಸಂಕಟಗಳ (ಯೂಸುಫ್ ಅರಕ್ಕಲ್, ಶ್ಯಾಮಸುಂದರ್), ಅನ್ಯಾಯದ ವಿರುದ್ಧ ಪ್ರತಿಭಟನೆಯ (ಜಾನ್ ದೇವರಾಜ್), ವ್ಯಂಗ್ಯ ವಿಡಂಬನೆ ಬೆಡಗು ಸಂಭ್ರಮಗಳ (ಟೆರ್ರಾಕೋಟಾ – ಪುಷ್ಪಮಾಲಾ) ರಚನೆಗಳು ಸೃಷ್ಟಿಯಾದುವು. ವಿರೂಪವೂ ಉದ್ದೇಶ ಪೂರ್ವಕವಾಗಿತ್ತು. ಪರಿಕರ ಮಾಧ್ಯಮಗಳೂ ವೈವಿಧ್ಯಮಯ. ಮೃತ್ತಿಕೆ, ಸೆರಾಮಿಕ್, ಕಬ್ಬಿಣ, ಕಂಚು, ಗ್ರಾನೈಟ್‌ಶಿಲೆ (ಯೂಸುಫ್ ಅರಕ್ಕಲ್), ಫೈಬರ್‌ಗ್ಲಾಸ್, ಸಿಮೆಂಟ್, ಕಬ್ಬಿಣ ಕಂಬಿ ಇತ್ಯಾದಿ (ಬಾಲನ್ ನಂಬಿಯಾರ್) – ವಿಧಿಯಾಚರಣೆ ವಿನ್ಯಾಸಗಳನ್ನು ನೆನಪಿಸುವಂಥವು. ಸುಡಾವೆ ಮಣ್ಣಿನಿಂದ ವಿಶಿಷ್ಟ ರಚನೆಗಳಾದುವು (ಪುಷ್ಪಮಾಲಾ), ಲೋಹದಿಂದ ದ್ರವಗುಣ ಚಲನೆಯನ್ನು ಹೆಪ್ಪುಗಟ್ಟಿಸುವ ಕೃತಿಗಳು (ದೇಶಪಾಂಡೆ) ಇತ್ಯಾದಿ ತ್ಯಕ್ತ ವಸ್ತುಗಳೂ ಶಿಲ್ಪ ಮಾಧ್ಯಮವಾದುವು (ಉಮೇಶ್, ಬಂಟನೂರ್). ಇಂದು ಶಿಲ್ಪ ಅಂತಾರಾಷ್ಟ್ರೀಯ ಶೈಲಿಯತ್ತ ವಾಲುತ್ತಿದೆ.

ಭಿತ್ತಿಚಿತ್ರ, ಭಿತ್ತಿಶಿಲ್ಪ ಎಂಬ ಸಾಂಪ್ರದಾಯಿಕ ಪರಿಕಲ್ಪನೆ ಇಂದು ಅಳಿಸಿಹೋಗಿದೆ. ಇಂದು ಮಿಶ್ರ ಮಾಧ್ಯಮದ ಭಿತ್ತಿಚಿತ್ರಗಳನ್ನು ಕಾಣಬಹುದು. ರೇಖೆ, ಬಣ್ಣಗಳೊಡನೆ ಗಾಜು, ಲೋಹ ಏನೆಲ್ಲ ಸಾಮಗ್ರಿ ಬಳಕೆಯಾಗುತ್ತಿದೆ (ವಾಸುದೇವ್, ಜಿ. ಎಸ್. ಶೆಣೈ, ವೆಂಕಟಾಚಲಪತಿ, ಅರಕ್ಕಲ್, ಎಂ. ಎಸ್. ಮೂರ್ತಿ ಮುಂತಾದವರು).

ಆಧುನಿಕ ಕಲೆಯ ಇನ್ನೊಂದು ವಿಶೇಷ ವಿಕೃತ, ವಿಕಾರ ಎನಿಸಿದ್ದೂ ಕಲಾನುಭವ

ನೀಡುವುದಾಗಬಹುದು. ಸರ್‍ರಿಯಲಿಸಂ ತನ್ನ ಮೂಲರೂಪ ಸೃಷ್ಟಿಯಲ್ಲಿ ಬಾರದಿದ್ದರೂ ಸುಪ್ತ ಮಾನಸಿಕ ವಿಚಾರ, ಅನುಭೂತಿಗಳ ಅಭಿವ್ಯಕ್ತಿಯಲ್ಲಿ ಪ್ರಭಾವ ಬೀರಿದೆ. ನಮ್ಮಲ್ಲಿ ವಿರೂಪ (ಡಿಸ್ಟಾರ್ಷನ್)ದ ಜೊತೆಗೆ ಫ್ಯಾಂಟಸಿಯ ಅಂಶಗಳು ಪ್ರಧಾನವಾಗಿವೆ (ಪಣಿಕ್ಕರ್, ಪೈನ್, ಮಿಶ್ರ ಅನಂತರ ಸ್ವಾಮಿನಾಥನ್, ಎಸ್. ಜಿ. ವಾಸುದೇವ್). ಮೆಕ್ಸಿಕೋ ಕಲಾವಿದರನ್ನು ಅಭ್ಯಸಿಸಿದ ಸತೀಶ್ ಗುಜ್ರಾಲ್ ಮನುಷ್ಯ ಆಕೃತಿಯನ್ನು ವಿರೂಪ, ವಿಕಾರ, ಊನಗೊಳಿಸಿ ಬಳಸಿದರು. ಹಡಪದ್ ಅವರೂ ವಿರೂಪದ ಶಕ್ತಿಯುತ ಅಭಿವ್ಯಕ್ತಿಯ ಮಹತ್ವವನ್ನು ಪರಿಚಯಿಸಿದರು. ಮುಂಡದ ಕತ್ತಿನಿಂದ, ಭುಜಗಳಿಂದ ಎಲೆಗಳು, ವ್ಯಕ್ತಿಗಳ ಆಕಾರಗಳು, ಸಂಲಗ್ನ ಮುಖಗಳು ಇತ್ಯಾದಿ. ಮುಂದೆ ಯುವ ಪೀಳಿಗೆ ಬಹುವಾಗಿ ಇದನ್ನು ಬಳಸಿತು (ಸ್ವಿಚ್ ಕೃತಿಗಳ ಸಿ. ಚಂದ್ರಶೇಖರ್, ಚಂದ್ರನಾಥ ಆಚಾರ್ಯ, ಶ್ಯಾಮಸುಂದರ್, ಜೆ. ಎಂ. ಎಸ್. ಮಣಿ). ವಿರೂಪ, ಉತ್ಪ್ರೇಕ್ಷೆಗಳ ಅಂತರ ಕಡಿಮೆಯೇ. ಏಕೆಂದರೆ ಚಿತ್ರಣ ಸ್ಥಳದಲ್ಲಿ ಆಕಾರ, ಆಕೃತಿಗಳನ್ನು ನಿಯೋಜಿಸುವಲ್ಲೆ, ವರ್ಣಗಳ ಅಸಮಂಜಸ, ಆಯ್ಕೆಯಲ್ಲೆ ಆ ಅನುಭವವನ್ನು ನೀಡಲು ಸಾಧ್ಯ.

ಕಳೆದ ಆರು ದಶಕಗಳಲ್ಲಿ ಆಧುನಿಕ ಕಲಾವಿದರು ಅರಸಿದ ಇನ್ನೊಂದು ಸಾಧ್ಯತೆಯನ್ನೂ ಗಮನಿಸಬಹುದು. ಅಮೂರ್ತ ಕಲೆಯ ಆಸಕ್ತಿ ಕೆಲವರಲ್ಲಿ ಭಾರತೀಯ ತತ್ತ್ವ ಮತ್ತು ಸಂಸ್ಕೃತಿಯ ಕಡೆಗೆ ಹೊರಳಿತು. 'ತಂತ್ರ' ಶಕ್ತಿಯುತ ಅಭಿವ್ಯಕ್ತಿ ಸಾಧ್ಯತೆ ಉಳ್ಳದ್ದೆಂದು ಅರಿತರು. ಭಾರತೀಯ ಆಧುನಿಕ ದೃಶ್ಯಾತ್ಮಕ ರೂಪಗಳಿಗೆ ಅದು ಹೊಂದುವುದನ್ನು ಕಂಡರು. ಜ್ಯಾಮಿತೀಯ ಅಮೂರ್ತಕಲೆಗೆ ತಂತ್ರದಲ್ಲಿ ಯಂತ್ರಗಳು ಅಮೂರ್ತ ಸಂಜ್ಞೆಗಳು. ಅವು ತಾತ್ತ್ವಿಕ ಹಾಗೂ ಅನುಭಾವೀ ಸತ್ವ ಹೊಂದಿವೆ. ಆ ಪರಂಪರೆಯನ್ನು ಅಮೂರ್ತ ಸಾಂಕೇತಿಕ ವಿನ್ಯಾಸ ರಚನೆಗಳನ್ನು ಸೃಜಿಸಲು ಬಳಸಿದರು. ಉಜ್ವಲ ವರ್ಣಗಳೂ ಬಳಕೆಯಾದುವು (ಬಿರೇನ್ ಡೇ, ಸಂತೋಷ್, ಓಂಪ್ರಕಾಶ್ ಮುಂತಾದವರು). ಕರ್ನಾಟಕದಲ್ಲಿ ಶಂಕರ ಪಾಟೀಲ್ ಮೊದಲಾದವರ ರಚನೆಗಳು ನೆನಪಾಗುತ್ತವೆ. ಸೃಷ್ಟಿ ಸಂಕೇತವಾಗಿ ಬಳಸಿರುವುದರಲ್ಲೂ ಅನಂತ ವೈವಿಧ್ಯ ಕಂಡುಬರುತ್ತದೆ.

ಅತ್ತ ಇನ್ನೊಂದು ಬಗೆಯ ಚಟುವಟಿಕೆಯೂ ಕಳೆದ ಶತಮಾನದ ಉತ್ತರಾರ್ಧದಲ್ಲಿ ಆರಂಭವಾಯಿತು. ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಕಲೆ ಮತ್ತು ಕುಶಲ ಕಲೆಗಳ ಸಮನ್ವಯ ಸಾಧನೆಗಾಗಿ ಯೋಜನೆಗಳನ್ನು ರೂಪಿಸಿದರು. ೧೯೫೨ರಲ್ಲಿ ಆಲ್ ಇಂಡಿಯಾ ಹ್ಯಾಂಡಿಕ್ರಾಫ್ಟ್ ಬೋರ್ಡ್ ಸ್ಥಾಪಿತವಾಯಿತು. ಕ್ರಾಫ್ಟ್ ಕೌನ್ಸಿಲ್ ಆಫ್ ಇಂಡಿಯಾದ ಶಾಖೆ ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಪ್ರಾದೇಶಿಕ ವಿನ್ಯಾಸ ಕೇಂದ್ರಗಳೂ ಪ್ರಾರಂಭವಾದುವು. ಇವೆಲ್ಲದರ ಪರಿಣಾಮವಾಗಿ ಕುಶಲಕಲೆ ಬಗ್ಗೆ ಜಾಗೃತಿ, ಅಭಿರುಚಿ ಜನರಲ್ಲಿ ಬೆಳೆಯಿತು. ಕಲಾವಿದರೂ ಹೊಸ ಕಲ್ಪನೆ, ವಿನ್ಯಾಸಗಳಿಗೆ ತೊಡಗಿದರು. ಅದರ ವಾಣಿಜ್ಯ ಸಾಧ್ಯತೆಯ ಯಶಸ್ಸು ನಮ್ಮೆದುರಿಗಿದೆ. ಆದರೆ ವಾಸ್ತವವಾಗಿ ಕುಶಲಕಲೆಯೂ ಒಂದು ಸೃಜನಶೀಲ ಕಲಾ ಚಟುವಟಿಕೆ. ಯಾವುದೇ ಬಗೆಯದಿರಲಿ, ಒಂದು ರೂಪ, ಒಂದು ವಿನ್ಯಾಸ ಸೃಷ್ಟಿ ಸೃಜನಶೀಲವಾದದ್ದೆ. ಅನಂತರ ಅದರ ಪ್ರತಿಕೃತಿಗಳು ಯಾಂತ್ರಿಕವಾಗುತ್ತವಷ್ಟೆ.

ಇಂದು ಪುಸ್ತಕಗಳ ರಕ್ಷಾಪುಟ ವಿನ್ಯಾಸ ರಚನೆಗೆ ಗಣಕ ಬಳಸಲಾಗುತ್ತಿದೆ. ರೇಖಾ ಚಿತ್ರಗಳ ರಕ್ಷಾಪುಟ, ಅನಂತರ ವರ್ಣಚಿತ್ರಗಳಿಗೆ ಎಡೆಮಾಡಿಕೊಟ್ಟಿತು. ಕನ್ನಡ ಗ್ರಂಥಗಳ ಇಂದಿನ ರಕ್ಷಾಪುಟ ವಿನ್ಯಾಸ, ಸಂಯೋಜನೆ ಇದುವರೆಗಿನ ಕಲಾಪ್ರಯೋಗಗಳ ಅನೇಕ ಅಂಶಗಳನ್ನು ಬಳಸಿಕೊಳ್ಳುತ್ತಿದೆ. ಮುದ್ರಣಕಲೆಯ ತಾಂತ್ರಿಕ ಆವಿಷ್ಕಾರಗಳಿಂದಾಗಿ ರಕ್ಷಾಪುಟಗಳಲ್ಲಿ ಕುಂಚದ ಮೈವಳಿಕೆ, ಮಿಶ್ರಮಾಧ್ಯಮದ ಉಬ್ಬುಗಳ ಸ್ಪರ್ಶಾನುಭವ ಸಾಧ್ಯತೆಗಳೂ ಹೆಚ್ಚಿವೆ. ಆ ಸಂಯೋಜನೆಗಳು ಗ್ರಂಥಸತ್ವವನ್ನು ಸೂಚ್ಯವಾಗಿ ಮುಟ್ಟಿಸುವಂತಾಗಿವೆ (ಚಂದ್ರನಾಥ ಆಚಾರ್ಯ, ಆರ್‍ಯ, ವಿ. ಟಿ. ಸುರೇಶ ಮುಂತಾದವರು). ಹೀಗೆ ಆಧುನಿಕತೆಯ ಜೊತೆಜೊತೆಗೆ ಪರಂಪರೆಯ ಕಲೆಯೂ ಉಳಿದುಬಂದಿದೆ (ಮಿಣಜಿಗಿ ರಾಗಮಾಲಾ ಚಿತ್ರಗಳು, ಈಚೆಗೆ ಚಿಕಣಿ ಚಿತ್ರಶೈಲಿಯಲ್ಲಿ ಹಾಗರಗುಂಡಗಿ ಮೊದಲಾದ ಕಲಾವಿದರು).

- ೪ -

ಆಧುನಿಕ ಕಲೆಯೆಂದರೆ ಪಾಶ್ಚಾತ್ಯ ಪ್ರಭಾವದ, ಅಥವಾ ಭಾರತೀಯ ವಿಷಯ ವಸ್ತು ಮತ್ತು ತಂತ್ರವಿಧಾನಗಳ ಕಲೆ ಎಂಬ ಸರಳಸೂತ್ರದಿಂದ ದೂರಬಂದು, ಅದು ತೀವ್ರ ಸಂವೇದನೆಗೆ ಸಂಬಂಧಿಸಿದ್ದೆಂಬ ಅರಿವು ಅಲ್ಪಸ್ವಲ್ಪವಾದರೂ ಮೂಡುತ್ತಿದೆ. ಆದರೆ ಗೊಂದಲಗಳೂ ಇವೆ. ವಾಣಿಜ್ಯ ಆರ್ಟ್ ಗ್ಯಾಲರಿಗಳು ಹೆಚ್ಚಿವೆ. ನಗರಗಳು, ಉದ್ಯಮಗಳು ಹೆಚ್ಚಿದಂತೆ ಆರ್ಟ್ ಗ್ಯಾಲರಿಗಳ ವಾಣಿಜ್ಯ ದೃಷ್ಟಿ, ಪ್ರಚಾರ, ಪ್ರಭಾವಗಳು ಕೆಲವರಾದರೂ ಕಲಾವಿದರನ್ನು ಶ್ರೀಮಂತಗೊಳಿಸಿವೆ. ಇದರಿಂದಾಗಿ ಕಲಾ ಗ್ಯಾಲರಿಗಾಗಿಯೇ ಅವರು ಅಪೇಕ್ಷಿಸುವ ಚಿತ್ರರಚನೆಗಳೂ ತೊಡಗಿದುವು. ಇದನ್ನು ವಿರೋಧಿಸುವ, ಪ್ರತಿಭಟಿಸುವ ಕಲಾವಿಧಾನಗಳೂ ಬಂದುವು. ಸ್ಥಾಪನಾಕಲೆ (ಇನ್‌ಸ್ಟಲೇಷನ್), ಭೂ ಕಲೆ (ಅರ್ತ್ ವರ್ಕ್ಸ್), ಸ್ಥಳ ನಿರ್ದಿಷ್ಟ ಕಲೆ ಮುಂತಾದುವು ವಿದೇಶದಲ್ಲೂ ನಮ್ಮಲ್ಲೂ ೬೦ರ ದಶಕದ ನಂತರ ಕಾಣತೊಡಗಿವೆ. ಹಿಂದೆ ನಮ್ಮ ಗ್ರಾಮೀಣರಲ್ಲಿ ಹೊಲಗದ್ದೆಗಳ ಕಣಗಳಲ್ಲಿ ವಿಧಿಯಾಚರಣೆಗಳು ರೂಢಿಯಲ್ಲಿದ್ದುವು. ಸ್ಥಳದಲ್ಲೇ ಮೃತ್ತಿಕೆಯ ಆಕೃತಿ, ಆಕಾರಗಳನ್ನು ನಿರ್ಮಿಸಿ ಆಚರಣೆಯ ನಂತರ ನಾಶ ಮಾಡುವುದು. ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ನಾಗ ಮಂಡಲ ರಚನೆ ಮುಂತಾದುವು ಈಗಲೂ ಇವೆ. ಸ್ಥಾಪನಾಕಲೆ ಪಾಶ್ಚಾತ್ಯರಲ್ಲಿ ಪ್ರಾರಂಭವಾಗಿ ನಮ್ಮಲ್ಲೂ ಕಾಣಿಸಿಕೊಂಡಿತು (ಕ್ರಿಸ್ಟೊ ಮತ್ತು ಜೀನ್ ಕ್ಲಾಡ್, ರಾಬರ್ಟ್ ಸ್ಮಿತ್‌ಸನ್ ಮುಂತಾದವರು). ಸ್ಥಾಪನಾಕಲೆ, ಭೂಕಲೆಗಳ ಒಂದು ವೈಶಿಷ್ಟ್ಯವೆಂದರೆ ಅದರಲ್ಲಿ ಶಿಲ್ಪ, ರಂಗಭೂಮಿ, ಛಾಯಾಚಿತ್ರ, ವರ್ಣಚಿತ್ರಗಳ ಅಂಶಗಳೆಲ್ಲ ಕೂಡಿಕೊಂಡಿವೆ. ಅವು ಅಸ್ಥಿರ, ನಾಜೂಕು ಮತ್ತು ತಾತ್ಕಾಲಿಕ ಸೃಷ್ಟಿಗಳು. ಕಲಾಕೃತಿ ಎಂಬುದು ಒಂದು ಅನುಭವವನ್ನು ಶಾಶ್ವತವಾಗಿಸುವ, ದಾಖಲಿಸುವ ಅಭಿವ್ಯಕ್ತಿ ವಿಧಾನ ಎಂಬ ತತ್ತ್ವಕ್ಕೆ ಇದು ವಿರುದ್ಧ. ಒಂದು ಅನುಭವ ಕೃತಿಯಾಗಿ ಕಾಲ, ಸಮಾಜ, ಜೀವನವಿಧಾನ ಬದಲಾದಂತೆ ಬೇರೆಯೇ ಅನುಭವ ನೀಡಬಹುದು. ಮೂಲಕೃತಿ ಕಾಲದ ಅನುಭವಕ್ಕಿಂತ ಭಿನ್ನವಾಗಬಹುದು. ಇಲ್ಲಿ, ಅಂದಿನ ಅನುಭವ ಆಯಾ ನೋಡುಗನ ಮನಸ್ಸಿನಲ್ಲಿ ಉಳಿಯುತ್ತೆ. ಇದೂ ಒಂದು ದೃಷ್ಟಿ.

ಕರ್ನಾಟಕದಲ್ಲಿ ೬೦ರ ದಶಕದಿಂದೀಚೆಗೆ ಇಂತಹ ಪ್ರಯೋಗಗಳು ನಡೆಯುತ್ತಿವೆ. ದೇಶೀಯ, ಸ್ಥಳೀಯ ಪರಿಕರ ಸಾಮಗ್ರಿ ಬಳಸಿ (ಸೆಗಣಿ, ಟಾರಿನ ಡ್ರಮ್ಮುಗಳ ತಗಡು) ನೋವು ಸಂಕಟ ದುಃಸ್ಥಿತಿಗಳ ಭೀಕರತೆಗಳ ಅಭಿವ್ಯಕ್ತಿಯ ಕೃತಿ ರಚಿಸುತ್ತಿದ್ದ ಶೀಲಾಗೌಡ ಅವರು 'ಸಾಕ್ಷಿಗುಡ್ಡ, ಸಾಕ್ಷಿಗೋಡೆ' ಭೂಮಿಕಲೆ (ಅರ್ತ್ ವರ್ಕ್) ಸೃಷ್ಟಿಸಿದರು, ಬೆಂಗಳೂರಿನ ಹೊರಗೆ. ಯುದ್ಧಭೂಮಿಯ ಸೈನಿಕರ ಅಡಗುದಾಣ ಟ್ರೆಂಚ್‌ಗಳಲ್ಲಿನ ಅನುಭವ ಸೃಷ್ಟಿಸಿಕೊಟ್ಟರು, ಫೈರಿಂಗ್ ರೇಂಜ್ ಸ್ಥಳ ಬಳಸಿ. ಎಂ. ಎಚ್. ಉಮೇಶ್‌ರ 'ನೆಲಾಕೃತಿ' ಹೊಲದಲ್ಲಿ ಗುಂಡಿಗಳನ್ನು ತೋಡಿ, ರೈತರ ಬೇಸಾಯದ ಭಾಗವಾದ ವಿಧಿಯಾಚರಣೆ ಚಿತ್ತಾರಗಳಂತೆ, ನಗರೀಕರಣದ ವಿರುದ್ಧವಾದ ಭೂಮಿ ಸತ್ವದ ಅನುಭವಸೃಷ್ಟಿಸಿದರು. ಪುಷ್ಪಮಾಲಾ ಅವರು ಮೂವರು ಕಲಾವಿದರೊಂದಿಗೆ 'ಸ್ಥಳ ಪುರಾಣಗಳು' ಸೃಷ್ಟಿಸಿದರು, ಕಳೆದುಹೋದುದರ ನೆನಪುಗಳನ್ನು ಕೆದಕಿದಂತೆ. ಶ್ಯಾಮಲ ಅವರ ಕೆರೆಯಲ್ಲಿ ತೇಲುವ ರಚನೆಗಳು, ಶ್ರೀನಿವಾಸ ಪ್ರಸಾದ್, ಕಲ್ಲೂರ್ ಸ್ಥಳ ನಿರ್ದಿಷ್ಟ ಕಲೆ ನಿರ್ಮಿಸಿದರು. ಸುರೇಶ್ ಜಯರಾಂ, ಬಾಬು ಈಶ್ವರ ಪ್ರಸಾದ್ (ಹಲವು ಪ್ರದರ್ಶನ) ಮುಂತಾದವರ ಪ್ರಯೋಗಗಳು ಕಲೆಯ ಬಗ್ಗೆ ಹೊಸ ಚಿಂತನೆಗೆ ಎಡೆಗೊಡುತ್ತವೆ. ಪುಷ್ಪಮಾಲಾ ಅವರ 'ಸಂಭವ' (ಹ್ಯಾಪನಿಂಗ್ಸ್) ಮೂಲ ಮತ್ತು ಅನುಕರಣಕೃತಿಗಳ ನಡುವಣ ಭೇದವನ್ನೇ ಅಳಿಸಿಹಾಕುತ್ತವೆ. ಅವರ ಇತ್ತೀಚಿನ ರವಿವರ್ಮನ ಕಲಾಕೃತಿಗಳಂತೆ (ದೇವತೆಗಳ ರೂಪಸೃಷ್ಟಿ) ವೇಷಭೂಷಣ ಧರಿಸಿ ಸೃಷ್ಟಿಸಿದ ದೃಶ್ಯಗಳು ಒಂದು ದೃಷ್ಟಾಂತ. ಅದು ನಂಬಿಕೆ ಮತ್ತು ವಾಸ್ತವಗಳ ಬಗೆಗೆ ವ್ಯಂಗ್ಯ ವಿಡಂಬನೆಯೂ ಆಗಬಹುದು.

ಆಧುನಿಕ ಕಲೆ ಎತ್ತ ಸಾಗುತ್ತಿದೆ, ಹೇಳುವುದು ಕಷ್ಟ. ಇಂತಹ ಪ್ರಯೋಗಗಳನ್ನು ಕೆಲವರು ಆಂಟಿ ಆರ್ಟ್ ಎಂದೂ ಕರೆಯುತ್ತಾರೆ. ಆದರೆ, ಈ ರಚನೆಗಳು ಅರ್ಥಹೀನ, ವ್ಯರ್ಥ ಎನ್ನುವುದಕ್ಕಿಂತ ಹಲವು ಸ್ತರಗಳಲ್ಲಿ ಅರ್ಥವತ್ತಾದ ರೂಪಗಳ ಅನ್ವೇಷಣೆಯಾಗಿವೆ ಎನ್ನಬೇಕಿದೆ. ಇಂದಿನ ಕಲಾವಿದನಿಗೆ ಯಾವ ವಸ್ತು, ಪರಿಕರವೂ ನಿಷಿದ್ಧವಲ್ಲ. ಆದರೆ ಪಾಶ್ಚಾತ್ಯರಲ್ಲಾಗಿರುವಂತೆ ಷಾಕ್ ಕೊಡುವ ಪ್ರಯೋಗಗಳು ನಮ್ಮಲ್ಲಿ ನಡೆದಿಲ್ಲ. ಔಚಿತ್ಯ ವಿವೇಕವನ್ನು ಕಲಾವಿದರು ತೋರಿದ್ದಾರೆ. ನಮ್ಮ ಇಂದಿನ ಅನುಭವಗಳಿಗೆ ಅನ್ಯ, ಹೊರತು ಎನಿಸುವಂತಹವೂ ಅಲ್ಲ. ಟಿ ಷರ್ಟ್ ಬಳಸಿ ಕಲಾರಚನೆ ಎಂದರೂ ಅವುಗಳ ಮುದ್ರಿತವಾಗಿರುವ ಪದಪುಂಜಗಳು, ಶೀರ್ಷಿಕೆಗಳು ಪರಸ್ಪರ ಕೂಡಿ ಚಿಂತನೆಗೆ, ವಿಚಾರಕ್ಕೆ ಎಡೆಮಾಡಿಕೊಡುತ್ತವೆ. ಒಂದು ಮಾತು ನಿಜ : ಇಂದಿನ ಕಲೆಯ ವಿವಿಧ ಪ್ರಯೋಗಗಳು ಯಾವುದೇ ಪಂಥ, ಸಿದ್ಧಾಂತಗಳ ಪರಿಣಾಮವಾಗಿ ಆದುವಲ್ಲ. ಕಲಾವಿದನ ವ್ಯಕ್ತಿಗತ ಅನುಭವಗಳಿಗೆ ಒಡ್ಡಿದ ರೂಪಗಳು, ರಚನೆಗಳು.

**ಪ್ರೊ|| ಎಂ. ಎಚ್. ಕೃಷ್ಣಯ್ಯ**
ನಂ. ೧೮೨, ೧ನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು-೫೬೦ ೦೧೦

# ಸಂಗೀತ – ಕಲೆ : ಸಾಂಸ್ಕೃತಿಕ ಮೀಮಾಂಸೆಯ ಸ್ವರೂಪಗಳು

**ಸಂ**ಗೀತದ ಬಗ್ಗೆ ಸಾಮಾನ್ಯವಾಗಿ ಎಲ್ಲರೂ ಮಾತನಾಡುವ/ಬರೆಯುವ ಅಂಶಗಳು ಇತಿಹಾಸಕ್ಕೆ/ಸಮಾಜಕ್ಕೆ ಅನ್ವಯವಾಗುವಂತೆ ಇರುವುದಿಲ್ಲ. ಸಾಹಿತ್ಯ ಮತ್ತು ಇತಿಹಾಸ/ರಾಜಕೀಯಗಳ ನೇರ ಸಂಬಂಧವನ್ನು ಎಲ್ಲರೂ ಗುರುತಿಸುತ್ತಾರೆ. ನೃತ್ಯ ಮತ್ತು ಸಂಗೀತಕ್ಕೆ ಸಂಬಂಧಪಟ್ಟಂತೆ ಈ ರೀತಿಯ ವ್ಯಾಖ್ಯಾನಗಳು ನಮ್ಮಲ್ಲಿ ಅಷ್ಟಾಗಿ ಆಗಿಲ್ಲ. ಆಗಿಯೇ ಇಲ್ಲವೆಂದು ಹೇಳಿದರೂ ದೊಡ್ಡ ತಪ್ಪಾಗಲಾರದು. ಒಂದು ನೆಲೆಯಲ್ಲಿ ನೃತ್ಯ ಮತ್ತು ಸಂಗೀತ ಕ್ಷೇತ್ರಗಳು ಸಾಮಾಜಿಕ ಮತ್ತು ರಾಜಕೀಯ ಚೌಕಟ್ಟಿನಿಂದ ದೂರ ಇವೆ ಎಂಬ ವಾದವನ್ನು ಒಪ್ಪಬಹುದು. ಆದರೆ ಬದಲಾಗುತ್ತಿರುವ ಸಮಾಜದಲ್ಲಿ ಸಂಗೀತವೂ ಕೂಡ ಇತಿಹಾಸಕ್ಕೆ ತನ್ನದೇ ರೀತಿಯಲ್ಲಿ ಸ್ಪಂದಿಸುತ್ತ ಬಂದಿರುವ ಸಂಗತಿಯನ್ನು ತಳ್ಳಿಹಾಕುವಂತಿಲ್ಲ. ಅಂದರೆ ತನ್ನ ವಿನ್ಯಾಸಗಳಲ್ಲಿ ಆಗಿರುವ ಬದಲಾವಣೆಗಳ ಮೂಲಕ ಸಂಗೀತ ಎಂಬ 'ಅಮೂರ್ತ ಅನುಭವ' ತನ್ನ ಐತಿಹಾಸಿಕ ನೆಲೆಯನ್ನು ಸ್ಥಾಪಿಸಿಕೊಳ್ಳುತ್ತದೆ. ಇದನ್ನು ವಿಸ್ತರಿಸಿ ಹೇಳುವುದಾದರೆ, ಸಂಗೀತಕ್ಕೂ ಒಂದು ತಾತ್ವಿಕ/ಸೈದ್ಧಾಂತಿಕ ನೆಲೆ ಇದೆ. ಸಂಗೀತ ಅಭಿವ್ಯಕ್ತಿಗೊಳಿಸುವ ಸಿದ್ಧಾಂತ ಅದನ್ನು ಸೃಷ್ಟಿಸುವ, ಮೆಚ್ಚುವವರ ಸಾಮಾಜಿಕ, ರಾಜಕೀಯ ನೆಲೆಗಳಿಂದ ರೂಪಿತವಾಗುತ್ತದೆ. ಈ ಕಾರಣಕ್ಕಾಗಿಯೇ ಸಂಗೀತದ ಬಗೆಗಿನ ಮೀಮಾಂಸೆಗಳು ಈ ಸಂಗತಿಗಳನ್ನು ಗಮನಿಸಬೇಕು. ಅಂತಹ ಒಂದು ಪುಟ್ಟ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಲಾಗಿದೆ. ಕೆಲವು ನಿದರ್ಶನಗಳ ಮೂಲಕ ಸಂಗೀತಕ್ಕೂ ಸಮಾಜಕ್ಕೂ ಇರುವ ಸಂಬಂಧವನ್ನು ತೋರಿಸಲು ಸಾಧ್ಯ. ಈ ರೀತಿಯ ಪ್ರಯತ್ನಗಳು ಇನ್ನೂ ಬಹಳ ವಿಸ್ತಾರವಾಗಿ, ಪೂರ್ಣಪ್ರಮಾಣದಲ್ಲಿ ಆಗಬೇಕು ಎಂಬ ಮಾತನ್ನು ಇಲ್ಲಿ ಹೇಳಿಬಿಡುವುದು ಅಗತ್ಯ. ಆ ನಿಟ್ಟಿನಲ್ಲಿ ಇದೊಂದು ಮೊದಲ ಪ್ರಯತ್ನವಷ್ಟೇ.

ಅಂತಾರಾಷ್ಟ್ರೀಯ ಮಟ್ಟದಲ್ಲಿ ಬಹಳ ಚರ್ಚೆಗೆ ಒಳಗಾದ ಕೆಲವು ನಿದರ್ಶನಗಳನ್ನು ಕೊಟ್ಟು ಭಾರತದ ಸಂದರ್ಭಕ್ಕೆ ಬರುವುದು ಒಳ್ಳೆಯದು. ಇದಕ್ಕೆ ಮತ್ತೊಂದು ಕಾರಣವೂ ಇದೆ. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ತಾತ್ವಿಕತೆಗೂ ಸಿದ್ಧಾಂತಕ್ಕೂ ಸಂಸ್ಕೃತಿಗೂ ರಾಜಕೀಯಕ್ಕೂ ಇರುವ ಸಂಬಂಧವನ್ನು ಬಹಳ ಸಮರ್ಪಕವಾಗಿ, ಸಮಗ್ರವಾಗಿ ಅಧ್ಯಯನ ಮಾಡಲಾಗಿದೆ. ಈ ರೀತಿಯ ಅಧ್ಯಯನಕ್ಕೆ ಒಂದು ದೊಡ್ಡ ಪರಂಪರೆಯೇ ಇದೆ. ಅಲ್ಲಿ ಆಗಿರುವ ಅಧ್ಯಯನಗಳ ಮಾರ್ಗವನ್ನು ತಿಳಿದು ನಮ್ಮಲ್ಲೂ ಈ ರೀತಿಯ ಅಧ್ಯಯನಗಳನ್ನು ಭಿನ್ನ ನೆಲೆಗಳಿಂದ ಬೆಳೆಸುವುದು ಸೂಕ್ತವಾದ್ದರಿಂದ ಅದರ ಉಲ್ಲೇಖವನ್ನು ಇಲ್ಲಿ ಮಾಡಲಾಗಿದೆ.

ಬಹಳ ಪ್ರಸಿದ್ಧ ಉದಾಹರಣೆಯೊಂದಿಗೆ ಪ್ರಸ್ತುತ ವಿಷಯವನ್ನು ಚರ್ಚಿಸುವುದು ಒಳ್ಳೆಯದು. ಕಲೆಯ ರಾಜಕೀಯ ಸ್ವರೂಪವನ್ನು ಅದರ ಸಂಕೀರ್ಣತೆಯಲ್ಲಿ ಅರಿಯುವುದು ಅಗತ್ಯ. ಇಲ್ಲದಿದ್ದರೆ ಸರಳೀಕೃತ ವಿವಾದಗಳು ಮಾತ್ರ ನಮ್ಮನ್ನು ದಾರಿ ತಪ್ಪಿಸುವಂತೆ ಮಾಡಿಬಿಡುತ್ತವೆ ಎಂಬುದನ್ನು ಮರೆಯಬಾರದು. ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತಕ್ಕೆ ರಿಚರ್ಡ್ ವ್ಯಾಗ್ನರ್‌ನ ಕೊಡುಗೆ ಅಪಾರ. ೧೮೮೩ರಲ್ಲಿ ಸತ್ತ ವ್ಯಾಗ್ನರ್ ಜರ್ಮನಿಯ ಅಸ್ತಿತ್ವದ ಬಗ್ಗೆ, ತನ್ನ ವ್ಯಕ್ತಿತ್ವದ ಬಗ್ಗೆ ಅಪಾರ ಶ್ರದ್ಧೆಯನ್ನು, ಆತ್ಮವಿಶ್ವಾಸವನ್ನು ಹೊಂದಿದ್ದ. ತನ್ನ ವೈಯಕ್ತಿಕ ಬದುಕಿನಿಂದ ಹಿಡಿದು ಜರ್ಮನಿಯ ಅಂತಃಸತ್ವದವರೆಗೆ ಶಕ್ತಿಶಾಲಿ ಕಲ್ಪನೆಯನ್ನು ಇಟ್ಟುಕೊಂಡಿದ್ದ ಸಂಗೀತಗಾರ ವ್ಯಾಗ್ನರ್. ವ್ಯಾಗ್ನರ್ ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತಕ್ಕೆ ಕೊಟ್ಟ ಕೊಡುಗೆ ಅನನ್ಯ. ಒಂದರ್ಥದಲ್ಲಿ ಕ್ರಾಂತಿಯನ್ನೇ ಉಂಟುಮಾಡಿದ, ಸಂಗೀತಕ್ಕೆ ಹೊಸ ತಿರುವನ್ನು ಕೊಟ್ಟ. ಆದರೆ ವಾಸ್ತವದಲ್ಲಿ ವ್ಯಾಗ್ನರ್ ಕಟ್ಟಾ ಯಹೂದಿ ವಿರೋಧಿ. ಅವನಿಗೆ ಯಹೂದಿಗಳ ಬಗ್ಗೆ ಇದ್ದದ್ದು ದ್ವೇಷ ಮತ್ತು ಆಕ್ರೋಶಪೂರಿತ ತಿರಸ್ಕಾರ. ವಿಪರ್ಯಾಸವೆಂದರೆ ಅವನ ಯಾವ ಸಂಗೀತ ಕೃತಿಯಲ್ಲೂ ವಾಸ್ತವದ ಯಹೂದಿ ಕಂಡುಬರುವುದಿಲ್ಲ. ಅವನ ಕೃತಿಗಳಲ್ಲಿ ಬರುವ ಯಹೂದಿ ಬೇರೆಯೇ. ವ್ಯಾಗ್ನರ್ ಬದುಕಿನಲ್ಲಿ ದ್ವೇಷಿಸುತ್ತಿದ್ದ ಯಹೂದಿಯೇ ಬೇರೆ. ಆದರೆ ಹಿಟ್ಲರ್‌ನಿಗೆ ವ್ಯಾಗ್ನರ್‌ನ ಕೃತಿಗಳು ಬಹಳ ಮುಖ್ಯವಾಗಿದ್ದವು. ಜರ್ಮನಿಯ 'ಆರ್ಯ ಶ್ರೇಷ್ಠತೆ'ಯನ್ನು ಹಿಟ್ಲರ್ ವ್ಯಾಗ್ನರ್‌ನ ಸಂಗೀತದಲ್ಲಿ ಕಂಡ, ಅದನ್ನು ಎತ್ತಿಹಿಡಿದ. ಹಿಟ್ಲರ್‌ನ ನಾಟ್ಜಿಗಳು ಯಹೂದಿಗಳಿಗೆ ಏನು ಮಾಡಿದರೆಂದು ಚರ್ಚಿಸುವ ಅಗತ್ಯವೇ ಇಲ್ಲ.



ಹಾಗಾದರೆ ರಿಚರ್ಡ್ ವ್ಯಾಗ್ನರ್‌ನ ಸಂಗೀತವನ್ನು ಪರಿಗಣಿಸುವುದಾದರೂ ಹೇಗೆ ? ಅತ್ಯದ್ಭುತ ಕೃತಿಗಳನ್ನು ರಚಿಸಿದ ವ್ಯಾಗ್ನರ್ ಯಹೂದಿ ದ್ವೇಷಿಯಾಗಿದ್ದ ಎಂದು ನೆನೆಸಿಕೊಂಡರೆ ಆ ಕೃತಿಗಳಿಗೆ ಸ್ಪಂದಿಸುವುದಾದರೂ ಹೇಗೆ ? ಅನೇಕರನ್ನು ಈ ಪ್ರಶ್ನೆ ಬಾಧಿಸಿದೆ. ಸ್ವತಃ ಯಹೂದಿಯಾಗಿ ಮಹಾನ್ ಸಂಗೀತಗಾರ ಆರ್ಥರ್ ರೂಬಿನ್‌ಸ್ಟೈನ್ ಜರ್ಮನಿಗೆ ಹೋಗಲೂ ನಿರಾಕರಿಸಿದ. ಯಹೂದಿಗಳ ಹತ್ಯೆಯನ್ನು (holocaust) ತನಗೆ ಮರೆಯಲು ಅಸಾಧ್ಯವೆಂದು ಸಂದರ್ಶನವೊಂದರಲ್ಲಿ ಕೇಳಿದ ಪ್ರಶ್ನೆಗೆ ಉತ್ತರಕೊಟ್ಟ. ಆದರೆ ೨೦೦೧ರಲ್ಲಿ ಡೇನಿಯಲ್ ಬ್ಯಾರನ್‌ಬಾಮ್ ಎಂಬ ಇಸ್ರೇಲಿ ಸಂಗೀತಗಾರ ವ್ಯಾಗ್ನರ್‌ನನ್ನು ಇಸ್ರೇಲ್‌ನಲ್ಲೇ ಪ್ರಸ್ತುತಪಡಿಸಿದ. ಅನೇಕ ಇಸ್ರೇಲಿಗಳು ವ್ಯಾಗ್ನರ್‌ನ ಸಂಗೀತವನ್ನು ಬ್ಯಾರನ್‌ಬಾಮ್‌ನನ್ನು ಅಪಾರವಾಗಿ ಮೆಚ್ಚಿದರು. ಆದರೆ ಇದಕ್ಕೆ ತೀವ್ರವಾದ ಪ್ರತಿರೋಧವೂ ಬಂತು. ಅವನ ವಿರುದ್ಧ ಪ್ರದರ್ಶನಗಳೂ ಆದವು. ಕೆಲವರು ಅವನಿಗೆ ಬಹಿಷ್ಕಾರ ಹಾಕಬೇಕೆಂದೂ ಆಗ್ರಹಪಡಿಸಿದರು.

ಇಲ್ಲಿ ಹುಟ್ಟುವ ಮೂಲಭೂತ ಪ್ರಶ್ನೆ ಬಹಳ ಸಂಕೀರ್ಣವಾದದ್ದು. ಜನಾಂಗದ್ವೇಷವನ್ನು ಹೊಂದಿರುವವರ ಕೃತಿಗಳನ್ನು ಸ್ವೀಕಾರ ಮಾಡಬೇಕೆ ಬೇಡವೆ ? ಪ್ರಜಾಪ್ರಭುತ್ವ ವಿರೋಧಿ ಪ್ರಜ್ಞೆಯನ್ನು ಹೊಂದಿರುವವರ ಕೃತಿಗಳನ್ನು ಒಪ್ಪಬೇಕೆ ಬೇಡವೆ ? (ಅತ್ಯದ್ಭುತ ಸಂಗೀತವನ್ನು ರಚಿಸಿದ ಬೆಥೋವನ್ ನೆಪೋಲಿಯನ್‌ನನ್ನು ಆರಾಧಿಸುತ್ತಿದ್ದ. ಆಧುನಿಕ ಪಶ್ಚಿಮದ ಬಹು ದೊಡ್ಡ ತತ್ವಜ್ಞಾನಿ ಮಾರ್ಟಿನ್ ಹೈಡೆಗರ್ ನಾಟ್ಜಿಗಳ ಅಭಿಮಾನಿಯಾಗಿದ್ದ. ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತದ ಪಿತಾಮಹರಲ್ಲಿ ಒಬ್ಬನಾದ ವಿಲ್‌ಹೆಲ್ಮ್ ಫರ್ಟ್‌ವ್ಯಾಂಗ್ಲರ್ ನಾಟ್ಜಿಗಳಿಗೆ ಬಹಳ ಬೇಕಾದ ಮಿತ್ರನಾಗಿದ್ದ. ಫರ್ಟ್‌ವ್ಯಾಂಗ್ಲರ್‌ನ ನಾಟ್ಜಿ ಸ್ನೇಹದ ಬಗ್ಗೆ, ನಂತರ ಅದರ ವಿಚಾರಣೆ ಬಗ್ಗೆ ಇಸ್‌ಟ್ವಾನ್ ಜ಼ಾಬೋ 'Taking Sides' ಎಂಬ ಚಲನಚಿತ್ರವನ್ನು ಮಾಡಿದ್ದಾನೆ.) ಕಲೆಯ ಅನನ್ಯತೆಯನ್ನು ಒಪ್ಪಿ ಅದಕ್ಕೆ ಸೂಕ್ಷ್ಮ ಸಂವೇದನೆಯೊಂದಿಗೆ ಸ್ಪಂದಿಸುವವರು ಕೆಲವೊಮ್ಮೆ ಸಂದಿಗ್ಧಕ್ಕೆ ಒಳಗಾಗುತ್ತಾರೆ. ರಾಜಕೀಯವಾಗಿ, ಸಾಮಾಜಿಕವಾಗಿ ಇರುವ ವ್ಯವಸ್ಥೆಗೆ ವಿರೋಧವನ್ನು ತೋರುವ ಅನೇಕರಿಗೆ ಈ ರೀತಿಯ ಕಷ್ಟಗಳು ಮುಂದಾಗುತ್ತವೆ. ಇದಕ್ಕೆ ಲೆನಿನ್ ಒಳ್ಳೆಯ ಉದಾಹರಣೆ. ಕ್ರಾಂತಿಯಲ್ಲಿ ತೊಡಗಿದ್ದ ಲೆನಿನ್ ಸಂಗೀತದ ವಿಷಯದಲ್ಲಿ ಅಪಾರ ಶ್ರದ್ಧೆಯನ್ನು, ಗೌರವವನ್ನು ಇಟ್ಟುಕೊಂಡಿದ್ದ. ಒಮ್ಮೆ ಬೆಥೋವನ್‌ನ ಸಿಂಫನಿಯೊಂದನ್ನು ಕೇಳಿದ ನಂತರ ಹೀಗೆ ಉದ್ಗಾರ ತೆಗೆದನಂತೆ : "ಎಷ್ಟು ದೈವೀಕವಾದ ಸಂಗೀತ. ಆದರೆ ಇದು ಆತ್ಮವನ್ನು ಸಪ್ಪಗೆ ಮಾಡಿಬಿಡುವುದಲ್ಲ!" ಅಂದರೆ ಇತಿಹಾಸದ ಸಂಘರ್ಷದಲ್ಲಿ ತೊಡಗಿದ್ದ ಲೆನಿನ್‌ಗೆ ಬೇಕಾದದ್ದು ಉಗ್ರವಾಗಿ ಉರಿಯುತ್ತಿದ್ದ, ವಾಸ್ತವವನ್ನು ಎದುರಿಸಲು ಅಗತ್ಯವಾದ, ಕಠೋರವಾದ ಬುದ್ಧಿಶಕ್ತಿ. ಆ ಘಟ್ಟದಲ್ಲಿ ಅವನಿಗೆ ಮನಸ್ಸಿಗೆ ನೆಮ್ಮದಿಯನ್ನು ಕೊಡುವ ಸಂಗೀತ ಇತಿಹಾಸದ ಚಲನೆಗೆ ಪೂರಕವಾದ ಸೃಷ್ಟಿಯಾಗಿರಲಿಲ್ಲ. ಇದು ಕಲೆಗೆ ಸಂಬಂಧಪಟ್ಟ ವಿಷಯವಷ್ಟೇ ಅಲ್ಲ, ಬದಲಾಗಿ ಕಲೆಗೆ ಸ್ಪಂದಿಸುವವರ ವಿಪರ್ಯಾಸದ ನೆಲೆಯನ್ನು ಸೂಚಿಸುವ ಸಂಗತಿ. ಸಂಗೀತ ಕ್ಷೇತ್ರದಲ್ಲಿ ಇಂತಹ ಅನೇಕ ವಿಪರ್ಯಾಸುಗಳು ಇವೆ.

ಭಾರತದ ಸಂದರ್ಭದಲ್ಲಿ ಕಲೆಗೆ ಸಂಬಂಧಪಟ್ಟಂತೆ ಅನೇಕ ಸಂಕೀರ್ಣ ಸಮಸ್ಯೆಗಳು, ಸಿಕ್ಕುಗಳು ಎದುರಾಗುತ್ತವೆ. ಇವುಗಳು ಸುಲಭ ಸೂತ್ರಗಳಿಗೆ ದಕ್ಕುವುದಿಲ್ಲ, ಸಿದ್ಧಪಡಿಸಿದ ಸಾಮಾಜಿಕ/ರಾಜಕೀಯ ವ್ಯಾಖ್ಯಾನಗಳನ್ನು ಮೀರಿ ಬೇರೆಯೇ ಆದ ಅರ್ಥೈಸುವ ಕ್ರಮವನ್ನು ಅಪೇಕ್ಷಿಸುತ್ತವೆ. ನೃತ್ಯಕ್ಕೆ ಸಂಬಂಧಪಟ್ಟಂತೆ ಒಂದು ನಿದರ್ಶನ ಮೇಲಿನ ವಾದವನ್ನು ಎತ್ತಿಹಿಡಿಯುತ್ತದೆ. ತಂಜಾವೂರು ಶೈಲಿ 'ಶೃಂಗಾರ'ರಸವನ್ನು ಭರತನಾಟ್ಯದಲ್ಲಿ ಪ್ರಧಾನ ಮಾಡಿಕೊಂಡಿತು. 'ಶೃಂಗಾರ'ರಸ ನಾಯಕ-ನಾಯಕಿಯರ ನಡುವೆ ಸಮಾನತೆಯನ್ನು ಸೃಷ್ಟಿಸಿತ್ತು. ಸ್ನೇಹ, ಪ್ರೇಮ ಮೇಲು-ಕೀಳಿನ ಸಂಬಂಧವನ್ನು ಅಳಿಸಿಹಾಕಿತ್ತು. ಅಂದರೆ ಈ ರೀತಿಯ ಕಲೆಯಲ್ಲಿ ಒಂದು ಮುಖ್ಯವಾದ ತಾತ್ವಿಕ ನಿಲುವೂ ಇತ್ತು. ಅದು ಸಮಾನತೆಯ ಪರಿಕಲ್ಪನೆಗೆ ಪೂರಕವಾದದ್ದು. ಆದರೆ ಕಲಾಕ್ಷೇತ್ರದ ನಾಟ್ಯ ಸಂಪ್ರದಾಯವು 'ಶೃಂಗಾರ'ವನ್ನು ತಿರಸ್ಕರಿಸಿ 'ಭಕ್ತಿ' ರಸವನ್ನು ಪ್ರಧಾನ ಮಾಡಿಕೊಂಡಿತು. ಈ ಬದಲಾವಣೆ ಕಟ್ಟಿಕೊಟ್ಟ ನಾಯಕ-ನಾಯಕಿಯರ ಸಂಬಂಧದ ಕಲ್ಪನೆ ಮೇಲು-ಕೀಳು, ಹೆಚ್ಚು-ಕಮ್ಮಿಗಳ ಚೌಕಟ್ಟನ್ನು ಬಲಪಡಿಸಿತು. ನಾಯಕನನ್ನು ಒಲ್ಲೈಸುವ, ಬೇಡಿಕೊಳ್ಳುವ, ಯಾಚಿಸುವ ನಾಯಕಿಯನ್ನು ಇದು ಎತ್ತಿಹಿಡಿಯಿತು. ಇಲ್ಲಿ ಸಮಾನತೆ ಪ್ರಧಾನವಾಗಲಿಲ್ಲ. ಒಂದು ಮಾರ್ಗಕ್ಕೆ ದಕ್ಕಿದ ವಿಶಿಷ್ಟವಾದ ತಾತ್ವಿಕ ನಿಲುವು ಮತ್ತೊಂದಕ್ಕೆ ದಕ್ಕಲಿಲ್ಲ. ದುರಂತವೆಂದರೆ ನಮ್ಮ ಸಂಸ್ಕೃತಿ ಎತ್ತಿಹಿಡಿದದ್ದು ಅಸಮಾನತೆಯ ಕಲಾನುಭವವನ್ನು. ಮುಕ್ತವಾದ ಸ್ವಾತಂತ್ರ್ಯದ ಕಾಣ್ಕೆಯನ್ನು ಅಭಿವ್ಯಕ್ತಿಸಿದ 'ಶೃಂಗಾರ'ರಸ ನಮ್ಮ ಸಂಸ್ಕೃತಿಯಲ್ಲಿ ತಿರಸ್ಕೃತವಾಗಿ ಭಕ್ತಿರಸವೇ ಪ್ರಧಾನವಾಯಿತು. ಇದರ ಹಿಂದಿರುವ ಸಾಂಸ್ಕೃತಿಕ ರಾಜಕೀಯ (cultural politics) ಯಾವ ಕೇಂದ್ರದಿಂದ ಬಂದಿತೆಂದು ಅರಿಯುವುದು ಕಷ್ಟವೇನಲ್ಲ. ಸಂಕುಚಿತ ಸಂಪ್ರದಾಯವಾದಿ ಮೂಲದಿಂದ ಬಂದ ಈ 'ಮೌಲ್ಯ' ಇಂದೂ ನಮ್ಮಲ್ಲಿ ಗಟ್ಟಿಯಾಗಿ ಉಳಿದಿದೆ. ಮೇಲ್ವರ್ಗಗಳ, ಮೇಲ್ಜಾತಿಗಳ ಅಧಿಕಾರವನ್ನು ಸಾಂಕೇತಿಕವಾಗಿ ಈ ರೀತಿಯ ಕಲೆ ಪ್ರತಿನಿಧಿಸುತ್ತದೆ. ಹಾಗೆಂದು ಸಾರಾಸಗಟಾಗಿ ಈ ಕಲೆಯನ್ನು ತಿರಸ್ಕರಿಸಲು ಸಾಧ್ಯವೇ ? ಭರತನಾಟ್ಯವು ಬ್ರಾಹ್ಮಣ ಸಂಸ್ಕೃತಿಯನ್ನು ಎತ್ತಿಹಿಡಿಯುವ ಕಲೆ ಎಂದು ವ್ಯಾಖ್ಯಾನಿಸಿ ಅದನ್ನು ಸಂಪೂರ್ಣವಾಗಿ ತಿರಸ್ಕರಿಸುವ ಸಾಮಾಜಿಕ-ರಾಜಕೀಯ ಸಿದ್ಧಾಂತವನ್ನು ನಾವು (ನಾವೆಲ್ಲರೂ ಪ್ರಗತಿಪರರು, ಸೆಕ್ಯೂಲರಿಸ್ಟ್‌ಗಳು ಎಂದು ಘೋಷಿಸುತ್ತ) ಒಪ್ಪಲು ಸಾಧ್ಯವೇ ? ತಂಜಾವೂರಿನ ಮಹಾನ್ ಕಲಾವಿದರು ಯಾವ ಸಾಮಾಜಿಕ ನೆಲೆಯಿಂದ ಬಂದದ್ದು, ಅವರ ಸಾಧನೆ ಏನು ಎಂದು ಕೇಳಿಕೊಂಡಾಗ ಈ ರೀತಿಯ ನಿಲುವು ಸಮಂಜಸವೆನಿಸುವುದಿಲ್ಲ. ಆಗ ಬೇರೊಂದು ರೀತಿಯ ವಿವರಣೆಯನ್ನು ಕೊಡಲು ಪ್ರಯತ್ನಿಸುತ್ತೇವೆ. ಅಂದರೆ ಜಾತಿ ಪದ್ಧತಿಯ ಬಗೆಗಿನ ನಿಲುವು/ವ್ಯಾಖ್ಯಾನ ಕಲೆಯ ಮೀಮಾಂಸೆಗೆ ಬಂದಾಗ ಸಂಕೀರ್ಣವಾದ ಅರ್ಥಗಳನ್ನು ಗ್ರಹಿಸಲೇಬೇಕಾಗುತ್ತದೆ.

ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕೆ ಬಂದಾಗ ಮತ್ತೊಂದು ಬಹಳ ಸಂಕೀರ್ಣ ವಿಷಯ ನಮ್ಮನ್ನು ಎದುರುಗೊಳ್ಳುತ್ತದೆ. ಒಂದರ್ಥದಲ್ಲಿ ಶಾಸ್ತ್ರ ಸಂಗೀತ ಕಲಿಕೆಗೆ ಮುಖ್ಯ. ಅಕ್ಷರ ಜ್ಞಾನವಿಲ್ಲದೆ ಈ ಶಾಸ್ತ್ರದ ಅರ್ಥ ಗ್ರಹಿಕೆಗೆ ಬರುವುದಿಲ್ಲ. 'ಲಯ'ಕ್ಕೆ ಸಂಬಂಧಪಟ್ಟಂತೆ ಬಹಳ ಕ್ಲಿಷ್ಟವಾದ ಲೆಕ್ಕಾಚಾರವಿದೆ. ಹಿಂದೂಸ್ತಾನಿ ಶಾಸ್ತ್ರೀಯ ಸಂಗೀತಕ್ಕೆ ಕರ್ನಾಟಕ ಶಾಸ್ತ್ರೀಯ ಸಂಗೀತಕ್ಕಿರುವ 'ಲಯ'ದ ಬುನಾದಿ ಇಲ್ಲ, ಅದಕ್ಕೆ ಅದರ ಅಗತ್ಯವೂ ಇಲ್ಲ. ಆದರೆ ಕರ್ನಾಟಕಿ ಪದ್ಧತಿಯಲ್ಲಿ ತಲೆ ಸಿಡಿದುಹೋಗುವ ಲೆಕ್ಕಾಚಾರ ಇದೆ. 'ತಾಳ' ಬಿಟ್ಟರೆ (ಪ್ರಚಂಡ ರಚನಾತ್ಮಕ ವಿಧಾನ ಇದು. ಇದು ಬರಿ mathematical count ಅಲ್ಲ ಎಂಬುದನ್ನು ಹೇಳಬೇಕು ಈ ಸಂದರ್ಭದಲ್ಲಿ) ಯಾವ ಶ್ರೇಷ್ಠ ರಚನೆಯೂ ಇಲ್ಲಿ ಅಸಾಧ್ಯ. ಆದರೆ ಬರಿ ಒಣ ಲೆಕ್ಕಾಚಾರವಲ್ಲ ಇದು. 'ತಾಳ'ವೆಂಬುದು ನಾದವಾಗಿ, ರಾಗಕ್ಕೆ ಪೂರಕವಾಗಿ, ರಾಗದ 'ಭಾವ'ವನ್ನು ಹೊಳೆಯುವಂತೆ ಮಾಡುವ 'ರಸ'. 'ರಸ' ಪ್ರಜ್ವಲಿಸದ ಯಾಂತ್ರಿಕ ಲೆಕ್ಕಾಚಾರದ ಸರ್ಕಸ್ ನಿಷ್ಪ್ರಯೋಜಕ. ಈ ರೀತಿಯ 'ಲಯ'ವನ್ನು ಸಿದ್ಧಪಡಿಸಿಕೊಂಡವರು 'ಕೀಳ್ಜಾತಿಯ' 'ತವಿಲ್' (ಡೋಲು) ನುಡಿಸುವವರು. ಅನಕ್ಷರಸ್ಥ ಮಹಾನ್ ಲಯೋಪಾಸಕರುಗಳು ಇವರು. ಇವರ 'ಮಾನಸಿಕ ಲೆಕ್ಕಾಚಾರಗಳು' ಲಯವಾಗಿ ನುಡಿಯ ತೊಡಗಿದಾಗ ಪಂಡಿತರು, ವಿದ್ವಾಂಸರು (ಹೆಚ್ಚಾಗಿ ಮೇಲ್ಜಾತಿಗೆ ಸೇರಿದವರು) ಲೆಕ್ಕವನ್ನು ಗ್ರಹಿಸಲಾಗದೆ



ಮೌನವಾಗಿ ಕುಳಿತುಬಿಡುತ್ತಿದ್ದರಂತೆ. ಸಂಕೀರ್ಣ ನಡೆಗಳು ಹೊರಹೊಮ್ಮುವಾಗ ಅವುಗಳ ಮೊದಲು ಕೊನೆ ಅರ್ಥವಾಗದೆ ಕೇವಲ 'ಅನುಭವ'ವನ್ನಾಗಿ ಮಾತ್ರ ಅದಕ್ಕೆ ಸ್ಪಂದಿಸಲು ಸಾಧ್ಯವಾಗುತ್ತಿತ್ತು ಎಂದು ಹಿಂದಿನವರು ಒಪ್ಪಿಕೊಳ್ಳುತ್ತಾರೆ. ಕರ್ನಾಟಕ ಶಾಸ್ತ್ರೀಯ ಸಂಗೀತ ಬ್ರಾಹ್ಮಣರ ಸಂಗೀತ ಎಂಬ ಸರಳೀಕೃತ ಸೂತ್ರ, ಸಿದ್ಧಾಂತ ಇವೆಲ್ಲವನ್ನೂ ಗ್ರಹಿಸಲಾಗದು. ಸಂಗೀತದಿಂದ ತಮ್ಮ ಸಾಕ್ಷಾತ್ಕಾರ ಪಡೆದುಕೊಂಡ 'ಕೀಳ್ಜಾತಿ'ಯವರನ್ನು ಏನೆಂದು ಕರೆಯಬೇಕು ? ಸಮಾಜಶಾಸ್ತ್ರಜ್ಞ ಎಂ. ಎನ್. ಶ್ರೀನಿವಾಸರ 'Sanskritisation' ಎಂಬ ಪರಿಕಲ್ಪನೆಗೆ ಈ ಎಲ್ಲ ಸಂಕೀರ್ಣತೆಯನ್ನು ಹಿಡಿಯಲು ಸಾಧ್ಯವಾಯಿತೆ ಎಂದು ಇಂದು ನಾವು ಕೇಳಬೇಕು. ಪಾಶ್ಚಿಮಾತ್ಯ ಮಾದರಿಗಳು, ವಿಶ್ಲೇಷಣಾ ವಿಧಾನಗಳು ಭಾರತದ ಸಾಂಸ್ಕೃತಿಕ ಸನ್ನಿವೇಶವನ್ನು ಎಷ್ಟು ಸಮಗ್ರವಾಗಿ ವಿವರಿಸಲು ಸಾಧ್ಯ ಎಂದು ಈ ಹಂತದಲ್ಲಿ ನಾವು ಕೇಳಬೇಕು. ಅಷ್ಟೇ ಅಲ್ಲದೆ ಮೇಲ್ನೋಟಕ್ಕೆ ಗೋಚರಿಸದ ಅನೇಕ 'ತಾತ್ವಿಕ' ಅಂಶಗಳು ಸಂಗೀತಕ್ಕಿವೆ ಎಂಬುದನ್ನು ನಾವು ಇಂದು ಅರಿಯಬೇಕು. ಕೇವಲ ಅಮೂರ್ತವಾದ ರಸಾನುಭವ ಮಾತ್ರ ಈ ಕಲೆಯಿಂದ ದಕ್ಕುತ್ತದೆ ಎಂಬ ಸರಳೀಕೃತ ನಿಲುವನ್ನು ತ್ಯಜಿಸಬೇಕು.

ಕಲೆಯನ್ನು ಈ ರೀತಿ ಅರ್ಥೈಸುವ ಕ್ರಮ ಅದನ್ನು 'ಸಾಮಾಜಿಕ ನೆಲೆಗಳು/ಕ್ರಮಗಳು' ಎಂಬ ಸಿದ್ಧಪಡಿಸಿಕೊಂಡ ಸಮಾಜ ವಿಜ್ಞಾನದ ವಸ್ತುವನ್ನಾಗಿಸಿಬಿಡಬಾರದು. ಕಲೆ Social Scienceಗೆ ಪೂರಕವಾದ ಮಾಹಿತಿಯೂ ಅಲ್ಲ, ವಸ್ತುವೂ ಅಲ್ಲ. ಸಮಾಜಶಾಸ್ತ್ರದ 'ವೈಜ್ಞಾನಿಕ ಪ್ರಯೋಗ'ಕ್ಕೆ ಬರುವ ಸಾಮಗ್ರಿ ಅಲ್ಲ. ಇದನ್ನು ನಾವು ಚೆನ್ನಾಗಿ ಮನದಟ್ಟು ಮಾಡಿಕೊಳ್ಳಬೇಕು. ಸಂಗೀತವಾಗಲಿ, ನೃತ್ಯವಾಗಲಿ ಸಂಕುಚಿತ ಸಿದ್ಧಾಂತಗಳಿಗೆ ಬದ್ಧವಾಗಿರುವುದಿಲ್ಲ. 'ಸಾಮಾಜಿಕ ಬದ್ಧತೆ' ಎಂಬುದು ಇಲ್ಲಿ ಸಾಮಾನ್ಯವಾಗಿ ಎಲ್ಲರೂ ಒಪ್ಪಿಕೊಳ್ಳುವ, ಅಪೇಕ್ಷಿಸುವ ರೀತಿಯಲ್ಲಿ ಇರುವುದೇ ಇಲ್ಲ. ಇಲ್ಲಿ ತಾತ್ವಿಕತೆಯ ನೆಲೆಯೇ ಬೇರೆ.

ಮತ್ತೊಂದಿಷ್ಟು ಉದಾಹರಣೆಗಳನ್ನು ನೋಡೋಣ. ಪುರಂದರದಾಸರ, ಕನಕದಾಸರ ಸಾಹಿತ್ಯ ಸಂಗೀತಕ್ಕೆ ಬಂದಾಗ ಸಾಹಿತ್ಯದ ಅರ್ಥ ಸಂಗೀತದ ಲಕ್ಷಣಗಳಲ್ಲಿ ಬೆರೆತು ಹೋಗುತ್ತದೆ. ಕೇವಲ ಸಾಹಿತ್ಯದ ಅರ್ಥಕ್ಕಾಗಿ ಯಾರೂ ಅವುಗಳನ್ನು ಕೇಳಲು ಹೋಗುವುದಿಲ್ಲ. ಹಾಗೆ ಮಾಡುವ ಬದಲು ಅವುಗಳನ್ನು ತತ್ವಪದ್ಯಗಳನ್ನಾಗೇ ಓದಿಕೊಳ್ಳಬಹುದು. ಸಂಗೀತಕ್ಕೆ ಸಾಹಿತ್ಯವನ್ನು ಅಳವಡಿಸುವಾಗ ಸಂಗೀತದ ವಿನ್ಯಾಸಗಳಿಗೆ ಹೊಂದಿಕೊಂಡು ರಾಗದ ಭಾವದ ಮೂಲಕ ಸಾಹಿತ್ಯದ ಅರ್ಥ ಸ್ಥಾಪಿತವಾಗುತ್ತದೆ. ಅಂದರೆ ಪದದ ಅರ್ಥಕ್ಕೆ ರಾಗದ ಭಾವ ನಿಜವಾದ ಅಡಿಪಾಯವಾಗುತ್ತದೆ. ಆದ್ದರಿಂದಲೇ ಬಹಳ ಕೆಟ್ಟ ರೀತಿಯಲ್ಲಿ ಹಾಡಿದಾಗ ಗಟ್ಟಿಯಾದ ಸಾಹಿತ್ಯ ತನ್ನ ಅರ್ಥವನ್ನು ಪೂರ್ಣವಾಗಿ ಬಿಟ್ಟುಕೊಡುವುದಿಲ್ಲ. ಮತ್ತೊಂದು ವಿಪರ್ಯಾಸವೆಂದರೆ ಬಹಳ ಶ್ರೇಷ್ಠಮಟ್ಟದ ಗಾಯನ ಕಳಪೆ ಸಾಹಿತ್ಯವನ್ನೂ ಮೇಲಕ್ಕೆ ಎತ್ತರಿಸಿಬಿಡುತ್ತದೆ. ಸುಗಮ ಸಂಗೀತದ ದೊಡ್ಡ ಅಪಾಯವಿರುವುದು ಇಲ್ಲೇ. ಪಿ. ಕಾಳಿಂಗರಾವ್ ಇದಕ್ಕೆ ಅಪವಾದ ನಮ್ಮ ಸಂದರ್ಭದಲ್ಲಿ. ''ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು'' ಎಂದು ಅವರು ಹಾಡಿದಾಗ ತಲೆದೂಗಬೇಕಾದದ್ದು ಅವರ ಸಂಗೀತದ ಮಾಧುರ್ಯಕ್ಕೆ. ಅದಾದ ನಂತರ ಕರ್ನಾಟಕದ ಏಕೀಕರಣದ ವಿಷಯ ನಮಗೆ ಪ್ರಸ್ತುತವಾಗುತ್ತದೆ. ಹಾಗೆಯೇ ''ನಗೆಯು ಬರುತಿದೆ...'', ''ಮಾಡು ಸಿಕ್ಕದಲ್ಲ...'', ''ಯಾರು ಹಿತವರು ಈ ಮೂವರೊಳಗೆ...'' ಮತ್ತು ಅನೇಕ ಹಾಡುಗಳು ಪ್ರಮುಖವಾಗುವುದು ಸಂಗೀತದ ಆಯಾಮಗಳಿಂದಾಗಿಯೇ ಹೊರತು ಸಾಹಿತ್ಯದ ಮೌಲ್ಯದಿಂದಾಗಿ ಅಲ್ಲ.

ಸಂಗೀತಕ್ಕೂ ಸಮಾಜಕ್ಕೂ ಇರುವ ಸಂಬಂಧವನ್ನು ಸಂಗೀತದ ಸ್ವರೂಪದ ಮೂಲಕ ಅರಿಯಬೇಕೇ ಹೊರತು ಸಾಮಾಜಿಕ ಸಿದ್ಧಾಂತಗಳ ಮೂಲಕ ಅಲ್ಲ. ಈ ವಾದಕ್ಕೆ ಮತ್ತೊಂದು ಒಳ್ಳೆಯ ಉದಾಹರಣೆ ನೀಗ್ರೋಗಳ ಜಾಜ್ ಸಂಗೀತ. ತಮ್ಮ ಸ್ವಂತಿಕೆಯನ್ನು, ನಿರ್ದಿಷ್ಟ ರಾಜಕೀಯ ನೆಲೆಯನ್ನು ನಿರ್ಧರಿಸಿಕೊಳ್ಳಲು Americaದ blacks ಬಳಸಿದ್ದು ಪಾಶ್ಚಿಮಾತ್ಯ ಶಾಸ್ತ್ರೀಯ ಸಂಗೀತಕ್ಕೆ ವಿರುದ್ಧವಾದ Jazzಅನ್ನು. ಸಂಗೀತದ ಲಕ್ಷಣವನ್ನು ಮುರಿಯುವಲ್ಲಿ ತಮ್ಮ ಬೇರೊಂದು ಸಾಂಸ್ಕೃತಿಕ/ರಾಜಕೀಯ ನೆಲೆಯನ್ನು ಅವರು ಕಟ್ಟಿಕೊಂಡರು. Blacksಗಳ ತಾತ್ವಿಕತೆಗೆ Jazz ಸಂಗೀತವೂ ದೊಡ್ಡ ಕೊಡುಗೆಯನ್ನು ಕೊಟ್ಟಿತು. ಈ ರೀತಿಯ ಅನೇಕ ಸೂಕ್ಷ್ಮ ಉದಾಹರಣೆಗಳು ಇತಿಹಾಸದಲ್ಲಿವೆ.

ಭಾರತದ ವೈವಿಧ್ಯತೆ, ಬಹುಮುಖಿ ಸಂಸ್ಕೃತಿಯನ್ನು ಮನಸ್ಸಿನಲ್ಲಿಟ್ಟುಕೊಂಡು ನಾವು ಕಲೆಗಳಿಗೆ ಸಂಬಂಧಪಟ್ಟಂತೆ ಸಮಗ್ರವಾದ ಮೀಮಾಂಸೆಗಳನ್ನು ಕಟ್ಟಬೇಕಾಗಿದೆ.


**ಎನ್. ಮನು ಚಕ್ರವರ್ತಿ**
ಪ್ರೊಫೆಸರ್ ಆಫ್ ಇಂಗ್ಲಿಷ್, ಎನ್.ಎಂ. ಕೆ. ಆರ್. ವಿ. ಪ್ರಥಮ ದರ್ಜೆ ಮಹಿಳಾ ಕಾಲೇಜು
ಜಯನಗರ ಮೂರನೇ ಬ್ಲಾಕ್, ಬೆಂಗಳೂರು - ೫೬೦ ೦೧೧



# ಕರ್ನಾಟಕ ಜಾನಪದ ನಡೆದುಬಂದ ಹಾದಿ- ಸ್ಥೂಲ ನೋಟ

ಡಾ|| ಚಕ್ಕೆರೆ ಶಿವಶಂಕರ್

ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ಬಿ.ಎ. ಓದುತ್ತಿದ್ದ ನಾನು ಊರಿಗೆ ಹೋದಾಗ, ಸೋದರಮಾವ ಹತ್ತಿರ ಕರೆದು ''ಏನ್ಲಾ ಮಗಾ, ಅದೇನೋ ಬೆಂಗಳೂರು ಪ್ಯಾಟೇಲಿ ಓದ್ತಾ ಇವ್ನಿ ಅಂತೀಯಲ್ಲ, ನಾನೊಂದ್ ಪ್ರಶ್ನೆ ಕೇಳತೀನಿ ಹೇಳ್ತೀಯ'' ಅಂದ್ರು. ಅಕ್ಷರದ ಅಹಂಕಾರದಿಂದ ಬೀಗುತ್ತಿದ್ದ ನಾನು, ಓದೋಕೆ ಬರಿಯೋಕೆ ಬರದ ಮಾವ ಏನ್ ಮಹಾ ಕೇಳಾರು ಎಂದು, ಕೇಳಿ ಅಂದೆ. ಅವರು ಹೇಳಿದರು :

ಕೊಟ್ಟು ಕೆಟ್ಟವನ್ಯಾರು
ಕೊಡದೆ ಕೆಟ್ಟವನ್ಯಾರು
ಬರಬಾರ್ದ ದಾರೀಲಿ ಬಂದವನ್ಯಾರು
ಹೋಗಬಾರ್ದ ಹಾದೀಲಿ ಹೋದವನ್ಯಾರು
ಭಾರತ ಬಗ್ಗಿಸಿದವನ್ಯಾರು
ರಾಮಾಯ್ಣ ರಾಡಿಸಿದೋನ್ಯಾರು
ಹೇಳು ! ಹೇಳು ! ಹೇಳು !

ಮಾವ ಕೇಳಿದ ಪ್ರಶ್ನೆಯ ತಲೆ ಬುಡ ತಿಳಿಯದೆ ಒದ್ದಾಡುತ್ತಿದ್ದ ನನಗೆ ಮಾವ ನಗುತ್ತಾ ಹೇಳಿದ ಉತ್ತರ: ಕರ್ಣ, ದುರ್ಯೋಧನ, ಕರ್ಣ, ಧರ್ಮರಾಯ, ಭೀಮ ಮತ್ತು ಹನುಮಂತ. ಇಡೀ ರಾಮಾಯಣ ಮತ್ತು ಮಹಾಭಾರತದ ಕಥೆಯು ಮಾವ ಕೇಳಿದ ಇದೊಂದು ಪ್ರಶ್ನೆಯಲ್ಲಿ ನನ್ನ ಕಣ್ಮುಂದೆ ಅನಾವರಣಗೊಂಡಿತು.

ಅಲೆಮಾರಿಗಳಾದ ಲಂಬಾಣಿ ಸಮುದಾಯದ ಮೌಖಿಕ ಪರಂಪರೆಯಲ್ಲಿ ರೂಢಿಯಲ್ಲಿರುವ ಒಂದು ಕಥನ: ಮುದುಕನೊಬ್ಬ ಕಾಡಿನಲ್ಲಿ ಕುರಿಗಳನ್ನು ಕಾಯುತ್ತಿರುವಾಗ ಅವನಿಗೆ 'ಸರ್ ಡಬ್ ಮೈ' ಎಂಬ ಶಬ್ದ ಪದೇ ಪದೇ ಕೇಳಿಸುತ್ತದೆ. ಅದೇ ವೇಳೆಗೆ ದೇವದೂತನೊಬ್ಬ ಅವನ ಮುಂದೆ ಪ್ರತ್ಯಕ್ಷನಾಗಿ, ಮುದುಕನಿಗೆ, ''ಅಯ್ಯಾ, ಬ್ರಹ್ಮದೇವನು ನಿನಗಾಗಿ ಜ್ಞಾನದ ಹೊತ್ತಿಗೆಯನ್ನು ಕಳುಹಿಸಿದ್ದಾನೆ, ತೆಗೆದುಕೊ. ಇದನ್ನು ಓದಿ ಜ್ಞಾನಿಯಾಗು'' ಎಂದು ಅದನ್ನು ಕೊಡಲು ಬರುತ್ತಾನೆ. ಆ ಮುದುಕ ಜ್ಞಾನದ ಹೊತ್ತಿಗೆಯನ್ನು ಮುಟ್ಟದೆ ''ಏನಯ್ಯಾ ದೇವದೂತ, ನಿನ್ನ ಹೊತ್ತಿಗೆಯಲ್ಲಿ ಜಗತ್ತಿನ ಎಲ್ಲಾ ಜ್ಞಾನವೂ ಇದೆಯೇ !'' ಎಂದು ಪ್ರಶ್ನಿಸುತ್ತಾನೆ. ದೇವದೂತನು ಹೆಮ್ಮೆಯಿಂದ ''ಹೌದು'' ಎಂದು ಉತ್ತರಿಸುತ್ತಾನೆ. ಹಾಗಿದ್ದರೆ ''ಸರ್ ಡಬ್ ಮೈ'' ಎಂದರೇನು ? ಈ ನಿನ್ನ ಹೊತ್ತಿಗೆಯಲ್ಲಿ ಹುಡುಕಿ ಹೇಳು'' ಎಂದನು.

ದೇವದೂತನು ಬ್ರಹ್ಮದೇವನಿಂದ ತಂದ ಜ್ಞಾನದ ಹೊತ್ತಿಗೆಯಲ್ಲಿ 'ಸರ್ ಡಬ್ ಮೈ' ಪದಕ್ಕೆ ಅರ್ಥ ಸಿಕ್ಕುವುದಿಲ್ಲ. ತನ್ನ ಪ್ರಶ್ನೆಗೆ ಉತ್ತರ ಸಿಗದ ಜ್ಞಾನದ ಹೊತ್ತಿಗೆಯನ್ನು ಮುದುಕ ತಿರಸ್ಕರಿಸುತ್ತಾನೆ.

ನಾನು, ಮೇಲೆ ಹೇಳಿದ ಎರಡೂ ಪ್ರಸಂಗಗಳನ್ನು ಇಲ್ಲಿ ಪ್ರಸ್ತಾಪಿಸಿದ್ದರ ಉದ್ದೇಶ ನನ್ನದು ಮತ್ತು ದೇವದೂತನದು ಕೇವಲ ಪುಸ್ತಕದಿಂದ ಬಂದ ತಿಳಿವಳಿಕೆ; ನನ್ನ ಸೋದರಮಾವನದು ಮತ್ತು ಲಂಬಾಣಿ ಮುದುಕನದು ಸಮೃದ್ಧ ಜೀವನಾನುಭವದಿಂದ ಮೂಡಿ ಬಂದ ಪುಂಜೀಕೃತ ಮಸ್ತಕದ ತಿಳಿವಳಿಕೆ. ಪುಸ್ತಕ ಜ್ಞಾನ ಮತ್ತು ಮಸ್ತಕ ಜ್ಞಾನಗಳ ಮುಖಾಮುಖಿ ಹಾಗೂ ಪುಸ್ತಕ ಜ್ಞಾನದ ಮಿತಿಯನ್ನು ಈ ಪ್ರಸಂಗಗಳು ಏಕ್‌ದಂ ಬೆತ್ತಲೆಗೊಳಿಸುತ್ತವೆ, ಎಂಬುದನ್ನು ತಿಳಿಸುವುದಕ್ಕಾಗಿ.

ಅಕ್ಷರಸ್ಥ ಪರಂಪರೆಯು ಯಾರನ್ನು ಶತಶತಮಾನಗಳಿಂದ ಅನಕ್ಷರಸ್ಥರು, ಅಜ್ಞಾನಿಗಳು ಎಂದು ನಿರ್ಲಕ್ಷಿಸುತ್ತಾ ಬಂದಿದ್ದಿತೋ ಅಂತಹ 'ಅವಿದ್ಯಾವಂತ' ಬೃಹತ್ ಜನಸಮುದಾಯದ ಸಂಸ್ಕೃತಿ ಮತ್ತು ಲೋಕಜ್ಞಾನದ ಮೊತ್ತವೇ ಜಾನಪದ ಎನ್ನುವಂಥದ್ದು. ಈ ಜಾನಪದ-ಗೀನಪದ ಎನ್ನುವುದು ಮೊದಲು ತಿಳಿದಿರಲಿಲ್ಲ. ಪಾಶ್ಚಾತ್ಯ ಚಿಂತನೆಗಳು ಕನ್ನಡ ನಾಡನ್ನು ಪ್ರವೇಶಿಸಿದ ಮೇಲೆ ರೂಢಿಗೆ ಬಂದ ಪದವಿದು. ಅದಕ್ಕೆ ಮೊದಲು ನಮ್ಮ ಜನ ಇದನ್ನು ಕರೆಯುತ್ತಿದ್ದುದೇ ಲೋಕಜ್ಞಾನ, ಲೋಕದೃಷ್ಟಿ, ಗ್ರಾಮೀಣ ತಿಳಿವಳಿಕೆ, ಅನುಭವ ಇತ್ಯಾದಿ ಪದಗಳಿಂದ.



ಭಾರತದ ಸಂದರ್ಭದಲ್ಲಿ ಹಿಂದಿನಿಂದಲೂ ಚರ್ಚೆ ಮತ್ತು ವಿವೇಚನೆಗಳಿಗೆ ಒಳಗಾಗಿರುವಂಥದ್ದು ವೈದಿಕ ಸಂಸ್ಕೃತಿ ಮತ್ತು ಲೋಕಜ್ಞಾನವಷ್ಟೆ. ಚಾರಿತ್ರಿಕವಾಗಿ ಮತ್ತು ಧಾರ್ಮಿಕವಾಗಿ ಈ ವೈದಿಕ ತಿಳಿವಳಿಕೆಗೆ ರಾಜತ್ವದ ರಕ್ಷಣೆ ಮತ್ತು ಸಾಮಾಜಿಕ ಮನ್ನಣೆಗಳೆರಡೂ ಲಭಿಸಿವೆ. ಭಾರತೀಯ ಸಂಸ್ಕೃತಿಯನ್ನು ಅಧ್ಯಯನ ಮಾಡಿದ ದೇಶೀಯ ಮತ್ತು ವಿದೇಶೀಯ ವಿದ್ವಾಂಸರುಗಳೂ ಸಹ ಕುದುರೆಗೆ ಕಣ್ಣಪಟ್ಟಿ ಕಟ್ಟಿದಂತೆ ಇದನ್ನೇ ಅಖಿಲಭಾರತ ಲೋಕಜ್ಞಾನವೆಂದು ಪ್ರಕಟಿಸಿದರು. ಇವರ ಪ್ರತಿಪಾದನೆಗಳನ್ನು ಬಲವಾಗಿ ಆಧರಿಸಿದ ಬಲಪಂಥೀಯ ವಿಚಾರಧಾರೆಗಳು ವೈದಿಕ ಲೋಕಜ್ಞಾನವನ್ನು ಹಿಂದೂ ಸಂಸ್ಕೃತಿಯ ಹೆಸರಿನಲ್ಲಿ ಭಾರತೀಯರ ಮೇಲೆ ಹೇರಲು ಹೊರಟವು. ಪರಿಣಾಮವಾಗಿ ಆದರ್ಶ ಪುರುಷನಾದ ರಾಮ ಆಯುಧವಾಗಿ ಪರಿಣಮಿಸಿದನು. ರಾವಣನ ಒಕ್ಕಲುಗಳು ದಮನಕ್ಕೆ ಒಳಗಾದವು. ಬಹುರೂಪಿ ಸಂಸ್ಕೃತಿಯ ನೆಲೆಗಳುಳ್ಳ ಭಾರತದ ಬಹುಶ್ರುತ ಲೋಕಜ್ಞಾನವು ಏಕರೂಪದ ಹಾದಿಯನ್ನು ಹಿಡಿಯಿತು. ಅರಮನೆ-ಗುರುಮನೆಗಳ ಒಡ್ಡೋಲಗ, ಪಟ್ಟದ ಮನೆಗಳ ಸಂಭ್ರಮ, ಅದ್ದೂರಿ ಪಕ್ವಾನ್ನ ಭೋಜನಗಳು, ಆಚಾರ-ವಿಚಾರಗಳನ್ನು ಸಂಸ್ಕೃತಿ ಎಂದು ಭ್ರಮಿಸಲಾಯಿತೇ ಹೊರತು ಈ ನಾಡಿನ ಬೃಹತ್ ಜನಸಮುದಾಯದ ಜೀವನ ವಿಧಾನವನ್ನು ಅರಿಯಲು ಪ್ರಯತ್ನಿಸಲಿಲ್ಲ. ಜನಸಾಮಾನ್ಯರ ಬಹುಮುಖಿ ಸಂಸ್ಕೃತಿಯ ನೆಲೆಗಳನ್ನು ವಿದ್ವಾಂಸರು ಉದ್ದೇಶಪೂರ್ವಕವಾಗಿಯೇ ಮರೆಮಾಚಿದರು ಮತ್ತು ಆ ಬಗ್ಗೆ ಪ್ರಜ್ಞಾಪೂರ್ವಕ ಮೌನವನ್ನು ಕಾಯ್ದುಕೊಂಡು ಬಂದರು.

ಉತ್ಪಾದನಾ ವ್ಯವಸ್ಥೆಯೊಂದಿಗೆ, ಶ್ರಮದೊಂದಿಗೆ ನಿಕಟ ಸಂಬಂಧವನ್ನಿರಿಸಿಕೊಂಡ ಸಮಾಜದ ಬಹು ದೊಡ್ಡ ಜನಸಮುದಾಯವು ನಿರಂತರವಾದ ಧಾಳಿಗಳು ಮತ್ತು ತೀವ್ರವಾದ ಶೋಷಣೆಯ ನಡುವೆಯೂ ತನ್ನ ಧಾರ್ಮಿಕ ವಿಧಿಗಳಲ್ಲಿ, ದೈನಂದಿನ ನಡವಳಿಕೆಗಳಲ್ಲಿ, ಆಚಾರ-ವಿಚಾರಗಳಲ್ಲಿ ತನ್ನದೇ ಆದ ಸಾಂಸ್ಕೃತಿಕ ವೈಲಕ್ಷಣ್ಯಗಳನ್ನು ಜೀವಂತವಾಗಿ, ಕ್ರಿಯಾತ್ಮಕವಾಗಿ ಉಳಿಸಿಕೊಂಡು ಬಂದಿದೆ. ಸಂಸ್ಕೃತಿಯ ಸುದೀರ್ಘ ಪ್ರಯಾಣದ ವಿವರಗಳನ್ನು ಬಹುಮುಖಿ ಸಂಸ್ಕೃತಿಗಳು ತಮ್ಮಲ್ಲಿ ಅಂತರ್ಗತಿಸಿಕೊಂಡಿವೆ. ಯಜಮಾನ ಸಂಸ್ಕೃತಿಯ ಹೆಸರಿನಲ್ಲಿ ವೈದಿಕ ಸಂಸ್ಕೃತಿಯು ನೆಲದ ಸಂಸ್ಕೃತಿಗೆ ಎಸಗಿದ ಭಾರೀ ಮೋಸವನ್ನು, ಅಪಮಾನವನ್ನು, ಕ್ರೌರ್ಯಗಳನ್ನು ಸಹಿಸಿಕೊಂಡಿವೆ. ವೇದ ಸಂಪ್ರದಾಯದ ಘೋಷಗಳಿಂದ ಹೊರಹೊಮ್ಮಿದ, ಮಂಗಳಾರತಿ ತಟ್ಟೆಯಿಂದ ಉದುರಿದ ಅಗ್ರಹಾರ ಸಂಸ್ಕೃತಿಯ ಪೊಳ್ಳುತನವನ್ನು ಬೆತ್ತಲೆ ಮಾಡುವಲ್ಲಿ ಕೆಳವರ್ಗಗಳ ಲೋಕಜ್ಞಾನದ ಪ್ರಬಲವಾದ ಜಾನಪದೀಯ ಆಧಾರಗಳು ನಿರ್ಣಾಯಕ ಪಾತ್ರ ವಹಿಸುತ್ತವೆ. ಚರಿತ್ರೆ ಮತ್ತು ಸಂಸ್ಕೃತಿಗಳ ಅಧಿಕೃತ ಆಧಾರವಾದ ಜಾನಪದವು ನೆಲದ ಜನಸಮಾನ್ಯರ ಬಹುಮುಖಿ ಸಾಂಸ್ಕೃತಿಕ ಚಿತ್ರವನ್ನು ಕಟ್ಟಿಕೊಡುವಲ್ಲಿ ಶಕ್ತವಾಗಿದೆ.

ಭಾರತೀಯ ಸಂಸ್ಕೃತಿ ಎಂದರೆ ಏಕಾಕಾರಿಯಾದ ಹಿಂದೂ ಸಂಸ್ಕೃತಿ ಎಂದಷ್ಟೇ ಭಾವಿಸಿದ್ದ ಮಂದಿ ಗ್ರಂಥಸ್ಥ ಪರಂಪರೆಯಿಂದಾಚೆ ಇರುವ ಮೌಖಿಕ ಪರಂಪರೆಯನ್ನು ಅರ್ಥಯಿಸಿಕೊಳ್ಳಲಾರದೆ 'ಗೊರವರ ಡುಂಡುಚಿ, ಬೀದಿವರೆವ ಬೀರನ ಕಥೆ' ಎಂದು ಜನಪದರ ಲೋಕಜ್ಞಾನವನ್ನು ಹೀಗಳೆದರು. ನೆಲದ ಸಂಸ್ಕೃತಿಯ ಶೋಧನೆಗೆ ಜಾನಪದವು ಮೂಲ ಆಕರ ಎಂಬುದನ್ನು ಮರೆತರು. ಜಾನಪದ ಸಾಹಿತ್ಯದ ವಿಶ್ಲೇಷಣೆಯು ನಿಖರವಾಗಿ ನಡೆದಷ್ಟೂ ನೆಲದ ಸಂಸ್ಕೃತಿಯ ನಿಜ ದನಿಗಳೂ ಅರ್ಥ ಪಡೆದುಕೊಳ್ಳುತ್ತಾ ಹೋಗುತ್ತವೆಂಬ ಸತ್ಯದ ಅರಿವು ಅವರಿಗಾಗಲಿಲ್ಲ. ಧಾರ್ಮಿಕ, ಸಾಮಾಜಿಕ ಸಂಪ್ರದಾಯಗಳಿಗೆ ಜಾನಪದವು ಪರಿಕಲ್ಪನಾತ್ಮಕ ಚೌಕಟ್ಟನ್ನು ಒದಗಿಸಿಕೊಡುವುದೇ ಅಲ್ಲದೆ, ಚರಿತ್ರೆಯ ಅರಿವಿನ ಕೊರತೆಯನ್ನು ನೀಗಿಸುವ ಜಾನಪದವು ಆಳುವ ಸಂಸ್ಕೃತಿಗೆ ವಿರುದ್ಧವಾಗಿ ಸಾಂಸ್ಕೃತಿಕ ಅಂತಶ್ಚೈತನ್ಯವನ್ನು ಅದರ ಆಂತರಿಕ ರಚನೆಗಳನ್ನು ಪುನರ್ರೂಪಿಸುತ್ತದೆ.

ಜಾನಪದವು ಈ ನೆಲಕ್ಕೆ, ಈ ಬದುಕಿಗೆ ನೇರವಾಗಿ ಸಂಬಂಧಿಸಿದ್ದು, ಬದುಕಿನ ಸುಖದುಃಖಗಳನ್ನು ದೈನಂದಿನ ಹಾಡುಪಾಡುಗಳನ್ನು, ಮಾನವೀಯ ಸಂಬಂಧಗಳನ್ನು, ಪಶು ಪಕ್ಷಿ ಪ್ರಾಣಿಗಳನ್ನು, ಗಿಡ ಮರ ಬಳ್ಳಿ ಬೆಳೆಗಳನ್ನು ಕುರಿತು ಸಮೃದ್ಧವಾಗಿ ಅಭಿವ್ಯಕ್ತಿಸಿದ ಸಾಹಿತ್ಯ. ಜೀವಪರವಾದ, ಇರುವುದನ್ನು ಒಪ್ಪಿಕೊಂಡು ಇಲ್ಲದುದಕ್ಕೆ ತಡಕಾಡದೆ ಬದುಕುವ ಸಂತೃಪ್ತಿ, ನೆಮ್ಮದಿ, ಜೀವನಪ್ರೀತಿಗಳೂ ಇಲ್ಲಿ ಅಗಾಧವಾಗಿವೆ. ನಂಬಿಕೆ, ಆಚರಣೆ, ಭಾಷೆ ಎಲ್ಲದರಲ್ಲೂ ವೈದಿಕ ಪರಂಪರೆಗಿಂತ ಭಿನ್ನವಾಗಿ ಬೆಳೆದುಬಂದ ಈ ಸಾಹಿತ್ಯವು ಅಕ್ಷರಸ್ಥ ಪರಂಪರೆಯ ವಂಚನೆಗೀಡಾದುದರ ಫಲವಾಗಿ ಜಾನಪದವನ್ನು ಸಾರುವ ಯಾವುದೇ ಗ್ರಂಥವಾಗಲಿ, ಟೀಕೆ ಟಿಪ್ಪಣಿಗಳಾಗಲಿ ಎಲ್ಲಿಯೂ ದಾಖಲಾಗದೆ ಹೋದ ಕಾರಣ ಕ್ರಮಬದ್ಧವಾದ ಇತಿಹಾಸ ಜಾನಪದಕ್ಕೆ ಪ್ರಾಪ್ತವಾಗಲಿಲ್ಲ. ''ಆದಿ

ಮಾನವ ವ್ಯಕ್ತಿಯಾಗಿ, ಜೋಡಿಯಾಗಿ, ನಂತರ ಸಮುದಾಯವಾಗಿ ಹಂತಹಂತವಾಗಿ ತನ್ನ ಬದುಕಿನ ವಿನ್ಯಾಸಗಳನ್ನು ಮತ್ತು ಉದ್ದೇಶಗಳನ್ನು ವಿಸ್ತರಿಸುವ, ಪೂರೈಸಿಕೊಳ್ಳುವ ದೃಷ್ಟಿಯಿಂದ ಸಾಹಿತ್ಯ, ಕಲೆ, ದೈವದೃಷ್ಟಿ, ಜೀವನಾಧಾರಿತ ಕೃಷಿ ಮತ್ತಿತರ ಕಸುಬುಗಳು, ಶಿಕ್ಷಣ ವ್ಯವಸ್ಥೆ ಮುಂತಾದುವುಗಳನ್ನು ರೂಪಿಸಿಕೊಂಡು ಬದುಕಿನ ಸುಖ-ಸಂತೋಷಗಳಿಗಾಗಿ ಅವುಗಳನ್ನು ಅನುಷ್ಠಾನದಲ್ಲಿ ತಂದನೆಂಬುದನ್ನು ನಮ್ಮ ಬಹುಪಾಲು ಶಿಷ್ಟ ಮೀಮಾಂಸಕರು ಮತ್ತು ಚರಿತ್ರಕಾರರು ಗಮನಿಸಲಿಲ್ಲ; ದಾಖಲಿಸಲೂ ಇಲ್ಲ. ಚರಿತ್ರೆಯ ಪುಟಗಳಲ್ಲಿ ಅಲ್ಲಲ್ಲಿ ಪ್ರಾಚೀನ ಜನಾಂಗಗಳ ಬದುಕಿನ ವಿಸ್ತರಣೆಗೆ ಸಾಧನವಾದ ಈ ಅಂಶಗಳನ್ನು ಪ್ರಸ್ತಾಪಿಸಲಾಗಿದ್ದರೂ ಅವಕ್ಕೆ ನಿಜವಾದ ಚಾರಿತ್ರಿಕ ಮಹತ್ವವನ್ನು ಕೊಡಲಿಲ್ಲ. ಈ ಕಾರಣ ಭಾರತದ ಸಂಸ್ಕೃತಿಯ ಪರಂಪರೆಯಲ್ಲಿ ಜಾನಪದ ಸಂಸ್ಕೃತಿಯ ಮತ್ತು ಅದರ ಮುಖ್ಯ ಮುಖಗಳಾದ ಸಾಹಿತ್ಯ ಮತ್ತು ಕಲೆಗಳಿಗೆ ಭಾರತದ ಕಾವ್ಯ ಹಾಗೂ ಇತಿಹಾಸದಲ್ಲಿ ಪ್ರಧಾನ ಸ್ಥಾನ ಸಿಗಲಿಲ್ಲ.'' (ಎಚ್. ಜೆ. ಲಕ್ಕಪ್ಪಗೌಡ : ೧೯೯೮). ಆದಾಗ್ಯೂ ತಲೆತಲೆಮಾರುಗಳಿಂದಲೂ ಕಂಠಸ್ಥ ಪರಂಪರೆಯಲ್ಲಿ ಕೇಳಿದ್ದನ್ನು ನೆನಪಿನಲ್ಲಿರಿಸಿಕೊಂಡು, ನೋಡಿದ್ದನ್ನು ಅನುಕರಿಸುತ್ತಾ ಸಂಕಲನ ವ್ಯವಕಲನಗಳಿಗೆ ಒಳಗಾಗುತ್ತಾ ಬಂದಿರುವ ಸಮಷ್ಟಿ ಲೋಕಜ್ಞಾನ – ಲೋಕದೃಷ್ಟಿಯುಳ್ಳ ಪರಂಪರೆ ಇದು.

ಜಾಗತಿಕ ಮಹಾಯುದ್ಧಗಳ ನಂತರ ವಿಶ್ವದಲ್ಲಿ ಜರುಗಿದ ವಿದ್ಯಮಾನಗಳು ಗ್ರಾಮೀಣ ಸಮುದಾಯಗಳ ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ಬುಡಗಳನ್ನು ಬೇರುಸಹಿತ ಅಲ್ಲಾಡಿಸಿದವು. ಅಂತಹ ಸಂದರ್ಭದಲ್ಲಿ ಭಾರತದ ನೆಲದಲ್ಲಿ ವಸಾಹತೀಕರಣವು ಜಾನಪದ ಅಧ್ಯಯನವನ್ನು ಹುಟ್ಟುಹಾಕಿತು. ವರ್ತಮಾನದ ಕಷ್ಟಗಳನ್ನು ಗೆಲ್ಲಲು ಭೂತಕಾಲದ ಭವ್ಯ ಮೌಲ್ಯಗಳನ್ನು ಎತ್ತಿಹಿಡಿಯ ಹೊರಟಿದ್ದು ಜಾನಪದ ಅಧ್ಯಯನದ ಆರಂಭದ ತತ್ವ ಚಿಂತನೆಯಾಗಿದ್ದಿತು. ಕ್ರಿ.ಶ. ೧೮೪೬ರಲ್ಲಿ ಮೊತ್ತಮೊದಲ ಬಾರಿಗೆ folklore ಎಂಬ ಆಗ್ಲೋ-ಸ್ಯಾಕ್ಸನ್ ಶಬ್ದವನ್ನು ಜಗತ್ತಿನಾದ್ಯಂತ ರೂಢಿಗೆ ತಂದ ಬ್ರಿಟಿಷ್ ಪ್ರಾಚೀನಾನ್ವೇಷಕ ಹಾಗೂ ಆಸ್ಪತ್ರೆಯೊಂದರಲ್ಲಿ ಗುಮಾಸ್ತನಾಗಿದ್ದ ವಿಲಿಯಂ ಜಾನ್ ಥಾಮ್ಸನ್ ಮಾಡಿದ್ದು ಇದನ್ನೇ. ಕ್ರಮೇಣ ಶಿಷ್ಟ-ಅಶಿಷ್ಟ ಎನ್ನದೆ ಎಲ್ಲರೂ ತಮ್ಮೊಳಗಿನ ಜಾನಪದವನ್ನು ಹುಡುಕಹೊರಟರು. ಕನ್ನಡನಾಡಿನಲ್ಲಿಯೂ ಸಾಹಿತ್ಯ-ಸಂಸ್ಕೃತಿಯ ಪ್ರವರ್ಧನೆಗೆ ಸಂಬಂಧಪಟ್ಟಂತೆ ಹುಡುಕುವ ಕ್ರಿಯೆ ಆರಂಭವಾಯಿತು. ಪಾಶ್ಚಾತ್ಯ ಜಾನಪದ ಅಧ್ಯಯನವು ಇದಕ್ಕೆ ಪ್ರೇರಣೆ ನೀಡಿತು. ವಿಶ್ವವಿದ್ಯಾಲಯಗಳು ಜಾನಪದ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರ ಫಲವಾಗಿ ಜಾನಪದ ಸಾಹಿತ್ಯ ಚಿಂತನೆಯಿಂದ ಜಾನಪದದ ಕಡೆ ಚಿಂತಿಸುವಂತಹ ಹೊಸ ಶಕೆ ಆರಂಭವಾಯಿತು. ಜಾನಪದ ಸಾಹಿತ್ಯ ಸಂಗ್ರಹದ ಕಡೆ ಹೆಚ್ಚು ಗಮನಹರಿಸುತ್ತಿದ್ದ ವಿದ್ವಾಂಸರು ಜಾನಪದ ಸಂಶೋಧನೆಗೆ ಹೆಚ್ಚು ಒತ್ತು ನೀಡಿದರು. ಸಂಗ್ರಹ, ಅಧ್ಯಯನ, ಅಧ್ಯಾಪನದ ಜತೆಜತೆಗೆ ಜಾನಪದವನ್ನು ವಿದ್ವಾಂಸರು ಬೆಳೆಸಿದರು.

ಈ ಹಿನ್ನೆಲೆಯಲ್ಲಿ ಕನ್ನಡ ಜಾನಪದ ಅಧ್ಯಯನ ನಡೆದು ಬಂದ ಹಾದಿಯ ಮುಖ್ಯಾಂಶಗಳನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ.

ವಾಸ್ತವವಾಗಿ ಭಾರತದಲ್ಲಿ ಜಾನಪದ ಸಂಗ್ರಹಕಾರ್ಯ ಆರಂಭವಾದದ್ದು ಕ್ರೈಸ್ತ ಮಿಷನರಿಗಳಿಂದ ಮತ್ತು ಬ್ರಿಟಿಷ್ ಅಧಿಕಾರಿಗಳಿಂದ. ವ್ಯಾಪಾರಕ್ಕೆಂದು ಭಾರತಕ್ಕೆ ಕಾಲಿರಿಸಿದ ಈಸ್ಟ್ ಇಂಡಿಯಾ ಕಂಪನಿಯು ಭಾರತದ ರಾಜಕೀಯ ಪರಿಸ್ಥಿತಿಯನ್ನು ತನ್ನ ಅನುಕೂಲಕ್ಕೆ ಬಳಸಿಕೊಂಡಿತು. ಸ್ಥಳೀಯ ಆಳರಸರ ಅನೈಕಮತ್ಯ ಮತ್ತು ಅಂತಃಕಲಹಗಳು ಭಾರತವನ್ನು ಸುಲಭವಾಗಿ ವಸಾಹತೀಕರಣಕ್ಕೆ ಒಳಗುಮಾಡಿದವು. ಭಾರತವನ್ನು ತಮ್ಮ ವಸಾಹತು ರಾಷ್ಟ್ರವನ್ನಾಗಿ ಮಾಡಿಕೊಂಡ ಬ್ರಿಟಿಷರು ರಾಜಕೀಯ ಮತ್ತು ಧಾರ್ಮಿಕ ಕಾರಣಗಳಿಗಾಗಿ ಸ್ಥಳೀಯ ಸಂಸ್ಕೃತಿ-ಭಾಷೆಯತ್ತ ಗಮನಹರಿಸಬೇಕಾಗಿ ಬಂತು. ತಮ್ಮ ಆಡಳಿತದ ಸರಾಗ ನಿರ್ವಹಣೆಗಾಗಿ ಮತ್ತು ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಜನರ ಬದುಕನ್ನು ಅರಿಯಬೇಕಾಗಿ ಬಂತು. ಕನ್ನಡ ನಾಡಿನ ಜನಸಮುದಾಯಗಳ ಬದುಕು ಜಾನಪದದ ವೈವಿಧ್ಯಮಯ ಪ್ರಕಾರಗಳಿಂದ ಪ್ರಭಾವಿಸಲ್ಪಟ್ಟಿದ್ದುದನ್ನು ಬ್ರಿಟಿಷ್ ಅಧಿಕಾರಿಗಳು ಮತ್ತು ಮತ ಪ್ರಚಾರಕರು ಗ್ರಹಿಸಿದರು. ಇದನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಸದುಪಯೋಗ ಪಡಿಸಿಕೊಳ್ಳುವ ದಿಕ್ಕಿನಲ್ಲಿ ಚಿಂತಿಸಿದ ಮತ ಪ್ರಚಾರಕರು ಜನಪದರ ಗೀತೆ, ಕಥೆ, ಗಾದೆ, ಒಗಟು, ಸಂಸ್ಕೃತಿಯಂತಹ ವಿಷಯಗಳತ್ತ ಸಹಜವಾಗಿ ಆಕರ್ಷಿತರಾದರು; ಪ್ರಾದೇಶಿಕ ಸಂಸ್ಕೃತಿಯ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಜನರ ಭಾಷೆಯನ್ನು ಕಲಿಯುವುದರ ಮೂಲಕ ಜನರ ನಡವಳಿಕೆಗಳನ್ನು ತಿಳಿದುಕೊಂಡರು. ಜನರಿಗೆ ಸುಲಭವಾಗಿ ಅರ್ಥವಾಗುವ, ಜನರಲ್ಲಿ ವ್ಯಾಪಕವಾಗಿ ಪ್ರಚಾರ ಪಡೆದುಕೊಂಡಿದ್ದ ಜಾನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ತಮ್ಮ ಧರ್ಮದ ಸುವಾರ್ತೆಗಳನ್ನು ಬಿತ್ತರಿಸಲಾರಂಭಿಸಿದರು. ಆರಂಭಕ್ಕೆ ತಮ್ಮನ್ನು ಆಕರ್ಷಿಸಿದ ಜಾನಪದ ಸಾಹಿತ್ಯ-ಸಂಗೀತದ ದನಿಗಳನ್ನು ಕ್ರಮೇಣ ಸಂಗ್ರಹಿಸಿ ದಾಖಲಿಸುವ ಆಸಕ್ತಿಯೆಡೆಗೆ ಹೊರಳಿಸಿಕೊಂಡರು. ಹೀಗೆ ಕರ್ನಾಟಕ ಜಾನಪದ ಅಧ್ಯಯನಕ್ಕೆ ಸಹಜ ಕುತೂಹಲದಿಂದ ಕೈಯಿಕ್ಕಿದ ವಿದೇಶೀ ವಿದ್ವಾಂಸರುಗಳಲ್ಲಿ ಅಬೆ ಡುಬಾಯ್ಸ್, ಕರ್ನಲ್ ಮೆಕೆಂಜಿ, ಜಾನ್ ಲೇಡನ್, ಮೋಗ್ಲಿಂಗ್, ಚಾರ್ಲ್ಸ್ ಗೋವರ್, ಫರ್ಡಿನೆಂಡ್ ಕಿಟೆಲ್, ಜಾನ್ ಎಫ್. ಫ್ಲೀಟ್ ಮೊದಲಾದವರು ಮುಖ್ಯರು.

ಭಾರತದಲ್ಲಿ ಗಣಿತಶಾಸ್ತ್ರದ ಬಗ್ಗೆ ದೊರಕುವ ಮಾಹಿತಿಗಳನ್ನು ಸಂಗ್ರಹಿಸುವ ಉದ್ದೇಶದಿಂದ ೧೭೮೩ರಲ್ಲಿ ಭಾರತಕ್ಕೆ ಬಂದ ಸ್ಕಾಟ್ಲೆಂಡಿನ ಕರ್ನಲ್ ಮೆಕೆಂಜಿ ಅನಂತರದಲ್ಲಿ ಮಿಲಿಟರಿ ಅಧಿಕಾರಿಯಾಗಿ ಕರ್ನಾಟಕದ ಹಳ್ಳಿಹಳ್ಳಿಗಳನ್ನು ತಿರುಗಿ ಮಾಹಿತಿ ಸಂಗ್ರಹಿಸಿ ರಚಿಸಿದ 'ಕನ್ನಡ ಕೈಫಿಯತ್ತುಗಳು' ಕೃತಿಯು ಯಾವತ್ತಿಗೂ ಜಾನಪದ ಅಧ್ಯಯನಕ್ಕೆ ಬಹು ಅಮೂಲ್ಯವಾದ ಆಕರ ಕೃತಿಯಾಗಿದೆ. ಕರ್ನಾಟಕದ ಶಾಸನಗಳು, ಚಾರಿತ್ರಿಕ ವಿವರಗಳು, ಊರು-ಕೇರಿಗಳು, ಭೌಗೋಳಿಕ ವಿವರಗಳು, ಆಚಾರ-ವಿಚಾರಗಳು, ಕೃಷಿ, ವ್ಯಾಪಾರ-ವ್ಯವಹಾರ ಎಲ್ಲವನ್ನು ಸಮಗ್ರವಾಗಿ ಪರಿಚಯಿಸುವ ಸಾಮಾಜಿಕ ಚರಿತ್ರೆಯ ಆಕರಗಳಾಗಿವೆ.

ಕವಿ, ವಿದ್ವಾಂಸ ಜಾನ್ ಲೇಡನ್ ೧೮೦೩ರಲ್ಲಿ ಸಂಗ್ರಹಿಸಿ ಪ್ರಕಟಿಸಿದ 'ಶ್ರೀರಂಗಪಟ್ಟಣದ ಕೇಡುಗಾಲ' ಲಾವಣಿಯು ಟಿಪ್ಪುವಿನ ಪತನದ ನಂತರದ ದುಸ್ಥಿತಿಯನ್ನು ಪರಿಚಯಿಸುತ್ತದೆ.

೧೭೯೨ರಲ್ಲಿ ಭಾರತಕ್ಕೆ ಬಂದ ಫ್ರಾನ್ಸ್ ದೇಶದ ಕ್ರೈಸ್ತ ಧರ್ಮ ಪ್ರಚಾರಕ ಅಬೆ ಡುಬಾಯ್ಸ್ ೧೮೧೬ರಲ್ಲಿ ಇಂಗ್ಲಿಷಿನಲ್ಲಿ ಬರೆದ 'Hindu Manners, Customs and Ceremonies' ಕೃತಿಯು ಸ್ಥಳೀಯ ಹಿಂದೂ ಸಮಾಜದ ಸಂಪ್ರದಾಯಗಳು, ಆಚರಣೆಗಳು, ನಡಾವಳಿಗಳು, ಹಬ್ಬಹರಿದಿನಗಳನ್ನು ಆಮೂಲಾಗ್ರವಾಗಿ ಪರಿಚಯಿಸುತ್ತದೆ.

೧೮೫೮ರಲ್ಲಿ ಡಾ॥ ಹರ್ಮನ್ ಮೋಗ್ಲಿಂಗ್ ಪ್ರಕಟಿಸಿದ 'ಮೂರು ಸಾವಿರ ಗಾದೆಗಳು' ಕನ್ನಡದ ಪ್ರಪ್ರಥಮ ಗಾದೆಗಳ ಸಂಕಲನವಾದರೆ, ೧೮೬೮ರಲ್ಲಿ ಪ್ರಕಟವಾದ ಮೇರಿ ಫ್ರೇರೆಯ 'Old Deccan Days' ಕನ್ನಡದ ೨೪ ಜಾನಪದ ಕತೆಗಳುಳ್ಳ ಮೊತ್ತಮೊದಲ ಕಥಾ ಸಂಕಲನ. ೧೮೭೧ರಲ್ಲಿ ಪ್ರಕಟವಾದ ಚಾರ್ಲ್ಸ್ ಇ. ಗೋವರ್ ಅವರ 'The Folk Songs of Southern India' ಕೃತಿಯು ದಕ್ಷಿಣಭಾರತದ ಕನ್ನಡ, ತಮಿಳು, ತೆಲುಗು, ಮಲೆಯಾಳಂ, ಬಡಗ ಮತ್ತು ಕೊಡವ ಭಾಷೆಗಳಲ್ಲಿರುವ ಜಾನಪದ ಗೀತೆಗಳ ಸಂಕಲನವಾಗಿದೆ.

ಕ್ರೈಸ್ತಮತ ಪ್ರಚಾರಕರಾದ ರೆವರೆಂಡ್ ಫಾದರ್ ಫರ್ಡಿನೆಂಡ್ ಕಿಟೆಲ್ ಅವರು ೧೮೯೪ರಲ್ಲಿ ಹೊರತಂದ ಬೃಹತ್ ಕನ್ನಡ ನಿಘಂಟು ಮುಂದಿನ ಕನ್ನಡ ನಿಘಂಟುಕಾರರಿಗೆ ಆದ್ಯ ಕೃತಿಯಾಗಿ ಪರಿಣಮಿಸಿದೆ. ಕರ್ನಾಟಕದಾದ್ಯಂತ ಸಂಚರಿಸಿದ ಕಿಟೆಲ್‌ರು ೪೧೬೮ ಗಾದೆಗಳನ್ನು ತಮ್ಮ ನಿಘಂಟಿನಲ್ಲಿ ಪದಗಳ ಬಳಕೆ ಮತ್ತು ಅರ್ಥ ಖಚಿತತೆಗಾಗಿ ನೀಡಿರುತ್ತಾರೆ. ಕಿಟೆಲ್ ಕೋಶದಲ್ಲಿರುವ ಗಾದೆಗಳನ್ನು ಬಳಸಿಕೊಂಡೇ ರಾಗೌ ಅವರು 'ಕಿಟೆಲ್ ಕೋಶದ ಗಾದೆಗಳು' ಎಂಬ ಕೃತಿಯನ್ನು ಹೊರತಂದಿದ್ದಾರೆ ಎಂಬುದು ಕಿಟೆಲ್ ಅವರ ಜಾನಪದ ಆಸಕ್ತಿ, ಪರಿಶ್ರಮವನ್ನು ಪರಿಚಯಿಸುತ್ತದೆ.

೧೮೬೭ರಲ್ಲಿ ಭಾರತಕ್ಕೆ ಬಂದು, ಮುಂಬಯಿ ಸರ್ಕಾರದಲ್ಲಿ ಕಂದಾಯ ಇಲಾಖೆಯ ಅಧಿಕಾರಿಯಾಗಿದ್ದ ಜಾನ್ ಫೆಯ್ತ್‌ಫುಲ್ ಫ್ಲೀಟ್ ಅವರು ಕನ್ನಡ ಜಾನಪದ ಕ್ಷೇತ್ರಕ್ಕೆ ಲಾವಣಿ ಸಂಪ್ರದಾಯವನ್ನು ಪರಿಚಯಿಸಿದ ಆದ್ಯರು. ೧೮೮೫ರಿಂದ ೧೯೦೦ರ ಅವಧಿಯಲ್ಲಿ ಇವರು ಸಂಗ್ರಹಿಸಿದ ಎಂಟು ಲಾವಣಿಗಳೂ ಇಂಡಿಯನ್ ಆ್ಯಂಟಿಕ್ವರಿಯಲ್ಲಿ ಪ್ರಕಟವಾಗಿದ್ದು ಶ್ರೀ ಕ್ಯಾತನಹಳ್ಳಿ ರಾಮಣ್ಣನವರು 'ಫ್ಲೀಟರು ಸಂಗ್ರಹಿಸಿದ ಐದು ಐತಿಹಾಸಿಕ ಲಾವಣಿಗಳು' ಎಂಬ ಕೃತಿಯನ್ನು ಹೊರತರುವುದರ ಮೂಲಕ ಕನ್ನಡ ಜಾನಪದಕ್ಕೆ ಪರಿಚಯಿಸಿದರು. ಈ ಐದೂ ಲಾವಣಿಗಳು ಬ್ರಿಟಿಷರ ದೌರ್ಜನ್ಯ, ಅನ್ಯಾಯ, ದಬ್ಬಾಳಿಕೆ, ಕ್ರೌರ್ಯಗಳನ್ನು ತಿಳಿಸಿಕೊಡುತ್ತವೆ. ಒಬ್ಬ ಉನ್ನತ ಬ್ರಿಟಿಷ್ ಅಧಿಕಾರಿಯಾಗಿದ್ದು, ತನ್ನದೇ ಸರ್ಕಾರದ ದೌರ್ಜನ್ಯಗಳನ್ನು ಅಭಿವ್ಯಕ್ತಿಸುವ ಲಾವಣಿಗಳನ್ನು ಸಂಗ್ರಹಿಸುವಲ್ಲಿ ಫ್ಲೀಟ್‌ರು ತೋರಿದ ನಿಷ್ಪಕ್ಷಪಾತ ಬುದ್ಧಿ, ದಿಟ್ಟತನ, ಔದಾರ್ಯ ಅಭಿನಂದನಾರ್ಹವಾದುದು.

ಕ್ರೈಸ್ತಮತ ಪ್ರಚಾರದ ಉದ್ದೇಶದಿಂದ ಮಂಗಳೂರಿನಲ್ಲಿ ಸ್ಥಾಪಿಸಲ್ಪಟ್ಟ ಬಾಸೆಲ್ ಮಿಷನ್ ಸಂಸ್ಥೆಯು ಕರ್ನಾಟಕ ಜಾನಪದ ಅಧ್ಯಯನಕ್ಕೆ ನೀಡಿರುವ ಕೊಡುಗೆ ಅನನ್ಯವಾದುದು.

ಬ್ರಿಟಿಷರು ಭಾರತಕ್ಕೆ ಬರುವವರೆಗೂ ಭಾರತೀಯರಿಗೆ ಜಾನಪದದ ಬಗೆಗಿನ ತಿಳಿವಳಿಕೆಯೇ ಇರಲಿಲ್ಲ. ಕನ್ನಡದ ಸಂದರ್ಭದಲ್ಲಂತೂ ಅಂತಹುದೊಂದು ಜಾನಪದ ಪ್ರಜ್ಞೆಯನ್ನು ಹುಟ್ಟುಹಾಕಿದುದಲ್ಲದೆ, ಆ ಮೂಲಕ ಕನ್ನಡ ಜಾನಪದ ಅಧ್ಯಯನಕ್ಕೆ ನಾಂದಿ ಹಾಡಿದವರು ಬ್ರಿಟಿಷ್‌ರು. ಇದರಿಂದಾಗಿ ಕನ್ನಡ ಜಾನಪದ ಕ್ಷೇತ್ರಕ್ಕೆ ಅಮೂಲ್ಯವಾದ

ಆಕರಗಳು ದೊರೆತವು. ಬ್ರಿಟಿಷರು ಜಾನಪದದ ಮೇಲಿನ ಪ್ರೀತಿಯಿಂದ ಕೆಲಸ ಮಾಡಿದರೊ ಇಲ್ಲಾ ಸ್ವಲಾಭಕ್ಕಾಗಿ ಈ ಕಾಯಕದಲ್ಲಿ ತೊಡಗಿಸಿಕೊಂಡರೊ ಎಂಬುದು ಆನುಷಂಗಿಕ ವಿಚಾರ. ಆದರೆ ಈ ಕಾಲಘಟ್ಟದಲ್ಲಿ ಕನ್ನಡ ಜಾನಪದ ಕ್ಷೇತ್ರಕ್ಕೆ ದೊರೆತಿದ್ದು ಮಾತ್ರ ಅತ್ಯಂತ ಪ್ರಾಮಾಣಿಕವಾದ ದಾಖಲೆಗಳೆಂಬುದು ನಿರ್ವಿವಾದ. ಜನ ಬದುಕಿನೊಂದಿಗೆ ನೇರ ಸಂಬಂಧವನ್ನಿರಿಸಿಕೊಡು, ಕ್ಷೇತ್ರಕಾರ್ಯ ನಡೆಸಿ, ಊರೂರು ಸುತ್ತಿ ಜಾನಪದ ಸಾಮಗ್ರಿಯನ್ನು ಸಂಗ್ರಹಿಸಿದ್ದರ ಫಲವಾಗಿ, ಕಾಲಗರ್ಭದಲ್ಲಿ ಕಣ್ಮರೆಯಾಗಿ ಹೋಗುತ್ತಿದ್ದ ಬಹುಪಾಲು ಜಾನಪದ ಸಾಹಿತ್ಯ, ಚಾರಿತ್ರಿಕ ದಾಖಲೆಗಳು ಲಭಿಸಿದವು. ಈ ದೃಷ್ಟಿಯಿಂದ ಆಂಗ್ಲರ ಆಸಕ್ತಿ ಮತ್ತು ಕಳಕಳಿಗಳನ್ನು ಮೆಚ್ಚಬೇಕಾಗಿರುತ್ತದೆ. ''ಜಾನಪದದ ಬಗ್ಗೆ ಪ್ರೀತಿಪೂರ್ಣವಾದ ಮತ್ತು ಅಭಿಮಾನಪೂರ್ಣವಾದ ದೃಷ್ಟಿ ಮತ್ತು ಜ್ಞಾನಗಳೇ ನಮಗೆ ಇಲ್ಲದಿದ್ದ ಕಾಲದಲ್ಲಿ ನಾವು ಕಡೆಗಣಿಸಿದ್ದ ಮತ್ತು ಅರ್ಥಪೂರ್ಣವಾದ ಒಂದು ಹಿರಿಯ ಪರಂಪರೆ ಹೇಗಿದೆ ಎಂಬುದನ್ನು ಸೂಚಿಸುವ ಮೂಲಕ ನಮ್ಮ ಸಾಹಿತಿಗಳಲ್ಲಿ, ಸಂಸ್ಕೃತಿ ಶೋಧಕರಲ್ಲಿ ಹೊಸದೊಂದು ಕಣ್ಣನ್ನು ತೆರೆದರು.'' (ಎಚ್. ಜೆ. ಲಕ್ಕಪ್ಪಗೌಡ : ೧೯೯೮)

ಬ್ರಿಟಿಷರ ಜಾನಪದ ಅಧ್ಯಯನದ ಅವಧಿಯ ಅನಂತರದ ಕನ್ನಡ ಜಾನಪದ ಚಿಂತನೆಯ ಇದುವರೆಗಿನ ಕಾಲಘಟ್ಟವನ್ನು ಮುಖ್ಯವಾಗಿ ಮೂರು ಹಂತಗಳನ್ನಾಗಿ ವಿಭಾಗೀಕರಿಸಿಕೊಳ್ಳಬಹುದು. ಅವುಗಳು :

೧) ಸ್ವಾತಂತ್ರ್ಯಪೂರ್ವದಲ್ಲಿ ಕೆಲಸ ಮಾಡಿದ ದೇಶೀ ಅಭಿವೃದ್ಧಿ ಚಿಂತಕರು

೨) ಸ್ವಾತಂತ್ರ್ಯಾನಂತರದಲ್ಲಿ ಕೆಲಸ ಮಾಡಿದ ಪಾಶ್ಚಾತ್ಯ ಪ್ರಭಾವ ಚಿಂತಕರು

೩) ಸಮಕಾಲೀನ ಸಂದರ್ಭದ ಸಮಾಜವಾದಿ ಮತ್ತು ದೇಶೀವಾದಿ ಚಿಂತಕರು.

ಸ್ವಾತಂತ್ರ್ಯಪೂರ್ವದಲ್ಲಿನ ದೇಶೀ ಅಭಿವೃದ್ಧಿ ಚಿಂತನೆಯ ಕಾಲಘಟ್ಟವು ಸಂದಿಗ್ಧತೆಗೊಳಪಟ್ಟಿತ್ತು. ಆಗತಾನೇ ಮುದ್ದಣ, ಕೆಂಪುನಾರಾಯಣ, ಗಳಗನಾಥರಂತಹ ಬರಹಗಾರರ ಪ್ರಭಾವಗಳಿಂದ ಮುಕ್ತರಾಗಿ, ಹಳಗನ್ನಡ ಸಾಹಿತ್ಯ ಪರಂಪರೆಯಿಂದ ಬಿಡಿಸಿಕೊಂಡು ಅಚ್ಚ ಕನ್ನಡ ಬರವಣಿಗೆಯ ವಾತಾವರಣವನ್ನು ನಿರ್ಮಾಣ ಮಾಡಬೇಕಾದ ಜವಾಬ್ದಾರಿಯ ಕಾಲವಾಗಿದ್ದಿತು. ಕನ್ನಡ ಬರವಣಿಗೆಗೆ ಜೀವದ್ರವ್ಯವನ್ನು ನೀಡಬಲ್ಲ ದೇಶೀ ಸತ್ವ ಅವಶ್ಯಕವಾಗಿದ್ದಿತು. ಇಂತಹ ಸಂದರ್ಭದಲ್ಲಿ ಜಯ ಕರ್ನಾಟಕ, ವಿಶ್ವ ಕರ್ನಾಟಕ, ಜೀವನ, ಜಯಂತಿ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಂತಹ ಪತ್ರಿಕೆಗಳು ನಿರಂತರವಾಗಿ ಜಾನಪದೀಯ ಲೇಖನಗಳನ್ನು ಪ್ರಕಟಿಸಲಾರಂಭಿಸಿದವು. ಜಾನಪದ ಸಾಹಿತ್ಯದ ಹಿರಿಮೆ-ಗರಿಮೆ, ಸಾರ-ಸತ್ವ, ಸೊಗಸು-ಸಂರಕ್ಷಣೆಗಳ ಅಗತ್ಯವನ್ನು ನಾಡಿನಾದ್ಯಂತ ಸಾರಲಾರಂಭಿಸಿದವು. ಪ್ರಜ್ಞಾವಂತರು, ಬರಹಗಾರರು ಈ ಲೇಖನಗಳಿಂದ ಆಕರ್ಷಿತರಾದರು. ೧೮೯೪ರಲ್ಲಿ ಬೆಳಗಾವಿಯ ಹಣಮಂತ ಜೋಶಿಯವರು ಸಾಮತಿ ಸಂಗ್ರಹ ಎಂಬ ಕನ್ನಡ ಗಾದೆಗಳ ಸಂಕಲನವನ್ನು ಪ್ರಕಟಿಸಿದರು. ೧೯೨೪ರಲ್ಲಿ ನಡಿಕೇರಿಯಿಂದ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ' ಕೃತಿಯು ಪ್ರಕಟಗೊಂಡಿತು. ೧೯೩೧ರಲ್ಲಿ ಹಲಸಂಗಿ ಸೋದರರು ಸಂಗ್ರಹಿಸಿ ಪ್ರಕಟಿಸಿದ 'ಗರತಿಯ ಹಾಡುಗಳು' ಎಂಬ ಜಾನಪದ ಗೀತೆಗಳ ಸಂಕಲನವು ನೂತನ ಮನ್ವಂತರವನ್ನೇ ಆರಂಭಿಸಿತು. ಈ ಸಂಗ್ರಹಕ್ಕೆ ಮುನ್ನುಡಿ ಬರೆದ ಬಿ.ಎಂ.ಶ್ರೀ.ಯವರು ಆಡಿದ 'ಜನವಾಣಿ ಬೇರು : ಕವಿವಾಣಿ ಹೂವು' ಎಂಬ ಹೇಳಿಕೆಯು ಅದುವರೆಗಿನ ಹಳೆಗನ್ನಡ ಸಾಹಿತ್ಯದ ಪರಿಕಲ್ಪನೆಯನ್ನು ಒಮ್ಮೆಗೇ ಮಗುಚಿಹಾಕಿಬಿಟ್ಟಿತು. ಬೇಂದ್ರೆ, ಕುವೆಂಪು, ಮಾಸ್ತಿ, ಬೆಟಗೇರಿ ಕೃಷ್ಣಶರ್ಮರಂತಹ ಸಶಕ್ತ ಬರಹಗಾರರು ಹೊಸಗನ್ನಡವನ್ನು ಕಟ್ಟಲು ಯತ್ನಿಸುತ್ತಿದ್ದ ಕಾಲದಲ್ಲಿ ಬಿ.ಎಂ.ಶ್ರೀ.ಯವರ ಹೇಳಿಕೆ ಅವರಲ್ಲಿ ಹೊಸ ಸಂಚಲನವನ್ನು ಉಂಟುಮಾಡಿತು. ಶಿಷ್ಟ ಸಾಹಿತ್ಯದಲ್ಲಿ ಕೆಲಸ ಮಾಡುತ್ತಿದ್ದ ಬರಹಗಾರರೆಲ್ಲರೂ ಜಾನಪದ ಸಾಹಿತ್ಯ ಮತ್ತು ಸಂಸ್ಕೃತಿ ಅಧ್ಯಯನದಲ್ಲಿ ತೊಡಗಿಸಿಕೊಳ್ಳಲಾರಂಭಿಸಿದರು. ಬಿ.ಎಂ.ಶ್ರೀ., ಬೇಂದ್ರೆ, ಮಾಸ್ತಿ, ದೇವುಡು, ಗೊರೂರು, ಬೆಟಗೇರಿ, ಸಿಂಪಿ ಲಿಂಗಣ್ಣ, ಅರ್ಚಕ ಬಿ. ರಂಗಸ್ವಾಮಿ, ತೀ.ನಂ.ಶ್ರೀ., ಶಿವರಾಮ ಕಾರಂತರಂತಹ ಶಿಷ್ಟ ಲೇಖಕರ ದೊಡ್ಡ ದಂಡೇ ಜಾನಪದ ಸಾಹಿತ್ಯದ ಚಿಂತನೆಗೆ ಪ್ರಾರಂಭಿಸಿದ್ದಲ್ಲದೆ ಲೇಖನಗಳನ್ನು, ಸಂಗ್ರಹಗಳನ್ನು, ಕೃತಿಗಳನ್ನು ಪ್ರಕಟಿಸಿ ಜಾನಪದ ಆಂದೋಳನವನ್ನೇ ಆರಂಭಿಸಿತು. ಕುವೆಂಪು ಅವರಂತೂ ತಮ್ಮ ಕಥೆ ಕಾದಂಬರಿಗಳಲ್ಲಿ ಜನಪದರ ಬದುಕು, ಸಂಸ್ಕೃತಿಯ ಅಗಾಧವಾದ ವೈವಿಧ್ಯತೆ ಮತ್ತು ಸೂಕ್ಷ್ಮತೆಗಳನ್ನು ಅಸದೃಶವಾಗಿ ಅನಾವರಣಗೊಳಿಸಿದರು. ಮಧುರನಂತಹ ಹಳಗನ್ನಡ ಕವಿಗಳಿಂದ ತೀವ್ರವಾದ ಅಸಡ್ಡೆಗೆ ಒಳಗಾಗಿದ್ದ ಜಾನಪದ ಸಾಹಿತ್ಯದ ಬಗ್ಗೆ ಈ ಕಾಲಘಟ್ಟದಲ್ಲಿ ಅಗಾಧವಾದ ಅಭಿರುಚಿ ಬೆಳೆಯಿತು. ಕನ್ನಡ ವಿದ್ವತ್ ಲೋಕದಲ್ಲಿ ಅದುವರೆಗೂ ಅಸ್ಪೃಶ್ಯವಾಗಿಯೇ ಉಳಿದಿದ್ದ ಜಾನಪದವು ಒಮ್ಮೆಗೇ ಎದೆ ತೆರೆದು ಮನ ಬಿಚ್ಚಿ ಮಾತನಾಡಲಾರಂಭಿಸಿತು. ಬೇಂದ್ರೆಯವರಂತೂ ತಮ್ಮ ಕಾವ್ಯದಲ್ಲಿ ಜಾನಪದ

ಛಂದಸ್ಸನ್ನು ಸೂರೆ ಹೊಡೆದು ಜಾನಪದ ಗಾರುಡಿಗರೆನಿಸಿಕೊಂಡರು. ಎಂ. ಎಸ್. ಪುಟ್ಟಣ್ಣ ಹಾಗೂ ಎಂ. ಎಲ್. ಶ್ರೀಕಂಠೇಶಗೌಡರು ಜಾನಪದ ಜೀವದ್ರವ್ಯವನ್ನು ಶಿಷ್ಟದ ಗದ್ಯ ಪ್ರಕಾರಕ್ಕೆ ಬೆಸೆದರು. ಹೀಗೆ ಜಾನಪದವು ಎಲ್ಲರ ಪ್ರಶಂಸೆಗೆ ಪಾತ್ರವಾಯಿತು.

ಬಿ.ಎಂ.ಶ್ರೀ.ಯವರು ''ಮೊದಲು ಹುಟ್ಟಿದುದು ಜನವಾಣಿ. ಅದು ಬೆಳೆದು ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು : ಕವಿವಾಣಿ ಹೂವು. ಕಾಡು ಜನರೂ, ಒಕ್ಕಲಿಗರೂ, ಹೆಂಗಸರೂ, ಮಕ್ಕಳೂ-ಶಾಸ್ತ್ರ ಕಾವ್ಯಗಳ ಪರಿಚಯವೇ ಇಲ್ಲದ ಜನಸಾಮಾನ್ಯರೆಲ್ಲರೂ ಹಾಡಿನ ಮಟ್ಟನ್ನು ಎಂದರೆ ಅಷ್ಟುಮಟ್ಟಿಗೆ ಛಂದಸ್ಸನ್ನು ಬಲ್ಲರು. ಹಿಂದಿನಿಂದ ಬಂದ ಹಾಡನ್ನು ತಲೆಮೋರೆಯಾಗಿ ಕಲಿತು ಕೇಳುವುದಲ್ಲದೆ, ಹೊಸ ಹಾಡನ್ನು ಕಟ್ಟಬಲ್ಲರು'' ಎಂದು ಮನದುಂಬಿ ಹೇಳಿದರು. ''ಜೀವನವೇ ದೇವತೆಯಾದ, ತ್ರಿಪದಿ ಛಂದದಲ್ಲಿ ಹೊರಹೊಮ್ಮಿದ ಗರತಿಯ ಹಾಡಿನ ಋಷಿಗಳು ಹೆಣ್ಣುಮಕ್ಕಳು ನಮ್ಮ ತಾಯಿ ತಂಗಿಯರು, ಅಮ್ಮ ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ನೋಡಿದರೆ ಅವರದೇ ನಿಜವಾದ ಕಾವ್ಯ‌ಉಳಿದುದು ಕಾವ್ಯದ ಛಾಯೆ'' ಎಂದು ಬೇಂದ್ರೆಯವರು ಅಭಿಪ್ರಾಯ ಪಟ್ಟರು. ''ಸ್ನೇಹಿತರೆ! ಸಂಸ್ಕೃತಿಯನ್ನು ಬಿಟ್ಟೀರಿ ಜೋಕೆ. ಔಚಿತ್ಯವನ್ನು ಮರೆತೀರಿ ಎಚ್ಚರಿಕೆ'' ಎಂದು ಅರ್ಚಕ ಬಿ. ರಂಗಸ್ವಾಮಿಯವರು ಎಚ್ಚರಿಸಿದರೆ, ''ಗರತಿಯ ಹಾಡು ನಮ್ಮ ಸ್ತ್ರೀ ಜೀವನದ ಒಳಗನ್ನಡಿ. ಅದು ಜೀವನದ ಜೀವಾಳವಾಗಿದೆ: ಸುಖದ ಸೆಲೆಯಾಗಿದೆ. ಅದು ನಮ್ಮಿಂದ ದೂರವಾದರೆ ಬಾಳು ಕಿಚ್ಚಿನ ಕುಂಡವಾಗುತ್ತದೆ'' ಎಂದು ಸಿಂಪಿ ಲಿಂಗಣ್ಣನವರು ಸಾರಿ ಹೇಳಿದರು.

ಈ ಅವಧಿಯಲ್ಲಿ ಕನ್ನಡದ ಅತ್ಯುತ್ತಮ ಜಾನಪದ ಸಾಹಿತ್ಯ ಸಂಗ್ರಹಗಳು ಹೊರಬಂದವು. ಜಾನಪದ ಸಾಹಿತ್ಯ ಚಿಂತನೆಗೆ ಹೆಚ್ಚು ಒತ್ತು ನೀಡಿದ್ದರ ಫಲವಾಗಿ ಮತ್ತು ಜಾನಪದ ಸಾಹಿತ್ಯ ಆಧುನೀಕರಣದ ಪ್ರಯುಕ್ತ ನಶಿಸಿಹೋಗುತ್ತಿದೆ, ಸಾಧ್ಯವಾದಷ್ಟು ಬೇಗ ಎಷ್ಟು ಸಾಧ್ಯವೋ ಅಷ್ಟನ್ನು ಸಂಗ್ರಹಿಸಿಬಿಡಬೇಕೆಂಬ ಸಂರಕ್ಷಣೆಯ ಅವಸರದಿಂದಾಗಿ ಜಾನಪದ ಸಾಹಿತ್ಯದ ಸಂಗ್ರಹ ಪ್ರಕಟಣೆ, ರಸನಿಷ್ಠವಾದ ವ್ಯಾಖ್ಯಾನಗಳು ಹೆಚ್ಚಿನ ಪ್ರಮಾಣದಲ್ಲಿ ಪ್ರಕಟಗೊಳ್ಳಲಾರಂಭಿಸಿದವು. ಎಸ್. ಕೆ. ಕರೀಂಖಾನ್, ಪಿ. ಕಾಳಿಂಗರಾವ್, ಜೋಳದರಾಶಿ ದೊಡ್ಡನಗೌಡ, ಕೆ. ಆರ್. ಲಿಂಗಪ್ಪನವರಂತಹ ಗಾಯಕರು ಜಾನಪದ ಗೀತೆಗಳನ್ನು ಅವುಗಳ ಮೂಲಮಟ್ಟುಗಳಲ್ಲಿ ಹಾಡುತ್ತಾ, ಹಾಡಿನೊಂದಿಗೆ ಅವುಗಳಲ್ಲಿನ ನೀತಿ, ಮೌಲ್ಯ, ಸೊಗಸುಗಳನ್ನು ವ್ಯಾಖ್ಯಾನ ಮಾಡುತ್ತಾ ಜನಸಮುದಾಯದಲ್ಲಿ ಜಾನಪದ ಸಾಹಿತ್ಯ ಪ್ರಚಾರ ಕೈಂಕರ್ಯ ಕೈಗೊಂಡರು.

ಪಿ. ಧೂಲಾ ಸಾಹೇಬರ ಜೀವನ ಸಂಗೀತ (೧೯೩೩), ಅರ್ಚಕ ಬಿ. ರಂಗಸ್ವಾಮಿಯವರ ಹುಟ್ಟಿದ ಹಳ್ಳಿ-ಹಳ್ಳಿಯ ಹಾಡು (೧೯೩೩), ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ ಹಳ್ಳಿಯ ಹಾಡುಗಳು (೧೯೩೮), ಹಳ್ಳಿಯ ಬಾಳು (೧೯೪೩), ಕಾಪಸೆ ರೇವಪ್ಪನವರ ಮಲ್ಲಿಗೆ ದಂಡೆ (೧೯೩೩), ಎಲ್. ಗುಂಡಪ್ಪನವರ ನಾಡಪದಗಳು (೧೯೪೨), ಎಸ್. ಅನಂತರಂಗಾಚಾರ್ ಅವರ ಮಾನೌವಮಿ ಚೌಪದ (೧೯೪೦), ಮತಿಘಟ್ಟ ಕೃಷ್ಣಮೂರ್ತಿಯವರ ಹಳ್ಳಿಯ ಹಾಡುಗಳು (೧೯೫೯), ಶಂ. ಬಾ. ಜೋಶಿಯವರ ಮಕ್ಕಳ ಒಡಪುಗಳು (೧೯೪೬), ಮಾಸ್ತಿಯವರ ಕರ್ನಾಟಕ ಜಾನಪದ ಸಾಹಿತ್ಯ (೧೯೩೭), ಎಚ್. ಎಸ್. ಅಚ್ಚಪ್ಪನವರ ಕನ್ನಡ ಗಾದೆಗಳು (೧೯೪೪) ಇವೇ ಮೊದಲಾದುವು ಈ ಅವಧಿಯಲ್ಲಿ ಹೊರಬಂದ ಉತ್ತಮ ಜಾನಪದ ಸಂಗ್ರಹಗಳಾಗಿವೆ.

ಸ್ವಾತಂತ್ರ್ಯಪೂರ್ವದಲ್ಲಿ ಕನ್ನಡ ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡಿದ ದೇಶೀ ಅಭಿವೃದ್ಧಿ ಚಿಂತಕರ ಜಾನಪದ ಆಸಕ್ತಿ ಪ್ರಕಟಗೊಂಡಿದ್ದು ಸ್ವಾತಂತ್ರ್ಯ ಚಳುವಳಿ ಮತ್ತು ನವೋದಯ ಸಾಹಿತ್ಯಿಕ ಚಳುವಳಿಯ ಜತೆಜತೆಯಲ್ಲಿ ಎಂಬುದು ಗಮನಾರ್ಹ. ರಾಷ್ಟ್ರೀಯ ಪ್ರಜ್ಞೆ, ದೇಶಾಭಿಮಾನ ಮತ್ತು ಸಂಸ್ಕೃತಿಪ್ರಿಯತೆ ಹಾಗೂ ನಾಡು ನುಡಿಗಳ ಮೇಲಣ ಅಭಿಮಾನ ಇವು ಈ ಚಿಂತಕರ ಅಧ್ಯಯನದ ಪ್ರಧಾನ ನೆಲೆಗಳಾಗಿದ್ದವು. ವಸಾಹತೀಕರಣ ಪ್ರಕ್ರಿಯೆಗೆ ವಿರುದ್ಧವಾಗಿ ಮತ್ತು ತಮ್ಮ ಸ್ವಾತಂತ್ರ್ಯ ಹೋರಾಟದ ಸಾಧನವಾಗಿ ಈ ಎಲ್ಲಾ ಬರಹಗಾರರು ಜಾನಪದ ಸಾಹಿತ್ಯವನ್ನು ಗ್ರಹಿಸಿದರು, ಸಂಗ್ರಹಿಸಿದರು, ಅರ್ಥಯಿಸಿದರು. ಕೆಲವೇ ಮಂದಿ ಬರಹಗಾರರನ್ನು ಹೊರತುಪಡಿಸಿದರೆ ಉಳಿದವರಲ್ಲಿ ಜಾನಪದ ಸಾಹಿತ್ಯದ ಅತಿಯಾದ ಭಾವುಕತೆ ಮತ್ತು ದೇಶೀ ಸಂಸ್ಕೃತಿಯ ವೈಭವೀಕರಣ ಕಂಡುಬರುತ್ತವೆ ಎಂಬದು ನಿಜವಾದರೂ ಆ ಹೊತ್ತಿಗೆ ಅದು ಅನಿವಾರ್ಯವಾಗಿದ್ದಿತು.

ಬಿ.ಎಂ.ಶ್ರೀ.ಯವರಿಂದ ಆರಂಭವಾಗುವ ಈ ಘಟ್ಟದಲ್ಲಿ ಎಲ್ಲರ ಮನಸ್ಸು ಜಾನಪದ ಸಾಹಿತ್ಯದ ಸಂರಕ್ಷಣೆ, ನೆಲದ ಸಂಸ್ಕೃತಿಯ ಸಮರ್ಥನೆ ಆ ಮೂಲಕ ಆಳರಸರ ವಿರುದ್ಧದ ಹೋರಾಟ, ಭಾರತದ ವಿಮೋಚನೆ ಈ ದಿಕ್ಕಿನಲ್ಲಿ ಕೆಲಸ ಮಾಡಿರುವುದು ಸ್ಪಷ್ಟ. ಇದನ್ನು ಪ್ರೊ|| ಹಿ. ಶಿ. ರಾಮಚಂದ್ರೇಗೌಡರು ಸ್ಪಷ್ಟವಾಗಿ ಗುರುತಿಸಿದ್ದಾರೆ. ''ಸಂಸ್ಕೃತಿಯ ಮರೆವಿನಿಂದ ಮಲಗಿದ್ದ ಭಾರತೀಯರನ್ನು ಭಾರತದ ಸ್ವಾತಂತ್ರ್ಯ ಚಳುವಳಿ ಎಚ್ಚರಿಸಿತು. ಈ ಚಳುವಳಿ ಕೇವಲ ರಾಜಕೀಯವಾಗದಂತೆ, ಅದು ಸಾಂಸ್ಕೃತಿಕ ಎಚ್ಚರವಾಗಿರುವಂತೆ ಗಾಂಧೀಜಿ ನೋಡಿಕೊಂಡರು. ಇವರ ಜೊತೆಗೆ ಸಹಕರಿಸಿದ ದೇಶಪ್ರಜ್ಞೆಯ ಸುಸಂಸ್ಕೃತರು, ಕವಿಗಳು, ಕಲಾವಿದರು, ದೇಶಭಕ್ತರು ತಮ್ಮ ಸಂದರ್ಭಕ್ಕೆ ಅಗತ್ಯವಾದ ಸಾಂಸ್ಕೃತಿಕ ಆಯುಧಗಳನ್ನು ಹುಟ್ಟಿಸಿಕೊಂಡರು. ಇಂಥ ಸಾಂಸ್ಕೃತಿಕ ಹೋರಾಟದ ಸಮಬಲ ಅಸ್ತ್ರವಾಗಿ ಜಾನಪದವು ಕರ್ನಾಟಕದಲ್ಲಿ ಪ್ರಾಪ್ತವಾಯಿತು.'' (ಪ್ರೊ|| ಹಿ.ಶಿ. ರಾಮಚಂದ್ರೇಗೌಡ : ೧೯೯೮)

ಈ ಕಾಲಘಟ್ಟದಲ್ಲಿ ಕವಿಗಳು, ಬರಹಗಾರರು ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆಯನ್ನು ಒಟ್ಟೊಟ್ಟಿಗೆ ನಡೆಸಿದರು. ಸಂಸ್ಕೃತಿ ಚಿಂತನೆ ಎನ್ನುವುದು ಪ್ರಧಾನವಾಗಿ ಅವರಿಗೆ ದೇಶೀ ಅಭಿವೃದ್ಧಿಯ ಚಿಂತನೆಯಾಗಿತ್ತು ಮತ್ತು ರಾಷ್ಟ್ರೀಯ ಚಿಂತನೆಯೇ ಆಗಿದ್ದಿತು. ಇವರ ರಾಷ್ಟ್ರಪ್ರೇಮ ಎನ್ನುವಂಥದ್ದು ವಿಮೋಚನೆ ಮತ್ತು ಪುನರ್‌ನಿರ್ಮಾಣ. ಕನ್ನಡ ಜಾನಪದವನ್ನು ಸಂಸ್ಕೃತಿಯ ಜೀವಕೇಂದ್ರವೆಂದು ಈ ರಾಷ್ಟ್ರೀಯವಾದಿಗಳು ಭಾವಿಸಿದ್ದರ ಫಲವಾಗಿ ಗ್ರಾಮ ಕೇಂದ್ರಿತರಾದರು; ದೇಶೀ ಕೇಂದ್ರಿತರಾದರು. ಇದರಿಂದಾಗಿ ಜನಪದ ಸಾಹಿತ್ಯ ಸಂಗ್ರಹ ಮತ್ತು ಸಂಸ್ಕೃತಿಯ ವಿಶ್ಲೇಷಣೆಯಲ್ಲಿ ನಿರತರಾದರು.

ಸ್ವಾತಂತ್ರ್ಯಾನಂತರದಲ್ಲಿ ಪಾಶ್ಚಾತ್ಯ ಪ್ರಭಾವಗಳಿಗೆ ಒಳಗಾದ ಈ ಕಾಲಘಟ್ಟದಲ್ಲಿಯೂ ಮೊದಲ ಘಟ್ಟದ ದೇಶೀ ಅಭಿವೃದ್ಧಿ ಚಿಂತನೆಗಳು ಮುಂದುವರಿದವಾದರೂ, ಪಾಶ್ಚಾತ್ಯ ಮುಖಿ ಚಿಂತನೆಗಳ ಪ್ರಭಾವದಿಂದಾಗಿ ಜಾನಪದ ಅಧ್ಯಯನದಲ್ಲಿ ಬದಲಾವಣೆಗಳು ಗೋಚರಿಸಿದವು. ಆರಂಭಿಕರಂತೆ ಜಾನಪದವನ್ನು ಕೇವಲ ಸಾಮಗ್ರಿಯಾಗಿ ಗ್ರಹಿಸದೆ ವಿಚಾರವನ್ನಾಗಿ ಪರಿಗ್ರಹಿಸುವ ಪ್ರವೃತ್ತಿ ಬೆಳೆಯಿತು. ಕ್ಷೇತ್ರಕಾರ್ಯದ ವಿಧಿ ವಿಧಾನಗಳಲ್ಲಿ ಸ್ವರೂಪದಲ್ಲಿ ಬದಲಾವಣೆಗಳು ಸಂಭವಿಸಿದವು. ಮಾಹಿತಿ ಸಂಗ್ರಹಣೆ – ನಿರೂಪಕ ಮತ್ತು ಸಂಗ್ರಹಕರ ನಡುವೆ ತಾತ್ವಿಕವಾದ ಸಂಬಂಧಗಳು ಏರ್ಪಟ್ಟವು. ಜಾನಪದ ಸಾಹಿತ್ಯದ ಜತೆಗೆ ಜನಪದರ ಬದುಕಿನ ಅಧ್ಯಯನ ಆರಂಭವಾಯಿತು. ಜನ ಸಂಸ್ಕೃತಿಯ ಜತೆಗೆ ಜನ ಬದುಕಿನ ಕುರಿತಾದ ಚಿಂತನೆ ಮೊದಲಾಯಿತು. ಜನಪದರ ವೃತ್ತಿಗಳು, ಉಡುಗೆ-ತೊಡುಗೆಗಳು, ಆಚಾರ-ವಿಚಾರಗಳು, ಊರು-ಕೇರಿ, ನಂಬಿಕೆ-ಸಂಪ್ರದಾಯಗಳು, ಹಬ್ಬ-ಹರಿದಿನಗಳು, ವೈವಿಧ್ಯಮಯ ಕಲೆಗಳು ಇತ್ಯಾದಿಗಳನ್ನು ಕುರಿತಾದಂತೆ ಪ್ರಾದೇಶಿಕ ಚೌಕಟ್ಟಿನ ನೆಲೆಯಲ್ಲಿ ಅಧ್ಯಯನ-ಸಂಶೋಧನೆಗಳು ನಡೆಯಲಾರಂಭಿಸಿದವು. ಇದರಿಂದಾಗಿ ಜಾನಪದ ಜಗತ್ತು ವಿಸ್ತಾರಗೊಂಡಿತು. ಜಾನಪದಕ್ಕೆ ಬಹುವಿಧ ಆಯಾಮ ದೊರೆಯಿತು. ಜಾನಪದದ ವ್ಯಾಪಕತೆ ಮತ್ತು ಸೂಕ್ಷ್ಮತೆಗಳು ಪ್ರಕಟಗೊಳ್ಳಲಾರಂಭಿಸಿದವು. ಜಾನಪದವು ಪ್ರತ್ಯೇಕವಾದ ವಿಜ್ಞಾನವಾಗಿ, ಶಾಸ್ತ್ರವಾಗಿ ಬೆಳೆಯುವ ಎಲ್ಲಾ ಲಕ್ಷಣಗಳೂ ಪ್ರಕಟಗೊಂಡವು. ಜಾನಪದಕ್ಕೆ ಸೈದ್ಧಾಂತಿಕವಾದ ಚೌಕಟ್ಟು ಮತ್ತು ವೈಜ್ಞಾನಿಕವಾದ ಶಿಸ್ತು ಎರಡನ್ನೂ ಈ ಕಾಲಘಟ್ಟದ ವಿದ್ವಾಂಸರು ದೊರಕಿಸಿಕೊಟ್ಟರು.

ಆರಂಭಿಕ ಘಟ್ಟದಲ್ಲಿ ಜನ ಸಂಸ್ಕೃತಿಯ ಬಗ್ಗೆ ಮಾತನಾಡಿದ ಜನಚಿಂತಕರು ಇಲ್ಲಿಯೂ ಮುಂದುವರಿದರೆಂದು ಆಗಲೇ ಹೇಳಿದೆನಷ್ಟೆ. ಮತಿಘಟ್ಟ ಕೃಷ್ಣಮೂರ್ತಿ, ಗೊ. ರು. ಚನ್ನಬಸಪ್ಪ, ಕ. ರಾ. ಕೃಷ್ಣಸ್ವಾಮಿ, ಎಲ್. ಆರ್. ಹೆಗಡೆ, ಎನ್. ಆರ್. ನಾಯಕ, ಬಿ. ಎಸ್. ಗದಗೀಮಠ ಮುಂತಾದವರು ಈ ಕಾಲಘಟ್ಟದಲ್ಲಿಯೂ ಸಮೃದ್ಧ ಜಾನಪದ ಸಾಹಿತ್ಯ ಸಂಗ್ರಹಗಳನ್ನು ಹೊರತಂದರು. ಉತ್ತರಕರ್ನಾಟಕದಲ್ಲಿ ಜಾನಪದ ಸಾಹಿತ್ಯ ಸಂಗ್ರಹ ಮತ್ತು ಅಧ್ಯಯನದ ಬಗ್ಗೆ ಅಪಾರವಾದ ಆಸಕ್ತಿಯನ್ನು ತೋರಿದ ಬಿ. ಎಸ್. ಗದಗೀಮಠ ಅವರು ಕನ್ನಡ ಜಾನಪದದಲ್ಲಿ ಮೊತ್ತಮೊದಲ ಬಾರಿಗೆ 'ಕನ್ನಡ ಜಾನಪದ ಗೀತೆಗಳು' ಎಂಬ ಪಿಎಚ್.ಡಿ. ಪ್ರಬಂಧ ಬರೆದು ಡಾಕ್ಟರೇಟ್ ಪದವಿ ಪಡೆದರು. ೧೯೬೩ರಲ್ಲಿ ಇದು ಬೆಳಕು ಕಂಡಿತು. ೧೯೬೨ರಲ್ಲಿ ಕ. ರಾ. ಕೃಷ್ಣಸ್ವಾಮಿಯವರು ಹತ್ತು ಜನಪದ ಗೀತ ಸಂಕಲನಗಳನ್ನು ಪ್ರಕಟಿಸಿದರು. ೧೯೫೫ರಲ್ಲಿ ಎ. ಕೆ. ರಾಮಾನುಜನ್ ಅವರು ಗಾದೆಗಳ ಅಧ್ಯಯನದ ದೃಷ್ಟಿಯಿಂದ ಬಹಳ ಮಹತ್ವದ ಕೃತಿಯಾದ 'ಗಾದೆಗಳು' ಸಂಕಲನವನ್ನು, ೧೯೫೭ರಲ್ಲಿ ಶಿವರಾಮ ಕಾರಂತರು 'ಯಕ್ಷಗಾನ ಬಯಲಾಟ' ಕೃತಿಯನ್ನು ಪ್ರಕಟಿಸಿದರು.

ಕರಾವಳಿ ಕರ್ನಾಟಕದಲ್ಲಿ ಶಿವರಾಮ ಕಾರಂತರನ್ನು ಬಿಟ್ಟರೆ, ಜಾನಪದ ವ್ಯವಸಾಯದಲ್ಲಿ ತೊಡಗಿಸಿಕೊಂಡವರಲ್ಲಿ ಎಲ್. ಆರ್. ಹೆಗಡೆ ಮತ್ತು ಎನ್. ಆರ್ ನಾಯಕ ಮುಖ್ಯರು. ಹೆಗಡೆಯವರು ತಿಮ್ಮಕ್ಕನ ಪದಗಳು, ಪರಮೇಶ್ವರಿಯ ಪದಗಳು, ಉತ್ತರ ಕನ್ನಡದ ಜನಪದ ಕತೆಗಳು, ಗಾದೆ ಕತೆಗಳು ಇವೇ ಮೊದಲಾದ ಸಂಗ್ರಹಗಳನ್ನು ಹೊರತಂದಿದ್ದಲ್ಲದೆ, ಮುಕರಿಗಳು, ಗೊಂಡರು ಮುಂತಾದ ತಳ ವರ್ಗಗಳಿಗೆ ಸೇರಿದ ಬುಡಕಟ್ಟು ಜನಾಂಗಗಳ ಜನಾಂಗೀಯ ಅಧ್ಯಯನ ನಡೆಸಿರುತ್ತಾರೆ. ಎನ್. ಆರ್. ನಾಯಕರು ತುಳಸಿ ತಿಮ್ಮಪ್ಪರಾಯ, ಬಂದಾನೆ ಬಲೀಂದ್ರರಾಯ, ಕಾರವಾರ ಜಿಲ್ಲೆಯ ಜಾನಪದ ಗೀತೆಗಳು ಮುಂತಾದ ಸಂಗ್ರಹಗಳನ್ನು ಪ್ರಕಟಿಸಿದ್ದಲ್ಲದೆ ಹಾಲಕ್ಕಿ ಒಕ್ಕಲಿಗರು, ಗಾಮೊಕ್ಕಲಿಗರು, ಸಿದ್ದಿಗಳು ಮುಂತಾದ ಬುಡಕಟ್ಟು ಜನಾಂಗಗಳನ್ನು ಜನಾಂಗೀಯ

ಅಧ್ಯಯನಕ್ಕೆ ಒಳಗುಮಾಡಿರುತ್ತಾರೆ.

ಉತ್ತರಕರ್ನಾಟಕದಲ್ಲಿ ಡಾ॥ ಸೋಮಶೇಖರ ಇಮ್ರಾಪುರ, ಡಾ॥ ದೇವೇಂದ್ರ ಕುಮಾರ ಹಕಾರಿ, ಎಂ. ಎಸ್. ಲಟ್ಠೆ, ಜ್ಯೋತಿ ಹೊಸೂರ, ಮುದೇನೂರು ಸಂಗಣ್ಣ, ಎಂ. ಜಿ. ಬಿರಾದಾರ, ಎಂ. ಎಂ. ಕಲಬುರ್ಗಿ ಗಮನಾರ್ಹ ಜಾನಪದ ವಿದ್ವಾಂಸರು ಗಳಾಗಿದ್ದಾರೆ. ಗ್ರಾಮೀಣ ಸಂಸ್ಕೃತಿಯ ಸಂವೇದನೆಗಳನ್ನು ತುಂಬಾ ಸೂಕ್ಷ್ಮವಾಗಿ ಅರ್ಥ ಮಾಡಿಕೊಂಡು ಜಾನಪದ ಕ್ಷೇತ್ರದಲ್ಲಿ ಉತ್ತಮ ಬರವಣಿಗೆಗಳನ್ನು ಹೊರತಂದವರಿವರು.

ದಕ್ಷಿಣಕರ್ನಾಟಕ ಭಾಗದಲ್ಲಿ ಹ. ಕ. ರಾಜೇಗೌಡ, ರಾಗೌ, ತಪಸ್ವೀಕುಮಾರ್, ಡಿ. ಕೆ. ರಾಜೇಂದ್ರ, ಸಿ. ಪಿ. ಕೃಷ್ಣಕುಮಾರ್, ಕ್ಯಾತನಹಳ್ಳಿ ರಾಮಣ್ಣ, ಪಿ. ಕೆ. ರಾಜಶೇಖರ, ಟಿ. ಎಸ್. ರಾಜಪ್ಪ ಅವರ ಹೆಸರುಗಳು ಗಮನಾರ್ಹವಾದುವುಗಳಾಗಿವೆ. ರಾಮಣ್ಣ, ರಾಜ ಶೇಖರ, ರಾಜಪ್ಪ ಈ ಮೂವರು ಕ್ಷೇತ್ರಕಾರ್ಯದಲ್ಲಿ ಅಪಾರವಾದ ಪರಿಶ್ರಮ, ತಿಳಿವಳಿಕೆ ಯುಳ್ಳವರಾಗಿದ್ದು ನಾಡಿನಾದ್ಯಂತ ಸಂಚರಿಸಿ ಹತ್ತು ಹಲವು ಉತ್ತಮ ಸಂಗ್ರಹಗಳನ್ನು ಸಂಪಾದಿಸಿರುತ್ತಾರೆ. ಹ. ಕ. ರಾಜೇಗೌಡರು ಜಾನಪದ ಸಂಶೋಧನೆ ಮತ್ತು ಗ್ರಾಮೀಣ ಸಂಸ್ಕೃತಿ ಚಿಂತನೆಯಲ್ಲಿ ತೊಡಗಿಸಿಕೊಂಡರೆ, ಜಾನಪದವನ್ನು ಬೋಧಿಸಲು ಸೂಕ್ತವಾದ ಶೈಕ್ಷಣಿಕ ವಾತಾವರಣವನ್ನು ನಿರ್ಮಾಣ ಮಾಡಿದ ಕೀರ್ತಿ ರಾಗೌ ಮತ್ತು ಸಿ.ಪಿ.ಕೆ.ಯವರದು.

ಕರ್ನಾಟಕದ ಜಾನಪದ ಅಭಿವ್ಯಕ್ತಿ ಮತ್ತು ಸಂಸ್ಕೃತಿಯ ಬಗ್ಗೆ ಹೊಸ ಎಚ್ಚರ ಮೂಡಿಸಿದ ಯಶಸ್ಸು ಜೀ. ಶಂ. ಪರಮಶಿವಯ್ಯನವರದು. ೧೯೫೦ರ ಸುಮಾರಿಗೆ ಜಾನಪದ ಕ್ಷೇತ್ರವನ್ನು ಪ್ರವೇಶ ಮಾಡಿದ ಜೀಶಂಪ ಅವರಿಂದ ಕರ್ನಾಟಕ ಜಾನಪದಕ್ಕೆ ಆಳ-ವೈಶಾಲ್ಯ ಗಳೂ ಸಿದ್ಧಿಸಿದವು. ವ್ಯಾಪಕ ಕ್ಷೇತ್ರಕಾರ್ಯದ ಮೂಲಕ ಅದುವರೆಗೂ ಅಜ್ಞಾತವಾಗಿದ್ದ ವೃತ್ತಿಗಾಯಕ ಪರಂಪರೆಗಳನ್ನು ಶೋಧಿಸಿ ಬೆಳಕಿಗೆ ತಂದು, ಅನೇಕಾನೇಕ ಕಾವ್ಯ, ಕಥೆ, ಖಂಡಕಾವ್ಯ, ಮಹಾಕಾವ್ಯಗಳನ್ನು ಪ್ರಕಟಿಸಿದರು. ಜಾನಪದ ಅಧ್ಯಯನಕ್ಕೆ ಅಕೆಡೆಮಿಕ್ ಸ್ವರೂಪ ವನ್ನು ತಂದು ಕೊಟ್ಟುದಲ್ಲದೆ ಅಂತರರಾಷ್ಟ್ರೀಯ ಮನ್ನಣೆಯನ್ನು ದೊರಕಿಸಿಕೊಟ್ಟರು. ತಮ್ಮ ಮಾರ್ಗದರ್ಶನದಲ್ಲಿ ಜಾನಪದಕ್ಕಾಗಿ ದುಡಿಯುವ ಯುವ ವಿದ್ವಾಂಸರ ಪಡೆಯನ್ನೇ ನಿರ್ಮಾಣ ಮಾಡಿದರು.

೧೯೬೬ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಸುವರ್ಣ ಮಹೋತ್ಸವದ ಅಂಗವಾಗಿ ನಡೆದ ಲೇಖಕರ ಸಮ್ಮೇಳನದಲ್ಲಿ ಹಾ. ಮಾ. ನಾಯಕ್ ಮಂಡಿಸಿದ 'ಜನಪದ ಸಾಹಿತ್ಯ, ಅದರ ಸ್ವರೂಪ' ಕುರಿತಾದ ಪ್ರಬಂಧವು ಜಾನಪದ ಅಧ್ಯಯನಕ್ಕೆ ಹೊಸ ದಿಕ್ಕು ದಿಸೆಗಳನ್ನು ತೋರಿಸಿತು. ಅದೇ ಪ್ರಬಂಧವು ಮುಂದೆ 'ಜಾನಪದ ಸ್ವರೂಪ' ಎಂಬ ಹೆಸರಿನಲ್ಲಿ ಪುಸ್ತಕ ರೂಪಕ್ಕೆ ಬಂದು ಜಾನಪದ ವಿದ್ಯಾರ್ಥಿಗಳಿಗೆ ಮಾರ್ಗದರ್ಶಿ ಪಠ್ಯವಾಗಿ ಪರಿಣಮಿಸಿತು.

ಈ ಅವಧಿಯಲ್ಲಿ ಎದ್ದುಬಂದ ಜಾನಪದ ಮಹಾನ್ ಪ್ರವರ್ಧಕ ದೇಜಗೌ ಜಾನಪದ ನಾಯಕ ರತ್ನ. ದೇ. ಜವರೇಗೌಡರು ಜಾನಪದಕ್ಕೆ ಹಾಕಿದ ಸಾಂಸ್ಥಿಕ ಬುನಾದಿ ಅವಿಸ್ಮರಣೀಯವಾದುದು. ಜೀ. ಶಂ. ಪರಮಶಿವಯ್ಯನವರ 'ಜನಪದ ಸಾಹಿತ್ಯ ಸಮೀಕ್ಷೆ' ಕೃತಿಗೆ ದೇಜಗೌ ಬರೆದ ಮುನ್ನುಡಿ ಮುಂದಿನ ಜಾನಪದ ಅಧ್ಯಯನಕಾರರಿಗೆ ಮತ್ತು ಜಾನಪದ ಸಂಸ್ಥೆಗಳ ಸ್ಥಾಪಕರಿಗೆ ಮಾರ್ಗದರ್ಶಿಯಾಯಿತು. ಇವರ 'ಜಾನಪದ ಅಧ್ಯಯನ' ಕೃತಿಯು ಈ ಕ್ಷೇತ್ರದ ತೋರುದೀಪವಾಯಿತು. ಜಾನಪದ ಸಂಪ್ರದಾಯ ಒಂದು ಜನಸಮುದಾಯದ ಸಮಷ್ಟಿ ಸೃಷ್ಟಿ, ಸಾಮಾಜಿಕ ಜೀವನದ ಸಂಕೇತ, ರಾಷ್ಟ್ರೀಯ ಸಂಸ್ಕೃತಿಯ ತಾಯಿಬೇರು. ಅದು ಜನಸಾಮಾನ್ಯದ ಶ್ರುತಿಯೂ ಅಹುದು, ಸ್ಮೃತಿಯೂ ಅಹುದು ಎಂದು ಬಲವಾಗಿ ಪ್ರತಿಪಾದಿಸಿದ ದೇಜಗೌ ''ಭಾರತೀಯತ್ವದ ಅಥವಾ ದೇಶೀಯತೆಯ ರಕ್ಷಣೆಗಾಗಿ ಜಾನಪದ ಸಂಪ್ರದಾಯದ ಜೀರ್ಣೋದ್ಧಾರ ಕಾರ್ಯ ನಡೆಯಬೇಕಾಗಿದೆ'' ಎಂದು ಸಾರಿದರು. ಬಹುಜನರ ವಿರೋಧದ ನಡುವೆಯೂ ಜಗ್ಗದೆ, ೧೯೬೬ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಸ್ನಾತಕೋತ್ತರ ಪದವಿಯಲ್ಲಿ ಜಾನಪದ ಸಾಹಿತ್ಯವನ್ನು ಶೈಕ್ಷಣಿಕ ವಿಷಯವನ್ನಾಗಿ ಜಾರಿಗೆ ತಂದುದಲ್ಲದೆ ೧೯೭೪ರಲ್ಲಿ ಜಾನಪದ ಎಂ.ಎ.ಯನ್ನು ಆರಂಭಿಸಿದ ದಿಟ್ಟ ಜಾನಪದ ಹೋರಾಟಗಾರ : ಜಾನಪದ ಹರಿಕಾರ ದೇಜಗೌ, ನಾಡಿನ ಎಲ್ಲಾ ವಿಶ್ವವಿದ್ಯಾಲಯಗಳಿಗೂ ಜಾನಪದವನ್ನು ಸ್ನಾತಕೋತ್ತರ ಶಿಕ್ಷಣ ವಿಷಯವಾಗಿ ಅಳವಡಿಸಲು ಚಾಲನೆ ನೀಡಿದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಜಾನಪದ ವಸ್ತುಸಂಗ್ರಹಾಲಯವನ್ನು ಸ್ಥಾಪಿಸಿ ಬೆಳೆಸಿದರು. ದೇಜಗೌ ಅವರ ಅಪಾರವಾದ ಜಾನಪದ ನಿಷ್ಠೆ, ಬದ್ಧತೆ, ಪರಿಶ್ರಮ, ಕಾರ್ಯತತ್ಪರತೆಗಳಿಂದಾಗಿ ಕನ್ನಡನಾಡಿನಲ್ಲಿ ಮೊತ್ತಮೊದಲ ಬಾರಿಗೆ ಜಾನಪದಕ್ಕೆ ವ್ಯವಸ್ಥಿತವಾದ ಸಾಂಸ್ಥಿಕ ಸ್ವರೂಪ ಸಿದ್ಧಿಸಿತು. ಇದರಿಂದಾಗಿ, ಇದುವರೆಗೂ ವೈಯಕ್ತಿಕ ನೆಲೆಯಲ್ಲಿ ನಡೆಯುತ್ತಿದ್ದ ಜಾನಪದ ಅಧ್ಯಯನವು ಬಹುಮುಖಿ ಸಾಧ್ಯತೆಗಳನ್ನು ಪಡೆದುಕೊಳ್ಳಲು ಸಾಧ್ಯವಾಯಿತು.

ದೇಜಗೌ ಅವರು ಜಾನಪದಕ್ಕೆ ಹಾಕಿಕೊಟ್ಟ ಸಾಂಸ್ಥಿಕ ಬುನಾದಿಯನ್ನು ಮುಂದುವರಿಸಿದವರು ಎಚ್. ಎಲ್. ನಾಗೇಗೌಡರು. ೧೯೭೯ರಲ್ಲಿ ಕರ್ನಾಟಕ ಜಾನಪದ ಟ್ರಸ್ಟ್(ಈಗ ಪರಿಷತ್ತು) ಸ್ಥಾಪಿಸುವುದರ ಮೂಲಕ ಜಾನಪದ ಸಂಬಂಧಿ ಕ್ರಿಯಾ ಯೋಜನೆ ಗಳನ್ನು ಹಮ್ಮಿಕೊಂಡು 'ಜಾನಪದ ಲೋಕ'ದ ನಿರ್ಮಾಣಕ್ಕೆ ಕಾರಣೀಭೂತರಾದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಜಿ. ನಾರಾಯಣ ಅವರು ಜಿಲ್ಲಾ ಮಟ್ಟದಲ್ಲಿ ಜನಪದ ಕಲಾಮೇಳಗಳನ್ನು ಸಂಘಟಿಸಿ ಜಾನಪದಕ್ಕೆ ಪ್ರಚಾರ ತಂದುಕೊಟ್ಟುದಲ್ಲದೆ ನಾಡಿನಾದ್ಯಂತ ಕ್ಷೇತ್ರಕಾರ್ಯಕರ್ತರ ಮೂಲಕ ಸಮೀಕ್ಷೆ ನಡೆಸಿ, ಮಾಹಿತಿ ಕಲೆಹಾಕಿ ತಮ್ಮ ಅವಧಿಯಲ್ಲಿ 'ಕರ್ನಾಟಕ ಜನಪದ ಕಲೆಗಳು' ಎಂಬ ಕೃತಿಯನ್ನು ಪ್ರಕಟಿಸಿದರು. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಹಾಗೂ ಉಡುಪಿಯ ಪ್ರಾದೇಶಿಕ ರಂಗಕಲೆಗಳ ಸಂಪನ್ಮೂಲ ಕೇಂದ್ರಗಳೂ ಈ ದಿಸೆಯಲ್ಲಿ ಹೆಚ್ಚಿನ ಕಾರ್ಯ ನಿರ್ವಹಿಸಿದವು.

ಹೀಗೆ, ಸ್ವಾತಂತ್ರ್ಯಾನಂತರದಲ್ಲಿ ದೇಜಗೌ, ಹಾ. ಮಾ. ನಾಯಕ, ಜೀಶಂಪ ಅವರಂತಹ ಸಮರ್ಥ ಜಾನಪದ ತಜ್ಞರ ಮಾರ್ಗದರ್ಶನದಲ್ಲಿ ಬಹುತೇಕ ಗ್ರಾಮೀಣ ಪ್ರದೇಶಗಳಿಂದ ಬಂದ ಹೊಸ ಕಾಲದ ಯುವಕರು ಮತ್ತು ಶಿಷ್ಟ ಸಾಹಿತ್ಯದಲ್ಲಿ ಕೆಲಸ ಮಾಡುತ್ತಿದ್ದ ಹೊಸ ದೃಷ್ಟಿಕೋನವುಳ್ಳ ಚಿಂತಕರು ಜಾನಪದ ಕ್ಷೇತ್ರದಲ್ಲಿ ಪರಿಶ್ರಮ ಪೂರ್ವಕವಾಗಿ ತಮ್ಮನ್ನು ತೊಡಗಿಸಿಕೊಂಡರು. ಈ ಘಟ್ಟಕ್ಕೆ ಸೇರಿದ ಬರಹಗಾರರು ಸ್ವಾತಂತ್ರ್ಯವನ್ನು ದಕ್ಕಿಸಿಕೊಂಡವರು ಮತ್ತು ಪಾಶ್ಚಾತ್ಯ ವೈಜ್ಞಾನಿಕ ತಿಳಿವಳಿಕೆಗೆ ತೆರೆದು ಕೊಂಡವರಾಗಿದ್ದರು. ತಾವು ಓದಿದ, ಗ್ರಹಿಸಿದ, ಎರವಲು ಪಡೆದ ಎಲ್ಲಾ ಪಶ್ಚಿಮಮುಖಿ ಚಿಂತನೆಗಳನ್ನು ಕರ್ನಾಟಕ ಜಾನಪದಕ್ಕೆ ಅನ್ವಯಿಸಲು ಯತ್ನಿಸಿದರು ಮತ್ತು ಗ್ರಾಮೀಣ ಸಂಗ್ರಹಗಳ ಕಡೆಗೂ ಆಸಕ್ತಿ ತೋರಿಸಿದರು. ಫಲವಾಗಿ ಈ ಕಾಲಘಟ್ಟದಲ್ಲಿ ಜನಪದ ಸಂಗ್ರಹ ಗಳ ಜತೆಜತೆಯಲ್ಲೇ ಸಂಶೋಧನೆ, ಜನಾಂಗೀಯ ಅಧ್ಯಯನಗಳು ಪ್ರಖರಗೊಂಡವು.

ಮೂರನೆಯ ಕಾಲಘಟ್ಟದಲ್ಲಿ ಮೂಡಿಬಂದ ಸಮಾಜವಾದಿ ಚಿಂತಕರು ೧೯೮೦ರಿಂದೀಚೆಗೆ ಕನ್ನಡ ಜಾನಪದದ ಎಲ್ಲಾ ಮಗ್ಗುಲುಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ನಡೆಸಿದ ವಿಶಿಷ್ಟ ಆಲೋಚನಾ ಕ್ರಮದವರು. ಶುಷ್ಕ ವೈಜ್ಞಾನಿಕತೆ, ಪಾಶ್ಚಾತ್ಯ ಸಿದ್ಧಾಂತಗಳ ಪ್ರಭಾವಕ್ಕೆ ಬಲಿಯಾಗದೆ ದೇಶೀ ನೆಲೆಯಲ್ಲಿ ವೈಜ್ಞಾನಿಕತೆಯನ್ನೂ ವೈಚಾರಿಕ ಪರೀಕ್ಷೆಗೆ ಒಳಗು ಮಾಡುತ್ತಾ ಬದುಕಿನ ವಿನ್ಯಾಸಗಳನ್ನು ಪದರುಪದರಾಗಿ ವಿಶ್ಲೇಷಿಸುತ್ತಾ ಜಾನಪದವನ್ನು ಅನ್ವಯಗೊಳಿಸಿಕೊಂಡು ಬಂದವರು. ''ಈ ವರ್ಗದ ಬರಹಗಾರರು

ಇತ್ತೀಚಿನ ಜಾಗತೀಕರಣ ಎಂಬ ನವವಸಾಹತುಶಾಹಿಗೆ ಮುಖಾಮುಖಿಯಾಗಿದ್ದಾರೆ, ಮಾತ್ರವಲ್ಲ ಒಂದು ದೇಶದ ಅಭಿವೃದ್ಧಿ ಎಂಬುದು, ಜೀವನ ವಿಧಾನ ಎಂಬುದು ಮುಖ್ಯವಾಗಿ ಆ ದೇಶದ 'ಸಂಸ್ಕೃತಿ ಜ್ಞಾನ'ದಿಂದಲೇ ಬೆಳೆದು ನಿಲ್ಲಬೇಕು ಎಂದು ಪ್ರತಿಪಾದಿಸುತ್ತಿದೆ. ಇವರು ದೇಶ, ಭಾಷೆ, ಸಂಸ್ಕೃತಿಗಳಂಥ ವಿಷಯಗಳನ್ನು ಜನಜೀವನದ ಹೊರಗಿನ ಮಾತುಕತೆಯಾಗಿ ನೋಡುವುದಿಲ್ಲ. ಒಂದು ಸಂಸ್ಕೃತಿ ಚಿಂತನೆಯ ಅಭಿವೃದ್ಧಿ, ಆತಂಕ, ಉಳಿಯುವಿಕೆ, ಅನನ್ಯತೆಯ ಮತ್ತು ಜೀವನ ಮುಂದುವರಿಕೆಯ ಕ್ರಮವಾಗಿ ನೋಡುತ್ತಾರೆ.'' (ಹಿ. ಶಿ. ರಾಮಚಂದ್ರೇಗೌಡ : ೧೯೯೮). ಈ ಕಾಲಘಟ್ಟದ ಚಿಂತನೆಯು ಜೀವ ಕೇಂದ್ರಿತವಾದುದು. ಕೈಗಾರಿಕಾ ಪಿರಮಿಡ್‌ಗೆ ಪ್ರತಿಯಾಗಿ 'ಹಸಿರು ಪಿರಮಿಡ್'ನ್ನು ಎದುರಾಗಿಸಿ 'ಜೀವಿ-ಜೀವ'ದ ಒಟ್ಟು ಅಸ್ತಿತ್ವದ ಕೇಂದ್ರದಿಂದ ಮಾತನಾಡುತ್ತದೆ.

ಎರಡನೆಯ ಘಟ್ಟದ ಚಿಂತಕರೂ ಸಹ ಈ ಕಾಲಘಟ್ಟದಲ್ಲಿ ಜಾನಪದವನ್ನು ಹೊಸದಾಗಿ ನಿರ್ವಚಿಸಿಕೊಳ್ಳುವುದರ ಮೂಲಕ ಅಧ್ಯಯನ ವಿಧಾನಗಳನ್ನು ಪರಿಷ್ಕರಿಸಿಕೊಂಡ ಮೂರನೆಯ ಘಟ್ಟದವರೊಂದಿಗೆ ಮುಂದುವರಿದಿದ್ದಾರೆ. ಜಾನಪದವು ಪಳೆಯುಳಿಕೆಯಲ್ಲ: ಪ್ರಕ್ರಿಯಾತ್ಮಕವಾದುದು. ಪರಿವರ್ತನಶೀಲ ಸಮಾಜದಲ್ಲಿಯೂ ಸಹ ಮುಂದುವರಿಯುವ ಅಂತಶ್ಚೈತನ್ಯವನ್ನು ಹೊಂದಿದೆ ಎಂದು ನಂಬಿದ ಈ ತಲೆಮಾರಿನ ಚಿಂತಕರು innovative ಆದವರು; ಜಾನಪದದ ಬಗ್ಗೆ ಹೊಸ ಎಚ್ಚರ, ಹೊಸ ದೃಷ್ಟಿಕೋನ ಮೂಡಿಸಿದವರು.

ಈ ಕಾಲಘಟ್ಟದಲ್ಲಿಯೂ ಜೀಶಂಪ, ಎನ್. ಆರ್. ನಾಯಕ, ಡಾ|| ಕಂಬಾರ, ಪಿ. ಕೆ. ರಾಜಶೇಖರ, ಡಾ|| ಇಮ್ರಾಪುರ, ಡಾ|| ಕೃಷ್ಣಮೂರ್ತಿ ಹನೂರು ಮೊದಲಾದ ಅಕೆಡೆಮಿಕ್ ವಿದ್ವಾಂಸರು ತಮ್ಮ ಸಂಗ್ರಹಗಳ ಪ್ರಕಟಣೆಯನ್ನು ಮುಂದುವರಿಸಿಕೊಂಡು ಬಂದರು. ಇವರೊಂದಿಗೆ ನಿಂಗಣ್ಣ ಸಣ್ಣಕ್ಕಿ, ಚನ್ನಣ್ಣ ವಾಲೀಕಾರ, ಜಿ. ಆರ್. ತಿಪ್ಪೇಸ್ವಾಮಿ, ರಂಗಾರೆಡ್ಡಿ ಕೋಡಿರಾಂಪುರ, ವ. ನಂ. ಶಿವರಾಮು ಮುಂತಾದ ತರುಣ ಜಾನಪದ ವಿದ್ವಾಂಸರು ತಮ್ಮ ಸಂಗ್ರಹಗಳನ್ನು ಪ್ರಕಟಿಸಿದರು.

೧೯೮೦ರಿಂದಲೇ ಜಾನಪದವನ್ನು ವಿಜ್ಞಾನ-ವೈಚಾರಿಕತೆಗಳ ಸಮನೆಲೆಯ ಅಭಿವೃದ್ಧಿ ಜ್ಞಾನ-ವಿಜ್ಞಾನವನ್ನಾಗಿ ನಿರ್ವಚಿಸುತ್ತಾ ಬಂದ ಹಿ. ಶಿ. ರಾಮಚಂದ್ರೇಗೌಡರ ಚಿಂತನಾನೆಲೆಯು ಜಾನಪದಕ್ಕೆ ಹೊಚ್ಚ ಹೊಸ ಆಯಾಮವನ್ನು ನೀಡಿತು. ಅನುಭವ ಹಾಗೂ ಅಭಿವ್ಯಕ್ತಿಗಳೆರಡರಲ್ಲೂ ಗಾಢವಾದ ಸಂವೇದನೆಯನ್ನುಳ್ಳ ರಾಮಚಂದ್ರೇಗೌಡರು ಕೃಷೀವಲ ಸಂಸ್ಕೃತಿಯ ಉತ್ಪತ್ತಿಯಾದ ಜಾನಪದವನ್ನು ಈವತ್ತಿನ ಸಾಮಾಜಿಕ, ಆರ್ಥಿಕ, ರಾಜಕೀಯ ಚಿಂತನೆಗಳ ಮುಖಾಂತರ ಪ್ರಸ್ತುತಗೊಳಿಸುತ್ತಾರೆ. ಕನ್ನಡ ಜಾನಪದವನ್ನು ವೈಜ್ಞಾನಿಕವಾಗಿ ನಿರ್ಣಯಿಸಿಕೊಳ್ಳುವುದರೊಂದಿಗೆ ವರ್ತಮಾನಕ್ಕೆ ಹೊಂದಿಸಿಕೊಳ್ಳುವ ಗೌಡರ ಬಗೆ ವಿಶಿಷ್ಟವಾದುದು. ಇವರ ಜನಪದರು ನಾವು, ಜಾನಪದ ತಡಕಾಟ, ಜಾನಪದ ಪ್ರಕೃತಿ, ತನ್ನ ತಾವು ಇವೇ ಮೊದಲಾದ ಕೃತಿಗಳು ಕನ್ನಡ ಜಾನಪದ ಅಧ್ಯಯನದ ಬದಲಾದ ಆಯಾಮಗಳನ್ನು ಪರಿಚಯಿಸುತ್ತವೆ.

ಬಹುರೂಪಿ ಜಾನಪದವನ್ನು ಬಹುಪಠ್ಯಗಳ ಆಧಾರದ ಮೇಲೆ ನಿರ್ಣಯಿಸುವ ದೃಷ್ಟಿಕೋನದ ನೆಲೆಯಲ್ಲಿ ಕೃಷ್ಣಮೂರ್ತಿ ಹನೂರು, ಎ. ವಿ. ನಾವಡ, ಪುರುಷೋತ್ತಮ ಬಿಳಿಮಲೆ, ಹಿ. ಚಿ. ಬೋರಲಿಂಗಯ್ಯ, ವೆಂಕಟೇಶ ಇಂದ್ವಾಡಿ ಮುಂತಾದ ವಿದ್ವಾಂಸರು ಬೆಳೆದಿದ್ದಾರೆ. ಮಾಹಿತಿಗಳ ಮೂಲಕ ಹೊರಟು ಹೊಸ ಅರ್ಥದೆಡೆಗೆ ತಲುಪುವ, ಆ ಮೂಲಕ ಜಾನಪದ ಸಾಧ್ಯತೆಗಳನ್ನು ವಿಸ್ತರಿಸುವ ಕೆಲಸದಲ್ಲಿ, ಜಾನಪದವನ್ನು ಆನ್ವಯಿಕ ದೃಷ್ಟಿಕೋನದಿಂದ ಅರ್ಥಯಿಸುವವರಲ್ಲಿ ಬಿ. ಎ. ವಿವೇಕ ರೈ, ಅಂಬಳಿಕೆ ಹಿರಿಯಣ್ಣ, ಮೊಗಳ್ಳಿ ಗಣೇಶ, ತೀ. ನಂ. ಶಂಕರನಾರಾಯಣ, ರಂಗಾರೆಡ್ಡಿ ಕೋಡಿರಾಂಪುರ, ಮಹೇಶ್ವರಯ್ಯ, ಚಕ್ಕೆರೆ ಶಿವಶಂಕರ್ ಪ್ರಧಾನವಾಗಿ ಕಂಡುಬರುತ್ತಾರೆ. ಜಾನಪದ ಅಧ್ಯಯನದಲ್ಲಿ ದೇಶೀಯತೆಯನ್ನು ಅಳವಡಿಸಿಕೊಳ್ಳಬೇಕೆನ್ನುವ ಕಾಳಜಿಯಲ್ಲಿ ಅರವಿಂದ ಮಾಲಗತ್ತಿ ಗೋಚರಿಸುತ್ತಾರೆ. ಮಹಿಳಾ ಜಾನಪದ ಅಧ್ಯಯನಕಾರರಲ್ಲಿ ಸಂಧ್ಯಾರೆಡ್ಡಿ, ವೈ. ಸಿ. ಭಾನುಮತಿ, ಶಾಲಿನಿ ರಘುನಾಥ್, ಗಾಯತ್ರಿ ನಾವಡ ಗಮನಿಸಬೇಕಾದ ಹೆಸರುಗಳು. ಪ್ರತಿ ಸಂಸ್ಕೃತಿಯ ನೆಲೆಯಲ್ಲಿ ನಡೆಯುತ್ತಿರುವ ಅಧ್ಯಯನಗಳಲ್ಲಿ ಬೋರಲಿಂಗಯ್ಯ, ಎಸ್. ಜಿ. ಸಿದ್ಧರಾಮಯ್ಯ, ಚಕ್ಕೆರೆ ಶಿವಶಂಕರ್ ಮುಂತಾದವರಿದ್ದಾರೆ. ಗ್ರಾಮ, ಗ್ರಾಮದೇವತೆ ಅಥವಾ ವಿಷಯನಿಷ್ಠ ಜಾನಪದ ಅಧ್ಯಯನಗಳಲ್ಲಿ ಸಿದ್ದಲಿಂಗಯ್ಯ, ಚನ್ನಣ್ಣ ವಾಲೀಕಾರ, ಅಮೃತ ಸೋಮೇಶ್ವರ, ಅರ್ಜುನ ಗೊಳಸಂಗಿ, ಟಿ. ಗೋವಿಂದರಾಜು ಮುಖ್ಯವಾಗಿ ಹೇಳಬೇಕಾದ ಹೆಸರುಗಳಾಗಿವೆ.

ಈ ಕಾಲಘಟ್ಟದಲ್ಲಿ ಪರಿಸರ, ಜಾಗತೀಕರಣ, ಗ್ಯಾಟ್, ಬಾಂಬ್, ಬುಡಕಟ್ಟು ಅಧ್ಯಯನ, ಸಮಾಜದ ಆರ್ಥಿಕ, ಸಾಮಾಜಿಕ, ರಾಜಕೀಯ ಸಂಗತಿಗಳೆಲ್ಲವೂ ಜಾನಪದ ಅಧ್ಯಯನದ ದಿಕ್ಕುಗಳನ್ನು ವಿಸ್ತರಿಸಿವೆ ಎಂಬುದು ನಿಜವಾದರೂ, ಬಹುತೇಕ ಅಧ್ಯಯನಗಳು ಪದ್ಧತಿ ಬದ್ಧವಾಗಿವೆಯೇ ಹೊರತು ಸೃಜನಶೀಲವಾಗಿಲ್ಲ.

ಈ ಹೊತ್ತು ಜಾನಪದ ಎನ್ನುವಂಥದ್ದು ಯಾವುದೇ ಶಾಸ್ತ್ರದ ಬಾಲಂಗೋಚಿಯಾಗಿರದೆ, ಪ್ರತ್ಯೇಕ ವಿಜ್ಞಾನವಾಗಿ, ಜ್ಞಾನದ ಶಿಸ್ತಾಗಿ ಬೆಳೆದಿದೆ. ಇಷ್ಟಾಗಿಯೂ ಜಾನಪದವನ್ನು ಒಂದು ಚೌಕಟ್ಟಿನಲ್ಲಿ ಇಲ್ಲವೆ ಅಳತೆಗೋಲಿರಿಸಿ, ಜಾನಪದ ಎಂದರೆ ಇಷ್ಟೇ ಎಂದು ಸೂಕ್ತೀಕರಿಸಿ ಹೇಳಲು ಬರುವುದಿಲ್ಲ. ಜಾನಪದದ ಗುಣವೇ ಅಂಥದ್ದು. ಎಂತಹುದೇ ಹಿಡಿತಕ್ಕೂ ದಕ್ಕದಿರುವಂಥದ್ದು. ಲಭ್ಯವಿರುವ ಸುಮಾರು ೨೦ಕ್ಕೂ ಮಿಕ್ಕ ಜಾನಪದ ನಿರ್ವಚನಗಳನ್ನು ಮೀರಿ ಜಾನಪದವು ತನ್ನ ಆಯಾಮವನ್ನು ವಿಸ್ತರಿಸಿಕೊಂಡಿದೆ. ಕ್ಷೇತ್ರಕಾರ್ಯದಲ್ಲಿ ದೊರಕುವ ಸಾಮಗ್ರಿ, ವಿಚಾರ ಮತ್ತು ಆನ್ವಯಿಕತೆಯ ಆಧಾರದ ಮೇಲೆ ನಾವಿಂದು ಜಾನಪದವನ್ನು ಅರ್ಥಯಿಸಿಕೊಳ್ಳಬೇಕಾಗಿದೆ.

ನಮ್ಮ ತರುಣ ಜಾನಪದ ವಿದ್ವಾಂಸರು ಜಾನಪದಕ್ಕೆ ದಂಡಿಯಾಗಿ ಮುಗಿ ಬೀಳುತ್ತಿದ್ದಾರೆ. ಆದರೆ ಸತ್ವದ ಕೊರತೆ ಬಹಳ. ಇನ್ನೂ ಸಂಗ್ರಹಿತ ಸಾಮಗ್ರಿಯ ರಸನಿಷ್ಠ ವ್ಯಾಖ್ಯಾನದಲ್ಲೇ ಬಳಲುತ್ತಿದ್ದಾರೆ. ಕ್ಷೇತ್ರಕಾರ್ಯ ಸ್ಥಗಿತಗೊಂಡಿದೆ. ಸಂಸ್ಕೃತಿ ಅಧ್ಯಯನದಲ್ಲಿ ಬಡಕಲು ವ್ಯಾಖ್ಯಾನಿಗಳಾಗಿದ್ದಾರೆ. ಗುಣಾತ್ಮಕವಾದ, ಪ್ರಯೋಜನಕಾರಿಯಾದ ಅಧ್ಯಯನಗಳು ನಡೆಯುತ್ತಿಲ್ಲ. ಜಾನಪದದ ಸಮರ್ಪಕ ತಿಳಿವಳಿಕೆ ಇಲ್ಲದೆ ಹೋದರೆ ಅಧ್ಯಯನವು ವಿಸ್ತರಿಸುವುದಿಲ್ಲ. ಕನ್ನಡ ಜಾನಪದ ಜಗತ್ತು ಅತ್ಯಂತ ಸಮೃದ್ಧವಾದುದು ಮತ್ತು ವೈವಿಧ್ಯಮಯವಾದುದು. ದೇಶೀ ಅಭಿವೃದ್ಧಿ ಚಿಂತಕರಿಂದ ಮೊದಲುಗೊಂಡು ಸಮಾಜವಾದಿ ಚಿಂತಕರವರೆಗೂ ಕನ್ನಡ ಜಾನಪದ ಮಗ್ಗುಲುಗಳನ್ನು ತಲಸ್ಪರ್ಶಿಯಾಗಿ ವಿವೇಚಿಸಿದ್ದಾರೆ. ಹೊಸ ಹೊಸ ದೃಷ್ಟಿಕೋನಗಳು, ವಿಚಾರಗಳಿಂದ ಈ ಜಗತ್ತನ್ನು ವಿಸ್ತರಿಸಿರುತ್ತಾರೆ. ಅವರುಗಳ ಅಧ್ಯಯನದ ಬೆಳಕಿನಲ್ಲಿ ಮುಂದಿನ ಅಧ್ಯಯನದ ನೆಲೆಗಳನ್ನು ಗುರುತಿಸಿಕೊಳ್ಳಬೇಕಾದ ಜರೂರು ಇದೆ. ಜಾನಪದದ ಅಜ್ಞಾತ ಕ್ಷೇತ್ರಗಳು ಕನ್ನೆನೆಲವಾಗಿ ಉಳಿದಿವೆ. ಸಶಕ್ತ ಉಳುಮೆಗಾರರಿಗಾಗಿ ಕಾಯುತ್ತಿದೆ. ಸಂಸ್ಕೃತಿಯಲ್ಲಿ ಇನ್ನೂ ಅನಾವರಣಗೊಳ್ಳಬೇಕಾದ ಎಷ್ಟೋ ಮುಖಗಳಿವೆ. ಅವುಗಳೆಲ್ಲವನ್ನು ಕ್ಷೇತ್ರಕಾರ್ಯದ ಮೂಲಕ ಶೋಧಿಸಿ ಹೊರತೆಗೆಯಬೇಕಾಗಿದೆ. ನಿರ್ಲಕ್ಷಿತ ಸಮಾಜದ ಬೃಹತ್ ಸೃಜನಶೀಲ ಸಾಮರ್ಥ್ಯವನ್ನು ಪರಿಚಯಿಸಬೇಕಾಗಿದೆ. ಆದರೆ ನಮ್ಮ ಜಾನಪದ ಅಧ್ಯಯನವು ಇಂದಿನ ದಿನಗಳಲ್ಲಿ ಕೈಕಟ್ಟಿ ಕುಳಿತಿದೆ.

ನಮ್ಮ ಜಾನಪದ ವಿದ್ವಾಂಸರು ವರ್ತಮಾನದಲ್ಲಿ ಜಾನಪದವನ್ನು ಸರಿಯಾದ ನೆಲೆಗಳಲ್ಲಿ ಗ್ರಹಿಸಬೇಕಾಗಿದೆ. ಹೊರಗಿನಿಂದ ಎರವಲು ತಂದ ಸಿದ್ಧಾಂತಗಳೇ ಪರಮ ಗಂತವ್ಯವಲ್ಲ. ಸಾಮಗ್ರಿಯನ್ನು ಒದಗಿಸಿಕೊಡುವ ವ್ಯಕ್ತಿಗಳು ಅವಿದ್ಯಾವಂತರಾಗಲಿ, ತಿಳಿವಳಿಕೆ ಇಲ್ಲದವರಾಗಲಿ ಅಲ್ಲ; ಲೋಕಜ್ಞಾನಿಗಳು ಮತ್ತು ಲೋಕದೃಷ್ಟಿಯುಳ್ಳವರು.

ಅವರು ನಮ್ಮ ಅಧ್ಯಯನದ ಸಹಭಾಗಿಗಳು, ಒಂದರ್ಥದಲ್ಲಿ Research Partners. ವಸಾಹತುಶಾಹಿ ಶಿಕ್ಷಣ ಕ್ರಮವು ರೂಢಿಗೆ ತಂದ ಅಕ್ಷರದ ಅಹಂಕಾರವು ಗ್ರಾಮೀಣ ಪ್ರತಿಭೆಯನ್ನು, ಸಮೃದ್ಧ ಜೀವನಾನುಭವವನ್ನು ಸುಂಗಿ ನೊಣೆದಿದೆ. ವಸಾಹತುಶಾಹಿ ಹುಟ್ಟು ಹಾಕಿದ ಗ್ರಾಮೀಣ ಮೌಢ್ಯ (village idiocy) ಪರಿಕಲ್ಪನೆಯನ್ನು ನಾವಿವತ್ತು ಮರುಚಿಂತನೆ ಮಾಡಬೇಕಾಗಿದೆ.

ಜಾನಪದ ಎನ್ನುವಂಥದ್ದು ಪರಂಪರಾಗತವಾದ ಹರಳುಗಟ್ಟಿದ ವಿವೇಕ ಮತ್ತು ಪ್ರತಿಭೆ. ಸದಾ ಸೃಷ್ಟಿಸುವ ಶಕ್ತಿಯನ್ನುಳ್ಳದ್ದು, ಭೋಗಿಸುವಂಥದ್ದಲ್ಲ. ದೇಶೀಯ ಜ್ಞಾನ ಪರಂಪರೆಯನ್ನು ಈ ನಾಡಿನಲ್ಲಿ ಉಳಿಸಿ, ಬೆಳೆಸಿಕೊಂಡು ಬಂದ ನಮ್ಮ ಜನ ನಿಸರ್ಗವನ್ನು ಪ್ರೀತಿಸುತ್ತ, ಪೂಜಿಸುತ್ತಾ ನಿಸರ್ಗದೊಂದಿಗೇ ತಳುಕು ಹಾಕಿಕೊಂಡು ಪ್ರಕೃತಿ ಮತ್ತು ಜೀವಕೇಂದ್ರಿತ ಚಿಂತನೆ ನಡೆಸಿದವರು. ಈ ಹಿನ್ನೆಲೆಯಲ್ಲಿ ನಾವೀಗ ಜಾನಪದವನ್ನು ಅದರ ಎಲ್ಲ ಅರ್ಥ-ವಿಸ್ತಾರಗಳೊಂದಿಗೆ ಹೊಸದಾಗಿ ಮುರಿದು ಕಟ್ಟುವ ಕೆಲಸ ಮಾಡಬೇಕಾಗಿದೆ. ಜಾಗತೀಕರಣದ ಸವಾಲುಗಳಿಗೆ ಪ್ರತಿಯಾಗಿ ಜಾನಪದವನ್ನು ರಚನಾತ್ಮಕವಾಗಿ ಗಟ್ಟಿಗೊಳಿಸಬೇಕಾದ ಅಗತ್ಯವಿದೆ.

ಡಾ|| ಚಕ್ಕೆರೆ ಶಿವಶಂಕರ್
ನಂ. ೨೧, 'ಪುಷ್ಯ', ಕವಿ ಕೇಶಿರಾಜ ರಸ್ತೆ, ೧೦ನೇ 'ಎ' ಕ್ರಾಸ್, ಶ್ರೀನಗರ, ಬೆಂಗಳೂರು - ೫೬೦ ೦೫೦

# ಬರಿದಾಗುತ್ತಿರುವ ನನ್ನ ಪ್ರೀತಿಯ ಕಡಲು

ನೈಲ್ ದಡದ ನಾಗರಿಕತೆ, ಸಂಸ್ಕೃತಿ ಬಗ್ಗೆ ಪಠ್ಯದಲ್ಲಿ ಓದುವಾಗ ನಾನಿನ್ನೂ ಸಣ್ಣವಳು. ಉರುಹೊಡೆದು ಪಾಸಾಗುವ ವಯಸ್ಸದು. ಆ ದಡದ ನಾಗರಿಕತೆಯಷ್ಟೆ ಪ್ರಖರವಾದ ನಾಗರಿಕತೆ, ಬದುಕು ನಮ್ಮ ಹಿತ್ತಲ ಹಿಂದಿನ ಕಡಲ ದಡದಲ್ಲಿತ್ತು ಎಂದು ಅರಿವಾಗಿದ್ದೇ ನನಗೆ ಇತ್ತಿತ್ಲಾಗೆ, ನನ್ನ ಬುದ್ಧಿ ಬಲಿತ ಮೇಲೆ. ಅದೂ ಕಡಲ ತಡಿಯ ಬದುಕಿಂದ ದೂರ ಸರಿದು ನಿಂತು ಬಾಲ್ಯದಲ್ಲಿ ನಮಗೆ ಆಡುವ ತೊಟ್ಟಿಲಾಗಿದ್ದ ಕಡಲ ದಂಡೆಯನ್ನು ನೆನಪಿನಂಗಳಕ್ಕೆ ಆವಾಹಿಸಿಕೊಂಡಾಗ...

ನಾನು ಆ ಕಡಲ ಸೆರಗಲ್ಲಿ ಕಂಡ ಬದುಕು ಎಂಥಾದ್ದು! ಅದು ಅಮ್ಮನ ಮಡಿಲಷ್ಟೇ ಪ್ರೀತಿ ಕೊಟ್ಟಂತಾಹದ್ದು! ಎದ್ದರೂ ಕಡಲ ತಡಿ... ಬಿದ್ದರೂ ಕಡಲ ತಡಿ. ಆ ಕಡಲ ಸೆರಗು ಅಮ್ಮನ ಸೆರಗಷ್ಟೇ ನಮಗೆ ಆಪ್ತ. ಅಮ್ಮನ ಮಡಿಲಲ್ಲಿ ಮಲಗಿ, ಆ ಕತ್ತಲ ನೀರವ ಮೌನದಲ್ಲಿ ಕಡಲ ಮೊರೆತವನ್ನು ಕಿವಿ ನಿಮಿರಿಸಿ ಆಲಿಸುತ್ತಿದ್ದಾಗ ಅಮ್ಮ ಹೇಳುವುದಿತ್ತು – ''ಕಡಲಮ್ಮ ತನ್ನೊಡಲಲ್ಲಿರುವ ಮಕ್ಕಳನ್ನೆಲ್ಲ ಮಲಗಿಸುವುದಕ್ಕೆ ಜೋಗುಳ ಹಾಡುತ್ತಿದ್ದಾಳೆ'' ಎಂದು.

ಆ ಕಡಲಮ್ಮನ ಜೋಗುಳ ಕೇಳುತ್ತಾ ಅಮ್ಮನನ್ನು ತಬ್ಬಿ ಹಿಡಿದು ನಿದ್ರಿಸಿ ಮುಂಜಾನೆದ್ದರೆ ಕೇಳಿಸುವುದೇನು! ಮತ್ತೆ ಕಡಲದಡದ ಕಲರವ! ರಂಪಣಿ ಇಳಿಸುವ, ಮಾರಿಬಲೆ ಬೀಸುವ ಬೆಸ್ತರ ದುಡಿಮೆಯ ಸಡಗರವದು. ಹಾಗೆಯೇ ಮುಂಜಾನೆ ಕಣ್ಬಿಟ್ಟೊಡನೆ ಕಡಲ ದಡಕ್ಕೆ ಓಡಿಬಂದರೆ ಅಲ್ಲೊಂದು ಬೇರೆಯೇ ಲೋಕವಿದೆ! ದಡದ ಮೇಳಿರುವ ಬಾಬು ಮೂಲ್ಯನ ಚಾದಂಗಡಿ ಎದುರು ತಿಂಡಿಗಳ ಮೇಲೆ ಕೂತ ನೊಣಗಳಂತೆ ಬೆಸ್ತರ ಸಂತೆಯೇ ನೆರೆದಿದೆ. ಆ ರಂಪಣಿ ಫಂಡಿನಲ್ಲಿರುವ ಬೆಸ್ತರೆಲ್ಲ ಪಡವ (ಬೃಹತ್ ದೋಣಿ)ನ್ನು ನೀರಿಗಿಳಿಸುವ ಮುನ್ನ ಚಾ ನೀರಿಗಾಗಿ ಬಾಬು ಮೂಲ್ಯನ ಜತೆ ಮಾತಿನ ರಂಪಾಟ ನಡೆಸುತ್ತಿದ್ದಾರೆ. ರಂಪಣಿ ತಂಡದಲ್ಲಿರುವವರು ಒಬ್ಬರೇ ಇಬ್ಬರೇ..., ನೂರಾರು ತಲೆಗಳಿದ್ದಾವೆ. ಬಾಬು ಮೂಲ್ಯನೊಬ್ಬನಿಂದ ಅವರೆಲ್ಲರನ್ನು ಸುಧಾರಿಸಲಾದೀತೆ...? ಮಾಮೂಲಿನಂತೆ ಬೈಗಳ ಏಟನ್ನು ಬಾಬು ಮೂಲ್ಯ ನಸುನಗೆಯಿಂದಲೇ ಸ್ವೀಕರಿಸುತ್ತಿದ್ದಾನೆ.

ಅಷ್ಟಾದರೂ, ಚಾ ನೀರು ಸಿಗದವರು ಮುಖವುಬ್ಬಿಸಿ ಕೊಂಡು ಪಕ್ಕದಲ್ಲಿರುವ ಸೈಯದ್ದಿ ಬ್ಯಾರಿಯವರ ಗೂಡಂಗಡಿ ಹೊಕ್ಕಿದ್ದಾರೆ. ''ಕೊಡಿ ಸ್ಯಾಬ್ರೆ ಒಂದು ಚಪ್ಪೆಸೋಡ. ಮತ್ತೊಂದು ಜಿಂಜರ್ ಸೋಡ..., ಹಾಗೆ ಎರಡಾಣೆಯ ಅವಲಕ್ಕಿ... ಒಂದಾಣೆಯ ತೆಂಗಿನಕ್ಯಾ ಬೆಲ್ಲದ ತುಂಡು...''

''ಆ ಬಾಬು ಮೂಲ್ಯನ ಚಾ ನೀರಿಗೆ ಭೂತ ಹೊಡಿಲಿ...'' ಎಂದು ಬೈಯುತ್ತಾ ಬೆಸ್ತರು ಕ್ಯಾ-ಅವಲಕ್ಕಿ-ಬೆಲ್ಲದ ರುಚಿ ಸವಿಯುತ್ತಿರುವಾಗ ರಂಪಣಿ ತಂಡೇಲ (ಮುಖ್ಯಸ್ಥ)ನ ಕೂಗು ಕೇಳಿಸುತ್ತದೆ.

''ಆರರೆ... ತಮ್ಮ ತಂಡೇಲರು ಎಲ್ಲರನ್ನು ಕೂಗುತ್ತಿದ್ದಾರೆ. ನೀವೆಲ್ಲ ಒಮ್ಮೆ ಬೇಗ ಓಡಿ ಮಾರಾಯ್ರೆ...? ರಂಪಣಿ ಇಳಿಯುವುದು ತಡವಾಗಬಾರದು...'' ಎಂದು ಸೈಯದ್ದಿ ಬ್ಯಾರಿಯವರೇ ಎಲ್ಲರನ್ನೂ ಎಚ್ಚರಿಸುತ್ತಿದ್ದಾರೆ. ಸೈಯದ್ದಿ ಬ್ಯಾರಿಯವರು ತಮ್ಮ ಲೆಕ್ಕದ ಬೂಕಿನಲ್ಲಿ ಅವರೆಲ್ಲರ ಸಾಲದ ವಿವರ ಬರೆಯುತ್ತಿರುವಷ್ಟರಲ್ಲಿ ಬೆಸ್ತರೆಲ್ಲ ಕೈಯಲ್ಲಿ ದಂಡು (ಹುಟ್ಟು) ಹಿಡಿದು ಹೊರಟೇಬಿಟ್ಟರು.

ರಂಪಣಿ ಇಳಿಸಲು ಕಡಲಿಗಿಳಿಯುವ ಬೆಸ್ತರ ಮಂದಿಯನ್ನು ನೋಡುವುದೇ ಒಂದು ಚಂದ. ಕಡಲಮ್ಮನ ಸೀರೆ ಎಳೆಯಲು ಯಾರೋ ಪುಂಡರು ಬಂದಿದ್ದಾರೆ, ಆ ಪುಂಡರನ್ನು ಸದೆಬಡಿಯಲು ದಂಡು ಹಿಡಿದು ಹೊರಟ ವೀರರಂತೆ ಕಾಣಿಸುತ್ತಿದ್ದಾರೆ ಈ ಮೊಗವೀರರು.

ಕಡಲಿಗೆ ರಂಪಣಿ ಬಲೆ ಇಳಿಸಿದರೆ ಸಾಕು. ಕಡಲ ಒಡಲಿಂದ ಬಾಚಿ ತರುವ ರಾಶಿ ರಾಶಿ ಮೀನುಗಳನ್ನು ಏಲಂನಲ್ಲಿ ಖರೀದಿಸುವುದಕ್ಕಾಗಿ ಕಾಯುವ ಮುಸ್ಲಿಂ ಸ್ಯಾಬರುಗಳ ಜತೆಗೆ ಕಾಗೆ, ಹದ್ದು, ನಾಯಿ, ಬೆಕ್ಕುಗಳು ಕೂಡ ತಮ್ಮ ತಮ್ಮ ಬೇಟೆಗಾಗಿ ಪಾಲಿಗಾಗಿ ಕಾಯುತ್ತಿರುತ್ತವೆ. ಇವರೆಲ್ಲರ ಜತೆಗೆ ತಟ್ಟಿ ಹೋಟೆಲಿನ ಬಾಬು ಮೂಲ್ಯ... ಗೂಡಂಗಡಿಯ ಸೈಯದ್ದಿ ಬ್ಯಾರಿ... ಗಡ್ಡೆ ಗೆಣಸು ಮಾರುವ ಬಾಯಮ್ಮಗಳೂ ಆ ಝುಳ ಝುಳ ಬಿಸಿಲಿಗೆ ಬಾಯ್ಕಳೆದು ಕೂತು ದಣಿದು ಬರುವ ತಮ್ಮ ಗಿರಾಕಿಗಳಿಗಾಗಿ ಕಾಯುವುದಿದೆ.

ನಡುಬಿಸಿಲ ಧಗೆಗೆ, ಕಡಲಲ್ಲಿ ಪಡವಿಗೆ ಹುಟ್ಟು ಹಾಕುತ್ತಾ ಮೈಲುದ್ದದ ರಂಪಣಿ ಬಲೆಯನ್ನು ಇಳಿಸುವುದೇ ಒಂದು ಸಾಹಸದ ಕೆಲಸ. ದೇವರು ನಡುನೆತ್ತಿಗೆ ಬರುವಷ್ಟರಲ್ಲಿ ಬಲೆ ಹರಡಿಸಿ ತಂಡದವರೆಲ್ಲ ಕಡಲಿಂದ ಮೇಲೇರಿ ಬಂದು ಬಲೆ ಎಳೆಯುತ್ತಿರುವುದನ್ನು ನೋಡುವುದೇ ಒಂದು ಚೆಂದ. ಕಟೀಲು ಮೇಳದ ಸಮುದ್ರ ಮಥನದ ದೃಶ್ಯವೇ ಕಣ್ಣೆದುರು ಕುಣಿದಂತಾಗುತ್ತದೆ.

ಕಡಲದಂಡೆಯಲ್ಲಿ ಮೈಲು ದೂರದ ಅಂತರದಲ್ಲಿ ತೆಂಕ್ಲಾಗೆ-ಬಡ್ಲಾಗೆ (ದಕ್ಷಿಣ-ಉತ್ತರ) ದಿಕ್ಕಲ್ಲಿ ನಿಂತು, ಬಲೆಯ ಒಂದು ತುದಿಯನ್ನು ಒಂದೈವತ್ತು ಮಂದಿ ಎಳೆದರೆ ಮತ್ತೊಂದು ತುದಿಯನ್ನು ಮತ್ತೊಂದೈವತ್ತು ಮಂದಿ ಎಳೆಯುತ್ತಾ ಕಡಲ ಮಧ್ಯದಿಂದ ರಾಶಿ ರಾಶಿ ಮೀನುಗಳನ್ನು ಬಾಚುವುದನ್ನು ನೋಡುವುದೇ ಒಂದು ಸೋಜಿಗದ ದೃಶ್ಯ! ಆದರೆ ಇಂದಿನ ಸಾಮಾಜಿಕ ಸಂದರ್ಭದಲ್ಲಿ ಅದಕ್ಕಿಂತಲೂ ಸೋಜಿಗದಲ್ಲಿ ಸೋಜಿಗವೆನಿಸುವುದು – ಕಡಲ ಮಕ್ಕಳೆಂದು ಕರೆಯಲ್ಪಡುವ ಆ ಬೆಸ್ತ ಜನಾಂಗದವರು, ಶ್ರಮಸಂಸ್ಕೃತಿಯನ್ನಷ್ಟೇ ಗೌರವಿಸಿ ಕೊಂಡು ಮೈ ಬಗ್ಗಿ ದುಡಿವ, ಸಮಾನ ಮನಸ್ಕರಾದ ಯಾವುದೇ ಜನಾಂಗ-ಮತದ ದುಡಿಮೆಗಾರರನ್ನು ಆಗ ತಮ್ಮ ರಂಫಣಿ ಫಂಡಿನಲ್ಲಿ ಸೇರಿಸಿಕೊಂಡು ದುಡಿಸಿ ಕೊಳ್ಳುತ್ತಿದ್ದುದು. ಶ್ರಮ ಸಂಸ್ಕೃತಿಯ ಮೂಲಕವೇ ತಮ್ಮ ಅನ್ನದ ದಾರಿ ಕಂಡುಕೊಂಡ ಬೆಸ್ತವರ್ಗ ಆ ಮೂಲಕವೇ ಕೋಮುಸಾಮರಸ್ಯ, ವರ್ಗಸಾಮರಸ್ಯವನ್ನು ನಿರಂತರ ಕಾಪಾಡಿಕೊಳ್ಳುತ್ತಾ ಅಪ್ರಜ್ಞಾಪೂರ್ವಕವಾಗಿಯೇ ಜಾತ್ಯತೀತ



■ ಡಾ|| ಎಚ್. ನಾಗವೇಣಿ

ಸಿದ್ಧಾಂತದಡಿ ಬದುಕಿ ಬಾಳಿದವರು.

ಅರೆ...! ರಂಪಣಿ ಬಲೆಯನ್ನೆಳೆದು ಕಡಲ ದಂಡೆಯಲ್ಲಿ ಮೀನ ರಾಶಿಯನ್ನು ಸುರಿದಾಯಿತು! ಅದು ಮೀನ ರಾಶಿಯಲ್ಲ... ಅದೊಂದು ಬೆಳ್ಳಿ ಬೆಟ್ಟ! ನನ್ನ ಎಳೆ ಕಣ್ಣುಗಳಿಗೆ ಅದು ಕಂಡಿದ್ದೇ ಬೆಳ್ಳಿ ತುಂಡುಗಳಾಗಿ. ಅಯ್ಯಯ್ಯೋ... ಎಷ್ಟು ಜಾತಿಯ ಮೀನುಗಳು! ನಮ್ಮಲ್ಲಿರುವ ಜಾತಿ ವರ್ಗಗಳಂತೆ – ಲೆಕ್ಕವಿಲ್ಲದಷ್ಟು

ಮೀನ ರಾಶಿಯನ್ನು ಕಡಲ ಕರೆಗೆ ಎಳೆದು ಹಾಕುವುದಷ್ಟೇ ಇವರ ಕೆಲಸ. ನಂತರ ಎಲ್ಲವೂ ಅವರದ್ದು. ಯಾರದ್ದು? ಬ್ಯಾರಿಗಳದ್ದು, ಮೀನುಸ್ಯಾಬರದ್ದು. ತಂಡೇಲ ಕರೆದ ಏಲಂನಲ್ಲಿ ಪಾಲ್ಗೊಂಡ ಸ್ಯಾಬರುಗಳು ಒಬ್ಬರೇ- ಇಬ್ಬರೇ! ಹಲವರು. ಇತ್ತ ಏಲಂ ಕರೆಯುವಾಗ ಅತ್ತ ಕಡೆಯಿಂದ ಸಕ್ರೆ ಅಚ್ಚಿಗೆ ಬರುವ ಇರುವೆಗಳಂತೆ ಸೊಂಟದಲ್ಲಿ ಬುಟ್ಟಿ ಹಿಡಿದ ಬೆಸ್ತರ ಹೆಂಗಸರು ಮೀನ ರಾಶಿಯತ್ತ ಮುಗಿಬೀಳುತ್ತಿದ್ದಾರೆ.

ಗಂಡಿನಾಸರೆ ಇಲ್ಲದ ಬಡಕುಟುಂಬಗಳಿಗೆ, ವಿಧವೆಯರಿಗೆ, ಗತಿ ಗೋತ್ರವಿಲ್ಲದ ಸ್ವಜಾತಿಯರಿಗಾಗಿ ಒಂದು ಪುಟ್ಟ ಮೀನ ರಾಶಿಯೇ ಅಲ್ಲಿದೆ. ರಂಪಣಿಯ ತಂಡೇಲನೇನು ದಯ-ದಾಕ್ಷಿಣ್ಯ-ಕರುಣೆ ಇಲ್ಲದವನೇನು? ಊರ ಜಾತಿ ಗುರಿಕಾರರು ಮಾಡಿರುವ ಕಾಯಿದೆಯಂತೆ ದುಡಿತದ ಒಂದಷ್ಟು ಪಾಲು ಜಾತಿಯ ಬಡವರಿಗೆ - ಕೈಲಾಗದವರಿಗೆ ಸಲ್ಲಲೇಬೇಕು. ಈ ಪಾಲು ಪಡೆಯಲು ಬಂದವರ ಜತೆ, ಏಲಂ ನಿಂತ ಮೀನು ಸ್ಯಾಬರ ಕೈಯಿಂದ ಮೀನು ಖರೀದಿಸುವುದಕ್ಕಾಗಿ ಬೆಸ್ತರ ಮಹಿಳೆಯರ ಒಂದು ದಂಡೇ ಅಲ್ಲಿ ಸಿದ್ಧವಾಗಿ ನಿಂತಿದೆ. ಇಲ್ಲಿನ ವ್ಯವಹಾರವನ್ನು ಅಷ್ಟು ಸುಲಭಕ್ಕೆ ನನಗೆ ವರ್ಣಿಸಲಾಗುತ್ತಿಲ್ಲ. ಮೀನು ಹಿಡಿಯುವವರು ತಮ್ಮ ಗಂಡಸರು, ಆದರೆ ಅದನ್ನು ತಾವು ಮಾರಾಟಕ್ಕೆ ಪಡೆಯಬೇಕಾದುದು, ರಖಂ ಮಾರಾಟದ ಜವಾಬ್ದಾರಿ ಹೊತ್ತಿರುವ ಸ್ಯಾಬರುಗಳಿಂದ. ಈ ಅನಿಸಿಕೆ ಬೆಸ್ತರ ಮಹಿಳೆಯರಲ್ಲಿ ಆಗಾಗ್ಗೆ ಕಾಣಿಸಿಕೊಳ್ಳುವುದಿದೆ. ಆದರೆ ಇದೇನು ಹೊಸ ಒಪ್ಪಂದವಲ್ಲ. ತಲೆತಲಾಂತರದಿಂದ ಪಾಲಿಸಿಕೊಂಡು ಬಂದಿರುವ ಎರಡು ಜನಾಂಗಗಳ ಹೊಂದಾಣಿಕೆ ವ್ಯವಸ್ಥೆ. ಬೆಸ್ತರಿಗೂ-ಸ್ಯಾಬರಿಗೂ ಈ ರೀತಿಯ ವ್ಯಾವಹಾರಿಕ ಸಂಬಂಧ-ಸಾಮರಸ್ಯವನ್ನು ಹಿಂದಿನಿಂದಲೂ ಬೆಸೆದುಕೊಟ್ಟವಳು ಈ ಕಡಲ ತಾಯಿಯೇ. ಕಡಲನ್ನೇ ನಂಬಿ ಬದುಕು ನಡೆಸುತ್ತಿದ್ದ ಈ ಎರಡು ಕೋಮುಗಳು ಎಂದೂ ಕಡಲ ದುಡಿಮೆಯ ಹಕ್ಕಿಗಾಗಿ ಕೈ ಕೈ ಮಿಗಿಲಾಯಿಸಿಕೊಂಡವರಲ್ಲ. ತಮ್ಮ ಸುತ್ತಲ ಸಾಮಾಜಿಕ ಪರಿಸರವನ್ನು ಕುಲಗೆಡಿಸುವ ಯಾವ ಕೃತ್ಯಕ್ಕೂ ಮುಂದಾದವರಲ್ಲ. ಅಂದು ಈ ಎರಡು ಕೋಮಿನೊಳಗಿದ್ದ ಆರ್ಥಿಕ ಹೊಂದಾಣಿಕೆ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಸಾಮರಸ್ಯ ಹೊಂದಾಣಿಕೆಗಳು ಇಂದು ಈ ಕಡಲದಂಡೆಯ ಮೇಲೆ ಎಳ್ಳಿನಷ್ಟೂ ಕಾಣಿಸುತ್ತಿಲ್ಲ. ಯಾಕೆ ಎಂಬ ಕಾರಣವನ್ನು ವಿಶ್ಲೇಷಿಸುವ ಮುನ್ನ ನನಗೆ ಬಾಲ್ಯದ ಇನ್ನೊಂದು ಚಿತ್ರಣ ಕಣ್ಣೆದುರು ಹಾದುಬರುತ್ತಿದೆ.

...ಬೆಸ್ತರ ರಂಪಣಿ ಎಳೆವ ಸಂಭ್ರಮ-ಕೂಗು ಇಡೀಯ ಕಡಲ ಕೇರಿಗೆ ಮಾತ್ರವಲ್ಲ, ಮೈಲು ದೂರದ ರಾಜಬೀದಿವರೆಗೂ ಕೇಳಿಸುವುದುಂಟು. 'ಓ... ಮೇಲೆ ಐಸ್ಸ' ಎಂಬ ಕೂಗು ಎಲ್ಲೆಡೆಗೂ ಹರಡಿ... ದಡದ ಮೇಲಿರುವ ಶಾಲೆಯೊಳಕ್ಕೂ ನುಗ್ಗಿ... ರಂಪಣಿ ಧ್ಯಾನದಲ್ಲಿ ಮುಳುಗಿರುವ ಬೆಸ್ತರ ಮಕ್ಕಳ ಕಿವಿ ಬೀಳಿಗೆ ತಲುಪಿದೊಡನೆ ಆ ಮಕ್ಕಳೆಲ್ಲ ಮಾಸ್ತ್ರ ಎದುರೇ ಪದ್ರಾಡ್ (ಪರಾರಿ!)! ಎಲ್ಲಿಗೆ? ರಂಪಣಿಯ ಮೀನ ರಾಶಿಯತ್ತ. ಬಲೆಯಿಂದ ತಪ್ಪಿಸಿಕೊಂಡು ಪ್ರಾಣ ರಕ್ಷಣೆಯ ಯತ್ನದಲ್ಲಿರುವ ಮೀನುಗಳೆಲ್ಲ ಆ ಮಕ್ಕಳ ಪಾಲಿನದ್ದು. ಅಷ್ಟೇ ಸಾಲದೆಂಬಂತೆ ಮತ್ತೂ ಬಲೆಯೊಳಗೆ ಕೈ ತುರುಕಿಸಿ ಮೀನು ಕದಿಯುವುದಾದರೆ ಅದಕ್ಕೆ ದುಡಿದ ಬೆಸ್ತರಿಂದ ಏಟಿನ ಶಿಕ್ಷೆಯೂ ಕಾದಿರುತ್ತದೆ. ಮಕ್ಕಳು ಏಟುಪಡೆದೋ ಅಥವಾ ಪಡೆಯದೆಯೋ ತಾವು ಹಾಗೆ ಸಂಪಾದಿಸಿದ ಮೀನುಗಳನ್ನು ಊರೊಳಗೆ ಮಾರಿ ಅಥವಾ ಅಮ್ಮಂದಿರಿಗೆ ತಲುಪಿಸಿ ಮತ್ತೆ ಶಾಲೆಯ ಕಡೆ ಮುಖ ಹಾಕಿದರೆ... ಅಲ್ಲಿಗೆ ಮುಗಿಯಿತು ಕತೆ! ಅಲ್ಲಿ ಮತ್ತೆ ಮೀಯುವ ಶಿಕ್ಷೆ ಶಿಕ್ಷಕ ಸುಬ್ಬಣ್ಣಯ್ಯನವರಿಂದ. ಮೈತುಂಬ ಮೀನಿನ ನಾತ ಹೊತ್ತು ಬರುವ ಮಕ್ಕಳನ್ನು ಆ ಬ್ರಾಹ್ಮಣ ಮೇಷ್ಟ್ರು ಸುಧಾರಿಸಬೇಕಾದರೆ ಮೀಯುವ ಶಿಕ್ಷೆ ವಿಧಿಸುವುದು ಅವರಿಗೆ ಅನಿವಾರ್ಯವಾಗಿತ್ತು ನಿಜ. ತೊಟ್ಟಿ ತುಂಬಾ ನೀರು ತುಂಬಿಸಿಟ್ಟು ಕೈಯಲ್ಲಿ ತೆಂಗಿನ ನಾರು ಹಿಡಿದು ಸ್ವತಃ ಆ ಮಕ್ಕಳನ್ನು ತಾವೇ ಉಜ್ಜಿ ಮೀಯಿಸುವ ಕಾಯಕ ಆ ಮಾಸ್ತ್ರದ್ದು. ನಾನು ಬಾಲ್ಯದಲ್ಲಿ ಕಂಡಿದ್ದ ಆ ಚಿತ್ರಣ ಅಂದಿದ್ದ ಆರೋಗ್ಯಕರ ಸಾಮಾಜಿಕ ಪರಿಸರಕ್ಕೊಂದು ಪುಟ್ಟ ನಿದರ್ಶನವಷ್ಟೆ

ಅಂದು ಕಡಲದಂಡೆಯ ಮೇಲಿದ್ದ ಮನುಷ್ಯ ಸಂಬಂಧಗಳು, ಬರೀ ಮಾನವೀಯ ಮೌಲ್ಯದಿಂದಲೇ ಕಟ್ಟಲ್ಪಟ್ಟ ಸಾಮಾಜಿಕ ಪರಿಸರವೊಂದು ಇಂದು ಸಂಪೂರ್ಣವಾಗಿ ಮಲಿನಗೊಂಡಿದೆ. ನಮ್ಮಲ್ಲಿ 'ಪವಿತ್ರ ಇಟ್ಟಿಗೆ'ಯ ರಾಜಕೀಯ ಎಂದು ಮೂಗು ತೂರಿಸಿತೋ ಅಂದಿನಿಂದಲೇ ಕಡಲನೀರು ಇನ್ನಷ್ಟು ಕೋಮುದಳ್ಳುರಿಗೆ ಸಿಲುಕಿ

ಕುದಿಯತೊಡಗಿತ್ತು. ಜಾತಿ-ಮತ ಭೇದವೆಣಿಸದೆ ಅಸಂಖ್ಯ ಕುಟುಂಬಗಳಿಗೆ ನೆಮ್ಮದಿಯ ಬದುಕು ಕಲ್ಪಿಸಿಕೊಟ್ಟಿದ್ದ ಕಡಲನ್ನೇ ಪ್ರಮುಖ ಅಸ್ತ್ರವನ್ನಾಗಿ ಬಳಸಿ ಕೋಮು ಜ್ವಾಲೆಯನ್ನು ಕಡಲ ಸೆರಗಿಗೇ ಹಚ್ಚಲಾಯಿತು.

'ಕಡಲತಡಿಯಲ್ಲಿ ಬದುಕುವವರು, ಬದುಕಬೇಕಾದವರು ನೀವು... ಬೆಸ್ತರು. ಕಡಲ ಮೇಲಿನ ಸಂಪೂರ್ಣ ಹಕ್ಕು ನಿಮ್ಮದೇ. ಬೇರೆ ಜನಾಂಗಕ್ಕೆ ಕಡಲ ಮೇಲಿನ ಹಕ್ಕಿಲ್ಲ..' ಎಂಬ ತಿರುಳಿಲ್ಲದ ವಾದವನ್ನು ಮತಾಂಧ ಜಾತಿವಾದಿಗಳು, ಕೊಳಕು ರಾಜಕೀಯವನ್ನೆಂದೂ ಮಾಡದ – ಮಾಡಲೂ ಬಯಸದ ದುಡಿಯುವ ವರ್ಗದ ಹುಂಬ ಮುಗ್ಧ ಬೆಸ್ತರ ಮನಸ್ಸುಗಳಿಗೆ ತುಂಬಿದ್ದೇ ತಡ, ಸಾಮರಸ್ಯದ ಬದುಕು ಕಡಲತಡಿಯಲ್ಲಿ ಮಲಿನಗೊಳ್ಳತೊಡಗಿತ್ತು. ಅದರಲ್ಲೂ ದುರದೃಷ್ಟವೆಂಬಂತೆ ಕಡಲತಡಿಯಲ್ಲಿ ಮೀನ ವ್ಯಾಪಾರದಲ್ಲಿದ್ದ ಒಂದೆರಡು ಮುಸ್ಲಿಂ ಯುವಕರು ಮನಸ್ಸಿನ ವ್ಯಾಪಾರದಲ್ಲಿ ತೊಡಗಿ ಬೆಸ್ತರ ತರುಣಿಯರತ್ತ ವಯಸ್ಸು ಸಹಜವಾದ ಪ್ರೇಮದ ಬಲೆ ಬೀಸಿದ್ದೇ ತಡ, ಕೋಮುಕಿಚ್ಚು ಹಚ್ಚಲೆಂದೇ ಕಾದುಕೂತಿದ್ದ ಜಾತಿವಾದಿಗಳಿಗೆ ಪರಿಸ್ಥಿತಿಯ ಲಾಭ ಪಡೆದುಕೊಳ್ಳಲು ಹೆಚ್ಚು ಕಷ್ಟವಾಗಲಿಲ್ಲ. ಪರಿಣಾಮ ಇಡಿಯ ತುಳುನಾಡೇ ಹೊತ್ತಿ ಉರಿಯಿತು.

ಅಪ್ಪ-ತಾತನ ಕಾಲದಿಂದಲೂ ಕಡಲಕರೆಯಲ್ಲಿ ಗೂಡಂಗಡಿ, ಕಿರಾಣಿ ಅಂಗಡಿಗಳನ್ನಿಟ್ಟು 'ಲೆಕ್ಕದ ಬೂಕ್'ಲ್ಲೇ ದಿನದ ವ್ಯಾಪಾರ ನಡೆಸುತ್ತಿದ್ದ ಸೈಯದ್ದಿ ಬ್ಯಾರಿ, ಮೈಯದ್ದಿ ಬ್ಯಾರಿಯವರನ್ನು ಈ ಕೋಮುಜ್ವಾಲೆ ಆವರಿಸಿಬಿಟ್ಟಿತ್ತು. ಈ ಜ್ವಾಲೆಯೆದುರು ಯಾವುದೇ ಮನುಷ್ಯ ಸಂಬಂಧಗಳು ನಿಲ್ಲುವಂತಹದ್ದಲ್ಲ ಎಂದು ನಮ್ಮೂರಿಗರಿಗೆ ತಿಳಿದದ್ದೇ ಆವತ್ತು. ತಮ್ಮ ಕಣ್ಣೆದುರೇ, ತಾವು ಪ್ರೀತಿಸುತ್ತಿದ್ದ ಮಂದಿಯೇ ಅಂಗಡಿ-ಮನೆಗಳನ್ನು ಲೂಟಿ ಮಾಡಿಕೊಳ್ಳಿ ಇಡುತ್ತಿದ್ದಾಗ ಜೀವಭಯದಿಂದ ತಮ್ಮ ಕುಟುಂಬ ಸಮೇತ ಅವರಿಬ್ಬರೂ ಅದೆಲ್ಲಿಗೋ ಪರಾರಿಯಾದರು.

ಅಂದು ಹಚ್ಚಿದ್ದ 'ಕಿಚ್ಚು' ಇಂದಿಗೂ ನಿರಂತರವಾಗಿ ಉರಿಯುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಆ ವಿಕಾರ ಮನಸ್ಸಿನ ಕೋಮುಶಕ್ತಿಗಳೇ ಹೊತ್ತುಕೊಂಡವು. ಮಾತ್ರವಲ್ಲ, ಬೆಸ್ತ ಜನಾಂಗದಲ್ಲಿ ತಲೆತಲಾಂತರದಿಂದ ಹರಿದು ಬಂದಿರುವ ಜಾತ್ಯತೀತ ಸಿದ್ಧಾಂತವೊಂದನ್ನು ಮರೆಯುವಂತೆ, 'ದೇಶಪ್ರೇಮಿಯಾಗಲು ಪರಕೋಮು ದ್ವೇಷಿಗಳಾಗಬೇಕೆಂಬ' ಮಂತ್ರವನ್ನು ಪದೇ ಪದೇ ಬೋಧಿಸುತ್ತಾ ಭಾವನಾತ್ಮಕವಾಗಿ ಅವರನ್ನು ಬ್ಲಾಕ್‌ಮೇಲ್ ಮಾಡುವುದರಲ್ಲಿ ಯಶಸ್ವಿಯಾದುದು ನಮ್ಮ ಕಡಲ ದಂಡೆಯ ದುರಂತ. ಹಾಗೆಯೇ ಕಡಲ ಒಡಲನ್ನು ಮೊಗೆದು ಬದುಕುವ ಈ ಮೊಗವೀರರನ್ನು 'ಇಟ್ಟಿಗೆ ಸೇವೆ'ಗಾಗಿ ರಾಮಜನ್ಮಭೂಮಿಯತ್ತ ಕರೆದೊಯ್ಯುವಾಗಲೇ ಈ ಕಡಲ ದಂಡೆಯ ಮುಂದಿನ ಭೀಕರ ಭವಿಷ್ಯವೇನೆಂದು ಸ್ಪಷ್ಟಗೊಂಡಿತ್ತು. ಅಲ್ಲಿ ಇಟ್ಟಿಗೆ ಹೊತ್ತು ಬಂದವರ ಮನಸ್ಸು ಕಲ್ಲಿಗಿಂತಲೂ ಗಟ್ಟಿಯಾಗಿತ್ತು; ಕೋಮುಧಗೆ ಅಂಗಾಂಗಗಳಿಂದಲೂ ಸಿಡಿಯುತ್ತಿತ್ತು ಎಂಬುದಂತೂ ಸತ್ಯ.

ಬಾಲ್ಯದಲ್ಲಿ ನಾನು ಕಂಡಿದ್ದ ಕಡಲ ಸೆರಗ ಮೇಲಿನ ಸಾಮರಸ್ಯದ ಬದುಕು, ಸಾಮಾಜಿಕ ಬದುಕು ಮಾತ್ರವೇ ಮಲಿನಗೊಂಡಿತು ಎಂದು ಹೇಳಿದರೆ ಬಹಳ ತಪ್ಪಾದೀತು. ಇಡೀಯ ನನ್ನ ಪ್ರೀತಿಯ ಕಡಲೇ ಮಲಿನಗೊಳ್ಳತೊಡಗಿದ್ದನ್ನು ನಾನು ಹೇಳಬೇಕಾಗಿದೆ.

ಹೌದು ನಾನು ಎಳೆಯದರಲ್ಲಿ ಕಂಡ ಕಡಲು ಈಗಿಲ್ಲ. ಅಂದು ರಂಪಣಿಯಂತಹ ಮೈಲುಗಟ್ಟಲೆ ಉದ್ದದ ಬಲೆಗಳನ್ನು ಬಾಚಿ ಬಾಚಿ ಎಳೆದು ತಂದಂತೆ ಇಂದೇನಾದರೂ ನಮ್ಮೂರಲ್ಲಿ (ಇಂದು ರಂಪಣಿ ವ್ಯವಸ್ಥೆಯೇ ಅಸ್ತಿತ್ವದಲ್ಲಿಲ್ಲ) ರಂಪಣಿ ಇಳಿಸಿ ಮೀನು ಬಾಚಹೋದರೆ ಬರೀ ಬಲೆಯನ್ನಷ್ಟೇ ಹಿಂದಕ್ಕೆ ಎಳೆದುಕೊಳ್ಳಬೇಕಾದ ಪರಿಸ್ಥಿತಿ ಎದುರಾಗಿದೆ. ಸಣ್ಣಪುಟ್ಟ ಪಟ್ಟೆ ಬಲೆ, ಬೀಸುಬಲೆಗೇ ಮೀನು ದಕ್ಕುತ್ತಿಲ್ಲವೆಂದರೆ ಕಡಲಮ್ಮನ ಬಂಜೆತನದ ಪ್ರಮಾಣ ಎಷ್ಟೆಂಬುದನ್ನು ಊಹಿಸಬಹುದು. ಅಂದಿನ ಸಾಂಪ್ರದಾಯಿಕ ಮೀನುಗಾರಿಕೆಯಲ್ಲಿ ಮೀನುಗಳ ಯೋಗ್ಯ ಕ್ಷೇಮ, ಅವುಗಳ ಹುಟ್ಟು ಬೆಳವಣಿಗೆಯ ಬಗ್ಗೆ ಸ್ವತಃ ಬೆಸ್ತರಿಗೇ ತಿಳುವಳಿಕೆ ಕಾಳಜಿಯಿತ್ತು. ಮೀನುಗಳ ಉಳಿಯುವಿಕೆಯಲ್ಲಿ ತಮ್ಮ ಬದುಕಿನ ಉಳಿಯುವಿಕೆಯ ಸತ್ಯವಡಗಿದೆ ಎಂಬ ತತ್ವಕ್ಕೆ ಅಂದಿನ ಬೆಸ್ತರು ತಲೆಬಾಗಿದ್ದರು. ಯಾವ ಮೀನು ಯಾವ ಕಾಲಕ್ಕೆ ಸಂತಾನಾಭಿವೃದ್ಧಿ ಮಾಡಿಕೊಳ್ಳುತ್ತದೆ, ಯಾವ ಕಾಲದಲ್ಲಿ ಯಾವ ಋತುವಿಗೆ ಯಾವ ರೀತಿಯ ಬಲೆ ಬೀಸಬೇಕು... ಎಷ್ಟು ಆಳದಲ್ಲಿ... ಎಷ್ಟು ದೂರದಲ್ಲಿ ಮೀನುಗಾರಿಕೆ ಮಾಡಬಹುದು... ಎಂಬ ಜ್ಞಾನ ಆ ಹಳೆಯ ತಲೆಗಳಲ್ಲಿ ತುಂಬಿತ್ತು. ಆದರೆ ಈಗ ಕಾಲ ಬದಲಾಗಿದೆ. ಚಿನ್ನದ ಮೊಟ್ಟೆ ಇಡುವ ಕೋಳಿಯ ಕತೆ... ಈಗ ಈ ಕಡಲಿನದ್ದಾಗಿದೆ. ಸಾಂಪ್ರದಾಯಿಕ ದೋಣಿ ಬಲೆಗಳನ್ನು ಮೂಲೆಗಟ್ಟಿ ಆಧುನೀಕೃತ ಯಾಂತ್ರಿಕ ದೋಣಿಗಳನ್ನು ಬಳಸಿ ಕಡಲ ಒಡಲನ್ನು ಕ್ಷಣಮಾತ್ರದಲ್ಲಿ ಸೂರೆ ಮಾಡಬೇಕೆನ್ನುವ ಹುಚ್ಚು ಸಾಹಸ... ದುರಾಸೆಯ ಮನಸ್ಸುಗಳೇ ಹೆಚ್ಚುತ್ತಿರುವುದರಿಂದ ಕಡಲಿನ ಮತ್ಸ್ಯ ಸಂಪತ್ತು ಲೂಟಿಯಾಗುತ್ತಿರುವುದು ಮಾತ್ರವಲ್ಲ, ಸಂಪೂರ್ಣ ನಾಶವಾಗುವ ಹಂತದಲ್ಲಿದೆ. ಬಾಲ್ಯದಲ್ಲಿ ನಾವು ಕಂಡಿರುವ ಹಲವು ಜಾತಿಯ ಮೀನುಗಳು ಈಗ ಕಾಣಿಸುತ್ತಲೇ ಇಲ್ಲ. ಅವುಗಳ ಚಿತ್ರ ನೋಡಿ ಸಂತೃಪ್ತಿ ಪಡುತ್ತಾ ನಮ್ಮ ಮಕ್ಕಳಿಗೂ ಅದನ್ನೇ ತೋರಿಸುವ ಅನಿವಾರ್ಯತೆ ಈಗ ಒದಗಿಬಂದಿದೆ.

ಕಡಲ ಒಡಲು ಬರಿದಾಗುತ್ತಿದೆ ಎಂಬ ನೋವು ಒಂದೆಡೆಯಾದರೆ ಇನ್ನೊಂದೆಡೆ ಹತ್ತಿಕೊಂಡಿರುವ ದಿಗಿಲೆಂದರೆ ಕಡಲ ಪರಿಸರವೂ ಮಾಲಿನ್ಯಗೊಳ್ಳುತ್ತಿದೆ ಎಂಬುದು. ಕಡಲಿನ ಲವಣಯುಕ್ತ ನೀರು ಚರ್ಮರೋಗವನ್ನು ಗುಣಪಡಿಸಬಲ್ಲದ್ದು ಎಂದು ಸ್ವತಃ ಅನುಭವದಿಂದ ಬಲ್ಲವರು ನಾವು. ಅಮ್ಮನ ಸೆರಗು ಹಿಡಿದು ಓಡಾಡುತ್ತಿದ್ದ ವಯಸ್ಸಿನಲ್ಲಿ ನಮಗೇನಾದರೂ ದಡಾರ-ಕೋರ-ಕೋಶಲೆ, ಅಮ್ಮ ಇತ್ಯಾದಿ ಸೋಂಕು ರೋಗಗಳೇನಾದರೂ ತಗಲಿಕೊಂಡರೆ ಯಾವ ವೈದ್ಯಕೀಯ ಶುಶ್ರೂಷೆಯೂ ಆಗಬೇಕಾಗಿರಲಿಲ್ಲ. ಸೋಂಕು ತಗಲಿದ ಒಂಬತ್ತು ದಿನದವರೆಗೂ ಹೆಸರು ಬೇಳೆ ಗಂಜಿಯ ಪಥ್ಯ, ಒಂಬತ್ತನೇ ದಿನ ಅಮ್ಮನೊಂದಿಗೆ ಕಡಲದಂಡೆಗೆ ಪಯಣ. ಅಲ್ಲಿ ಅಮ್ಮ ನಮ್ಮನ್ನು ಕಡಲು ಮೀಯಿಸಿ, ಬಾಬು ಮ್ಯೊಲಿಯ ತಟ್ಟಿ ಹೋಟ್ಲಲ್ಲಿ, ನಮ್ಮ ಮೈಯಲ್ಲಿರುವ 'ಮಾರಿಯಮ್ಮ' ಬಿಟ್ಟು ಹೋಗುವವರೆಗೆ ಎಷ್ಟು ಬೇಕೋ ಅಷ್ಟು ತಿಂಡಿ ತಿನ್ನಿಸಿ, ಮರಳಿ ಮನೆಗೆ ಕರೆತಂದು ಅಲ್ಲೂ ಮೀನಿನ ರಸದೊಂದಿಗೆ ಅಕ್ಕಿ ಪುಂಡಿಗಳನ್ನು ಯದ್ವಾತದ್ವ ತಿನ್ನಿಸಿ 'ಮಾರಿಯಮ್ಮ'ನನ್ನು ಕಳುಹಿಸಿಕೊಡುವುದಿತ್ತು. ಹೀಗೆ ಮುಂದೆ ಮೂರು ದಿನ ಗಡದ್ದಾಗಿ ಕಡಲಸ್ನಾನ ಮತ್ತು ಬಾಬು ಮ್ಯೊಲಿಯ ಹೋಟ್ಲಲ್ಲಿ ತಿಂಡಿಗಳ ತಿನಿಸಾಟ, ಮಾರಿಯಮ್ಮನನ್ನು ಓಡಿಸುವ ಕ್ರಿಯೆ ಮುಂದುವರಿಯುತ್ತಿತ್ತು.

ಕಡಲ ಸ್ನಾನದ ಜತೆ ಬಾಬು ಮ್ಯೊಲಿಯ ರುಚಿಗಟ್ಟಾದ ತಿಂಡಿಗಳು ಯಾರಿಗೆ ಬೇಡ. ವರ್ಷದಲ್ಲಿ ನಾಕೈದು ಬಾರಿಯಾದರೂ ಅಮ್ಮ-ಕೋರ-ಕೋಶಲೆಗಳು ಬರುವಂತಾಗಲಿ ಎಂದು ನಾವು ಆಗಿಂದಾಗ್ಗೆ ದೇವರಲ್ಲಿ ನಮ್ಮ ಮನೆದೈವಗಳಲ್ಲಿ ಬೇಡಿಕೊಳ್ಳುತ್ತಲೇ ಬಾಲ್ಯವನ್ನು ಕಳೆದವು.

ಅಂದು, ಎಳ್ಳಮಾಸೆ, ಆಟಿ ಅಮಾಸೆ, ದಡಾರ-ಕೋರ ಎಂದು ಅನೇಕ ನೆಪ ಹೂಡಿ ನಾವು ಕಡಲ ಮೀಯುತ್ತಿದ್ದವರು ಒಬ್ಬರೇ... ಇಬ್ಬರೇ! ಸಾವಿರಾರು ಮಂದಿ. ಆಟಿ ಅಮಾಸೆ, ಎಳ್ಳಮಾವಾಸ್ಯೆ ಕಡಲು ಮೀಯುವುದಕ್ಕೆಂದು ಇಡೀ ಮನೆಗೆ ಮನೆಯೇ ಖಾಲಿ. ಮನೆಯವರು ಮಿಂದರೆ ಸಾಕೆ? ಮನೆ ಕಾಯುವ ನಾಯಿಗಳೂ ಕಡಲು ಮೀಯುವ ಚಂದವೇನು! ಕಡಲ ನೀರು ವರ್ಷದ ವ್ಯಾಧಿಗಳನ್ನು ತಡೆಯಬಲ್ಲುದಂತೆ... ಮಾಡಿದ ಪಾಪಗಳನ್ನು ತೊಳೆದು ಏಳು ಕಡಲಾಚೆಗೆ ಎಸೆಯಬಲ್ಲದಂತೆ ಎಂಬ ನಂಬಿಕೆ ಆ ಮಂದಿಗೆಲ್ಲ. ಆದರೆ ಹಾಗೆ ಮೈಮನಗಳ ವ್ಯಾಧಿಗಳನ್ನು ತೊಳೆದುಕೊಂಡ ಆ ಮಂದಿ, ಇಂದು ಕಡಲ ಕರೆಗೆ ಕಾಲಿಡಲೂ ಅಸಹ್ಯ ಪಡುವಂತಹ ಪರಿಸ್ಥಿತಿ ಇದೀಗ ನಿರ್ಮಾಣವಾಗಿದೆ.

ಬೃಹತ್ ಉದ್ಯಮಗಳು ಪರಿಸರವಾದಿಗಳಿಗೆ, ಸರಕಾರಕ್ಕೆ ಚಳ್ಳೆ ಹಣ್ಣು ತಿನ್ನಿಸಿ ಅಥವಾ ಹಲವು ಆಮಿಷ, ಮಾರ್ಗೋಪಾಯಗಳಿಂದ ರಮಿಸಿ, ಮನವೊಲಿಸಿ ತಮ್ಮ ಉದ್ಯಮದ ರಾಸಾಯನಿಕ ತ್ಯಾಜ್ಯ ವಸ್ತುಗಳನ್ನು ನೇರ ಕಡಲ ಒಡಲಿಗೆ ಸೇರಿಸುತ್ತಿರುವ ವಿಷಯವೇನು ಈಗ ಗುಟ್ಟಾಗಿ ಉಳಿದಿಲ್ಲ. ಪರಿಸರ ನಿಯಂತ್ರಣ ಮಂಡಳಿಯ ಗಮನಕ್ಕೆ ಬರದಂತೆ ಹಲವು ರೀತಿಯಲ್ಲಿ ಕಡಲ ಮಾಲಿನ್ಯಕ್ಕೆ ಕಾರಣವಾದ ಉದ್ದಿಮೆಗಳು ಈಗಲೂ ನಮ್ಮಲ್ಲಿವೆ. ಮತ್ಸ್ಯ ಸಂಹಾರದ ಜೊತೆಗೆ ಕಡಲೊಳಗಿನ ಅಸಂಖ್ಯ ಜೀವ ಸಂಕುಲ ನಿರ್ನಾಮಗೊಳ್ಳುತ್ತಿರುವುದು ನಮ್ಮನ್ನು ಪೊರೆದ ಕಡಲ ಮಾತೆಗೆ ಮಾಡುತ್ತಿರುವ ಅಪಚಾರವೇ ಸರಿ.

ಹಿಂದೆ ಸುಗ್ಗಿ ಕಾಲಕ್ಕೆ ಹುಣ್ಣಿಮೆ ಬೆಳಕಲ್ಲಿ ಕಡಲಾಮೆಗಳು ಕಡಲ ದಂಡೆಗೆ ಮೊಟ್ಟೆ ಇಡಲು ಬರುವುದನ್ನು ಕಾಣಲು ನಮ್ಮನ್ನೆಲ್ಲ ಹಿರಿಯರು ಕರೆದೊಯ್ಯುವ ಪರಿಪಾಠವಿತ್ತು. ಕಡಲ ಮಧ್ಯದಿಂದ ಈಜುತ್ತಾ ದಡಕ್ಕೆ ಬರುವ ಮಣಭಾರದ ದೊಡ್ಡ ಗುಡಾಣದ ಗಾತ್ರ ಕಡಲಾಮೆಗಳು ಅತ್ತಿತ್ತ ನೋಡಿ ಕಡಲಿನ ದಡದಲ್ಲಿ ಗುಳಿ ತೋಡಿ, ನೂರಾರು ಮೊಟ್ಟೆ ಉದುರಿಸಿ ಮತ್ತೆ ಮೊಟ್ಟೆಗಳಿಗೆ ಮರಳು ಮುಚ್ಚಿ ಹಿಂದಿರುಗುವ ವಿಸ್ಮಯ ಕ್ರಿಯೆಗಳಿಗೆ ನಾವು ಪ್ರತ್ಯಕ್ಷದರ್ಶಿಗಳಾಗಿದ್ದೆವು. ಇಂದು ನಮ್ಮ ಮಕ್ಕಳಿಗೆ ಪ್ರಕೃತಿಯ ಆ ವೈಚಿತ್ರ್ಯವನ್ನು ತೋರುವ ಸೌಭಾಗ್ಯ ನಮಗಿಲ್ಲ.

ಹಾಗೆಯೇ ಪ್ರತಿ ಜ್ಯೇಷ್ಠ - ವೈಶಾಖ ಮಾಸದಲ್ಲಿ ಮನೆ ಮನೆಯ ಅಬ್ರಾಹ್ಮಣ ಹೆಂಗಸರು ಮಕ್ಕಳಾದಿಯಾಗಿ ಕಡಲದಂಡೆಗೆ ಕೊಡಗಳನ್ನು ಹಿಡಿದು ಹೊರಡುವ ಅಭ್ಯಾಸವಿತ್ತು. ಆ ಕಾಲದಲ್ಲಿ ಮಾತ್ರವೇ ಮೊರೆದು ಬರುವ ಕಡಲ ತೆರೆಗಳು ಹೊತ್ತು ತರುವ 'ಉರಿ' ಎಂಬ ಸಣ್ಣ ಚಿಪ್ಪಿನ (ಮೃದ್ವಂಗಿ) ಜೀವಿಗಳನ್ನು ಬಾಚಿ ತರುವುದಕ್ಕಾಗಿ ಆ ಕೊಡಗಳು. ಮರಳದಂಡೆಗೆ ಬಂದು ರಾಶಿ ಬೀಳುವ ಆ ಜೀವಿಗಳ ರಾಶಿ ನೋಡುವುದಕ್ಕೆ ಹೊಂಗೆ ಹೂಗಳ ರಾಶಿಯಂತೆಯೇ. ಗಾತ್ರದಲ್ಲೂ ಬಣ್ಣದಲ್ಲೂ ಅದೇ ಹೋಲಿಕೆ. ಕೊಡ ಹೊತ್ತು ತಂದ ಹೆಂಗಸರೆಲ್ಲ, ಉಕ್ಕಿ ಬರುವ ಕಡಲ ತೆರೆಗಳ ಬಾಯಿಗೆ ತಮ್ಮ ಕೊಡಗಳನ್ನಿಟ್ಟು ಅದರ ತುಂಬಾ 'ಉರಿ' ತುಂಬಿಸಿಕೊಳ್ಳುತ್ತಿದ್ದರು. ಎರಡು ಮೂರು ಕೊಡಗಳು ತುಂಬಿದ ನಂತರ

ಅದನ್ನು ಹೊತ್ತು ತಂದು ಸಿಹಿ ನೀರ ಪಾತ್ರೆಗೆ ಹಾಕಿದ್ದರೆ, ಆ ಪ್ರಾಣಿಗಳು ನಿಧಾನಕ್ಕೆ ತಾವು ನುಂಗಿರುವ ಮರಳ ಕಣಗಳನ್ನೆಲ್ಲ ಕಾರಿಬಿಡುತ್ತವೆ. ನಂತರ ಸಿಹಿನೀರಿನಿಂದ ತೆಗೆದು ಬಿಸಿನೀರಿಗೆ ಹಾಕುವುದಷ್ಟೇ ಕೆಲಸ. ಬಿಸಿನೀರಿನಲ್ಲಿ ಚಿಪ್ಪಿನೊಳಗಿನ ಮಾಂಸ ಬೇರ್ಪಡುತ್ತದೆ. ಬೇರ್ಪಟ್ಟ ಮಾಂಸವನ್ನು ಆಗಕ್ಕೆ ಎಷ್ಟು ಬೇಕೋ ಅಷ್ಟನ್ನು ಬಳಸಿ ಉಳಿದುದನ್ನು ಒಣಗಿಸಿಡುವುದೂ ಇದೆ. ಬಾಲ್ಯದಲ್ಲಿ ವೈಶಾಖ ಮಾಸದಲ್ಲಿ ನಾವು ಬಳಸುತ್ತಿದ್ದ 'ಉರಿ' ಈಗ ಇಲ್ಲವೇ ಇಲ್ಲ. ಯಾಕಿಂತಹ ವೈಪರೀತ್ಯ ಎಂಬುದಕ್ಕೆ ಯಾರಿಂದಲೂ ಉತ್ತರವಿಲ್ಲ. ಇಂದಿಗೂ ಅದನ್ನೇ ನಂಬಿ ಬದುಕುತ್ತಿರುವ ಬೆಸ್ತ ಜನಾಂಗಕ್ಕೂ ಉತ್ತರ ಹುಡುಕುವ ವ್ಯವಧಾನವಿಲ್ಲ. ಯಾಕೆಂದರೆ ಕಡಲ ಒಡಲಿಗೆ ಪರ್ಯಾಯವಾಗಿ ಬದುಕುವ ದಾರಿಯೊಂದನ್ನು ಕಲ್ಪಿಸಿಕೊಡುವವೆಂಬ ಭ್ರಮಾಲೋಕ ವೊಂದನ್ನು ಈಗಾಗಲೇ ಕಡಲ ದಂಡೆಯ ಮೇಲಿರುವ ಉದ್ಯಮಗಳು ಹುಟ್ಟಿಸಿಬಿಟ್ಟಿವೆ.

ಕಡಲ ಪರಿಸರ ಮಲಿನಗೊಂಡಿದೆ ಅಂದರೆ ಒಂದು ನಾಗರಿಕತೆಯೇ ಮಲಿನಗೊಂಡಿದೆ ಅಥವಾ ಒಂದು ಸಂಸ್ಕೃತಿಯೇ ಮಲಿನಗೊಂಡಿದೆ ಎಂದರ್ಥ. ಈ ಸತ್ಯದರಿವು ಅದರ ದಂಡೆಯ ಮೇಲೆ ಬದುಕುತ್ತಿರುವ ಎಲ್ಲರೊಳಗೂ ಬರುವಷ್ಟರಲ್ಲಿ ಕಡಲಮ್ಮ ಮತ್ತೊಂದು ಹಿಂದಿನ 'ಅಮ್ಮ' ಆಗಲಾರದಷ್ಟು ಬದಲಾಗಿರುತ್ತಾಳೆ.

'ಇಲ್ಲ, ಆಕೆ ಈಗಲೇ ಬದಲಾಗಿದ್ದಾಳೆ. ಕಡಲಮ್ಮ ಹಿಂದಿನಂತಿಲ್ಲ' ಎಂದು ಹಳೆಯ ತಲೆಗಳು ಪರಿತಪಿಸುತ್ತಿರುವುದನ್ನೂ ನಾನು ಹಲವು ಬಾರಿ ಕೇಳಿಸಿಕೊಂಡಿದ್ದೇನೆ. ಆಕೆ ತನ್ನ ದಡದಲ್ಲಿ ತಲೆತಲಾಂತರದಿಂದ ಬದುಕುತ್ತಿರುವ ಕುಟುಂಬಗಳನ್ನೇ ಕಬಳಿಸಲು ಮಳೆಗಾಲದಲ್ಲಿ ಕಾದು ಹಾತೊರೆದು ಬರುತ್ತಾಳೆ; ತೋಟ-ಮನೆಗಳನ್ನು ಕಬಳಿಸಿಯೇ ಬಿಟ್ಟಳು ಎಂಬ ದುಃಖ, ಅಳಲು, ಆಕ್ರೋಶ ಎಲ್ಲೆಲ್ಲಿಯೂ ಕೇಳಿಬರುತ್ತಿದೆ. 'ಕಡಲ ತೀರದ ಪ್ರವಾಸೋದ್ಯಮ' ಎಂಬ ಉದ್ಯಮ ಹುಚ್ಚು ಎಂದು ಆರಂಭವಾಯಿತೋ ಅಂದಿನಿಂದ ತನ್ನ ಸೆರಗಲ್ಲಿ ಬದುಕು ಸಾಗಿಸಲು ಅನುವು ಮಾಡಿಕೊಟ್ಟ ಕಡಲಮ್ಮನನ್ನೇ ಕಬಳಿಸಲು ಹೊಂಚುಹಾಕುತ್ತಿರುವ ದುರಾಸೆಯ ಸಿರಿವಂತರು, ಇಷ್ಟಿಷ್ಟೇ ಆಕೆಯ ಜಾಗವನ್ನು ನುಂಗುತ್ತಾ ಆಕೆಯನ್ನು ಬಲವಂತಕ್ಕೆ ಹಿಂದಕ್ಕೆ ತಳ್ಳುತ್ತಾ , ಅಲ್ಲಿ ತಮ್ಮ ಸ್ವಾಮ್ಯ ಸ್ಥಾಪಿಸುವುದನ್ನು ಆಕೆ ಎಲ್ಲಾದರೂ ಸಹಿಸುವುದುಂಟೆ ?

ಮರಳ ದಂಡೆಯ ಮೇಲಿನ ಮರಳನ್ನು ಗಾಜಿನ ಕೈಗಾರಿಕೆಗಳಿಗಾಗಿ ಅವ್ಯಾಹತವಾಗಿ ಸಾಗಿಸುವ ದಂಧೆ ಆರಂಭವಾದಂದಿನಿಂದ ಕಡಲಿಗೂ ಮನುಷ್ಯನಿಗೂ ಕದನ ಸತತವಾಗಿ ನಡೆಯುತ್ತಲೇ ಇದೆ. ಕಣ್ಮನ ತಣಿಸುವ ಕಡಲ ಸೆರಗಲ್ಲೇ ಆಕೆ ಉಕ್ಕಿಬರದಂತೆ ಏನೇನೋ ತಡೆವೊಡ್ಡಿ ಆಕೆಯನ್ನು ಹಿಂದಕ್ಕಟ್ಟುವ ಪ್ರಯತ್ನ ನಡೆಯುತ್ತಿದ್ದರೆ, ರಾತ್ರಿಯಾಗುತ್ತಲೇ ಆಕೆ ಆ ಮನುಷ್ಯ ಪ್ರಯತ್ನವನ್ನು ನಿರರ್ಥಕಗೊಳಿಸುತ್ತಲೇ ಬಂದಿದ್ದಾಳೆ. ನಾವು ಮೂಕರಾಗಿ ಆ ಕದನವನ್ನು ಆಗಾಗ್ಗೆ ಅಲ್ಲಲ್ಲಿ ನೋಡುತ್ತಲೇ ಬಂದಿದ್ದೇವೆ.

ಬಲವಂತದಿಂದ ಕೆಲವೆಡೆ ಹೆಬ್ಬಂಡೆಗಳ ರಾಶಿ ತಂದು ಹಾಕಿ ಆಕೆಯ ಸೆರಗನ್ನು ವಶಮಾಡಿಕೊಳ್ಳುವ ಪ್ರಯತ್ನ ನಡೆಯುತ್ತಿದ್ದಂತೆ ಆಕೆ ರೋಷತಪ್ತಳಾಗಿ ಇನ್ನೊಂದೆಡೆ ತಾನು ಬದುಕು ಸಾಗಿಸಲು ಅನುವು ಮಾಡಿಕೊಟ್ಟ ಕುಟುಂಬಗಳತ್ತಲೇ ನುಗ್ಗಿ ಆ ಕುಟುಂಬಗಳ ಇಡೀಯ ಆಸ್ತಿ-ಪಾಸ್ತಿಯನ್ನು ಕಬಳಿಸಿದ್ದಿದೆ. ಕಡಲ್ಕೊರೆತ ಎಂಬ ಅಪಾದನೆಯನ್ನು ಹಾಕಿ ಆಕೆಯನ್ನು ಮಾತ್ರವೇ ಜರೆಯುವ ಅಭ್ಯಾಸ ನಮ್ಮಲ್ಲಿದೆ. ಕಡಲ್ಕೊರೆತಕ್ಕೆ ಕಾರಣವೇನು ಎಂಬ ಅಧ್ಯಯನ ನಡೆಸಲು ಅದಕ್ಕೆ ಸಂಬಂಧಿಸಿದ ವಿಜ್ಞಾನಿಗಳೇ ಬರಬೇಕೆಂದಿಲ್ಲ. ಈಗಲೂ ಕಡಲಿಗೆ ಗಾಳವೋ... ಬಲೆಯೋ ಎಸೆದು ಬದುಕುತ್ತಿರುವ ವೃದ್ಧ ತೋಮ ಮರಕಾಲನನ್ನು ಕೇಳಿದರೆ ಆತ ತಟ್ಟನೆ ಉತ್ತರಿಸಿಯಾನು. ಸಮಸ್ಯೆಗೆ ಪರಿಹಾರವನ್ನೂ ಆತನೇ ಸೂಚಿಸಬಲ್ಲ.

'ಕಡಲಿನ ಒಂದಿಂಚೂ ಜಾಗಕ್ಕೆ ನೀವು ಹೊಂಚು ಹಾಕಬೇಡಿ. ಆಕೆಯ ಪಾಡಿಗೆ ಆಕೆ ಸ್ವೇಚ್ಛೆಯಿಂದಿರಲಿ. ನಾವು ಈಗ ತೋಟ-ಮನೆ-ಮಠ ಮಾಡಿ ಬದುಕುತ್ತಿರುವುದು ಹಿಂದೆ ಆಕೆ ಬದುಕಿದ್ದ ತಾಣದಲ್ಲೇ. ನಮಗಾಗಿ ಆಕೆ ಈಗಾಗಲೇ ಹಿಂದೆ ಸರಿದಿದ್ದಾಳೆ. ಕಡಲ ನೀರಿನ ಪ್ರಕೃತಿಯ ನಿಯಮವೇ ಅಷ್ಟು. ಇಲ್ಲಿ ಆಕೆಗೆ ಮೊರೆಯಲು... ಹರಿಯಲು ಬಿಡದೆ ತಡೆಹಿಡಿದಿರಾ...! ಅಲ್ಲಿ ಬಲವಂತವಾಗಿ ಕಬಳಿಸಿ ಹರಿದುಬಿಡುವುದು ಆಕೆಯ ಜಾಯಮಾನ...; ಇಲ್ಲಿ ಒಂದು ಮೊಳ ಕಮ್ಮಿಯಾದರೆ... ಅಲ್ಲಿ ಆಕೆ ಎರಡೂ ಮೊಳ ಜಾಗ ಪಡೆದುಕೊಳ್ಳುತ್ತಾಳೆ...'

ಹೇಗಿದೆ ತೋಮಮರಕಾಲನ ವಿವರಣೆ! ಕಡಲ ದಂಡೆಗೆ ಕಲ್ಲಿನ ತಡೆಗೋಡೆ ಕಡಲ್ಕೊರೆತಕ್ಕೆ ಮದ್ದಲ್ಲ. ಕರಾವಳಿಯುದ್ದಕ್ಕೆ ದಂಡೆಯ ಮೇಲಿರುವ ಕಲ್ಲಿನ ತಡೆಗೋಡೆ, ಇನ್ನಿತರ ತಡೆ ನಿರ್ಮಾಣಗಳನ್ನು ಕಿತ್ತೆಸೆದರೆ ತನ್ನಿಂತಾನೆ ಆಕೆ ಶಾಂತಳಾಗುತ್ತಾಳೆ. ದಂಡೆಯ ಸಮತೋಲನ ಕಾಪಾಡಿದರೆ ಕಡಲು ಪ್ರಕೃತಿ ನಿಯಮದಂತೆಯೇ ಮೊರೆಯುತ್ತದೆ... ಉಕ್ಕುತ್ತದೆ; ಅನ್ಯಥಾ ಕಬಳಿಸುವುದಿಲ್ಲ. ಅಷ್ಟಕ್ಕೂ ಆಕೆಗೆ ಇಷ್ಟೇ ದೂರಕ್ಕೆ ನೀನು ಉಕ್ಕಿ ಬಾ ಎಂದು ನಿರ್ದೇಶಿಸಲು, ಗೆರೆ ಹಾಕಿ ಆದೇಶಿಸಲು ನಾವ್ಯಾರು? ಅಂದು ಆಕೆ ಧನುಷ್ಕೋಟಿಯನ್ನು ನುಂಗಿಬಿಟ್ಟಂತೆ ಈ ಮನುಷ್ಯ ಪ್ರಾಣಿಯ ಸ್ವಾರ್ಥದಿಂದ ತಲೆಕೆಟ್ಟು ಹುಚ್ಚು ಹಿಡಿದಂತಾದರೆ ಕಡಲ ದಂಡೆಯ ಮೇಲಿನ ಪ್ರಾಂತ್ಯವೊಂದನ್ನೇ ಆಕೆ ನುಂಗಿಬಿಡಬಹುದು. ತನ್ನ ಒಡಲನ್ನೇ ಬಗೆದು ದೈತ್ಯ ಸುನಾಮಿ ಅಲೆಗಳನ್ನು ಕಡಲ ಸೆರಗತ್ತ... ಮೈಲುಗಟ್ಟಲೆ ದೂರಕ್ಕೆ ಅಟ್ಟಿ ಇಡೀ ಊರಿಗೆ ಊರನ್ನೇ ಲಯ ಮಾಡಬಹುದು. ಈ ಅಪಾಯ ನಮಗೆ ಬಹಳ ದೂರವೇನಿಲ್ಲ. ಹೌದು ಕಡಲು ನೆಲದ ಮಧ್ಯೆ ಇರುವ ನೈಸರ್ಗಿಕ ಹೊಂದಾಣಿಕೆಯ ಷರತ್ತುಗಳು, ಈ ನೆಲದ ಮೇಲಿನ ಸ್ವಾರ್ಥದ ಮನಗಳಿಂದಾಗಿ ಯಾವ ಕ್ಷಣದಲ್ಲಾದರೂ ಬಿದ್ದುಹೋಗಬಹುದು. ಆ ಷರತ್ತುಗಳನ್ನು ನಿಯಂತ್ರಿಸುವ ಶಕ್ತಿ ಇರುವುದು ತನಗೆ, ಅತೀವ ಆಲೋಚನಾಶಕ್ತಿ ಇದೆ ಎಂದು ಬೀಗುವ ಮನುಷ್ಯನಲ್ಲಿ ಅಲ್ಲ..., ನಿಸರ್ಗದಲ್ಲಿ ಮಾತ್ರ. ನಿಸರ್ಗ ಮಾತೆಯ ಹಿರಿಮಗಳಲ್ಲವೇ ಈ ಕಡಲತಾಯಿ. ತಾಯಿ ಹೇಳಿದಂತೆ ನಡೆವ ಮಗಳೀಕೆ.

ತನ್ನೊಡಲು-ಸೆರಗನ್ನು ಹೀಗೆ ರಾಜಕೀಯಕ್ಕಾಗಿ, ಆರ್ಥಿಕ ಲಾಭಕ್ಕಾಗಿ, ಸ್ವಾರ್ಥಕ್ಕಾಗಿ, ಅಮಾಯಕರ ದಮನಕ್ಕಾಗಿ ಬಳಸಿದರೆ ಆಕೆಯೇನು ಸಹಿಸಿಕೊಂಡು ಕೂರುವವಳೇ ? ಈಗಲೇ ಆಕೆಯಿಂದ ಸಾಕಷ್ಟು ವಿರೋಧ ಪ್ರತಿಭಟನೆ ವ್ಯಕ್ತವಾಗಿದೆ. ಎಲ್ಲೂ ಕಡಲಲ್ಲಿ ಮತ್ಸ್ಯ ಸಂಪತ್ತಿಲ್ಲ ಎಂಬ ಹಾಹಾಕಾರವೆದ್ದಿದೆ. ಕಾಲ ಕಾಲಕ್ಕೆ ಆಕೆ ಆಯಕಟ್ಟಿನ ಜಾಗದಲ್ಲಿ ಚಂಡ ಮಾರುತವೆಬ್ಬಿಸಿ ಇನ್ನಿಲ್ಲದ ಕಾಟ ನೀಡುತ್ತಿದ್ದಾಳೆ. ವರ್ಷ ವರ್ಷವೂ ಸರಕಾರ ತನ್ನ ಬೊಕ್ಕಸದ ಒಂದಷ್ಟು ಭಾಗವನ್ನು ಕಡಲ್ಕೊರೆತ ತಡೆಯುವ ತಡೆಗೋಡೆ ನಿರ್ಮಾಣಕ್ಕಾಗಿ ಸುರಿಯುವಂತೆ ವ್ಯವಸ್ಥಿತವಾಗಿ ನೋಡಿಕೊಂಡಿದ್ದಾಳೆ. ಇಷ್ಟೇ ಸಾಕೇ – ಆಕೆ ತೋರುವ ಪ್ರತಿಭಟನೆ !

ಯಾರಿಗೇನಾದರೂ ಈ ಕಡಲಮ್ಮ ಕತ್ತಿಮಸೆಯಲಿ; ನಮಗೆ ಮಾತ್ರ ಆಕೆ ಪ್ರೀತಿಯ 'ತಾಯಿ'ಯೇ. ನಾನು ತವರೂರಿಗೆ ಹೋದಾಗ ಆಕೆಯ ಕರೆಗೆ ಕಾಲಿಟ್ಟಾಗಲೆಲ್ಲ ನಾನು ಪೂರ್ತಿ ತೋಯ್ದು ಹೋಗುವಂತೆ ಆಕೆ ಹಾಗೆಯೇ ಪ್ರೀತಿಯಿಂದ ಒಮ್ಮೆ ಅಬ್ಬರಿಸಿ ಬಂದು ಪ್ರೀತಿಯ ಹನಿ ಸಿಂಚನ ಹರಿಸುತ್ತಾಳೆ! ಒಂದರ್ಧ ಗಂಟೆ ನನ್ನನ್ನಲ್ಲೇ ಕೂರಿಸಿ, ಆಟವಾಡಿಸಿ, ಬಾಲ್ಯದ ನೆನಪನ್ನು ಮರುಕಳಿಸುವಂತೆ ಮಾಡಿ ಕಳುಹಿಸಿಕೊಡುತ್ತಾಳೆ – ಈ ಅಮ್ಮ; ನನ್ನಮ್ಮ.

ಡಾ|| ಎಚ್. ನಾಗವೇಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



ಕೆ. ಸತ್ಯನಾರಾಯಣ

# ಪ್ರಧಾನಿಗೊಂದು ಬ್ರೆಕ್ಟ್ ಪದ್ಯ

ಇಸವಿ ೧೯೬೪. ಪ್ರಸಂಗ ನಡೆದದ್ದು ದೆಹಲಿಯಲ್ಲಿ. ಪ್ರಸಂಗವನ್ನು ಅನುಭವಿಸಿ ಮನ ಕಲಕುವಂತೆ ದಾಖಲಿಸಿದವರು ಕನ್ನಡದ ಪ್ರಸಿದ್ಧ ಲೇಖಕ ಡಾ|| ಎಸ್. ಎಲ್. ಭೈರಪ್ಪ.

ಆಗ ದೆಹಲಿಯಲ್ಲಿ ಕೆಲಸ ಮಾಡುತ್ತಿದ್ದ ಭೈರಪ್ಪ ಒಂದು ಬೆಳಿಗ್ಗೆ ಬ್ಯಾಂಕಿಗೆ ಬಂದಿದ್ದಾರೆ. ಅವರಂತೆಯೇ ಇನ್ನೂ ಹತ್ತಾರು ಜನ. ಆದರೆ ಅಧಿಕಾರಿಯೇ ಬಂದಿಲ್ಲ. ಬರುವ ಸೂಚನೆಗಳೂ ಇಲ್ಲ. ಜನರಿಗೆ ಹತಾಶೆ, ಬೇಸರ, ಅಸಹಾಯಕತೆ. ತಲೆಗೊಂದರಂತೆ ಮಾತು. ಕೊನೆಗೆ ಅಧಿಕಾರಿ ಬರುತ್ತಾನೆ. ಗಡಿಬಿಡಿಯಲ್ಲಿ , ಧಾವಂತದಲ್ಲಿ ಬಂದವನೇ ಅವನಿಗಾಗಿ ಕಾದು ಕುಳಿತಿದ್ದ ಪ್ರತಿಯೊಬ್ಬ ಬಳಕೆದಾರನ ಹತ್ತಿರ ಪ್ರಾಮಾಣಿಕವಾಗಿ ಕ್ಷಮೆ ಕೋರುತ್ತಾನೆ. ಅವನು ಕ್ಷಮೆ ಕೋರಿದ ರೀತಿ ಭೈರಪ್ಪನವರ ಮೇಲೆ ಪರಿಣಾಮ ಬೀರುತ್ತದೆ. ಮತ್ತೆ ಸಂಜೆ ಅವನ ಹತ್ತಿರ ಹೋಗುತ್ತಾರೆ. ಅಧಿಕಾರಿ ತಾನು ಬಸ್ಸಿನಲ್ಲಿ ಬರಬೇಕಾಗಿರುವುದರಿಂದ ಬಂದದ್ದು ತಡವಾಯಿತೆಂದು ವಿವರಿಸುತ್ತಾನೆ. ಇವರು ಸ್ಕೂಟರ್ ಕೊಳ್ಳಲು ಸಲಹೆ ನೀಡುತ್ತಾರೆ. ಸ್ಕೂಟರ್ ಕೊಳ್ಳಲು ಅರ್ಜಿ ಹಾಕಿದ್ದೇನೆ. ಕಂಪನಿಯಿಂದ ಸ್ಕೂಟರ್ ಬಿಡುಗಡೆಯಾಗಲು ತಡವಾಗುತ್ತದೆ. ಕ್ಯೂನಲ್ಲಿ ಕಾದೇ ಸ್ಕೂಟರ್ ಪಡೆಯುವಂತೆ ನಮ್ಮ ತಂದೆ ಹೇಳಿಬಿಟ್ಟಿದ್ದಾರೆಂದು ಅಧಿಕಾರಿ ವಿವರಿಸುತ್ತಾನೆ. ಮಾತುಕತೆಯ ಸಂದರ್ಭದಲ್ಲಿ ಬ್ಯಾಂಕ್ ಅಧಿಕಾರಿ ಅಂದಿನ ಪ್ರಧಾನಿ ಲಾಲ್ ಬಹಾದೂರ್ ಶಾಸ್ತ್ರಿಯವರ ಮಗನೆಂದು ಗೊತ್ತಾಗುತ್ತದೆ. ಇಡೀ ಪ್ರಸಂಗವನ್ನು ಮನ ಕಲಕುವಂತೆ ಭೈರಪ್ಪ ತಮ್ಮ ಆತ್ಮಚರಿತ್ರೆ 'ಭಿತ್ತಿ'ಯಲ್ಲಿ ವರ್ಣಿಸಿದ್ದಾರೆ.

ಜೈ ಜವಾನ್, ಜೈ ಕಿಸಾನ್ ಶಾಸ್ತ್ರಿಯವರು ಜನಪ್ರಿಯಗೊಳಿಸಿದ ಘೋಷಣೆಗಳಲ್ಲೊಂದು. ಈಗ ೪೦ ವರ್ಷದ ನಂತರ ಯುವಕರು ಸೈನ್ಯ ಸೇರಲು ಮುಂದೆ ಬರುವುದೇ ಇಲ್ಲ. ಸೇನೆಯಲ್ಲಿ ಅಧಿಕಾರಿ ಗಳ ಕೊರತೆ ಮುಂದುವರೆಯುತ್ತಲೇ ಇದೆ. ರೈತರ ಆತ್ಮಹತ್ಯೆ ಉದಾಹರಣೆಗಳು ಹೆಚ್ಚುತ್ತಲೇ ಇವೆ. ಈ ಲೇಖನ ಬರೆಯುತ್ತಿರುವಾಗ ನನ್ನ ಮುಂದೆ ಇರುವ ಪತ್ರಿಕೆಯಲ್ಲಿ ಕೊಪ್ಪಳದ ರೈತರು ಮೆಕ್ಕೆ ಜೋಳಕ್ಕೆ ಕನಿಷ್ಠ ಬೆಲೆ ನಿಗದಿಗೊಳಿಸಬೇಕೆಂದು ಕೂಗು ಹಾಕುತ್ತಾ ವ್ಯಗ್ರರಾಗಿ ಮೆರವಣಿಗೆ ಹೊರಟಿರುವ ಚಿತ್ರವಿದೆ. ಈಗಿನ ಪ್ರಧಾನಿ ಮನಮೋಹನ್ ಸಿಂಗ್ ಕೂಡ ಆಕಾರದಲ್ಲಿ, ಎತ್ತರದಲ್ಲಿ, ಮೆಲುದನಿಯ ಮಾತು, ವರ್ತನೆಯ ಪಾರದರ್ಶಕತೆಯಲ್ಲಿ ಶಾಸ್ತ್ರಿಯವರನ್ನೇ ನೆನಪಿಸುತ್ತಾರೆ. ಪ್ರಧಾನಿಯಾಗಿದ್ದು ಕೂಡ ಎಷ್ಟೋ ಸಂದರ್ಭದಲ್ಲಿ ಪ್ರಾಮಾಣಿಕ ಅಸಹಾಯಕತೆ ವ್ಯಕ್ತಪಡಿಸುತ್ತಾರೆ. ಅವರ ನಿಸ್ಪೃಹತೆ, ಪ್ರಾಮಾಣಿಕತೆ ಮನಸ್ಸನ್ನು ತಟ್ಟುತ್ತದೆ.

ಒಬ್ಬ ನಾಯಕ ಒಳ್ಳೆಯವನಾಗಿದ್ದರೆ ಸಾಕೆ? ಅಥವಾ ಈವತ್ತಿನ ಸನ್ನಿವೇಶದಲ್ಲಿ ಸಾರ್ವಜನಿಕ ಜೀವನದಲ್ಲಿ ಒಬ್ಬ ಮನುಷ್ಯ ನಿಜಕ್ಕೂ ಎಷ್ಟರ ಮಟ್ಟಿಗೆ ಪ್ರಾಮಾಣಿಕನಾಗಿ ಇರಬಹುದು? ಕಾರಂತರ ರಾಜಕೀಯ ಕಾದಂಬರಿಗಳು, ಅನಂತಮೂರ್ತಿಯವರ 'ಅವಸ್ಥೆ'–ಯಲ್ಲೆಲ್ಲ ರಾಜಕೀಯವಾಗಿ ಆದರ್ಶದ ಮಾತಾಡುವವರು ಕ್ರಮೇಣ ಕರಗಿ ಹೋಗುವುದನ್ನು ವಿಷಾದದಿಂದ ಹೇಳಲಾಗಿದೆ. ಈವತ್ತಿನ ವಾತಾವರಣದಲ್ಲಿ ಯಾರಿಗಿಂತ ಯಾರು ಪ್ರಾಮಾಣಿಕರು ಎಂಬ ಪ್ರಶ್ನೆ ಅಥವಾ ಗೀಳು 'sickly indulgence' ಎಂದು ಅವಸ್ಥೆ ಕಾದಂಬರಿಯ ಒಂದು ಪಾತ್ರ ೧೯೭೪ರಲ್ಲೇ ಹೇಳುತ್ತದೆ. ಇದನ್ನೆಲ್ಲ ಸದ್ಯಕ್ಕೆ ಮರೆತು ಎಲ್ಲ ನಾಯಕರು ಶಾಸ್ತ್ರಿ, ಮನಮೋಹನರಂತೆಯೇ ಇರುತ್ತಾರೆಂದರೂ ಕೂಡ ಅದರಿಂದ ಸಮಾಜಕ್ಕೆ ಏನು ಪ್ರಯೋಜನ ಎಂಬ ಪ್ರಶ್ನೆ ಏಳುತ್ತದೆ. ಈ ಬಗ್ಗೆ ೧೯೩೦ರಲ್ಲಿ ಬ್ರೆಕ್ಟ್ ಬರೆದಿರುವ ಹತ್ತೇ ಹತ್ತು ಸಾಲುಗಳ ಒಂದು ಪುಟ್ಟ ಪದ್ಯವಿದೆ. ಬಾಲೂರಾಯರ ಅನುವಾದದಲ್ಲಿ ಅದು ಹೀಗಿದೆ:

''ಕೇಳಿದ್ದೇನೆ, ಆ ಪ್ರಧಾನಿ ಕುಡಿಯುವುದಿಲ್ಲವಂತೆ,  
ಮೀನು ಮಾಂಸ ತಿನ್ನುವುದಿಲ್ಲವಂತೆ.  
ಸಿಗರೇಟು ಚುಟ್ಟ ಸೇದುವುದಿಲ್ಲವಂತೆ.  
ಅವನಿರುವುದು ಒಂದು ಸಾಧಾರಣ ಮನೆಯಲ್ಲಂತೆ.  
ಮತ್ತೆ ಇದನ್ನೂ ಕೇಳಿದ್ದೇನೆ. ಆ ದೇಶದ ಬಡಜನ  
ಹೊಟ್ಟೆಗಿಲ್ಲದೆ ಪಾಡು ಪಡುತ್ತಿದ್ದಾರಂತೆ.  
ಅದರ ಬದಲು ಹೀಗೆಂದು ಕೇಳುವುದು ಎಷ್ಟು ಮೇಲು.  
ಪ್ರಧಾನಿ ಕ್ಯಾಬಿನೆಟ್ ಮೀಟಿಂಗುಗಳಲ್ಲೂ ಕುಡಿದು ಕೂತಿರುತ್ತಾನೆ.  
ತಜ್ಞರಲ್ಲದ ಕೆಲಮಂದಿ ಕಾಯಿದೆ ಕಾನೂನುಗಳನ್ನು ಬದಲಾಯಿಸುತ್ತಿದ್ದಾರೆ.  
ಅವನು ಅವರ ಪೈಪಿಂದೇಳುವ ಹೊಗೆಯನ್ನು ನೋಡುತ್ತಿರುತ್ತಾನೆ.  
ಆ ದೇಶದಲ್ಲಿ ಬಡವರೇ ಇಲ್ಲ.''

ಕವನದ ಇಂಗಿತ ಏನೆನ್ನುವುದು ಸ್ಪಷ್ಟ . ಇಂಗಿತದಿಂದ ಮುಂದಕ್ಕೆ ನಾವು ಹೋಗ ಬಹುದೆನ್ನಿಸುತ್ತದೆ. ನಮ್ಮ ಗಮನ ಆದ್ಯತೆಯೆಲ್ಲ ಇರಬೇಕಾದ್ದು, ನಾಯಕ ವರ್ಗದ ಚಿಂತನೆಯ ಬಗ್ಗೆ, ಅವರು ರೂಪಿಸುವ ಕಾರ್ಯಕ್ರಮಗಳ ಬಗ್ಗೆ. ಇಂತಹ ಚಿಂತನೆ, ಕಾರ್ಯಕ್ರಮಗಳಿದ್ದೂ ನಾಯಕವರ್ಗದಲ್ಲಿ ಕೆಲವು ಚಟಗಳು, ಕೆಟ್ಟ ಗುಣಗಳು ಇದ್ದರೆ?

ಪದ್ಯವನ್ನು ಇನ್ನೊಂದು ದಿಕ್ಕಿನಿಂದ ನೋಡಿದಾಗ ನಾಯಕರು ಕೂಡ ನಮ್ಮ ಹಾಗೆ ಮನುಷ್ಯರೇ ಎಂದು ಅದು ಹೇಳುತ್ತದೆ. ನಾವು ಒಪ್ಪಲಿ, ಬಿಡಲಿ ಅವರಿಗೂ ಕೆಲವು ಚಟಗಳು, ಅಭ್ಯಾಸಗಳು ಇದ್ದೇ ಇರುತ್ತವೆ. ಆದರೆ ನಾಯಕರಾದವರು ಎಲ್ಲ ಸದ್ಗುಣಗಳ ಖನಿಯಾಗಿರಬೇಕೆಂದು ನಾವು ಬಯಸುವುದರಿಂದ ನಾಯಕರು ಕೂಡ ನಮ್ಮ ಮಾನಸಿಕ ತೃಪ್ತಿಗಾಗಿ ತಾವು ಆದರ್ಶ ಪುರುಷರಾಗಿದ್ದೇವೆಂದು ನಮಗೆ ಕಾಣಿಸಿಕೊಳ್ಳುತ್ತಾರೆ. 'ಕಾಣಿಸಿ' ಕೊಳ್ಳುತ್ತಾರೆ ಅಷ್ಟೇ, 'ಇರುವುದಿಲ್ಲ'. ಅದು ನಮ್ಮ ಒಳಮನಸ್ಸಿಗೂ ಗೊತ್ತಿರುತ್ತದೆ. ಹೀಗಾಗಿ ಅವರು ಹೇಗೆ ಕಾಣಿಸಿಕೊಂಡರೂ ನಾವು ಅವರನ್ನು ಪೂರ್ತಿಯಾಗಿ ನಂಬುವುದಿಲ್ಲ. ಅವರು ನಮಗೆ ಕಾಣಿಸಿಕೊಳ್ಳುವ ರೀತಿಯೇ ಬೇರೆ, ನಿಜವಾಗಿಯೂ ಇರುವ ರೀತಿಯೇ ಬೇರೆ ಎಂಬುದು ಗೊತ್ತಿರುವುದರಿಂದ ಅವರ ವೈಯಕ್ತಿಕ ಜೀವನಶೈಲಿಯ ಬಗ್ಗೆ ಇನ್ನಿಲ್ಲದ ಕುತೂಹಲ. ಗಾಸಿಪ್ ಕಾಲಂಗಳು, ಪೀತ ಪತ್ರಿಕೋದ್ಯಮ, ಹಳದಿ ಪತ್ರಿಕೆಗಳು



# ಜೆ. ಕೆ. ಪುಸ್ತಕ ಮಾಲೆ ಪ್ರಕಟಣೆ



ಬೆಂಗಳೂರಿನ ಕೃಷ್ಣಮೂರ್ತಿ ಶಿಕ್ಷಣ ಕೇಂದ್ರವು ಜೆ. ಕೆ. ಯವರ ಪುಸ್ತಕಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೊಸ ವಿನ್ಯಾಸದೊಂದಿಗೆ ಸುಂದರವಾಗಿ ಪ್ರಕಟಿಸಲು ಆರಂಭಿಸಿದೆ. ಈಗಾಗಲೇ ಬಿಡುಗಡೆಯಾದ ಪುಸ್ತಕಗಳ ಮಾಹಿತಿ ಕೆಳಕಂಡಂತಿದೆ.

1. **ಧ್ಯಾನ ಚಿಂತನ**
   *ಅನುವಾದ : ಡಾ|| ನಿ. ಮುರಾರಿ ಬಲ್ಲಾಳ* — ರೂ. 65
2. **ಹಿಂಸೆಯನ್ನು ಮೀರಿ**
   *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 120
3. **ಕ್ರಿಯೆ ಮತ್ತು ಸಂಬಂಧ**
   *ಅನುವಾದ : ಬಿ. ಎ. ಸನದಿ* — ರೂ. 15
4. **ಮೊದಲ ಹಾಗೂ ಕೊನೆಯ ಬಿಡುಗಡೆ**
   *ಅನುವಾದ : ಶ್ರೀಮತಿ ರುಕ್ಮಿಣಿ ಕೃಷ್ಣಮೂರ್ತಿ* — ರೂ. 150
5. **ಕಾಲ ಮತ್ತು ಕಾಲರಹಿತ**
   *ಅನುವಾದ : ಶ್ರೀಮತಿ ವನಮಾಲಾ ರಂಗನಾಥ ರಾವ್* — ರೂ. 10
6. **ಸಂಸ್ಕೃತಿ ಸಂಗತಿ**
   *ಅನುವಾದ : ಪ್ರೊ|| ಎಚ್. ಎಸ್. ರಾಘವೇಂದ್ರ ರಾವ್* — ರೂ. 150
7. **ಧಾರ್ಮಿಕ ಜೀವನ ಮತ್ತು ಬದುಕಿನ ಕಲೆ**
   *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 15
8. **ಅನುದಿನ ಚಿಂತನ**
   *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 160
9. **ಬಾಳಿಗೊಂದು ಭಾಷ್ಯ - ಸಂಪುಟ 1**
   *ಅನುವಾದ : ಡಾ|| ಮಹಾಬಲೇಶ್ವರರಾವ್* — ರೂ. 130
10. **ಭಯ, ಸ್ವಾತಂತ್ರ್ಯ ಮತ್ತು ಶಿಕ್ಷಣ**
    *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 20
11. **ಶಿಕ್ಷಣ ಮತ್ತು ಜೀವನ**
    *ಅನುವಾದ : ಡಾ|| ಎಚ್. ಎಸ್. ರಾಘವೇಂದ್ರ ರಾವ್* — ರೂ. 65
12. **ಭಯದಾಚೆಯ ಬದುಕು**
    *ಅನುವಾದ : ಪ್ರೊ||ಓ. ಎಲ್. ನಾಗಭೂಷಣ ಸ್ವಾಮಿ* — ರೂ. 20
14. **ದುಃಖಕ್ಕೆ ವಿದಾಯ**
    *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 25
15. **ಸಂಘರ್ಷವಿರದ ಬದುಕಿಗಾಗಿ**
    *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 25
13. **ಸಂಬಂಧವೆಂದರೇನು ?**
    *ಅನುವಾದ : ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 25
3. **ಜೆ. ಕೆ. ಜೀವನ ದರ್ಶನ**
   *ಲೇಖಕರು : ಡಾ|| ನಿ. ಮುರಾರಿ ಬಲ್ಲಾಳ* — ರೂ. 130
3. **ಜೆ. ಕೃಷ್ಣಮೂರ್ತಿ - ಶಿಕ್ಷಣ**
   *(ದ್ವಿತೀಯ ಆವೃತ್ತಿ) ಎಸ್. ಡಿ. ಕಾಶೀಕರ* — ರೂ. 90
3. **ತಿಳಿದುದೆಲ್ಲವ ಬಿಟ್ಟು...**
   *ಪ್ರೊ|| ಜಿ. ವೆಂಕಟಸುಬ್ಬಯ್ಯ* — ರೂ. 90
3. **ಬಾಳಿಗೊಂದು ಭಾಷ್ಯ - ಸಂಪುಟ 2**
   *ಡಾ|| ಮಹಾಬಲೇಶ್ವರ ರಾವ್* — ರೂ. 150
3. **ಪ್ರೀತಿ ಎಂದರೇನು ?**
   *ಪ್ರೊ|| ಓ. ಎಲ್. ನಾಗಭೂಷಣ ಸ್ವಾಮಿ* — ರೂ. 25

*Distributors/persons interested, may please contact*

**THE STUDY, BANGALORE EDUCATION CENTRE**
**Krishnamurti Foundation India**
Thatguni Post, Bangalore - 560 062
Tel. : 080-28435243, 28435240 Extn. 114

## SRI SIDDHARTHA EDUCATION SOCIETY

**SIDDHARTHANAGAR, TUMKUR-572 107**
**Phone : 0816-2206458/2278867/2201073**

***The following Institutions are run by the Society in different parts of Karnataka***

| | | |
|---|---|---|
| 1. | Medical College | 1 No. |
| 2. | Engineering College | 1 No. |
| 3. | Dental College | 1 No. |
| 4. | School of Nursing | 1 No. |
| 5. | B.Ed. College | 1 No. |
| 6. | First Grade College | 1 No. |
| 7. | Junior College | 5 Nos. |
| 8. | High School | 23 Nos. |
| 9. | Training Institute | 5 Nos. |
| 10. | Sanskrit School | 9 Nos. |
| 11. | Pali School | 1 No. |
| 12. | M.B.A. | 1 No. |
| 13. | M.C.A. | 1 No. |
| 14. | College of Nursing | 1 No. |

***In addition there are 21 Student Hostels***

Shri H. M. GANGADHARAIAH
Founder Secretary

Dr. G. SHIVAPRASAD
Secretary

Dr. G. PARAMESHWARA
Joint Secretary

*WITH BEST COMPLIMENTS FROM*

**SREE SIDDAGANGA EDUCATION SOCIETY (REGD.)**
**SREE SIDDAGANGA MATH**
**TUMKUR - 572 104**
**Phone : 2282411, 2282211 Fax : 2282511**

**SREE SIDDAGANGA EDUCATION SOCIETY (REGD.) SREE SIDDAGANGA MATH WAS ESTABLISHED ON 17TH JULY 1963 WITH AN OBJECT TO PROMOTE EDUCATION AND CULTURE BY ESTABLISHING COLLEGES, SCHOOLS, INSTITUTIONS, TRAINING CENTRES, HOSTELS ETC.,**

Sree Siddaganga Education Society is running about 121 institutions as on date right from Nursery to Engineering course spreading over the State of Karnataka and also FREE BOARDING AND LODGING HOME for 8000 students at Sree Siddaganga Math.

It is being run under the blessings and able guidance of Dr. Sree Sree Sivakumara Swamigalu, the Hon'ble President of Sree Siddaganga Education Society, Sree Siddaganga Math.

Place : Sree Siddaganga Math
Date : 1-12-2005

Sd/-
T. K. Nanjundappa
Hon. Secretary

ಹುಟ್ಟುವುದು ನಮ್ಮ ಇಂತಹ ಕುತೂಹಲವನ್ನು ತಣಿಸಲೆಂದೇ. ಇದಕ್ಕೆ ಹೊಂದಿಕೊಂಡ ಹಾಗೆ ಇನ್ನೊಂದು ವಿದ್ಯಮಾನವೂ ಇದೆ. ಕಳೆದೆರಡು ಮೂರು ದಶಕಗಳಲ್ಲಿ ನಮಗೆ ನಾಯಕತ್ವದ ಗುಣಾವಗುಣಗಳ ಬಗ್ಗೆ ಗೀಳು ಹೆಚ್ಚಾಗಿದೆ ಅಷ್ಟೆ. ಇದೊಂದು ಗೀಳು ಮಾತ್ರವೇ ಸರಿ. ಏಕೆಂದರೆ ಈ ಕಾಲಾವಧಿಯಲ್ಲೇ ನಮ್ಮ ಸಮಾಜ ಇನ್ನಿಲ್ಲದಷ್ಟು ತನಿಖಾ ಆಯೋಗಗಳು, ಅಪ್ರಮಾಣಿಕತೆಯ ಕಡೆ ನಡೆದಿದೆ. ಸತ್ಯಹರಿಶ್ಚಂದ್ರನು ಸೇರಿದಂತೆ ಒಬ್ಬ ಮನುಷ್ಯನಿಗೆ ಒಂದು ಸಂದರ್ಭದಲ್ಲಿ, ಒಂದು ಸನ್ನಿವೇಶದಲ್ಲಿ ಒಂದು ಹಂತದ ತನಕ ಮಾತ್ರ ಪ್ರಾಮಾಣಿಕತೆ ಸಾಧ್ಯ. ಹಾಗೆಯೇ ಒಂದು ಹಂತದ ನಂತರ ಅವನ ಕೇವಲ ಪ್ರಾಮಾಣಿಕತೆಯಿಂದಲೇ ಅವನ ಬಗ್ಗೆ ಏನನ್ನೂ ನಿರ್ಧರಿಸಲು ಸಾಧ್ಯವಿಲ್ಲ.

ಪದ್ಯದಲ್ಲಿ ಇನ್ನೊಂದು ಇಂಗಿತವೂ ಇದೆ. ನಾಯಕರನ್ನು, ಪ್ರಧಾನಿಗಳನ್ನು ಅದು 'ಸಮಾನ' ನೆಲೆಯಲ್ಲಿ ನೋಡುತ್ತದೆ. ಅವರು ಕೂಡ ನಮ್ಮ ಹಾಗೆ ಕುಡಿಯುವವರು, ಬೀಡಿ ಸಿಗರೇಟು ಸೇದುವವರು, ಕೊಂಚ ಬೇಜವಾಬ್ದಾರಿಯುಳ್ಳವರು ಎಂಬುದು ಕವನದ ವಿವರಗಳಲ್ಲಿ ವ್ಯಕ್ತವಾಗಿದೆ. ಅಧಿಕಾರಸ್ಥರನ್ನು ನಾವು 'ಸಮಾನ ನೆಲೆ'ಯಲ್ಲಿ ನೋಡುವ ಅಭ್ಯಾಸವನ್ನು ಕಳೆದುಕೊಂಡುಬಿಟ್ಟಿದ್ದೇವೆ. ಅಧಿಕಾರಸ್ಥರೆಂದರೆ ವಿಶೇಷ ವರ್ಗದ ಜನ, ನಮಗಿಂತ ಎತ್ತರದಲ್ಲಿರುವವರು ಎಂಬ ಭಾವನೆ ನಮ್ಮಲ್ಲಿ ಅಂತರ್ಗತವಾಗಿದೆ. ಅಧಿಕಾರಸ್ಥರು ಕೂಡ ಹಾಗೆಯೇ ನಂಬುತ್ತಾರೆ. ಶಾಸಕರು, ಸಂಸದರು ಇತರ ಜನಪ್ರತಿನಿಧಿಗಳನ್ನು ಭೇಟಿ ಮಾಡುವ ಸಂದರ್ಭ ಬಂದಾಗಲೆಲ್ಲ ನಾನು ಅವರಿಗೆ ಸಮಾನತೆಯಲ್ಲಿರುವ ನಂಬುಗೆಯನ್ನು ಪರಿಶೀಲಿಸಲೆಂದೇ ತೀರಾ ಸಾಮಾನ್ಯವಾದ ಸಾಧಾರಣವಾದ ಪ್ರಶ್ನೆಗಳನ್ನೇ ಕೇಳುತ್ತೇನೆ. ಒಂದು ಸಲ ಒಬ್ಬ ಸಂಸದರು ಅವರ ಕತ್ತಿನಲ್ಲಿ ಹಾಕಿಕೊಂಡಿದ್ದ ರುದ್ರಾಕ್ಷಿ ಮಾಲೆ ತುಂಬಾ ಚೆನ್ನಾಗಿತ್ತು. ನನಗೂ ಅದನ್ನು ಪಡೆಯುವ ಆಸೆಯಾಗಿ ನೀವು ಅದನ್ನು ಎಲ್ಲಿ ಕೊಂಡಿರಿ ಎಂದು ಕೇಳಿದ್ದಕ್ಕೇ ಅವರಿಗೆ ಮುಜುಗರವಾಯಿತು. ಅತ್ಯುತ್ತಮವಾದ ವಸ್ತು ಅವರ ಹತ್ತಿರ ಮಾತ್ರವೇ ಇರಬೇಕು. ಆವಾಗಲೇ ಅವರು ನಾಯಕರು ಎಂಬ ಧೋರಣೆ. ಇನ್ನೊಬ್ಬ ಮಂತ್ರಿಗಳ ಕೊಠಡಿಗೆ ಅವರು ನಿಗದಿಪಡಿಸಿದ್ದ ವೇಳೆಗೇ ಹೋದಾಗ ಆತ ಮುಖಕ್ಕೆ ಪೌಡರ್ ಲೇಪಿಸಿಕೊಳ್ಳುತ್ತಿದ್ದರು. ತುಂಬಾ ಮುಜುಗರಪಟ್ಟುಕೊಂಡರು. ಇಂತಹ ಮುಜುಗರಗಳಲ್ಲೆಲ್ಲ ವ್ಯಕ್ತವಾಗುವುದು ಒಂದೇ ಧೋರಣೆ : ನಾಯಕರಾದ ನಾವು ನಿಮಗಿಂತ ದೂರ, ನಿಮಗಿಂತ ಎತ್ತರ, ನಮ್ಮ ಯಾವ ಅಭ್ಯಾಸ ಗುಣಗಳೂ ನಿಮಗೆ ಗೊತ್ತಿರಬಾರದು. ಹಾಗೆ ಗೊತ್ತಾದರೆ ನಮ್ಮ ನಾಯಕತ್ವಕ್ಕೆ ಧಕ್ಕೆ ಬರುತ್ತದೆ.

ತನ್ನ ಕಾವ್ಯ ಹೇಗಿರಬೇಕು, ತಾನು ಬಯಸುವ ನಾಯಕತ್ವ ಹೇಗಿರಬೇಕು ಎಂಬುದರ ಬಗ್ಗೆ ಕೂಡ ಒಂದು ಬ್ರೆಕ್ಟ್ ಪದ್ಯವಿದೆ. ನಾಲ್ಕೇ ನಾಲ್ಕು ಸಾಲುಗಳದ್ದು. ನೋಡಿ –

ದುರ್ಜನರಿಗೆ ನಿನ್ನ ಪಂಜ ಕಂಡರೆ ಭಯ
ಸಜ್ಜನರಿಗೆ ಮೆಚ್ಚಿಗೆ ನಿನ್ನ ನಯ
ನನ್ನ ಕವಿತೆಗಳ ಬಗ್ಗೆ
ನಾನು ಕೇಳಬಯಸುವುದು ಇದನ್ನೇ.
(ಚೀನಾದ ಒಂದು ಮರದ ಕೆತ್ತನೆಯ ಸಿಂಹವನ್ನು ಕುರಿತು)

ಬ್ರೆಕ್ಟ್ ಕವನಗಳಿಗಿಂತ ಮುಖ್ಯವಾದ್ದು ಆತ 'ಪ್ರಧಾನಿ' ಕವನವನ್ನು ಬರೆದ ಸಂದರ್ಭ. ಕೃತಿಯ ಮೌಲಿಕತೆಯನ್ನು ತಿಳಿಯುವ ದೃಷ್ಟಿಯಿಂದ ಕೃತಿಯ ಆ ಕೃತಿ, ವೈಚಾರಿಕತೆ ಮತ್ತು ಕಲಾತ್ಮಕತೆಗಳಷ್ಟೇ ಕೃತಿಯನ್ನು ಬರೆದ ಸಂದರ್ಭವು ಮುಖ್ಯವಾಗುತ್ತದೆ. ನವ್ಯದ ಕಾಲದಲ್ಲಿ ಲೈಂಗಿಕತೆಯ ಬಗ್ಗೆ ಫಿಸಿಕಲ್ ಆಗಿ ಬರೆಯುವುದು ಸವಾಲೋ ಅಥವಾ ೧೯೩೦ರಲ್ಲಿ 'ಸರಸಮ್ಮನ ಸಮಾಧಿ' ಬರೆಯುವುದು ಹೆಚ್ಚು ಸವಾಲಾತ್ಮಕವೋ. ಹಾಗೆಯೇ ಎಪ್ಪತ್ತರ ದಶಕದಲ್ಲಿ 'ಭಾರತೀಪುರ', ಎಂಬತ್ತರ ದಶಕದಲ್ಲಿ 'ಕುಸುಮಬಾಲೆ' ಬರೆಯುವುದು ಸವಾಲೋ ಅಥವಾ ೧೯೩೦ರಲ್ಲಿ 'ಚೋಮನದುಡಿ'ಯನ್ನು ಬರೆಯುವುದೋ. ಈವತ್ತು subaltern ಚಿಂತಕರಾಗಿ ಬರೆಯುವುದು ಸುಲಭ. ಅದು ಕಾಲಧರ್ಮ ಮತ್ತು ವೃತ್ತಿಪರತೆ. ಬೇಂದ್ರೆಯಂಥವರು ಪಕ್ಕದಲ್ಲಿದ್ದಾಗ ಶಂಬಾ ಚಿಂತನೆ ಪ್ರಕಟಿಸುವುದು, ಅದಕ್ಕೆ ಓದುಗರನ್ನು ಗಳಿಸುವುದು ಕಷ್ಟ

ಬ್ರೆಕ್ಟ್ 'ಪ್ರಧಾನಿ' ಪದ್ಯ ಬರೆದದ್ದು ೧೯೩೭ರಲ್ಲಿ. ಈ ಪದ್ಯ 'ಹಿಟ್ಲರ್'ನ್ನು ಕುರಿತದ್ದೇ ಇರಬೇಕು ಎಂಬ ಅನುಮಾನವೂ ಇದೆ. ಇರಲಿ. ಹಿಟ್ಲರ್, ಮುಸೊಲಿನಿ ತಮ್ಮ 'ಅಧಿಕಾರ'ದ ಉತ್ತುಂಗದಲ್ಲಿದ್ದರು. ಅಷ್ಟೇ ಮುಖ್ಯವಾಗಿ ಮನುಷ್ಯರೇ ಮನುಷ್ಯರ ಬಗ್ಗೆ ಕೀಳಾಗಿ, ಕ್ಷುದ್ರವಾಗಿ ವರ್ತಿಸುತ್ತಿದ್ದರು. ಜರ್ಮನಿಯ ಸಾಮಾಜಿಕ, ಆರ್ಥಿಕ, ರಾಜಕೀಯ ವಾತಾವರಣ ದೈನೇಸಿ ಸ್ಥಿತಿಯನ್ನು ತಲುಪಿ ವಿಕ್ರಾಂತವಾಗಿತ್ತು. ಲೇಖಕನೊಬ್ಬನಿಗೆ 'ಸೂಪರ್‌ಮ್ಯಾನ್' ನಿರ್ಮಿಸಲು, ಮನುಷ್ಯನ ಒಳ್ಳೆಯತನವನ್ನು ಪ್ರತಿಪಾದಿಸಲು ರೊಮ್ಯಾಂಟಿಕ್ ಆಗಲು ತುಂಬಾ ಸುಲಭವಾದ ವಾತಾವರಣ. ಸಮಾಜವೇ ಇಷ್ಟು ಕೆಟ್ಟುಹೋಗಿರುವುದರಿಂದ ಮನುಷ್ಯನ ಸ್ವಭಾವದಲ್ಲೇ ಆಮೂಲಾಗ್ರವಾಗಿ ಬದಲಾಗಬೇಕು ಎಂದು ಆಶಿಸುವುದು ಕೂಡ ಸಹಜ. ಸಮಾಜದ ವಿಶ್ಲೇಷಣೆಗಿಂತ ಮನುಷ್ಯನ ಒಳ್ಳೆಯತನದ ಬಗ್ಗೆ ಕನವರಿಸುವುದೇ ಮುಖ್ಯವಾಗಿಬಿಡುತ್ತದೆ. ಬ್ರೆಕ್ಟ್ ಕವನಗಳು, ನಾಟಕಗಳು ಈ ಮನೋಧರ್ಮಕ್ಕೆ ವಿರುದ್ಧವಾಗಿವೆ. ಇಂತಹ ಸಂದರ್ಭದಲ್ಲಿ ಮನುಷ್ಯ ಚಿಂತನಶೀಲತೆಯನ್ನು ಕಳೆದುಕೊಳ್ಳುವ ಹಾಗೂ ಇಲ್ಲ, ಸಮಾಜದ ವಿಶ್ಲೇಷಣೆಯನ್ನು ಮಾಡುವುದರಿಂದ ತಪ್ಪಿಸಿಕೊಳ್ಳುವ ಹಾಗೂ ಇಲ್ಲ. ಅದೇ ಅವನ ನೈತಿಕ ಆಯ್ಕೆ ಮತ್ತು ಜವಾಬ್ದಾರಿ.

ಬ್ರೆಕ್ಟ್‌ನ ಈ ಮಾರ್ಗ ನಮಗೆ ನಮ್ಮ ವಸಾಹತುಶಾಹಿ ಸಂದರ್ಭದಲ್ಲಿ ಇಲ್ಲಿನ ಲೇಖಕರು ಸೃಷ್ಟಿಸಿದ 'ಪಾತ್ರ' ಮತ್ತು 'ಪಾತ್ರ ಕಲ್ಪನೆ'ಗಳನ್ನು ಬೇರೊಂದು ದೃಷ್ಟಿಯಲ್ಲಿ ನೋಡಲು ಪ್ರೇರೇಪಿಸುತ್ತದೆ. ಚೋಮ, ಗುತ್ತಿ, ಹೂವಯ್ಯ, ಮುಕುಂದಯ್ಯ, ಚಿಕವೀರ ರಾಜೇಂದ್ರ, ಇವರೆಲ್ಲರನ್ನೂ ಒಳಗೊಳ್ಳುವ ಕೃತಿಗಳಲ್ಲಿ ಅಡಗಿರುವ ಸಾಮಾಜಿಕ ಚರಿತ್ರೆ ಮತ್ತು ಅದನ್ನು ನೋಡುವ ದೃಷ್ಟಿಕೋನ ಎಂತಹುದು ಎಂಬುದನ್ನು ಪರಿಶೀಲಿಸಲು ಬ್ರೆಕ್ಟ್ ಬರೆಯುತ್ತಿದ್ದ ಸಂದರ್ಭದ ಪರಿಚಯವು ಒಂದು ಮಾನದಂಡವಾಗಬಹುದು. ಚರಿತ್ರೆಯನ್ನು ಮತ್ತೆ ಮತ್ತೆ ಸೃಷ್ಟಿಸಿಕೊಳ್ಳಬೇಕಾದ ಅನಿವಾರ್ಯತೆ ಮತ್ತು ಜವಾಬ್ದಾರಿ ಮನುಷ್ಯನಿಗೆ ಮುಕ್ತಿಯೇ ಇಲ್ಲದ ಒಂದು ಸ್ಥಿತಿ.

ಬ್ರೆಕ್ಟ್ ಮೇಲೆ ಸೂಚಿಸಿದ ಮನೋಧರ್ಮಕ್ಕೆ ಪೂರಕವಾದ ಕವನಗಳನ್ನು ಮಾತ್ರವೇ ಬರೆಯಲಿಲ್ಲ. ಎಲ್ಲ ಸೃಜನಶೀಲ ಲೇಖಕರಂತೆ ಆತನು ಕೂಡ ಕ್ಷಣ ಕ್ಷಣವೂ ಮಿಡಿಯುವಂತವನು. ತನ್ನೊಳಗಿನ ಹತಾಶೆ, ಸಿನಿಕತೆಯನ್ನು ತೋಡಿಕೊಳ್ಳುವಂತಹ ರಚನೆಗಳೂ ಇವೆ.

ಹೊಸ ಯುಗಗಳು ಏಕಾಏಕಿ ಶುರುವಾಗುವುದಿಲ್ಲ

........................

ಹೊಸ ಆ್ಯಂಟೆನಾಗಳು ಹರಡಿದ್ದು ಹಳೆಯ
ಮೂರ್ಖತನಗಳನ್ನೇ ಅನ್ನುವ ಸಾಲುಗಳಾಗಲೀ,
ಅಥವಾ
ಪ್ರಬಲ ರಾಷ್ಟ್ರ ನಾಯಕ ಸತ್ತ ವಾರದ ಮೇಲೆ
ಮತ್ತೆ ಹುಟ್ಟಿ ಬಂದರೆ
ಇಡೀ ದೇಶದಲ್ಲಿ ಅವನಿಗೊಂದು ಮನೆಯಾಳಿನ
ಕೆಲಸ ಕೊಡುವವರು ದಿಕ್ಕಿಲ್ಲ

ಎಂದು ಘೋಷಿಸುವ ಸಾಲುಗಳಾಗಲೀ ಹೇಳುವುದು ಹತಾಶೆ, ಕೈಚೆಲ್ಲಿದ ಭಾವನೆಗಳನ್ನೇ.

ಎಂತಹ ಐತಿಹಾಸಿಕ ಪಲ್ಲಟದ ಸಂದರ್ಭದಲ್ಲೂ ದೈನಿಕದ ಅನಿವಾರ್ಯತೆ ಮತ್ತು ಸೊಗಸು ಇದ್ದೇ ಇರುತ್ತದಲ್ಲ, ಅದನ್ನು ಕುರಿತು ಬ್ರೆಕ್ಟ್ ಹೀಗೆ ಬರೆಯುತ್ತಾನೆ :

ಮುಂಜಾನೆ ದಿನಪತ್ರಿಕೆಯಲ್ಲಿ
ದೊರೆಗಳ, ಧರ್ಮಗುರುಗಳ, ಬ್ಯಾಂಕರುಗಳ, ಎಣ್ಣೆದಣಿಗಳ
ಯುಗಪ್ರವರ್ತಕ ಯೋಜನೆಗಳನ್ನು ಕುರಿತು ಓದುತ್ತೇನೆ.
ಇನ್ನೊಂದು ಕಣ್ಣು ಚಹದ ಪಾತ್ರೆಯ ಮೇಲಿದೆ.
ನೀರು ಆವಿಯಾಡುತ್ತದೆ, ಗುಳುಗುಳು ಗುಳ್ಳೆಗಳೇಳುತ್ತವೆ.
ಮತ್ತೆ ತಿಳಿಗೊಳ್ಳುತ್ತವೆ. ನಂತರ ಮೇಲುಕ್ಕಿ ಹರಿದು ತಣ್ಣಗಾಗುತ್ತದೆ.

ಈ ಕಾರಣಗಳಿಗೇ ಇರಬೇಕು ಬ್ರೆಕ್ಟ್ ಪ್ರಧಾನಿಗಾಗಿ ಬರೆಯುವ ಪದ್ಯವೂ ಅವನಿಗಾಗಿಯೂ ಮತ್ತು ನಮಗಾಗಿಯೂ ಬರೆದುಕೊಂಡ ಪದ್ಯವಾಗುತ್ತದೆ.

* * *

(ಈ ಬರಹದಲ್ಲಿ ಉಲ್ಲೇಖಗೊಂಡಿರುವ ಬ್ರೆಕ್ಟ್‌ನ ಪದ್ಯಗಳನ್ನು ಶಾ. ಬಾಲೂರಾಯರು ಮೂಲ ಜರ್ಮನ್ ಭಾಷೆಯಿಂದಲೇ ಅನುವಾದಿಸಿದ ಸಂಗ್ರಹದಿಂದ ತೆಗೆದುಕೊಂಡಿರುವಂತಹುವು. – ಅಕ್ಷರ ಪ್ರಕಾಶನ, ೧೯೯೪).

ಮತ್ತೆ ಈಚೆಗೆ ಈ ಸಂಕಲನ ಓದಲು ಕಾರಣವಾದದ್ದು ಕವಿ ವಸಂತ ಬನ್ನಾಡಿಯವರ ಕವನ ಸಂಕಲನಗಳು (ಕಡಲಧ್ಯಾನ, ನಿಜದ ನೆಲೆ). ಈ ಸಂಕಲನಗಳಲ್ಲಿ ಮತ್ತೆ ಬ್ರೆಕ್ಟ್‌ನ ಕೆಲವು ಕವನಗಳ ಯಶಸ್ವಿ ಅನುವಾದವಿದೆ. ಇದಕ್ಕಿಂತ ಮುಖ್ಯವಾಗಿ ವಸಂತ ಬನ್ನಾಡಿಯವರ ಸ್ವಂತ ರಚನೆಗಳು ಕೂಡ ಬ್ರೆಕ್ಟ್‌ನ ಕವನ ರಚನೆಯ ಕ್ರಮ ಮತ್ತು ಮನೋಧರ್ಮಕ್ಕೆ ಹತ್ತಿರವಾಗಿದೆ. ಹಾಗಿದ್ದೂ ನಮ್ಮ ಸಮಕಾಲೀನ ಸಂದರ್ಭದ ಬಗ್ಗೆ ಗಾಢವಾದ ಒಳನೋಟಗಳನ್ನು , ವಿಚಾರಪೂರ್ಣ ಸತ್ಯಗಳನ್ನು ಮಂಡಿಸುತ್ತದೆ. ಇದೆಲ್ಲಕ್ಕಾಗಿ ನಾವು ವಸಂತ ಬನ್ನಾಡಿಯವರಿಗೆ ಕೃತಜ್ಞತೆ ಹೇಳುತ್ತಲೇ ಸೃಜನಶೀಲ ಕವಿಯೊಬ್ಬ ಮತ್ತೊಬ್ಬ ಕವಿಯಲ್ಲಿ, ಬರಹಗಾರನಲ್ಲಿ (ಅವನು ಎಷ್ಟೇ ದೊಡ್ಡವನಾಗಿದ್ದರೂ) ಇಷ್ಟೊಂದು ಸಬ್ಲಿಮೇಷನ್ ತೋರಿಸಬಹುದೆ ಎಂಬ ಪ್ರಶ್ನೆಯೂ ಮೂಡುತ್ತದೆ. ಆವಾಹನೆ ಆವಾಹನೆಯೇ, ಅಯ್ಯಪ್ಪ ಸ್ವಾಮಿ ಕಾರಣವಾದರೂ ಅಷ್ಟೇ, ಬ್ರೆಕ್ಟ್ ಕಾರಣನಾದರೂ ಅಷ್ಟೇ. ಸ್ವತಃ ಬ್ರೆಕ್ಟ್‌ಗೆ ತನ್ನ ಓದುಗ, ಪ್ರೇಕ್ಷಕ ಯಾವತ್ತೂ ಎಂದೂ 'ಆವಾಹಿತ' ಸ್ಥಿತಿ ತಲುಪಬಾರದು ಎಂಬ ಬಗ್ಗೆ ಸ್ಪಷ್ಟತೆಯಿತ್ತು.

**ಕೆ. ಸತ್ಯನಾರಾಯಣ**
ಫ್ಲಾಟ್ ನಂ. ೩೧, ೪ನೇ ಮಹಡಿ, ಭಾಗ್ಯನಗರ ಅಪಾರ್ಟ್‌ಮೆಂಟ್ಸ್, ೧-೧-೭೯, ಆರ್‌ಟಿಸಿ 'ಎಕ್ಸ್' ರಸ್ತೆ,
ಚಿಕ್ಕಡಪಲ್ಲಿ, ಹೈದರಾಬಾದ್ - ೫೦೦ ೦೨೦

"**ತಂ**ದೆ ತನ್ನ ಮಗಳು ನೋಡುವ ಮೊದಲು ಮನುಷ್ಯ" ಅನ್ನುವ ಮಾತಿದೆ ನಮ್ಮಲ್ಲಿ. ನನ್ನ ಅದೃಷ್ಟ : ನನ್ನ ತಂದೆ ನಾನು ಕಂಡ 'ಸರಿ'ಯಾದ ಮನುಷ್ಯರಾಗಿದ್ದರು. ಅವರ ಸಿದ್ಧಾಂತಗಳು ಅನುಕರಣೀಯವಾಗಿದ್ದವು. ಹಾಗಂತ ಅವರೊಬ್ಬ ಪರಿಪೂರ್ಣ ಪುರುಷ ಎಂದೇನೂ ಅಲ್ಲ. ಅವರೊಬ್ಬ ಸಾಮಾನ್ಯ ವ್ಯಕ್ತಿಯೇ. ಆದರೆ ಸಾಮಾನ್ಯತೆಯಲ್ಲಿ ಒಂದು ಬಗೆಯ ಅಸಾಮಾನ್ಯತೆಯನ್ನು ಕಷ್ಟಪಟ್ಟು ಸಾಧಿಸಿಕೊಂಡಿದ್ದರು. ಅವರಲ್ಲಿ ದೌರ್ಬಲ್ಯಗಳೂ ಇದ್ದವು : ಎಲ್ಲರಲ್ಲಿ ಇರುವಂತೆ. "ಮನುಷ್ಯನ ಒಳಗು ಮತ್ತು ಅವನ ಸುತ್ತಲಿನ ಹೊರಗು ಅವನನ್ನು ಪ್ರತಿಕ್ಷಣ ಹೊಸತಾಗಿ ನಿರ್ಮಾಣ ಮಾಡುತ್ತಿರುತ್ತವೆ" ಅನ್ನುತ್ತಾರೆ ವಿಜ್ಞಾನಿಗಳು. ಈ ಮಾತಿನ ಸತ್ಯ ಬಹು ನಿಚ್ಚಳವಾಗಿ ಮನವರಿಕೆಯಾಗಿದೆ ನನಗೆ. ಯಾವುದೇ ವಿಷಯಕ್ಕೆ ಶಾಶ್ವತ ಬದ್ಧತೆ ಯಾರಿಗೂ ಸಾಧ್ಯವಾಗಲಾರದು.

ಅಣ್ಣಯ್ಯನ ನಿಲುವು ಚೆಲುವು ಜೀವನದೊಲವುಗಳು ಚೆನ್ನಾಗಿದ್ದವು. ಅವರ ದೇಹ-ಮನೋದಾರ್ಢ್ಯಗಳನ್ನು ಕಂಡು "ಅಣ್ಣಯ್ಯ ಕನಿಷ್ಠಪಕ್ಷ ತೊಂಭತ್ತು ವರ್ಷ ಬದುಕಿರುತ್ತಾರೆ" ಅಂದುಕೊಂಡಿದ್ದೆವು. ಹಾಗಾಗಲಿಲ್ಲ. ಎಂಭತ್ತೆರಡಕ್ಕೇ ಅವರು ಹೊರಟುಬಿಟ್ಟರು. "ಸಾಹಿತಿಗೆ ಸಾವಿಲ್ಲ. ತನ್ನ ಸಾಹಿತ್ಯದಲ್ಲಿ ಆತ ಬದುಕಿರುತ್ತಾನೆ" ಅನ್ನುತ್ತೇವೆ. ಇದೆಲ್ಲ ನಮ್ಮ ಮನಸ್ಸನ್ನು ಸಮಾಧಾನಪಡಿಸಿಕೊಳ್ಳಲು ಕಟ್ಟಿಕೊಂಡಿರುವ ಕತೆಗಳಷ್ಟೇ. ಒಬ್ಬ

# ಅಣ್ಣಯ್ಯನ ನೆನಪುಗಳು



ಭಾರತೀ ಕಾಸರಗೋಡು

ವ್ಯಕ್ತಿಯ ಭೌತಿಕ ಅಸ್ತಿತ್ವ, ಮಾತು, ಚಹರೆ, ಸಾರಾಸಗಟಾಗಿ ಕಣ್ಮರೆಯಾಗಿಬಿಡುವ ಆ ಅಭಾವ, ಶೂನ್ಯ ಹ್ಯಾಗೆ ಹೊಡೆಯುತ್ತದೆ ! ಆದರೆ ನೆನಪುಗಳು ಜೀವಂತ. ಅಣ್ಣಯ್ಯನ ನೆನಪುಗಳಂತು ಉಸಿರಲ್ಲಿ ಬೆರೆತಿವೆ. ಹಳೇ ಕರವಸ್ತ್ರದ ಮೇಲೆ ಇಂಕಿನ ಬಾಟಲಿಯಿರಿಸಿ ಒಪ್ಪವಾಗಿ ಪೆನ್ನಿಗೆ ಇಂಕು ತುಂಬಿಸುವ ರೀತಿಯಾಗಲೀ, ತೊಡೆಯ ಮೇಲೆ ಮಡಿಚಿಟ್ಟುಕೊಂಡ ಮೆತ್ತನೆ ಚೌಕದ ಮೇಲೆ ವೀಳೆಯದೆಲೆ ಬೋರಲು ಹಾಕಿ ನಾಜೂಕಾಗಿ ನಾರು ತೆಗೆಯುವ ರೀತಿಯಾಗಲಿ, ಹಸ್ತಪ್ರತಿಗಳ ಓರಣವಾಗಲಿ, ಅತಿಥಿ ಸತ್ಕಾರವಾಗಲಿ, ಅಣ್ಣಯ್ಯನ ನೆನಪೆಂದರೆ ಅದೊಂದು ಅಚ್ಚುಕಟ್ಟು, ಒಂದು ಸ್ನೇಹ, ಒಂದು ಪ್ರೀತಿ.

ನಾನು ಚಿಕ್ಕವಳಾಗಿದ್ದಾಗ ನಮ್ಮ ಮನೆಗೆ ಅನೇಕ ಗಣ್ಯ ಸಾಹಿತಿಗಳು ಬರುತ್ತಿದ್ದರು. ಅವರೆಲ್ಲರೂ ಸೌಹಾರ್ದವಾಗಿ ಕೂತು ಒಬ್ಬರನ್ನೊಬ್ಬರು ಗೌರವಿಸುತ್ತ – ಅಮ್ಮ ಕೊಟ್ಟ ತಿಂಡಿ ಮೆಲ್ಲುತ್ತ – ಸಾಹಿತ್ಯ ವಿಚಾರಗಳನ್ನು ಮುಕ್ತವಾಗಿ ಚರ್ಚಿಸುತ್ತಿದ್ದರು. ಅದೊಂದು ಸುಂದರ ಚಿತ್ರ. ಆ ಚಿತ್ರದ ಚೌಕಟ್ಟಿನೊಳಗೆ ನಾನು ಬರದಿದ್ದರೂ ದೂರದೂರವೇ ಸುಳಿಯುತ್ತ ಸನ್ನಿವೇಶದ ಸ್ವಾರಸ್ಯವನ್ನು ಮನಸಾರೆ ಸವಿಯುತ್ತಿದ್ದೆ. ಈಗಲೂ ಚೆನ್ನಾಗಿ ನೆನಪಿದೆ. ಆ ಒಳ್ಳೆಯ ಮಾತುಗಳು, ಅವು ಹೊರಡುತ್ತಿದ್ದ ಧಾಟಿ, ಪರೇಂಗಿತಜ್ಞತೆ, ಪರಸ್ಪರ ಸೌಜನ್ಯ ಇವೆಲ್ಲ ಎಷ್ಟು ಚೆನ್ನಾಗಿದ್ದವು ! ಶುದ್ಧವಾಗಿದ್ದವು ! ಇದಲ್ಲದೆ ಅನೇಕ ಪ್ರಮುಖ ಪತ್ರಿಕೆಗಳ ಸಂಪಾದಕರು ಆಗಿಂದಾಗ ನಮ್ಮ ಮನೆಗೆ ಬಂದು ಅಣ್ಣಯ್ಯನನ್ನು ಪ್ರೀತಿಯಿಂದ ಒತ್ತಾಯಿಸಿ ಕತೆ-ಕಾದಂಬರಿಗಳನ್ನು ಬರೆಸಿಕೊಳ್ಳುತ್ತಿದ್ದರು.

ನಮ್ಮ ಮನೆಗೆ ಸಾಹಿತಿಗಳು ಬರುತ್ತಿದ್ದುದು, ಅಣ್ಣಯ್ಯ ರಾತ್ರಿಯ ಬಹುಭಾಗವನ್ನು ಬರೆಯುತ್ತ ಕಳೆಯುತ್ತಿದ್ದುದು ಎಲ್ಲವೂ ಸರಿಯೇ. ಆದರೂ ಐದನೇ ಕ್ಲಾಸಿನಲ್ಲಿ ಓದುತ್ತಿದ್ದ ನನಗೆ ಒಂದು ಸಾರಿ ಒಂದು ದಿವ್ಯ ಅನುಮಾನ ತಲೆದೋರಿತು. "ಅಣ್ಣಯ್ಯನ ಬರವಣಿಗೆ ಪತ್ರಿಕೆಗಳಲ್ಲಿ ಪ್ರಕಟವಾಗುತ್ತೆ. ಅವರ ಅನೇಕ ಪುಸ್ತಕಗಳೂ ಮನೆಯಲ್ಲಿವೆ. ಆದರೆ ಇವೆಲ್ಲ ಅಣ್ಣಯ್ಯನ ಸ್ವಂತದ್ದೇ ಅಂತ ಏನು ಗ್ಯಾರಂಟಿ ? ಈ ಬಗ್ಗೆ ಸ್ವಲ್ಪ ವಿಚಾರಣೆ ಮಾಡಬೇಕಲ್ಲ!" ಅನ್ನಿಸಿತು. ಅವತ್ತು ರಾತ್ರಿ ಊಟದ ವೇಳೆಯಲ್ಲಿ ಈ ಪ್ರಸ್ತಾಪ ತೆಗೆದೆ. "ಅಣ್ಣಯ್ಯ, ನಿಮಗೊಂದು ಪ್ರಶ್ನೆ !" ಪೀಠಿಕೆ ಹಾಕಿದೆ. "ಕೇಳು ಮರಿ !" ಅಂದರು ಹುಳಿಯನ್ನವನ್ನು ಹದವಾಗಿ ಕಲೆಸುತ್ತಿದ್ದ ಅಣ್ಣಯ್ಯ. "ನೀವೇನೋ ಪುಸ್ತಕಗಳನ್ನು ಬರೆದಿದ್ದೀರಿ ಸರಿ. ಟೇಬಲ್ ಮೇಲೆ ನೀವು ಬರೆದ ಹಾಳೆಗಳೂ ಇವೆ. ಆದ್ರೆ ಇದೆಲ್ಲಾ ನೀವೇ ಸ್ವಂತವಾಗಿ ಬರೆದದ್ದು ಅಂತ ನಂಬೋದು ಹ್ಯಾಗೆ ?" ಅಂದೆ. ಅಕಳಂಕವಾಗಿ ಆರ್ಭಟಿಸಿ ನಕ್ಕುಬಿಟ್ಟರು ಅಣ್ಣಯ್ಯ. ನಕ್ಕು ಸುಧಾರಿಸಿಕೊಂಡು "ಸರಿಯಪ್ಪ... ಅದಕ್ಕೇನು ಮಾಡ್ಬೇಕು ಈಗ ?" ಅಂದರು. "ನಿಮ್ಮ ಕವಿತ್ವಾನ ಪರೀಕ್ಷೆ ಮಾಡ್ತೀನಿ ಈಗ !" ಅಂದೆ. ಕೂಡಲೆ ಗಾಂಭೀರ್ಯವನ್ನೂ ವಿನಯವನ್ನೂ ಯಶಸ್ವಿಯಾಗಿ ನಟಿಸುತ್ತ "ಪರೀಕ್ಷೆಗೆ ನಾನು ಸಿದ್ಧ!" ನೆಟ್ಟಗೆ ಕೂತರು ಅಣ್ಣಯ್ಯ. "ಸರಿ ಯಾವುದಾದರೂ ವಿಷಯದ ಬಗ್ಗೆ ಕೂಡಲೇ ಪದ್ಯ ಕಟ್ಟಿ ಹೇಳಿ." ಸವಾಲು ಹಾಕಿದೆ. ತಡಮಾಡದೆ ಪದ್ಯ ಹೇಳಿದರು ಅಣ್ಣಯ್ಯ.

ನಮ್ಮ ನೆಲವ ತುಳಿದ ಚೀನ
ಬಹಳ ಹೀನ ಆದರ ಮಾನ
ಬಿಟ್ಟು ನಾವು ಅನ್ನ ಪಾನ
ರಕ್ಷಿಸುವೆವು ನಮ್ಮ ತಾಣ.

ಪದ್ಯ ಸರಳವಾಗಿತ್ತು. ಸ್ಫೂರ್ತಿದಾಯಕವೂ ಆಗಿತ್ತು. ಆದರೂ ನನಗೆ ಸಂಶಯ ! ಆಗೆಲ್ಲ ರೇಡಿಯೋದಲ್ಲಿ ಮೂರು ಹೊತ್ತೂ ದೇಶಭಕ್ತಿ ಗೀತೆಗಳನ್ನು ಪ್ರಸಾರ ಮಾಡುತ್ತಿದ್ದರು. ಯಾವುದಾದರೊಂದನ್ನು ಅಣ್ಣಯ್ಯ ಉದ್ಧರಿಸಿದ್ದರೆ ? "ಇದೂ ಬ್ಯಾಡ. ನಾನು ಹೇಳೋ ವಿಷಯದ ಬಗ್ಗೆ ಪದ್ಯ ಕಟ್ಟಬೇಕು." ಷರತ್ತನ್ನು ಹೆಚ್ಚಿಸಿದೆ. "ಆಗಬಹುದು ಸರ್ !" ವಿಧೇಯತೆಯಿಂದ ಒಪ್ಪಿದರು ! ಗೆರೆಯಂತಹ ಅವರ ತುಟಿಗಳ ತುಂಬ ತುಂಟತನದ ಮುಸಿ ಮುಸಿ ನಗು ! ನಾನು ಯೋಚಿಸಿದೆ. ನನ್ನೆದುರಿಗೆ ಕೂತು ಗಲ್ಲ-ಕೆನ್ನೆಗಳಿಗೆಲ್ಲ ಮೊಸರು ಮೆತ್ತಿಕೊಂಡು ತಲ್ಲೀನನಾಗಿ ಉಣ್ಣುತ್ತಿದ್ದ ತಮ್ಮ ಕಂಡ. ಪದ್ಯದ ವಿಷಯ ಅವನೇ ಯಾಕಾಗಬಾರದು ಅನ್ನಿಸಿತು. ಅಣ್ಣಯ್ಯನಿಗಂದೆ – "ವಿಷ್ಣು ಬಗ್ಗೆ ಒಂದು ಪದ್ಯ ಕಟ್ಟಿ ಹೇಳಿ ನೋಡೋಣ ?" ನಗುನಗುತ್ತ ರಾಗರಾಗವಾಗಿ ಆಶುಕವಿತ್ವ ಮಾಡಿಯೇ ಬಿಟ್ಟರು ಅಣ್ಣಯ್ಯ –

ನನ್ನ ತಮ್ಮ ಬಹಳ ತುಂಟ
ತಡೆಯಲಾರೆ ಅವನ ಕಾಟ
ಅಮ್ಮ ಕರೆದು ಬಡಿಸಲೂಟ
ಆಯಿತೊಂದು ಮೋಜುಮಾಟ

''ಅಯ್ಯೋ ಎಷ್ಟು ಚೆನ್ನಾಗಿದೆ !'' ಚಪ್ಪಾಳೆ ತಟ್ಟಿಬಿಟ್ಟೆ. ''ಈಗ್ಲಾದ್ರೂ ಒಪ್ಕೊಂತೀಯೇನಯ್ಯಾ ನಾನೊಬ್ಬ ನಿಜವಾದ ಕವಿ ಅಂತ ?'' ಅಣ್ಣಯ್ಯ ಭಯ-ಭಕ್ತಿಯಿಂದ (!) ಕೇಳಿದರು. ''ಒಪ್ಕೊಂತೀನಿ ನೀವು ಸ್ವಂತವಾಗೇ ಬರೀತೀರಿ. ಕಾಪಿಚಟ್ಟೆಲ್ಲ ಇಲ್ಲ !'' ಅಂದೆ. ''ಸದ್ಯ ! ಭಾರ್ತಿ ಇಟ್ಟ ಪರೀಕ್ಷೇಲಿ ನಾನು ಗೆದ್ದೆನಲ್ಲ !'' ಎದೆ ಮೇಲೆ ಕೈಯಿಟ್ಟು ಭರ್ಜರಿ ನಿಟ್ಟುಸಿರಿಟ್ಟರು ಅಣ್ಣಯ್ಯ !

ನಮ್ಮಂಥ ಮಧ್ಯಮವರ್ಗದ ಕುಟುಂಬಕ್ಕೆ ಓದುವುದು ಒಂದು ಅನಿವಾರ್ಯ ಕ್ರಿಯೆ ಎಂಬಂಥ ವಾತಾವರಣವನ್ನು ಅಣ್ಣಯ್ಯ ತಮ್ಮ ನಡವಳಿಕೆಯಿಂದ ಸೃಷ್ಟಿಸಿದ್ದರು. ಸ್ನಾನ ಮಾಡುವುದು, ತಿಂಡಿ ತಿನ್ನುವುದು ಇದ್ದ ಹಾಗೆ ಓದುವುದು ಕೂಡ ದಿನಚರಿಯ ಒಂದು ಅವಿಭಾಜ್ಯ ಅಂಗವಾಗಿತ್ತು. ಅಣ್ಣಯ್ಯನ ಸಂಬಳದ ದಿನ ನಮಗೆಲ್ಲ ತುಂಬ ಹಿಗ್ಗಿನ ದಿನ. ನಾನಂತು ಅಂಗಳದಲ್ಲೇ ! ನೇರಳೆ ಮರದಿಂದ ಮಾವಿನ ಮರದ ಕಡೆಗೆ, ಮಾವಿನ ಮರದಿಂದ ಚಕ್ಕೋತ ಗಿಡದೆಡೆಗೆ ಸುಳಿದಾಡುತ್ತ ಸಡಗರದಿಂದ ಅವರ ಬರವನ್ನು ಎದುರುನೋಡುತ್ತಿದ್ದೆ. ಅಣ್ಣಯ್ಯನ ಬಲಗೈಯಲ್ಲಿ ಗ್ಲುಕೋಸ್ ಬಿಸ್ಕತ್ತಿನ ಪೊಟ್ಟಣಗಳು, ಎಡ ಕಂಕುಳಲ್ಲಿ ಹೊಸ ಪುಸ್ತಕಗಳ ಒಂದು ಪುಟ್ಟ ಕಟ್ಟು. ಎರಡೂ ನನಗೆ ಪ್ರಿಯವಾದವೇ. ಪುಸ್ತಕಗಳ ಪರಿಮಳ ಬಿಸ್ಕತ್ತಿನ ಘಮಲು ನನಗೆ ಅಮಲೇರಿಸುತ್ತಿದ್ದವು. ಎಲ್ಲ ಪುಸ್ತಕಗಳೂ ನಾನು ಓದುವಂಥದ್ದೇನಾಗಿರುತ್ತಿರಲಿಲ್ಲ, ಯಾಕೆಂದರೆ, ಅಣ್ಣಯ್ಯ ತರುತ್ತಿದ್ದುದೇನಿದ್ದರೂ ಸಂಶೋಧನೆ, ವಿಮರ್ಶೆ, ಕಾವ್ಯ ಇಂಥವೇ ! ಆದರೆ ಪುಸ್ತಕ ಪುಸ್ತಕ ತಾನೇ ? ನೇವರಿಸಿ ನೇವರಿಸಿ ಹಿಗ್ಗುತ್ತಿದ್ದೆ. ಪುಸ್ತಕಗಳೇ ಐಶ್ವರ್ಯ ಅನ್ನುವ ಭಾವನೆಯನ್ನು ಅಣ್ಣಯ್ಯ ಬರಿಸಿಬಿಟ್ಟಿದ್ದರು. ಹೀಗೆ ಬಿಡಿಬಿಡಿಯಾಗಿ ತಂದ ಪುಸ್ತಕಗಳು ಕ್ರಮೇಣ ಒಂದು ಪುಟ್ಟ ಗ್ರಂಥಭಂಡಾರವೇ ಆಗಿತ್ತು. ಇವುಗಳಲ್ಲಿ ಅಣ್ಣಯ್ಯ ಬರೆದ ಪುಸ್ತಕಗಳೂ ಕ್ರಮವಾಗಿ ಸೇರ್ಪಡೆಯಾಗುತ್ತಿದ್ದವು. ಪ್ರತಿ ಬೇಸಿಗೆ ರಜೆಯಲ್ಲಿ ನಾನು ಓದಬಹುದಾದ ಎಲ್ಲ ಪುಸ್ತಕಗಳನ್ನು ಮತ್ತೆ ಮತ್ತೆ ಓದಿ ಮುಗಿಸುತ್ತಿದ್ದೆ. ನಾನು ದೊಡ್ಡ ದೊಡ್ಡ ಕ್ಲಾಸಿಗೆ ಬರುತ್ತಿದ್ದಂತೆ ಅಣ್ಣಯ್ಯ ತರುತ್ತಿದ್ದ ಪುಸ್ತಕಗಳ ಸಂಖ್ಯೆಯೂ ಹೆಚ್ಚಾಯಿತು. ಓದಿ ತಿಳಿದು ಕೊಳ್ಳುವ ಶಕ್ತಿಯೂ ಅಷ್ಟಿಷ್ಟು ಬಂತು. ಈ ಪುಸ್ತಕ ರಾಶಿಯ ಬಗ್ಗೆ ಒಮ್ಮೆ ಅಮ್ಮ ಹೇಳಿದ ಮಾತು, ಅದಕ್ಕೆ ಅಣ್ಣಯ್ಯ ಕೊಟ್ಟ ಉತ್ತರ ನೆನಪಿಗೆ ಬರುತ್ತಿದೆ. ಒಂದು ಚಳಿಗಾಲದ ಹಿತವಾದ ಹಗಲು ಹಿತ್ತಲಿನ ಬಾವಿಕಟ್ಟೆಯ ಬಳಿ ನೊಚ್ಚಗಿನ ಬಿಸಿಲಲ್ಲಿ ಎಲ್ಲ ಕೂತು ಹಸಿಕಡಲೆಕಾಯಿ ಮೆಲ್ಲುತ್ತ ಹರಟುತ್ತಿದ್ದೆವು. ಅಣ್ಣಯ್ಯ ಇತ್ತೀಚೆಗೆ ತಂದಿದ್ದ ಹೊಸ ಪುಸ್ತಕದ ಬಗ್ಗೆ ಚರ್ಚೆ ನಡೆದಿತ್ತು. ಇದ್ದಕ್ಕಿದ್ದಂತೆ ಅಮ್ಮ ಮೆಲ್ಲಗಂದಳು – ''ಏನೂಂದ್ರೆ, ನಿಮ್ಮನ್ನ ಒಂದು ಮಾತು ಕೇಳಲಾ ?'' ''ಕೇಳೇ ಯಜಮಾನಿ ಅದಕ್ಕೇನು ?'' ಅಣ್ಣಯ್ಯ ನಗುತ್ತ ಹೇಳಿದರು. ಅಮ್ಮ ಅಂದಳು – ''ನನ್ನ ಮದ್ವೆ ಆದಾಗಿನಿಂದ ಈವರೆಗೆ ನೀವು ಅದೆಷ್ಟೋ ಪುಸ್ತಕಗಳನ್ನು ತರ್ತಾನೇ ಇದ್ದೀರಿ. ಒಂದು ವೇಳೆ ಪುಸ್ತಕಕ್ಕೆ ದುಡ್ಡು ಹಾಕದೆ ನನಗೆ ಕೊಟ್ಟಿದ್ದರೆ, ಇವತ್ತಿಗೆ ನನ್ನ ಮೈತುಂಬ ಒಡವೆಗಳಿರ್ತಿದ್ದವು ಅಲ್ವಾ ?'' ವಾಸ್ತವವಾಗಿ ಅಮ್ಮನೂ ಪುಸ್ತಕಪ್ರಿಯಳೇ. ಬಿಡುವಿನ ವೇಳೆಯಲ್ಲಿ ಬೇಕಾದಷ್ಟು ಓದುತ್ತಿದ್ದಳು. ಆದರೂ ಅವತ್ತು ಯಾಕೋ ಏನೋ ಆಕೆಯ ಬಾಯಲ್ಲಿ ಈ ಮಾತು ಬಂತು. ಅಣ್ಣಯ್ಯ ಈ ಮಾತನ್ನು ಬಹಳ ಪ್ರಾಮಾಣಿಕವಾಗಿ ಸ್ವೀಕರಿಸಿದರು. ಮೃದುವಾಗಿ ಅಮ್ಮನಿಗಂದರು – ''ನಿನ್ನ ಮಾತನ್ನ ನಾನು ಒಪ್ತೀನಿ. ಆದ್ರೆ ನೀನೇ ಹೇಳು, ಪುಸ್ತಕಗಳ ಬದಲು ಒಡವೆಗಳಿದ್ದಿದ್ರೆ ನಮ್ಮ ಮಕ್ಕಳು ಈಗಿರೋ ಹಾಗೆ ಬುದ್ಧಿವಂತರಾಗಿರತಿದ್ರಾ ?'' ಅವರ ಮಾತನ್ನು ಒಪ್ಪಿ ನಕ್ಕು ಸುಮ್ಮನಾದಳು ಅಮ್ಮ.

ಅಮ್ಮನ ಜೀವನದ ಅಂತಿಮ ಅಧ್ಯಾಯ. ಒಂದು ದಿನ ತನ್ನ ಮಂಚದ ಮೇಲೆ ನಿತ್ರಾಣವಾಗಿ ಮಲಗಿದ್ದಳು. ಕಿಟಕಿಯ ಬಳಿ ಮೇಜಿನ ಮುಂದೆ ಕೂತು ಅಣ್ಣಯ್ಯ ಏನೋ ಬರೆಯುತ್ತಿದ್ದರು. ಇದ್ದಕ್ಕಿದ್ದಂತೆ ಅಮ್ಮ ಅಂದಳು – ''ಏನೂಂದ್ರೆ, ನಾನು ಹಿಮಾಲಯ ನೋಡದೇನೇ ಸತ್ತು ಹೋಗಿಬಿಡ್ತೀನಾ ?'' ಈ ಮಾತನ್ನಾಡುವ ವೇಳೆಗೆ ಅಮ್ಮ ತುಂಬ ಜರ್ಝರಿತಳಾಗಿದ್ದಳು. ಅಸಹಾಯಕಳಾಗಿದ್ದಳು. ಅದಮ್ಯ ಜೀವನೋತ್ಸಾಹಿಯಾಗಿದ್ದವಳು ಬದುಕಿನಲ್ಲಿ ಬಣ್ಣವನ್ನೇ ಕಳಕೊಂಡಿದ್ದಳು. ಆದರೂ ಅವಳ ಪುಟ್ಟ ದುರ್ಬಲ ಹೃದಯದಲ್ಲಿ ಹಿಮಾಲಯ ನೋಡುವ ಆಸೆ ಜಾಗೃತವಾಗಿತ್ತು! ಪ್ರತಿಯೊಬ್ಬ ಭಾರತೀಯನೂ ಹಿಮಾಲಯ ನೋಡಲೇಬೇಕೆಂಬುದು ಆಕೆಯ ನಂಬಿಕೆ. ತನ್ನಷ್ಟಕ್ಕೆ ಕೇಳಿಕೊಂಡಂತಿದ್ದ ಆಕೆಯ ಪ್ರಶ್ನೆಗೆ ಏನೂ ಉತ್ತರ ಬರಲಿಲ್ಲ. ಏನೋ ಬರೆಯುತ್ತ ಕೂತಿದಾರೆ, ತನ್ನ ಮಾತು ಅವರಿಗೆ ಕೇಳಿಸಿತೋ ಇಲ್ಲವೋ ಎಂದಾಕೆ ಸುಮ್ಮನಾದಳು. ಅಣ್ಣಯ್ಯನ ಇಂಥ ಪರಧ್ಯಾನ ಆಕೆಗೆ ಅಭ್ಯಾಸವೂ ಆಗಿತ್ತು.

ಇದಾಗಿ ಒಂದೆರಡು ವಾರ ಕಳೆದಿರಬೇಕು. ಒಂದು ಮಧ್ಯಾಹ್ನ ಆಕೆ ಅಡುಗೆ ಮುಗಿಸಿ ಒಗ್ಗರಿಸುತ್ತ ಇದ್ದಾಳೆ: ಆಗಷ್ಟೇ ಹೊರಗಡೆಯಿಂದ ಬಂದ ಅಣ್ಣಯ್ಯ ಉಸ್ಸೆಂದು ಸೋಫಾ ಮೇಲೆ ಕೂತು ''ಬಾರೇ ಇಲ್ಲಿ ಯಜಮಾನಿ'' ಅಕ್ಕರೆಯಿಂದ ಕರೆದು ಎಲ್ಲಿ, ಕೈಹಿಡಿ ? ಅಂತಂದು ಅವಳ ಕೈಮೇಲೆ ಎರಡು ಟಿಕೆಟ್ ಇರಿಸಿದರು. ಅಮ್ಮನಿಗೆ ಏನೂ ಅರ್ಥವಾಗಲಿಲ್ಲ. ''ಹಿಮಾಲಯ ನೋಡ್ಬೇಕು ಅಂದಿದ್ಯಲ್ಲ, ನೋಡು: ಉತ್ತರಭಾರತ ಪ್ರವಾಸಕ್ಕೆ ನಮ್ಮಿಬ್ಬರಿಗೆ ಟಿಕೆಟ್ ತಂದಿದೀನಿ. ಸಂತೋಷ ತಾನೇ ?'' ಅಂದರು ಅಣ್ಣಯ್ಯ !

ಹಿಮಾಲಯ ಪ್ರವಾಸ ಮುಗಿಸಿ ಸುಧಾರಿಸಿ ಕೊಳ್ಳಲೆಂದು ಅಮ್ಮ-ಅಣ್ಣಯ್ಯ ನನ್ನ ಮನೆಯಲ್ಲೇ ಒಂದೆರಡು ವಾರ ನಿಂತರು. ಆಗೊಂದು ಸಾರಿ ಅಣ್ಣಯ್ಯ ನನಗೆ ಹೇಳಿದರು – ''ಸಂಭ್ರಮಿಸಿಬಿಟ್ಟಳು ಮರೀ ನಿಮ್ಮಮ್ಮ! ಹಿಮಾಲಯದ ರಮಣೀಯ ದೃಶ್ಯಗಳನ್ನು ಅವಳು ಕಣ್ಣರಳಿಸಿ ನೋಡುತ್ತಿದ್ದ ರೀತಿ, ಪುಟ್ಟ ಮಕ್ಕಳಂತೆ ಪುಟು ಪುಟು ಓಡಾಡುತ್ತಿದ್ದ ರೀತಿ ಮನಸ್ಸು ತುಂಬಿ ಬಂತು ಕಣಮ್ಮ! ಅವಳ ಈ ಹೊತ್ತಿನ ಈ ಆನಂದ ನನ್ನ ಜೀವನದ ಸಾರ್ಥಕತೆ ಅನ್ನಿಸಿಬಿಟ್ಟಿತು!'' ಅಣ್ಣಯ್ಯ ಅಮ್ಮನಿಗೆ ತೋರಿರಬಹುದಾದ ಔದಾಸೀನ್ಯವೆಲ್ಲ ಇದೊಂದು ಮಾತಿನಿಂದ ಕೊಚ್ಚಿಕೊಂಡು ಹೋಗಿರಬಹುದೆನ್ನಿಸಿತು ನನಗೆ. ಅಮ್ಮನ ಸಂತೃಪ್ತ ನಗೆಯೂ ಅದನ್ನೇ ಹೇಳಿತು. ಇದಾದ ಕೆಲವೇ ದಿನಗಳಲ್ಲಿ ಆಕೆ ಹೋಗಿಯೂಬಿಟ್ಟಳು.

ಅಮ್ಮ ಹೋಗಿಬಿಟ್ಟ ಕರಾಳದಿನ. ಕ್ರಿಯೆಗಳನ್ನೆಲ್ಲ ಮುಗಿಸಿ ಸ್ಮಶಾನದಿಂದ ಬಂದವರೇ ''ಪಂಚಭೂತಗಳಲ್ಲಿ ಲೀನವಾಗಿ ಬಿಟ್ಟಳಮ್ಮ ನಿಮ್ಮಮ್ಮ!'' ಅಂತ ಬಿಕ್ಕಿದರು. ಅಳುತ್ತಳುತ್ತಲೇ ಸ್ನಾನ ಮುಗಿಸಿದರು. ಯಾರೋ ತಂದಿಟ್ಟ ಉಪ್ಪಿಟ್ಟಿನ ಡಬರಿ ಮುಂದೆ ಕೂತು ''ಇಂದ್ರಾ ಸುದರ್ಶಾ ವಿಷ್ಣು ಭಾರ್ತೀ ಬನ್ರೋ..'' ಅಂತ ಕರೆ ಕರೆದು ನಮ್ಮನ್ನೆಲ್ಲ ಸುತ್ತ ಕೂರಿಸಿಕೊಂಡು ''ಅಳ್ಬೇಡಿ ಮಕ್ಳೇ.. ಇನ್ನೇಲೆ ನಾನೇ ನಿಮ್ಮಮ್ಮ'' ಅಂತ ಉಪ್ಪಿಟ್ಟನ್ನು ಉಂಡೆ ಮಾಡಿ ಮಾಡಿ ಕೈತುತ್ತು ಕೊಟ್ಟರು.

ಮರುದಿನ ಬೆಳಿಗ್ಗೆ ಐದೂವರೆಗೆ ಯಾರೋ ಅಣ್ಣಯ್ಯನಿಗೆ ಕಾಫಿ ಕೊಡಲು ಹೋಗಿದ್ದಾರೆ: ಹಾಸಿಗೆಯಲ್ಲಿ ಅಣ್ಣಯ್ಯ ಇಲ್ಲ! ಎಲ್ಲಿ ಹುಡುಕಿದರೂ ಇಲ್ಲ. ಎಲ್ಲ ಗಾಬರಿಯಾಗಿರುವಾಗ ಅಕ್ಕ ಥಟ್ಟನೆ ತೋಚಿಕೊಂಡು ಹೇಳಿದಳು ''ಅಮ್ಮನನ್ನು ಸುಟ್ಟ ಜಾಗಕ್ಕೇ ಅಣ್ಣಯ್ಯ ಹೋಗಿರತಾರೆ: 'ಯಾರಾದ್ರೂ ಹೋಗಿ ಕರಕೊಂಡು ಬನ್ನಿ.'' ಒಂದಿಬ್ಬರು ಅತ್ತ ಧಾವಿಸಿದರು. ಆಮೇಲೆ ಅಕ್ಕ ನಮಗೆಲ್ಲ ಹೇಳಿದಳು: ಅವಳ ಬೆನ್ನ ಹಿಂದೆಯೇ



ಒಬ್ಬ ತಮ್ಮ ಹುಟ್ಟಿದ್ದ. ಅಣ್ಣಯ್ಯ ಅವನಿಗೆ ಮಧುಸೂದನ ಅಂತ ಹೆಸರಿಟ್ಟಿದ್ದರು. ಮಗು ತುಂಬ ಮುದ್ದಾಗಿದ್ದ. ದಂತದ ಬಣ್ಣ, ಗುಂಗುರು ಕೂದಲು, ಹವಳದ ತುಟಿ. ಬೇಬಿ ಶೋನಲ್ಲಿ ಅವನಿಗೆ ಪ್ರಥಮ ಬಹುಮಾನ! ಅಂಥ ಚಂದದ ಮಗು ಒಂದೂವರೆ ವರ್ಷದವನಿರುವಾಗ ನ್ಯುಮೋನಿಯಾ ಆಗಿ ತೀರಿಕೊಂಡ. ಆಗ ಅಮ್ಮನಿಗೆ ಸಹಾಯಕ ನಾಗಿ ಅರಸ ಅನ್ನುವ ಸಣ್ಣ ಹುಡುಗ ಮನೆಯಲ್ಲಿದ್ದ. ಅವನು ಮಗುವನ್ನು ಕೊಂಡು ಹೋಗಿ ತನ್ನ ಹೊಲದಲ್ಲಿ ಮಣ್ಣು ಮಾಡಿದ್ದ. ಮರುದಿನ ಬೆಳಿಬೆಳಿಗ್ಗೆ ಅಣ್ಣಯ್ಯ ಅಲ್ಲಿಗೆ ಗುದ್ದಲಿ ತೆಗೆದುಕೊಂಡು ಹೋಗಿಬಿಟ್ಟಿದ್ದಾರೆ! ''ನನ್ನ ಮಗೂನ ವಾಪಸ್ ಕರಕೊಂಡು ಹೋಗ್ತೀನಿ'' ಅಂತ ಆವೇಶದಿಂದ ಒಂದೇ ಸಮನೆ ಸಮಾಧಿ ಅಗೆಯುತ್ತಿದ್ದಾರೆ! ಅವರನ್ನು ಹಿಡಿದು ನಿಲ್ಲಿಸಿ ಮನೆಗೆ ಕರೆತರಲು ಸಾಕಾಗಿಬಿಟ್ಟಿತ್ತು. ಮೂರು ದಿನ ಅಳುತ್ತಾ ಮಲಗಿದ್ದರಂತೆ. ಆಮೇಲೆ ಅರಸ ಮಗುವಿನ ಸಮಾಧಿ ಮೇಲೆ ಒಂದು ಪಡುವಲ ಗಿಡ ನೆಟ್ಟ. ಅದು ಸೊಂಪಾಗಿ ಬೆಳೆಯಿತು. ಕಾಯಿಯೂ ಬಿಟ್ಟಿತು. ಮುಗ್ಧ ಹುಡುಗ ಅರಸ ಅದನ್ನು ಅಮ್ಮನಿಗೆ ತಂದುಕೊಟ್ಟ. ಆಕೆಗೆ ವಿಷಯ ತಿಳಿಯದು. ಹೆಚ್ಚಲು ಈಳಿಗೆ ಮಣೆ ಮುಂದೆ ಕೂತವಳು ''ಎಲ್ಲಿಯದೋ ಅರಸ ಈ ಕಾಯಿ?'' ಅಂತ ಕೇಳಿದಳು. ''ಮಧು ಸ್ವಾಮೇರ ಸಮಾಧಿ ಮೇಲೆ ನೆಟ್ಟಿದ್ದು ಅವ್ವ'' ಅಂದ ಅವ ಸರಳವಾಗಿ. ಅಮ್ಮ ಬೆಚ್ಚಿ ಬೆದರಿ ಫಕ್ಕನೆ ಕಾಯನ್ನು ದೂರ ಎಸೆದು ಗೋಡೆಗೆ ತಲೆ ಚಚ್ಚಿಕೊಂಡು ಅಳುತ್ತಾ ''ನನ್ನ ಮಗೂನೇ ಕುಯ್ದು ತಿನ್ನು ಅಂತೀಯೇನೋ ಅರಸಾ?'' ಅಂತ ಗೋಳಾಡಿದಳು.

ಇದೆಲ್ಲ ಮಾತುಗಳನ್ನು ಅಕ್ಕ ನಮಗೆ ಹೇಳುತ್ತಿರುವಾಗ ಕಂಗೆಟ್ಟ ಮುಖದ ಅಣ್ಣಯ್ಯ ಬಸವಳಿದು ಮನೆಯೊಳಗೆ ಬಂದರು. ''ಅವಳ ಹತ್ತಿರ ಹೋಗಿದ್ದೆ. ಏನೇ ಆಗ್ಲಿ ನೀನು ಮಾಡಿದ್ದು ತುಂಬ ತಪ್ಪು: ನನ್ನ ಬಿಟ್ಟು ಹೋಗೋಕೆ ನಿಂಗೆ ಮನಸ್ಸಾದ್ರೂ ಹ್ಯಾಗೆ ಬಂತು? ಅಂತ ಕೇಳಿದೆ. ಇನ್ನವಳಿಗೆ ನಾನು ಕೊಡಬಹುದಾದರೂ ಏನು? ಒಂದಿಷ್ಟು ಕಣ್ಣೀರು ಕೊಟ್ಟು ಬಂದೆ!'' ಪ್ರಾಮಾಣಿಕವಾಗಿ ವರದಿ ಒಪ್ಪಿಸಿದರು.

ಅಣ್ಣಯ್ಯನ ಸಾಂತ್ವನ, ಸಂತೈಕೆ ಬಹಳ ಹಿತಕಾರಿ. ಬಂಧು-ಬಾಧೆಗಳಿಂದ ಮನನೊಂದ ಗಳಿಗೆಗಳಲ್ಲಿ ಅವರಲ್ಲಿ ಅಳಲು ತೋಡಿಕೊಳ್ಳುತ್ತಿದ್ದೆ. ಸುಮ್ಮನೆ ಕೇಳುತ್ತಿದ್ದವರು ನನ್ನ ಮಾತೆಲ್ಲ ಮುಗಿದ ಮೇಲೆ ಶಾಂತವಾಗಿ ಹೇಳುತ್ತಿದ್ದರು – ''ಮರೀ, ನೀನೇನೋ ಒಂದು ಎತ್ತರದಲ್ಲಿದ್ದೀಯೆ. ಆ ಎತ್ತರವನ್ನೇ ಯೋಚನೆ ಮಾಡು. ಸಾಧ್ಯವಾದರೆ ಇನ್ನೂ ಮೇಲೇರುವ ಪ್ರಯತ್ನ ಮಾಡು. ಈ ಅಸೂಯೆ, ದ್ವೇಷ, ಭರ್ತ್ಸನೆ... ಇವೆಲ್ಲ ಜುಜುಬಿ! ಕೊಡವಿ ಬಿಡು.'' ಯೋಗ್ಯತೆಯಿಲ್ಲದವರು ಯೋಗ್ಯರನ್ನು ಹಿಮ್ಮೆಟ್ಟಿಸಿ ಮೆರೆಯುವುದನ್ನು ಕಂಡಾಗ ಅವರು ಹೇಳುತ್ತಿದ್ದುದು – ''ನೋಡು ಮರಿ, ತರಗೆಲೆ ಕೂಡ ಅದೃಷ್ಟ ಖುಲಾಯಿಸಿ ಗಾಳಿ ಬೀಸಿದಾಗ ಎದ್ದೆದ್ದು ಕುಣಿಯುತ್ತದೆ. ಆದರೆ ಎಷ್ಟು ಹೊತ್ತು ಅದರ ಹಾರಾಟ? ಮತ್ತೆಲ್ಲೋ ಬಿದ್ದು ನೆಲ ಸೇರುತ್ತದೆ. ಏನೋ ಆಗುತ್ತದೆ. ಆದರೆ ನೆಲಕ್ಕೇ ಅಂಟಿ ಕೂತ ಚಿನ್ನದ ಗಟ್ಟಿ ಹಾಗಲ್ಲ. ತನ್ನ ಹೊಳಪಿಗೆ ಮೌಲ್ಯಕ್ಕೆ ಅದು ಬೀಗುವುದಿಲ್ಲ. ಇದ್ದಲ್ಲೇ ಘನವಾಗಿ ಇದ್ದು ಕೊಳ್ಳುತ್ತದೆ. ಮೇಲೆದ್ದು ಕುಣಿಯಲಾರದೆಂದು ಚಿನ್ನದ ಬೆಲೆ ಕಡಿಮೆಯಾಗಬಹುದೆ?''

ಈಗ ಹೀಗೆಲ್ಲ ಹೇಳಲು ಅಣ್ಣಯ್ಯ ಇಲ್ಲವಲ್ಲ ಅಂತ ದುಃಖವಾಗುತ್ತದೆ. ನನ್ನ ಜತೆಜತೆಗೆ ಅವರು ಬರಲಾರರೆಂದು ಗೊತ್ತಿದ್ದರೂ ದುಃಖವಾಗುತ್ತದೆ! ಅಮ್ಮನ ಮುದ್ದುಮುಖ ಕಾಣೆಯಾಗಿ ಹದಿನಾರು ವರ್ಷ ಆಯ್ತು. ಅಣ್ಣಯ್ಯನ ಪುಣ್ಯ ಸ್ವರೂಪ ಕಣ್ಮರೆಯಾಗಿ ಆರು ವರ್ಷ ಕಳೆಯಿತು. ಆದರೂ ಇನ್ನಿಲ್ಲದ ಅವರ ಪ್ರೀತಿಗಾಗಿ ಮಗುವಿನಂತೆ ಹಲುಬುತ್ತದೆ ಮನಸ್ಸು. ಅವರಿಬ್ಬರನ್ನೂ ಕಳಕೊಂಡ ನೋವು ಈಗಷ್ಟೇ ಸಂಭವಿಸಿದಷ್ಟು ಹೊಸದಾಗಿ ಕಾಡುತ್ತದೆ. ಮಬ್ಬು ಕವಿಯುತ್ತದೆ ಮನಸ್ಸಿಗೆ.

ಇಂಥ ಸಂದರ್ಭಗಳಲ್ಲಿ ನೇರ ಮಾಳಿಗೆಗೆ ಹೋಗಿ ಆಕಾಶ ನೋಡುತ್ತಾ ಕೂತುಬಿಡುತ್ತೇನೆ. ಎಷ್ಟೊಂದು ನೀಳ ನೀಲ! ಅದೆಷ್ಟು ಅನಂತ! ಈ ಅನಂತತೆಯೇ ಅಲ್ಲವೇ ನಮ್ಮ ನಿತ್ಯ ಭರವಸೆ! ಮುದ್ದೆ ಮುದ್ದೆ ಮುಗಿಲ ಸಾಲಂತು ಪ್ರಕೃತಿ ಬರೆದ ಮನೋಹರ ಚಿತ್ರಗಳು. ಮುಗಿಲುಗಳಲ್ಲಿ ಕೃಷ್ಣನನ್ನು ಕಂಡರು, ರಾಧೆಯನ್ನು ಕಂಡರು ಕೆಎಸ್‌ನ. ಜರತಾರಿ ಸೆರಗು, ಕೆನ್ನೆ ಕೆಂಪಾದ ಹೆಣ್ಣು, ''ಇನ್ನೊಂದು ಮುತ್ತೆ''ನುವ ರಸಿಕತೆ, ಎಲ್ಲವನ್ನೂ ಕಂಡರು. ಮುಗಿಲುಗಳಲ್ಲಿ ನಮಗೆ ಬೇಕಾದ್ದನ್ನು ಕಾಣುವ ಪರಿಕಲ್ಪನೆ ನನಗೂ ಇಷ್ಟ. ವಿಶಾಲ ಮುಗಿಲ ರಾಶಿಯಲ್ಲಿ ಹಾಗೇ ತಡಕಾಡುತ್ತೇನೆ. ಎತ್ತರದ ನಿಲುವಿನ, ಬಿಳಿ ಹತ್ತಿಬಟ್ಟೆಗಳ ಅಣ್ಣಯ್ಯ ನನಗಲ್ಲಿ ಕಾಣುತ್ತಾರೆ. ಗಂಭೀರವಾಗಿ ಶತಪಥ ಹಾಕುತ್ತಾ, ಮುಂಗುರುಳು ಯಾವುದೋ ಕಾವ್ಯದ ಸಾಲುಗಳನ್ನು ಮನಸ್ಸಿನಲ್ಲೇ ಕಟ್ಟಿಕೊಳ್ಳುತ್ತಿದ್ದಾರೆ. ಅಲ್ಲೇ ಸ್ವಲ್ಪ ದೂರದಲ್ಲಿ ಬೆಚ್ಚಗೆ ಕೂತು ಅಮ್ಮ ಅಣ್ಣಯ್ಯನಿಗಾಗಿ ಬಿಸಿಬಿಸಿ ಕಾಫಿ ಮಾಡುತ್ತಿದ್ದಾಳೆ. ಕಷ್ಟಗಳ ನಡುವೆಯೂ ದೃಢತೆಯಿಂದ ಸುಳಿಯುವ ಮುದ್ದು ಮಂದಹಾಸ ಅವಳ ಮುಖದ ಮೇಲೆ ಹಾಗೇ ಕೂತಿದೆ. ಅಗೋ, ಅಲ್ಲೇ ಅಮ್ಮನ ಪಕ್ಕದಲ್ಲೇ ಇತ್ತೀಚೆಗಷ್ಟೇ ನನ್ನನ್ನಗಲಿ ಹೋದ ''ನನ್ನ ಪುಟ್ಟ ಪುರಂದರ ವಿಠಲ'' ಅಂತ ನಾನು ಅವುಚಿ ಅವುಚಿ ಮುದ್ದಿಸುತ್ತಿದ್ದ ನನ್ನ ಪುಟ್ಟ ಭೀಮಿ ಮೂತಿ ನೆಲಕ್ಕಂಟಿಸಿ ಮಲಗಿ ಅಮ್ಮನನ್ನೊಮ್ಮೆ ಅಣ್ಣಯ್ಯನನ್ನೊಮ್ಮೆ ಓರೆಗಣ್ಣಿಂದ ಗಮನಿಸುತ್ತಿದೆ. ಎಲ್ಲ ಸ್ತಬ್ಧವಾಗಿದೆ. ಎಲ್ಲೂ ಏನೂ ಸದ್ದಿಲ್ಲ. ಮೌನವನ್ನೇ ತುಂಬಿಕೊಂಡ ತಣ್ಣನೆಯ ಗಾಳಿಯೊಂದು ಹಿತವಾಗಲ್ಲಿ ಬೀಸುತ್ತಿದೆ. ಅಂಗಳದ ಮಾವಿನ ಹೂವಿನ ಒಗರು ಪರಿಮಳ ಆ ಗಾಳಿಯಲ್ಲಿ ಕಮ್ಮಗೆ ಬೆರೆತಿದೆ. ಅಮ್ಮ ಅಕ್ಕರೆಯಿಂದ ಅಣ್ಣಯ್ಯನ ಮೇಜಿನ ಮೇಲೆ ಹಾಕಿರುವ ''ಸಿರಿಗನ್ನಡಂ ಗೆಲ್ಗೆ'' ಮಧ್ಯದಲ್ಲಿರುವ ಮೇಟಿ ಕಸೂತಿ ಬಟ್ಟೆಯ ಇಳಿಬಿದ್ದ ಅಂಚುಗಳು ಈ ಮೆಲುಗಾಳಿಗೆ ಬಳುಬಳುಕಿ ಅಲುಗುತ್ತಿವೆ, ನಿಶ್ಶಬ್ದವಾಗಿ! ಮೂಲೆಯಲ್ಲಿನ ತೇಗದ ಸ್ಟ್ಯಾಂಡಿನ ಮೇಲಿರುವ ಪುಟ್ಟ ಮರ್ಫಿ ರೇಡಿಯೋ ಮಾತಾಡದೆ ಸುಮ್ಮನಿದೆ. ಅದು ಕೂಡ ಅಣ್ಣಯ್ಯನ ಕವಿ ಭಾವಗಳನ್ನು ಕಲಕ ಲೊಲ್ಲದು. ಆದರೆ, ಮಾತಾಡುವವರು ಸುಮ್ಮನಿದ್ದರೆ ಹೇಗೆ ಅಂತಲೋ ಏನೋ ರೇಡಿಯೋ ಮೇಲೆ ಮುದ್ದಾಗಿ ಕೂತಿರುವ ತಲೆ ಅಲುಗಿಸುವ ಬಣ್ಣದ ಗೊಂಬೆ ತನ್ನಷ್ಟಕ್ಕೆ ನಗುತ್ತಿದೆ. ಈ ಎಲ್ಲ ಆತ್ಮೀಯ ಚಿತ್ರಣಗಳನ್ನು ಚಂದ್ರ ಮೇಲಿನಿಂದ ಸಂತುಷ್ಟನಾಗಿ ಇಣುಇಣುಕಿ ನೋಡುತ್ತಿದ್ದಾನೆ: ತನ್ನದೇ ಬಿಳಿ ಬೆಳಕನ್ನು ಇವೆಲ್ಲದರ ಮೇಲೆ ಆಪ್ತವಾಗಿ ತುಂಬಿಸಿ ಬಿಡುತ್ತ!

ಈ ಭಾವ ಚಿತ್ರಗಳಲ್ಲಿ ನಾನು ಕಳೆದುಹೋಗುತ್ತೇನೆ.



**ಭಾರತೀ ಕಾಸರಗೋಡು**
೭೩೬, ೧೪ನೇ ಕ್ರಾಸ್, ಬಿ.ಇ.ಎಲ್. ಬಡಾವಣೆ (ಮೊದಲ ಹಂತ)
ಭಾರತ್ ನಗರ, ಮಾಗಡಿ ರಸ್ತೆ, ಬೆಂಗಳೂರು - ೫೬೦ ೦೯೧



# ಬಣ್ಣದ ನೆರಳು

ಏಕಾಏಕಿ ಇಪ್ಪತ್ತು ವರ್ಷಗಳ ನಂತರ ಆತ ಆಕಸ್ಮಿಕವಾಗಿ ಮೆಜೆಸ್ಟಿಕ್‌ನ ಜನದಟ್ಟಣೆಯ ನಡುವೆ ನನ್ನ ಗುರುತಿಡಿದು ಕೂಗಿದ್ದ. ತಕ್ಷಣ ಅವನ ನೆನಪು ಹೊಳೆಯಲಿಲ್ಲ. ಆಸಾಮಿ ಮಜಬೂತಾಗಿದ್ದ. ಮಧ್ಯಾಹ್ನದ ಉರಿಬಿಸಿಲು ಅವನ ಮೈ ತುಂಬ ಬೆವರು ಸುರಿಸುತ್ತಿತ್ತು. ಗತಕಾಲದ ಯಾವುದೋ ಮೂಲೆಯಲ್ಲಿ ಅವನ ಮುಖವನ್ನು ಕಂಡಂತಿತ್ತು. ನನ್ನನ್ನೇ ದಿಟ್ಟಿಸುತ್ತಾ ಕೈ ಹಿಡಿದುಕೊಂಡು, 'ಎಲ್ಲ ಮರೆತೇ ಹೋಗಿದೆಯಾ, ಎಷ್ಟು ವರ್ಸ ಆಯ್ತು ನಿನ್ನನ್ನು ನೋಡಿ... ನಾನಯ್ಯಾ ನಾಗೇಂದ್ರಾ. ನೆನಪಾಗಿಲ್ಲವಾ' ಎಂದು ವಿಲಕ್ಷಣವಾಗಿ ಬಾಯಗಲಿಸಿ ನಗಾಡಿದ. ಸಾಮಾನ್ಯವಾಗಿ ಹಳೆಯ ದೂರದ ಸ್ನೇಹಿತರ ಹೆಸರಾಗಲಿ ಅವರ ಚಹರೆಯಾಗಲಿ ಬಹಳ ದಿನಗಳ ತನಕ ನನ್ನ ನೆನಪಿನಲ್ಲಿ ಉಳಿದಿರುವುದಿಲ್ಲ. ಆದರೆ ಅವರ ಆಂಗಿಕ ಸಂಜ್ಞೆಗಳ ಜೊತೆಗೆ ಮಾತಿನ ಸದ್ದು ಯಾವತ್ತೂ ನೆನೆಪಿನಲ್ಲಿರುತ್ತವೆ. ಈಗಲೂ ಹಾಗೇ ಆಯಿತು. ನಾಗೇಂದ್ರನ ಸ್ವರೂಪ ಬದಲಾಗಿದ್ದರೂ ಅವನ ದನಿ ಹಾಗೇ ಇತ್ತು. ಬಿ.ಎ. ಓದುವಾಗ ಆತ ನನಗಿಂತ ಎರಡು ವರ್ಷ ಸೀನಿಯರ್. ಮಿಮಿಕ್ರಿಯಲ್ಲಿ ಆತ ಇಡೀ ಕಾಲೇಜಿಗೆ ಸುಪ್ರಸಿದ್ಧ. ಅವನ ನಿಜ ನಾಮವು ದೊಳ್ಳೇಗೌಡ ಎಂದಿತ್ತು. ತರಗತಿಯಲ್ಲಿ ಹಾಜರಾತಿಗೆ ಅವನ ಹೆಸರು ಕೂಗಿದ ಕೂಡಲೆ ಸೀನಿಯರ್ ಬಿ.ಎ. ಹಾಲ್‌ನ ತುಂಬ ನೆರೆದಿರುತ್ತಿದ್ದ ಲಾಂಗ್ವೇಜ್ ಕ್ಲಾಸಿನಲ್ಲಿ ನಿತ್ಯವೂ ನಗೆಯ ಅಲೆಯೊಂದು ಎದ್ದು ಎಲ್ಲರೂ ಅವನ ಕಡೆ ನೋಡಿ ಗುಸುಗುಸೆಂದು ಕೊಳ್ಳುತ್ತಿದ್ದರು. ಚೆಲುವೆಯ ದೇವತೆಯಂತಿದ್ದ ಕೊಡಗಿನ ಇಂಗ್ಲಿಷ್ ಅಧ್ಯಾಪಕಿ ಒಬ್ಬರು ಆತನ ಹೆಸರನ್ನು ಪ್ರತಿ ಬಾರಿಯೂ ವಿಚಿತ್ರವಾಗಿ ಉಚ್ಚರಿಸಿ ಎಲ್ಲರೂ ನಗುವಂತೆ ಮಾಡುತ್ತಿದ್ದರು. ಆದರಿಂದ ರೋಸಿಹೋಗಿದ್ದವನು ಒಂದು ದಿನ ನೋಟರಿ ಒಬ್ಬರನ್ನು ಹಿಡಿದು ನಾಗೇಂದ್ರ ಎಂದು ಮರು ನಾಮಾಂಕಿತನಾಗಿದ್ದ.

ಹಾಸ್ಟಲಲ್ಲಿ ನಮ್ಮದೇ ಒಂದು ದಂಡಿತ್ತು. ಎಲ್ಲ ಜಾತಿಯ ಜನರಿದ್ದ ಆ ಹಾಸ್ಟಲಲ್ಲಿ ಮಂಡ್ಯದ ಗೌಡರ ಹುಡುಗರದೇ ದರ್ಬಾರು ನಡೆಯುತ್ತಿತ್ತು. ಇವರ ತರಲೆಗಳ ವಿರುದ್ಧ ಪ್ರತಿಭಟಿಸಲು ಕೊಳ್ಳೆಗಾಲದ ಕಡೆಯ ದಲಿತ ವಿದ್ಯಾರ್ಥಿಗಳ ದಂಡು ಸದಾ ಎಚ್ಚರವಾಗಿತ್ತು. ಇವರಿಬ್ಬರ ಮಧ್ಯೆ ನಮ್ಮ ದಂಡು ಬೇರೆಯಾಗಿತ್ತು. ಜಾತಿ ಬಿಟ್ಟು ಭಾವಲೋಕದಲ್ಲಿ ಕನಸು ಕಾಣುವ ನಮ್ಮ ದಂಡಿನ ಬಗ್ಗೆ ಅಂತಹ ಗೌರವವೇನೂ ಇರಲಿಲ್ಲ. ನಾಗೇಂದ್ರ ನಮ್ಮ ದಂಡಿನ ಮುಂದಾಳಿನಂತಿದ್ದ. ಹಳ್ಳಿಯಿಂದ ಬಂದಿದ್ದ ನಾವೆಲ್ಲ ರಷ್ಯಾದ ಕ್ರಾಂತಿಯ ವೋಡ್ಕಾವನ್ನು ಕಲಿಸಿಕೊಂಡು ಕುಡಿದು ರಾಮಸ್ವಾಮಿ ಸರ್ಕಲ್ಲಿನಲ್ಲಿ ಮಧ್ಯರಾತ್ರಿ ತನಕ ಹರಟೆ ಹೊಡೆದು ಬ್ರಾಹ್ಮಣರ ಬೀದಿಗಳಲ್ಲಿ ಸುಮ್ಮನೆ ಅಲೆದು ಅಲ್ಲಿನ ಕೋಮಲೆಯರನ್ನು ಕಲ್ಪಿಸಿಕೊಂಡು, ಈ ಪ್ರಾಯದ ವೈದಿಕ ಕನ್ನೆಯರನ್ನೆಲ್ಲ ಹೊತ್ತುಕೊಂಡು ಹೋಗಿ ಲಗ್ನಮಾಡಿಕೊಂಡು ತಮ್ಮ ಹಳ್ಳಿಯ ಹೊಲಗದ್ದೆಗಳಲ್ಲಿ ದುಡಿಸಿ ಗ್ರಾಮ ಕ್ರಾಂತಿಯನ್ನೇ ಮಾಡಬೇಕೆಂದು ಹಗಲುಗನಸು ಕಂಡು ದಣಿಯುತ್ತಿದ್ದೆವು. ನಾಗೇಂದ್ರನಿಗೆ ಅಂತಹ ಕ್ರಾಂತಿಯ ಹುಚ್ಚಿರಲಿಲ್ಲ. ಗಾಂಧೀಜಿ ಅವನಿಗೆ ಬಹಳ ಪ್ರಿಯ. ಅಂತವನು ನಮ್ಮ ಜೊತೆ ವಿಚಿತ್ರವಾಗಿದ್ದ. ಅವನ ತಾಯಿ ಗಂಡ ಸತ್ತ ಮೇಲೆ ಒಂದೆರಡು ಎಮ್ಮೆ ಸಾಕಿಕೊಂಡು ಮಕ್ಕಳನ್ನು ಸಾಕುತ್ತ ಆಗಾಗ ಒಂದಿಷ್ಟು ದುಡ್ಡು ಕಳಿಸುತ್ತಿದ್ದಳು.

ಇಂಗ್ಲಿಷ್ ಸಿನಿಮಾಗಳನ್ನು ನೋಡುವುದೆಂದರೆ ನಾಗೇಂದ್ರನಿಗೆ ಅದೇನೋ ಆನಂದ. ಬ್ರೂಸ್ ಲಿಯ ಅಭಿಮಾನಿಯಾಗಿದ್ದಂತೆಯೇ ಚಾಪ್ಲಿನ್ ಬಗ್ಗೆ ಅಪಾರ ಗೌರವ ಇಟ್ಟುಕೊಂಡಿದ್ದ. ಆಗ ನಮಗೆಲ್ಲ ಕರಾಟೆ ಮತ್ತು ಯೋಗಾಸನ ಕಲಿಸಲು ನಾಗೇಂದ್ರ ವಿಫಲ ಪ್ರಯತ್ನ ಮಾಡುತ್ತಿದ್ದ. ಬ್ರೂಸ್ ಲಿಯನ್ನು ಅನುಕರಿಸಿ, ನಮ್ಮನ್ನೆಲ್ಲ ಹೊಡೆದುರುಳಿಸುವಂತೆ ಎಗರಾಡಿ ಕೂಗಾಡಿ ಸುಸ್ತಾಗಿ, ಆಮೇಲೆ ಕುಕ್ಕರಹಳ್ಳಿ ಕೆರೆದಂಡೆಯ ಕಲ್ಲು ಬೆಂಚಿನಲ್ಲಿ ಕುಳಿತು ಕತ್ತಲಾದ ಎಷ್ಟೋ ಹೊತ್ತಿನ ನಂತರ ಹಾಸ್ಟೆಲಿಗೆ ಬಂದು ಊಟ ಮುಗಿಸಿ ಒಥೆಲೊ ನಾಟಕವನ್ನು ಗಟ್ಟಿಯಾಗಿ ಓದುತ್ತಾ ಉರುಹೊಡೆಯಲು ಶತಪ್ರಯತ್ನ ಮಾಡುತ್ತಿದ್ದ.

ಇಪ್ಪತ್ತು ವರ್ಷಗಳ ಹಿಂದಿನ ನಾಗೇಂದ್ರನ ಸ್ವರೂಪಕ್ಕೂ ಇವತ್ತಿನ ದೇಹಸ್ಥಿತಿಗೂ ತುಂಬ ವ್ಯತ್ಯಾಸವಾಗಿತ್ತು. ಬದುಕಿನ ಭಿನ್ನ ದಾರಿಗಳಲ್ಲಿ ನಾಗೇಂದ್ರನ ಸಂಪರ್ಕವೇ ಕಡಿದುಹೋಗಿತ್ತು. ತಣ್ಣನೆಯ ರೆಸ್ಟೋರೆಂಟ್ ಒಂದರೊಳಗೆ ಕುಳಿತು ಚಹಾ ಕುಡಿಯುತ್ತ ಗತಕಾಲದ ನೆನಪುಗಳನ್ನು ಬಿಚ್ಚಿಕೊಳ್ಳುತ್ತಿದ್ದೆವು. ಮೈಸೂರಿನ ದಸರೆಯ ಪ್ರಯುಕ್ತ ಪ್ರದರ್ಶಿಸುತ್ತಿದ್ದ ಚಾಪ್ಲಿನ್‌ನ ಹಳೆಯ ಮೂವಿಗಳಿಗೆ ನಮ್ಮನ್ನು ಕರೆದುಕೊಂಡು ಹೋಗಿ ತಾನೇ ಟಿಕೆಟ್ ಖರೀದಿಸಿ ತೋರಿಸಿ ಸಂತೋಷಪಡುತ್ತಿದ್ದ. ಭಾನುವಾರಗಳಲ್ಲಿ ಅದೇ ಹಾಸ್ಟೆಲಿನ ಹರಟೆ ಕಟ್ಟೆಯಲ್ಲಿ ನಾಗೇಂದ್ರ ಚಾಪ್ಲಿನ್ ನಟನೆಯನ್ನು ಅದ್ಭುತವಾಗಿ ಅನುಕರಿಸಿ ಅಭಿನಯಿಸಿ ನಮ್ಮನ್ನೆಲ್ಲ ನಕ್ಕು ನಲಿಸಿ ಹೊಟ್ಟೆ ನೋವಾಗಿ ಇನ್ನು ಇವನ ಹಾಸ್ಯಾಭಿನಯವನ್ನು ನೋಡುತ್ತಿದ್ದರೆ ಉಸಿರು ಬಿಗಿಹಿಡಿದು ಸತ್ತೇಹೋಗುತ್ತೇವೆ ಎಂಬ ಹೆದರಿಕೆ ಬಂದು ಅವನಿಂದ ತಪ್ಪಿಸಿಕೊಳ್ಳುತ್ತಿದ್ದೆವು. ನಾಗೇಂದ್ರ ನೋಡುವುದಕ್ಕೆ ಚಾಪ್ಲಿನ್ ತರದಲ್ಲೇ ಕಾಣುತ್ತಿದ್ದ. ಒಂದೇ ವ್ಯತ್ಯಾಸವೆಂದರೆ ಈತ ಕಪ್ಪಗಿದ್ದ. ಸ್ವಲ್ಪ ಗಿಡ್ಡಗಿದ್ದ. ಹುಲುಸಾಗಿ ಬೆಳೆದಿದ್ದ ಗುಂಗುರು ಕೂದಲು ಅವನ ಹಣೆಯ ಮೇಲೆ ಲಾಸ್ಯವಾಡುತ್ತಿದ್ದವು. ಈಗ ನೋಡಿದರೆ, ನಾಗೇಂದ್ರನ ಹೊಟ್ಟೆ ದಪ್ಪವಾಗಿ ಹಣೆಯ ಮೇಲೆ ವಿಪರೀತ ನೆರಿಗೆಗಳು ಮೂಡಿದ್ದವು. ಪ್ರತಿದಿನವೂ ಸಾವಿರ ಬಸ್ಕಿ ಹೊಡೆದು ಕರಾಟೆ ಚಾಂಪಿಯನ್ ಆಗುವೆ ಎಂದು ಕನಸು ಕಾಣುತ್ತಿದ್ದ ನಾಗೇಂದ್ರ ಇವನೇ ಏನು ಎಂದುಕೊಳ್ಳುತ್ತ ಅವನ ಮುಖವನ್ನೇ ದಿಟ್ಟಿಸುತ್ತಿದ್ದೆ.

ಆಗ ಕಾಲೇಜಿನ ಯಾವ ರಸ ಸಂಜೆಯಲ್ಲೂ ನಾಗೇಂದ್ರನ ಮಿಮಿಕ್ರಿ ಇದ್ದೇ ಇರಬೇಕಿತ್ತು. ಹತ್ತಾರು ಪ್ರಶಸ್ತಿಗಳು ಅವನಿಗೆ ದಕ್ಕಿದ್ದವು. ಮಿಮಿಕ್ರಿಯಲ್ಲೇ ಸ್ವಂತಿಕೆ ತೋರಿ ಇಡೀ ಕಾಲೇಜೇ ಹೆಮ್ಮೆಪಡುವಂತೆ ಮಾಡುತ್ತಿದ್ದ ನಾಗೇಂದ್ರ ಇಂಗ್ಲಿಷ್‌ನಲ್ಲಿ ಪ್ರತಿ ಬಾರಿಯೂ ಡುಮ್ಕಿ ಹೊಡೆಯುತ್ತಿದ್ದ. ಆದರೂ ಆತ ನಮಗೆಲ್ಲ ಸೀನಿಯರ್ ಆಗಿದ್ದರಿಂದ ಇಂಗ್ಲಿಷ್ ಹೇಳಿಕೊಡುತ್ತಿದ್ದ. ಹೇಗೆ ಉತ್ತರ ಬರೆಯಬೇಕೆಂದು ಕನ್ನಡದಲ್ಲಿ ಹೇಳಿ ನಮ್ಮೊಳಗೆ ನಗೆ ಪಾಟಲಾಗುತ್ತಿದ್ದ. 'ಬಾಳೆಹಣ್ಣನ್ನು ಸುಲಿದುಕೊಟ್ರೂ ನೀವದನ್ನು ತಿನ್ನಲು ಕಷ್ಟ ಪಡ್ತೀರಲ್ರೋ' ಎಂದು ಹಂಗಿಸಿ, ತನಗೆ ತಾನೇ ಪಾಠ ಹೇಳಿಕೊಳ್ಳುವಂತೆ ಹಾವಭಾವಗಳಲ್ಲಿ ಓದಿ ಕೊಳ್ಳುತ್ತಿದ್ದ. ಪ್ರತಿ ಬಾರಿಯೂ ಪರೀಕ್ಷಾ ಕೊಠಡಿಯಲ್ಲಿ ಇಂಗ್ಲಿಷ್ ಪ್ರಶ್ನೆಪತ್ರಿಕೆಯ ಮುಂದೆ ಕರ್ಣನಂತೆ ಕುಳಿತು ಓದಿದ್ದೆಲ್ಲವೂ ನೆನಪಿಗೆ ಬರದೆ, ಒಂದಿಷ್ಟು ನೆನಪಾದರೂ ಬರೆಯಲು ಆಗದೆ ಉದ್ವೇಗದಿಂದ ಬೆವರಿ ಆತಂಕದಿಂದ ತಳಮಳಿಸಿ ಕೊನೆಗೆ ಏನನ್ನೂ ಬರೆಯಲಾಗದೆ ಏನನ್ನೋ ಗೀಚಿ ಉತ್ತರಪತ್ರಿಕೆ ಕೊಟ್ಟು ಸೋತು ಗಾಯಗೊಂಡ ಸೈನಿಕನಂತೆ ಬಂದು ಹಾಸ್ಟೆಲಿನ ರೂಮು ಸೇರಿ ಕುಗ್ಗಿಹೋಗುತ್ತಿದ್ದ.

ಆಮೇಲೆ ಇಪ್ಪತ್ತೈದಕ್ಕೂ ಎದ್ದು [illegible] ಮಾಡಿ [illegible] ಮುಗಿಯದಷ್ಟರ [illegible] ಬರೆದು ಕೊನೆಗೆ [illegible]



ಡಾ|| ಮೊಗಳ್ಳಿ ಗಣೇಶ್

ಹಾಕದೆ ತಾನೇ ಮತ್ತೆ ಮತ್ತೆ ಓದಿ ಹರಿದು ಬಿಸಾಡಿ, ಸಂಜೆ ವೇಳೆಗೆ ಅದೇ ತರಾವರಿ ಮಿಮಿಕ್ರಿ ಮಾಡಿ ನಮ್ಮನ್ನೆಲ್ಲ ನಗಿಸಿ ಸುಸ್ತು ಮಾಡಿ, ಮಂಗಳ ಗೀತೆ ಹಾಡುವಂತೆ ಯಾವತ್ತೂ ಕೂಡ 'ರಘುಪತಿ ರಾಘವ ರಾಜಾರಾಂ ಪತಿತ ಪಾವನ ಸೀತಾರಾಂ' ಹಾಡನ್ನು ಹೇಳಿ ಮುಗಿಸುತ್ತಿದ್ದ. ನಾಗೇಂದ್ರನ ತಾಯಿ ಮಗನ ಬಗ್ಗೆ ಅಪಾರ ಕನಸು ಕಂಡಿದ್ದಳು. ನಾಗೇಂದ್ರನ ತಮ್ಮ ಬಾಲ್ಯದಲ್ಲೇ ಊರು ಬಿಟ್ಟಿದ್ದ. ಇದ್ದೊಬ್ಬಳು ತಂಗಿ ಪೋಲಿಯೋದಿಂದಾಗಿ ಕುಂಟಿಯಾಗಿದ್ದಳು.

ಎಷ್ಟೋ ವರ್ಷದಿಂದ ಕಳೆದುಹೋಗಿದ್ದ ಆತ್ಮೀಯ ಲೋಕವನ್ನು ಯಾರಲ್ಲೂ ಹಂಚಿಕೊಳ್ಳಲು ನಾಗೇಂದ್ರನಿಗೆ ಆಗಿರಲಿಲ್ಲ. 'ಇವತ್ತು ನೀನು ನನ್ನ ಜೊತೆಯಲ್ಲೇ ಇರಬೇಕು. ನನ್ನ ಹೆಂಡತಿಗೆ ನಿನ್ನನ್ನು ಪರಿಚಯಿಸಬೇಕು. ನಿನ್ನ ಕತೆಗಳ ಫ್ಯಾನ್ ಆಕೆ. ನೀನು ಸಿಕ್ಕಿದ ಕೂಡಲೆ ನನಗೆ ಜೀವ ಬಂದಂತಾಯ್ತು. ಈ ಬಣ್ಣದ ಮಾಯಾಲೋಕದಲ್ಲಿ ನಾನು ಸತ್ತು ಎಷ್ಟೋ ವರ್ಷ ಆಗೋಯ್ತು. ಬಣ್ಣದ ನೆರಳು ನಾನು. ಒಂದೆರಡು ದಿನವಾದರೂ ನನ್ನ ಜೊತೆ ನೀನು ಇರಬೇಕು. ಪ್ಲೀಸ್, ನನಗೆ ಜೀವನದಲ್ಲಿ ಒಂದು ಪ್ರಾಮಿಸ್ ಬೇಕು. ವಿಶ್ವಾಸವೇ ಇಲ್ಲದ ಹೊತ್ತಿನಲ್ಲಿ ನನಗೆ ನೀನು ಸಿಕ್ಕಿದ್ದೀಯೆ. ನಂಜೊತೆಗೆ ಇವತ್ತು ಇರ್ಲೇ ಬೇಕು' ಎಂದು ಯಾವುದೋ ಆಸರೆಗಾಗಿ ವಿನಂತಿಸುವಂತೆ ಹಂಬಲಿಸುವುದನ್ನು ಕಂಡು ಸಂಕಟವಾಯಿತು. ನಾಗೇಂದ್ರನ ಜೊತೆ ಒಂದೆರಡು ದಿನ ಇರಲು ನಿರ್ಧರಿಸಿದೆ. ಜನರ ಗದ್ದಲದಿಂದ ದೂರ ಹೋಗಿ ಮಾತನಾಡುವಾ ಎಂದು ಕಬ್ಬನ್ ಪಾರ್ಕಿಗೆ ಬಂದು ಮರದ ಕೆಳಗೆ ಕುಳಿತೆವು. ನಮ್ಮ ಸ್ಮೃತಿಕೋಶದ ಒಳಗಿಂದ ಒಂದೊಂದು ಘಟನೆಗಳೂ ಹಕ್ಕಿಯಾಗಿ ಹಾರಿಹೋಗುತ್ತಿದ್ದವು. ನನ್ನ ಸಂಸಾರ, ವೃತ್ತಿ ಸಂಬಂಧ, ತರಲೆ ತಾಪತ್ರಯಗಳನ್ನೆಲ್ಲ ಹೇಳಿಕೊಳ್ಳುವುದಕ್ಕೂ ಬಿಡದೆ ನಾಗೇಂದ್ರನೇ ನಿರಂತರವಾಗಿ ಕಳೆದುಹೋದ ಮೋಹದ ನೆನಪುಗಳಲ್ಲಿ ತೇಲುತ್ತಿದ್ದ.

ಕೊನೆಗೂ ನಾಗೇಂದ್ರ ಬಿ.ಎ. ಪಾಸು ಮಾಡಲು ಆಗಿರಲಿಲ್ಲ. ಇಂಗ್ಲಿಷ್‌ನಲ್ಲಿ ಸತತವಾಗಿ ಫೇಲಾಗಿ ಈ ಓದಿನ ಸಹವಾಸವೇ ಬೇಡ ಎಂದು ಎಲ್ಲೆಲ್ಲೋ ಹೊಟ್ಟೆಪಾಡಿಗಾಗಿ ಅಲೆದು ಕೊನೆಗೆ ತನ್ನ ಸ್ವಭಾವಕ್ಕೆ ಪ್ರಿಯವಾಗಿದ್ದ ಗಾಂಧಿನಗರದ ಮಾಯಾ ಬಜಾರಿನ ಸಿನಿಮಾಗಳಲ್ಲಿ ಸಣ್ಣ ಪುಟ್ಟ ಕೆಲಸ ಗಿಟ್ಟಿಸಿಕೊಂಡಿದ್ದ. ಹೇಗಾದರೂ ಮಾಡಿ ಸಿನಿಮಾ ನಟನಾಗಿ ಚಾಪ್ಲಿನ್ ತರದಲ್ಲೇ ಎಲ್ಲರನ್ನೂ ನಕ್ಕು ನಲಿಸಿ ಜೀವನಕ್ಕೊಂದು ದಾರಿ ಮಾಡಿಕೊಳ್ಳಬೇಕೆಂದು ಹತ್ತಾರು ನಿರ್ದೇಶಕರ ಮುಂದೆ ಮಂಡಿಯೂರಿ ಬೇಡಿ ಕಣ್ಣೀರಿಟ್ಟಿದ್ದರೂ ಯಾರೂ ಕರಗಿರಲಿಲ್ಲ. ಇಂತವನನ್ನು ಸಿನಿಮಾಗೆ ಹಾಕಿಕೊಂಡರೆ ಮೂರು ಕಾಸೂ ಗಿಟ್ಟುವುದಿಲ್ಲ ಎಂದು ನಯವಾಗಿ ಸಾಗಹಾಕಿದ್ದರು. ದೊಡ್ಡ ನಟರ ಕಾಲು ಹಿಡಿದು ಬೇಡಿ ಎಂತದಾದರೂ ಒಂದು ರೋಲ್ ಕೊಡಿಸಿರಣ್ಣಾ ಎಂದು ಗೋಗರೆದರೂ ಪ್ರಯೋಜನವಾಗಿರಲಿಲ್ಲ. ಕೆಲವರು ಬೇಕೆಂತಲೆ ನಾಗೇಂದ್ರನ ನಟನೆಯ ಬಗ್ಗೆ ಸಂದರ್ಶನ ಮಾಡಿ ಮಜಾ ತೆಗೆದುಕೊಂಡು ವರ್ಷವೆಲ್ಲ ಪಾದಪೂಜೆ ಮಾಡಿಸಿಕೊಂಡಿದ್ದರು. ಅಂತಹ ದಿನಗಳಲ್ಲಿ ಮೇರುನಟರ ಬ್ಯಾನರ್ ಕಟ್ಟುವ ಕೆಲಸವನ್ನು ಮಾಡುತ್ತ, ಗಾಂಧಿನಗರದ ಗಲ್ಲಿಗಳಲ್ಲೆ ಮಲಗಿ ಚಾಪ್ಲಿನ್‌ನ ಕನಸು ಕಂಡು ತನ್ನನ್ನು ತಾನೆ ಹಳಿದುಕೊಳ್ಳುತ್ತಿದ್ದ.

ಇಂತಹ ದಿನಗಳಲ್ಲೆ ಕಮಲ ನಾಗೇಂದ್ರನಿಗೆ ಆಪ್ತವಾದದ್ದು. ಸಿನಿಮಾ ಶೂಟಿಂಗ್‌ನಲ್ಲಿ ಆಕೆ ನಾಗೇಂದ್ರನ ಮನಸೆಳೆದಿದ್ದಳು. ತಾನಿನ್ನು ನಟನಾಗುವುದು ಸಾಧ್ಯವಿಲ್ಲ ಎಂದು ಮನವರಿಕೆಯಾದ ಮೇಲೆ ನಾಗೇಂದ್ರ ಸಿನಿಮಾ ಕಂಪನಿ ಒಂದರಲ್ಲಿ ನೆಲೆ ನಿಂತಿದ್ದನಾದರೂ ಆ ಸಂಸ್ಥೆ ಯಾವತ್ತಾದರೂ ಅವನನ್ನು ಹೊರಗಿಡಬಹುದಿತ್ತು. ಶೂಟಿಂಗ್‌ಗಳಲ್ಲಿ ನಾಗೇಂದ್ರ ಬಹಳ ಚೆನ್ನಾಗಿ ಕೆಲಸ ಮಾಡುತ್ತಿದ್ದ. ಕಿರಿಯ ನಟರಿಗೆ ಹೇಗೆ 'ಆ್ಯಕ್ಷನ್' ಮಾಡಬೇಕೆಂದು ವಿನಯದಿಂದ ಹೇಳಿಕೊಡುತ್ತಿದ್ದ. ಅವರು ಸುಮ್ಮನೆ ಉಸಿನಗೆ ಬೀರಿ ಅವನ ನಟನೆಯನ್ನು ಉಪೇಕ್ಷಿಸುತ್ತಿದ್ದರು. ಅನೇಕ ವೇಳೆ ಡೈರೆಕ್ಟರ್‌ಗಳು ಅವನ ಇಂತಹ ಸಲಹೆಯನ್ನು ಕಂಡು ಶೂಟಿಂಗ್ ಯೂನಿಟ್‌ನಿಂದಲೇ ಹೊರಗೆ ಹಾಕಿದ್ದಿದೆ. ದೊಡ್ಡ ನಟನಟಿಯರ ಮುಂದೆ ವಿನಮ್ರವಾಗಿ ಕೈಕಟ್ಟಿಕೊಂಡು ನಿಂತು ಅವರ ಸೇವೆ ಮಾಡುತ್ತ ತನಗೆ ಇಷ್ಟವಿಲ್ಲದಿದ್ದರೂ 'ಅದ್ಭುತವಾಗಿ ನಟಿಸಿದಿರಿ' ಎಂದು ಸುಮ್ಮನೆ ಹೊಗಳುತ್ತ ಅವರು ಹೇಳಿದ್ದನ್ನು ಪಾಲಿಸಲು ಸಜ್ಜಾಗಿರುತ್ತಿದ್ದ. ಕಮಲ ಗುಂಪು ಪಾತ್ರಗಳಲ್ಲಿ ನಟಿಸುತ್ತಿದ್ದಳು. ಕುಣಿಯುವ ದೃಶ್ಯಗಳಲ್ಲೇ ಅವಳಿಗೆ ಒಂದು ಕ್ಷಣದ ಅವಕಾಶ ಸಿಗುತ್ತಿದ್ದುದು. ದಿನಗೂಲಿಯೆ ಅವಳ ಸಂಭಾವನೆಯಾಗಿತ್ತು. ಅಂತವಳ ಜೊತೆ ಪ್ರೇಮ ಕಾಮ ಉಂಟಾಗಿ ನಾಗೇಂದ್ರ ಸರಳ ವಿವಾಹ ಮಾಡಿಕೊಂಡು ಯಾವುದೋ ಕೊಂಪೆಯೊಂದರಲ್ಲಿ ವಾಸವಾಗಿದ್ದ. ತನ್ನ ಮಗ ಸರಿಯಾಗಿ ಓದದೆ ನಾಟಕ ಆಡಿಕೊಂಡು ಸಿನಿಮಾದ ಹುಚ್ಚಿಗೆ ಬಿದ್ದು ಯಾವೊಳನ್ನೊ ಕಟ್ಟಿಕೊಂಡು ಹೆತ್ತ ತಾಯ ಒಡಲಿಗೆ ಬೆಂಕಿ ಇಕ್ಕಿ ಹೊರಟುಹೋದ ಎಂದು ಮಗನ ಮೋಹವನ್ನು ಕಳೆದುಕೊಂಡಿದ್ದಳು.

ಆಗ 'ಗಾಂಧಿ' ಸಿನಿಮಾ ನೋಡಿಬಂದಿದ್ದ ನಾವು ನಾಗೇಂದ್ರನ ಅಸಹನೆಯನ್ನು ಕಂಡು ಸಿಟ್ಟಾಗಿದ್ದೆವು. ಆ ಬೆನ್ ಕಿಂಗ್‌ಸ್ಲೆ ಗಾಂಧಿ ಪಾತ್ರವನ್ನು ತೀರ ಕೆಟ್ಟದಾಗಿ ನಟಿಸಿ ಗಾಂಧಿಯ

ವ್ಯಕ್ತಿತ್ವದ ಬಗ್ಗೆ ನನಗಿರುವ ನಂಬಿಕೆಯ ಹತ್ಯೆ ಮಾಡಿರುವನೆಂದು ವಾಚಕರ ವಾಣಿಗೆಲ್ಲ ಪತ್ರ ಬರೆದು ಅವು ಪ್ರಕಟವಾಗದೆ ನಿರಾಶನಾಗಿದ್ದ. ಒಂದು ವೇಳೆ ತನಗೇನಾದರೂ ಗಾಂಧಿ ಸಿನಿಮಾದಲ್ಲಿ ಆ ಪಾತ್ರವನ್ನು ನಟಿಸಲು ಅವಕಾಶ ಸಿಕ್ಕಿದ್ದಿದ್ದರೆ ಇಡೀ ಜಗತ್ತಿಗೇ ಗಾಂಧಿ ಎಂದರೆ ಏನೆಂದು ತೋರಿಸಿಬಿಡುತ್ತಿದ್ದೆ ಎಂದು ತುಂಬ ಉಮ್ಮಸ್ಸಿನಲ್ಲಿ ಹೇಳುತ್ತಿದ್ದ. ಎಲ್ಲಿಯ ಗಾಂಧಿ, ಎಲ್ಲಿಯ ಚಾಪ್ಲಿನ್, ಎಲ್ಲಿಯ ನಾಗೇಂದ್ರ ಎಂದು ಅವನ ಕಣ್ಣಿನ ಆಳಕ್ಕೆ ಇಳಿಯಲು ನೋಡುತ್ತಿದ್ದೆ. ಅವನೊಳಗಿನ ಕನಸುಗಳು ಮಸುಕಾಗಿ ಯಾವ ಆಕಾರಕ್ಕೂ ಸಿಗದೆ ಗೋಜಲಾಗಿ ಕಾಣಿಸುತ್ತಿದ್ದವು. ಕಾಲೇಜಿನಲ್ಲಿ ಒಥೆಲೊ ಏಕಪಾತ್ರಾಭಿನಯವನ್ನು ಅಭಿನಯಿಸಿದ್ದನ್ನು ನಾವ್ಯಾರೂ ಮರೆಯಲು ಸಾಧ್ಯವಿರಲಿಲ್ಲ. ನಮ್ಮ ನಡುವೆ ಇದ್ದೊಬ್ಬ ತರಲೆಯು ನಾಗೇಂದ್ರನಿಗೆ ರೈಲು ಹತ್ತಿಸಿ ನಗೆಪಾಟಲು ಮಾಡಿ ನೀನು ಈ ಬಾರಿ ಮಿಮಿಕ್ರಿ ಬಿಟ್ಟು ಏಕಪಾತ್ರಾಭಿನಯವನ್ನು ಮಾಡುವುದು ಒಳ್ಳೆಯದೆಂದು ಪ್ರೇರೇಪಿಸಿದ್ದ. ನಾಗೇಂದ್ರ ಅದನ್ನು ಸವಾಲಾಗಿ ಸ್ವೀಕರಿಸಿ ಕುಕ್ಕರಹಳ್ಳಿ ಕೆರೆಯ ತೋಪಿನಲ್ಲಿ ಒಬ್ಬನೇ ತಾಲೀಮು ನಡೆಸಿ ಕಾರ್ಯಕ್ರಮದಲ್ಲಿ ಅಭಿನಯಿಸಿ ನಮ್ಮೆಲ್ಲರನ್ನು ಮೂಕವಿಸ್ಮಿತರನ್ನಾಗಿಸಿದ್ದ. ಅಂತರ ಕಾಲೇಜಿನ ಎಲ್ಲ ಸ್ಪರ್ಧಿಗಳು ನಾಗೇಂದ್ರನ ಅಭಿನಯದ ಮುಂದೆ ಬಿದ್ದುಹೋಗಿದ್ದರು. ಸಾಂಸ್ಕೃತಿಕ ಸಂಜೆಯ ಸಮಾರೋಪದಲ್ಲಿ ನಾಗೇಂದ್ರನ ಏಕಪಾತ್ರಾಭಿನಯವನ್ನು ವಿಶೇಷವಾಗಿ ಇಟ್ಟುಕೊಳ್ಳಲಾಗಿತ್ತು. ಅಂತಹ ದಿವ್ಯ ನಟನೆಯ ಸಂಜೆಯನ್ನು ನಾನೆಂದೆಂದಿಗೂ ಮರೆಯಲು ಸಾಧ್ಯವಿಲ್ಲ. ಮಹಾರಾಜ ಕಾಲೇಜಿನ ಹಳೆಯ ಪ್ರೊಫೆಸರ್‌ಗಳೆಲ್ಲ ಆ ದಿನ ನೆರೆದಿದ್ದರು. ಇಂಗ್ಲಿಷ್ ಪ್ರಾಧ್ಯಾಪನೆಯ ದಂತಕತೆಯಾಗಿದ್ದ ಪ್ರಖ್ಯಾತ ಸಿ.ಡಿ.ಎನ್. ಅವರೇ ಸಮಾರೋಪ ಸಂಜೆಯ ಮುಖ್ಯ ಅತಿಥಿಯಾಗಿದ್ದರು. ನಾಗೇಂದ್ರನ ಅಭಿನಯಕ್ಕಾಗಿ ನಾವೆಲ್ಲ ತುದಿಗಾಲಲ್ಲಿ ನಿಂತು ಆತಂಕ, ಸಂಭ್ರಮ, ಉದ್ವೇಗಗಳಿಂದ ಕಿಕ್ಕಿರಿದ ಸಭೆಯಲ್ಲಿ ಜಾಗವಿಲ್ಲದೆ ಬಾಗಿಲಲ್ಲಿ ನಿಂತು ಕಾಯುತ್ತಿದ್ದೆವು. ಕೊನೆಯ ಸರದಿಯಲ್ಲಿ ನಾಗೇಂದ್ರ ವೇದಿಕೆಯ ಮೇಲೆ ಕಾಣಿಸಿಕೊಂಡ. ಬಣ್ಣದ ಮಾಯಾಲೋಕವೆಂದರೆ ಅವನಿಗೆ ಕನಸಿನ ಹುಚ್ಚು ಹೊಳೆ. ಜಗಮಗಿಸುವ ರಂಗ ಮಂದಿರವನ್ನೆಲ್ಲ ತಾನೇ ಆವರಿಸಿ ಕೊಂಡು, ತಾನೆಂದೂ ನೋಡಿರದಿದ್ದ ಒಥೆಲೋನನ್ನು ತನ್ನೊಳಗೆಯೇ ಸೃಷ್ಟಿಸಿಕೊಂಡೋ ಅಥವಾ ಥೇಟ್ ತಾನೇ ಆ ಒಥೆಲೊ ಆಗಿಯೊ ಮಾಯಾಮಯ ನಟನೆಯನ್ನೇ ಇಡೀ ಪ್ರೇಕ್ಷಕರ ಮೇಲೆ ಮಳೆಯಂತೆ ಸುರಿಸಿ ಕಂಪನವನ್ನುಂಟುಮಾಡಿದ್ದ. ಒಥೆಲೋನ ದುರಂತ ಪ್ರೇಮಕಥಾನಕವನ್ನು ಅವನದೇ ಮಾತುಗಳಿಂದ ನಟಿಸುತ್ತ ಪ್ರೇಮದ ದುರಂತ ಆಕ್ರಂದನವನ್ನು ಮೊಳಗಿಸುತ್ತಿದ್ದಂತೆಯೇ ಅವತ್ತು ಇಡೀ ಸಭಾಂಗಣ ಗಾಢವಾದ ನಿಶ್ಯಬ್ದತೆಯಲ್ಲಿ ಲೀನವಾಗಿ ಕಂಬನಿ ಮಿಡಿದಂತಾಗಿತ್ತು. ಅದರಲ್ಲೂ ಡೆಸ್ಡಿಮೋನಾಳನ್ನು ತನ್ನ ಕೈಯಾರೆ ಕೊಲ್ಲಬೇಕಾದ ದೃಶ್ಯವನ್ನು ಅಭಿನಯಿಸುವಾಗ ನಾವೆಲ್ಲ ಕರಗಿ ಗಂಟಲು ಬಿಗಿದು ಕೊಂಡಿತ್ತು. ನಾಗೇಂದ್ರ ಅಭಿನಯಿಸಿದ್ದನೋ ಆ ದುರಂತವನ್ನು ಅನುಭಾವಿಸಿದ್ದನೋ ಎಂಬುದೆ ಗೊತ್ತಾಗಲಿಲ್ಲ. ಪ್ರೇಕ್ಷಾಂಗಣ ಕಿವಿಗಡಚಿಕ್ಕುವಂತೆ ಕರತಾಡನ ಮಾಡಿ ಶಿಳ್ಳೆಹಾಕಿ ಕೂಗುತ್ತಿತ್ತು. ಮುಖ್ಯ ಅತಿಥಿಯಾಗಿದ್ದ ಪ್ರೊ॥ ಸಿ. ಡಿ.ಎನ್. ಅವರೇ ಖುದ್ದಾಗಿ ಎದ್ದು ಹೋಗಿ ನಾಗೇಂದ್ರನ ಬಾಚಿ ತಬ್ಬಿಕೊಂಡು ಕೊಂಡಾಡಿದ್ದರು.



ಅಂತಹ ನಾಗೇಂದ್ರ ನನ್ನೆದುರು ಈಗ ಯಾವುದೋ ಪಾನ್ ಪರಾಗನ್ನು ದವಡೆಗೆ ಒತ್ತರಿಸಿಕೊಂಡು ಗಾಂಧಿನಗರದ ಸಿನಿಮಾ ಜನಗಳ ಬಗ್ಗೆ ರಂಗುರಂಗಾಗಿ ಏನೇನನ್ನೊ ಹೇಳುತ್ತಾ ಕೂತಿದ್ದ. ಒಂದು ವೇಳೆ ಅದೇ ಒಥೆಲೊ ನಾಟಕವನ್ನು ಕನ್ನಡದಲ್ಲೇ ಪರೀಕ್ಷೆಗೆ ಬರೆಯಬಹುದು ಎಂದಿದ್ದರೆ ನಾಗೇಂದ್ರ ರ‍್ಯಾಂಕು ಬರುತ್ತಿದ್ದನೇನೊ. ಇಡೀ ಕಾಲೇಜಿನ ಸಿಬ್ಬಂದಿ ಅವತ್ತು ನಾಗೇಂದ್ರನನ್ನು ಹೊಗಳಿತ್ತು. ತನಗೇನೂ ಗೊತ್ತೇ ಇಲ್ಲ ಎಂಬಂತೆ ಮರುದಿನ ಕಾಲೇಜಿನ ಲೈಬ್ರರಿಯ ರ‍್ಯಾಕುಗಳ ಸಂದಿಯ ನಸುಗತ್ತಲಲ್ಲಿ ದೂಳು ಕಸಗಳ ನಡುವೆ ಹಸಿದ ಮೋರೆಯಲ್ಲಿ ಯಾವುದೋ ಹಪಾಹಪಿತನದಲ್ಲಿ ಕನ್ನಡಕ್ಕೆ ಅನುವಾದ ಗೊಂಡಿದ್ದ ಒಥೆಲೊ ನಾಟಕವನ್ನು ತಲ್ಲೀನತೆಯಲ್ಲಿ ಓದುತ್ತಿದ್ದ. ನಾಗೇಂದ್ರನಿಗೆ ಅವತ್ತಿನ ಆ ಕ್ಷಣಗಳನ್ನು ನೆನಪಿಸಿದೆ. ಆತ ಆಕಾಶದಲ್ಲಾರಾಡುವ ರಣಹದ್ದುಗಳನ್ನು ಎಣಿಸುತ್ತಾ ಹೀಗೇ ಎಲ್ಲ ಕಾಲ ಕಳೆದುಹೋಗ್ತಾ ಇದೆ ಎನ್ನುತ್ತ ಮಾತು ಬದಲಿಸಿದ್ದ.

ಸೂರ್ಯ ದಿಗಂತದ ಕಡೆ ಜಾರುತ್ತಿದ್ದ. ಬೇಗ ಮನೆಗೆ ಹೋಗಿ ಮನೆಯಲ್ಲೇ ಗುಂಡು ಹಾಕೋಣ ಎಂದ. ಬೇಡವೆಂದರೂ ಕೇಳಲಿಲ್ಲ. ಸಂಸಾರದ ಒಳಗೆ ಕುಡಿಯುವುದು ನನಗೆ ತೀರ ಮುಜುಗರವೆಂದೆ. ಅವೆಲ್ಲ ನಡೆಯೋದಿಲ್ಲ ಸುಮ್ಮನಿರೆಂದು ಒಪ್ಪಿಸಿದ. ದಾರಿಯಲ್ಲೆ ವಿಸ್ಕಿ ಖರೀದಿಸಿ ಚಿಕನ್ ಕೊಂಡುಕೊಂಡ. ಮನೆಗೆ ಬಂದೆವು. ಚಿಕ್ಕ ಮನೆ. ಆದರೂ ಚೊಕ್ಕವಾಗಿತ್ತು. ನಾಗೇಂದ್ರ ತನ್ನ ಹೆಂಡತಿಯನ್ನು ಪರಿಚಯಿಸಿದ. ಇನ್ನೂ ಪ್ರಾಯದವಳೇ. ನಿಮ್ಮ ಕತೆಗಳನ್ನು ಓದಿದ್ದೇನೆ ಎಂದು ವಿಶ್ವಾಸ ತೋರಿದಳು. ಕೈಕಾಲು ಮುಖ ತೊಳೆದು ಕೊಂಡು ಆಕೆ ಕೊಟ್ಟ ಲುಂಗಿಯನ್ನು ಸುತ್ತಿಕೊಂಡೆ. ನಾಗೇಂದ್ರ ಸಂಭ್ರಮಿಸುತ್ತಿದ್ದ. ನನ್ನ ಬಗ್ಗೆ ಸಾಕಷ್ಟು ಹೇಳಿದ್ದಾನೆಂಬುದು ಎದ್ದು ಕಾಣುತ್ತಿತ್ತು. ಇಷ್ಟು ವರ್ಷಗಳ ಕಾಲ ನನ್ನನ್ನು ಮರೆಯಲ್ಲೇ ಇಷ್ಟೊಂದು ಪ್ರೀತಿಸಿದ್ದಾನಲ್ಲಾ ಎಂದು ವಿಚಿತ್ರವೆನಿಸಿತು. ಕಮಲ ಅಡುಗೆ ಮಾಡಲು ಸಿದ್ಧತೆ ಮಾಡಿಕೊಳ್ಳುತ್ತಿದ್ದಳು. ಕತ್ತಲು ಮೆಲ್ಲಗೆ ಹೊರಗೆ ಬೀದಿಗಳಲ್ಲಿ ಓಡಾಡುತ್ತಿತ್ತು. ಗ್ಲಾಸಿಗೆ ವಿಸ್ಕಿ ಸುರಿದು ನಾಗೇಂದ್ರ ನನ್ನ ಮುಖವನ್ನೊಮ್ಮೆ ದಿಟ್ಟಿಸಿ, ಸಂಕೋಚ ಮಾಡಿಕೋಬೇಡ ಎಂದು ಚಿಯರ್ಸ್ ಹೇಳಿದ.

ನಾಗೇಂದ್ರ ತನ್ನ ತಾಯಿಯ ಕಠಿಣ ನಿಲುವಿನ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಿದ್ದ. ಮಗ ದೊಡ್ಡ ಸಾಹೇಬನಾಗಬೇಕೆಂಬುದು ಆತನ ತಾಯಿಯ ಕನಸಾಗಿತ್ತು. ಯಾವುದೋ ಜಾತಿಯವಳನ್ನು ಕಟ್ಟಿಕೊಂಡು ತನಗೆ ದ್ರೋಹ ಬಗೆದ ಮಗನ ಮುಖ ನೋಡುವುದಿಲ್ಲವೆಂದು ಆಕೆ ಶಪಥ ಮಾಡಿದ್ದಳು. ನಾಗೇಂದ್ರನ ಹೆಂಡತಿ ಮಾಂಸ ಬೇಯಿಸಲು ಒಗ್ಗರಣೆ ಹಾಕುತ್ತಿದ್ದಳು. ಬೆಚ್ಚನೆಯ ಅಮಲು ನೆತ್ತಿಯಲ್ಲಿ ಸೆಡೆ ಬಿಚ್ಚುತ್ತಿತ್ತು. ತನಗೊಬ್ಬ ಮಗನಿರುವುದಾಗಿ ನಾಗೇಂದ್ರ ಪಾರ್ಕಿನಲ್ಲಿ ಆ ಬಗ್ಗೆ ಏನನ್ನೋ ಹೇಳಲು ತೊಡಗಿ ಹಿಂಜರಿದಿದ್ದ. ನಿರ್ದಯವಾದ ಕಾಲ ನಮ್ಮ ನಡುವೆ ಅಡ್ಡಾಡುತ್ತಿತ್ತು. ಆಗೀಗ ಕಮಲಳ ಮುಖ ನಮ್ಮ ಕೊಠಡಿಯ ಕಡೆ ಇಣುಕು ಹಾಕಿ ಮರೆಯಾಗುತ್ತಿತ್ತು. ತಾನೊಬ್ಬ ನಟನಾಗದಿದ್ದರೂ ಚಿಂತೆಯಿಲ್ಲ; ನಿರ್ದೇಶಕನಾಗಿಯಾದರೂ ಮೇಲೆ ಬರ ಬೇಕೆಂದು ಎಷ್ಟೆಲ್ಲ ಯತ್ನಿಸಿದರೂ ಸಾಸಿವೆ ಕಾಳಿನ ಫಲವೂ ಸಿಗದೆ, ಕೊನೆಗೆ ರಮಾರಮಿ ಫೈಟಿಂಗ್ ದೃಶ್ಯಗಳ ಸ್ಟಂಟರ್ ಆಗಿ ಗಮನ ಸೆಳೆದಿದ್ದ. ಹಾಗೊಮ್ಮೆ ಹೊಡೆದಾಟದ ಸಾಹಸ ದೃಶ್ಯದಲ್ಲಿ ಎತ್ತರದಿಂದ ಜಾರಿಬಿದ್ದು ಸೊಂಟ ಮುರಿದುಕೊಂಡು ಅವನ ಜೀವನದ ಚಕ್ರವೇ ಮುರಿದು ಬಿದ್ದಿತ್ತು. ಬೆಂದ ಮಾಂಸದ ಗಮಲು ಸುತ್ತಿಕೊಳ್ಳುತ್ತಿತ್ತು. ನೀರು ತರಲು ಕಮಲಳನ್ನು ನಾಗೇಂದ್ರ ಕರೆದ. ಆಕೆ ಒಯ್ಯಾರದಲ್ಲಿ ಬಂದು ನೀರಿಟ್ಟು ನನ್ನ ಮುಖ ನೋಡಿ ನಗಾಡಿದಳು. ‘ನೀನು ಇರೋದ್ರಿಂದ ಈಕೆ ಬಯ್ತಾ ಇಲ್ಲಪ್ಪಾ. ಇಲ್ಲದಿದ್ರೆ ಇಷ್ಟು ಹೊತ್ತಿಗೆ ಬಂಬಡಾ ಬಜಾಯ್ಸಿ ಬಿಡ್ತಿದ್ದಳು’ ಎಂದು ನಾಗೇಂದ್ರ ಆಕೆಯನ್ನು ರೇಗಿಸಿದ. ‘ಹೂಂ ಹಾಗೇನಿಲ್ಲ. ನಾನಿದ್ದೀನಿ ಅನ್ನೋದ್ನೆ ಮರ್ತು ಇವುರು ಯಾವ್ಯಾವಾಗ್ಲೊ ಬರ್ತಾರೆ. ನಾನೊಬ್ಳು ಒಂಟಿ ಎಂಗ್ಸು ಹೆಂಗಿರಬೇಕು ಹೇಳಿ’ ಎಂದು ನನ್ನನ್ನೇ ದಿಟ್ಟಿಸಿ ಕೇಳಿದಳು. ನನ್ನ ಅಮಲಿನ ಕಣ್ಣುಗಳು ಅವಳನ್ನು ಗಾಢವಾಗಿ ಅಳೆದು ಮನಸ್ಸಿಗೆ ತುಂಬಿಕೊಂಡವು.

ನಾಗೇಂದ್ರ ಮತ್ತದೆ ಮಾಯಾಬಜಾರಿನ ಭ್ರಮೆಗಳ ಬಗ್ಗೆ ಹೇಳುತ್ತಿದ್ದ. ಇತ್ತೀಚೆಗೆ ನಾಗೇಂದ್ರನಿಗೆ ಒಂದಿಷ್ಟು ಬಡ್ತಿ ಸಿಕ್ಕಿತ್ತು. ಹಾಸ್ಯ ದೃಶ್ಯಗಳಿಗೆ ಬೇಕಾದ ಉಪ ಘಟನೆಗಳನ್ನು ನಾಗೇಂದ್ರನಿಂದ ಬರೆಸಿಕೊಳ್ಳುವುದಿತ್ತು. ಹಾಸ್ಯಚಿತ್ರವೊಂದರ ಶೂಟಿಂಗ್‌ನಲ್ಲಿ ತನಗೆ ಒಂದು ಒಳ್ಳೆಯ ಅವಕಾಶ ಸಿಕ್ಕಿದೆ ಎಂದು ಹೆಮ್ಮೆ ಪಡುತ್ತ ಅಮಲಿನಿಂದ ವಾಲಾಡುತ್ತಿದ್ದ. ‘ಇವರಿಗೆ ಆ ಸಿನಿಮಾ ಜಗತ್ತೊಂದನ್ನು ಬಿಟ್ಟರೆ ಮತ್ತೇನೂ ಬೇಕಿಲ್ಲ ಅನ್ಸುತ್ತೆ. ನೀವು ಸಿಕ್ಕಿದ್ದೀರಿ ಅಂತ ಇಷ್ಟೊತ್ತು ನಿಮ್ಮ ಜೊತೆಯಲ್ಲಿ ಇದ್ದಾರೆ. ಇಲ್ಲಾ ಅಂದ್ರೆ ಒಂದು ಕಡೆ ಒಂದಷ್ಟು ಹೊತ್ತು ಕುಳಿತಿರೋದೆ ಇಲ್ಲ’ ಎಂದು ಕಮಲ ಆರೋಪಿಸುತ್ತ ಘಮ್ಮೆನ್ನುವ ಚಿಕನ್ ಫ್ರೈ ತಂದಿಟ್ಟಳು. ‘ನಿನ್ನ ತಂಗಿ ಏನ್ ಮಾಡ್ತಿದ್ದಾಳೆ’ ಎಂದು ನಾಗೇಂದ್ರಸ ಮಾತು ಬದಲಿಸಿದೆ. ಆಕೆಯನ್ನು ಆಗ ನಾನೊಮ್ಮೆ ನೋಡಿದ್ದೆ. ತುಂಬ ಮುದ್ದಾಗಿದ್ದಳು. ‘ಅಯ್ಯೋ, ಆಕೆ ಬಗ್ಗೆ ನಾನೇನೇಳಲಿ. ಯಾವನೋ ಮಲೆಯಾಳಿ ಜೊತೆ ಓಡಿಹೋದಳು. ಆತ ಅವಳನ್ನು ದುಬೈಗೆ ಕೊಂಡೋಗಿ ಮಾರಿದನೋ ಅಥವಾ ಕೇರಳದ ಸಮುದ್ರ ತೀರದ ಬೆಸ್ತರ ಕೇರಿಯಲ್ಲಿ ಇರುವಳೋ ಏನೋ ಗೊತ್ತೇ ಆಗಲಿಲ್ಲ. ನಮ್ಮ ತಾಯಿ ಮಾತ್ರ ಇನ್ನೂ ಎಮ್ಮೆ ಕಾಯ್ತಾನೇ ಇದ್ದಾಳೆ. ಎಂದಾದರೊಂದು ದಿನ ತನ್ನ ಕಿರಿ ಮಗ ಹಿಂತಿರುಗಿ ಬಂದೇ ಬರುವನೆಂದೂ ಆತ ಬಂದು ಬಾಯಿಗೆ ನೀರು ಬಿಡೋತನಕ ತಾನು ಸಾಯುವುದಿಲ್ಲವೆಂದೂ ಹಠ ಹಿಡಿದು ಕಾದಿದ್ದಾಳೆ, ಅವಳನ್ನು ಆ ದೇವರೇ ಕಾಯಬೇಕು’ ಎಂದು ಮತ್ತೊಂದು ಪೆಗ್ ಎತ್ತಿ ಗಟಗಟನೆ ಕುಡಿದ. ಹೊತ್ತು ಮೀರುತ್ತಿತ್ತು. ಊಟ ಮಾಡಿ ಎಂದು ಕಮಲ ತಂದಿತ್ತಳು. ಅವರಿಗೆ ಸರಿಯಾಗಿ ಬಡಿಸು ಎಂದು ನಾಗೇಂದ್ರ ಆತಿಥ್ಯ ಮಾಡಲು ತೊಡಗಿದ. ರುಚಿಯಾದ ಊಟ ಮುಗಿಸುವ ವೇಳೆಗೆ ಹನ್ನೊಂದು ಗಂಟೆ ಮೀರಿತ್ತು. ನಾಳೆ ತನಗೆ ಮುಖ್ಯವಾದ ಕೆಲಸವಿದೆ

ಎಂದು ಜ್ಞಾಪಿಸಿಕೊಂಡ ನಾಗೇಂದ್ರ ಮಲಗಲು ಮುಂದಾದ. ಆದರೂ ನಾನು ಅವನೊಡನೆ ಮಾತನಾಡುತ್ತಾ ವರಾಂಡದಲ್ಲಿ ಕೂರಲು ತವಕಿಸುತ್ತಿದ್ದೆ. 'ನೀವು ಮಲಗಿ, ಸಾಕಷ್ಟು ಸುತ್ತಾಡಿ ದಣಿದು ಬಂದಂತಿದೆ' ಎಂದು ಕಮಲ ಒಳಕ್ಕೆ ಕರೆದಳು. ಆಕಾಶದ ನಕ್ಷತ್ರಗಳು ಲೋಕದ ನೀತಿ ಅನೀತಿಯನ್ನು ಅಳತೆ ಮಾಡುವಂತೆ ಮೋಹದ ತಕ್ಕಡಿಯಲ್ಲಿ ಹೆಣ್ಣು ಗಂಡುಗಳನ್ನು ಇಟ್ಟು ತೂಗುತ್ತಿದ್ದವು. ಕಮಲ ಕರೆದದ್ದು ಆಪ್ಯಾಯಮಾನವಾಗಿ ಎದೆಯ ಕದವನ್ನು ತಟ್ಟಿದಂತಾಗಿ ಒಳಕ್ಕೆ ನಡೆದೆ.

ನಾಗೇಂದ್ರ ಆಗಲೇ ನಿದ್ದೆಗಿಳಿದು ಗೊರಕೆ ಹೊಡೆಯುತ್ತಿದ್ದ. ಅಡುಗೆ ಕೋಣೆಯಲ್ಲಿ ಕಮಲ ಮಲಗಿದ್ದಳು. ಆಕೆಗಿನ್ನೂ ನಿದ್ದೆ ಬಂದಿರಲಿಲ್ಲ. ಚಾಪೆ ಮೇಲೆ ಮಲಗಿದ್ದ ಅವಳು ಕೈಕಾಲು ಆಡಿಸುತ್ತ ನಿಟ್ಟುಸಿರು ಬಿಟ್ಟು ಮಗ್ಗಲು ಬದಲಿಸುತ್ತಿದ್ದಳು. ನನ್ನ ಮನೆ ಮಡದಿ ಮಕ್ಕಳ ನೆನಪಾಗಿ ಯಾವುದೋ ನೈತಿಕ ಪ್ರಶ್ನೆ ಕಾಡಿತು. ನೀರು ಕುಡಿಯಲು ದಾಹವಾದರೂ ಇಷ್ಟು ಹೊತ್ತಿನಲ್ಲಿ ಎದ್ದು ನೀರು ಕೇಳುವುದು ತರವಲ್ಲ ಎಂದು ಮಲಗಿದೆ. ನಿದ್ದೆ ಅದ್ಯಾವಾಗ ಬಂದಿತ್ತೋ ಗೊತ್ತಿಲ್ಲ. ಇಷ್ಟು ಬೇಗ ರಾತ್ರಿ ಮುಗಿದುಹೋಯಿತೇ ಎಂದು ಮಂಪರುಗಣ್ಣಲ್ಲೇ ಎದ್ದಿದ್ದೆ. ನಾಗೇಂದ್ರ ಐದು ಗಂಟೆಗೇ ಎದ್ದು ಎಲ್ಲಿಗೋ ಹೋಗಲು ರೆಡಿ ಮಾಡಿಕೊಳ್ಳುತ್ತಿದ್ದ. ಸ್ನಾನ ಮಾಡಿ ಬಂದು ಹೆಂಡತಿಗೆ ಹೇಳುತ್ತಿದ್ದ : 'ನೋಡೂ, ಇವತ್ತು ಶೂಟಿಂಗ್ ತುಂಬ ಮುಖ್ಯವಾದ್ದಿದೆ. ಇವರನ್ನ ಎಬ್ಬಿಸಬೇಡ. ಬೇಗ ಮುಗಿಸಿಕೊಂಡು ಬಂದುಬಿಡುವೆ. ಪ್ರೀತಿಯಿಂದ ಇವರನ್ನು ನೋಡಿಕೊ' ಎಂದು ಸೂಚಿಸುತ್ತಿದ್ದ. ಕಮಲ ಆಯ್ತು ಎಂದು ತಲೆ ಆಡಿಸುತ್ತಿದ್ದಳು. ದಡಬಡನೆ ಎದ್ದು, 'ನಾನೂ ನಿನ್ನ ಜೊತೆಯೇ ಬರ್ತೇನೆ ನಾಗೇಂದ್ರಾ' ಎಂದೆ. 'ಓಹೋ, ನೀವು ಎದ್ದು ಬಿಟ್ರಾ; ಮಲಕ್ಕೊಳ್ಳಿ. ಶೂಟಿಂಗ್‌ನ ಕೊನೆ ದಿನ ಇವತ್ತು. ತುಂಬಾ ಮುಖ್ಯವಾಗಿದೆ. ಈ ದಿನ ತಪ್ಪಿಸಿಕೊಂಡರೆ ನಾಳಿನ ನನ್ನೆಲ್ಲ ಅವಕಾಶಗಳು ನಿಂತುಹೋಗುತ್ತವೆ. ಪ್ಲೀಸ್ ಇವತ್ತು ಇದ್ದುಬಿಡಿ. ಆ ಶೂಟಿಂಗ್ ರಗಳೆ ನಿನ್ನಂತವರಿಗೆ ತರವಲ್ಲ. ನಿಮ್ಮ ಸಾಹಿತ್ಯ ಎಂದರೆ ಈಕೆಗೆ ವಿಪರೀತ ಮೋಹ. ನಾನು ನಿಮ್ಮ ಜೊತೆ ಮುಖ್ಯವಾದ ವಿಚಾರ ಹೇಳೋದಿದೆ. ದಯವಿಟ್ಟು ಇದ್ದುಬಿಡಿ' ಎಂದು ತಡೆದೇ ಬಿಟ್ಟು ಹೊರಗೆ ಹೊರಟೇಹೋದ. ಕಮಲಳೂ ಇರಿ ಎಂದು ದನಿಗೂಡಿಸಿದಳು.

ಹ್ಯಾಂಗೋವರಿನಿಂದ ಮಂಕು ಆವರಿಸಿತ್ತು. ಕಮಲ ಚಹಾ ತಂದಿಟ್ಟಳು. ನಾಗೇಂದ್ರ ಸಾಹಸ ದೃಶ್ಯದಲ್ಲಿ ಸ್ಟಂಟರ್ ಆಗಿ ನೆಗೆದು ಬಿದ್ದು ಸೊಂಟ ಮುರಿದುಕೊಂಡ ಮೇಲೆ ಆತನ ಕತೆ ಮುಗಿಯಿತು ಎಂದೇ ಎಲ್ಲರೂ ಭಾವಿಸಿದ್ದರು. ಆ ವೇಳೆಯಲ್ಲೇ ಕಮಲ ಔಷಧಿ ಫ್ಯಾಕ್ಟರಿ ಒಂದರಲ್ಲಿ ಕೆಲಸಕ್ಕೆ ಸೇರಿದ್ದು. ಒಂದು ವರ್ಷವೆಲ್ಲ ನಾಗೇಂದ್ರ ಬಿದ್ದಲ್ಲೇ ಬಿದ್ದಿದ್ದು ಪವಾಡ ಎಂಬಂತೆ ಮೇಲೆದ್ದಿದ್ದ. ಕಮಲ ಟಿಫನ್‌ಗೆ ರೆಡಿ ಮಾಡುತ್ತಿದ್ದಳು. ಹೊರಗೆ ಸುತ್ತಾಡಿ ಬರುವ ಎಂದು ಹೊರಟೆ. ಬೇಗ ಬಂದು ಬಿಡಿ ಎಂದು ಮೋಹಕವಾಗಿ ನಗಾಡಿ ಬಾಗಿಲು ಹಾಕಿಕೊಂಡಳು. ಸುಮ್ಮನೆ ಅಪರಿಚಿತ ಬೀದಿಗಳಲ್ಲಿ ಅಲೆದಾಡಿದೆ. ಎಲ್ಲಿಯಾದರೂ ಮನೆ ಬಿಟ್ಟು ಹೊರಗೆ ಬಂದೆನೆಂದರೆ ವಿಚಿತ್ರವಾದ ಬೇವಾರ್ಸಿತನ ಅಮರಿಕೊಳ್ಳುತ್ತದೆ. ಈ ಜಗತ್ತಿನಲ್ಲಿ ತನಗೆ ಯಾರೂ ಇಲ್ಲ ಎಂಬ ಅನಾಥಭಾವ ದಟ್ಟವಾಗಿ ವ್ಯಾಪಿಸಿ ಖಿನ್ನತೆ ಹಿಂಡಿಬಿಡುತ್ತದೆ. ಅಂತಹ ಸ್ಥಿತಿಯಲ್ಲಿ ನನ್ನನ್ನು ನಾನೇ ಮರೆತು ಯಾವುದಾದರೊಂದು ಮರದ ಕೆಳಗೆ ಕುಳಿತರೆ ಇಡೀ ಜಗತ್ತೇ ಬೇರೊಂದು ನಾದದಲ್ಲಿ ಕೇಳಿಸುತ್ತದೆ. ಹೊತ್ತು ಮೇಲೇರುತ್ತಲೇ ಇತ್ತು. ಕಮಲ ಕಾಯುತ್ತಿರಬಹುದು ಎಂದು ಹಿಂತಿರುಗಿದೆ. ಬಾಗಿಲು ಮುಚ್ಚಿತ್ತು. ಮೆಲ್ಲಗೆ ಕುಟ್ಟಿದೆ. ಎಲ್ಲೋ ಆಕೆ ಮಾರುಕಟ್ಟೆಗೆ ಹೋಗಿರಬಹುದೆ ಎಂದು ಸುಮ್ಮನೆ ನಿಂತಿದ್ದೆ. ಬಾಗಿಲು ತೆರೆದುಕೊಂಡಿತು. ಕಮಲ ಆಗ ತಾನೆ ಸ್ನಾನ ಮುಗಿಸಿ ತಲೆಗೂದಲ ಸಿಂಬಿ ಕಟ್ಟಿಕೊಂಡು ಬನ್ನಿ ಎಂದು ಒಳಕ್ಕೆ ಕರೆದಳು.

ನನಗೆ ವಿಪರೀತ ಹಸಿವಾಗುತ್ತಿತ್ತು. ಸ್ನಾನ ಮಾಡಿಕೊಳ್ಳಿ ಎಂದು ಟವಲ್ ತಂದಿತ್ತಳು. ಸ್ನಾನದ ಅವಳ ಹಸಿ ಮೈಯ ಗಂಧವು ಮನೆಯನ್ನೆಲ್ಲ ಆವರಿಸಿ ನನ್ನ ಉಸಿರಾಟದಲ್ಲೂ ಬೆರೆತಿತ್ತು. ನಾಗೇಂದ್ರ ಬೇಗ ಬಂದುಬಿಡಲಿ ಎಂದು ಬಯಸಿದೆ. ಸ್ನಾನದ ಮನೆಯ ವೈರಿನ ಮೇಲೆ ಆಗ ತಾನೆ ತೊಳೆದು ಒಣಹಾಕಿದ್ದ ಅವಳ ಒಳ ಉಡುಪುಗಳು ನನ್ನ ಮುಖವನ್ನು ಸವರಿದವು. ಬೇಗ ಸ್ನಾನ ಮುಗಿಸಿದೆ. ರುಚಿಯಾದ ಕೇಸರಿಬಾತ್ ತಿಂದು ಹೊಗಳಿದೆ. ಹಿತವಾಗಿ ನಗಾಡಿ, ನನ್ನ ಕತೆಯ ಕೆಲವು ಪಾತ್ರಗಳನ್ನು ನೆನಪಿಸಿ, ಅದು ನಿಮ್ಮ ಸ್ವಂತ ಅನುಭವನಾ ಎಂದು ತೀರ ಸಮೀಪವೇ ನಿಂತು ಕೇಳಿದಳು. ಕಣ್ಣಲ್ಲಿ ಕಣ್ಣಿಟ್ಟು ಮಾತನಾಡಲಾಗದೆ, 'ಇವತ್ತು ರಜೆ ಹಾಕಿದ್ದೀರಾ' ಎಂದೆ. 'ಸ್ಟ್ರೈಕ್ ನಡೀತಾ ಇರೋದ್ರಿಂದ ಒಂದು ವಾರದಿಂದಲೂ ಆ ಕಡೆ ಸುಳಿದಿಲ್ಲ' ಎಂದು ಮಾತು ಬದಲಿಸಿ, 'ರಾತ್ರಿ ಸರಿಯಾಗಿ ನಿದ್ದೆ ಆಗ್ಲಿಲ್ಲ ಅನ್ಸುತ್ತೆ, ಬೇಕಾದ್ರೆ ಸ್ವಲ್ಪ ರೆಸ್ಟ್ ಮಾಡಿ' ಎಂದಳು.

ರೂಂನಲ್ಲಿ ಸುಮ್ಮನೆ ಒರಗಿದೆ. ಕ್ಷಣ ಕ್ಷಣಕ್ಕೂ ನನ್ನ ಚಿತ್ತ ಚಂಚಲತೆಯಲ್ಲಿ ತೊಯ್ದಾಡುತ್ತಿತ್ತು. ಆಕೆಯ ದೇಹದ ಸಿರಿ ನನ್ನ ಮನಸ್ಸಿನ ಮೇಲೆ ಕುಳಿತು ಉಯ್ಯಾಲೆ

ಆಡುತ್ತಿತ್ತು. ಕಾಲಾತೀತವಾದ ಯಾವುದೋ ಅಲೆಯಲ್ಲಿ ತೇಲುತ್ತಿರುವಂತೆ ಭಾಸವಾಯಿತು. ಚಹಾ ತಂದು ಕೊಡಲೇ ಎಂದು ಕಮಲ ಕೇಳುತ್ತಿದ್ದಳು. ಬೇಡ ಎಂದೆ. ಒಥೆಲೊ ನಾಟಕದ ನಾಗೇಂದ್ರನ ಅಭಿನಯವನ್ನು ಬೇಕೆಂತಲೆ ಒತ್ತಾಯದಿಂದ ನೆನೆಸಿಕೊಂಡೆ. ದಾಹವಾಗಿ ನೀರು ಬೇಕೆಂದೆ. ತಂದಿತ್ತು, ನಿಂತು, 'ತಲೆ ನೋವಾಗ್ತಿದೆಯಾ; ವಿಕ್ಸ್ ಹಚ್ಚಲಾ' ಎಂದು ಕುಳಿತಳು. ಭಾವನೆಗಳು ನೈತಿಕ ಸಂಕೋಲೆಯಿಂದ ಬಿಡಿಸಿಕೊಳ್ಳಲು ಒದ್ದಾಡುತ್ತಿದ್ದವು. ಕಣ್ಣು ಮುಚ್ಚಿ ಅವಳನ್ನು ಅಪ್ಪಿಕೊಂಡಿದ್ದೆ. 'ನಿಮ್ಮ ಬಗ್ಗೆ ತುಂಬ ಗೌರವ ಭಾವನೆ ಇದೆ' ಎಂದು ಹೇಳುತ್ತಲೇ ನನ್ನ ಭುಜವನ್ನು ಹಿಡಿದುಕೊಂಡಿದ್ದಳು. ಮಧ್ಯಾಹ್ನದ ಇಳಿ ಬಿಸಿಲ ವೇಳೆಗೆ ನಾನು ವಾಸ್ತವ ಜಗತ್ತಿಗೆ ಮರಳಿದ್ದೆ. ಜಗತ್ತು ಮೋಹದ ಮಳೆಯಲ್ಲಿ ಮಿಂದಂತಿತ್ತು. ಕಮಲ ನಿರಾಳವಾಗಿದ್ದರೂ ನನ್ನೊಳಗೆ ವಿಚಿತ್ರ ಕಂಪನಗಳೆದ್ದಿದ್ದವು.

ಹೇಳಿದ್ದಂತೆಯೇ ನಾಗೇಂದ್ರ ಸಂಜೆಗೆ ಹಿಂತಿರುಗಿದ್ದ. ನಾಗೇಂದ್ರ ತುಂಬ ಖುಷಿಯಲ್ಲಿದ್ದ. ಶೂಟಿಂಗ್ ಅದ್ಭುತವಾಗಿತ್ತೆಂದು ಹೇಳಿ ಖಂಡಿತ ಆ ಫಿಲಂ ನೂರು ದಿನ ಓಡುವುದೆಂದು ಭವಿಷ್ಯ ನುಡಿಯುತ್ತಿದ್ದ. ಬರುವಾಗಲೇ ಕಳೆದ ರಾತ್ರಿಯಂತೆಯೇ ವಿಸ್ಕಿಯ ಜೊತೆ ಕರಿದ ಮಾಂಸಾಹಾರವನ್ನೂ ಫಲಾವನ್ನೂ ತಂದಿದ್ದ. ಗಂಡನ ಜೊತೆ ಕಮಲ ನಿರಾಳವಾಗಿ ನಗಾಡುತ್ತ ಮಾತನಾಡಿ ಅಡುಗೆ ಮಾಡೋದು ತಪ್ಪಿತು ಎಂದು ನನ್ನ ಕಡೆಗೊಮ್ಮೆ ನೋಡಿ ಸಡಗರಪಟ್ಟಿದ್ದಳು. ನನ್ನೊಳಗೆ ಅಳುಕು ಸುಳಿದು ನಾಗೇಂದ್ರನ ಮುಖ ದಿಟ್ಟಿಸಲು ಆಗುತ್ತಿರಲಿಲ್ಲ. 'ಇವರನ್ನು ಸರಿಯಾಗಿ ನೋಡಿ ಕೊಂಡೆಯೇನೇ' ಎಂದು ಕಮಲಳನ್ನೂ ಕೇಳಿ, 'ಹಾಯಾಗಿ ಇದ್ದೆಯಾ' ಎನ್ನುತ್ತ ಅದೇ ಸಿನಿಮಾದ ಮಾಯಾಬಜಾರಿನ ಬಗ್ಗೆ ಮಾತು ಆರಂಭಿಸಿದ್ದ. ನಾಗೇಂದ್ರನಿಗೆ ಅಮಲೆಂದರೆ ಬಹಳ ಪ್ರೀತಿ ಎಂಬುದು ಗೊತ್ತಾಗಿತ್ತು. ಪೂರಾ ಒಂದು ಬಾಟಲನ್ನು ಲೆಕ್ಕವಿಲ್ಲದಂತೆ ಕುಡಿಯಬಲ್ಲವನಾಗಿದ್ದ. ಅವನ ಕಣ್ಣ ಕಾಂತಿ ಬತ್ತಿತ್ತು. ಕಮಲ ಕಿಟಕಿಯಲ್ಲೇ ತನ್ನ ನೋಟದಲ್ಲೇ ನನ್ನನ್ನು ಕುಡಿಯುತ್ತಿದ್ದಳು. ನನ್ನೊಳಗೆ ನೀತಿ ಅನೀತಿಗಳು ಖಡ್ಗವಿಡಿದು ತಿವಿದಾಡುತ್ತಿದ್ದವು.

'ಯಾಕೋ, ಮಂಕಾಗಿದ್ದೀಯೆ. ಮನೆ ಕಡೆ ನೆನಪಾಯ್ತಾ. ಹೆಂಡತಿ ಮಕ್ಕಳು ಅಂತಾ ಇಷ್ಟೆಲ್ಲಾ ವಿಪರೀತವಾಗಿ ಹಚ್ಚಿಕೋ ಬಾರದು. ಅದರಿಂದ ಮನುಷ್ಯ ಬಾರಿ ದುಃಖಿಯಾಗ ಬೇಕಾಗುತ್ತದೆ. ಯಾವತ್ತಿನ ಸಂಸಾರ ಇದ್ದೇ ಇರುತ್ತೆ. ಅದು ಎಲ್ಲೂ ಮುಗಿಯೋದೇ ಇಲ್ಲ. ಸಾಯೋದ್ರೊಳಗೆ ನಾವು ಎಷ್ಟು ಗಂಟೆಗಳ ಕಾಲ ನಕ್ಕಿರ್ತೀವೋ. ಎಲ್ಲಾ ಲೆಕ್ಕ ಕೂಡಿ ಕಳೆದರೂ ನಾವು ಹೆಚ್ಚೆಂದರೆ ಇಡೀ ಜೀವಮಾನದಲ್ಲಿ ಇಪ್ಪತ್ತು ನಾಲ್ಕು ಗಂಟೆ ಕೂಡ ನಕ್ಕಿರೋದಿಲ್ಲ. ಮನುಷ್ಯರ ಸಾವು ಮತ್ತು ಸುಖದ ಎರಡೂ ಮೂಲಗಳನ್ನು ತಿಳಿದಿರುವ ನೀನು ಹೀಗೆ ಸಪ್ಪಗಿದ್ರೆ ನನ್ನಂತಹ ಬಣ್ಣದ ನೆರಳಿನವರ ಕತೆ ಹೇಗಾಗಬೇಕು. ನಗ್ತಾ ನನ್ನ ಜೊತೆ ಒಂದು ವಾರವಾದರೂ ಇರು. ತಕೊ, ವಿಸ್ಕಿ ಕುಡಿ' ಎಂದು ಗ್ಲಾಸನ್ನು ಕೈಗಿತ್ತ. ಕಮಲ ಟಿ.ವಿ.ಯಲ್ಲಿ ಯಾವುದೋ ಸಿನಿಮಾ ನೋಡುತ್ತ ಕುಳಿತಿದ್ದಳು. ಅಮಲು ನನ್ನೊಳಗಿನ ಮಂಕನ್ನು ಬಿಡಿಸುತ್ತಿತ್ತು. ಮತ್ತೆ ಮತ್ತೆ ಕಮಲಳನ್ನು ಕರೆಯುತ್ತಾ : 'ಇವರನ್ನ ಸರಿಯಾಗಿ ನೋಡಿ ಕೊಂಡೆಯೇನೇ, ಯಾವುದಾದರೂ ಚೆಂದದ ಕತೆ ಹೇಳಿದ್ರೆನೂ' ಎಂದು ಪ್ರಶ್ನಿಸಿದ. ಕಮಲ ಹಿತವಾದ ನೋವನ್ನು ಮಾತಿನಲ್ಲಿ ಹರಿಸುವಂತೆ 'ಹೌದು ತುಂಬ ರೊಮ್ಯಾಂಟಿಕ್ ಕತೆ ಹೇಳಿದ್ರು. ಅಂತಹ ಕತೆಯನ್ನು ನಾನೆಂದೂ ಓದಿಯೇ ಇರಲಿಲ್ಲ. ಅಬ್ಬಾ ಎಂತಹ ಸುಖವಾಗಿತ್ತೂ' ಎಂದು ಆಕಳಿಸುವಂತೆ ಮಾತನ್ನು ಮುಗಿಸಿದಳು.

ನನ್ನ ಎದೆ ದಸಕ್ಕೆಂದು ಬಡಿದುಕೊಳ್ಳುತ್ತಿತ್ತು. 'ಹೌದಾ, ಅಂತಹ ಕತೆನಾ ನನಗೂ ಹೇಳೊ' ಎಂದು ನಾಗೇಂದ್ರ ನನ್ನತ್ತ ನೋಡಿದ. 'ಅಂತಹ ಕತೆಗಳನ್ನು ರಿಪೀಟ್ ಮಾಡೋದಿಕ್ಕೆ ಬರೋದಿಲ್ಲ ನಾಗೇಂದ್ರಾ. ಆ ಕತೆಯ ಮಧುರ ಕ್ಷಣ ಎಷ್ಟೇ ದಿವ್ಯವಾಗಿದ್ದರೂ ಅಂತದನ್ನು ಮತ್ತೆ ಹಾಡಿದರೆ ವಿಕಾರವಾಗುತ್ತೆ' ಎಂದು ದುಗುಡದಿಂದ ಹೇಳಿ ಎಂದೂ ಹಾಗೆ ಕುಡಿಯದ ನಾನು ಗಟಗಟನೆ ವಿಸ್ಕಿಯನ್ನು ಕುಡಿದು ಮಾಂಸದ ತುಂಡನ್ನು ಬಾಯಿಗಿಟ್ಟು ಜಗಿದು ಕಣ್ಣು ಮುಚ್ಚಿದೆ. 'ಫ್ರೈ ತುಂಬ ಕಾರ ಅನ್ಸುತ್ತೆ, ಕಮಲಾ ನೀರು ಕೊಡೇ ಇವರಿಗೆ' ಎಂದು ನಾಗೇಂದ್ರ ಕರೆದ. ಆಕೆ ನಮ್ಮ ನಡುವೆಯೇ ಬಂದು ಕುಳಿತು ಹಿತವಾಗಿ 'ಊಟ ಕೊಡಲಾ' ಎಂದಳು. ಊಟಕ್ಕೆ ಇನ್ನೂ ಬಹಳಷ್ಟು ಸಮಯವಿತ್ತು.

ಅಮಲು ನಮ್ಮಿಬ್ಬರಲ್ಲೂ ಆಟವಾಡುತ್ತಿತ್ತು. ಬಹಳ ಕಾಲದ ಸಂಗಾತಿಯಂತೆ ಕಮಲ ಸಂಕೋಚವಿಲ್ಲದೆ ನಡೆದುಕೊಳ್ಳುತ್ತಿದ್ದಳು. ಹೊತ್ತು ನಮ್ಮನ್ನು ಹೊತ್ತುಕೊಂಡು ಎಲ್ಲಿಗೋ ಸಾಗುತ್ತಿತ್ತು. ಕಮಲ ಊಟ ಮಾಡಿರೆಂದು ಒತ್ತಾಯಿಸುತ್ತಿದ್ದರೂ. ಅತ್ತ ಕಡೆ ನಮಗೆ ಮನಸ್ಸಿರಲಿಲ್ಲ. ಮುಖ್ಯವಾದ ವಿಷಯವೊಂದನ್ನು ಹೇಳಬೇಕೆಂದು ಇರಿಸಿಕೊಂಡೆಯಲ್ಲಾ, ಅದೇನು ಹೇಳೆಂದು ಒತ್ತಾಯಿಸಿದೆ. 'ಹೇಳುವಂತಾದ್ದೇನೂ ಉಳಿದಿಲ್ಲಯ್ಯಾ. ನೆನ್ನೇನೇ ಎಲ್ಲಾನು ಕಕ್ಕಿಕೊಂಡು ಪಾರ್ಕಿನಲ್ಲೇ ಅತ್ತು ಬಿಟ್ಟೆನಲ್ಲಾ. ಇವತ್ತೂ ಕೂಡ ನನ್ನ ಜೊತೆ ನೀನು ಇರಬೇಕು ಎಂದು ಹಾಗಂದೆ' ಎಂದ. ಕಮಲ ಮತ್ತೇನನ್ನೋ ಹೇಳಿದ್ದಳು. 'ಮತ್ತೊಂದು ರೌಂಡ್ ಕುಡಿಯೋಣ' ಎಂದು ವಿಸ್ಕಿ ಸುರಿದ. ಸೋಡಾ ಮುಗಿದು ಕಮಲಳೆ ನೀರು ತಂದುಕೊಟ್ಟಳು. ನನಗೆ ಅತ್ಯಂತ ನಿಧಾನಕ್ಕೆ ಕುಡಿದು ಅಭ್ಯಾಸ. ನಾಗೇಂದ್ರ ಸಲೀಸಾಗಿ ಹೀರುತ್ತಿದ್ದ. ಕಮಲ ನಮ್ಮ ಮಾತಿಗೆ ಸಾಕ್ಷಿ ಎಂಬಂತೆ ಕೂತು ಸಾಕಾಗಿ ತಾನು ಟಿ.ವಿ. ನೋಡುತ್ತೇನೆ ಎಂದು ಹೋಗಿ ಎಂ.ಟಿ.ವಿ.ಯ ಆಲ್ಬಮ್ ಸಾಂಗ್ಸ್ ನೋಡುತ್ತಿದ್ದಳು.



ಇಡೀ ಸಂದರ್ಭ ವಿಚಿತ್ರ ಸಂಗಮವಾಗಿತ್ತು. ಬಾಟಲಿಗಳು ಖಾಲಿಯಾಗಿದ್ದವು. ನಮ್ಮ ಜೊತೆ ಓದಿ ಕವಿಯಾದವರು, ಐಎಎಸ್ ಅಧಿಕಾರಿಯಾದವರು, ಕ್ರಾಂತಿಕಾರಿಗಳಾದವರು, ಪುಡಾರಿಗಳಾದವರು, ವೇಶ್ಯೆಯಾದವರು ಕೊನೆಗೆ ರೌಡಿಗಳಾಗಿ ಸತ್ತವರೆಲ್ಲರನ್ನೂ ನೆನೆದು ಬಾಯಿ ನೋಯಿಸಿಕೊಂಡು ಸುಸ್ತಾದೆವು. ಕಮಲ ಎದ್ದು ಬಂದು ಊಟ ಬಡಿಸಿದಳು. ಬಹಳ ದಿನಗಳ ನಂತರಕ್ಕೆ ಹೊಟ್ಟೆ ತುಂಬ ಊಟ ಮಾಡಿದ್ದೆ. ಮತ್ತದೇ ರಾತ್ರಿ ಭೂಮಿಯ ಮೇಲೆ ಸವಾರಿ ಮಾಡುತ್ತಿತ್ತು. ಹೊರಗೆ ಬಂದು ಕುಳಿತೆವು. ನಿರಾಳವಾಗಿ ನಾಗೇಂದ್ರ ಸಿಗರೇಟು ಸೇದಿ, ನಕ್ಷತ್ರಗಳಿಗೆ ಏನನ್ನೋ ಹೇಳುವಂತೆ ದಿಟ್ಟಿಸುತ್ತಿದ್ದ. ಅವನ ಒಥೆಲೋ ಅಭಿನಯ ಮೆಲ್ಲಗೆ ನನ್ನ ತಲೆಯೊಳಗೆ ಸುಳಿದು ಹೋಯಿತು.

ಮಲಗೋಣವೇ ಎಂದೆ. ತಾಳು ಎಂಬಂತೆ ತಡೆದ. ಕಮಲ ಊಟ ಮುಗಿಸಿ ಕೋಣೆಯ ಕಿರು ಜಾಗದಲ್ಲಿ ಆಗಲೇ ಚಾಪೆ ಹಾಸಿ ಮಲಗಿದ್ದಳು. ಅವಳು ನಿಜಕ್ಕೂ ದಣಿದಿದ್ದಳು. ಒಂದು ರೌಂಡ್ ವಾಕ್ ಮಾಡೋಣವೇ ಎಂದ. ಕುಡಿದವರಿಗೆ ಅಂತದೊಂದು ಅಭ್ಯಾಸವಿರುತ್ತದೆ. ನಗರ ಆಗಲೇ ಮಲಗುತ್ತಿತ್ತು. ರಸ್ತೆ ದಾಟಿ ಮುಂದಿನ ಸರ್ಕಲ್ಲಿಗೆ ಬಂದೆವು. ನಾಗೇಂದ್ರ ವೈನ್ ಶಾಪಿನಲ್ಲೇ ಮತ್ತೊಂದು ಪೆಗ್ ಕುಡಿದ. ದಾರಿಯಲ್ಲಿ ಏನೇನೋ ಮಾತನಾಡಿ ಕೊಂಡೆವು. ಮನೆಯ ದಾರಿ ಸಮೀಪಿಸುತ್ತಿತ್ತು. ಅಲ್ಲೊಂದು ಮರದ ಕೆಳಗೆ ಕಲ್ಲು ಬೆಂಚಿತ್ತು. ನಾಗೇಂದ್ರ ಅಲ್ಲೇ ಕೂರಿಸಿಕೊಂಡ. ಒಂದಷ್ಟು ಹೊತ್ತು ಇಬ್ಬರೂ ಮೌನವಾಗಿದ್ದೆವು. ಕತ್ತಲೆಯು ನಮ್ಮಿಬ್ಬರನ್ನು ಮೂಸಿ ನೋಡಿ ಇವರಿಬ್ಬರಲ್ಲಿ ಯಾರು ಒಳ್ಳೆಯವರು ಎಂದು ಪರೀಕ್ಷಿಸುತ್ತಿತ್ತು.

'ಇಲ್ಲಿ ಯಾರೋ ಎಸೆದುಹೋದ ಅನಾಥ ಮಗುವೊಂದು ಸಿಕ್ಕಿತು. ಎಷ್ಟೇ ಆಗಲಿ ನಾನೂ ಒಂಥರಾ ಅನಾಥನಾಗಿದ್ದವನಲ್ಲವಾ. ಆ ಮಗುವನ್ನು ನನ್ನದೇ ಎಂದು ಎತ್ತಿಕೊಂಡು ಬಂದು ಕಮಲಳ ಕೈಗಿಟ್ಟಿದ್ದೆ. ಅವಳು ನಿಜವಾಗಿಯೂ ತಾಯಂತೆಯೇ ಸಲಹಿ ಬೆಳೆಸಿದಳು. ನನ್ನ ತಾಯಿ ನನ್ನನ್ನು ಬಹಳ ದೊಡ್ಡ ಸಾಹೇಬನನ್ನಾಗಿಸಬೇಕೆಂದು ಕನಸು ಕಂಡಿದ್ದಳು. ಅದು ನನ್ನಿಂದ ಆಗಲಿಲ್ಲ. ಆದರೆ ಆ ಮಗನಿಂದ ಆ ಕನಸನ್ನು ಸಾಕಾರಗೊಳಿಸದೆ ಬಿಡುವುದಿಲ್ಲ. ನಮ್ಮ ಇಂತಹ ಬದುಕಿನ ನಡುವೆ ಆ ಮಗನನ್ನು ಇರಿಸುವುದು ಬೇಡ ಎಂದು ಶಿವಾರ ಗುಡ್ಡದ ನವೋದಯ ಶಾಲೆಯಲ್ಲಿ ಇರಿಸಿ ಓದಿಸುತ್ತಿದ್ದೇನೆ. ಆತ ಓದಿನಲ್ಲಿ ಎಲ್ಲರಿಗಿಂತಲೂ ಮುಂದಿದ್ದಾನೆ' ಎಂದು ನಾಗೇಂದ್ರ ಆಕಾಶದ ಅಸಂಖ್ಯಾತ ನಕ್ಷತ್ರಗಳಿಗೂ ತನ್ನ ವಿಶ್ವಾಸವನ್ನು ತಿಳಿಸುವಂತೆ ಹೇಳುತ್ತಲೇ ಇದ್ದ.

ಮಧ್ಯರಾತ್ರಿ ಸಮೀಪಿಸುತ್ತಿತ್ತು. ತಣ್ಣಗೆ ಗಾಳಿ ಬೀಸುತ್ತಿತ್ತು. ಮತ್ತೆ ಸಿಗರೇಟು ಹಚ್ಚಿದ ನಾಗೇಂದ್ರ ಒಥೆಲೋ ತರದಲ್ಲೇ ಕಾಣುತ್ತಿದ್ದ. ಅವನ ಮುಖದ ಸುಕ್ಕುಗಳಲ್ಲಿ ಬಿಡಿಸಲಾಗದ ಒಗಟುಗಳಿದ್ದವು. ನನ್ನ ಸಾಹಿತ್ಯದ ಬಗ್ಗೆ ಹೊಗಳುತ್ತಿದ್ದ. 'ನನಗೆ ಜೀವನದಲ್ಲಿ ಕಳಚಿಹೋಗಿದ್ದ ಕೊಂಡಿ ಮತ್ತೆ ಸಿಕ್ಕಂತಾಗಿದೆ. ಬದುಕಿನಲ್ಲಿ ಏನನ್ನಾದರೂ ಸಾಧಿಸಲೇಬೇಕು ಎಂಬ ಹಠವಿದೆ. ನೀನೊಂದು ಚೆಂದದ ಕಾದಂಬರಿ ಬರೆದುಕೊಡು. ಅಂತಹ ದೈತ್ಯಶಕ್ತಿ ನಿನಗಿದೆ. ಇಡೀ ನಾಡು ಬೆರಗಾಗುವಂತೆ ಅದನ್ನು ಸಿನಿಮಾ ಮಾಡಿಬಿಡುವೆ. ನನಗೆ ಗೊತ್ತು; ಈ ಸಿನಿಮಾ ಬಜಾರಿನಲ್ಲಿ ನಾನೊಬ್ಬ ಚಿಲ್ಲರೆ ಜೋಕರ್ ಎಂದು. ನಾನು ಚಿಲ್ಲರೆ ಆಗಿದ್ದರೂ ಈ ಬಣ್ಣದ ಜಗತ್ತಿನಲ್ಲಿ ನಾನು ನನ್ನದೇ ಬೇರುಗಳನ್ನು ತೋರಿಸಿಕೊಳ್ಳಬೇಕೆಂಬ

ಆಸೆಯಿದೆ. ಇದು ನೆರವೇರಲಿ ಬಿಡಲಿ; ನನ್ನ ಈ ಕನಸಾದರೂ ಜೀವಂತವಾಗಿರಲು ನೀನು ನನ್ನ ಜೊತೆಗಿರಬೇಕು. ಪ್ಲೀಸ್, ನನಗೆ ಪ್ರಾಮಿಸ್ ಕೊಡು' ಎಂದು ಕೈಹಿಡಿದುಕೊಂಡು ನಾಗೇಂದ್ರ ಮಕ್ಕಳಂತೆ ಬಿಕ್ಕುತ್ತಿದ್ದ.

ನಾಗೇಂದ್ರನ ಹೆಗಲ ಹಿಡಿದು ಜೋಪಾನ ಮಾಡುವಂತೆ ಮನೆಗೆ ಕರೆತಂದೆ. ಕಮಲ ಬಾಗಿಲು ತೆಗೆದು ಒಳಕ್ಕೆ ಕರೆದುಕೊಂಡು ಅಗುಳಿ ಹಾಕಿದಳು. ನಾಗೇಂದ್ರ ಆಗಲೆ ಜೋಲಿ ಹೊಡೆಯುತ್ತಿದ್ದ. ಹಜಾರದಲ್ಲೇ ಆತನನ್ನು ಮಲಗಿಸಿದೆ. ಕಮಲ ಆಕಳಿಸಿ ಮೈಮುರಿಯುತ್ತಿದ್ದಳು. ಮಲ್ಗಿ ಎಂದು ರೂಂ ಲೈಟ್ ಆಫ್ ಮಾಡಿದೆ. ನಿದ್ದೆ ಸುಳಿಯುತ್ತಿರಲಿಲ್ಲ. ಕಮಲ ಒದ್ದಾಡುತ್ತಿರುವುದು ತಿಳಿಯುತ್ತಿತ್ತು. ಗಾಢ ಕತ್ತಲೆಯ ಮನೆಯಲ್ಲಿ ನಾಗೇಂದ್ರ ನಿದ್ದೆಯ ಕಣಿವೆಯಲ್ಲಿ ತೇಲಿಹೋಗುತ್ತಿದ್ದ. ದಟ್ಟವಾದ ಮೌನದಲ್ಲಿ ಕಮಲ ನಿಟ್ಟುಸಿರು ಬಿಟ್ಟು ಕಾಲಿನ ನಟಿಕೆ ತೆಗೆಯುತ್ತಿದ್ದಳು. ಅವಳ ಬಳೆ ಸದ್ದು ಕಿವಿ ಸುತ್ತ ಕಂಪಿಸುತ್ತಿತ್ತು. ಆಕೆ ಎದ್ದು ಕತ್ತಲಲ್ಲೆ ನೀರು ಕುಡಿದು ಉಸ್ಸೆಂದಳು. ಅವಳು ನನ್ನ ಕೊಠಡಿಯ ಬಳಿಯೆ ಬಂದು ನಿಂದಿರಬೇಕೆಂದು ಕತ್ತಲೆಯಲ್ಲಿ ಅವಳ ಆಕೃತಿಗಾಗಿ ಹುಡುಕಾಡಿದೆ. ಹೊರಳಾಡಿ ನರಳಿದೆ. ನಾಗೇಂದ್ರ ಕನವರಿಸುತ್ತಿದ್ದ. ಯಾವುದೋ ಜೋಕರ್ ಪಾತ್ರವನ್ನು ಅಭಿನಯಿಸಿ ತೋರಿಸುತ್ತಿರುವಂತೆ ಅವನ ಕನಸಿತ್ತು. ಎದ್ದು ಕೂತಿದ್ದ ನಾನು ನಾಗೇಂದ್ರನ ಕನವರಿಕೆಯಿಂದ ಸುಮ್ಮನೆ ಮಲಗಿಬಿಟ್ಟಿದ್ದೆ.

ಬೆಳಗಾಯಿತು. ಹಗಲು ನೀತಿಯ ವೇಷ ತೊಟ್ಟುಕೊಂಡಿತ್ತು. ನಾನು ಊರಿಗೆ ಮರಳಲೇಬೇಕೆನಿಸಿತು. ಎಷ್ಟು ವಿನಂತಿಸಿದರೂ ನಿಲ್ಲಲಾಗಲಿಲ್ಲ. ಒಳ್ಳೊಳ್ಳೆಯ ಪ್ರೊಡ್ಯೂಸರ್ ಡೈರೆಕ್ಟರ್‌ಗಳನ್ನು ಪರಿಚಯಿಸುವೆ; ನಿನಗಿಲ್ಲಿ ಬೇಸರವಾದರೆ ಗಾಂಧಿ ನಗರದಲ್ಲೇ ರೂಂ ಅರೇಂಜ್ ಮಾಡುವೆ ಇರು ಎಂದು ಒತ್ತಾಯಿಸಿದರೂ ನನ್ನ ಮನಸ್ಸು ಮಣಿಯಲಿಲ್ಲ. ಗಾಢವಾದ ವಿಷಾದ ಪಾಪಪ್ರಜ್ಞೆ ಖಿನ್ನತೆ ತಲೆಗೇರಿತ್ತು. ಕಮಲ ಕೂಡ ಇರಿ ಇರಿ ಎಂದು ವಿನಂತಿಸುವಂತೆ ಕೋರುತ್ತಿದ್ದಳು. ಅವಳ ಮುಖವನ್ನು ದಿಟ್ಟಿಸುವುದು ಕಷ್ಟವಾಗುತ್ತಿತ್ತು. ಹೊರಡಲು ಸಿದ್ಧವಾದೆ. ನಾಗೇಂದ್ರನ ಮುಖದಲ್ಲಿ ಸಣ್ಣ ಅಸಮಾಧಾನವಿತ್ತು. ಕಮಲ ಬಾಗಿಲಲ್ಲೇ ನಾವು ಮರೆ ಆಗುವ ತನಕ ನೋಡುತ್ತಲೇ ಇದ್ದಳು. ಮತ್ತೆ ಮತ್ತೆ ಬರಬೇಕೆಂದು ಆಕೆ ಕೋರಿದ್ದಳು. ಬಸ್ ನಿಲ್ದಾಣ ಗಿಜಿಗುಟ್ಟುತ್ತಿತ್ತು. ಬಸ್ ಹತ್ತಿ ಕುಳಿತೆ. ನಾಗೇಂದ್ರನೂ ಒಳಕ್ಕೆ ಬಂದು ಬಸ್ ಹೊರಡೋ ತನಕ ನಿನ್ನ ಪಕ್ಕವೇ ಕುಳಿತಿರುತ್ತೇನೆ ಎಂದ. ಎಂತದೋ ದುಗುಡ ಯಾವುದೋ ತಬ್ಬಲಿತನ ಇಬ್ಬರ ನಡುವೆ ವಿನಿಮಯ ವಾಗುತ್ತಿತ್ತು. ನಾಗೇಂದ್ರ ಈಗಲೂ ನನ್ನ ಕೈ ಹಿಡಿದುಕೊಂಡು, 'ನನ್ನ ಕೈ ಬಿಡಬೇಡಪ್ಪಾ, ಮತ್ತೆ ಕೇಳ್ತೀನಿ ಅಂತ ಬೇಸರ ಮಾಡಿಕೋ ಬೇಡ; ನನಗೊಂದು ಅದ್ಭುತ ಕಾದಂಬರಿ ಬರೆದುಕೊಡು. ಇಡೀ ನನ್ನ ಜೀವವನ್ನೇ ಬಸಿದು ಅದಕ್ಕೆ ಸುರಿದು ಒಂದು ಸಿನಿಮಾ ಮಾಡಿಯೇ ಬಿಡುವೆ. ಆಗಲಾದರೂ ನನ್ನ ತಾಯಿ, ನನ್ನ ಹೆಂಡತಿ ಒಂದಿಷ್ಟು ಸಂತೋಷ ಪಡಬಲ್ಲರು. ನಿನ್ನ ಅಗತ್ಯ ನನಗೆ ಬೇಕಾಗಿದೆ. ನನ್ನನ್ನು ಮರೀಬೇಡ. ನೀನು ಬರ್ತಾನೇ ಇರಬೇಕು. ನನ್ನ ಮಗನನ್ನು ನೋಡಿ ನೀನವನಿಗೆ ಸ್ಫೂರ್ತಿ ತುಂಬಬೇಕು. ನಿನ್ನ ಹೆಂಡತಿ ಮಕ್ಕಳನ್ನೂ ಕರೆದುಕೊಂಡು ಬಾ' ಎಂದು ಕಣ್ಣಲ್ಲಿ ನೀರು ಬಟ್ಟಾಡಿಸಿಕೊಂಡು ದುಃಖವನ್ನು ನುಂಗಿಕೊಳ್ಳುತ್ತಾ ಬೆವರುತ್ತಿದ್ದ. ಬಸ್ ಹೊರಡಲು ಸಿದ್ಧವಾಗಿತ್ತು. ನಾಗೇಂದ್ರ ಕಿಟಕಿಯ ಬಳಿಯೂ ಬಂದು ಸುಮ್ಮನೆ ಅಷ್ಟಗಲ ಕಣ್ಣು ಬಿಟ್ಟುಕೊಂಡು ಆ ಜನಸಾಗರದಲ್ಲಿ ನಿಜಕ್ಕೂ ಬಣ್ಣದ ನೆರಳಿನಂತೆಯೇ ನಿಂತಿದ್ದ. ಬಸ್ಸು ವೇಗವಾಗಿ ಸಾಗುತ್ತಿತ್ತು. ನನ್ನ ಮನಸ್ಸು ನೀತಿ ಅನೀತಿಗಳ ಹಳಿಗಳ ಮೇಲೆ ಅನಂತತೆಯ ಹಾದಿ ಕಡೆ ಓಡುತ್ತಿತ್ತು.

**ಡಾ|| ಮೊಗಳ್ಳಿ ಗಣೇಶ್**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬



## ಹದ್ದುಗಳು

ಒಂದು ದಿನ :
ಆಕಾಶದಲ್ಲಿ ಹಾರಾಡುವ ಹದ್ದುಗಳೆಲ್ಲ
ನೀಲಿಯ ಬಯಲಲ್ಲಿ ನೆರೆದು
ನಡೆಸಿದವೊಂದು ಸಮ್ಮೇಳನ

ಬಿನ್ನವತ್ತಳಿಕೆ ಬರೆದು
ಆಕಾಶ ಘೋಷಣೆ ಮೊರೆದು
ನಡೆದರಿಂತು ಮೆರವಣಿಗೆ
ವಿಷ್ಣುಲೋಕದವರೆಗೆ

ಹೊಸದೊಂದು ತಿರುವು
ಆಕಾಶ ಪರಂಪರೆಗೆ

'ದೇವ ದೇವರದೇವ
ಆಗಸ ಸುತ್ತಿ ಸುತ್ತಿ
ಬೇಸತ್ತೆವು ನಾವು
ಹದ್ದು ಕಣ್ಣು ಭೂಮಿಗಿಳಿಸಿ
ಒಂದೇ ಒಂದು ಹೆಣ ಸಿಗದೆ
ನೋವಿನಿಂದ ಅತ್ತೆವು'
ಬಿನ್ನವತ್ತಳಿಕೆ ನೀಡಿ
ಗರುಡನ ಮುಂದೆ ಮಾಡಿ
ಗಳಗಳನೆ ಅತ್ತವು

ಕರುಣೆವರೆದು ಕರುಣಾಸಿಂಧು
ದಿಗ್ಗನೆದ್ದು ಕೇಳಿ ವರವ ಎನ್ನಲು
'ಭೂಮಿಗಿಳಿದು ನಡೆವ ಕಾಲು'
ಎಂದು ಹೊದೆಸೆ ಅವಗೆ ಶಾಲು
'ತಥಾಸ್ತು' ಎಂದ ದೀನಬಂಧು
ಉಘೇ ಉಘೇ ಎಂದವು
ಭೂಮಿಗಿಳಿದು ಬಂದವು

ಸೂಟುಬೂಟು ಧರಿಸಿ ಕೆಲವು
ಸ್ಟೆಥೊಸ್ಕೋಪ್ ಕೊರಳಿಗಿರಿಸಿ
ಮತ್ತೆ ಕೆಲವು ಕೋಟು ಧರಿಸಿ
ಕೋಟಿನೊಳಗೆ ಜೇಬು ಹೊಲಿಸಿ
ಮತ್ತೆ ಕೆಲವು ಟಾಯಿ ಬಿಗಿದು
ತಂಪುಗ್ಲಾಸು ಮೂಗಿಗಿರಿಸಿ

ಹೊತ್ತು ಕೆಲವು ಖಾಕಿ ದಿರಿಸು
ಕೆಂಪುಕಣ್ಣು ಸುತ್ತ ಬೀರಿ
ಪೊದೆ ಮೀಸೆಯ ನೀವಿ ನೀವಿ
ಹೊರಟರಪ್ಪ ಹೊರಟವು
ಬೇರೆ ಬೇರೆ ಹುದ್ದೆಗೆ
ಸರಕಾರಿ ಗದ್ದುಗೆ.

ಮಿಕ್ಕವಷ್ಟು ಖಾದಿ ಹೊಲಿಸಿ
ಅಥವಾ ಕುಂಕುಮದ ಬೊಟ್ಟ ಮೆರೆಸಿ
ಮುಗುಳ ನಗೆಯ ತುಟಿಗೆ ಒರಸಿ
ಜನಸೇವೆಗೆ ನಡೆದವು.

ಇದನರಿಯದ ನಮ್ಮ ಬೋರ
ಹೊತ್ತು ನೂರು ಕನಸ ತೇರ
ಆಫೀಸಿಗೆ ನಡೆದನು
ಒಳಗೆ ಹೆಜ್ಜೆ ಇಟ್ಟನು

ಮೊಳೆ ಜಡಿದ ಗಾಂಧಿ
ಮೇಲೆ
ಕೊಕ್ಕು ಮಸೆದ ಹದ್ದು
ಕೆಳಗೆ
ಬೋಲೋ ಭಾರತ ಮಾತಾಕಿ ಜೈ
ಎಂದು
ಎದ್ದು ನಿಂತವು
ಹದ್ದುಗಳು
ರಣಹದ್ದುಗಳು.

ಆರ್. ವಿ. ಭಂಡಾರಿ, ಕೆರೆಕೋಣ, ಅಂಚೆ : ಅರೆಅಂಗಡಿ, ಹೊನ್ನಾವರ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ

# ವೃತ್ತಿ ಶಿಕ್ಷಣ : ಉಳ್ಳವರ ಶಿವಾಲಯ

**ಕೆ. ಫಣಿರಾಜ್**

"ಅಪ್ಪನು ಡೋಹರ ಕಕ್ಕಯ್ಯನಾಗಿ,
ಮುತ್ತಯ್ಯ ಚೆನ್ನಯ್ಯನಾದರೆ ಆನು ಬದುಕೆನೆ ?
ಮತ್ತಾ ಶ್ವಪಚಯ್ಯನ ಸನ್ನಿಧಿಯಿಂದ
ಭಕ್ತಿಯ ಸದ್ಗುಣವ ನಾನರಿಯೆನೆ ?
ಕಷ್ಟ ಜಾತಿಜನ್ಮದಲ್ಲಿ ಜನಿಯಿಸಿದೆ ಎನ್ನ ?
ಎನಗಿದು ವಿಧಿಯೇ ಕೂಡಲಸಂಗಮದೇವ ?"

– ಬಸವಣ್ಣ (ವಚನ ೨೧೫, ಸಂ.: ಡಾ|| ಎಲ್. ಬಸವರಾಜು
ಗೀತಾ ಬುಕ್ ಹೌಸ್, ೧೯೯೬, ಪು.೮೬)

ಇದು ಏನು ? ವೃತ್ತಿ ಶಿಕ್ಷಣದಂತಹ ಜ್ವಲಂತ ವಿಷಯ ಎತ್ತಿಕೊಂಡು ವಚನ ಪ್ರವಚನ ಶುರುವಿಟ್ಟುಕೊಂಡನಲ್ಲ! ಎಂದು ಹುಬ್ಬೇರಿಸಬೇಡಿ. ಸದರಿ ವಿಷಯ ನಮ್ಮ ಸಮಾಜವಾಸ್ತವಕ್ಕೆ ಹಿಡಿದ ಕನ್ನಡಿಯೂ ಆಗಿದೆ; ಅದರಲ್ಲಿ ನಮ್ಮ ಆತ್ಮವಿಕಾರಗಳನ್ನು ಕಾಣಬೇಕು. ಇಂತಹ ವಿಕಾರಗಳನ್ನು ಮೀರಲು ನಮ್ಮ ನಾಡು-ನುಡಿಯ ಪರಂಪರೆಯಲ್ಲಿ ಉಳಿದುಕೊಂಡಿರುವ ಆತ್ಮಜ್ಞಾನದ ಜೊತೆ ಸಹಯೋಗ ಸಾಧಿಸಬೇಕು. ಇದು ಸಾಧ್ಯವಾಗದೇ ಹೋದರೆ ಸದರಿ ಸಮಾಜವಾಸ್ತವವನ್ನು ಬದಲು ಮಾಡಲು ಫಲಪ್ರದ ಮಾರ್ಗೋಪಾಯಗಳು ನಮಗೆ ದಕ್ಕುವುದಿಲ್ಲ. 'ನೋವಾದ ಹಲ್ಲಿನ ಕಡೆಗೆ ನಾಲಿಗೆ ಮತ್ತೆ ಮತ್ತೆ ಹೊರಳುವಂತೆ ವಚನಯುಗದ ಕಡೆ ನಮ್ಮ ಮನಸ್ಸು ಹೊರಳುತ್ತದೆ' ಎಂದರಲ್ಲ ಗಿರೀಶ್ ಕಾರ್ನಾಡ್, ಆ ರೀತಿಯ ಸಹಯೋಗದ ದಾರಿಯನ್ನು ಅತಿ ಆಧುನಿಕ ಸಮಸ್ಯೆಗಳ ಸಮ್ಮುಖದಲ್ಲೂ ಕಟ್ಟಿಕೊಳ್ಳಬೇಕಾಗುತ್ತದೆ – ಇದು ನನಗೆ ಒಪ್ಪಿತವಾಗಿರುವ ನಿಲುವು. ವಸ್ತುಪ್ರಪಂಚ – ಅದರ ಮೂಲನಿಯಮ ಎಂತಿದ್ದರೂ – ನಮ್ಮ ಸುಭಿಕ್ಷೆಯ ದೃಷ್ಟಿಯಿಂದ ಹೀಗಿರಬೇಕು ಎಂಬ ಸಮಾಜಜೀವಿಗಳ ಸಂಕಲ್ಪವನ್ನು ಆತ್ಮಜ್ಞಾನ ಅಂತ ಇಟ್ಟುಕೊಂಡು ಬಸವಣ್ಣನ ವಚನವನ್ನು ನೋಡಿ. ಬಸವಣ್ಣ ತನ್ನ ಕಾಲದ ಸಮಾಜವಾಸ್ತವವನ್ನು ಬದಲಾಯಿಸುವ ಚಳುವಳಿ ಕಟ್ಟಲು ನಿಂತವನು. ಆತ ಕಟ್ಟಲು ಬಯಸಿರಬಹುದಾದ ಸಮಾಜ ಹಿಂದೆ ಒಂದು ಕಾಲದಲ್ಲಿ ಇದ್ದಂತಹದ್ದಲ್ಲ; ಮುಂದೆ ತನ್ನ ಆದರ್ಶಕ್ಕೆ ಅನುಗುಣವಾಗಿಯೇ ಸಮಾಜ ರೂಪ ಪಡೆಯಬಹುದು ಎನ್ನುವುದರ ಬಗ್ಗೆಯೂ ಆತ ಸಂದೇಹಿ. ಹೀಗಾಗಿ, ಬದಲಾದ ಸಮಾಜ ವಾಸ್ತವಿಕವಾಗಿರುವ ಸಮಾಜಕ್ಕಿಂತ ಹೆಚ್ಚು ಸಹನಶೀಲವೂ, ಕ್ರಿಯಾಶೀಲವೂ ಆಗಿರುವ ಸಂಕಲ್ಪವನ್ನು ಇಟ್ಟುಕೊಳ್ಳದಿದ್ದರೆ, ಕ್ರಾಂತಿಯ ಉತ್ಸಾಹದುಬ್ಬರ ಇಳಿದ ನಂತರ ಮತ್ತದೇ ಅಸಹನೀಯತೆ, ನಿಷ್ಕ್ರಿಯತೆ ಸಮಾಜದ ಮನೋಧರ್ಮವಾಗಿಬಿಡಬಹುದು ಎಂಬ ವಿಷಾದಪೂರ್ಣ ಅನುಮಾನ ಬಸವಣ್ಣನ ಬಹುಪಾಲು ವಚನಗಳ ಗುಣ ಎಂದು ನನಗೆ ಕಾಣುತ್ತದೆ. ಈ ಕಾರಣದಿಂದ ಆತನ ಕಾವ್ಯ ಸಹನಾಶೀಲ, ಕ್ರಿಯಾಶೀಲ ಆತ್ಮಜ್ಞಾನಕ್ಕಾಗಿ ತುಡಿಯುವ ಕಾವ್ಯ. ಡೋಹರು, ಚಮ್ಮಾರರು, ಕಮ್ಮಾರ, ಕುಂಬಾರ, ನೇಕಾರರ ಕಾಯಕಕ್ಕೆ ಬ್ರಾಹ್ಮಣರ ಅಧಿಕಾರಸ್ಥ ಬುದ್ಧಿಕಾಯಕದಷ್ಟೇ ಗೌರವ-ಸಮ್ಮಾನ ತಂದುಕೊಡುವ 'ಸೋಷಿಯಲ್ ಇಂಜಿನಿಯರಿಂಗ್' ಒಂದೇ ಬಸವಣ್ಣನ ಶರಣ ಚಳುವಳಿಯ ಉದ್ದೇಶವಲ್ಲ – ಗಿರೀಶರ 'ತಲೆದಂಡ' ನಾಟಕದ ಬಿಜ್ಜಳ ಸಹ, ಕಾಯಕದ ಹಿರಿಮೆಯಿಂದ ತನ್ನ ರಾಜ್ಯದ ಬೊಕ್ಕಸ ತುಂಬುತ್ತದೆ ಎಂಬ ಕಾರಣಕ್ಕೆ, ಇಂಥ 'ಸೋಷಿಯಲ್ ಇಂಜಿನಿಯರಿಂಗ್'ನ ಬಗ್ಗೆ ದೃಢವಾದ ನಂಬಿಕೆ ಉಳ್ಳವನು. ಬಸವಣ್ಣ ಸಾರ್ಥಕತೆಯನ್ನು ಕಾಣುವುದು ತಾನು ಡೋಹರ ಕಕ್ಕಯ್ಯ, ಮಾದರ ಚೆನ್ನಯ್ಯ, ಶ್ವಪಚಯ್ಯರ ದೇಹ ಮತ್ತು ಆತ್ಮಗಳ ಇರುವಿಕೆಯಲ್ಲಿ ತನ್ನ ಇರುವಿಕೆಯನ್ನು ಕಂಡುಕೊಳ್ಳುವ ಇಷ್ಟಾರ್ಥದಲ್ಲಿ; ಈ ಇಷ್ಟಾರ್ಥ ಸಿದ್ಧಿಗೆ ತನ್ನ ಮೇಲ್ಜಾತಿಯಲ್ಲಿನ ಹುಟ್ಟು ವಿಧಿಯಾಗಿ ಅಡ್ಡಿಪಡಿಸುತ್ತದೆಯೋ ಎಂಬ ವಿಷಾದಭರಿತ ಸಂದೇಹ ಬಸವಣ್ಣನದು. ಎಲ್ಲ ಬಗೆಯ ಕಾಯಕಕ್ಕೂ ಲೌಕಿಕ ಗೌರವ ದಕ್ಕಿದರೆ ಜಾತಿ ತಾರತಮ್ಯ ತಂತಾನೆ ನಾಶವಾಗುತ್ತದೆ ಎನ್ನುವ 'ಟ್ರಿಕಲ್ ಡೌನ್ ಎಫೆಕ್ಟ್'ನಲ್ಲಿ ಬಸವಣ್ಣನಿಗೆ ಗಟ್ಟಿ ವಿಶ್ವಾಸವಿದ್ದಂತಿಲ್ಲ. ಆತನಿಗೆ 'ಆನು ಹಾರುವನೆಂದರೆ' ಅವನ ಅಂತರಂಗವಾದ 'ಕೂಡಲಸಂಗಯ್ಯ ನಗುವನಯ್ಯ' ಎನ್ನುವ ಸಮಾಜ ಮನೋಧರ್ಮದಲ್ಲಿ ಒಂದು ತೂಕ ಹೆಚ್ಚು ನಂಬಿಕೆ – ಇದು ಆತನ ಲೋಕಜ್ಞಾನವನ್ನು ಆಧರಿಸುವ ಆತ್ಮಜ್ಞಾನ.

ವೃತ್ತಿಶಿಕ್ಷಣದ ಇವತ್ತಿನ 'ಬಿಕ್ಕಟ್ಟ'ನ್ನು ಅರ್ಥೈಸಲು ಲೋಕವಿದ್ಯಮಾನಗಳ ತಿಳುವಳಿಕೆ ಅಗತ್ಯ ಎನ್ನುವುದು ಖಂಡಿತಕ್ಕೂ ಸರಿ. ಇನಾಮ್ದಾರ್ v/s ಮಹಾರಾಷ್ಟ್ರ ಸರಕಾರದ ಕೇಸಿನಲ್ಲಿ ಸುಪ್ರೀಮ್ ಕೋರ್ಟಿನ ತೀರ್ಪು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಕಳವಳಕಾರಿಯಾಗಿದೆ – ಸಾರ್ವಜನಿಕ ನೆಲೆಯಲ್ಲಿ ನಾವು ಅದಕ್ಕೆ ಪ್ರತಿಕ್ರಿಯಿಸಬೇಕು, ಪ್ರಜಾಪ್ರಭುತ್ವದಲ್ಲಿ ಲಭ್ಯವಿರುವ ಎಲ್ಲ ಅವಕಾಶಗಳನ್ನು ಬಳಸಿಕೊಂಡು ಸಮತೂಕದ ನ್ಯಾಯ ಒದಗಿಸುವಂತೆ ಸರಕಾರವನ್ನು ಒತ್ತಾಯಿಸುವ ಸಾರ್ವಜನಿಕ ಕ್ರಿಯೆಗಳಲ್ಲಿ ತೊಡಗಿಕೊಳ್ಳಬೇಕು. ಇದು ತತ್ಕಾಲದ ರಾಜಕೀಯ; ಅದಕ್ಕೆ ಅದರದ್ದೇ ಆದ ಮಹತ್ವ ಇದೆ. ಆದರೆ ತತ್ಕಾಲದ ರಾಜಕೀಯ ಕ್ರಿಯೆಗಳು ದೀರ್ಘಕಾಲದಲ್ಲಿ ಸಂಚಯಿತವಾಗಿರುವ ಯಜಮಾನ ಧೋರಣೆಗಳ ಭಾರವನ್ನು ಅಗತ್ಯವಾಗಿ ಹೊತ್ತುಕೊಳ್ಳಬೇಕು. ಸದ್ಯದ 'ಬಿಕ್ಕಟ್ಟಿ'ನಲ್ಲಿ ಪ್ರಚಲಿತ ಅಧಿಕಾರಸ್ಥ ಧೋರಣೆಯ ಪಾಲು ಎಷ್ಟು? ಸಾರ್ವಜನಿಕ ಸಹಮತದಿಂದ ರೂಢವಾಗಿಬಿಟ್ಟಿರುವ ಯಜಮಾನ ಧೋರಣೆಗಳ ಪಾಲು ಎಷ್ಟು? ಎಂದು ಯೋಚಿಸುವ ವ್ಯವಧಾನವನ್ನು ತತ್ಕಾಲದ ರಾಜಕೀಯ ಅಂತರ್ಗತಗೊಳಿಸಿ ಕೊಳ್ಳಬೇಕು. ಇಲ್ಲವಾದಲ್ಲಿ ನಾವು ಯಜಮಾನರ ಆಟವನ್ನು ಅವರ ನಿಯಮಾನುಸಾರ ಆಡುವ ಎದುರಾಳಿಗಳಾಗಿ ಉಳಿದುಬಿಡುತ್ತೇವೆ. ಈಗಾಗಲೇ **ಹೊಸತು**ವಿನಲ್ಲಿ ಸುಪ್ರೀಂ ಕೋರ್ಟ್ ತೀರ್ಪಿನ ಬಗ್ಗೆ ಸಾಮಾಜಿಕ ನ್ಯಾಯದ ನೆಲೆಯಿಂದ ಹೇಳಬೇಕಾದ್ದನ್ನು ಸ್ನೇಹಿತರು ಪರಿಣಾಮಕಾರಿಯಾಗಿ ಹೇಳಿದ್ದಾರೆ. ನಾನು ವೃತ್ತಿಶಿಕ್ಷಣದ ವಿಷಯದಲ್ಲಿ ಅಗತ್ಯವಿರುವ ಆತ್ಮಜ್ಞಾನದ ಕುರಿತು ಮಾತಾಡುವುದು ಲೇಸೆಂದು ಭಾವಿಸುತ್ತೇನೆ.

ಆಧುನಿಕ ಯುಗದಲ್ಲಿ ವೃತ್ತಿಶಿಕ್ಷಣದ ಗತಿ, ವಿಜ್ಞಾನ-ತಂತ್ರಜ್ಞಾನಗಳ ಸಾಮಾಜಿಕ ಉಪಯುಕ್ತತೆಯ ಬಗ್ಗೆ ದೇಶದ ಪ್ರಭುತ್ವ ರೂಢಿಸಿಕೊಳ್ಳುವ ಧೋರಣೆಯನ್ನು ಅವಲಂಬಿಸಿರುತ್ತದೆ. ಇಂತಹ ಸನ್ನಿವೇಶದಲ್ಲಿ ವೃತ್ತಿಶಿಕ್ಷಣ ಎರಡು ಪಾತ್ರಗಳನ್ನು ನಿರ್ವಹಿಸ ಬೇಕಾಗುತ್ತದೆ :

(೧) ಆಧುನಿಕ ಉತ್ಪಾದನಾ ವಹಿವಾಟಿಗೆ ಅಗತ್ಯವಿರುವ ಕಸುಬುದಾರಿಕೆಯನ್ನು ಕಲಿಸಿ, ಆ ಕಸುಬುದಾರಿಕೆಯನ್ನು ತಮ್ಮ ಸಾಮಾಜಿಕ ಅಗತ್ಯಗಳ ಪೂರೈಕೆಗೆ ಏಕೈಕ ಆಧಾರವಾಗಿಟ್ಟುಕೊಂಡಿರುವ ಮಾನವ ಸಮೂಹವನ್ನು ರೂಪಿಸುವುದು – ಆಧುನಿಕ ಪರಿಭಾಷೆಯಲ್ಲಿ ಇಂತಹ ಮಾನವ ಸಮೂಹವನ್ನು 'ಮಾನವ ಸಂಪನ್ಮೂಲ' ಎನ್ನುತ್ತಾರೆ. ಇಲ್ಲಿ 'ಸಂಪನ್ಮೂಲ' ಎನ್ನುವ ಪದವನ್ನು ವಕ್ರವಾಗಿ ನೋಡಬೇಕು. ಆಧುನಿಕ ಶಿಕ್ಷಣವನ್ನು ನೆಚ್ಚಿಕೊಂಡು ಜೀವಿಸುವವರು ಬಹುಶ್ರುತ ಜ್ಞಾನಿಗಳಾಗಿರಬೇಕಾಗಿಲ್ಲ; ಕಾಲಮಾನದಲ್ಲಿ ಚಾಲ್ತಿಯಲ್ಲಿರುವ ಸರಕು ಉತ್ಪಾದನೆಗೆ ತಕ್ಕುದಾದ ವಿಶೇಷ ಜ್ಞಾನವನ್ನು, ಎಷ್ಟು

ವೃತ್ತಿಶಿಕ್ಷಣದ ಇವತ್ತಿನ 'ಬಿಕ್ಕಟ್ಟ'ನ್ನು ಅರ್ಥೈಸಲು ಲೋಕವಿದ್ಯಮಾನಗಳ ತಿಳುವಳಿಕೆ ಅಗತ್ಯ ಎನ್ನುವುದು ಖಂಡಿತಕ್ಕೂ ಸರಿ. ಇನಾಮ್ದಾರ್ v/s ಮಹಾರಾಷ್ಟ್ರ ಸರಕಾರದ ಕೇಸಿನಲ್ಲಿ ಸುಪ್ರೀಮ್ ಕೋರ್ಟಿನ ತೀರ್ಪು ಸಾಮಾಜಿಕ ನ್ಯಾಯದ ದೃಷ್ಟಿಯಿಂದ ಕಳವಳಕಾರಿಯಾಗಿದೆ – ಸಾರ್ವಜನಿಕ ನೆಲೆಯಲ್ಲಿ ನಾವು ಅದಕ್ಕೆ ಪ್ರತಿಕ್ರಿಯಿಸಬೇಕು. ಪ್ರಜಾಪ್ರಭುತ್ವದಲ್ಲಿ ಲಭ್ಯವಿರುವ ಎಲ್ಲ ಅವಕಾಶಗಳನ್ನು ಬಳಸಿಕೊಂಡು ಸಮತೂಕದ ನ್ಯಾಯ ಒದಗಿಸುವಂತೆ ಸರಕಾರವನ್ನು ಒತ್ತಾಯಿಸುವ ಸಾರ್ವಜನಿಕ ಕ್ರಿಯೆಗಳಲ್ಲಿ ತೊಡಗಿಕೊಳ್ಳಬೇಕು. ಇದು ತತ್ಕಾಲದ ರಾಜಕೀಯ; ಅದಕ್ಕೆ ಅದರದ್ದೇ ಆದ ಮಹತ್ವ ಇದೆ.

ಅಗತ್ಯವೋ ಅಷ್ಟನ್ನು ಮಾತ್ರ ಕಲಿತಿದ್ದರೆ ಸಾಕು. ನಿಸರ್ಗ ಸಹಜ ವಸ್ತುಗಳಿಗೆ ಬೇರೆ ನೂರು ಗುಣಮೌಲ್ಯಗಳಿದ್ದರೂ, ಸರಕು ಉತ್ಪಾದನೆಯಲ್ಲಿ ಅವುಗಳ ಸ್ಥಾನವೆಷ್ಟೋ ಅಷ್ಟರಮಟ್ಟಿಗೆ ಮಾತ್ರ ಅವುಗಳ ಬೆಲೆ ಇದ್ದ ಹಾಗೆ, ಆಧುನಿಕ ಸರಕು ಉತ್ಪಾದನೆಯಲ್ಲಿ ಮನುಷ್ಯರ ಜ್ಞಾನದ ಬೆಲೆ. ಹೀಗಾಗಿ ಸರಕು ಉತ್ಪಾದನೆ ಆಧುನಿಕ ವೃತ್ತಿಶಿಕ್ಷಣದ ವಿಧಿ ಎಂದರೂ ಅಡ್ಡಿಯಿಲ್ಲ.

(೨) ಆಧುನಿಕ ಕೈಗಾರಿಕೆ ಆಧಾರಿತ ಸಮಾಜದ (ಇಂಡಸ್ಟ್ರಿಯಲ್ ಸೊಸೈಟಿ) ಸಾಮಾಜಿಕ ಮೌಲ್ಯಗಳನ್ನು ನಿರೂಪಿಸುವುದು. ಈ ಮೌಲ್ಯಗಳು ಸರಕು ಉತ್ಪಾದಕರ ಹಿತಾಸಕ್ತಿಯನ್ನು ಕಾಪಾಡುವಂತಹುದು ಆಗಿರಬೇಕು ಎನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸಮಾಜದಲ್ಲಿ ಬದುಕುತ್ತಿರುವ ಮನುಷ್ಯರ ಅಸ್ತಿತ್ವವನ್ನು ಹೇಗೆ ಗ್ರಹಿಸಬೇಕು, ಜೀವಪೋಷಕವಾದ ನೈಸರ್ಗಿಕ ಸಂಪನ್ಮೂಲಗಳ ಬಗ್ಗೆ ಯಾವ ದೃಷ್ಟಿ ಬೆಳೆಸಿಕೊಳ್ಳಬೇಕು, ಸಾರ್ವಜನಿಕ ವ್ಯವಹಾರ – ವಹಿವಾಟುಗಳಲ್ಲಿ ನೈತಿಕತೆ- ಅನೈತಿಕತೆಗಳ ಪರಿಭಾಷೆ ಯಾವುದಾಗಿರಬೇಕು – ಇವೇ ಮುಂತಾದ ಮೌಲ್ಯರಚನಾ ಕ್ರಿಯೆಗಳನ್ನು ಇಂದು ನಾವು 'ಮ್ಯಾನೇಜ್‌ಮೆಂಟ್ ಸ್ಕಿಲ್' ಎನ್ನುತ್ತಿರುವುದು.

ಈ ರೀತಿಯಲ್ಲಿ ವೃತ್ತಿಶಿಕ್ಷಣ, ವಿಜ್ಞಾನ-ತಂತ್ರಜ್ಞಾನಗಳಲ್ಲಿ ವಿಶೇಷ ಪರಿಣತಿ ಹೊಂದುವ ಮಾಧ್ಯಮವಾಗಿರುವ ಹೊತ್ತಿಗೇ ಆಧುನಿಕ ಕೈಗಾರಿಕಾ ಸಮಾಜದಲ್ಲಿ ಸರಕು ಉತ್ಪಾದಕರ ಯಜಮಾನಿಕೆಯನ್ನು ರೂಢಿಸುವ ಮುಖ್ಯ ಮಾಧ್ಯಮವೂ ಆಗಿಬಿಟ್ಟಿದೆ. ವೃತ್ತಿಶಿಕ್ಷಣ ಪಡೆಯುವುದು ಎಂದರೆ ಸಮಾಜದ ಅಧಿಕಾರ ಸೌಧದ ಮುಂಬಾಗಿಲು ತಲುಪಲು ಒಂದು ಮೆಟ್ಟಿಲು ಹತ್ತಿದ ಹಾಗೆ. ಸರಕು ಉತ್ಪಾದನೆಯ ಜೊತೆ ವೃತ್ತಿಶಿಕ್ಷಣ ಹೊಂದಿರುವ ಈ ನಮೂನೆಯ ಸಂಬಂಧದಿಂದಾಗಿ ವೃತ್ತಿಶಿಕ್ಷಣ ಪದವಿಗೆ ಉಳಿದ ಪದವಿಗಳಿಗಿಂತ ದುಪ್ಪಟ್ಟು ಮೌಲ್ಯ ದೊರೆತುಬಿಡುತ್ತದೆ – ರೂಪಾಯಿಯ ಸಮ್ಮುಖ ಡಾಲರಿನ ಹಾಗೆ. ಜೀವನ ನಿರ್ವಹಣೆಗೆ ಒಂದಲ್ಲ ಒಂದು ಆಧುನಿಕ ಚಾಕರಿಯನ್ನು ನೆಚ್ಚಿಕೊಂಡವರಿಗೆ ವೃತ್ತಿಶಿಕ್ಷಣ ಕಾಮಧೇನುವಾಗಿ ಕಾಣುವುದು ಸಹಜ. ಇಂದು ನಮ್ಮ ದೇಶದಲ್ಲಿ ವೃತ್ತಿಶಿಕ್ಷಣ ಅಕ್ಷಯ ಬಂಗಾರ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವ ಕಲ್ಪನೆಯ ತಾಣ 'ಎಲ್ ಡೊರಾಡೊ' ತರಹ ಆಗಿದೆ. ನಾವೆಲ್ಲ, ಎಲ್ಲರಿಗಿಂತ ಮೊದಲು ಅಲ್ಲಿಗೆ ತಲುಪಿ ಸಾಧ್ಯವಾದಷ್ಟನ್ನು ಬಾಚಿಕೊಳ್ಳುವ ಗುಂಗಿನಲ್ಲಿ, ಆ ಎಲ್ ಡೊರಾಡೊ ಹುಡುಕಿಹೊರಟ ಪಯಣಿಗರು. ವೃತ್ತಿಶಿಕ್ಷಣ ಕುರಿತ ಯಾವುದೇ ಚರ್ಚೆಯೂ ಅದರ ಈ ಸ್ವರೂಪವನ್ನು ಅವಗಣನೆ ಮಾಡಕೂಡದು.



೧೯೮೦ರ ದಶಕದಲ್ಲಿ ಖಾಸಗೀಕರಣದ ಭರಾಟೆ ಶುರುವಾದ ಮೇಲೆ, ಸರಕು ಉತ್ಪಾದನೆಯಲ್ಲಿ ಹಣಹೂಡಿ ಲಾಭ ಪಡೆಯುವ ಕಂಪನಿಗಳ ಸಂಖ್ಯೆ ವೃದ್ಧಿಯಾದ ಹಾಗೆ ಉತ್ಪಾದನೆಗೆ ಮಾನವಸಂಪನ್ಮೂಲ ಒದಗಿಸುವ ಕಾರ್ಯದಲ್ಲಿ ಖಾಸಗಿ ಹಣ ಹೂಡುವುದು ಸಹಜವಾಯಿತು. ಎಲ್ ಡೊರಾಡೊ ಒಂದಿದೆ ಎಂದ ಮೇಲೆ, ಅಲ್ಲಿಗೆ ಕರೆದೊಯ್ಯುವ ಏಜೆಂಟರು ಹುಟ್ಟಿಕೊಳ್ಳದಿರುತ್ತಾರೆಯೇ! ೧೯೬೦-೭೦ರ ದಶಕದಲ್ಲಿ ಹಾಲಿವುಡ್‌ನ ಜನಪ್ರಿಯ ನಟ, ನಿರ್ದೇಶಕ ಕ್ಲೈಂಟ್ ಈಸ್ಟ್‌ವುಡ್, ಗುಪ್ತಖಜಾನೆ ಹುಡುಕಿಹೊರಟವರ ಕಥಾವಸ್ತುವನ್ನುಳ್ಳ ಸರಣಿ ಮಾರಾಮಾರಿ ಚಿತ್ರಗಳನ್ನು ಮಾಡಿದ. ಅಂತಹ ಒಂದು ಸಿನಿಮಾದಲ್ಲಿ ಖಜಾನೆ ಅರಸಿಹೊರಟ ಖಳನಾಯಕ ಮಾರ್ಗದರ್ಶಿಯಾಗಲು ಹಿಂದೆಮುಂದೆ ನೋಡುವ ಒಬ್ಬನಿಗೆ ಹೇಳುವ ಮಾತು 'ಯು ಟೇಕ್ ಮಿ ದೇರ್ ಅಂಡ್ ಈಟ್ ಕಾಯಿನ್ಸ್! ಸೇ ನೋ ಅಂಡ್ ಈಟ್ ಬುಲೆಟ್ಸ್! ಹೇ ಚಾಯ್ಸ್ ಇಸ್ ಯುವರ್ಸ್!' ಇಂದು ಮಕ್ಕಳನ್ನು ವೃತ್ತಿಶಿಕ್ಷಣಕ್ಕೆ ಹಾಕುವ ಪಾಲಕರ ಸ್ಥಿತಿಯೂ ಅದೇ ಆಗಿದೆ. ಇವತ್ತು ನಾವು ಗುರುತಿಸುತ್ತಿರುವ 'ಬಿಕ್ಕಟ್ಟು' ೮೦ರ ದಶಕದ ಉತ್ತರಾರ್ಧದಲ್ಲಿ ಕಾಣಿಸಿಕೊಂಡದ್ದಾದರೂ, ಇದರ ಬೇರು ೧೯೫೦ರ ದಶಕದಲ್ಲಿದೆ. ವಿಜ್ಞಾನ-ತಂತ್ರಜ್ಞಾನಗಳ ಸಾಧನೆಯನ್ನು ನವಭಾರತದ ಪ್ರಭುತ್ವ ಗ್ರಹಿಸಿ, ಅಧಿಕೃತ ನೀತಿಯ ರೂಪದಲ್ಲಿ ದೇಶದಲ್ಲಿ ಅನುಷ್ಠಾನಗೊಳಿಸಿದ ಕ್ರಮದಲ್ಲಿಯೇ, ವೃತ್ತಿಶಿಕ್ಷಣದ ಯಜಮಾನ ಪ್ರತಿಷ್ಠೆಯ ಓನಾಮ ಶುರುವಾಯಿತು. ವಸಾಹತುಶಾಹಿಯಿಂದ ವಿಮೋಚನೆಗೊಂಡು ಸ್ವತಂತ್ರ ಪ್ರಭುತ್ವವಾಗಿ ರೂಪ ಪಡೆದ ಭಾರತಕ್ಕೆ, ದೇಶದ ಆಂತರಿಕ ಉತ್ಪಾದನೆಯನ್ನು ಸದೃಢಗೊಳಿಸಿ, ವೇಗವಾಗಿ ಆರ್ಥಿಕ ಅಭಿವೃದ್ಧಿ ಸಾಧಿಸುವ ಮೂಲಕ ಜಾಗತಿಕ ರಾಷ್ಟ್ರ ಸಮೂಹದಲ್ಲಿ ಮನ್ನಣೆ ಗಳಿಸುವ ಮಾರ್ಗಗಳನ್ನು ಕಂಡುಕೊಳ್ಳುವ ಜರೂರು ಇತ್ತು. ಸ್ವಾವಲಂಬಿ ಆರ್ಥಿಕ ಶಕ್ತಿಯಾಗಿ ಬೆಳೆಯದಿದ್ದಲ್ಲಿ, ದೇಶದ ಸಂಪನ್ಮೂಲಗಳ ಮೇಲೆ ಪ್ರಬಲ ರಾಷ್ಟ್ರಗಳ ಕಣ್ಣುಬೀಳುವುದು ಹಾಗೂ ಸುಧಾರಿತ ನಮೂನೆಯ ವಸಾಹತೀಕರಣಕ್ಕೆ ದೇಶ ತುತ್ತಾಗುವ ವಾಸ್ತವಿಕ ಆತಂಕವೂ ಇತ್ತು. ಆಂತರಿಕ ಆರ್ಥಿಕ ಅಭಿವೃದ್ಧಿಗೂ ರಾಜಕೀಯ ಸ್ವಾತಂತ್ರ್ಯಕ್ಕೂ ನೇರವಾದ ಸಂಬಂಧವಿದೆ ಎಂಬ ಸಮಾಜಶಾಸ್ತ್ರೀಯ ದೃಷ್ಟಿಕೋನದಲ್ಲಿ, ಗಾಂಧೀಜಿಯನ್ನು ಹೊರತುಪಡಿಸಿ, ಆ ಕಾಲದ ಎಲ್ಲ ಅಗ್ರನಾಯಕರಿಗೂ ಅಪಾರವಾದ ನಂಬಿಕೆ ಇತ್ತು. (ಈ ದೃಷ್ಟಿಯನ್ನು ಇಟ್ಟುಕೊಂಡು ದೇಶದ ಅಭಿವೃದ್ಧಿ ನೀತಿಗಳ ಅನುಷ್ಠಾನದ ನಾಯಕತ್ವ ವಹಿಸಿದವರು ನೆಹರು ಎಂಬುದು ನಿಜವಾದರೂ, ಅಭಿವೃದ್ಧಿಯ ಈ ಪಥದ ಬಗ್ಗೆ ಭಿನ್ನ ವೈಚಾರಿಕ ನಿಲುವಿನ ವಿವಿಧ ರಾಜಕೀಯ ಪಕ್ಷಗಳಿಗೆ ಸಂಪೂರ್ಣ ಸಹಮತವಿತ್ತು). ೪೦ ಕೋಟಿ ಜನಸಂಖ್ಯೆ, ಅದರಲ್ಲಿ ಅರ್ಧಕ್ಕಿಂತ ಹೆಚ್ಚು ಜನ ಆಸ್ತಿಹೀನ ಬಡವರು; ನೂರರಲ್ಲಿ ಎಪ್ಪತ್ತು ಜನ ಕೃಷಿಯಾಧಾರಿತ ಕಸುಬುಗಳನ್ನು ನಂಬಿಕೊಂಡು ಹೊಟ್ಟೆ ಹೊರೆಯುವವರು. ಇಂತಹ ಸನ್ನಿವೇಶದಲ್ಲಿ ಕ್ಷಿಪ್ರ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು ಹೇಗೆ? ಎನ್ನುವ ಸಮಸ್ಯೆ ನವಭಾರತದ ಪ್ರಭುತ್ವದ ಮುಂದೆ ಇತ್ತು. ಆ ಹೊತ್ತಿಗೆ ಆಗಲೇ ಜಾಗತಿಕ ವಲಯದಲ್ಲಿ ರಾಷ್ಟ್ರದ ಅಭಿವೃದ್ಧಿಯನ್ನು ಅಳೆಯಲು ಬೃಹತ್ ಆರ್ಥಿಕ ಸೂಚಕಗಳು (ಮ್ಯಾಕ್ರೊ ಇಕನಾಮಿಕ್ ಇಂಡಿಕೇಟರ್ಸ್) – ಜಿ.ಎನ್.ಪಿ. (ಒಟ್ಟು ರಾಷ್ಟ್ರೀಯ ಉತ್ಪನ್ನ), ಜಿ.ಡಿ.ಪಿ. (ಒಟ್ಟು ದೇಶೀಯ ಉತ್ಪನ್ನ), ತಲಾವಾರು ವರಮಾನ ಮುಂತಾದುವು – ಆಕರ್ಷಕ ಪ್ರಮಾಣಗಳಾಗಿಬಿಟ್ಟಿದ್ದವು. ನಮ್ಮ ಪ್ರಭುತ್ವವು ವೇಗವಾಗಿ ತನ್ನ ಬೃಹತ್ ಆರ್ಥಿಕ ಸೂಚಕಗಳ ಬೆಳವಣಿಗೆ ದಾಖಲಿಸುವ ಇರಾದೆಯಿಂದ ತಂತ್ರಜ್ಞಾನ ಉತ್ಕರ್ಷಿತ ಅಭಿವೃದ್ಧಿ ಮಾರ್ಗವನ್ನು ತುಂಬು ಉತ್ಸಾಹದಿಂದ ಅಪ್ಪಿಕೊಂಡಿತು. ಬೃಹತ್ ಅಣೆಕಟ್ಟುಗಳ ನಿರ್ಮಾಣ, ಉಕ್ಕಿನ ಉತ್ಪಾದನೆ, ಗಣಿಗಾರಿಕೆ, ಅಣುವಿಜ್ಞಾನ, ಬೃಹತ್ ವಿದ್ಯುಚ್ಛಕ್ತಿ ಉತ್ಪಾದನೆ, ಹಸಿರು ಕ್ರಾಂತಿ, ಭಾರಿ ಸೈನ್ಯ ವ್ಯವಸ್ಥೆ – ಹೀಗೆ ತಂತ್ರಜ್ಞಾನ ಕೇಂದ್ರಿತ ಯೋಜನೆಗಳು ರಾಷ್ಟ್ರಾಭಿವೃದ್ಧಿಯ ಪ್ರಶ್ನಾತೀತ ಪ್ರತಿಮೆಗಳಾದವು. ಈ ಅಭಿವೃದ್ಧಿಯ ಕಥಾನಕದಲ್ಲಿ ತಂತ್ರಜ್ಞಾನಕ್ಕೆ ಅಧಿಕಾರಯುಕ್ತ ಸ್ಥಾನ ಇದ್ದುದರಿಂದ ವೃತ್ತಿಶಿಕ್ಷಣಕ್ಕೂ ಅಧಿಕಾರಯುಕ್ತ ಸ್ಥಾನ ಪ್ರಾಪ್ತವಾಯಿತು. ೧೯೫೦-೫೧ರಲ್ಲಿ ಆದಾಗಲೇ ಪ್ರತಿ ೧೦೦೦ ಪ್ರಾಥಮಿಕ ಶಾಲೆಗಳಿಗೆ ೧ ವೃತ್ತಿಶಿಕ್ಷಣ ಸಂಸ್ಥೆ ಇತ್ತು (೧೯೯೯-೨೦೦೦ದಲ್ಲಿ ಪ್ರತಿ ೩೦೦ ಪ್ರಾಥಮಿಕ ಶಾಲೆಗಳಿಗೆ ೧ ವೃತ್ತಿಶಿಕ್ಷಣ ಸಂಸ್ಥೆ ಇತ್ತು). ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಲ್ಲಿ ಸರಕಾರ ಪ್ರತಿಯೊಬ್ಬ ವಿದ್ಯಾರ್ಥಿಯ ವಿದ್ಯಾಭ್ಯಾಸಕ್ಕೆ ೪ ಪೈಸೆ ಖರ್ಚು ಮಾಡಿದರೆ, ವೃತ್ತಿಶಿಕ್ಷಣದಲ್ಲಿ ಪ್ರತಿ ವಿದ್ಯಾರ್ಥಿಯ ಮೇಲೆ ಸುಮಾರು ೧೪-೧೮ ಪೈಸೆ ಖರ್ಚು ಮಾಡುತ್ತಿತ್ತು; ಪರಿಸ್ಥಿತಿ ಈಗಲೂ ಹಾಗೇ ಇದೆ. ಪ್ರಾಥಮಿಕ ಶಾಲೆ ಸೇರಿದ ಪ್ರತಿ ನೂರು ಹುಡುಗ-ಹುಡುಗಿಯರಲ್ಲಿ ಉನ್ನತ ಶಿಕ್ಷಣ ಪಡೆಯುವವರು ೧೦ಕ್ಕಿಂತ ಕಡಿಮೆ. ಈ ೧೦ರಲ್ಲಿ ಹೆಂಗಸರು ಮತ್ತು ದಲಿತರ ಸಂಖ್ಯೆ ನಗಣ್ಯ. ಸಾರಾಂಶವಿಷ್ಟೆ:

## ಫೋನು

ರಿಂಗಣಿಸಿತು ಫೋನು...
ಯಾವುದೀ ಟೋನು ?
ಅಳುವ ಕಡಲಿನದೆ ?
ನಗುವ ದೋಣಿಯದೆ

ವಿಜಯಕಾಂತ ಪಾಟೀಲ
ಚಿಕ್ಕಾಂಶಿ, ಹೊಸೂರು - ೫೮೧ ೧೦೪
ಹಾವೇರಿ ಜಿಲ್ಲೆ

ಮೊದಲಿನಿಂದಲೂ ವೃತ್ತಿಶಿಕ್ಷಣ ಪಡೆಯುವವರು ಅಧಿಕಾರಸ್ಥರ ಮುದ್ದಿನ ಕೂಸುಗಳು, ಈ ಕೂಸುಗಳಲ್ಲಿ ಹುಡುಗಿಯರು ಹಾಗೂ ದಲಿತರ ಸಂಖ್ಯೆ ತೀರ ಕಡಿಮೆ. ಸರಿಯಪ್ಪ, ಈಗ ಆ ಒಂದೋ ಎರಡು ಕೂಸುಗಳು ಮಾಯವಾಗುತ್ತಿವೆಯಲ್ಲ ಎನ್ನುವ ಮಾತನ್ನು ನಾನೂ ಒಪ್ಪುತ್ತೇನೆ. ನನ್ನ ವಾದ ಇಷ್ಟೆ – ವೃತ್ತಿಶಿಕ್ಷಣವನ್ನು ಸ್ವಾತಂತ್ರ್ಯದಾರಭ್ಯ ಅಭಿವೃದ್ಧಿಯ ಅಧಿಕಾರವಾಣಿಯನ್ನು ರಚಿಸುವ ವ್ಯಾಕರಣವೆಂದು ಪರಿಗಣಿಸಲಾಗಿತ್ತೇ ವಿನಾ ಸಾಮಾಜಿಕ ನ್ಯಾಯ ವಿಸ್ತರಣೆಯ ಸಾಧನವಾಗಿ ಅಲ್ಲ. ವೃತ್ತಿಶಿಕ್ಷಣದ ಸ್ವರೂಪ ಮತ್ತು ಪ್ರಸಾರ ವೈಖರಿಯನ್ನು ರಾಷ್ಟ್ರಾಭಿವೃದ್ಧಿಯ ಪರಿಕಲ್ಪನೆಯನ್ನು ಯಶಸ್ವಿಗೊಳಿಸುವ ರೀತಿ ನಿರೂಪಿಸಬೇಕು ಹಾಗೂ ಈ ತೆರನಾದ ನಿರೂಪಣೆಗೆ ಸಾಮಾಜಿಕ ನ್ಯಾಯದ ಹಂಗು ಇರತಕ್ಕದ್ದಲ್ಲ ಎಂಬ ವೈಚಾರಿಕ ನಿಲುವು ಕಳೆದ ೫೫ ವರ್ಷಗಳಿಂದಲೂ ಚಾಲ್ತಿಯಲ್ಲಿ ಇದ್ದು, ಸಾಮಾಜಿಕ ಸಹಮತವನ್ನೂ ಪಡೆದುಕೊಂಡುಬಿಟ್ಟಿದೆ. ಸುಪ್ರೀಮ್ ಕೋರ್ಟಿನ ನಿರ್ಣಯದಿಂದ ಯಾವ 'ಬಿಕ್ಕಟ್ಟು' ಉದ್ಭವಿಸಿದೆ ಎಂದು ನಾವು ಅಂದುಕೊಳ್ಳುತ್ತಿದ್ದೇವೋ, ಅದು 'ಬಿಕ್ಕಟ್ಟಾಗಿ'ರದೆ, ೫೫ ವರ್ಷಗಳ ಯಜಮಾನಿಕೆಯ ಪುನರುಚ್ಚಾರವಾಗಿದೆ. ನಾವು ಇದನ್ನು ವಿರೋಧಿಸುವುದೇ ಆಗಿದ್ದಲ್ಲಿ, ತಂತ್ರಜ್ಞಾನ ಉತ್ಕರ್ಷಿತ ಅಭಿವೃದ್ಧಿ ಮಾದರಿಯನ್ನೂ ಎದುರುಹಾಕಿಕೊಂಡು ಅದರ ಫಲಾಫಲಗಳನ್ನೂ ವಿವೇಚಿಸಬೇಕು.

ವೃತ್ತಿಶಿಕ್ಷಣಕ್ಕೆ ಸಂಬಂಧಿಸಿದ ಚರ್ಚೆಯಲ್ಲಿ ನಮ್ಮ ಪ್ರಭುತ್ವದ ಅಭಿವೃದ್ಧಿ ಮಾದರಿಯನ್ನು ಪ್ರಸ್ತಾಪಿಸುವುದು ಅನೇಕರಿಗೆ ಕಿರಿಕಿರಿಯುಂಟುಮಾಡುತ್ತದೆ ಎಂದು ಬಲ್ಲೆ. ಈ ಕಾರಣವಾಗಿಯೇ, ಉದಾಹರಣೆ ಸಹಿತ ನನ್ನ ನಿಲುವನ್ನು ಸ್ಪಷ್ಟಪಡಿಸಲು ಇಚ್ಛಿಸುತ್ತೇನೆ. ಭಾರತದಲ್ಲಿ, ಕಳೆದ ೫೫ ವರ್ಷಗಳಲ್ಲಿ ಅಭಿವೃದ್ಧಿ ಯೋಜನೆಗಳ ಫಲವಾಗಿ ೬ ಕೋಟಿ ಜನ ತಮ್ಮ ಮನೆ ಮಠ ಕಳೆದುಕೊಂಡು ನಿರ್ವಸಿತರಾಗಿದ್ದಾರೆ. ಈ ಯೋಜನೆಗಳ ಒಂದು ಪೈಸೆ ಲಾಭವೂ ಈ ನಿರ್ವಸಿತರಿಗೆ ದಕ್ಕುತ್ತಿಲ್ಲ. ಈ ಯೋಜನೆಗಳ ಚರಿತ್ರೆಯನ್ನು ಒಂದೊಂದಾಗಿ ಎತ್ತಿಕೊಂಡು ನೋಡಿದರೆ, ಇವು (ಚೋಮ್‌ಸ್ಕಿಯ ಮಾತಿನಲ್ಲಿ) 'ಹಸಿದವರಿಂದ ಕಿತ್ತುಕೊಂಡು ಹೊಟ್ಟೆಬಾಕರಿಗೆ ಉಣ್ಣಿಸುವ' ಯೋಜನೆಗಳಾಗಿವೆ ಎನ್ನುವುದು ನಿಚ್ಚಳವಾಗಿ ಕಾಣುತ್ತದೆ. ಆದರೂ ನಾವು 'ದೇಶದ ಅಭಿವೃದ್ಧಿಗಾಗಿ ಇಂಥ ತ್ಯಾಗಗಳನ್ನು ಮಾಡಬೇಕಾಗುತ್ತದೆ' ಎಂದು ಕೈತೊಳೆದುಕೊಂಡುಬಿಡುತ್ತೇವೆ. ಅಭಿವೃದ್ಧಿ ಯೋಜನೆಗಳ ಫಲ ಪರೋಕ್ಷವಾಗಿ ಎಲ್ಲರನ್ನೂ ತಲುಪುತ್ತದೆ ಎಂಬ 'ಟ್ರಿಕ್ಲ್ ಡೌನ್ ಥಿಯರಿ'ಯ ಹತ್ಯಾರವೂ ನಮ್ಮಲ್ಲಿ ಉಂಟು. ಕೇರಳದ ಪಾಲಘಾಟ್ ಜಿಲ್ಲೆಯ ಪ್ಲಾಚಿಮಡ ಗ್ರಾಮದ ಉದಾಹರಣೆ ನೋಡಿ. ಅಲ್ಲಿ ಕೊಕಾಕೋಲಾ ಕಂಪನಿಯವರು ೨೦೦೦ದ ಇಸವಿಯಲ್ಲಿ ಒಂದು ಉತ್ಪಾದನಾ ಘಟಕ ಸ್ಥಾಪಿಸಿದರು. ಕೋಲಾದ ಉತ್ಪಾದನೆಗೆ ಬೇಕಾದ ಶುದ್ಧವಾದ ನೀರನ್ನು ಆಳ ಬೋರ್ ಹಾಕಿ ದಿನವೊಂದಕ್ಕೆ ಮೂರೂವರೆ ಲಕ್ಷ ಲೀಟರ್ ಎಳೆದುಕೊಳ್ಳಲು ಶುರುಮಾಡಿದರು. ಇದರ ಪರಿಣಾಮವಾಗಿ ಎರಡೇ ವರ್ಷಗಳಲ್ಲಿ ಪ್ಲಾಚಿಮಡ ಹಾಗೂ ಆ ಹಳ್ಳಿಯ ಸುತ್ತಮುತ್ತಲಿನ ಊರುಗಳ ಬಾವಿಗಳಲ್ಲಿ ನೀರು ಬತ್ತಿ ಜನ ಕುಡಿಯುವ ನೀರಿಗೆ ಒದ್ದಾಡುವ ಪರಿಸ್ಥಿತಿ ಬಂತು. ಜನ ಕಂಪನಿಯ ಲೂಟಿಯ ವಿರುದ್ಧ ಚಳುವಳಿ ಮಾಡಿದ್ದಕ್ಕೆ ಕೇಸು ಜಡಿಯಲಾಯಿತು. ಕೊನೆಗೆ ೨೦೦೩ರಲ್ಲಿ ಪ್ಲಾಚಿಮಡ ಇರುವ ಪೆರುಮಟ್ಟಿ ಗ್ರಾಮ ಪಂಚಾಯತಿ ಕೋಲಾ ಕಂಪನಿಯ ಪರವಾನಗಿ ರದ್ದು ಮಾಡಿತು. ಪಂಚಾಯತಿ ಪರವಾನಗಿ ರದ್ದತಿಗೆ ತುಂಬ ಸರಳವೂ, ಸತ್ಯವೂ ಆದ ಕಾರಣ ನೀಡಿತ್ತು: 'ಕುಡಿಯುವ ನೀರು ಎಲ್ಲರ ಉಪಯೋಗಕ್ಕೆ ಇರುವ ಸಾಮೂಹಿಕ ಸಂಪನ್ಮೂಲವಾಗಿದೆ. ಕಂಪನಿಯವರು ಅಪರಿಮಿತ ನೀರನ್ನು ಬೇಕಾಬಿಟ್ಟಿಯಾಗಿ ಸೆಳೆದುಕೊಂಡು ಜನರಿಗೆ ಕುಡಿಯುವ ನೀರು ಸಹ ಸಿಗದಂತಹ ಪರಿಸ್ಥಿತಿ ತಂದಿಟ್ಟಿದ್ದಾರೆ.' ಕಂಪನಿಯವರು ಕೇರಳ ಉಚ್ಚ ನ್ಯಾಯಾಲಯದ ಡಿವಿಜನಲ್ ಬೆಂಚಿಗೆ ಪಂಚಾಯತಿಯ ಆಜ್ಞೆಯನ್ನು ಅಸಿಂಧುಗೊಳಿಸುವಂತೆ ಮನವಿ ಮಾಡಿಕೊಂಡರು. ಆದರೆ ಡಿವಿಜನಲ್ ಬೆಂಚ್ ಅವರ ಮನವಿಯನ್ನು ತಳ್ಳಿಹಾಕಿತು. ಆದರೆ ೨೦೦೫ರಲ್ಲಿ ನ್ಯಾಯಾಲಯದ ಇಬ್ಬರು ನ್ಯಾಯಾಧೀಶರ ಪೀಠವು ಕಂಪನಿಯವರ ಹಕ್ಕನ್ನು ಎತ್ತಿಹಿಡಿದು ಪಂಚಾಯತಿಯ ಆಜ್ಞೆಯನ್ನು ಅಸಿಂಧುಗೊಳಿಸಿತು. ಈಗ ಕೇಸು ಸುಪ್ರೀಮ್ ಕೋರ್ಟಿಗೆ ಹೋಗಿದೆ. ಈ ಇಡಿ ನ್ಯಾಯ ವ್ಯಾಖ್ಯಾನದಲ್ಲಿರುವ ವ್ಯಂಗ್ಯ ಎಂದರೆ, ಜನ ಕುಡಿಯುವ ನೀರಿಗೆ ಸಹ ಚಳುವಳಿ ಮಾಡಬೇಕು, ಸರ್ವೋಚ್ಚ ನ್ಯಾಯಾಲಯದ ಕಟ್ಟೆ ಹತ್ತಬೇಕು! ಉಳ್ಳವರಿಗೆ ಸಾಮುದಾಯಿಕ ಸಂಪನ್ಮೂಲಗಳನ್ನು ಮನಸೋ ಇಚ್ಛೆ ಹೀರುವುದು ನ್ಯಾಯಬದ್ಧ ಹಕ್ಕು, ಅಧಿಕಾರಹೀನರಿಗೆ ಕುಡಿಯುವ ನೀರು, ತಿನ್ನುವ ಅನ್ನ ಕೂಡ ಕೋರ್ಟು-ಕಟ್ಲೆಯ ರಗಳೆ! ಒಂದು ಪ್ಲಾಚಿಮಡದಲ್ಲಿ ನೀರು ಖಾಲಿ ಮಾಡಿ ಕಂಪನಿಯವರು ಮತ್ತೊಂದು ಪ್ಲಾಚಿಮಡವನ್ನು ಹೀರಿ ಹಿಪ್ಪೆ ಮಾಡಲು ಟೆಂಟ್ ಹಾಕುತ್ತಾರೆ. ಆದರೆ ಇನ್ನೆಂದಿಗೂ ನೈಸರ್ಗಿಕ ನೀರಿನ ಒರತೆಯನ್ನು ಕಳೆದುಕೊಂಡು ಜನ ನಿರ್ಗತಿಕರಾಗುತ್ತಾರೆ. ಈ ಪದ್ಧತಿ ಕಳೆದ ೫೫ ವರ್ಷಗಳಿಂದ ನಡೆದುಕೊಂಡು ಬಂದಿದೆ – ಇದರಲ್ಲಿ ಸರಕಾರಿ ಸ್ವಾಮ್ಯದ ಕೈಗಾರಿಕೆಗಳದ್ದೂ ದೊಡ್ಡ ಪಾಲಿದೆ. 'ಆರ್ಥಿಕ ಪ್ರಗತಿ'ಗಾಗಿ ಇದೆಲ್ಲ ಅನಿವಾರ್ಯ ಎನ್ನುವ ಸಹಮತ ಎಲ್ಲ ರಾಜಕೀಯ ಪಕ್ಷಗಳಲ್ಲಿರುವುದು ಮಾತ್ರವಲ್ಲ, ಸಾಮುದಾಯಿಕ ವೃತ್ತಿಗಳ ಬಂಧ ಕಡೆದುಕೊಂಡು ಕೈಗಾರಿಕಾ ಉತ್ಪಾದನೆಯನ್ನು ನೆಚ್ಚಿಕೊಂಡಿರುವ ಸಾಮಾನ್ಯ ಜನರಲ್ಲೂ ಮನೆಮಾಡಿದೆ.

ತಂತ್ರಜ್ಞಾನ ಉತ್ಕರ್ಷಿತ ಪ್ರಗತಿಯಿಂದ ಸಂಪತ್ತಿನ ಉತ್ಪಾದನೆ, ಉದ್ಯೋಗ ಸೃಷ್ಟಿ, ಮಾರುಕಟ್ಟೆಯ ವಿಸ್ತರಣೆ, ಪರೋಕ್ಷ ಸಂಪತ್ತಿನ ವಿತರಣೆ ಇದೆಲ್ಲವೂ ತರ್ಕಬದ್ಧವಾಗಿ ಆಗುತ್ತದೆ ಎನ್ನುವುದು ಸುಳ್ಳಲ್ಲ; ಸ್ವಯಂತಂತ್ರವಾದಿ (ಲಿಬರಲ್) ಮೌಲ್ಯಗಳನ್ನು ಅಂತರ್ಗತ ಮಾಡಿಕೊಂಡ ಸಾಮಾಜಿಕ ಸಂರಚನೆಗೆ ಈ ಪ್ರಗತಿಪಥವೂ ಒಂದು ಕಾರಣವಾಗುತ್ತದೆ – ಇಲ್ಲಿ 'ಒಂದು ಕಾರಣ' ಎನ್ನುವುದನ್ನು ಒತ್ತಿ ಹೇಳಬೇಕು, ಯಾಕೆಂದರೆ ಇದು 'ಏಕೈಕ ಕಾರಣ' ಎಂಬ ಕಲ್ಪನೆಯನ್ನೂ ಪ್ರಗತಿಪಥದ ಯಜಮಾನಿಕೆಯ ಭಾಗವಾಗಿಯೇ ನಾವು ಒಪ್ಪಿಕೊಂಡುಬಿಟ್ಟಿದ್ದೇವೆ. ಆದರೆ, ಇಷ್ಟನ್ನು ಕೂಡಿಸಿದರೂ ಉಳಿಯುವುದು ನಷ್ಟದ ಬಾಬತ್ತು. ಈ ಪ್ರಗತಿ ತಖ್ತೆಯಲ್ಲಿ, ಜೀವನಾಧಾರ ಕಳೆದುಕೊಂಡು ನಿರ್ಗತಿಕವಾಗುವ ದೊಡ್ಡ ಜನಸಮುದಾಯ, ನಷ್ಟದ ಬಾಬ್ತಿನಲ್ಲಿ ಖಾಯಮಾಗಿ ಉಳಿದುಬಿಟ್ಟಿದೆ. ಹಟ ಕಟ್ಟಿ ಲೆಕ್ಕ ಚುಕ್ತ ಆಗಬೇಕು ಎಂದರೆ, ಅದಕ್ಕೆ ತಕ್ಕುದಾದ ಒಂದು ವಿಧಾನವೂ ತಂತ್ರಜ್ಞಾನ ಉತ್ಕರ್ಷಿತ ಅಭಿವೃದ್ಧಿ ಸಿದ್ಧಾಂತದ ಭಾಗವಾಗಿಯೇ ರೂಢಿಯಲ್ಲಿದೆ: ನಷ್ಟದ ಬಾಬತ್ತನ್ನು ಲೆಕ್ಕಪುಸ್ತಕದಿಂದ ವಜಾಮಾಡಿಬಿಟ್ಟು, ಹೊಸ ಲೆಕ್ಕಾಚಾರ ಶುರುಮಾಡುವುದು! 'ರೈಟಿಂಗ್ ಆಫ್ ನಾನ್ ಪರ್ಫಾರ್ಮಿಂಗ್ ಅಸೆಟ್ಸ್!' ಇವತ್ತು ನರ್ಮದ ಕಣಿವೆಯ ಆದಿವಾಸಿಗಳು, ಮುಂಬಯಿಯ ಕೊಳೆಗೇರಿ ನಿವಾಸಿಗಳು ಹೀಗೆ ನಮ್ಮ ತಖ್ತೆಯಿಂದ ವಜಾ ಆಗಿಬಿಟ್ಟಿದ್ದಾರೆ. ವೃತ್ತಿಶಿಕ್ಷಣಕ್ಕೆ ಸಂಬಂಧಿಸಿದ ತೀರ್ಪಿನಲ್ಲಿ ಸರ್ವೋಚ್ಚನ್ಯಾಯಾಲಯದ ನ್ಯಾಯಾಧೀಶರು ಅನುಸರಿಸಿದ್ದು ಈ ಲೆಕ್ಕಪತ್ರದ ತತ್ವವನ್ನೇ. ೧೯೮೦ರವರೆಗೂ ಮೂಲಸೌಕರ್ಯ ಕೈಗಾರಿಕಾ ಉತ್ಪಾದನೆ (ಇನ್‌ಫ್ರಾಸ್ಟ್ರಕ್ಚರ್ ಇಂಡಸ್ಟ್ರಿಯಲ್ ಪ್ರೊಡಕ್ಷನ್) ಲಾಭದಾಯಕ ಉದ್ಯಮವಾಗಿತ್ತು, ವೃತ್ತಿಶಿಕ್ಷಣ ಅದರ ನೆಚ್ಚಿನ ಭಂಟನಾಗಿತ್ತು. ೧೯೮೦ರ ನಂತರ ಸೇವಾಕ್ಷೇತ್ರ (ಸರ್ವೀಸ್ ಸೆಕ್ಟರ್) ಭಾರಿ ಲಾಭದಾಯಕ ಉದ್ಯಮವಾಗಿದ್ದು, ವೃತ್ತಿಶಿಕ್ಷಣ ಈ ಕ್ಷೇತ್ರಕ್ಕೆ ಅಧಿಪತಿಯಾಗಿದೆ – ತನ್ನನ್ನು ನೆಚ್ಚಿದ್ದ ದೊರೆಯನ್ನು ಕೊಂದು ಸಾಮ್ರಾಜ್ಯಾಧಿಕಾರ ಪಡೆದುಕೊಂಡ ಮ್ಯಾಕ್‌ಬೆತ್‌ನ ಹಾಗೆ. ಆದರೆ ಶೇಕ್ಸ್‌ಪಿಯರನ ಮ್ಯಾಕ್‌ಬೆತಿಗೂ, ಆಧುನಿಕ ಮ್ಯಾಕ್‌ಬೆತರಿಗೂ ಒಂದು ಪ್ರಮುಖ ವ್ಯತ್ಯಾಸವಿದೆ: ಆ ಮ್ಯಾಕ್‌ಬೆತ್‌ಗೆ 'ತನ್ನ ಕೈಗಂಟಿದ ರಕ್ತವನ್ನು ಅರೆಬಿಯಾದ ಅತ್ತರುಗಳಿಂದಲೂ ಸ್ವಚ್ಛಗೊಳಿಸಲು ಸಾಧ್ಯವಿಲ್ಲ' ಎಂಬ ಪ್ರಜ್ಞೆಯಿಂದ ತನ್ನ ಸಿಂಹಾಸನ 'ರಕ್ತಸಿಕ್ತ ಸಿಂಹಾಸನ' ವಾಗಿಬಿಟ್ಟಿತು. ಆಧುನಿಕ ಮ್ಯಾಕ್‌ಬೆತರು ಕೈಗಂಟಿರುವ ನೆತ್ತರನ್ನೇ ಅರೆಬಿಯಾದ ಅತ್ತರಿನ ಹಾಗೆ ಆಸ್ವಾದಿಸುತ್ತಾರೆ. ಆತ್ಮಜ್ಞಾನವಿಲ್ಲದ ಸ್ಥಿತಿ ಎಂದರೆ ಇದೇ ಆಗಿದೆ. ಈ ವಿಷಯಕ್ಕೆ ಬಂದರೆ, ನಮ್ಮನ್ನು ಸೇರಿದ ಹಾಗಿನ, ಬಹುಪಾಲು ಸಾಮಾಜಿಕರು ಈ ಸ್ಥಿತಿಯಲ್ಲಿ ಸಿಕ್ಕಿಹಾಕಿಕೊಂಡಿದ್ದೇವೆ. ಈ ವಿಷಯುಕ್ತ ಸರಪಳಿಯ ಒಂದು ಕೊಂಡಿಯನ್ನು ಹರಿದು ಮುಕ್ತರಾಗುವ ಮಾರ್ಗಗಳನ್ನು ನಾವೆಲ್ಲ ಹುಡುಕಿಕೊಳ್ಳಲು ಸಾಮುದಾಯಿಕ ಒಳಿತಿನ ಆತ್ಮಜ್ಞಾನವನ್ನು ನಾವು ಎಲ್ಲಿಂದಾದರೂ ಹುಡುಕಿಕೊಳ್ಳಬೇಕು. ಸಮಾಜವಾದ ಬಂಡವಾಳಶಾಹಿಯನ್ನು ಬೆತ್ತಲು ಮಾಡುವ ತರ್ಕಬದ್ಧ ಸೂತ್ರ ಮಾತ್ರವಾಗಿದ್ದರೆ, ಅದು ಇಂದಿಗೂ ಜಗತ್ತಿನ ಬಡವರಿಗೆ ಪ್ರಿಯವಾಗುತ್ತಿರಲಿಲ್ಲ. ಸಮಾಜವಾದ 'ಹೃದಯಹೀನ ಜಗತ್ತಿನ' ಆತ್ಮಜ್ಞಾನವಾಗುವ ಸಂಕಲ್ಪ ಬಲವನ್ನು ಇನ್ನೂ ಉಳಿಸಿಕೊಂಡಿರುವ ಒಂದೇ ಕಾರಣಕ್ಕೆ, ಅದು ಅಧಿಕಾರಹೀನ ಜನರ ಆದರ್ಶವಾಗಿದೆ. ಬಸವಣ್ಣ 'ಉಳ್ಳವರು ಶಿವಾಲಯವ ಮಾಡುವರು, ನಾನೇನು ಮಾಡಲಿ ಬಡವನಯ್ಯ' – ಎಂದದ್ದು ಆತ್ಮಜ್ಞಾನದ ಸಂಕಲ್ಪದಿಂದ ಎನ್ನುವುದನ್ನು ಮತ್ತೆ ನೆನಪಿಸಿಕೊಳ್ಳುವುದು ಒಳ್ಳೆಯದು.

ಕೆ. ಫಣಿರಾಜ್
'ಸಂಜನ', ೫-೧೮೮, ೧ನೇ ಕ್ರಾಸ್, ೫ನೇ ಮೇನ್
ವಿ.ಪಿ. ನಗರ, ಉಡುಪಿ – ೨



❖ ಟಿ. ಆರ್. ಅನಂತರಾಮು

# ನೈಸರ್ಗಿಕ ವಿಕೋಪ ನಿರ್ವಹಣೆ ಯಾರ ಹೊಣೆ ?

೧೯೯೮ರ ಮೇ ತಿಂಗಳಲ್ಲಿ ಕೇಂದ್ರ ಸರ್ಕಾರದ ನಗರಾಭಿವೃದ್ಧಿ ಸಚಿವಾಲಯ ಭಾರತದ ನಕ್ಷೆಯೊಂದನ್ನು ಬಿಡುಗಡೆ ಮಾಡಿತು. ಆ ನಕ್ಷೆ ನಮ್ಮ ದೇಶದ ಸಂಪನ್ಮೂಲ ನಕ್ಷೆಯಲ್ಲ; ಅರಣ್ಯಪ್ರದೇಶದ ವ್ಯಾಪ್ತಿಯನ್ನಾಗಲಿ – ನದಿ ಜಾಲಗಳನ್ನಾಗಲಿ ಬೆಟ್ಟಗುಡ್ಡ ಕಣಿವೆ ಕಂದರಗಳನ್ನಾಗಲಿ ಸೂಚಿಸುವ ಉದ್ದೇಶದಿಂದ ರಚಿಸಿದ್ದಲ್ಲ. ನಮ್ಮ ದೇಶದ ಇಂದಿನ ಅಪಾಯಕಾರಿ ಸ್ಥಿತಿಯನ್ನು ಎಲ್ಲ ವಿವರಗಳೊಂದಿಗೆ ದಾಖಲಿಸಿದ ನಕ್ಷೆ. ಸಾರ್ವಜನಿಕರಿಗೆ ಈ ಕುರಿತು ತಿಳಿಯ ಹೇಳುವುದು, ಅದನ್ನು ಸಿದ್ಧಪಡಿಸಿದ ಉದ್ದೇಶ. ಇದನ್ನು ತಯಾರಿಸಿದ ಸಂಸ್ಥೆ ಅದೇ ಸಚಿವಾಲಯಕ್ಕೆ ಸೇರಿದ ಕಟ್ಟಡ ವಸ್ತು ಮತ್ತು ತಾಂತ್ರಿಕ ಅಭಿವೃದ್ಧಿ ಮಂಡಲಿ (ಬಿಲ್ಡಿಂಗ್ ಮೆಟೀರಿಯಲ್ಸ್ ಅಂಡ್ ಟೆಕ್ನಾಲಜಿ ಡೆವೆಲಪ್‌ಮೆಂಟ್ ಕೌನ್ಸಿಲ್). ಭಾರತದ ಯಾವ ಯಾವ ಭಾಗ ಯಾವ ಪ್ರಮಾಣದ ಹಾನಿಗೀಡಾಗಬಹುದು ಎಂದು ಅದರಲ್ಲಿ ಜಿಲ್ಲಾವಾರು ಅಂಕಿಅಂಶಗಳನ್ನು ನಮೂದಿಸಿದೆ; ವ್ಯಾಪ್ತಿಯನ್ನು ತೀವ್ರತೆಗನುಗುಣವಾಗಿ ದಾಖಲಿಸಿದೆ.

ಈ ನಕ್ಷೆಯ ಸೂಚಿ ಹೇಳುತ್ತದೆ:



* ಭಾರತದ ಶೇ. ೫೪ ಭಾಗ ಪ್ರದೇಶ ಭೂಕಂಪನಕ್ಕೆ ಈಡಾಗುವ ಸಾಧ್ಯತೆ ಇದೆ. ಶೇ. ೫ ಭಾಗ ಪ್ರವಾಹಪೀಡಿತ ಪ್ರದೇಶ.

ಪ್ರತಿವರ್ಷ ಹತ್ತುಲಕ್ಷ ಮನೆಗಳು ಪ್ರಕೃತಿವಿಕೋಪದಿಂದ ನಮ್ಮ ದೇಶದಲ್ಲಿ ನಾಶವಾಗುತ್ತಿವೆ. ಅತಿವೃಷ್ಟಿ, ಅನಾವೃಷ್ಟಿ, ಚಂಡಮಾರುತ, ಬಿರುಗಾಳಿ, ಪ್ರವಾಹ, ಭೂಕಂಪನ ರಾಷ್ಟ್ರೀಯ ಪಿಡುಗಾಗಿ ನಮ್ಮ ದೇಶವನ್ನು ಕಾಡುತ್ತಿವೆ. ಈ ನಕ್ಷೆಯಲ್ಲಿ ಈ ಎಲ್ಲ ಅಂಶಗಳನ್ನೂ ಪರಿಗಣಿಸಲಾಗಿದೆ.

ಈ ನಕ್ಷೆಯ ಬಗ್ಗೆ ಲೇಖನದ ಪ್ರಾರಂಭದಲ್ಲೇ ಪ್ರಸ್ತಾಪಿಸಿರುವುದಕ್ಕೆ ಕಾರಣ ಉಂಟು. ನಮ್ಮ ದೇಶದಲ್ಲಿ ಭಾರಿ ಕಟ್ಟಡಗಳ ನಿರ್ಮಾಣದ ಗುತ್ತಿಗೆ ಹಿಡಿಯುವ ಎಷ್ಟು ಮಂದಿ ಭಾರಿ ಕುಳಗಳಿಗೆ ಇಂಥ ನಕ್ಷೆಯೊಂದಿದೆ ಎಂಬ ಪರಿಜ್ಞಾನವಿದೆ ? ಸರ್ಕಾರ ಕಟ್ಟಡಗಳ ಗುಣಮಟ್ಟದ ಬಗ್ಗೆ ಅಂಥ ಅಪಾಯಕಾರಿ ವಲಯಗಳಲ್ಲಿ ತೆಗೆದುಕೊಳ್ಳಬೇಕಾದ ಎಚ್ಚರಿಕೆ-ಕ್ರಮಗಳನ್ನು ವ್ಯಾಖ್ಯಾನಿಸಿದ್ದರೂ ಅದು ಕಡತಗಳಲ್ಲಿ ಉಳಿದಿದೆ ಏಕೆ ? ೨೦೦೧ರಲ್ಲಿ ಗುಜರಾತ್‌ನ ಭುಜ್ ಭೂಕಂಪನದಿಂದ ಸಹಸ್ರಾರು ಮಂದಿಯ ಪ್ರಾಣಹಾನಿ ಕೇವಲ ಕಟ್ಟಡ ಕುಸಿತದಿಂದಲೇ ಆಯಿತು ಏಕೆ ? ಇಂಥ ಪ್ರಶ್ನೆಗಳಿಗೆ ವಿವರಣೆ ಅನಗತ್ಯ. ಔದಾಸೀನ್ಯವೇ ನಮ್ಮ ದೇಶದ ಲಾಂಛನ ಎನ್ನುವಷ್ಟರಮಟ್ಟಿಗೆ ಅಂತಾರಾಷ್ಟ್ರೀಯ ಮಟ್ಟದಲ್ಲೂ ನಾವು ಖ್ಯಾತರಾಗಿದ್ದೇವೆ. ಪ್ರಕೃತಿ ವಿಕೋಪಗಳಿಂದ ನಾವು ಪಾಠ ಕಲಿತದ್ದು ಅತ್ಯಲ್ಪ; ವಿಕೋಪಗಳೂ ಮರುಕಳಿಸುತ್ತಲೇ ಇವೆ ದುಪ್ಪಟ್ಟು ನಷ್ಟದೊಂದಿಗೆ.

ಉತ್ತರಕಾಶಿ (೧೯೯೧) ಲಾತೂರ್ (೧೯೯೩) ಜಬ್ಬಲ್‌ಪುರ (೧೯೯೭) ಚಮೋಲಿ (೧೯೯೯) ಭುಜ್ (೨೦೦೧) ಭೂಕಂಪನಗಳು ರಾಷ್ಟ್ರವ್ಯಾಪಿ ದುರಂತಗಳ ಸರಮಾಲೆಯಾಗಿ ಕಾಡಿದಾಗ ನಗರಾಭಿವೃದ್ಧಿ ಇಲಾಖೆ ಬಿ.ಎಂ.ಪಿ.ಟಿ.ಸಿ. ಯೊಂದಿಗೆ ತ್ವರಿತಗತಿಯಲ್ಲಿ ನಷ್ಟದ ಮೌಲ್ಯಮಾಪನೆ ಮಾಡಿತು. 'ಯುಎಸ್‌ಎಯ್ಡ್' ಎಂಬ ಅಮೆರಿಕದ ಸಂಸ್ಥೆ ಭಾರತದಲ್ಲಿ ಅತಿ ಅಪಾಯಕ್ಕೆ ಒಡ್ಡಿಕೊಂಡಿರುವ ಪ್ರದೇಶಗಳಲ್ಲಿ ವಿಕೋಪದಿಂದಾಗುವ ನಷ್ಟವನ್ನು ತಗ್ಗಿಸಲು ತಾಂತ್ರಿಕ-ಆರ್ಥಿಕ ನೆರವು ನೀಡಲು ಮುಂದಾಗಿದೆ. ಹಾಗೆಯೇ ನಮ್ಮ ಆಡಳಿತದ ಕಲ್ಯಾಣಗುಣಗಳನ್ನು ಕೊಂಡಾಡಿದೆ !

ಯಾವುದೇ ವಿಕೋಪ ಸಂಭವಿಸಲಿ - ಇಲ್ಲಿ ಏನಾಗುತ್ತದೆಂದರೆ:

* ಸರ್ಕಾರ ಬಹು ತಡವಾಗಿ ಪ್ರತಿಕ್ರಿಯಿಸುತ್ತದೆ.
* ಅಪಾಯಗಳ ಪೂರ್ವ ಸೂಚನೆ ಕೊಡುವ ವ್ಯವಸ್ಥೆ ಇಲ್ಲಿ ಸಮರ್ಪಕವಾಗಿಲ್ಲ.
* ತುರ್ತುಪರಿಸ್ಥಿತಿಗಳಲ್ಲಿ ತ್ವರಿತವಾಗಿ ಜನರನ್ನು ಬೇರೆಡೆಗೆ ಸ್ಥಳಾಂತರಿಸುವ ಅನುಕೂಲತೆಗಳನ್ನು ಕಲ್ಪಿಸಿಕೊಂಡಿಲ್ಲ.
* ಬೇರೆಬೇರೆ ಸರ್ಕಾರಿ ಸಂಸ್ಥೆಗಳೊಡನೆ ಸಮನ್ವಯ ಸಾಧಿಸುವುದು ಈ ದೇಶದಲ್ಲಿ ಆಚರಣೆಗೆ ಬಂದಿಲ್ಲ.
* ಇಂಥ ಪರಿಸ್ಥಿತಿಗಳಲ್ಲಿ ಪರಿಹಾರ ನೀಡುವಾಗ ಶಿಷ್ಟ ಪರಂಪರೆಯನ್ನು ಇಲ್ಲಿ ಯಾರೂ ಅನುಸರಿಸುವುದಿಲ್ಲ.
* ವಿಕೋಪಗಳ ಸಾಧ್ಯತೆಯನ್ನು ಮೊದಲೇ ಮನಗಂಡು ಔಷಧಿ ಆಹಾರ ದಾಸ್ತಾನು ಮಾಡುವ ಪರಿಪಾಟ ಇಲ್ಲಿ ಕಾಣುವುದಿಲ್ಲ.
* ಒಡನೆಯೇ ಸೈನ್ಯವನ್ನು ಅಂಥ ಜಾಗಗಳಿಗೆ ರವಾನಿಸಿ ಪರಿಸ್ಥಿತಿಯನ್ನು ನಿಭಾಯಿಸುವ ಜಾಣ್ಮೆಯ ಕೊರತೆ ಕಾಣುತ್ತದೆ.
* ಭಾರತದಲ್ಲಿ ನೈಸರ್ಗಿಕ ವಿಕೋಪಗಳನ್ನು ಕುರಿತು ಅರಿವಿದೆ; ಆದರೆ ಪ್ರತಿಬಾರಿ ವಿಕೋಪಕ್ಕೆ ತುತ್ತಾದಾಗಲೂ

ನಿರ್ವಹಿಸುವ ಚಾಕಚಕ್ಯತೆ ಗೈರುಹಾಜರಾಗಿರುವುದು ಎದ್ದು ಕಾಣುತ್ತದೆ.

ಅಮೆರಿಕಾ ನೆರವಿನ ಹಸ್ತ ಚಾಚಲು ಇಷ್ಟೊಂದು ಸುವ್ವಿರಾಗ ತೆಗೆಯಬೇಕೆ ಎನ್ನಿಸಬಹುದು. ಅದು ದೊಡ್ಡಣ್ಣ ಎಂದು ಮೂಗುಮುರಿಯುತ್ತಲೇ ನೆರವು ಬೇಡುವ ನಾವು ನಮ್ಮ ಆಡಳಿತ ವೈಫಲ್ಯದ ಸಿಂಹಾವಲೋಕನಮಾಡುವುದು ವಿರಳಾತಿವಿರಳ. ಭೂಕಂಪನ ಘಟಿಸುವುದು ನಮ್ಮ ಹಿಡಿತದಲ್ಲಿಲ್ಲ – ಪ್ರವಾಹ ತಪ್ಪಿಸಲಾರೆವು. ಬಿರುಗಾಳಿ ಬೀಸಿದಾಗ ಅದರ ದಿಕ್ಕನ್ನು ಬದಲಿಸುವ ಚೈತನ್ಯ ನಮಗೆ ತಂತ್ರಜ್ಞಾನದಿಂದ ಈಗಲೂ ಲಭ್ಯವಿಲ್ಲ. ಅದೃಷ್ಟ ಎಂಬ ಪದವನ್ನೆ ಬಳಸಬೇಕಾಗಿ ಬಂದಿದೆ. ನಾವು ಅದೃಷ್ಟಶಾಲಿಗಳು – ಇಲ್ಲಿ ಅಗ್ನಿಪರ್ವತಗಳ ಉಪಟಳವಿಲ್ಲ. ಉಳಿದೆಲ್ಲ ವಿಕೋಪಗಳೂ ಪ್ರತಿವರ್ಷವು ಥಕಥೈ ಕುಣಿಯುತ್ತವೆ. ಇದಕ್ಕೆ ಇತಿಶ್ರೀ ಎಂಬುದಿಲ್ಲ. ಈ ಘಳಿಗೆಯಲ್ಲಿ ಈ ವಾಕ್ಯಕ್ಕೆ ಪೂರ್ಣವಿರಾಮ ಹಾಕುವ ಮೊದಲೇ ಜಗತ್ತಿನ ಒಂದಲ್ಲ ಒಂದು ಭಾಗದಲ್ಲಿ ಭೂಕಂಪನ ಘಟಿಸಿರುತ್ತದೆ.

ಜಬ್ಬಲ್‌ಪುರ, ಲಾತೂರ್-ಅಹಮದಾಬಾದ್‌ನಲ್ಲಿ ಸಂಭವಿಸಿದ ಭೂಕಂಪನಗಳಲ್ಲಿ ಆದದ್ದೇನು ? ಕಳಪೆ ಗುಣಮಟ್ಟದ ಕಟ್ಟಡಗಳು ಕುಸಿದು ಸಹಸ್ರಾರು ಜನ ಪ್ರಾಣ ಕಳೆದುಕೊಂಡರು. ಭಾರತೀಯ ಮಾನಕ ಸಂಸ್ಥೆ ರೂಪಿಸಿರುವ ಕಟ್ಟಡ ಸಂಹಿತೆಗೆ ಈ ದೇಶದಲ್ಲಿ ಮೂರುಕಾಸಿನ ಬೆಲೆಯಿಲ್ಲ. ''ಭೂಕಂಪನ ಅಪಾಯಕಾರಿಯಲ್ಲ; ಆದರೆ ಕಟ್ಟಡಗಳು ಅಪಾಯಕಾರಿ'' ಎಂಬ ಪರಮಸತ್ಯವನ್ನು ಪ್ರತಿಬಾರಿಯೂ ತಜ್ಞರು ಪುನರುಚ್ಚರಿಸುತ್ತಾರೆ. ಆದರೆ ಮುನ್ನೆಚ್ಚರಿಕೆ ವಹಿಸಬೇಕಾದವರು ಈ ಮಾತಿಗೆ 'ಕ್ಯಾರೆ' ಎನ್ನುವುದಿಲ್ಲ. ಹಾಗಿದ್ದಲ್ಲಿ ನಮ್ಮಲ್ಲಿ ಪ್ರಕೃತಿ ವಿಕೋಪಗಳ ಬಗ್ಗೆ ಅರಿವಿಲ್ಲವೆ ? ಹಾಗೆಂದು ಸಾರಾಸಗಟು ತಳ್ಳಿಹಾಕುವಂತಿಲ್ಲ. ಅನೇಕ ಮಾರ್ಗದರ್ಶನಗಳಿವೆ. ಸೂಚನೆಗಳಿವೆ. ಅನುಷ್ಠಾನಕ್ಕೆ ತರುವಲ್ಲಿ ಮೈಗಳ್ಳತನವಿದೆ. ಅದೇ ಮುಳುವಾಗುತ್ತದೆ – ತಂತ್ರಜ್ಞರಿಗಲ್ಲ. ಆಡಳಿತಗಾರರಿಗಂತೂ ಅಲ್ಲವೇ ಅಲ್ಲ. ಅಮಾಯಕ ಸಾರ್ವಜನಿಕರಿಗೆ ಏಬಿರುವುದು ಇಲ್ಲೇ. ಪ್ರಕೃತಿ ವಿಕೋಪ ಕುರಿತು ನಿರ್ಧಾರ ತಳೆಯುವ ಸರ್ಕಾರ ಬೇರೆಬೇರೆ ಹಂತಗಳಲ್ಲಿ ಅಧಿಕಾರಿಗಳನ್ನು ನೇಮಿಸಿದೆ. ಸಂಸ್ಥೆಗಳನ್ನು ಹುಟ್ಟುಹಾಕಿದೆ. ಜೊತೆಗೆ ಸ್ವಯಂಸೇವಾ ಸಂಸ್ಥೆಗಳಿವೆ. ಸರ್ಕಾರೇತರ ಸಂಸ್ಥೆಗಳೇ ಬಲು ಚುರುಕಾಗಿರುವುದು.

೧೯೯೦-೨೦೦೦ ದಶಕವನ್ನು ವಿಶ್ವಸಂಸ್ಥೆ ಅಂತಾರಾಷ್ಟ್ರೀಯ ವಿಕೋಪ ಶಮನಗೊಳಿಸುವ ದಶಕ (ಇಂಟರ್‌ನ್ಯಾಷನಲ್ ಡಿಕೇಡ್ ಫಾರ್ ನ್ಯಾಚುರಲ್ ಡಿಸಾಸ್ಟರ್ ರಿಡಕ್ಷನ್) ಎಂದೇ ಸಾರಿತು. ಎಲ್ಲ ದೇಶಗಳೊಂದಿಗೆ ಸಮನ್ವಯ ಸಾಧಿಸಿ ವಿಕೋಪಗಳಿಂದಾಗುವ ನಷ್ಟವನ್ನು ಹೇಗೆ ತಗ್ಗಿಸಬೇಕೆಂದು ಯೋಚಿಸಿ ಅನೇಕ ಸೂಚನೆಗಳನ್ನು ಕೊಟ್ಟಿತು. ೧೯೯೪ರಲ್ಲಿ ಯಾಕೋಹೋಮದಲ್ಲಿ ಸಭೆಸೇರಿ ತನ್ನ ನಿಲುವುಗಳನ್ನು ಪ್ರಕಟಿಸಿತು. ಈ ಹಿನ್ನೆಲೆಯಲ್ಲಿ ಭಾರತ ಸರ್ಕಾರದ ನಗರಾಭಿವೃದ್ಧಿ ಸಚಿವಾಲಯ ತಜ್ಞ ಕಾರ್ಯಕಾರಿ ತಂಡವನ್ನು ರೂಪಿಸಿ ವಿಕೋಪಗಳ ನಿಗಾವಣೆ (ಮಾನಿಟರಿಂಗ್), ಅಪಾಯಕ್ಕೆ ಈಡಾಗುವ ಪ್ರದೇಶಗಳ ಮೌಲ್ಯಮಾಪನೆ, ಮುನ್ಸೂಚನೆ, ಅಪಾಯಕಾರಿ ವಲಯಗಳ ನಕ್ಷೆ ತಯಾರಿಸುವುದು, ವಿಶೇಷವಾಗಿ ಕಟ್ಟಡಗಳನ್ನು ಕಟ್ಟುವಾಗ ಅನುಸರಿಸಬೇಕಾದ ಮಾರ್ಗ ಕುರಿತು ಕಠಿಣ ಕ್ರಮಗಳನ್ನು ತೆಗೆದುಕೊಳ್ಳುವಂತೆ ಯೋಜನೆ





ರೂಪಿಸಿತು. ಅದರ ಫಲವಾಗೇ ಈಗ ನಗರಾಭಿವೃದ್ಧಿ ಸಚಿವಾಲಯ ಹೊರತಂದಿರುವ ಸಾರ್ವಜನಿಕರೂ ಪರಾಮರ್ಶಿಸಬಹುದಾದ ವಿಕೋಪಕ್ಕೆ ಈಡಾಗುವ ಪ್ರದೇಶಗಳ ಅಟ್ಲಾಸ್. ಇದಾದನಂತರ ಕೇಂದ್ರದ ಕೃಷಿ ಸಚಿವಾಲಯ ವಿಕೋಪ ನಿರ್ವಹಣಾ ಪ್ರಾಧಿಕಾರವನ್ನು ಸ್ಥಾಪಿಸಿದೆ. ಕ್ಯಾಬಿನೆಟ್ ಕಾರ್ಯದರ್ಶಿ ಇದರ ಮುಖ್ಯಸ್ಥರು (ನ್ಯಾಷನಲ್ ಸೆಂಟರ್ ಫಾರ್ ಡಿಸಾಸ್ಟರ್ ಮ್ಯಾನೇಜ್‌ಮೆಂಟ್). ೨೦೦೩ರ ಅಕ್ಟೋಬರ್ ೧೬ರಂದು ಈ ಸಂಸ್ಥೆಯನ್ನು ಮೇಲ್ದರ್ಜೆಗೆ ಏರಿಸಿ ಕೇಂದ್ರ ಸರ್ಕಾರದ ಗೃಹ ಸಚಿವಾಲಯದಡಿ 'ರಾಷ್ಟ್ರೀಯ ವಿಕೋಪ ನಿರ್ವಹಣಾ ಸಂಸ್ಥೆ' (ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಡಿಸಾಸ್ಟರ್ ಮ್ಯಾನೇಜ್‌ಮೆಂಟ್) ಎಂಬ ಹೆಸರಿನಿಂದ ಈಗ ಕಾರ್ಯ ನಿರ್ವಹಿಸುತ್ತಿದೆ. ನೈಸರ್ಗಿಕ ವಿಕೋಪಗಳನ್ನು ಎದುರಿಸುವುದು ಹೇಗೆಂದು ಜನಸಾಮಾನ್ಯರಿಗೆ ಅರಿವು ಮೂಡಿಸಲು ಕೇಂದ್ರ ಸರ್ಕಾರ ಹಲವು ಸಂಸ್ಥೆಗಳನ್ನು ತೆರೆದಿದೆ. ಇಂದಿರಾ ಗಾಂಧಿ ಮುಕ್ತ ವಿಶ್ವವಿದ್ಯಾಲಯ ಮತ್ತು ಪೂನಾ ವಿಶ್ವವಿದ್ಯಾಲಯ ಪ್ರಕೃತಿ ವಿಕೋಪಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಆರು ತಿಂಗಳ ಸರ್ಟಿಫಿಕೇಟ್ ಕೋರ್ಸ್ ಆರಂಭಿಸಿವೆ. ಹಾಗೆಯೇ ಸಿಕ್ಕಿಂನ ಮಣಿಪಾಲ ವಿಶ್ವವಿದ್ಯಾಲಯದ ಅಂಗೀಕಾರ ಪಡೆದ ಭಾರತೀಯ ಪರಿಸರ ಜೀವಿಶಾಸ್ತ್ರ ಮತ್ತು ಪರಿಸರ ಸಂಸ್ಥೆ (ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಇಕಾಲಜಿ ಅಂಡ್ ಎನ್‌ವಿರಾನ್‌ಮೆಂಟ್) ಪದವೀಧರರಿಗೆ ದೂರ ಶಿಕ್ಷಣ ಸೌಲಭ್ಯವನ್ನು ಕಲ್ಪಿಸಿವೆ. ಐಐಟಿ ಕಾನ್ಪುರ, ಹುಡ್ಕೋ ನೆರವಿನೊಂದಿಗೆ ಭೂಕಂಪನ ಎಂಜಿನಿಯರಿಂಗ್‌ನ ರಾಷ್ಟ್ರೀಯ ಮಾಹಿತಿ ಕೇಂದ್ರವನ್ನು ನಡೆಸುತ್ತ ಬಂದಿದೆ. ೨೦೦೧ರಲ್ಲಿ ಗುಜರಾತಿನಲ್ಲಿ ಭೀಕರ ಭೂಕಂಪನವಾದನಂತರ ಅಹಮದಾಬಾದ್‌ನಲ್ಲಿ ವಿಕೋಪ ಶಮನ ಸಂಸ್ಥೆ (ಡಿಸಾಸ್ಟರ್ ಮಿಟಿಗೇಷನ್ ಇನ್‌ಸ್ಟಿಟ್ಯೂಟ್) ನ್ಯಾಷನಲ್ ಸಿವಿಲ್ ಡಿಫೆನ್ಸ್ ಕಾಲೇಜು ನಾಗಪುರ – ಇವು ವಿಕೋಪ ನಿಭಾಯಿಸುವ ತಂತ್ರವನ್ನು ಆಸಕ್ತರಿಗೆ ತಿಳಿಸಿಕೊಡುತ್ತಿವೆ. ಇದರ ಅರ್ಥವಿಷ್ಟೆ. ನಮ್ಮಲ್ಲಿ ವಿಕೋಪಗಳ ಬಗ್ಗೆ ತಿಳಿವಿದೆ – ಅನುಷ್ಠಾನದಲ್ಲಿ ಮೈಮರೆವಿದೆ. ಇನ್ನೂ ಒಂದು ವಾಸ್ತವತೆಯನ್ನು ನಾವು ಒಪ್ಪಿಕೊಳ್ಳಬೇಕಾಗಿದೆ. ಸೂರ್ಯಗ್ರಹಣ, ಚಂದ್ರಗ್ರಹಣ, ಧೂಮಕೇತು ಆಗಮನ ಮುಂತಾದ ಪ್ರಕೃತಿಯ ವಿದ್ಯಮಾನಗಳನ್ನು ನಿರ್ದಿಷ್ಟವಾಗಿ ಮುನ್ನುಡಿಯಬಹುದು (ಫೋರ್‌ಕಾಸ್ಟ್). ಅದು ಗಣಿತ ಆಧರಿಸಿದ ಲೆಕ್ಕಚಾರ. ಆಕಾಶಕಾಯಗಳ ಚಲನವಲನ ಕರಾರುವಾಕ್ಕು. ಹಾಗೆಯೇ ಅದರ ಲೆಕ್ಕಾಚಾರ ಕೂಡ. ಆದರೆ ಇಡೀ ಜಗತ್ತಿನಲ್ಲಿ ವಿಕೋಪಗಳ ಪೈಕಿ ಅತ್ಯುಗ್ರವಾದ ಭೂಕಂಪನಗಳನ್ನು ಕುರಿತು ಇಂಥ ತಿಂಗಳು, ಇಂಥ ದಿನ ಸಂಭವಿಸುತ್ತದೆಂದು ಹೇಳುವುದು ಇದುವರೆಗೂ ಸಾಧ್ಯವಾಗಿಲ್ಲ, ನಮ್ಮ ಕಾಲಡಿಯ ನೆಲದಾಳದಲ್ಲಿ ನಡೆಯುವ ಭೌತ ಬದಲಾವಣೆಗಳು ನಮಗೆ ಅಗೋಚರ. ಇಂಥ ಸಂದರ್ಭಗಳಲ್ಲಿ ವಿಜ್ಞಾನಿಗಳ ಎಚ್ಚರಿಕೆಯ ಮಾತುಗಳಿಗಿಂತ ಭವಿಷ್ಯವಾಣಿ ನುಡಿಯುವವರ ಮಾತುಗಳಿಗೆ ಬೆಲೆ ಬಂದುಬಿಡುತ್ತದೆ. ಆದರೆ ಭವಿಷ್ಯವಾಣಿಯೂ ವಿಕೋಪಗಳಿಂದ ನಮ್ಮನ್ನು ಪಾರುಮಾಡಿದ ಉದಾಹರಣೆಗಳಿಲ್ಲ. ಭೂಕಂಪನ ಮಾಪಕಗಳಿಂದ ಭೂಕಂಪನದ ಅನಂತರ ಹುಟ್ಟುವ ಅಲೆಗಳನ್ನು ದಾಖಲಿಸುವಲ್ಲಿ ನಮ್ಮ ತಂತ್ರಜ್ಞಾನ ಸಾಧನೆ ಮಾಡಿದೆ. ಅದಕ್ಕೂ ಮುನ್ನ

ವಿದ್ಯಮಾನಗಳನ್ನು ಕರಾರುವಾಕ್ಕಾಗಿ ಅರಿಯುವ ಪ್ರಯತ್ನಗಳಾಗಿವೆ. ನಿರೀಕ್ಷಿತ ಫಲ ಕೊಟ್ಟದ್ದು ಕಡಿಮೆ. ಈವರೆಗೆ ಭೂಕಂಪನಕ್ಕೆ ಒಳಗಾಗಿರುವ ಪ್ರದೇಶಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಭಾರತದಲ್ಲಿ ಹಿಮಾಲಯ ವಲಯ, ಪಶ್ಚಿಮ ಕರಾವಳಿ ವಲಯ - ಅಸ್ಸಾಂ ತ್ರಿಪುರ ವಲಯ - ದಕ್ಷಿಣ ಭಾರತದ (ನರ್ಮದಾ ನದಿಯಿಂದ ದಕ್ಷಿಣಕ್ಕಿರುವ ತ್ರಿಕೋಣ ಆಗಿರದ ಪ್ರದೇಶ) ತೀರ ವಲಯ ಎಂದು ವರ್ಗೀಕರಿಸಿದ್ದಾರೆ. ಈಗ ಪಾಕಿಸ್ತಾನವನ್ನು ಭಯದ ಭೀತಿಯಿಂದ ಆವರಿಸುವಂತೆ ಮಾಡಿದ ಅಕ್ಟೋಬರ್ ತಿಂಗಳಿನಲ್ಲಾದ ಭೂಕಂಪನ ರಾಜಕೀಯ ಸೀಮಾರೇಖೆಯನ್ನು ಉಲ್ಲಂಘಿಸಿ ಇತ್ತ ನಮ್ಮಲ್ಲೂ ಸಾಕಷ್ಟು ಪ್ರಮಾಣದ ಹಾನಿ ತಂದಿದೆ. ಇಲ್ಲಿಯೂ ಅದೇ ವಿದ್ಯಮಾನ ಮರುಕಳಿಸಿದೆ. ಕಟ್ಟಡ ಕುಸಿತದಿಂದಲೂ ಭಾರಿ ಜೀವ ಹಾನಿಯಾಗಿದೆ. ವಾಲ್ಡಿಯ ಇನ್‌ಸ್ಟಿಟ್ಯೂಟ್ ಆಫ್ ಹಿಮಾಲಯನ್ ಜಿಯಾಲಜಿ ಸಂಸ್ಥೆ ಈಗಾಗಲೇ ಪುನರುಚ್ಚರಿಸಿದೆ : ನಮ್ಮೆಲ್ಲರ ಪ್ರಯತ್ನ ಭೂಕಂಪನ ಮರುಕಳಿಸುವುದನ್ನು ಲೆಕ್ಕಹಾಕುವುದರತ್ತಲೇ ಹೊರತು ತಡೆಯುವುದಲ್ಲ. ಸದ್ಯದ ಸ್ಥಿತಿಯಲ್ಲಿ ಎಲ್ಲ ದೇಶಗಳು ಮಾಡುತ್ತಿರುವುದೂ ಈ ಕೆಲಸವನ್ನೇ. ಬಹುತೇಕ ಭೂಕಂಪನಗಳು ಹಳೆಯ ಗಾಯದ ಕೆರೆತ, ಅಷ್ಟೇ. ಭಾರತದ ಭೂಚಿಪ್ಪಿನ ಮೇಲುಪದರ ಉತ್ತರಕ್ಕೆ ಜಾರಿ ಜಾರಿ ಹೋಗುತ್ತಿದೆ. ಅತ್ತ ಟಿಬೆಟ್ ಕಡೆಯಿಂದ ಇನ್ನೊಂದು ಪದರ ದಕ್ಷಿಣಕ್ಕೆ ಒತ್ತಿ ಬರುತ್ತಿದೆ. ಈ ಗುದ್ದಾಟದ ಫಲವೆಂದರೆ ಭೂಕಂಪನಗಳ ಸೃಷ್ಟಿ. ಇದೇನೋ ತಜ್ಞರು ಕಂಡುಕೊಂಡ ಸತ್ಯವಿರಬಹುದು. ಆದರೆ ಬಡ ಬೋರೇಗೌಡನಿಗೆ ಇಂಥ ಸಿದ್ಧಾಂತಗಳಿಂದ ಏನು ಲಾಭ ? ಶ್ರೀಸಾಮಾನ್ಯ ವಿಕೋಪಗಳನ್ನು ಎದುರಿಸುವುದು ಹೇಗೆ ? ಯಾವ ಬಗೆಯ ಎಚ್ಚರಿಕೆಯನ್ನು ಆತ ತೆಗೆದುಕೊಳ್ಳಬೇಕು ? ಅವನ ಆರ್ಥಿಕ ಪರಿಸ್ಥಿತಿ, ವಿಕೋಪ ನಿಭಾಯಿಸುವಷ್ಟು ಶಕ್ತವೇ ? ಇವೆಲ್ಲ ಅತ್ಯಗತ್ಯವಾಗಿ ವಿವೇಚಿಸಬೇಕಾದ ಅಂಶಗಳು.

ನಿತ್ಯ ಭೂಕಂಪನ ಅನುಭವಿಸುವ ಜಪಾನಿನಲ್ಲಿ ಸಾರ್ವಜನಿಕರಿಗೆ ಅದರ ಬಗ್ಗೆ ಅರಿವು ಮೂಡಿಸಲು ಸಾಕಷ್ಟು ಯೋಜನೆಗಳಿವೆ. ಪೆಸಿಫಿಕ್ ಸಾಗರದಂಚಿನಲ್ಲಿರುವ ೨೬ ರಾಷ್ಟ್ರಗಳು ಕಲೆತು ಸುನಾಮಿ ಅಲೆಗಳೆದ್ದರೆ ಯಾವ ಕಡಲತೀರ ಯಾವ ಪ್ರಮಾಣದಲ್ಲಿ ಬಲಿಯಾಗುತ್ತದೆಂದು ಮುಂಚೆಯೇ ಅರಿಯಲು ಕಂಪ್ಯೂಟರಿನಲ್ಲಿ ಮಿಥ್ಯಾ ಸುನಾಮಿಗಳನ್ನು ಸೃಷ್ಟಿಸಿ ಬೋಧಿಸುವ ಪರಿಪಾಟವಿದೆ. ಹೊನೊಲುಲುವಿನಲ್ಲಿರುವ ಸುನಾಮಿ ಎಚ್ಚರಿಕೆಯ ಕೇಂದ್ರದಲ್ಲಿ ಪ್ರತಿ ಶುಕ್ರವಾರ ಸಾರ್ವಜನಿಕರಿಗಾಗಿ ಪ್ರಾತ್ಯಕ್ಷಿಕೆಗಳಿವೆ. ನಮ್ಮಲ್ಲಿ? ೨೦೦ ಭೂಕಂಪನ ಮಾಪಕ ಕೇಂದ್ರಗಳು ಬಹುತೇಕ ಭಾರತದ ಎಲ್ಲ ಪ್ರದೇಶಗಳಿಗೂ ಹರಡಿದಂತೆ ಈಗ್ಗೆ ಒಂದೂವರೆ ಶತಮಾನಗಳಿಂದಲೂ (ಕಲೆತು) ಕಾರ್ಯಾಚರಣೆ ಮಾಡುತ್ತಿವೆ. ನಮ್ಮ ಗೌರಿಬಿದನೂರಿನಲ್ಲೇ ಭಾಭಾ ಪರಮಾಣು ಸಂಶೋಧನಾ ಕೇಂದ್ರ ನಿರ್ವಹಿಸುತ್ತಿರುವ ಭೂಕಂಪನ ಮಾಪಕ ಕೇಂದ್ರವಿದೆ. ಎಷ್ಟು ಮಂದಿ ಆಸಕ್ತಿಯಿಂದ ಅದನ್ನು ಒಳಹೊಕ್ಕು ನೋಡಿದ್ದಾರೆ ಅಥವಾ ಆ ಕೇಂದ್ರ ಸಾರ್ವಜನಿಕರಿಗೆ ಭೂಕಂಪನ ಮಾಹಿತಿ ಕೊಡುವಲ್ಲಿ ಎಷ್ಟು ಯೋಜನೆಗಳನ್ನು ಅನುಷ್ಠಾನಗೊಳಿಸಿದೆ ?

ನೈಸರ್ಗಿಕ ವಿಕೋಪಗಳ ನಿರ್ವಹಣೆಯಲ್ಲಿ ಯಾರ ಹೊಣೆ ಎಷ್ಟು? ಯಾರು ಉತ್ತರಿಸಬೇಕು ?

ಟಿ. ಆರ್. ಅನಂತರಾಮು
ನಂ. ೫೩೪, 'ಧಾತ್ರಿ', ೭೦ನೇ ಕ್ರಾಸ್, ೧೪ನೇ ಮುಖ್ಯರಸ್ತೆ,
ಕುಮಾರಸ್ವಾಮಿ ಲೇಔಟ್ ೧ನೇ ಹಂತ ಬೆಂಗಳೂರು - ೫೬೦ ೦೭೮

## ಹಿಂಸೆಯೇ ಇಲ್ಲದ ಊರು

೧

### ಮಳೆ ಹೊಯ್ಯುತ್ತಿದೆ

ಕರಗಿ ಕೂತಿದ್ದೇನೆ ನಾನು ಕಡು ರಾತ್ರಿ
ಏಕಾಂತದ ಅಂಚಿನಲ್ಲಿ

ಕಣ್ಣಲ್ಲಿ ಹೂವು ಅರಳಿಸದ
ನಿದ್ದೆಯಲ್ಲಿ ನಕ್ಷತ್ರ ಹಚ್ಚಿಡದ
ಗಾಯಗೀರಿಗೆ ಮುಗುಳ್ನಗೆ ಸವರದ

ನನ್ನ ಕವಿತೆಗಳ ಸಂಕಟಕ್ಕೆ ಕಿವಿತೆರೆದು ಬಿರಿದು

೨

ಊರ ಬೀದಿಯಲ್ಲಿ ಚಲಿಸುತ್ತಿವೆ ನಿರಾಳ
ಹೊಳೆವ ಹೊಸ ಮಾಡೆಲಿನ ಕಾರುಗಳು

ಮುಖ ಬಾಗಿಲುಗಳೋ ಮುಚ್ಚಿಕೊಂಡಿವೆ ಉನ್ಮತ್ತ
ಬೇರೆಯವರಿಗಿಲ್ಲದ ಭಾಗ್ಯವ ಕಾಫಿ ಹಿಗ್ಗುತ್ತ

೩

ತಮ್ಮೆಲ್ಲ ಒಳ್ಳೆಯತನವ ತಮ್ಮದೇ ಬಗಲಲ್ಲಿ
ಮಡಚಿಟ್ಟು ನಡೆದಿದ್ದಾರೆ ಮಂದಿ

ಕೋರ್ಟು ಕಛೇರಿ ಹೋಟಲು ಅಂಗಡಿ ಮುಗ್ಗಟ್ಟು ಎಲ್ಲೆಲ್ಲು
ಬಿಸಿಲು ಕರಗಿ ಸರದಿ ಕರಗಿ ಮೀನಿನ ಹೆಜ್ಜೆಯಲ್ಲಿ

೪

ಮಾತನಾಡುತ್ತಲೇ ಇದ್ದಾರೆ ಮಾತು ಬಲ್ಲವರು
ತಮ್ಮ ಮಾತಿಗೆ ಮರುಳಾಗಿ ತಾವೇ
ರುಚಿಗೊಂದಿಷ್ಟು ಲೋಕ ಕಲ್ಯಾಣದೊಗ್ಗರಣೆ ಬೆರೆಸಿ
"ಕಾಣುತ್ತಿದೆಯಲ್ಲ ಓ ಅಲ್ಲಿ ಮಂಜಿನಾಚೆಗಿನ ಬೆಟ್ಟ
ಮೆಟ್ಟಿಲು ಮೆಟ್ಟಿಲೇ ಏರಬೇಕು ಬಳಸಿ ತಕ್ಕ ಸೂತ್ರ"

೫

ಏಣಿ ಏರಿ ಕೂತವರ ಜೊತೆ ತೂಕಡಿಸಲು ತಾವೂ
ಕುತ್ತಿಗೆ ನೀಕಿ ಕಾದಿದ್ದಾರೆ ಇಲ್ಲೊಂದಿಷ್ಟು ಮಂದಿ
ಐಸ್ ಕ್ರೀಂ ಮೇಲಿನ ಚೆರ್ರಿ ಹಣ್ಣಾಗುವ ಆತುರದ

ಮೊದ್ದು ಮಣಿಗಳೂ ಸೇರಿ
ಭಕ್ತರು ಉನ್ಮತ್ತರು ಸುಡುಗಾಡ ಸಿದ್ಧರು
ರಣಹದ್ದಿನ ಕೊಕ್ಕಿನಂಥ ಕಣ್ಣನೋಟ
ಹೊತ್ತವರು

೬

"ಎಲ್ಲವೂ
ಸರಿಯಾಗಿಯೇ
ಇದೆ"
ಗೊಣಗಿದರು ಗೆಳೆಯರು ಕಡೆದಿಟ್ಟ ಅತೃಪ್ತಿ
ತುಂಬಿ
ಕೋಕ್ ಹೀರುತ್ತ ನನ್ನ ಕವಿತೆಗಳ ನಾಜೂಕು
ನನ್ನ ಬಳಿಗೇ ತಳ್ಳಿ –

"ಇಥಿಯೋಪಿಯಾದ ಬರಗಾಲಕ್ಕು
ಅಮೆರಿಕಾವನ್ನು ದೂರಿದರೆ ಹೇಗೆ ?"

೭

ಹೊಯ್ಯುತ್ತಲೇ ಇದೆ ಮಳೆ
ಊರಿಗೆ ಊರೇ ನೆನೆದು ಗುಪ್ಪೆಯಾಗುವ
ಹಾಗೆ

ಸುರಿದ ಮಳೆ ಹನಿ ಹನಿಯಲ್ಲು
ಕಪ್ಪು ರಕ್ತ ಬೆರೆತಿದೆ

ಕತ್ತಲ ಒಡಲನ್ನೇ ಕತ್ತರಿಸಿ ಹೊಯ್ದ ಹಾಗೆ

ಮಲಗಿ ನಿದ್ದಿಸಿದೆ ಒದ್ದೆಗಣ್ಣಿನ ಮಗು
ದಾತಾರರೇ ಇಲ್ಲದ ಮನೆಯ ಖಾಲಿ ಜಗುಲಿಯ ಮೇಲೆ

ವಸಂತ ಬನ್ನಾಡಿ
'ತಿಂಗಳ ಬೆಳಕು' ಏತಲವಾಡಿ, ವ[illegible]ೀರ ಹೋ[illegible]ಳಿ, ಕುಂದಾಪುರ

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**

# ಲೋಥಲ್ ಮತ್ತು ಸಿಂಧೂ ನಾಗರಿಕತೆ





**ಪ್ರ**ಸಿದ್ಧ ಪ್ರಾಚ್ಯಶಾಸ್ತ್ರಜ್ಞರಾದ ಡಾ|| ಶಿಕಾರಿಪುರ ರಂಗನಾಥರಾಯರ (ಎಸ್. ಆರ್. ರಾವ್) ಭೂಶೋಧನೆ ಸಂಶೋಧನೆಗಳನ್ನು ಅವರ ಗ್ರಂಥಗಳಿಂದ ಉದ್ಧರಿಸಿದ ಭಾಗಗಳ ಮೂಲಕ ಪರಿಚಯ ಮಾಡಿಕೊಂಡಿದ್ದೆವಾದರೂ, 'ಲೋಥಲ್ ಮತ್ತು ಸಿಂಧೂ ನಾಗರಿಕತೆ' ಎಂಬ ಪ್ರೌಢಗ್ರಂಥವನ್ನು ಸಮಗ್ರವಾಗಿ ಓದುವ ಸಂದರ್ಭ ಒದಗಿದುದು ಇತ್ತೀಚೆಗೆ.

ಜಗತ್ತಿನ ಪ್ರಾಚೀನ ನಾಗರಿಕತೆಗಳ ಪ್ರಮುಖ ಆಕರಗಳಾದ ಈಜಿಪ್ಟ್ ಬ್ಯಾಬಿಲೋನಿಯಗಳ ಬಗೆಗೆ ಲಿಖಿತ ದಾಖಲೆಗಳಿವೆಯಾದರೂ ಕಳೆದ ಶತಮಾನದ ಮಧ್ಯಭಾಗದವರೆಗೆ ಭಾರತ ಉಪಖಂಡದ ಪ್ರಾಚೀನ ನಾಗರಿಕತೆಗಳ ಬಗೆಗೆ ಪುರಾವೆಗಳು ಲಭ್ಯವಿರಲಿಲ್ಲ. ಅಂದರೆ, ಭೂಶೋಧನೆ, ಪುರಾತತ್ವ ಅಧ್ಯಯನಗಳು ನಡೆದಿರಲಿಲ್ಲ. ೧೯೨೧ರಲ್ಲಿ ಮೊದಲಬಾರಿಗೆ ವಿಶ್ವದ ಪುರಾತತ್ವ ಭೂಪಟದಲ್ಲಿ ಭಾರತದ ಪ್ರಾಚೀನ ನಾಗರಿಕತೆಯನ್ನು ಸೇರಿಸಲಾಯಿತು. ಆಗ ಅಸ್ತಿತ್ವಕ್ಕೆ ಬಂದ 'ಭಾರತ ಪುರಾತತ್ವ ಸರ್ವೇಕ್ಷಣ ಇಲಾಖೆ'ಯ ನಿರ್ದೇಶಕರಾಗಿದ್ದ ಸರ್ ಜಾನ್ ಮಾರ್ಷಲ್ ಅವರು ಸಿಂಧೂ ಕಣಿವೆಯ ಭೂಶೋಧನೆಯ ಅಧ್ಯಯನ ನಡೆಸಿ, ಸಿಂಧೂ ನಾಗರಿಕತೆಯ ಮಧ್ಯಾವಸ್ಥೆಯ ಕಾಲವು ಕ್ರಿ.ಪೂ. ೩೨೫೦ರಿಂದ ೨೭೫೦ರ ಅವಧಿ ಎಂಬ ನಿರ್ಣಯಕ್ಕೆ ಬಂದರು. ಇನ್ನಷ್ಟು ವ್ಯಾಪಕ ಅಧ್ಯಯನವು ನಡೆಯುವ ಮುಂಚೆಯೇ ೧೯೪೭ರಲ್ಲಿ ದೇಶ ವಿಭಜನೆಯಾಗಿ ಸಮಗ್ರ ಭರತಖಂಡದ ಪುರಾತತ್ವ ಸರ್ವೇಕ್ಷಣ ಕಾರ್ಯವು ಭಾರತೀಯ ಪುರಾತತ್ವ ಶೋಧನ ಇಲಾಖೆಯ ಕೈತಪ್ಪಿತು. ಆ ಹೊತ್ತಿನಲ್ಲಿ ಇಲಾಖೆಯ ಮಹಾನಿರ್ದೇಶಕರಾಗಿದ್ದ ಮಾರ್ಟಿಮರ್ ವೀಲರ್ ಅವರು ದೇಶವಿಭಜನೆಯ ದುರಂತಗಳಲ್ಲಿ ಇದೂ ಒಂದು ಎಂದು ಭಾವುಕರಾಗಿ ಮಾತಾಡಿದ್ದಾರೆ. (ಪ್ರಸ್ತುತ ಗ್ರಂಥಕ್ಕೆ ಮುನ್ನುಡಿ ಬರೆದಿರುವವರು ಅವರೆ.) ಸುದೈವದಿಂದ ಮುಂದಿನ ಐದಾರು ವರ್ಷಗಳಲ್ಲಿ ಮತ್ತೆ ಅಸ್ತಿತ್ವಕ್ಕೆ ಬಂದ ಭಾರತೀಯ ಪುರಾತತ್ವ ಇಲಾಖೆಯು ಇಮ್ಮಡಿ ಉತ್ಸಾಹದಿಂದ ಕ್ರಿಯಾಶೀಲವಾಯಿತು. ೧೯೫೪ರಲ್ಲಿ ಸಿಂಧೂ ನಾಗರಿಕತೆಯ ನಿವೇಶನಗಳನ್ನೂ ಕಂಡುಹಿಡಿದು ಸೌರಾಷ್ಟ್ರದಲ್ಲಿನ ಲೋಥಲ್ ಮತ್ತು ರಾಜಾಸ್ತಾನದ ಕಾಲಿಬಂಗಾನಗಳಲ್ಲಿ ಸತತ ಏಳು ವರ್ಷಗಳ ಕಾಲ ವ್ಯಾಪಕವಾಗಿ ಮತ್ತು ನೈಪುಣ್ಯದಿಂದ ಉತ್ಖನನವನ್ನೂ, ಅಧ್ಯಯನವನ್ನೂ ನಡೆಸಿದ ಎಸ್. ಆರ್. ರಾವ್ ಅವರ ವಿದ್ವತ್ಪೂರ್ಣಗ್ರಂಥ 'ಲೋಥಲ್ ಮತ್ತು ಸಿಂಧೂ ನಾಗರಿಕತೆ'. ಪುರಾತತ್ವ ಅಧ್ಯಯನದ ಮಹತ್ವದ ಈ ಗ್ರಂಥವನ್ನು ಡಾ|| ಎಸ್. ಗುರುರಾಜಾಚಾರ್ ಅವರು ಸಮರ್ಥವಾಗಿ ಅನುವಾದಿಸಿ ಕನ್ನಡ ಓದುಗರಿಗೆ ಅನುಪಮ ಕಾಣಿಕೆ ಸಲ್ಲಿಸಿದ್ದಾರೆ.

ಭಾರತದ ಇತಿಹಾಸಕ್ಕೆ ಹೊಸ ತಿರುವು ಕೊಟ್ಟ ಮತ್ತು ಆಯಾ ಹಂತದ ಶೋಧವನ್ನು ಕುರಿತಂತೆ, ಕಾಲಕಾಲಕ್ಕೆ ಹಲವಾರು ಲೇಖನಗಳೂ, ಪ್ರೌಢಕೃತಿಗಳೂ ಪ್ರಕಟವಾಗಿವೆ. ಇವುಗಳಲ್ಲಿ ಸರ್ ಜಾನ್ ಮಾರ್ಷಲ್ ಅವರ 'ಮೊಹೆಂಜೊದಾರೋ ಅಂಡ್ ದ ಇಂಡಸ್ ಸಿವಿಲೈಸೇಷನ್' (೧೯೩೧), ಇ. ಮೆಕಾಯ್ ಮತ್ತು ಇತರರು ಬರೆದ 'ಫರ್ದರ್ ಎಕ್ಸ್‌ಕವೇಷನ್ಸ್ ಅಟ್ ಹರಪ್ಪ' (೧೯೪೦), ಸರ್ ಮಾರ್ಟಿಮರ್ ವೀಲರ್ ಅವರ 'ಹರಪ್ಪ' (೧೯೪೬), ಎಸ್. ಆರ್. ರಾವ್ ಅವರ ಸಿಂಧೂ ನಾಗರಿಕತೆಯನ್ನು ಮತ್ತು ಸಾಗರತಳ ಪುರಾತತ್ವ ಶೋಧನೆಯನ್ನು ಕುರಿತ ಕೃತಿಗಳು ಉಲ್ಲೇಖನೀಯವಾದವು.

ಎಸ್. ಆರ್. ರಾವ್ ಅವರು ಸ್ವತಃ ಭೂಶೋಧನೆ ನಡೆಸಿದುದು ಅಹಮದಾಬಾದಿನ ನೈರುತ್ಯಕ್ಕೆ ೮೦ ಕಿಲೋಮೀಟರ್ ದೂರದಲ್ಲಿರುವ, ಈಗ ಲೋಥಲ್ ಎಂದು ಕರೆಯುವ ಪುರಾತನ ನಗರ ನಿವೇಶನಗಳಲ್ಲಿ. ರಾವ್ ಅವರ ಮುಖ್ಯ ಉದ್ದೇಶ, ಲೋಥಲ್‌ನ ಪುರಾತನ ನಾಗರಿಕತೆಯನ್ನು ಚರ್ಚಿಸುವುದಾಗಿದ್ದರೂ ಸಹ, ಹರಪ್ಪ ಜನರು ಲೋಥಲ್ ಮೇಲೆ ಬೀರಿದ ದಟ್ಟ ಪ್ರಭಾವವನ್ನು ವಿಶ್ಲೇಷಿಸುವ ಸಲುವಾಗಿ ಸಿಂಧೂನಾಗರಿಕತೆಯನ್ನು ಸಾಕಷ್ಟು ವಿವರವಾಗಿಯೇ ಚರ್ಚಿಸುತ್ತಾರೆ. ''ಹರಪ್ಪ ಜನರು ಸಿಂಧದಿಂದ ಹೊರಟು ಸೌರಾಷ್ಟ್ರ ತಲುಪಿದ ಮಾರ್ಗಗಳನ್ನು ಖಚಿತಪಡಿಸಿಕೊಳ್ಳುವ ಸಲುವಾಗಿ ೧೯೫೪ರಲ್ಲಿ ಈ ಗ್ರಂಥಕರ್ತನು ವ್ಯವಸ್ಥಿತವಾದ ಸಮೀಕ್ಷೆ ಕೈಗೊಂಡನು'' (ಪು. ೪೮). ಹೀಗೆ ಭೂಶೋಧನೆ ಮತ್ತು ಪ್ರಾಚ್ಯ ವಸ್ತುಗಳ ಪರೀಕ್ಷಣೆಯ ಫಲಶ್ರುತಿಯಾಗಿ ಮೂಡಿಬಂದಿರುವ ಡೆಮಿ ¼ ಆಕಾರದ (೨೪ ಸೆಂ.ಮೀ. x ೧೮ ಸೆಂ.ಮೀ.) ಸುಮಾರು ಮುನ್ನೂರು ಪುಟಗಳ ಸಾಮಗ್ರಿಯನ್ನು ಸಂಗ್ರಹವಾಗಿ ಪ್ರಸ್ತಾಪ ಮಾಡುವುದು ಕೂಡ ಈ ಲೇಖನದ ಮಿತಿಯಲ್ಲಿ ದುಸ್ಸಾಹಸವಾದೀತು. ಆದ್ದರಿಂದ ಭಿನ್ನಾಭಿಪ್ರಾಯಗಳಿಗೆ ಎಡೆ ಮಾಡಿಕೊಟ್ಟಿರುವ ಒಂದೆರಡು ಅಂಶಗಳನ್ನು ಮಾತ್ರ, ಈಚಿನ ಚರ್ಚೆಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಲಾಗುವುದು.

ಇಪ್ಪತ್ತನೇ ಶತಮಾನದ ಅಂತಿಮ ವರ್ಷದಲ್ಲಿ ಭಾರತೀಯ ಪತ್ರಿಕೆಗಳು ಹರಪ್ಪ ಅಥವಾ ಸಿಂಧೂ ಕಣಿವೆಯ ಮುದ್ರೆಗಳನ್ನು ಅಂತಿಮವಾಗಿ ಅರ್ಥೈಸಲಾಗಿದೆಯೆಂಬ ರೋಚಕ ಸುದ್ದಿಯೊಂದನ್ನು ಪ್ರಚಾರ ಮಾಡಿದವು. ೧೯೯೯, ಜುಲೈ ೧೧ರ ಸಂಯುಕ್ತಮಾಧ್ಯಮ ವರದಿಯೊಂದನ್ನು ದಕ್ಷಿಣ ಏಷ್ಯಾದ ಉದ್ದಗಲಕ್ಕೂ ಪ್ರಸಾರಕ್ಕೆ ಎತ್ತಿಕೊಳ್ಳಲಾಯಿತು. ಪ್ರಖ್ಯಾತ ಇತಿಹಾಸತಜ್ಞರಾದ ಡಾ|| ಎನ್. ಎಸ್. ರಾಜಾರಾಂ (ವಾಸ್ತವವಾಗಿ ಇವರು ಅಮೆರಿಕಾ ದೇಶದ ಒಬ್ಬ ಕಂಪ್ಯೂಟರ್ ವಿಜ್ಞಾನಿ ನಾಸಾ ಮತ್ತು ಫರಕ್ಕಾದ ಸ್ಥಳೀಯ ಧರ್ಮಪಂಡಿತರು ಹಾಗೂ ಪ್ರಾಚೀನ ಲಿಪಿತಜ್ಞರಾದ ಡಾ|| ನಟವರ್ ಝಾ ಇವರು ಜೊತೆಗೂಡಿ) ೨೦೦೦ಕ್ಕಿಂತಲೂ ಹೆಚ್ಚು ಹರಪ್ಪಾ ಮುದ್ರಿಕೆಗಳನ್ನು ಓದಿ ಅವುಗಳ ಮೇಲಿನ ಸಂದೇಶಗಳನ್ನು ನಿರ್ವಚಿಸಿದ್ದೇವೆಂದು ಹೇಳಿದ 'ವಿನೂತನ-ಸಂಶೋಧನೆ' ಕುತೂಹಲಕಾರಿಯಾಗಿತ್ತು. ಮುಂದೆ ಇದೇ ವಿಷಯಕ್ಕೆ ಸಂಬಂಧಿಸಿದಂತೆ 'ಸಿಂಧೂ ಲಿಪಿಯ ನಿರ್ವಚನ', 'ಸರಸ್ವತೀ ನದಿಯಿಂದ ಸಿಂಧೂ ಲಿಪಿಯವರೆಗೆ', 'ದಿ ಪಾಲಿಟಿಕ್ಸ್ ಆಫ್ ಹಿಸ್ಟರಿ' ಗ್ರಂಥಗಳು ಪ್ರಕಟವಾದವು.

ವಾಸ್ತವವಾಗಿ ಸಿಂಧೂಕಣಿವೆಯಲ್ಲಿ ದೊರೆತ ಮುದ್ರಿಕೆಗಳನ್ನು 'ಓದುವ' ಪ್ರಯತ್ನ ಬಹಳ ಹಿಂದಿನಿಂದಲೂ ನಡೆಯುತ್ತಿದೆ. ಹರಪ್ಪಾ-ಮೊಹೆಂಜೋದಾರೋ ನಿವೇಶನಗಳನ್ನು ಪತ್ತೆಹಚ್ಚಿ, ಬೆಳಕಿಗೆ ತಂದ ಮಾರ್ಷಲ್ ಅನಂತರ ಅನೇಕ ವಿದ್ವಾಂಸರು ಮುದ್ರಿಕೆಗಳನ್ನು ಓದುವ ಪ್ರಯತ್ನ ಮಾಡಿದ್ದಾರೆ. ಅವರುಗಳಲ್ಲಿ ಜೆ. ಬಿಸ್ಲೆ (೧೯೩೬), ಜಾರ್ಜ್ ಡೇಲ್ಸ್ (೧೯೭೬), ಮೊರೊಜೊವ್ (೧೯೬೮), ಜಿ. ಆರ್. ಹಂಟರ್ (೧೯೩೪), ಬಿ. ಬಿ. ಲಾಲ್ (೧೯೭೩), ಐ. ಮಹದೇವನ್ (೧೯೭೭), ಆಸ್ಕೊ ಪೊರ್ಪೊಲಾ (೧೯೯೪), ಎಸ್. ಆರ್. ರಾವ್ (೧೯೮೧), ಡಾ|| ನಟವರ್ ಝಾ (೧೯೯೬) ಇವರು ಮುಖ್ಯರು. ಅಮೆರಿಕದ ಪುರಾತತ್ವ ಶಾಸ್ತ್ರಜ್ಞ


**ಲೋಥಲ್ ಮತ್ತು ಸಿಂಧೂ ನಾಗರಿಕತೆ**

ಲೇಖಕರು

ಮೂಲ : **ಡಾ|| ಎಸ್. ಆರ್. ರಾವ್** ಅನುವಾದ : **ಡಾ|| ಎಸ್. ಗುರುರಾಜಾಚಾರ್**

ಪ್ರಕಾಶಕರು : **ಶ್ರೀಹರಿ ಪ್ರಕಾಶನ**

ಭಾರತಿ, ನವೋದಯನಗರ, ಧಾರವಾಡ

**ಪ್ರಥಮ ಮುದ್ರಣ : ೧೯೯೪**

**ಪುಟ : ೨೭೦** **ಬೆಲೆ : ರೂ. ೨೧೦**

ಗ್ರೆಗೊರಿ ಪೊಸೆಲ್ ಎಂಬಾತ ೧೯೯೬ರ ತನ್ನ ಒಂದು ಪುಸ್ತಕದಲ್ಲಿ ಹರಪ್ಪ ಮುದ್ರೆಗಳ ಅರ್ಥವಿವರಣೆಯ ಮೂವತ್ತೈದು ಪ್ರಯತ್ನಗಳನ್ನು (ಇದು ಒಟ್ಟು ಪ್ರಯತ್ನಗಳ ಮೂರನೇ ಒಂದು ಭಾಗದಂತೆ) ಪ್ರಸ್ತಾಪಿಸಿದ್ದಾನೆ. ಈ ಹಿನ್ನೆಲೆಯಲ್ಲಿ ರಾಜಾರಾಂ ಮತ್ತು ನಟವರ್ ಝಾ ಹೇಳಿಕೆಗಳು ಅತಿಶಯೋಕ್ತಿಯಾಗಿಯೂ, ಎಸ್. ಆರ್. ರಾವ್ ಅವರ ಶೋಧನೆಗಳು ಪೇಲವವಾಗಿಯೂ ತೋರಿದ್ದರೆ ಆಶ್ಚರ್ಯವಿಲ್ಲ. "ಸುಮಾರು ೨೫೦೦ರಷ್ಟು ಮುದ್ರೆ, ತಾಮ್ರಫಲಕ ಮತ್ತು ಮಡಕೆಗಳ ಮೇಲೆ ಕಾಣಸಿಗುವ ಸಿಂಧೂ ಬರಹವು, ಸುಮಾರು ೨೫೦ ಚಿಹ್ನೆಗಳ ನ್ನೊಳಗೊಂಡಿವೆಯೆಂದೂ, ಈ ಪೈಕಿ ೫೦೦ರಷ್ಟು ಮುದ್ರಿಕೆಗಳನ್ನು ತಾವು ಓದಿರುವುದಾಗಿಯೂ" ಡಾ॥ ರಾವ್ ತಿಳಿಸುತ್ತಾರೆ. ಸಿಂಧೂ-ಮುದ್ರಿಕೆಗಳ ಮೇಲಿನ ಬರವಣಿಗೆಯ ಸ್ವರೂಪ, ಲಿಪಿಯ ವಿಕಾಸ, "ಸಿಂಧೂಲಿಪಿಯು ಭಾಗಶಃ ಚಿತ್ರಲಿಪಿಯಾಗಿದ್ದು, ಲೋಥಲದಲ್ಲಿ ಎದ್ದು ಕಾಣುವಂತೆ, ಅಕ್ಷರಲಿಪಿಯಾಗಿ ಸರಳಗೊಂಡ ಪ್ರಕ್ರಿಯೆಯು... ಇತ್ತೀಚಿನ ಉತ್ಖನನಗಳಿಂದ ದೃಢಪಟ್ಟಿದೆ ಎಂಬುದನ್ನು ಇಲ್ಲಿ ಒತ್ತಿಹೇಳುವ ಅವಶ್ಯವಿದೆ." – ಎಸ್. ಆರ್. ರಾವ್, ಪೀಠಿಕೆ ಪು. xi), ವರ್ಣಮಾಲಾಪದ್ಧತಿ, ಬರವಣಿಗೆಯ ದಿಕ್ಕು, (ಎಡದಿಂದ ಬಲಕ್ಕೆ ಓದಬೇಕೆ ಅಥವಾ ಬಲದಿಂದ ಎಡಕ್ಕೆ ಓದಬೇಕೆ ಎಂಬುದು), ಇತ್ಯಾದಿಗಳ ಬಗೆಗೆ ವಿದ್ವಾಂಸರಲ್ಲಿ ಬಹಳಷ್ಟು ಭಿನ್ನಾಭಿಪ್ರಾಯಗಳಿವೆ. ಇಷ್ಟೆಲ್ಲ ಸಂದೇಹಗಳು, ಅಭಿಪ್ರಾಯ ಭೇದಗಳು ಇದ್ದರೂ ಸಹ ಡಾ॥ ರಾಜಾರಾಂ ಮಾತ್ರ 'ಹರಪ್ಪಾದ ಭಾಷೆಯು ಉತ್ತರಕಾಲೀನ ಪ್ರೌಢವೇದ ಸಂಸ್ಕೃತವೇ ಸರಿ' ಎಂದು ಖಡಾಖಂಡಿತವಾಗಿ ಹೇಳಿಬಿಡುತ್ತಾರೆ! ಇರಲಿ.

ಮುದ್ರೆಗಳ ಮೇಲಿನ ಬರವಣಿಗೆಯ ಹಾಗೆಯೇ ಅವುಗಳ ಮೇಲಿನ ಪ್ರಾಣಿ ಚಿಹ್ನೆಗಳ ವಿಚಾರವೂ ವಿವಾದಾಸ್ಪದವಾಗಿದೆ. ಸಿಂಧೂ ಮುದ್ರಿಕೆಗಳ ಮೇಲೆ ಹಲವು ಬಗೆಯ ಪ್ರಾಣಿಚಿತ್ರಗಳು – ಜೀವಂತ ಮತ್ತು ಪುರಾಣಕಲ್ಪಿತ – ಕಂಡುಬರುವುದಾದರೂ, ವೈದಿಕಸಾಹಿತ್ಯದಲ್ಲಿ ವಿಪುಲವಾಗಿ ಲಭ್ಯವಿರುವ ಕುದುರೆಯು ಸಿಂಧೂ ನಾಗರಿಕತೆಗೆ ಪರಿಚಯವಿದ್ದಂತಿಲ್ಲ (ಮುಂದಿನ ಕಾಲದಲ್ಲಿ ಹರಪ್ಪದಿಂದ ಲೋಥಲ್‌ಗೆ ಬಂದು ನೆಲೆಸಿದ ಜನರಿಗೆ ಈ ಪ್ರಾಣಿಯ ಪರಿಚಯವಿದ್ದಿರಬಹುದು. ಎಸ್. ಆರ್. ರಾವ್ – ಪು. ೭೮ ಮತ್ತು ೧೨೦) ಎಂಬುದು ಬಹುಜನ ವಿದ್ವಾಂಸರ ನಿಲುವು. ಡಾ॥ ರಾಜಾರಾಂ ಮಾತ್ರ ಒಂದು ಮುದ್ರಿಕೆಯ ಮೇಲೆ ಕುದುರೆಯನ್ನು ಕಂಡು ಹಿಡಿದಿದ್ದಾರೆ. ಆದರೆ, ರಾಜಾರಾಂ ಅವರ ಪುಸ್ತಕವು ಪ್ರಕಟವಾಗಿ ವಾರಗಳು ಕಳೆಯುವಷ್ಟರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಭಾರತಶಾಸ್ತ್ರಜ್ಞ ಮೈಕೆಲ್ ವಿಟ್ಜೆಲ್ ಮತ್ತು ತೌಲನಿಕ ಇತಿಹಾಸಕಾರ ಸ್ಟೀವ್ ಫಾರ್ಮರ್ ಜೊತೆಗೂಡಿ ರಾಜಾರಾಂ ಅವರು ಕುದುರೆ ಮುದ್ರೆಯೆಂದು ತೋರಿಸುತ್ತಿರುವುದು ವಾಸ್ತವವಾಗಿ ಕಂಪ್ಯೂಟರ್ ಸಹಾಯದಿಂದ ನಿರೂಪಗೊಳಿಸಿದ ಭಗ್ನವಾದ 'ಏಕಶೃಂಗಿವೃಷಭ'ದ (unicorn-bull – ಒಂದು ಪುರಾಣಕಲ್ಪಿತ ಪ್ರಾಣಿ) ಮುದ್ರಿಕೆ ಎಂಬುದನ್ನು ತೋರಿಸಿಕೊಟ್ಟರು. ಇದರಿಂದಾಗಿ ಭಾರತಶಾಸ್ತ್ರಜ್ಞರು 'ಸಿಂಧೂ ಕಣಿವೆಯ ಪಿಲ್ಟ್‌ಡೌನ್ ಕುದುರೆ' ಎಂದು ರಾಜಾರಾಂ ಅವರ ಸಂಶೋಧನೆಯನ್ನು ತಮಾಷೆ ಮಾಡುವಂತಾಯಿತು. (ನೋಡಿ : A Bushy Tail – THE PILTDOWN HORSE — *FRONTLINE* – November 6, 2000). ಸಿಂಧೂ ನಾಗರಿಕತೆ ಮತ್ತು ವೇದಕಾಲೀನ ಸಂಸ್ಕೃತಿಗಳ ನಡುವಿನ ಕಂದಕವನ್ನು ತುಂಬುವ ಸಲುವಾಗಿ ರಾಜಾರಾಂ ಹೀಗೆ 'ಸುಳ್ಳು ಕುದುರೆ ಸಾಕ್ಷ್ಯ'ವನ್ನು ಸೃಷ್ಟಿಸಿರುವಂತೆ ತೋರುತ್ತದೆ.

ವಿವಾದಾಸ್ಪದವಾಗಿರುವ ಮತ್ತೊಂದು ವಿಚಾರ ಸಿಂಧೂ ಮುದ್ರಿಕೆಗಳ ಉಪಯೋಗಕ್ಕೆ ಸಂಬಂಧಿಸಿದುದು :–

"ಹರಪ್ಪಾದ ವ್ಯಾಪಾರ ಸಾಧನಗಳಲ್ಲಿ ಮುದ್ರೆಗಳಿಗೆ ಪ್ರಥಮ ಸ್ಥಾನವಿದೆ. ಸಿಂಧೂ ಮುದ್ರೆಗಳನ್ನು ವಾಣಿಜ್ಯದ ಉದ್ದೇಶಕ್ಕಾಗಿ ಬಳಸಲಾಯಿತೇ ಹೊರತು, ತಾಯಿತ ಅಥವಾ ಆಭರಣ ರೂಪದಲ್ಲಲ್ಲ ಎಂಬುದನ್ನು ನಿರ್ಣಾಯಕವಾಗಿ ಋಜುವಾತು ಮಾಡುವುದರಲ್ಲಿ ಲೋಥಲಿಗೆ ಅಸಾಧಾರಣ ವೈಶಿಷ್ಟ್ಯವಿದೆ. ಲೋಥಲದಲ್ಲಿಯ




ದಾಸ್ತಾನು ಮಳಿಗೆಯಿಂದ ಸಂಗ್ರಹಿಸಲಾದ ೬೫ರಷ್ಟು ಸುಟ್ಟ ಮಣ್ಣಿನ ಮುದ್ರೆ ಗುರುತು ಗಳಲ್ಲಿ ಒಂದು ಮುಖದಲ್ಲಿ ಸಿಂಧೂಮುದ್ರೆಗಳ ಗುರುತನ್ನೂ ಮತ್ತೊಂದರಲ್ಲಿ ಮೂಟೆ ಕಟ್ಟಲು ಬಳಸಿದ ಬಿದಿರಿನ ಚಾಪೆ, ಜೊಂಡುಹುಲ್ಲು, ನೇಯ್ದಬಟ್ಟೆ ಹಾಗೂ ತಿರುಚಿದ ಹುರಿಯಂಥ ವಸ್ತುಗಳ ಗುರುತನ್ನು ಕಾಣಬಹುದು. ಇದರಿಂದ ಎರಡು ನಿರ್ಧಾರಗಳಿಗೆ ಬರಬಹುದು. ಮೊದಲನೆಯದಾಗಿ, ಸರಕಿನ ಮೂಟೆಗಳನ್ನು ಚಾಪೆ ಅಥವಾ ಬಟ್ಟೆಗಳಲ್ಲಿ ಸುತ್ತಲಾಗುತ್ತಿತ್ತು; ಎರಡನೆಯದಾಗಿ, ಅವುಗಳ ಮೇಲೆ ಮುದ್ರೆಯನ್ನೊತ್ತಿ ಅವನ್ನು ದಾಸ್ತಾನು ಮಳಿಗೆಯಲ್ಲಿ ಇಡಲಾಗುತ್ತಿತ್ತು... ಕೆಲವು ವೇಳೆ ಸುಂಕದ ಅಧಿಕಾರಿಗಳೂ ತಮ್ಮ ಮುದ್ರೆಗಳನ್ನು ಅವುಗಳ ಮೇಲೆ ಒತ್ತುತ್ತಿದ್ದರು... ಸರಕುಗಳ ಮೇಲೆ ಮುದ್ರೆಯೊತ್ತುವುದರ ಮತ್ತೊಂದು ಉದ್ದೇಶ ಸರಕುಗಳ ಗುಣಮಟ್ಟವನ್ನು ಖಚಿತಪಡಿಸುವುದಾಗಿತ್ತು..." (ಎಸ್. ಆರ್. ರಾವ್ – ಪು. ೧೨೦). ಸಿಂಧೂ ನಾಗರಿಕತೆಯ ಕೆಲವು ಮೊಹರುಗಳಲ್ಲಿರುವ ಲಿಪಿಯನ್ನು ಅರ್ಥೈಸುವುದು ಇನ್ನೂ ಸಾಧ್ಯವಾಗಿಲ್ಲದಿದ್ದರೂ ಬಹುಶಃ ಆ ಕಾಲದ ವ್ಯಾಪಾರ ಸಂಬಂಧೀ ಲೆಕ್ಕಾಚಾರಗಳಿಗೆ ಈ ಲಿಪಿ ಸಂಬಂಧಿಸಿದ್ದಿರಬೇಕೆಂದು ಗಾರ್ಡನ್ ಚೈಲ್ಡ್ ಸೂಚಿಸಿದ್ದಾರೆ. ಹೀಗೆ ಮುದ್ರೆಗಳನ್ನು ಉಪಯೋಗಿಸುತ್ತಿದ್ದ ಉದ್ದೇಶ ಮತ್ತು ವಿಧಾನಗಳನ್ನು ಖಚಿತಪಡಿಸುವುದೇ ಅಲ್ಲದೆ, "ಸಿಂಧೂಮುದ್ರೆಗಳು ವೈದಿಕಯುಗದ ಆರಾಧನಾ ಪದ್ಧತಿಯ ದೃಶ್ಯಗಳನ್ನೂ ಚಿತ್ರಿಸುತ್ತವೆ"ಯೆಂಬ ಟಿ. ಎನ್. ರಾಮಚಂದ್ರನ್ ಅವರ ಅಭಿಪ್ರಾಯವನ್ನು ವಿವರವಾಗಿ ಉದ್ಧರಿಸಿ, ಖಂಡಿಸುತ್ತಾರೆ (ಪು. ೧೪೪, ೪೫, ೪೬) ಡಾ॥ ರಾವ್.

ಇಷ್ಟಾದ ಮೇಲೆಯೂ ಡಾ॥ ರಾಜಾರಾಂ ಅವರು ಸಿಂಧೂ ಮುದ್ರಿಕೆಗಳನ್ನು ತಯಾರಿಸಿದ ಉದ್ದೇಶ, ಉಪಯುಕ್ತತೆ ಮೊದಲಾದವನ್ನೆಲ್ಲ ಗಣನೆಗೇ ತಂದುಕೊಳ್ಳದೆ, ಹೆಚ್ಚೆಂದರೆ ಮೂರು ಅಥವಾ ನಾಲ್ಕು ಅಕ್ಷರಗಳಿರುವ ಮುದ್ರಿಕೆಗಳಲ್ಲಿ ವೇದಕಾಲೀನ ಪ್ರೌಢಸಂಸ್ಕೃತ ಭಾಷೆಯನ್ನೂ, ಶುಲ್ಬ ಸೂತ್ರಗಳು, ರೇಖಾಗಣಿತ ಪ್ರಮೇಯಗಳು, ಪಾಣಿನಿಯ ವ್ಯಾಕರಣಸೂತ್ರಗಳು ಮೊದಲಾದುವನ್ನೆಲ್ಲ ಓದುತ್ತಾರೆ. ರಾಜಾರಾಂ ಮತ್ತು ಝಾ ಅವರ ನಿರ್ವಚನವು ಎಷ್ಟೊಂದು ಕುಂಚನಶೀಲವಾಗಿದೆಯೆಂದರೆ, ಅವರು ಯಾವುದೇ ಮುದ್ರಿಕೆಯ ಮೇಲಿನ ಲಿಪಿಗಳಿಂದ ಒಂದಿಲ್ಲೊಂದು ವೇದ ಪಾಠವನ್ನು ಹಿಂಡಿ ತೆಗೆಯಬಲ್ಲರು! ಯಾವುದೇ ವ್ಯಂಜನ ಅಥವಾ ಸ್ವರವನ್ನು ಹೇಗೆ ಬೇಕಾದರೂ ಉಚ್ಚರಿಸಬಹುದು, ಯಾವುದಕ್ಕೂ ಹೊಂದಿಕೊಳ್ಳದಿದ್ದರೆ ಅದನ್ನು ಕೈಬಿಡಬಹುದು! ಇಷ್ಟೆಲ್ಲ ಸ್ವಾತಂತ್ರ್ಯವಹಿಸಿದ ಮೇಲೆಯೂ ಇವರು ಕಂಡುಹಿಡಿದ ಚತುರೋಕ್ತಿಗಳ ಸರಣಿಗೂ ಹರಪ್ಪ ನಾಗರಿಕತೆಗೂ ಯಾವುದೇ ಹೊಂದಾಣಿಕೆ ಗೋಚರಿಸುವುದಿಲ್ಲ. ಈ ಇಬ್ಬರು ವಿದ್ವಾಂಸರ ನಿರ್ವಚನವು 'ಅತ್ಯಂತ ಹಾಸ್ಯಾಸ್ಪದ'ವಾಗಿದೆ ಎನ್ನುವುದು ತುಂಬ ಮೃದುವಾದ ಟೀಕೆಯಾದೀತು.

ಇನ್ನು ರಾಜಾರಾಂ ಮತ್ತು ಝಾ ಅವರ ಬರವಣಿಗೆಯ ಪ್ರಮುಖ ವಿಷಯವಾದ 'ಆರ್ಯರ ಆಕ್ರಮಣವಾದದ ಖಂಡನೆ'ಯ ವಿಚಾರಕ್ಕೆ ಬರೋಣ. ಹತ್ತೊಂಬತ್ತನೇ ಶತಮಾನದ ಕಡೆಯ ಭಾಗದಲ್ಲಿ 'ಆರ್ಯರು' ಎಂಬ ಚಾರಿತ್ರಿಕ ವರ್ಗವೊಂದು ರೂಪುಗೊಂಡು ಅಲ್ಲಿಂದ ಈ ಚರ್ಚೆ ಆರಂಭವಾಗುತ್ತದೆ. ಋಗ್ವೇದದಲ್ಲಿ ಉಲ್ಲೇಖಗೊಂಡಿರುವ ಆರ್ಯರು ಉತ್ತರ ಭರತ ಖಂಡಕ್ಕೆ ದಾಳಿಯಿಟ್ಟು ಆಕ್ರಮಣ ಮಾಡಿ ಭಾರತೀಯ ನಾಗರಿಕತೆಯನ್ನು ಹುಟ್ಟುಹಾಕಿ ತಮ್ಮ ಇಂಡೋ-ಆರ್ಯನ್ ಮೂಲದ ಭಾಷೆಗಳನ್ನು ಈ ದೇಶದಲ್ಲಿ ಹರಡಿದರು – ಎಂಬ ವಾದವನ್ನು ಕೆಲವು ಚರಿತ್ರಕಾರರು ಮಂಡಿಸಿದರು. ಸಿಂಧೂ ಕಣಿವೆಯ ಪಟ್ಟಣಗಳ ವಿನಾಶಕ್ಕೆ ಆರ್ಯರ ಆಕ್ರಮಣವೇ ಕಾರಣವೆಂದು ಹೇಳಲಾಯಿತು. ಆದರೆ ಎಲ್ಲ ಚರಿತ್ರಕಾರರೂ ಈ ಅಭಿಪ್ರಾಯವನ್ನು ಸಮರ್ಥಿಸಿದರೆಂದಲ್ಲ. ಉದಾ : 'ಭಾರತ ಇತಿಹಾಸ ಕಾಂಗ್ರೆಸ್'ನ ಸಮ್ಮೇಳನ ಒಂದರಲ್ಲಿ ರೋಮಿಲಾ ಥಾಪರ್ ಮಂಡಿಸಿದ ವಾದ ಹೀಗಿತ್ತು: "ಇಂಡೋ-ಆರ್ಯಭಾಷೆಯು ಹಲವು ವಲಸೆಗಳ ಸರಣಿಯ ಮೂಲಕ ಭಾರತವನ್ನು ಪ್ರವೇಶಿಸಿತು. ಸಂಸ್ಕೃತೀಕರಣದ ಹಲವು ಮಜಲು, ಹೋಗುಹಾದಿಗಳ ಮೂಲಕ ಇಲ್ಲಿ ವಾಸಿಸುತ್ತಿದ್ದ ಜನಸಮುದಾಯ

ಗಳಲ್ಲಿ ಹರಡಿತು. ಚಾರಿತ್ರಿಕವಾಗಿ ಹೆಚ್ಚು ಅರ್ಥವತ್ತಾದ ಪ್ರಶ್ನೆಯೆಂದರೆ ಆರ್ಯರು ಒಂದು ಅನನ್ಯ ಜನಾಂಗದವರೇ ಏನಲ್ಲ; ಒಂದು ಸಂಸ್ಕೃತಿಯ ಅನನ್ಯತೆ ಅಥವಾ ವಿಶಿಷ್ಟತೆಯ ಲಕ್ಷಣಗಳು ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿ ಉಳಿಯುವಂಥವಲ್ಲ. ಆದ್ದರಿಂದ ಆಯಾ ಪ್ರದೇಶದ ಭಾಷೆಗಳು ಮತ್ತು ಸಂಸ್ಕೃತಿಗಳು ಕಾಲಕಾಲಕ್ಕೆ ಹೇಗೆ ಮತ್ತು ಏಕೆ ಬದಲಾಗುತ್ತವೆ – ಎಂಬುದು ಅಧ್ಯಯನಯೋಗ್ಯವಾದ ಪ್ರಶ್ನೆಯಾಗಿದೆ.''

– ವಸ್ತುಸ್ಥಿತಿ ಹೀಗಿದ್ದರೂ ಸಹ ಡಾ|| ರಾಜಾರಾಂ ಮತ್ತು ಡಾ|| ಝಾರಂತಹ ವಿದ್ವಾಂಸರು ''ಆರ್ಯರ ಆಕ್ರಮಣವಾದ''ವನ್ನೇ ಚರ್ಚೆಯ ಪೂರ್ವಪಕ್ಷವಾಗಿ ಗೃಹೀತಹಿಡಿದು ಅದನ್ನು ಖಂಡಿಸುವುದರಲ್ಲೆ ತಮ್ಮ ಸಾಮರ್ಥ್ಯವನ್ನು ವ್ಯಯ ಮಾಡುತ್ತಾರೆ. ಡಾ|| ಎಸ್. ಆರ್. ರಾವ್ ಅವರು ''ಆರ್ಯರ ಆಕ್ರಮಣ''ದ ಬಗೆಗೆ ನೇರ ಪ್ರಸ್ತಾಪ ಮಾಡದಿದ್ದರೂ, ಸಿಂಧೂ ನಾಗರಿಕತೆಯ ನಿರ್ಮಾಪಕರು ಮೂಲತಃ ಹಲವು ಮಾನವಕುಲಗಳಿಗೆ ಸೇರಿದ್ದವರಾಗಿದ್ದರೆಂಬುದನ್ನು ಸ್ಪಷ್ಟಪಡಿಸುತ್ತಾರೆ :

''ಸಿಂಧೂ ನಾಗರಿಕತೆಯ ಮೂಲದ ಬಗ್ಗೆ ಇನ್ನೂ ಖಚಿತವಾಗಿ ಗೊತ್ತಿಲ್ಲದಿದ್ದರೂ ಹರಪ್ಪಾ ಪೂರ್ವ ಸಂಸ್ಕೃತಿಗಳು ವಿಕಾಸವಾದುದರ ಬಗ್ಗೆ ಒಂದು ಅಭಿಪ್ರಾಯ ತಳೆಯಬಹುದು. ಹರಪ್ಪಾ ಜನರ ಅವನತಿಯ ಬಳಿಕ (ಹರಪ್ಪಾ ಜನರ ಅವನತಿ ಮತ್ತು ಸಿಂಧೂ ನಾಗರಿಕತೆಯ ವಿನಾಶಕ್ಕೆ ಒಂದಕ್ಕಿಂತ ಹೆಚ್ಚು, ಹಲವು ಬಗೆಯ – ಕಾರಣಗಳನ್ನು ಪ್ರಾಚೀನ ಇತಿಹಾಸತಜ್ಞರು ಊಹಿಸಿದ್ದಾರೆ.) ಅವರ ಅನಂತರದವರನ್ನು ಗುರುತಿಸಬಹುದು.'' (ಪ್ರಸ್ತಾವನೆ : ಪು. vii) ''ಹರಪ್ಪಾ, ಮೊಹೆಂಜೋದಾರೋ ಹಾಗೂ ಲೋಥಲ್‌ಗಳಲ್ಲಿಯ ಮಾನವ ಅಸ್ಥಿ ಅವಶೇಷಗಳ ಅಧ್ಯಯನವು ಸ್ಪಷ್ಟಪಡಿಸುವಂತೆ, ಸಿಂಧೂ ನಾಗರಿಕತೆಗೆ ಸೇರಿದ ಜನರು ಒಂದೇ ಮಾನವ ಗುಂಪಿಗೆ ಸೇರಿದವರೇನಲ್ಲ... ವಿವಿಧ ಪ್ರಾಂತಗಳಲ್ಲಿಯ ಹರಪ್ಪಾ ಜನರ ಧಾರ್ಮಿಕ ಭಾವನೆಗಳಲ್ಲಿ ಕೆಲವೊಂದು ವ್ಯತ್ಯಾಸಗಳಿದ್ದುದು ಸ್ಪಷ್ಟವಾಗಿದೆ.'' (ಅಲ್ಲೇ.)

ಹರಪ್ಪಾ ಸ್ಮಶಾನಗಳಲ್ಲಿ ದೊರೆತ ಅಸ್ಥಿಪಂಜರಗಳ ಆಧಾರದ ಮೇಲೆ ದೈಹಿಕ ಲಕ್ಷಣಗಳನ್ನು ಅನುಸರಿಸಿ ಮಾನವಕುಲಶಾಸ್ತ್ರಜ್ಞರು ಮಾಡಿರುವ ಉದ್ದ ತಲೆಯವರು, ಗುಂಡು ತಲೆಯವರು (ಮೋಟುತಲೆಯವರು) ಇತ್ಯಾದಿ ಜನಾಂಗಗಳ ವಿಚಾರವನ್ನು ಪ್ರಸ್ತಾಪಿಸುತ್ತಾರಾದರೂ, ಈ ವಿಂಗಡಣೆಯ ಈ ಮಾದರಿಗಳನ್ನೂ ''ಇಂದಿನ ಅರ್ಥದಲ್ಲಿ 'ಜನಾಂಗ' (races)ಗಳಿಗೆ ಎಲ್ಲ ರೀತಿಯಲ್ಲೂ ಸಮವೆಂದು ಭಾವಿಸಲಾಗದು; ಏಕೆಂದರೆ, ಹರಪ್ಪಾದಂತಹ ಜನನಿಬಿಡವಾಗಿದ್ದ ನಗರದಲ್ಲಿ, ಮಿಶ್ರ ಸಂತಾನಾಭಿವೃದ್ಧಿ ಅನಿವಾರ್ಯವಾಗಿತ್ತು'' ಎಂದಿದ್ದಾರೆ.

ಪೂರ್ವಸೂರಿಗಳಿಂದ ಇಷ್ಟೆಲ್ಲ ಸಂಶೋಧನಾ ಸಾಮಗ್ರಿ ಲಭ್ಯವಿದ್ದರೂ ಅದನ್ನು ಗಮನಿಸಿಯೇ ಇಲ್ಲವೇನೋ ಎಂಬಂತೆ, ಡಾ|| ರಾಜಾರಾಂ ಅವರು ''ಸಿಂಧೂ ಸಂಸ್ಕೃತಿಯು ಆದ್ಯಂತವಾಗಿ ಋಗ್ವೇದಕಾಲದ ವೈದಿಕ ಆರ್ಯರ ನಿರ್ಮಿತಿಯೇ'' ಎಂದು ವಾದಿಸುತ್ತಾರೆ. ಈವರೆಗೆ ಭಾರತದ ಪ್ರಾಚೀನ ಚರಿತ್ರೆಯನ್ನು ರಚಿಸಿದವರನ್ನೆಲ್ಲ (ಒಬ್ಬಿಬ್ಬರನ್ನು ಹೊರತುಪಡಿಸಿ) 'ವಸಾಹತುಶಾಹಿ ವಾದಿಗಳು ಮತ್ತು ಅದರ ಸಮರ್ಥಕರು; ಮಾರ್ಕ್ಸ್‌ವಾದಿ ಇತಿಹಾಸಕಾರರು' ಎಂದು ಜರೆಯುತ್ತಾರೆ. ಕಂಪ್ಯೂಟರ್ ವಿಜ್ಞಾನಿಯಾಗಿದ್ದು, ಪ್ರಾಚ್ಯಶಾಸ್ತ್ರಜ್ಞರೂ, ಇತಿಹಾಸಕಾರರೂ ಆಗಿ ರೂಪಾಂತರ ಹೊಂದಿದ ಡಾ|| ರಾಜಾರಾಂ ಅಂತಹವರ ಬರವಣಿಗೆಯ ಅಸಂಬದ್ಧತೆಯನ್ನು, ಪೊಳ್ಳುತನವನ್ನು, ಇದರ ಹಿಂದಿರುವ ರಾಜಕೀಯ ಹುನ್ನಾರವನ್ನು ಅರಿತುಕೊಳ್ಳುವ ಸಲುವಾಗಿಯಾದರೂ ಡಾ|| ಎಸ್. ಆರ್. ರಾವ್ ಅವರ ಗ್ರಂಥಗಳ ಅಧ್ಯಯನವು ಅಗತ್ಯವೆನಿಸುತ್ತದೆ. (ಡಾ|| ರಾಜಾರಾಂ ಮತ್ತು ಡಾ|| ನಟವರ್ ಝಾ ಅವರ ಅಭಿಪ್ರಾಯಗಳನ್ನು ಕುರಿತ ವಿವರವಾದ ಚರ್ಚೆಯನ್ನು 'ಇತಿಹಾಸದ ರಾಜಕೀಯ' – ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ – ೨೦೦೨; ಪುಸ್ತಕದಲ್ಲಿ ನೋಡಬಹುದು.)

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ಎರಡನೇ ಹಂತ, ಬೆಂಗಳೂರು - ೫೬೦ ೦೭೦

# ಬಡರೈತನ ಅಭಿವೃದ್ಧಿ: ಸಮಾಜವಾದ ಮಾರುಕಟ್ಟೆ

## – ಕೆಲವು ಅನಿಸಿಕೆಗಳು



ಮನೆಬೇಲಿಯಲ್ಲಿ ತರಕಾರಿ

ಪ್ರೊ॥ ಬಿ. ವಿ. ವೆಂಕಟರಾವ್

ತಿಂಗಳ ೨೮ನೇ ತಾರೀಕಿನ ಆಕರ್ಷಣೆ 'ಹೊಸತು' – ಅದರ ಧ್ಯೇಯ ಶೀರ್ಷಿಕೆ 'ನೆಮ್ಮದಿಯ ನಾಳೆ ನಮ್ಮದು'; ಇವತ್ತು ಹೇಗೋ ಆಯಿತು, ನಾಳೆ ಒಳ್ಳೆಯದಾಗುತ್ತದೆ ಎಂಬ ಬತ್ತದ ಭರವಸೆ.

ಇತ್ತೀಚೆಗೆ ಚೀಣಾ ಪ್ರವಾಸದಿಂದ ಹಿಂದಿರುಗಿದ ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಅಲ್ಲಿ ಕಂಡ ಮಾರುಕಟ್ಟೆ ಸಮಾಜವಾದದ ಬಗ್ಗೆ ಅಭಿಮಾನದ ಮಾತುಗಳನ್ನಾಡಿದರು. ಕಿತ್ತು ತಿನ್ನುವ ಬಡತನ ಇಲ್ಲದಿದ್ದರೂ ಅಕ್ಷರ ನಂಬಿದ ನಮ್ಮಂಥವರೆಲ್ಲಾ ಬಡವರೇ, ಪೇಟೆಯೊಡನೆ ನಮ್ಮ ನಂಟು ಅಷ್ಟಕ್ಕಷ್ಟೇ. 'ವಿಂಡೋ ಷಾಪಿಂಗ್'ಗೆ ಪರಿಮಿತಿಯಾದದ್ದು. ೧೯೯೦ರ ದಶಕದಲ್ಲಿ ಮುಕ್ತ ಮಾರುಕಟ್ಟೆ ಯುಗ ಹುಟ್ಟಿದಾಗಿನಿಂದ ಎಡಪಂಥದವರೂ ಸೇರಿದಂತೆ ಎಲ್ಲ ಬುದ್ಧಿಜೀವಿಗಳು, ಬಡತನ ನಿವಾರಣೆಗೆ ಜಾಗತೀಕರಣ – ಮುಕ್ತಮಾರುಕಟ್ಟೆಯೊಂದೇ ರಾಮಬಾಣ ಎಂಬಂಥ ಘೋಷಣೆ ಹಾಕುತ್ತಿದ್ದಾರೆ. ಇಂದಿನ ಭಾರತ ಆರ್ಥಿಕ-ಸಾಮಾಜಿಕ ಸಂದರ್ಭದಲ್ಲಿ ಇವುಗಳ ಸಾಧ್ಯಾಸಾಧ್ಯತೆಗಳ ಕೆಲವು ಅನಿಸಿಕೆಗಳ ಹಂಚಿಕೆ ಲೇಖನದ ಉದ್ದೇಶ.

ಸಾಲದ ಹೊರೆಯಿಂದ ಅಸ್ತಿತ್ವ ಕಳೆದುಕೊಳ್ಳುತ್ತಿರುವ ಬಡದೇಶಗಳು ಬಂಡವಾಳ ಸಾಮ್ರಾಜ್ಯಶಾಹಿ ಯಂತ್ರದ ನಟ್-ಬೋಲ್ಟ್ ಆಗಿಹೋಗಿವೆ. ಮಾಹಿತಿ ತಂತ್ರಜ್ಞಾನದ ಕಂಡೂ ಕಾಣದ ಆಕ್ರಮಣದಿಂದ ಅವುಗಳ ಉತ್ಪಾದನಾ ಸಾಮರ್ಥ್ಯ ಅಳಿಸಿಹೋಗಿದೆ. ಬಹುಪಾಲು ಜನ ಬಡತನ, ಹಸಿವು, ರೋಗರುಜಿನಾದಿಗಳಿಂದ ತಲ್ಲಣಿಸಿಹೋಗಿದ್ದಾರೆ. ಸೂರು, ಹೊಟ್ಟೆಬಟ್ಟೆಗಳಿಲ್ಲದ ದುಃಸ್ಥಿತಿ, ಕಂಡುಕೇಳರಿಯದ ವಂಚನೆ, ಅಣುಶಕ್ತಿಯೂ ಸೇರಿದಂತೆ ಶಸ್ತ್ರಾಸ್ತ್ರಗಳ ದುಷ್ಟ ಬಲದಿಂದ ಜನರ ಮೇಲಿನ ದೌರ್ಜನ್ಯ – ಈ ಕಾರಣಗಳಿಂದ ಬಡವ ಬಲ್ಲಿದ ಮಧ್ಯದ ಅಂತರ ಅಗಾಧವಾಗಿ ಬೆಳೆಯುತ್ತಿದೆ.

ಚರಿತ್ರೆಯುದ್ದಕ್ಕೂ ಇಂಥಾ ಸಮಾಜ ಹಿಂಜರಿತ ಸನ್ನಿವೇಶಗಳಲ್ಲಿ ಮನುಷ್ಯನ ಮಾನವೀಯತೆಯನ್ನು ಉಳಿಸಿ ಸುಧಾರಿಸುವ ಕೆಲಸ ನಡೆದಿದೆ. ಮತ ಸ್ಥಾಪಕರಾದ ಜುರಾಸ್ಟರ್, ಜೀಸಸ್, ಮೊಹಮದ್ ಪೈಗಂಬರ್, ಬುದ್ಧ, ಮಹಾವೀರರಂಥವರು ಅಂದು ಕಾಣುತ್ತಿದ್ದ ಸಮಾಜಘಾತುಕ ಅನ್ಯಾಯಗಳತ್ತ ದನಿ ಎತ್ತಿ ಮೌಲ್ಯಗಳ ಪುನರುದ್ಧಾರಕ್ಕೆ ಸೆಣಸಿದವರೇ. ಭಕ್ತಿ ಪಂಥದ ಪುರಂದರ, ಕನಕ, ಕಬೀರ್ ದಾಸರುಗಳು ಹಾಗೂ ಬಸವ, ಸರ್ವಜ್ಞರಂಥ ವಚನಕಾರರು, ಅವರವರ ವಿಶಿಷ್ಟ ರೀತಿಯಲ್ಲಿ ಸಮಾಜ ಸುಧಾರಣೆಗೆ ಕಾರಣರಾದವರೇ.

ಇವರೆಲ್ಲರೂ ನೀತಿ ಬೋಧನೆಯಿಂದ ಜನರ ಮನಸ್ಸನ್ನು ಪರಿವರ್ತಿಸಲು ಪ್ರಯತ್ನ ಮಾಡಿದ ಮಹಾನ್ ಪುರುಷರು. ಸಾಮಾನ್ಯರಲ್ಲಿ ಅಸಮತೆ, ಅವಕಾಶ ವಂಚನೆಯಂಥ ನೋವುಗಳಿದ್ದರೂ ಅವು ಸಂಘರ್ಷದ ಹಾದಿಗೆ ಹೊರಳಲಿಲ್ಲ. ಕೈಗಾರಿಕಾ ಕ್ರಾಂತಿಯ ಕಾರಣ ಹೊರಹೊಮ್ಮಿದ ಉತ್ಪನ್ನ ಹೆಚ್ಚಳ ಮಾಲೀಕರಲ್ಲಿ ಕೇಂದ್ರೀಕರಿಸಿತು. ಅದರ ಸೃಷ್ಟಿಗೆ ಕಾರಣರಾದ ದುಡಿಮೆಗಾರರಿಗೆ ಕನಿಷ್ಠ ನ್ಯಾಯದ ಪಾಲು ದೊರೆಯಲಿಲ್ಲ. ಅವು ವಿರುದ್ಧ ಆಸಕ್ತಿಯುಳ್ಳ ವರ್ಗಗಳಾದವು. ಅದು ಸಹಜವಾಗಿ ಸಂಘರ್ಷದ ಹಾದಿ ಹಿಡಿಯಿತು. ಈ ಅಗಾಧ ಮಾನವ ಸಮಸ್ಯೆಯ ಪರಿಹಾರಕ್ಕೆ ತೊಡಗಿದ ಗಾಂಧಿ, ಮಾರ್ಕ್ಸ್, ಐನ್‌ಸ್ಟೈನ್ ಯುಗ ಪ್ರವರ್ತಕ ಚಿಂತಕರು. ಒಬ್ಬೊಬ್ಬರ ದೃಷ್ಟಿ ವಿಶಿಷ್ಟ, ವೈವಿಧ್ಯಮಯ. ಅವರುಗಳ ಒಬ್ಬೊಬ್ಬರ ಕೊಡುಗೆಯು ವಿಚಾರಾರ್ಹ.



ಹೊಲದೊಳಗೆ ವಸತಿ

**ಮಹಾತ್ಮಾ ಗಾಂಧಿ (೧೮೬೯-೧೯೪೮)**: ವಸಾಹತುಶಾಹಿ ವಿರುದ್ಧದ ರಾಜಕೀಯ ಸಂಗ್ರಾಮದಲ್ಲಿ ಸರ್ವೋದಯ, ಅಂತ್ಯೋದಯ ಕಲ್ಪನೆಗಳನ್ನು ಆರ್ಥಿಕ ಆಯಾಮಗಳಾಗಿ ಪ್ರಯೋಗಿಸಿದ್ದು ಚರಿತ್ರೆಯ ಮಹಾಸಂಗತಿ. ದುಷ್ಟ ಆಡಳಿತದೆದುರು ಹೋರಾಟದಲ್ಲಿ ಅಹಿಂಸಾತ್ಮಕ ಅಸಹಕಾರ ಚಳುವಳಿ ಅಳವಡಿಸಿಕೊಂಡು, ಅವರ ದಬ್ಬಾಳಿಕೆ ಕುಗ್ಗಿಸಿ, ಜನಾಭಿಪ್ರಾಯಕ್ಕೆ ಮನ್ನಣೆ ಕೊಡುವಂತೆ ಮಾಡಿದರು. ಈ ಆಶ್ಚರ್ಯಕರ ಆಂದೋಳನ ವಿಶ್ವದ ಎಲ್ಲೆಡೆ ಗಮನ ಸೆಳೆಯಿತು. ಪ್ರಪಂಚದ ಮೂಲೆ ಮೂಲೆಯಲ್ಲಿ ಅಮಾನುಷ ಶೋಷಣೆಯಲ್ಲಿ ತೊಳಲುತ್ತಿರುವ ಅಮಾಯಕರಿಗೆ ಗಾಂಧಿ ಸ್ಫೂರ್ತಿದಾಯಕ ಮಹಾಪುರುಷ. ದೇಶದ ಹಳ್ಳಿಗಾಡಿನಲ್ಲಿ ಮುಖ್ಯ ಸಮಸ್ಯೆ ಮಳೆ, ಬೆಳೆ ಕಾಲದಲ್ಲಿ ಜನರಿಗೆ ಅಷ್ಟಷ್ಟು ಕೆಲಸ, ಉಳಿದಂತೆ ಕೆಲಸವಿಲ್ಲ, ಸಂಪಾದನೆಯಿಲ್ಲ, ಅನ್ನ ಬಟ್ಟೆಗಿಲ್ಲದೆ ಕಿತ್ತುತಿನ್ನುವ ಬಡತನ. ಅವರಿರುವೆಡೆ ವರ್ಷದುದ್ದಕ್ಕೂ ಕೆಲಸ ಒದಗುವುದು, ಅವರ ಆರ್ಥಿಕ ಸುಧಾರಣೆಗೆ ಅಗತ್ಯ. ಚರಕ-ಖಾದಿ ಹೊಂದುವ ದೇಹಶ್ರಮ ಆಧಾರಿತ ಗೃಹಕೈಗಾರಿಕೆ ಕಾರ್ಯಕ್ರಮ ಈ ದಿಸೆಯಲ್ಲಿ ಸಹಾಯಕ. ಗಾಂಧೀಜಿಯವರ ಯಾವ ಕಾರ್ಯಕ್ರಮಗಳಲ್ಲೂ ಯಂತ್ರಗಳ ಬಳಕೆಗೆ ನಿಷಿದ್ಧವಿಲ್ಲ, ಆದರೆ, ಅವು ಮನುಷ್ಯನ ಕೆಲಸಕ್ಕೆ ಪೂರಕವಾದವುಗಳಾಗಿರಬೇಕು. ಅದನ್ನು ಕಸಿದು ಅವನ ಅಷ್ಟಿಷ್ಟು ಆದಾಯಕ್ಕೆ ಮಾರಕವಾಗಬಾರದು. ವಸಾಹತುಶಾಹಿ ಕರಾಳ ಶೋಷಣೆಯಲ್ಲಿ ಸೊರಗಿ ಹೋಗಿದ್ದ ಭಾರತಕ್ಕೆ ಅಹಿಂಸ ಅಸಹಕಾರ ಸಮೂಹ ಚಳುವಳಿಯ ಅಳವಡಿಕೆಯಿಂದ ಬಿಳಿಯರನ್ನು ಮಣಿಸಿ ರಾಜಕೀಯ ಸ್ವಾತಂತ್ರ್ಯ ತಂದುಕೊಟ್ಟವರು ಮಹಾತ್ಮಾ ಗಾಂಧಿ. ನಂತರದ ರಾಜಕಾರಣದಲ್ಲಿ ಅವರು ಪ್ರತಿಪಾದಿಸಿದ ಜನೋದ್ಧಾರ ಧ್ಯೇಯಗಳನ್ನೆಲ್ಲಾ ಮಣ್ಣು

ಗೂಡಿಸಿ ಅವರನ್ನು ಕಲ್ಲಿನ ಪ್ರತಿಮೆಯಾಗಿಸಿದ್ದಾರೆ. ಗಾಂಧೀಜಿಯ ಹೆಸರು ರಾಜಕೀಯ ಪಕ್ಷಗಳು ವೋಟುಗಳಿಗೆ, ಅಧಿಕಾರ ಹಿಡಿಯುವುದಕ್ಕಷ್ಟೇ ಇಳಿದುಹೋಗಿದೆ.

**ಆಲ್ಬರ್ಟ್ ಐನ್‌ಸ್ಟೈನ್ (೧೮೭೯-೧೯೫೫) :** ಈ ಮಹಾವಿಜ್ಞಾನಿ ಅಷ್ಟೇ ಮಾನವತಾವಾದಿ. ಅವರು ಮಂಡಿಸಿದ ಸಾಪೇಕ್ಷತಾವಾದ ಸಿದ್ಧಾಂತದಿಂದ ಪ್ರಸಿದ್ಧ. ವಸ್ತು ಚಲನೆ ಪ್ರಜ್ಞೆ ಇನ್ನೊಂದು ವಸ್ತುವಿನ ಚಲನೆಗೆ ಸಂಬಂಧಿಸಿದಂತಷ್ಟೇ ಸಾಮಾನ್ಯರ ಕಲ್ಪನೆ. ನಿಲುವಿಕೆ ಕಷ್ಟಕರ. ನ್ಯೂಟನ್ ಚಲನೆ ನಿಯಮಗಳನ್ನು ತಲೆಕೆಳಗಾಗಿಸಿತು. ಕೆಲವು ಪದಾರ್ಥಗಳ ಮೇಲೆ ಸಾಕಷ್ಟು ಶಕ್ತಿಯುತವಾದ ಬೆಳಕಿನ ಕಿರಣ ಬಿದ್ದಾಗ ಅದರಿಂದ ಎಲೆಕ್ಟ್ರಾನ್‌ಗಳು ಹೊರಚಿಮ್ಮುತ್ತವೆ. ವಸ್ತು ಹಾಗೂ ಶಕ್ತಿ ನಿಜಕ್ಕೂ ಬೇರೆ ಅಲ್ಲ, ಸಂದರ್ಭಾನುಸಾರ ಅವು ಬೇರೆಯಾಗಬಲ್ಲವು. ಹಾಗೆ ಪರಿವರ್ತನೆಯಾದಾಗ ಅಂಥ ಸೂಕ್ಷ್ಮ ವಸ್ತುವಿನಿಂದ ಅಗಾಧ ಪ್ರಮಾಣದ ಶಕ್ತಿಯ ಬಿಡುಗಡೆಯಾಗುತ್ತೆ ಎಂಬ ವಿಷಯದಲ್ಲಿ ಬೆಳಕು ಚೆಲ್ಲಿದರು. ಇದು ಪರಮಾಣು ಶಕ್ತಿ ಬಾಂಬ್ ತಯಾರಿಕೆಗೆ ಮೂಲವಾಯಿತು. ಯುದ್ಧ ವಿರೋಧಿ ಮಾನವತಾವಾದಿಗೆ ಇದು ಭರಿಸಲಾಗದ ಖೇದ. ವಿಶ್ವಾದ್ಯಂತ ಹಿಂಸೆ ಕೃತ್ಯಗಳಿಗೆ ಅಣುಶಕ್ತಿ ನಿರೋಧಕ್ಕೆ ಬುದ್ಧಿಜೀವಿಗಳ ಚಳುವಳಿ ನಡೆಯಿತು. ಐನ್‌ಸ್ಟೈನ್ ಅದರ ಅಗ್ರಗಣ್ಯರು.

ಇದಲ್ಲದೆ ಬಂಡವಾಳಶಾಹಿ ಸಮಾಜದಲ್ಲಿ ತಾಂಡವವಾಡುತ್ತಿರುವ ಆರ್ಥಿಕ ಅರಾಜಕತೆಗೆ ವಿಜ್ಞಾನದಿಂದ ಹೊರಹೊಮ್ಮುವ ತಾಂತ್ರಿಕತೆಯೇ ಕಾರಣ ಎಂಬ ಅಭಿಮತ ಇವರದ್ದು. ಅದು ದುಷ್ಟಶಕ್ತಿಯಾಗಿ ದುಡಿಮೆಗಾರರನ್ನು ದಾರುಣ ನಿರುದ್ಯೋಗ ದವಡೆಗೆ ದಬ್ಬುತ್ತದೆ. ಪ್ರತಿಯಾಗಿ ಯಂತ್ರಶಕ್ತಿ ಬಳಕೆಯಿಂದ ಉಳಿತಾಯವಾದ ಕಾಲ-ಶ್ರಮ, ಶ್ರಮಜೀವಿಗಳ ಕಲಾತ್ಮಕ ಬೆಳವಣಿಗೆಗೆ ಅನುವಾಗಬೇಕೆಂಬುದು ಇವರ ಕಳಕಳಿ. ಒಂದೆರಡು ಶತಮಾನದ ಕೈಗಾರಿಕೆ ಕ್ರಾಂತಿಯಿಂದ ಹೊರಹೊಮ್ಮಿದ ಅಸಮಾನತೆ, ಬಡತನ, ಶೋಷಣೆ, ಕ್ರೌರ್ಯದ ಕಾರಣಗಳ ಆಳವಾದ ಅಧ್ಯಯನ – ವಿಶ್ಲೇಷಣೆಗಳಿಂದ ಸಮಾಜವಾದ ಚಿಂತನೆ ಮಂಡಿಸಿದ ೧೯ನೇ ಶತಮಾನದ ಪ್ರತಿಭೆ, ಕಾರ್ಲ್ ಮಾರ್ಕ್ಸ್.



ಬೇಲಿಯೊಳಗಿನ ಹೊಲ

**ಕಾರ್ಲ್ ಮಾರ್ಕ್ಸ್ (೧೮೧೮-೧೮೮೩) :** ಅವರ ಚಿಂತನೆ ವಿಚಾರ ಮಾಡುವಾಗ ಅಂದಿನ ಯೂರೋಪಿಯನ್ ಸಮಾಜದ ಸ್ಥಿತಿಯ ಪರಿಚಯ ಅಗತ್ಯ. ಜರ್ಮನಿ, ರಷ್ಯಾ, ಇಂಗ್ಲೆಂಡ್, ಫ್ರಾನ್ಸ್ ಇಲ್ಲೆಲ್ಲಾ ಊಳಿಗಮಾನ್ಯ ಪದ್ಧತಿ ಜಾರಿಯಲ್ಲಿತ್ತು. ರಾಜಧಾನಿ-ಹಳ್ಳಿಗಾಡು ಬಲಾಢ್ಯರ ಕೈಯಲ್ಲಿತ್ತು. ಭೂಸ್ವಾಮಿಗಳ ಪರಿಮಿತಿಯಲ್ಲಿದ್ದ ಭೂಮಿಯನ್ನು ಹರಿದು ತುಂಡುಗಳಾಗಿ ಮಾಡಿ ಕೆಲಸಗಾರರಿಗೆ ಬೆಳೆ-ಜಾನುವಾರು ಸಂಗೋಪನೆಯಲ್ಲಿ ತೊಡಗಲು ಕೊಡುತ್ತಿದ್ದರು. ಉತ್ಪಾದನೆಯೆಲ್ಲಾ ಒಡೆಯರ ಪಾಲೇ. ದುಡಿಯುವ ರೈತರಿಗೆ ದೊರೆಯುತ್ತಿದ್ದುದು, ಅರೆ ಹೊಟ್ಟೆ, ಕಾರ್ಪಣ್ಯದ ಬದುಕು.

೧೭-೧೮ನೇ ಶತಮಾನದ ಕೈಗಾರಿಕಾ ಕ್ರಾಂತಿ, ಮನುಷ್ಯ-ಪ್ರಾಣಿ ಶ್ರಮ ಅಷ್ಟಾಗಿ ಅಗತ್ಯವಿಲ್ಲದ ಆವಿ, ಕಲ್ಲಿದ್ದಲು, ಪೆಟ್ರೋಲಿಯಂ ಬಗೆಯ ಇಂಧನ ಆಧಾರ. ಯಂತ್ರಗಳ ಕೆಲಸದಿಂದ ಕೈಗಾರಿಕಾ ಹಾಗೂ ಬೇಸಾಯ ಉತ್ಪನ್ನವೃದ್ಧಿ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಈ ವ್ಯವಸ್ಥೆಯ ಮೂಲ ಉದ್ದೇಶ, ಲಾಭ-ಇನ್ನಷ್ಟು ಲಾಭ. ಬಂಡವಾಳ ಹೂಡಿದ ತಯಾರಕ ಅದರಲ್ಲಿ ಕೆಲಸ ಮಾಡುವ ಕೆಲಸಗಾರ ಅರ್ಥಾತ್ ಕಾರ್ಮಿಕ, ಅನುತ್ಪಾದಕ ದಳ್ಳಾಳಿ, ಸರಕು ಮಾರುವ, ವಿತರಣೆಯಲ್ಲಿ ಬಗೆಬಗೆಯ ಹಂತದಲ್ಲಿ ಚಾಣಾಕ್ಷತೆರಿಗೆ ಹಣ ಗಳಿಸುವ ಸರ್ಕಾರ, ಅಂತಿಮವಾಗಿ ಕೊಳ್ಳುವ ಗ್ರಾಹಕ ಎಲ್ಲರೂ ಒಬ್ಬರೊಬ್ಬರಿಗೆ ವಂಚನೆಯಿಂದ ಅರ್ಹವಲ್ಲದ ಅನುಕೂಲ ಪಡೆಯುವವರೇ. ಈ ಪಟ್ಟಭದ್ರಹಿತಾಸಕ್ತಿಗಳ ಆಸಕ್ತಿಗನುಗುಣವಾಗಿ ಶೋಷಣೆ ವಿಧಾನ ವಿದಾಯಗಳಿಗೆ ತರ್ಕಬದ್ಧ ತಾತ್ವಿಕ ಆಡಳಿತ ವಿಧಾನ ಒದಗಿಸುವ ಬುದ್ಧಿಜೀವಿಗಳ ಪಾತ್ರ ಅನುಕಂಪನೀಯ.

ಈ ಸಮಾಜ ವಿರೋಧಿ ಕುತಂತ್ರ ಸಮಸ್ಯೆಗಳ ಆಳ ನೀಳಗಳನ್ನು ವಸ್ತುನಿಷ್ಠ ವೈಜ್ಞಾನಿಕ ಶೋಧನೆಗೊಳಪಡಿಸಿ ಅದರ ಬೇರೆ ಬೇರೆ ವರ್ಗಗಳ ಸ್ವಕೀಯ ಹಿತಾಸಕ್ತಿ, ಅವುಗಳ ಒಂದಕ್ಕೊಂದರ ವಿರೋಧ-ದ್ವೇಷ, ಇವು ಮಾನವ ಸಮಾಜ ಮುನ್ನಡೆಗೆ ಮಾರಕ; ಕ್ರಾಂತಿಕಾರಕ ಚಳುವಳಿಯಿಂದ ವರ್ಗಭೇದ ತೊಡೆದುಹಾಕಿದ ಬದಲಾವಣೆ ಆಥವಾ ಸಮತಾ ಸಮಾಜ ಸ್ಥಾಪನೆಯಿಂದಲೇ ಇದು ಸಾಧ್ಯ ಎಂಬ ಸತ್ಯವನ್ನು ಪ್ರತಿಪಾದಿಸಿದ. ಇದೇ ಮಾರ್ಕ್ಸ್‌ವಾದ. ಇದು ವಿಶ್ವಾದ್ಯಂತ ಜನರ ಮನಸ್ಸು ಮುಟ್ಟಿತು. ಎಲ್ಲೆಲ್ಲೂ ಕ್ರಾಂತಿಕಾರ ಚಳುವಳಿಗೆ ಚಾಲನೆ ದೊರೆಯಿತು. ೧೯೧೭ರ ರಷ್ಯಾದಲ್ಲಿ, ೧೯೨೦ರ ದಶಕದಲ್ಲಿ ಚೀಣಾದಲ್ಲಿ ನಡೆದ ಕ್ರಾಂತಿಗಳು, ಸಮತಾ ಸಮಾಜವಾದಗಳನ್ನಳವಡಿಸಿಕೊಂಡು ಅಸ್ತಿತ್ವಕ್ಕೆ ಬಂದ ಆಡಳಿತ, ದಲಿತರ ವಿಮೋಚನೆಯಲ್ಲಿ ದಾರಿದೀಪಗಳು. ವಿಶ್ವಾದ್ಯಂತ ಮಾರ್ಗದರ್ಶನಕ್ಕೆ ಅವುಗಳತ್ತ ಎಲ್ಲರೂ ನೋಡುವುದು ಸಹಜ.

**ರಷ್ಯಾದಲ್ಲಿ ಆದದ್ದೇನು ?**

ಮಹಾಕ್ರಾಂತಿಯ ಫಲವಾಗಿ ಅಸ್ತಿತ್ವಕ್ಕೆ ಬಂದ ಲೆನಿನ್ ಆಡಳಿತ ಪಟ್ಟಭದ್ರ ಹಿತಾಸಕ್ತಿಗಳ ಕಪಿಮುಷ್ಟಿಯಿಂದ ಭೂಮಿ ಕಾರ್ಖಾನೆಗಳಂಥ ಮೂಲ, ಸಂಪನ್ಮೂಲಗಳನ್ನು ರಾಷ್ಟ್ರೀಕರಿಸಿತು. ಜನಪರ ಕ್ರಾಂತಿಯಲ್ಲಿ ಮುಂಚೂಣಿಯಲ್ಲಿದ್ದ ಕಮ್ಯುನಿಸ್ಟ್ ಪಕ್ಷದ ನಿರ್ವಹಣೆ ಹೊಣೆಗೆ ಬಂತು. ಉತ್ಸಾಹಿ ಆಡಳಿತಶಾಹಿ ಹುಟ್ಟಿತು. ೧೯೨೪ರಲ್ಲಿ ಲೆನಿನ್ ನಿಧನದವರೆಗೂ ಚರಿತ್ರೆಯಲ್ಲೇ ವಿನೂತನ ಕ್ರಾಂತಿಕಾರ ಸರ್ಕಾರದ ಹೊರಗಿನ ಹಾಗೂ ಒಳಗಿನ ವಿರೋಧ ಶಕ್ತಿಗಳೆದುರು ಹೋರಾಡಿ ಸದೃಢ ರಷ್ಯಾ ನಿರ್ಮಾಣಕ್ಕೆ ತಳಹದಿ ಹಾಕಿದರು. ಸ್ಟಾಲಿನ್ ಪಕ್ಷದೊಳಗಿನ ಭಿನ್ನಾಭಿಪ್ರಾಯಗಳನ್ನು ನಿವಾರಿಸಿ ಸರ್ಕಾರ ಧ್ಯೇಯದತ್ತ ನಡೆಯಲು ಬದ್ಧವಾದ ದಕ್ಷ ಆಡಳಿತಶಾಹಿ ಒದಗಿಸಿದ. ೧೯೩೦-೫೦ರ ಪಂಚವಾರ್ಷಿಕ ಯೋಜನೆಗಳ ಅನುಷ್ಠಾನದಿಂದ ರಷ್ಯಾ ಬಲಯುತವಾದ ರಾಷ್ಟ್ರವಾಯಿತು. ಹಾಗೆಯೇ ಜನರ ಜೀವನಮಟ್ಟ ಸುಧಾರಿಸಿತು. ಎರಡನೆಯ ಮಹಾಯುದ್ಧವನ್ನು ಯಶಸ್ವಿಯಾಗಿ ಎದುರಿಸಿ ಇಡೀ ವಿಶ್ವವನ್ನು ಭಯಾನಕ ಫ್ಯಾಸಿಸ್ಟ್ ಪಿಡುಗಿನಿಂದ ಪಾರುಮಾಡಿತು. ಇದಕ್ಕೆ ಅಪವಾದ ಎನ್ನುವಂತೆ ದೇಶ ನಿರಂಕುಶ ಭಯಕಾರಕ ಆಡಳಿತಶಾಹಿಯ ತೆಕ್ಕೆಯಲ್ಲಿ ಬಿತ್ತು. ಸ್ಟಾಲಿನ್ ನಂತರ ೧೯೫೦ರ ದಶಕದಲ್ಲಿ ಯಾವ ವಿರೋಧಕ್ಕೂ ಎಡೆ ಇಲ್ಲದೆ ವ್ಯಕ್ತಿ ಕೇಂದ್ರೀಕೃತ ಸಂಸ್ಕೃತಿ ದೇಶದ ಬೆಳವಣಿಗೆಗೆ ಕುಂಠಿತವಾಯಿತು. ವ್ಯಾಪಕ ಭ್ರಮನಿರಸನ, ಅಶಾಂತಿ, ಶೀತಲ ಸಮರದ ಕುತಂತ್ರ ಇವೆಲ್ಲವೂ ಕೂಡಿ ರಷ್ಯಾದ ಕಮ್ಯುನಿಸ್ಟ್ ಆಡಳಿತ ಶಿಥಿಲವಾಯಿತು. ೧೯೮೦-೯೦ರಲ್ಲಿ ಸೋವಿಯತ್ ಒಕ್ಕೂಟ ಒಡೆಯಿತು. ಆದರೆ ಇದು ಬಂಡವಾಳಶಾಹಿಗಳು ಪ್ರತಿಪಾದಿಸುವಂತೆ ವರ್ಗರಹಿತ ಸಮಾಜವಾದದ ಸೋಲಲ್ಲ. ಅನುಷ್ಠಾನದಲ್ಲಿ ನುಸುಳಿಕೊಳ್ಳಬಲ್ಲ ಲೋಪದೋಷಗಳನ್ನು ಗುರುತಿಸಿ ಅವನ್ನು ಯಶಸ್ವಿಯಾಗಿ ನಿವಾರಿಸಿ ಶೋಷಣೆರಹಿತ ಸಮತಾ ಸಮಾಜದ ನಿರ್ಮಾಣದ ಹಾದಿಯಲ್ಲಿ ಒಂದು ಪ್ರಮುಖ ಪಾಠ.

**ಚೀಣಾದಲ್ಲಿ ಮಾರುಕಟ್ಟೆ ಸಮಾಜವಾದ**

ಯಶಸ್ವೀ ಅಂತರ್ಯುದ್ಧದ ನಂತರ ಮಾವೋ ತ್ಸೆ ತುಂಗ್ ಮೊದಲ ಕೆಲಸ ಜನರಲ್ಲಿ ಪರಮಾಧಿಕಾರ ದೃಢೀಕರಣ. ಚೀಣಾದಲ್ಲಿ ಅಸ್ತಿತ್ವಕ್ಕೆ ಬಂದ ಸರ್ಕಾರ ಶ್ರಮಜೀವಿಗಳ ನಿರಂಕುಶ ಸಾರ್ವಭೌಮ ಆಡಳಿತ. ಆತ ಮಾರ್ಕ್ಸ್ ತತ್ವದ ಮೇಧಾವಿ, ದೇಶದ ಚಾರಿತ್ರಿಕ ಮೌಲಿಕ ಹಿನ್ನೆಲೆ ಅರಿತವ. ಕ್ಷೋಭೆಗಳಿಂದ ದೇಶದ ಮುನ್ನಡೆ ಹಿಂದಾಗದಂತೆ ಸಂಪನ್ಮೂಲಗಳ ಸಾರಾಸಗಟು ರಾಷ್ಟ್ರೀಕರಣಕ್ಕೆ ತಕ್ಷಣ ಕೈ ಹಾಕಲಿಲ್ಲ. ಬಡರೈತವರ್ಗಕ್ಕೆ ಎಲ್ಲಾ ಅಗತ್ಯ ಬೆಂಬಲ ಕೊಟ್ಟ, ಅವರ ಸ್ಥಿತಿ ಸಾಮರ್ಥ್ಯ ಸುಧಾರಿಸುವತ್ತ ಆದ್ಯತೆ ಕೊಟ್ಟ. ಜನ ಪ್ರಜಾ ನ್ಯಾಯಾಲಯಗಳನ್ನು ಸ್ಥಾಪಿಸಿ ಜನರ ನೆಮ್ಮದಿ ಜೀವನಕ್ಕೆ ಕಂಟಕರಾಗಿದ್ದ ಪ್ರಾಂತ ಸೇನಾಧಿಪತಿಗಳ ದೌರ್ಜನ್ಯಗಳನ್ನು ವಿಚಾರಣೆಗೊಳಪಡಿಸಿ, ರುಜುವಾತುಗಳ ಆಧಾರದ ಮೇಲೆ ಅವರ ಪ್ರಾಬಲ್ಯವನ್ನು ನಿಗ್ರಹ ಮಾಡಿದ. ಜನರಲ್ಲೆಲ್ಲಾ ಅವನ ಸರ್ಕಾರದ ದುಷ್ಟ ಶಿಕ್ಷಣ ಶಿಷ್ಟಪರಿಪಾಲನ ಕಾಳಜಿ ಬಗ್ಗೆ ವಿಶ್ವಾಸ ಮೂಡಿತು. ಇವುಗಳಿಗೆ ಸಮಸಮವಾಗಿ ದೇಶದ ಆರ್ಥಿಕ ಹಾಗೂ ಮಿಲಿಟರಿ ಸಮರ್ಥ ಬೆಳವಣಿಗೆಗೆ ಅಗತ್ಯವಾದ ಉಕ್ಕು ತಯಾರಿಕೋಪಾದಿಯ ಆದ್ಯ ಕೈಗಾರಿಕೆಗಳನ್ನು ಯೋಜನಾಬದ್ಧ ರೀತಿಯಲ್ಲಿ ಪ್ರಾರಂಭಿಸಿದ. ಹೀಗೆ ಸಮಾಜದ ಸುಸ್ಥಿತ ಬೆಳವಣಿಗೆಗೆ ನಾಂದಿಯಾಯಿತು. ಬಡವರ ಶೀಘ್ರಗತಿಯ ಬೆಳವಣಿಗೆ ಸಾಧ್ಯವಾಯಿತು. ಅದೇ ಪ್ರಮಾಣದಲ್ಲಿ ಬಲ್ಲಿದರ ದುಷ್ಟ ಪ್ರಾಬಲ್ಯ ಇಳಿಮುಖವಾಯಿತು. ಸಮರ್ಥ ರೀತಿಯಲ್ಲಿ ಆರ್ಥಿಕ ಹಾಗೂ ಮಿಲಿಟರಿ

ಸಾಮರ್ಥ್ಯ ಬೆಳೆಸಿಕೊಳ್ಳುತ್ತಿರುವ ಚೀಣಾ ಅಮೆರಿಕಾ ದೈತ್ಯ ಬಂಡವಾಳಶಾಹಿ ಕುತಂತ್ರಗಳೆದುರು ಸವಾಲು ಹಾಕುವ ಕೆಚ್ಚು ಗಳಿಸಿತು. ಪ್ರಗತಿಮಾರಕ ಆಂತರಿಕ-ಬಾಹ್ಯ ದುಷ್ಟ ಶಕ್ತಿಗಳೆದುರು ಮಾವೋ ಸದಾ ಜಾಗೃತನಾಗಿರುತ್ತಿದ್ದ. ೧೯೬೦ರ ದಶಕದ ಕೊನೆಯಲ್ಲಿ ನಡೆದ ಸಾಂಸ್ಕೃತಿಕ ಕ್ರಾಂತಿ ಇಂಥ ದುಷ್ಟ ಶಕ್ತಿಗಳೆದುರೇ; ಅದು ತಿರುಚು ಮುರುಚಾಗಿ ಕೊನೆಗೊಂಡಿತು. ಮಾವೋ ನಂತರ ಆಡಳಿತದಲ್ಲಿ ಪ್ರತಿಗಾಮಿಗಳ ಪ್ರಭಾವ ಏರಿತು. ಶೀಘ್ರಲಾಭದ ಲಾಭಗಳಿಕೆ ಸೋಗಿನಲ್ಲಿ ಅಮೆರಿಕಾ ಪ್ರೇರಿತ ಮುಕ್ತ ಮಾರುಕಟ್ಟೆ ಚಿಂತನೆ ಅಂಕುರವಾಗಿ, ಬೇರೂರಿ, ಕ್ರಮೇಣ ಸಮಾಜವಾದ ಮಾರುಕಟ್ಟೆ ಸಿದ್ಧಾಂತಕ್ಕೆ ದಾರಿಯಾಗಿದೆ. ಬಡತನ ನಿವಾರಣೆಗೆ, ಆರ್ಥಿಕ ಮುನ್ನೋಟಕ್ಕೆ ಇದೇ ಸೂಕ್ತ ಪರಿಹಾರ ಎಂಬ ಜಾಣತನದ ತಾತ್ವಿಕ ಮಂಡನೆಗಳು ಅವಿರತವಾಗಿವೆ. ಏನೇ ಆದರೂ, ಇದು ಸಮಾಜವಾದದ ಹಿಂಜರಿತ. ಮಾರುಕಟ್ಟೆಯನ್ನು ಆಳುವುದು ಲಾಭ – ಹೆಚ್ಚು ಲಾಭ. ಅದಲ್ಲದೆ ಜನ ಬದುಕುತ್ತಾರೆಯೇ ಇಲ್ಲವೆ ಎಂಬ ಪರಿವೆ ಅಲ್ಲಿಲ್ಲ. ನಮ್ಮ ಆರ್ಥಿಕ ರಾಜಕೀಯ ಧುರೀಣರು ಇತ್ತೀಚೆಗೆ ಇದಕ್ಕೆ ತಾಳ ಹಾಕುತ್ತಿದ್ದಾರೆ. ಇದೊಂದು ಇಂದಿನ ಪರಿಹಾಸ. ಸಮತಾವಾದದ ಮಾದರಿಯ ಭಾರತದ ಪಂಚವಾರ್ಷಿಕ ಯೋಜನೆಗಳಿಂದಾದ ಪ್ರಗತಿ ನಗಣ್ಯ. ದೇಶದ ಮುಂದಿನ ಅಭಿವೃದ್ಧಿಗತಿ ಕುರಿತ ತೀವ್ರ ಚಿಂತನೆ, ಅಭಿಪ್ರಾಯ, ಕಾರ್ಯಕ್ರಮಗಳ ಬಗ್ಗೆ ಆತ್ಮಶೋಧನೆ ನಮ್ಮ ಮುಂದಿರುವ ಸಮಸ್ಯೆ.

**ಸುಸಂಘಟಿತ ಕೃಷಿ**

೨೦೦ ವರ್ಷ ವಸಾಹತುಶಾಹಿ ಹಿಡಿತದಲ್ಲಡಗಿದ್ದ ಭಾರತ ಕೈಗಾರಿಕಾ ಕ್ರಾಂತಿಯಿಂದ ಹೊರಗುಳಿಯಿತು. ವಿದೇಶಿ ಕೈಗಾರಿಕೆಗಳಿಗೆ ಅಗ್ಗದ ಕಚ್ಚಾವಸ್ತು ಸರಬರಾಜಿಗಷ್ಟೇ ಮೀಸಲಾದ ದೇಶವಾಯಿತು. ಪುರಾತನ ಸಂಸ್ಕೃತಿ, ಅಪಾರ ಜನಸಂಖ್ಯೆಯ ಭಾರತ ಚೈತನ್ಯಹೀನ ಜಡ್ಡುಗಟ್ಟಿದ ಜನಾಂಗವಾಗಿ ಬಿಟ್ಟಿದೆ. ರಾಜಕೀಯದಲ್ಲಿ ಸ್ವಾತಂತ್ರ್ಯ ಹೋರಾಟ ಚಳುವಳಿಯ ನೀರಸ ವೈಭವೀಕರಣವೇ ಮುಖ್ಯ ಹವ್ಯಾಸ. ವಿಜ್ಞಾನ, ಕಲೆ ಇಂಥ ಜೀವ ತುಂಬುವ ಸಕ್ರಿಯ ಆಸಕ್ತಿ ಬೆಳೆಯಲಾಗಲೇ ಇಲ್ಲ.

ವಾಸ್ತವವಾಗಿ ೩೨೮ ದಶಲಕ್ಷ ಹೆಕ್ಟೇರ್ ವಿಸ್ತೀರ್ಣದ ಪ್ರಕೃತಿ ಸಂಪದ್ಭರಿತ ಭೌಗೋಳಿಕ ಪ್ರದೇಶ. ದೇಶದುದ್ದಗಲಕ್ಕೂ ಮಳೆ-ಜೀವನದಿಗಳನ್ನೇ ಕೊಡುವ ಹಿಮಾಲಯ-ಪಶ್ಚಿಮ ಕರಾವಳಿ ಪರ್ವತಪ್ರದೇಶ, ವರ್ಷದುದ್ದಕ್ಕೂ ಬೆಳೆಗೆ ತಕ್ಕ ಹವಾಮಾನ, ದೇಶದ ಜನಸಂಖ್ಯೆ ೧೧೦೦ ಮಿಲಿಯನ್ ಅದರಲ್ಲಿ ೭೦೦ ಮಿಲಿಯನ್ ಕಷ್ಟಸಹಿಷ್ಣು ಗ್ರಾಮೀಣರು. ಭೂಮಿಯ ಮೇಲಿನ ಒತ್ತಡದ ಕಾರಣ, ಉಳುಮೆಯಾದ ೧೪೨ ದಶಲಕ್ಷ ಹೆಕ್ಟೇರ್ ೧೦೭ ಮಿಲಿಯನ್ ಹಿಡುವಳಿಗಳಾಗಿ ಹರಿದುಹಂಚಿಹೋಗಿದೆ. ಅದರಲ್ಲಿ ಬಡವರದ್ದು ೭೮ ಮಿಲಿಯನ್, ಅರ್ಧದಿಂದ ಎರಡು ಹೆಕ್ಟೇರ್ ಗಾತ್ರದವು. ವಿಸ್ತೀರ್ಣದಲ್ಲಿ ಅವುಗಳ ಪಾಲು ಮೂರನೇ ಒಂದು ಭಾಗದಷ್ಟು ಕೋರೆ-ಕೊರಕಲು, ಮಳೆಯಾಶ್ರಯದ ಭೂಮಿ. ಉಳಿದ ಮೂರನೆ ಎರಡು ಭಾಗ ಉತ್ತಮ ಭೂಮಿ. ಮೂರನೇ ಒಂದು ಭಾಗದ ಅನುಕೂಲಸ್ಥ ರೈತರಲ್ಲಿ ಸರ್ಕಾರದಿಂದ ಒದಗುವ ನೀರಾವರಿ, ಗೊಬ್ಬರ ಎಲ್ಲ ಸವಲತ್ತು-ಪ್ರಯೋಜನ ಇವರದ್ದು. ದೇಶದ ಹಸಿರುಕ್ರಾಂತಿಯಿಂದ ೨೦೦ ಮಿಲಿಯನ್ ಟನ್‌ಗೂ ಹೆಚ್ಚು ಆಹಾರೋತ್ಪನ್ನ ಇವರ ಉಮ್ಮೇದಿನಿಂದ. ಜಾಗತಿಕ ಮಾರುಕಟ್ಟೆಯ ಪೈಪೋಟಿಯಲ್ಲಿ ಇವರಿಗೆ ಸಾಕಷ್ಟು ರಕ್ಷಣೆ ಒದಗಿಸುವುದು ಸರ್ಕಾರದ ಆದ್ಯ ಹೊಣೆ. ಪ್ರಕೃತಿ ಬದುಕಿಗೆ ಕೊಟ್ಟ ಅವಕಾಶ ಕೃಷಿ. ದುರಂತ ಸಟ್ಟಾ ಲಾಭಕ್ಕೆ ರಹದಾರಿಯಲ್ಲ.

ಇದುವರೆಪಿಗೂ ನೆಮ್ಮದಿಯ ಜೀವನದಿಂದ ವಂಚಿತರಾದ ಸಣ್ಣ ಪುಟ್ಟ ರೈತಾಪಿ, ಬಡಗಿ, ಚಮ್ಮಾರ, ಕಮ್ಮಾರ, ಕುಂಬಾರ, ಕೂಲಿಕಾರರಂಥ ೮೦-೯೦ ಮಿಲಿಯನ್ ಕುಟುಂಬ, ೭೦೦-೮೦೦ ಮಿಲಿಯನ್ ಜನ. ಈ ಅಪಾರ ಜನಸ್ತೋಮದ ಸಾಧಾರಣ ಬದುಕಿನ ಸುಧಾರಣೆ ನಮ್ಮ ಮುಂದಿರುವ ಸವಾಲು. ಹಲವಾರು ವರ್ಷಗಳ ಚಿಂತನೆ, ಚರ್ಚೆ ಹಾಗೂ ಪ್ರಾಯೋಗಿಕ ಅನುಭವದಿಂದ ಒಂದೊಂದು ಸಣ್ಣ ತುಂಡು ಭೂಮಿಯಲ್ಲೂ ಕೃಷಿ ಕಾರ್ಯಕ್ರಮಗಳ ಅರ್ಥಪೂರ್ಣ ಸಂಘಟನೆಯಿಂದ ಇದು ಸಾಧ್ಯ ಎಂಬುದು ಕಂಡುಬಂದಿದೆ. ೨೦೦೪ರಲ್ಲಿ ಬೆಂಗಳೂರು ಕೃಷಿ ತಾಂತ್ರಿಕ ತಜ್ಞರ ಸಂಸ್ಥೆಯಲ್ಲಿ ನಡೆದ ಸಮಾವೇಶದಲ್ಲಿ ಸುಸಂಘಟಿತ ಕೃಷಿ ರೂಢಿಯನ್ನು ಪ್ರಾತ್ಯಕ್ಷಿಕೆಗಳ ಮೂಲಕ ಜನಪ್ರಿಯಗೊಳಿಸಬೇಕೆಂಬ ಸಲಹೆ ಮಂಡಿತವಾಯಿತು.

ಈ ಕೃಷಿ ಸಂಘಟನೆಯ ಮುಖ್ಯಾಂಶಗಳು : (೧) ಕತ್ತಾಳೆ, ಸಿಲ್ವರ್ ಓಕ್, ಸರ್ವೇ ಬೇಲಿಯೊಳಗಿನ ೧-೨ ಎಕರೆ ಹೊಲದಲ್ಲಿ ರಾಗಿ, ಬೇಳೆ, ಹುಚ್ಚೆಳ್ಳುಗಳಿಂದ ಅಕ್ಕಡಿ; ಪ್ರಸ್ತುತ ಕಳೆ-ಕಸ-ರೋಗ-ರುಜಿನಾದಿಗಳಿಗೆ ಆವಾಸಸ್ಥಾನವಾಗಿರುವ ಅಡ್ಡ-ಉದ್ದ ಬದು ಹಾಗೂ ಕಾಂಟೂರ್ ಸಾಲಿನಲ್ಲಿ ಹಸಿರೆಲೆ ಗೊಬ್ಬರ, ಮೇವು, ಉರವಲು, ಕೊಡುವ ಅಗಸೆ, ಗ್ಲಿರಿಸೀಡಿಯ, ಸೂಬಾಬುಲ್ ನುಗ್ಗೆಗಳಂಥ ಗಿಡಮರಗಳು; ಮೂಲೆ, ಅಂಚು, ಕೋರೆ-ಕೊರಕಲುಗಳಲ್ಲಿ ಕೆಲವು ಹುಣಸೆ, ಹಲಸು, ಹೊಂಗೆ, ಜತ್ರೊಪಾ ಬಗೆಯ ಬಯೋಡೀಸಲ್ ಹಾಗೂ ರೊಕ್ಕ ಕೊಡುವ ಮರಗಳ ವೈವಿಧ್ಯ ಬೆಳೆ ಕಾರ್ಯಕ್ರಮ; (೨) ದಿನನಿತ್ಯ ಆದಾಯ ತರುವ ದನಕರು, ಕುರಿಕೋಳಿ ಸಾಕಣೆ ಹಾಗೂ ಅಡಿಗೆಗೆ ಗ್ಯಾಸ್, ಭೂಮಿಗೆ ಗೊಬ್ಬರ ಒದಗಿಸುವ ಬಯೋಗ್ಯಾಸ್ ಸ್ಥಾವರ; (೩) ಸ್ಥಳೀಯ ಸಲಕರಣೆ, ಸ್ವಂತ ಶ್ರಮದಿಂದ ಕಟ್ಟಬಹುದಾದ ವಸತಿ, ಶೌಚಾಲಯ, ದನದ ಕೊಟ್ಟಿಗೆ ಅವುಗಳ ಬೇಲಿಯೊಳಗೆ ಹಣ್ಣು ಹಂಪಲು, ತರಕಾರಿ, ಔಷಧ ಸಸ್ಯ ಬೆಳೆ; ನಂತರದ ಹೆಜ್ಜೆ, ರೇಷ್ಮೆ-ಜೇನು ಸಾಕಣೆ, ಚರಕದಿಂದ ನೂಲು, ಖಾದಿ, ಸರಳ ಯಂತ್ರಗಳಿಂದ ಬಿಡಿ ಭಾಗ ತಯಾರಿಕೆ. ಈ ವಿಷಯದಲ್ಲಿ ಕಳೆದ ೪-೫ ವರ್ಷಗಳಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಬಾವಿಕೆರೆ ಸಂಶೋಧನಾ ಕ್ಷೇತ್ರದಲ್ಲಿ ಪ್ರಯೋಗಗಳು ನಡೆಯುತ್ತಿವೆ. ಸ್ವಯಂ ಪ್ರೇರಣೆಯಿಂದ ಸದ್ದುಗದ್ದಲವಿಲ್ಲದೆ ಅರ್ಧ-ಒಂದು ಎಕರೆ ಭೂಮಿಯಲ್ಲಿ ವೈವಿಧ್ಯಮಯ ತೀವ್ರ ಕೃಷಿಯಿಂದ ಪ್ರಾಮಾಣಿಕ ಜೀವನ ನಿರ್ವಹಣೆ, ಕೇರಳ-ಕರ್ನಾಟಕದ ಕರಾವಳಿ ಹಾಗೂ ಮೈದಾನ ಪ್ರದೇಶದ ಅಲ್ಲಲ್ಲಿ ನಡೆಯುತ್ತಾ ಬಂದಿದೆ.

ಹೀಗೆ ತುಂಡುಹೊಲ, ಹಳ್ಳಿಯ ಕೊಳಕು-ಕೊಚ್ಚೆಗಳಿಂದ ಮುಕ್ತವಾಗಿ ಯಥೇಚ್ಛ ಗಾಳಿಬೆಳಕುಳ್ಳ ರೈತ ಕುಟುಂಬದ ಕಾರ್ಯಕ್ಷೇತ್ರ; ಸಮೃದ್ಧ ಪೌಷ್ಟಿಕ ಆಹಾರ ಹಾಗೂ ಕುರಿ ಕೋಳಿಗಳ ಮಾರಾಟದಿಂದ ದಿನಾ ದುಡ್ಡು. ಶ್ರದ್ಧೆಯ ಸ್ವಂತ ಶ್ರಮವಷ್ಟೇ ಇದಕ್ಕೆ ಬಂಡವಾಳ. ವಿದೇಶೀ ಬಂಡವಾಳ, ಅದರೊಟ್ಟಿನ ಮಾರುಕಟ್ಟೆ ದಾಳಿ ಶೋಷಣೆಗಳಿಂದ ರೈತ ಹೊರಗೆ. ಸರಳ ಸಂತೆಯಷ್ಟೇ ಆತನ ಕೊಟ್ಟು-ಕೊಳ್ಳುವಿಕೆಗೆ ಸಾಕು. ಈಗ ಗ್ರಾಮೀಣಾಭಿವೃದ್ಧಿಗೆ ಹಲವಾರು ಹೆಸರಿನಿಂದ ಸೋರಿ ಹೋಗುತ್ತಿರುವ ಸಂಪತ್ಸಾಧನದ ಕೆಲವಂಶವಷ್ಟೇ ಈ ಕಾರ್ಯಕ್ರಮದ ಮೊದಲ ಎರಡು ವರ್ಷಗಳಲ್ಲಿ ಕಾರ್ಯಾರಂಭಕ್ಕೆ ಸಾಕಾಗಬಹುದು. ೩-೪ ವರ್ಷದಲ್ಲಿ ಹಳ್ಳಿಗಾಡಿನ ಎಲ್ಲೆಲ್ಲೂ ಸದಾ ಹಚ್ಚ ಹಸಿರಿನ ಸಮರ್ಥ ಸದೃಢ ಪರಿಸರ ಸಮೃದ್ಧ ಸಮಾಜ ಅಸ್ತಿತ್ವಕ್ಕೆ ಬರುತ್ತದೆ.

ಸಮೃದ್ಧ ರಾಗಿ-ಅವರೆ

ಹೀಗೆ ಬಡತನ, ಪ್ರಜ್ಞೆರಹಿತ ಜಾತಿಭೇದದ ಗೋಜಲುಗಳಿಂದ ತಲ್ಲಣಿಸುತ್ತಿರುವ ಭಾರತದ ಅಭಿವೃದ್ಧಿಗೆ ಮುಕ್ತ ಇಲ್ಲವೆ ಸಮಾಜವಾದ ಮಾರುಕಟ್ಟೆ ಮಾತು ಅಪ್ರಸ್ತುತ. ಮಾರ್ಕ್ಸ್ ಸಮಾನತಾ ಸಮಾಜವಾದದ ಚಿಂತನೆಯ ನಿರ್ದಿಷ್ಟ ಪ್ರತಿರೂಪದಂತಿರುವ ಸಣ್ಣ ರೈತನ ಸಂಘಟನೆ ಹಾಗೂ ಸರ್ವಸ್ವಾಮ್ಯದ ಆದ್ಯ ಕೈಗಾರಿಕೆ ಸಮ್ಮಿಳಿತದ ಪ್ರಜಾಡಳಿತ ಇಂದಿನ ಹಾಗೂ ನಾಳೆಯ ನೆಮ್ಮದಿ ಬಾಳಿಗೆ ಸಾಧನ.

**ಚಿತ್ರಗಳು** : ಕೃಷಿ ವಿಶ್ವವಿದ್ಯಾನಿಲಯದ ಬಾವಿಕೆರೆ ಸಂಶೋಧನ ಕ್ಷೇತ್ರದ ಕೃಪೆಯಿಂದ.

**ಪ್ರೊ|| ಬಿ. ವಿ. ವೆಂಕಟರಾವ್**
ಅಧ್ಯಕ್ಷರು, ಪರಿಸರ ಪ್ರಜ್ಞಾ ಪ್ರತಿಷ್ಠಾನ, ೭೮, ೩ನೇ ಕ್ರಾಸ್, ಗವಿಪುರಂ ಬಡಾವಣೆ
ಬೆಂಗಳೂರು - ೫೬೦ ೦೧೯

# ಚೀಣಾದಲ್ಲಿ ನನ್ನ ಅನುಭವ

ತನು ಮೆಹ್ತಾ ತಿವಾರಿ

**ಚೀ**ಣಾಕ್ಕೆ ನನ್ನ ಮೊದಲ ಭೇಟಿ ಮೇ ೨೦೦೫ರಲ್ಲಿ. ವಿಮಾನದಲ್ಲಿ ಒಳ್ಳೆಯ ದೋಸೆ, ಉಪ್ಪಿಟ್ಟು ಕೊಡುವಾಗ ತಿಳಿಸಿದರು, ಚೀಣಾದಲ್ಲಿ ನಮಗೆ ಊಟ-ತಿಂಡಿಯ ತೊಂದರೆ ಆಗಬಹುದೆಂದು. ಏಪ್ರಿಲ್ ೨೯ರಂದು ಷಾಂಘೈ ತಲುಪಿದಾಗ ಹೊಸ ಚೀಣಾದ ಪ್ರತೀಕವೆಂಬಂತೆ ವಿಮಾನ ನಿಲ್ದಾಣವು ಝಗಮಗಿಸುತ್ತಿತ್ತು. ತಪಾಸಣೆಯೆಂಬುದು ಬೆಣ್ಣೆಯಷ್ಟು ನಯ, ಅರ್ಧ ನಿಮಿಷದ ಕೆಲಸ. ಬೀಜಿಂಗ್ ತಲುಪಿದರೆ ಇಂಗ್ಲಿಷ್ ಮಾತನಾಡುವವರು ಇಲ್ಲವೇ ಇಲ್ಲವೆಂಬಷ್ಟು ವಿರಳ. ಆದರೆ ಅಲ್ಲೂ ಆಧುನಿಕ ಚೀಣಾದ ದರ್ಶನವಾಗುತ್ತದೆ. ಎಲ್ಲಾ ಹೊಸ ಪೋಷಾಕಿನ ಉದ್ದಿಮೆದಾರರಂತೆ ಕಾಣುತ್ತಾರೆ. ಪಾದರಸದಂತಹ ಓಡಾಟ. ನಮ್ಮ ಸೂಟ್‌ಕೇಸ್‌ಗಳು ಎಲ್ಲಿಗೆ ಬರುತ್ತವೆಂದು ತಿಳಿಯುವುದೂ ಪ್ರಯಾಸ. ತಮಗೂ ಗೊತ್ತಿಲ್ಲವೆಂದು ಒಂದಿಬ್ಬರು ನೌಕರರೂ ಗೋಣು ಅಲ್ಲಾಡಿಸಿದರು. ಸದ್ಯ, ಇಲ್ಲಿಯೂ ಸ್ವಲ್ಪ ಗಲಿಬಿಲಿ ಇದೆಯಲ್ಲಾ ಎಂಬ ಸಮಾಧಾನ! ಕಡೆಗೆ ದೂರದಲ್ಲೆಲ್ಲೋ ಒಂದು ಕನ್ವೇಯರ್ ಬೆಲ್ಟ್ ಮೇಲೆ ಅವು ಓಡಾಡಿಕೊಂಡಿದ್ದುದು ಗಮನಕ್ಕೆ ಬಂತು.

ನಗರದಿಂದ ವಿಮಾನ ನಿಲ್ದಾಣವು ಸುಮಾರು ೩೫ ಕಿ.ಮೀ. ದೂರದಲ್ಲಿದೆ. ಸೊಗಸಾದ ಅಗಲವಾದ ರಸ್ತೆಗಳು, ಇಕ್ಕೆಲಗಳಲ್ಲಿ ಮರಗಳು, ಗಗನಚುಂಬಿ ಕಟ್ಟಡಗಳು, ಉದ್ಯಾನಗಳು, ಶುಚಿತ್ವಕ್ಕೆ ಹೆಸರಾದ ಆಸುಪಾಸು – ಪ್ರಾಥಮಿಕ ಶಾಲೆಗೆ ಹೊಸದಾಗಿ ಸೇರಿದ ಮಗುವಿನಂತೆ ಪಿಳಿಪಿಳಿ ಕಣ್ಣುಬಿಟ್ಟು ನೋಡಿದ್ದೇ ನೋಡಿದ್ದು; ಅದೆಷ್ಟು ಹೊಸಬಗೆಯ ದೃಶ್ಯಗಳು ಎನಿಸುತ್ತಿತ್ತು. ನಮಗೆ ಕಟ್ಟಿಕೊಟ್ಟಿರುವ ಕಲ್ಪನೆ ಚೀಣೀಯರು ಹಳದಿ ಮತ್ತು ಕುಳ್ಳು ಎಂದು. ವಾಸ್ತವ ಅದಲ್ಲ. ನಮ್ಮ ದೇಶದ ಸರಾಸರಿ ಎತ್ತರಕ್ಕೆ ಅವರೇನೂ ಕಮ್ಮಿಯಿಲ್ಲ. ಧಡೂತಿ ಆಸಾಮಿಗಳು ಕಡಿಮೆ. ಲತಾಂಗಿಗಳಾಗಿರಬೇಕೆಂಬ ಭಾವನೆ ಮಹಿಳೆಯರಲ್ಲಿ ಆಳವಾಗಿ ಬೇರೂರಿದೆಯೆಂದು ತೋರುತ್ತದೆ. ಯಾವ ಗೃಹಸಮುಚ್ಚಯವನ್ನೇ ನೋಡಿ, ವ್ಯಾಯಾಮಕ್ಕಾಗಿ ಒಂದಷ್ಟು ತೆರೆದ ಅಂಗಳ ಇರುತ್ತದೆ. ವ್ಯಾಯಾಮದ ಸಲಕರಣೆಗಳು ಲೆಕ್ಕವಿಲ್ಲದಷ್ಟು ಶೇಖರಣೆ ಆಗಿರುತ್ತದೆ. ಎಲ್ಲಾ ವಯಸ್ಸಿನವರನ್ನೂ ಉದ್ಯಾನಗಳಲ್ಲಿ ವ್ಯಾಯಾಮನಿರತರಾಗಿರುವುದನ್ನು ಕಾಣಬಹುದು: ಕಾಲು, ಕೈ, ಸೊಂಟ, ಮಂಡಿ ಎಲ್ಲದಕ್ಕೂ ಗಮನ ಉಂಟು. ಯುವಕ-ಯುವತಿಯರು ಇನ್ನೂ ರಭಸದ ಬಗ್ಗುವಿಕೆ, ಮಡಿಚುವಿಕೆ, ತಿರುಗುವಿಕೆಗಳಲ್ಲಿ ಮಗ್ನರಾಗಿರುತ್ತಾರೆ. ಮುದುಕರಿಗೆ ವಿಶೇಷವಾಗಿ ತೈ ಚಿ ವ್ಯಾಯಾಮ; ನವಿರಾದ ಅಂಗಚಲನೆ, ನಿಗದಿತ ಉಸಿರಾಟ ಮತ್ತು ನಿಧಾನಗತಿಯ ನೃತ್ಯ. ಅಬ್ಬರವಿಲ್ಲದ ಸಂಗೀತದ ಹಿನ್ನೆಲೆ ಇದಕ್ಕೆ. ಉದ್ಯಾನಗಳು ಅಗಾಧ ಪ್ರಮಾಣದವು; ಉದಾಹರಣೆಗೆ ರೀತಾನ್, ಜಿಯಾಂಗ್ ಶೆನ್ ಮತ್ತು ತಿಯಾನ್ ತಾನ್ ಉದ್ಯಾನಗಳು.

ಮೇ ದಿನದಂದು ನನ್ನ ಭೇಟಿ ತಿಯಾನೆನ್‌ಮೆನ್ ಚೌಕ ಹಾಗೂ ಅದರ ಸುತ್ತಮುತ್ತಲ ಪ್ರದೇಶಕ್ಕೆ. ಚಿತ್ರಗಳಲ್ಲಿ ನೋಡಿರುವುದಕ್ಕಿಂತಲೂ ಬೃಹತ್ ಪ್ರಮಾಣದ್ದು ಅದು. ಬೀಜಿಂಗ್‌ನಲ್ಲಿ ನಡೆಯಲಿರುವ ಒಲಿಂಪಿಕ್ ಕ್ರೀಡೆಗಳಿಗೆ ಇನ್ನೆಷ್ಟು ದಿನ, ಗಂಟೆ ಮತ್ತು ಸೆಕೆಂಡುಗಳು ಬಾಕಿ ಇವೆ ಎಂಬುದನ್ನು ತೋರಿಸುವ ಒಂದು ದೊಡ್ಡ ಫಲಕ ಅಲ್ಲಿಯ ಈಗಿನ ಒಂದು ಆಕರ್ಷಣೆ. ಮಾವೋ ಜೆಡೋಂಗ್‌ನ ಮೃತದೇಹವನ್ನು ಸನಿಹದ ಒಂದು ಸ್ಮಾರಕದಲ್ಲಿ ದಿನಕ್ಕೆ ನಾಲ್ಕೈದು ಗಂಟೆ ಪ್ರದರ್ಶನಕ್ಕಿಟ್ಟಾಗ ಸಾವಿರಾರು ಜನ ಸಾಲುಗಟ್ಟಿ ನಿಲ್ಲುವುದುಂಟು. ಚೀಣಾದ ಪಾರ್ಲಿಮೆಂಟ್ ಹತ್ತಿರದಲ್ಲೇ ಇದೆ. ಅದಕ್ಕೆ ಮಹಾನ್ ಜನತಾ ಸಭಾಂಗಣವೆಂಬ ಹೆಸರಿದೆ. ಪ್ರವಾಸಿಗರು ಅದರೊಳಗೆ ಸುತ್ತಿಬರುತ್ತಾರಾದರೂ ವಿವರಣೆ ಕೊಡುವ ಮಾರ್ಗದರ್ಶಿಗಳು ಹೇಳುವುದೆಲ್ಲಾ ಚೀಣೀ ಭಾಷೆಯಲ್ಲೇ. ಚೌಕದ ಇನ್ನೊಂದು ಭಾಗದಲ್ಲಿ ಹದಿನಾಲ್ಕನೆಯ ಶತಮಾನದ ಒಂದು ಕಟ್ಟಡವಿದೆ. ಕಿಂಗ್ ಸಂತತಿಯ ಆಳ್ವಿಕೆಯ ಸಮಯದಲ್ಲಿ ರಾಜಮನೆತನದವರಿಗೆ ಇಲ್ಲಿ ತಾಂಗ್ ಶಾನ್ ವೈದ್ಯಶಾಲೆ ಇರುತ್ತಿತ್ತು. ವೈದ್ಯರು ನಿಪುಣರಾಗಿಲ್ಲದಿದ್ದರೆ ಪ್ರಾಣ ಕಳೆದುಕೊಳ್ಳುವ ಸಂಭವ. ಈಗಲೂ ನಿಪುಣರಿದ್ದಾರೆ, ಆದರೆ ಪ್ರಾಣಭಯ ಅವರನ್ನು ಕಾಡಬೇಕಾಗಿಲ್ಲ. ಚೀಣಾದ ಪ್ರಾಚೀನ ವೈದ್ಯಕೀಯದಂತೆ ಗಿಡಮೂಲಿಕೆಗಳು, ಕಷಾಯಗಳು ಅಲ್ಲಿ ಲಭ್ಯವಿವೆ; ಆದರೆ ಅತಿ ದುಬಾರಿ. ತಪಾಸಣೆ ಮಾಡಿಸಿಕೊಂಡು ಅಲ್ಲೇ ಔಷಧಿ ಸೇವಿಸುವುದಾದರೆ ಅದು ಉಚಿತವಾಗಿ ದೊರಕುತ್ತದೆ. ಅದರ ಲಾಭ ಪಡೆಯಲು ನಾನು ಅಂಜಲಿಲ್ಲ. ಮಹಡಿಗಳನ್ನು ಏರುತ್ತಿದ್ದಂತೆ ಲೆಕ್ಕವಿಲ್ಲದಷ್ಟು ತಪಾಸಣಾ ಕೊಠಡಿಗಳು. ಅಂತಹ ಒಂದು ವಿಶಾಲ ಕೊಠಡಿಯಲ್ಲಿ 'ಮಲ್ಲಿಗೆ ಟೀ' ಕೊಟ್ಟು ಸ್ಥೂಲಕಾಯದ ವೈದ್ಯನೊಬ್ಬನಲ್ಲಿಗೆ ನನ್ನನ್ನು ಕೊಂಡೊಯ್ದರು. ನನ್ನ ನಾಡಿ ಹಿಡಿದು ಪರೀಕ್ಷೆ ಮಾಡಿದ ಆತನಿಗೆ ಹತ್ತಾರು ಪ್ರಶ್ನೆಗಳನ್ನು ಹಾಕಿದೆ. ಚೀಣಾದಲ್ಲಿ ವೈದ್ಯಕೀಯ ಅಭ್ಯಾಸ ಮಾಡುವವರಿಗೆಲ್ಲಾ ಕಡ್ಡಾಯವಾಗಿ ಒಂದು ವರ್ಷ ಆ ದೇಶದ ಪ್ರಾಚೀನ ವೈದ್ಯಕೀಯದಲ್ಲಿ ತರಬೇತಿ ನೀಡುತ್ತಾರೆಂದು ತಿಳಿಯಿತು. ಪ್ರಾಚೀನ ಜ್ಞಾನವು ಅವಶೇಷದ ಸ್ಥಿತಿ ತಲುಪದಿರಲು ಇದು ಸಹಾಯ ಮಾಡುತ್ತದೆ. ಇಂದಿಗೂ ಬಹುಮಂದಿ ಚೀಣೀಯರು ಮಾತ್ರೆ ನುಂಗುವುದಕ್ಕಿಂತಲೂ ಮೂಲಿಕೆ-ಕಷಾಯಗಳನ್ನು ಆಶ್ರಯಿಸುವುದೇ ಹೆಚ್ಚು. ಅದರಲ್ಲಿ ಸರ್ಕಾರದ ನಿಯಂತ್ರಣವಿರುವುದರಿಂದ ಖೋಟಾ ಔಷಧಿಗಳು ಮಾರುಕಟ್ಟೆ ಪ್ರವೇಶಿಸುವಂತಿಲ್ಲ.





ಸಾರ್ವಜನಿಕ ಉದ್ಯಾನದಲ್ಲಿ ತಾಯ್ ಚಿ

ಮಾರನೆಯ ದಿನ 'ನಿಷೇಧಿತ ನಗರ'ವೆಂದು ಕರೆಯಲಾಗುವ ಅಗಾಧ ಅರಮನೆಗೆ ನಮ್ಮ ಭೇಟಿ. ಮಾರ್ಗದರ್ಶಿ ಇಲ್ಲದೆ ಮಾರ್ಗದರ್ಶನ ಪಡೆಯುವ ಸೌಲಭ್ಯ ಇಲ್ಲಿದೆ. ಎಲ್ಲಿಂದೆಲ್ಲಿಗೆ ಹೋಗಬೇಕು, ಏನು ನೋಡಬೇಕು, ಅದರ ಚರಿತ್ರೆಯೇನು, ಎಂಬುದನ್ನೆಲ್ಲಾ ಟೇಪಿನಲ್ಲಿ ರೆಕಾರ್ಡ್ ಮಾಡಿರುತ್ತಾರೆ, ಅದನ್ನು ಪಡೆಯಬಹುದು. ಇಂಗ್ಲಿಷ್‌ನಲ್ಲಿ ಎಲ್ಲವನ್ನೂ ಹೇಳುತ್ತಾ ಜೊತೆಯಲ್ಲಿ ಬರುವ ಮಾರ್ಗದರ್ಶಿಯನ್ನು ಪಡೆಯಬೇಕಾದರೆ ಹೇರಳ ಹಣ ಖರ್ಚಾಗುತ್ತದೆ. ಆ ಇಂಗ್ಲಿಷೂ ಅಷ್ಟಕ್ಕಷ್ಟೇ. ಟೇಪಿನಲ್ಲಿರುವುದು ಅದಕ್ಕಿಂತ ಭಿನ್ನವಲ್ಲ! ಈ 'ನಗರ' ಎಷ್ಟು ಅಗಾಧವೋ ಅದರ ಚರಿತ್ರೆಯೂ ಅಷ್ಟೇ ಅಗಾಧ. ಇಡಿಯಾಗಿ ಎಲ್ಲವನ್ನೂ ಹೇಳುವುದು ಅಸಾಧ್ಯದ ಮಾತು. ಒಂದಂತೂ ನಿಜ, ಚೀಣೀಯರು ತಮ್ಮೆಲ್ಲ ಐತಿಹಾಸಿಕ ಸ್ಮಾರಕಗಳನ್ನೂ ಅಚ್ಚುಕಟ್ಟಾಗಿ ಇಟ್ಟುಕೊಂಡಿದ್ದಾರೆ. ಪ್ರವಾಸಿಗರನ್ನು ಆಕರ್ಷಿಸಲು ಅದೂ ಒಂದು ಸಾಧನ ಇರಬೇಕು. 'ಸಾಂಸ್ಕೃತಿಕ ಕ್ರಾಂತಿ'ಯ ಹೆಸರಿನಲ್ಲಾದ ಅಲ್ಲೋಲ ಕಲ್ಲೋಲವನ್ನು ಮೀರಿ ನಿಂತಿರುವ ಸ್ಮಾರಕಗಳು ನಿಜಕ್ಕೂ ಪರಂಪರೆಯನ್ನು ಪ್ರತಿನಿಧಿಸುವಂಥವು ಎನ್ನಬಹುದು. ಹುಲ್ಲುಹಾಸಿಗೆ, ಹೂವು, ನೀರಿನ ಸೆಲೆ, ಕುಂಟೆಗಳು, ಅದರಲ್ಲಿರುವ ಮೀನು ಹಾಗೂ ತಾವರೆ, ಎಲ್ಲದರಲ್ಲೂ ಏನೋ ಒಂದು ಸೌಂದರ್ಯ. ನಮ್ಮ ದೇಶದ ಸ್ಮಾರಕಗಳನ್ನು ಹಾಗೆ ಇಟ್ಟುಕೊಳ್ಳಲಾಗದೆ ಎಂಬ ಪ್ರಶ್ನೆ ಕಾಡುತ್ತದೆ.

ಮೇ ೩ರಂದು ನಾವು 'ಹುಟೋಂಗ್'ಗಳನ್ನು ನೋಡುವುದಿತ್ತು. ಬೀಜಿಂಗಿನ ಪ್ರಾಚೀನ ಮನೆಗಳ ವಿನ್ಯಾಸಕ್ಕೆ ಈ ಹೆಸರು. ಅಂದಿನ ಸಾಮಾಜಿಕ ಜೀವನದ ಪ್ರತಿಫಲನವನ್ನು ಈ ಮನೆಗಳಲ್ಲಿ ಕಾಣಬಹುದು. ನಮ್ಮ ತೊಟ್ಟಿ ಮನೆಗಳಿದ್ದಂತೆ ಇವು (ಅಥವಾ ಮಹಾರಾಷ್ಟ್ರದ 'ವಾಡಿ'ಗಳು). ತೊಟ್ಟಿಯ ನಾಲ್ಕೂ ಭಾಗಗಳಲ್ಲಿ ಕೊಠಡಿಗಳು. ಅವುಗಳಲ್ಲಿ ಕೆಲವು, ಮದುವೆಯಾಗದ ಹುಡುಗಿಯರಿಗೆ. ಅವರು ಗಂಡಸರಿಗೆ ಕಾಣಿಸಿಕೊಳ್ಳಬಾರದಲ್ಲಾ, ಅದಕ್ಕೆ. ಇಂತಹ ತೊಟ್ಟಿಯ ಮನೆಗಳ ನಡುವೆ ಗಲ್ಲಿಗಳು. ಚರಂಡಿಗಳಿಗೆ ಅವೇ ಹಾದಿಗಳು. ಆಧುನಿಕ ನಗರವಾದ ಬೀಜಿಂಗ್ ಬಹಳ ಯೋಜನಾಬದ್ಧವಾಗಿದೆ; ದೊಡ್ಡ ವೃತ್ತಗಳು, ವಿಶಾಲವಾದ ರಸ್ತೆಗಳು, ಸೊಗಸಾದ ಒಳಚರಂಡಿಗಳು, ಉದ್ಯಾನಗಳು, ಎಲ್ಲಾ ನಗರವನ್ನು ಸುಸಜ್ಜಿತವಾಗಿಸಿವೆ. ಆದರೆ ಅದೇ ನಗರದ ಹುಟೋಂಗ್ ಭಾಗಕ್ಕೆ ಹೋದರೆ ಪ್ರಾಚೀನ ನಗರದ ಕಲ್ಪನೆ ಬರುತ್ತದೆ. ಆ ಮನೆಗಳಲ್ಲಿ ವಾಸಿಸುತ್ತಿರುವವರಿಗೆ ಇರುವ ಆದಾಯದಲ್ಲಿ ಪ್ರವಾಸಿಗರಿಗೆ ತಮ್ಮ ಮನೆ ತೋರಿಸಿದರೆ ಸಿಗುವ ಹಣವೂ ಸೇರಿದೆ! ಅವರ ಅಡಿಗೆಮನೆ, ಮೇಜು-ಕುರ್ಚಿ-ಮಂಚ ಇತ್ಯಾದಿಗಳನ್ನು ನೋಡುವುದೆಂದರೆ ಒಂದಷ್ಟು ಶತಮಾನಗಳ ಹಿಂದಕ್ಕೆ ಜಾರಿಕೊಂಡಂತೆ. ಹುಟೋಂಗ್ ಪ್ರದೇಶದ ಪಕ್ಕದಲ್ಲಿ ಹುವಾಹೈ ಸರೋವರ, ಯುವಕರಿಗೆ ನೆಚ್ಚಿನ ತಾಣ. ಇದೇನು ಬೀಜಿಂಗೋ ಅಥವಾ ಅಮೆರಿಕಾದ ಯಾವುದಾದರೂ ದೊಡ್ಡ ನಗರದ ಭಾಗವೋ ಎನ್ನುವಂತಿದೆ ಇಲ್ಲಿಯ ವಾತಾವರಣ.

ಚೀಣಾಕ್ಕೆ ಹೋದವರು 'ಬೃಹತ್ ಗೋಡೆ'ಯನ್ನು ನೋಡದೆ ಹಿಂದಿರುಗುವುದಿಲ್ಲವೆಂಬ ಪ್ರತೀತಿಯಂತೆ ನಾನೂ ಮೇ ೪ರಂದು ಅದನ್ನು ನೋಡಹೋದೆ. ಅರ್ಧ ದಿನದಲ್ಲಿ ಅದನ್ನು ಪ್ರವಾಸಿಗರಿಗೆ ತೋರಿಸಿ ಹಿಂದಕ್ಕೆ ಕರೆತರುವ ಪದ್ಧತಿಯಿದೆ. ಚಾರಣಿಗಳಾದ ನನಗೆ ಅದು ರುಚಿಸದು. ವಿರಾಮ, ಕುತೂಹಲ ಮತ್ತು ಸಾಮರ್ಥ್ಯ ಇದ್ದರೆ ಎಷ್ಟೋ ದಿನ ಆ ಗೋಡೆಯ ಮೇಲೆ ನಡೆದುಹೋಗುತ್ತಲೇ ಇರಬಹುದು. ಸಾಮಾನ್ಯವಾಗಿ ಎಲ್ಲರೂ ಹೋಗುವುದು ಬದಾಲಿಂಗ್ ಎಂಬ ಭಾಗಕ್ಕೆ; ಏಕೆಂದರೆ, ಪ್ರವಾಸಿಗರಿಗಾಗಿ ಅದನ್ನು ಸಜ್ಜುಗೊಳಿಸಲಾಗಿದೆ. ಅದನ್ನು ನೋಡಹೋದವರು ಮಿಂಗ್ ಗೋರಿಗಳನ್ನು ನೋಡಬಹುದು. ಸಂಗಡಿಗರೊಡನೆ ನಾನು ಹೋದದ್ದು ಮುತಿಯಾಹ್ಯು ಎಂಬ ಭಾಗಕ್ಕೆ; ಏಕೆಂದರೆ, ಗೋಡೆಯ ಅತಿಪ್ರಾಚೀನ ಭಾಗ ಅಲ್ಲಿದೆ ಮತ್ತು ಅದನ್ನು ಚೆನ್ನಾಗಿ ರಕ್ಷಿಸಿಡಲಾಗಿದೆ. ಅಂಕುಡೊಂಕಾದ ಗೋಡೆಯ ಮೇಲೆ ಮೆಟ್ಟಿಲು ಹತ್ತುವಂತೆ ನಡೆದಾಡಬಹುದಾದ್ದು ಇಲ್ಲಿಯ ವಿಶೇಷ. ಬೇಕಾದಷ್ಟು ಪಹರೆ ಸ್ಥಾನಗಳನ್ನೂ ಕಾಣಬಹುದು. ಈ ಗೋಡೆಯೊಂದು ಅದ್ಭುತವೆಂಬುದು ಎಲ್ಲರಿಗೂ ತಿಳಿದಿದೆ. ಚಂದ್ರನ ಮೇಲೆ ನಿಂತು ಭೂಮಿ ನೋಡಿದರೆ ಈ ಗೋಡೆ ಕಾಣುತ್ತದಂತೆ! ಅದು ಸರಿ, ಆದರೆ ಚೀಣಾದ ದೊರೆಗಳು ಇದನ್ನು ಕಟ್ಟಿಸಿದ್ದಾದರೂ ಏಕೆ? ತಡೆಯೊಡ್ಡಲೆಂದೇ ಎಂದರೆ ಅಲ್ಲ; ಏಕೆಂದರೆ ಅದಿರುವುದು ಬೆಟ್ಟದ ಸಾಲಿನ ಮೇಲೆ. ಹಿಮಾಲಯದ ಮೇಲೆ ಕೋಟೆ ಕಟ್ಟುವ ಹುಚ್ಚು ಎನ್ನಬಹುದು. ಅಲ್ಲದೆ, ಈ ಗೋಡೆಯು ಆಕ್ರಮಣಕಾರರನ್ನೇನೂ ತಡೆಯಲಿಲ್ಲ. ಮಂಗೋಲರು ನುಗ್ಗಿ ಲೂಟಿ ಮಾಡಲಿಲ್ಲವೆ? ಅಂತೆಯೇ ಮಂಚೂರಿಯಾದವರು ಹಾಗೂ ಇತರರು. ಹೀಗೆ



ತಿಯಾನೆನ್‌ಮೆನ್ ಚೌಕ

*ಮೇ ದಿನದಂದು ನನ್ನ ಭೇಟಿ ತಿಯಾನೆನ್‌ಮೆನ್ ಚೌಕ ಹಾಗೂ ಅದರ ಸುತ್ತಮುತ್ತಲ ಪ್ರದೇಶಕ್ಕೆ. ಚಿತ್ರಗಳಲ್ಲಿ ನೋಡಿರುವುದಕ್ಕಿಂತಲೂ ಬೃಹತ್ ಪ್ರಮಾಣದ್ದು ಅದು. ಬೀಜಿಂಗ್‌ನಲ್ಲಿ ನಡೆಯಲಿರುವ ಒಲಿಂಪಿಕ್ ಕ್ರೀಡೆಗಳಿಗೆ ಇನ್ನೆಷ್ಟು ದಿನ, ಗಂಟೆ ಮತ್ತು ಸೆಕೆಂಡುಗಳು ಬಾಕಿ ಇವೆ ಎಂಬುದನ್ನು ತೋರಿಸುವ ಒಂದು ದೊಡ್ಡ ಫಲಕ ಅಲ್ಲಿಯ ಈಗಿನ ಒಂದು ಆಕರ್ಷಣೆ. ಮಾವೋ ಝೆಡೋಂಗ್‌ನ ಮೃತದೇಹವನ್ನು ಸನಿಹದ ಒಂದು ಸ್ಮಾರಕದಲ್ಲಿ ದಿನಕ್ಕೆ ನಾಲ್ಕೈದು ಗಂಟೆ ಪ್ರದರ್ಶನಕ್ಕಿಟ್ಟಾಗ ಸಾವಿರಾರು ಜನ ಸಾಲುಗಟ್ಟಿ ನಿಲ್ಲುವುದುಂಟು. ಚೀಣಾದ ಪಾರ್ಲಿಮೆಂಟ್ ಹತ್ತಿರದಲ್ಲೇ ಇದೆ. ಅದಕ್ಕೆ ಮಹಾನ್ ಜನತಾ ಸಭಾಂಗಣವೆಂಬ ಹೆಸರಿದೆ. ಪ್ರವಾಸಿಗರು ಅದರೊಳಗೆ ಸುತ್ತಿಬರುತ್ತಾರಾದರೂ ವಿವರಣೆ ಕೊಡುವ ಮಾರ್ಗದರ್ಶಿಗಳು ಹೇಳುವುದೆಲ್ಲಾ ಚೀಣೀ ಭಾಷೆಯಲ್ಲೇ.*



*ಚೀಣಾದ ಮಹಾನ್ ಗೋಡೆ*

ಬಂದವರು ಬೀಜಿಂಗ್ ಮೇಲೆ ದಾಳಿ ನಡೆಸಿದ್ದಲ್ಲದೆ ಗೋಡೆಯ ಕೆಲಭಾಗಗಳನ್ನೂ ಉರುಳಿಸಿದ್ದರು. ಈಗಂತೂ ಪ್ರವಾಸಿಗರಿಂದ ಆದಾಯ ಹೆಚ್ಚಿಸಿಕೊಳ್ಳಲು ಗೋಡೆಯು ಕಲ್ಪವೃಕ್ಷವಾಗಿದೆ.

ಮೇ ೫ ಕಾರ್ಲ್ ಮಾರ್ಕ್ಸ್ ಹುಟ್ಟಿದ ದಿನ. ಬೀಜಿಂಗ್‌ನಲ್ಲಿ ಅದರ ಸುಳಿವು ದೊರೆಯುವಂಥದೇನೂ ಇದ್ದಂತೆ ತೋರಲಿಲ್ಲ. ನಾವಂತೂ ಊರು ಸುತ್ತಿದೆವು. ಕಾಫಿ ಬಾರ್‌ಗಳಿಗೆ ಹೋದೆವು, ಇಂಗ್ಲಿಷ್ ಬಾರದ ಉಪಚಾರಕಿಯರಿಗೆ ಶ್ರಮಪಟ್ಟು ನಮ್ಮ ಬೇಕು-ಬೇಡಗಳನ್ನು ತಿಳಿಸಿದೆವು, ಅವರ ನಗುಮುಖಗಳನ್ನು ಕಂಡು ಸಂತಸಪಟ್ಟೆವು. ಈ ದಿನ ನಾನು ಕಂಡುಕೊಂಡ ಒಂದಂಶವೆಂದರೆ ಈ ಚೀಣೀಯರಿಗೆ ಟೊಮೆಟೋ ಎಂಬುದು ತಿಳಿದಿಲ್ಲವೆಂದು. ಎಲ್ಲೋ ಕೆಲವು ಸೂಪರ್ ಮಾರ್ಕೆಟ್‌ಗಳಲ್ಲಿ ಅದು ದೊರೆಯಬಹುದೇನೋ! ಅಂದು ನಾನು ನೋಡಿದ ಇನ್ನೊಂದು ಸ್ವಾರಸ್ಯಕರ ಜಾಗವೆಂದರೆ 'ನೀಲಿ ಪ್ರಾಣಿ ಸಂಗ್ರಹಾಲಯ', ಅಂದರೆ ಸಮುದ್ರದ 'ಆಳ'ಕ್ಕೆ ಕೊಂಡೊಯ್ಯುವ 'ಸಾಗರ ಮ್ಯೂಸಿಯಂ'. ಸಮುದ್ರದ ಗರ್ಭದಲ್ಲಿ ಒಂದು ಸುರಂಗ ಮಾರ್ಗ; ಅದರಲ್ಲಿ ಹೋಗುತ್ತಿದ್ದರೆ ಮೀನುಗಳ ಹಿಂಡು, ತಿಮಿಂಗಿಲಗಳು, ಅಷ್ಟಪದಿಗಳು, ಆಮೆಗಳು ಎಲ್ಲಾ ನಮ್ಮ ಸುತ್ತಮುತ್ತ ಬಂದು ಮುತ್ತಿಕ್ಕುತ್ತವೆ. ಅಲ್ಲಿ ಬರುವ ಚೀಣೀಯರ ಬಳಿ ಬಾಟಲ್‌ಗಳು; ಅದರಲ್ಲಿ ಎಂಥದೋ ಹಸಿರು ದ್ರಾವಣ. ಅದು ಅವರ ಪ್ರಿಯವಾದ 'ಹಸಿರು ಟೀ'. ಅದನ್ನು ಬಿಟ್ಟಿರಲಾರರು ಈ ಜನ. ಕಣ್ಣು ಮತ್ತು ಹೊಟ್ಟೆಗೆ ಇದು ಬಹಳ ಒಳ್ಳೆಯದು. ಶರೀರದಲ್ಲಿ ಆಮ್ಲವನ್ನು ತೊಡೆದುಹಾಕುವ ಶಕ್ತಿ ಇದಕ್ಕಿದೆ. ವಾಸ್ತವದಲ್ಲಿ ವಿಶ್ವಕ್ಕೆ ಟೀ ಪರಿಚಯಿಸಿದ್ದೇ ಚೀಣೀಯರಲ್ಲವೆ!

ನನ್ನ ಮುಂದಿನ ಭೇಟಿ ಬೇಸಿಗೆ ಅರಮನೆಗೆ. ಚೀಣಾದಲ್ಲಿ ಸಂಚರಿಸುತ್ತಿದ್ದರೆ, ಅವರ ವಾಸ್ತುಶಿಲ್ಪವೆಲ್ಲಾ ಏಕಪ್ರಕಾರವೆಂದು ತೋರಿ, ನೋಡಲು ಇನ್ನೇನು ಉಳಿದಿದೆಯೆಂಬ ಬೇಸರ ಬರುತ್ತದೆ. ಅದೇ ಆಕೃತಿ, ಅದೇ ಬಣ್ಣ, ಅದೇ ಸಂರಚನೆ ಮತ್ತು ಅದೇ ಶಿಲ್ಪ. ಒಂದು ಅರಮನೆ ಅಥವಾ ದೇವಸ್ಥಾನ ನೋಡಿದರೆ ಎಲ್ಲವನ್ನೂ ನೋಡಿದಂತೆ. ಇದು ಒಂದು ರೀತಿ ಸಂಸ್ಕೃತ ನಾಟಕಗಳನ್ನು ಓದಿದಂತೆ; ಕಾಲಿದಾಸನ ಮಾಲವಿಕಾಗ್ನಿಮಿತ್ರ ಒಂದನ್ನೋದಿದರೆ ಸುಮಾರು ೧೫೦ ಸಂಸ್ಕೃತ ನಾಟಕಗಳನ್ನೋದಿದಂತೆ ಆಗುತ್ತದೆ. ಮುಂದಿನ ನಾಟಕಕಾರರು ಕಾಲಿದಾಸನನ್ನು ಅಷ್ಟೊಂದು ಪೂರ್ತಿಯಾಗಿ ಅಣಕಿಸಿಬಿಟ್ಟಿದ್ದಾರೆ. ಆದರೆ 'ಬೇಸಿಗೆ ಅರಮನೆ' ಹಾಗಲ್ಲ. ಅದರ ಅಂದ ಮತ್ತು ರಚನೆ ಒಂದು ಮಹಾನ್ ಸೌಂದರ್ಯದ ಚಿತ್ರವನ್ನು ಕಣ್ಣಿಗೆ ಕಟ್ಟುತ್ತದೆ. ವಿಶ್ವದಲ್ಲೇ ಅತಿ ಉದ್ದದ ಒಳಾಂಗಣ ಹಾದಿ ಇಲ್ಲಿದೆ. ಜೊತೆಗೆ ಚಿತ್ರ ಸೊಬಗಿನ ಒಂದು ಸರೋವರ, ಅಮೃತಶಿಲೆಯ ಕಮಾನಿನ ರೂಪದ ಮೇಲುಸೇತುವೆ, ಡ್ರೇಗನ್ ರೂಪದ ದೋಣಿಗಳು, ಎಲ್ಲಾ ಆಪ್ಯಾಯಮಾನ. ಚಳಿಗಾಲದಲ್ಲಿ ಇದು ಹೆಪ್ಪುಗಟ್ಟುತ್ತದಂತೆ; ಆಗ ಅದರ ಮೇಲೆ ಸ್ಕೇಟಿಂಗ್‌ಗೆ ನೂರಾರು ಜನ ದಟ್ಟೈಸುತ್ತಾರಂತೆ.

ಚೀಣಾದ ಇನ್ನೊಂದು ವೈಶಿಷ್ಟ್ಯ ಬೌದ್ಧ ದೇವಾಲಯಗಳದ್ದು. ಅವು ಸಾಮಾನ್ಯವಾಗಿ ಬೃಹದಾಕಾರದವು. ಪ್ರವೇಶದ ನಂತರ ಮೊದಲು ಹೆಣ್ಣು-ಗಂಡು ಪಾಲಕ ದೇವತೆಗಳು, ಆಮೇಲೆ ಬುದ್ಧನ ವಿಗ್ರಹ. ಕೆಲವೆಡೆ ದೊಡ್ಡ ಹೊಟ್ಟೆಯ ನಗುವ ಬುದ್ಧ ಪ್ರವೇಶ ದ್ವಾರದಲ್ಲೇ ಇರುತ್ತಾನೆ. ಎಲ್ಲರ ಕಷ್ಟಗಳನ್ನೂ ಹೀರಿಕೊಂಡು ಬಿಡುವ ಲಕ್ಷಣವನ್ನು ಪ್ರತೀಕಿಸಲು ಈ ದೊಡ್ಡ ಹೊಟ್ಟೆ ಎನ್ನುತ್ತಾರೆ. ಚೀಣಾದ ದೇವಾಲಯಗಳಲ್ಲಿ ಪಾದರಕ್ಷೆಗಳನ್ನು ಹೊರಗೆ ಬಿಡುವ ಪದ್ಧತಿಯಿಲ್ಲ. ಒಳಗೆ ಹೋಗಿ ಊದುಬತ್ತಿ ಹಚ್ಚುವುದು, ಮಂಡಿಯೂರಿ ನಮಿಸುವುದು ಅಭ್ಯಾಸ. ಪಾಶ್ಚಾತ್ಯರು ಇವರಿಂದಲೇ ಅದನ್ನು ಕಲಿತರೇನೋ! ಪ್ರಸಾದ, ಹೂವು ಇತ್ಯಾದಿಗಳಿಲ್ಲ; ಘಮಘಮಿಸುವ ಊದುಕಡ್ಡಿಯಿಂದಲೇ ಆರಾಧನೆ ಇಲ್ಲಿ.

ಚೀಣಾದ ಮಾರುಕಟ್ಟೆಗಳಿಗೆ ಹೋದರೆ ತಲೆಗಡಚಿಕ್ಕುವಷ್ಟು ಆಕರ್ಷಕ ವಸ್ತುಗಳು. ಏನನ್ನು ಕೊಳ್ಳುವುದು, ಏನನ್ನು ಬಿಡುವುದು! ಸ್ವಯಂಚಾಲಿತ ಬೆಂಕಿ ಪೆಟ್ಟಿಗೆಯಿಂದ ಹಿಡಿದು ವರ್ಣಮಯವಾದ ಆಟಿಕೆಗಳವರೆಗೆ ಎಲ್ಲಾ ಮೋಹಕವೇ. 'ವಸ್ತ್ರಗಳ ರಾಜ' ಚೀಣಾ ಎಂಬ ಮಾತಿದೆ. ಅದೆಷ್ಟು ಬಣ್ಣಗಳು, ವಿನ್ಯಾಸಗಳು; ಹತ್ತಿ, ರೇಷ್ಮೆ, ಪಾಲಿಫೈಬರ್, ಎಲ್ಲಾ ಉಂಟು. ಬಹಳ ಗಟ್ಟಿ ಎಂದೂ ಹೇಳುತ್ತಾರೆ. ಎಲೆಕ್ಟ್ರಾನಿಕ್ ಮತ್ತು ಚರ್ಮದ ವಸ್ತುಗಳು ಸ್ವಲ್ಪ ಅಗ್ಗವೆಂದು ತೋರುತ್ತದೆ. ಪಿಂಗಾಣಿ ಪಾತ್ರೆಗಳು, ಅವುಗಳ ಕಲೆ, ವಿಶ್ವಕ್ಕೆ ಪರಿಚಯಿಸಿದ್ದು ಚೀಣಾ. ಆ ವಿಭಾಗದಲ್ಲಿ ಚೀಣಾದ್ದು ಇಂದಿಗೂ ಎತ್ತಿದ ಕೈ.

ನಾನು ಗಮನಿಸಿದ ಒಂದು ವಿಚಿತ್ರವನ್ನು ದಾಖಲಿಸಬೇಕು : ಅದು ರಸ್ತೆಗಳಲ್ಲಿ ಕಾಣ ಬರುವ ಮಕ್ಕಳ ಬಟ್ಟೆಗಳ ವಿನ್ಯಾಸಕ್ಕೆ ಸಂಬಂಧಿಸಿದ್ದು. ತಂದೆ-ತಾಯಂದಿರೊಡನೆ ಹೋಗುವ ಈ ಮಕ್ಕಳ ನಿಕ್ಕರ್ ಅಥವಾ ಪ್ಯಾಂಟುಗಳ ಹಿಂಬದಿಯಲ್ಲಿ ಗುಂಡನೆಯ ತೂತು! 'ಇಸ್ಸಿ' ಮಾಡಿಕೊಳ್ಳಲು ಸುಲಭವಾಗಿರಲೆಂದು ಈ ವಿನ್ಯಾಸ. ದುಡಿಯುವ ಜನರ ಮಕ್ಕಳ ಬಟ್ಟೆಯ ಈ ವಿನ್ಯಾಸವನ್ನು ಬದಲಾಯಿಸಲು ಚೀಣಾದ ಸರ್ಕಾರ ಹೆಣಗುತ್ತಿದೆಯಂತೆ. ಮಕ್ಕಳ ಪೃಷ್ಠಭಾಗ ನೋಡಲು ಅಧಿಕಾರಿಗಳಿಗೇನೋ ಅಂಜಿಕೆ, ಮುಜುಗರ ಇರಬೇಕು. ಅಂಗಡಿಗಳಲ್ಲಿ ಚೌಕಾಸಿಯ ವೈವಿಧ್ಯ ಇನ್ನೊಂದು ಸ್ವಾರಸ್ಯ. ಒಬ್ಬ ರೈತ ಮಹಿಳೆ ತನ್ನ ಕಸೂತಿಯೊಂದನ್ನು ಕೊಳ್ಳಬೇಕೆಂದು ನನ್ನ ಹಿಂದೆ ಬಿದ್ದಳು. ಆಕೆ ನಿಗದಿಗೊಳಿಸಿದ ಬೆಲೆ ೪೦ ಯುವಾನ್‌ಗಳು. ನನಗದು ಬೇಡವಾಗಿತ್ತು. ಸುಮ್ಮನೆ ಹೋಗಲೆಂದು ೫ ಯುವಾನ್ ಕೊಟ್ಟೆ. ಇನ್ನೆರಡು ಯುವಾನ್ ಕೊಡೆಂದು ಹೇಳಿ ಕಸೂತಿಯನ್ನು ನನಗೆ ಗಂಟುಹಾಕಿಯೇ ಬಿಟ್ಟಳು. ದೊಡ್ಡ ಅಂಗಡಿಗಳಲ್ಲೂ ಚೌಕಾಸಿಗೆ ಅವಕಾಶವಿದೆ. ಅವರ 'ನಿಖರ ಬೆಲೆ'ಗೆ ಶೇ. ೫೦ರಷ್ಟು ಕಡಿಮೆ ಮಾಡುವುದು ಅಪರೂಪವೇನಲ್ಲ. ಚೌಕಾಸಿ ಮಾಡಲು ಹೇಸುವವರಿಗೆ ಈ ಅಂಗಡಿಗಳಲ್ಲಿ ಭಾರಿ ಪಂಗನಾಮ, ನನ್ನಂಥವಳಿಗೆ ಸ್ವರ್ಗಸೋಪಾನ. ಕೇವಲ ಸಸ್ಯಾಹಾರಿ ತಿಂಡಿ-ತಿನಿಸುಗಳಿಗೆ ಇಲ್ಲಿ ಕೊರತೆಯಿಲ್ಲ. ಎಲ್ಲಾ ಸೋಯಾದಲ್ಲಿ ಮಾಡಿದ್ದು; ಆದರೆ ಹೆಸರುಗಳು ಮಾತ್ರ 'ಪೀಕಿಂಗ್ ಬಾತುಕೋಳಿ', 'ಪೀಕಿಂಗ್ ಮೀನು' ಇತ್ಯಾದಿ. ಆಕಾರದಲ್ಲಿ ಕೋಳಿ, ಮೀನು ಇತ್ಯಾದಿ; ಆದರೆ ಸಾಮಗ್ರಿ ಕೇವಲ ಸೋಯಾ. ಕಷ್ಟವೇನೆಂದರೆ ಚೀಣಾದಲ್ಲಿ ನಾವು ತಿನ್ನುತ್ತಿರುವುದು ಏನು ಎಂಬುದನ್ನು ಪತ್ತೆಹಚ್ಚುವುದು ಬಹುಮಟ್ಟಿಗೆ ಕಠಿಣ. ಇಂಗ್ಲಿಷ್ ಬಾರದವರೊಡನೆ ಮಾತನಾಡಿ ತಿಳಿಯುವುದು ಅಸಾಧ್ಯ. ಮುಕ್ಕಾಲು ಮೂರು ವೀಸಾ ಪಾಲು ಅದು ಮಾಂಸವೇ ಆಗಿರುತ್ತದೆ; ಅದೂ ನಾಯಿಯದೋ, ಹಾವಿನದೋ, ಈಲ್‌ನದೋ, ಯಾವುದೂ ಆಗಿರಬಹುದು. ರಸ್ತೆಬದಿಯಲ್ಲೇ ಪತಂಗಗಳನ್ನು ಹುರಿಯುತ್ತಿದ್ದುದನ್ನು ನಾನು ನೋಡಿದ್ದೇನೆ.

ಅಂಥವನ್ನೆಲ್ಲಾ ತಿನ್ನುವ ಕರುಳು ನನ್ನದಲ್ಲ (ದ್ವಂದ್ವಾರ್ಥ ಬೇಕೆಂದೇ ಬಳಸಲಾಗಿದೆ). ಚೀಣೀಯರಿಗೆ ಅದರಲ್ಲಿರುವ ಆನಂದ ಅಸದಳವಾದುದು. ಹೊರಗೆ ತಿನ್ನುವುದು ಅವರಿಗೆ ಸಾಮಾನ್ಯ. ನಾನು ಹಾಗೆ ಮಾಡಿದ್ದರೆ ನನ್ನನ್ನು ಅತಿಥಿಯನ್ನಾಗಿ ಮಾಡಿಕೊಂಡಿದ್ದವರು ಬಹುಶಃ ಹೌಹಾರಿಬಿಡುತ್ತಿದ್ದರು. ಆದರೂ ರಸ್ತೆಬದಿಗಳಲ್ಲಿ ನಾನು ತಿಂದೆ. ಮಾಂಸವನ್ನು ನಾನು ತಿನ್ನುವುದಿಲ್ಲವೆಂಬುದನ್ನು ಕೇಳಿ ವಿಸ್ಮಯಗೊಂಡವರು ಹಲವರು. ನಮ್ಮ ಮುಂಬೈ ರಸ್ತೆಬದಿಗಳಲ್ಲಿ ದೊರೆಯುವ ಮೈದಾರೊಟ್ಟಿ ಬೀಜಿಂಗಿನ ರಸ್ತೆಬದಿಗಳಲ್ಲೂ ದೊರೆಯಿತು. ಅದನ್ನು ಕೊಂಡಾಗಲೆಲ್ಲಾ "ಚೆನ್ನಾಗಿದೆಯೆ?" ಎಂದು ಹತ್ತುಬಾರಿ ಪ್ರಶ್ನೆ. ನಾನು ಇಂಡಿಯಾದವಳೆಂದರೆ, "ಓ... ಇಂದೂ" ಎಂಬ ಉದ್ಗಾರ. ಅವರಿಗೆ ಭಾರತವೆಂದರೆ ಸಾಮೂಹಿಕ ಪ್ರಜ್ಞೆಯಲ್ಲಿ ಉಳಿದಿರುವ ದೇಶ. ಅಲ್ಲಿಯ ಜನಸಾಮಾನ್ಯರಿಗೆ ಬೌದ್ಧಧರ್ಮದ, ಪ್ರಾಚೀನ ನಾಗರಿಕತೆಯ, ದೇಶ ಭಾರತ. ನನ್ನನ್ನು ವಿದೇಶದವಳೆಂದು ಕಂಡವರು ಅಲ್ಲಿ ಬಹಳ ವಿರಳ. *(ಕನ್ನಡಕ್ಕೆ : ಜಿ. ಆರ್.)*

ತನು ಮೆಹ್ತಾ ತಿವಾರಿ
ಅಡ್ವೊಕೇಟ್, ೮೭, ಯೂಸುಫ್ ಬಿಲ್ಡಿಂಗ್, ಎಂ. ಜಿ. ರೋಡ್, ಫ್ಲೋರಾ ಫೌಂಟನ್, ಮುಂಬೈ - ೪೦೦ ೦೨೩



ನಾ. ಡಿಸೋಜ

ಊರಿನಲ್ಲಿ, ಅದೂ ಊರಿನ ಹೊಸ ಬಡಾವಣೆಯಾದ ನೀರ್‌ಕೋಡ್ ವಾರ್ಡಿನಲ್ಲಿ ಶೇಷಗಿರಿರಾವ್ ಎಂದರೆ ಯಾರಿಗೂ ಗೊತ್ತಾಗುವುದಿಲ್ಲ. ಸಹಜವಾಗಿ ಎಲ್ಲರೂ ಯಾವ ಶೇಷಗಿರಿರಾಯರು ? ಎಂದು ಮರುಪ್ರಶ್ನೆ ಹಾಕುವುದುಂಟು. ಆದರೆ ಹಳ್ಳದ ಮನೆ ಶೇಷಗಿರಿರಾಯರು ಅಂದರೆ ತಟ್ಟನೆ ಎಲ್ಲರಿಗೂ ಅವರು ಯಾರೆಂಬುದು ತಿಳಿದುಹೋಗುತ್ತದೆ.

ನೀರ್‌ಕೋಡ್ ವಾರ್ಡಿನಲ್ಲಿ ಏಳೆಂಟು ಜನ ಶೇಷಗಿರಿರಾಯರು ಇರುವುದರಿಂದಲೇ ಅವರನ್ನೆಲ್ಲ ಪ್ರತ್ಯೇಕ ಪ್ರತ್ಯೇಕವಾಗಿ ಗುರುತಿಸಲು ಅನುಕೂಲವಾಗುವಂತೆ ಜನ ಹಲವು ಅಡ್ಡ ಹೆಸರುಗಳನ್ನು ಇಟ್ಟಿದ್ದರು. ಮಹಡಿಮನೆ ಶೇಷಗಿರಿರಾಯರು, ಕಿವಿಕೂದಲು ಶೇಷಗಿರಿರಾಯರು, ಬೇಕರಿ ಶೇಷಗಿರಿರಾಯರು, ಸೋಡ ಅಂಗಡಿ ಶೇಷಗಿರಿರಾಯರು ಎಂದು ಅವರವರ ಗುಣ ಸ್ವಭಾವ, ದೈಹಿಕ ಚಹರೆ, ಮಾಡುವ ಕೆಲಸಗಳಿಗೆ ಅನುಗುಣವಾಗಿ ಹೆಸರನ್ನು ಜನ ಇಟ್ಟಿದ್ದರು. ಹೀಗೆ ಹೆಸರಿಸುವುದನ್ನು ಎಲ್ಲ ಶೇಷಗಿರಿರಾಯರೂ ಒಪ್ಪಿದ್ದರು. ಜನರೂ ಸಮ್ಮತಿಸಿದ್ದರು.

ಹಳ್ಳದ ಮನೆ ಶೇಷಗಿರಿರಾಯರು ಎಂದು ಇವರಿಗೆ ಜನರು ಹೆಸರಿಡಲು ಮುಖ್ಯವಾದ ಕಾರಣವೆಂದರೆ ಇವರ ಮನೆ ಹಳ್ಳದಲ್ಲಿ ಇದ್ದುದು.

ಪಟ್ಟಣದ ಪೂರ್ವದ ಅಂಚು ಮುಗಿದು ಮಂಕಾಳೆ ಗುಡ್ಡ ಎದ್ದು ನಿಂತಿರುವಲ್ಲಿ ಒಂದು ಸಣ್ಣ ಹಳ್ಳ ಹರಿದುಬರುತ್ತದೆ. ಇದನ್ನು ಕೂಡ ಮಂಕಾಳೆ ಹಳ್ಳ ಎಂದೇ ಕರೆಯುತ್ತಾರೆ. ಈ ಹಳ್ಳದ ಈ ಬದಿಯಲ್ಲಿ ಸಾಲಾಗಿ ಮುಂಡಿಗೆ ಪೊದೆಗಳು ಬೆಳೆದು ನಿಂತಿವೆ. ಗರಗಸದ ಮುಳ್ಳುಗಳನ್ನು ಹೊಂದಿರುವ ಈ ಮುಂಡಿಗೆ ಎಲೆಗಳ ಈಚೆಗೆ ಊರು ಇದೆ. ಊರು ಎಷ್ಟು ಸಾಧ್ಯವೋ ಅಷ್ಟು ಬೆಳೆದು ಹಳ್ಳ ಹಾಗೂ ಮುಂಡಿಗೆ ಪೊದೆಗಳ ಆ ಕಡೆ ತನ್ನ ಮೈ ಚಾಚಿಕೊಳ್ಳದೆ ಊರು ಇಲ್ಲಿಗೇನೆ ಮುಗಿದಿದೆ. ಅಲ್ಲದೆ ಮಂಕಾಳೆ ಗ್ರಾಮ ಪಂಚಾಯತಿಯವರು ಹಳ್ಳದ ಆಚೆಗಿನ ಪ್ರದೇಶ ತಮ್ಮದೆಂದು ತೋರಿಸಿಕೊಳ್ಳಲು ಕಂದಕ ತೋಡಿರುವುದು, ಮಂಕಾಳೆ ಗುಡ್ಡದ ಮೇಲೆ ನೀಲಗಿರಿ ಬೆಳೆಸಿರುವುದು ಊರು ಅತ್ತ ಕಡೆ ವಿಸ್ತರಿಸಿಕೊಳ್ಳಲು ಅಡ್ಡಿಯಾಗಿದೆ.

ಇಲ್ಲಿ ಮತ್ತೂ ಒಂದು ವಿಷಯವೆಂದರೆ ನೆಲ ತಟ್ಟನೆ ಈ ಪ್ರದೇಶದಲ್ಲಿ ಐವತ್ತು ಅರವತ್ತು ಅಡಿ ಕೆಳಗೆ ಕಡಿದು ಬಿರಿದಿರುವುದು. ನೀರಕೋಡು ವಾರ್ಡು ಎತ್ತರದಲ್ಲಿದ್ದರೆ ಅದರ ಒಂದು ತುದಿ, ಒಂದು ಸೆರಗು ಪಾತಾಳಕ್ಕೆ ಜಾರಿಕೊಂಡಿರುವುದು. ಈ ಪಾತಾಳದಲ್ಲಿ ಯಾರೂ ಮನೆಕಟ್ಟಲು ಮುಂದಾಗಿರಲಿಲ್ಲ. ಏಕೆಂದರೆ ವಾಹನ ಓಡಾಟಕ್ಕೆ ರಸ್ತೆಗಳಾಗಲಿ, ಇಳಿದು ಹತ್ತಲು ಮೆಟ್ಟಲುಗಳಾಗಲಿ ಇಲ್ಲದ್ದರಿಂದ ಈ ತಗ್ಗಿನ ಪ್ರದೇಶದಲ್ಲಿ ಕೆಲ ಪೊದೆಗಳು, ಮರಗಿಡ ಬಂಡೆಗಳು ಕೊರಕಲುಗಳು ಕಂದಕಗಳು ಇದ್ದುದರಿಂದ ಇಲ್ಲಿ ಮನೆ ಕಟ್ಟಲು ಯಾರೂ ಮುಂದಾಗಲಿಲ್ಲ. ಊರು, ಉಳಿದ ಮೂರು ದಿಕ್ಕುಗಳಲ್ಲಿ ವಿಸ್ತಾರವಾಗಿ ವಿಶಾಲವಾಗಿ ಬೆಳೆದು ಈ ಪೂರ್ವದ ಅಂಚು ಅಲ್ಲಿ ಹರಿಯುವ ಮಂಕಾಳೆ ಹಳ್ಳದಿಂದಾಗಿ, ಮುಂಡಿಗೆ ಪೊದೆಗಳಿಂದಾಗಿ ಮಂಕಾಳೆ ಗುಡ್ಡದಿಂದಾಗಿ ಯಾವುದೇ ಬದಲಾವಣೆಗೆ ಒಳಗಾಗದೆ ಉಳಿಯಿತು.

ಬಹಳ ದಿನಗಳಿಂದ ಈ ಪ್ರದೇಶ ಹಾಗೆಯೇ ಉಳಿಯಿತು. ಮತ್ತೆ ಎಷ್ಟು ದಿನ ಅದು ಹಾಗೇ ಉಳಿಯುತ್ತಿತ್ತೋ, ಒಂದು ದಿನ ಅಲ್ಲಿ ಹಳ್ಳದಲ್ಲಿ ಯಾರೋ ಪೊದೆ ಸವರಿ, ಗಿಡ ಕಡಿದು ಒಂದು ನೂರು ನೂರೈವತ್ತು ಅಡಿ ವಿಸ್ತಾರದ ಜಾಗ ಮಾಡುತ್ತಿರುವುದನ್ನು ನೀರಕೋಡ್ ಬಡಾವಣೆಯ ಜನ ಕಂಡರು.

''ಏನು ತೋಟ ಮಾಡತಾರಂತೋ ?''

''ಇಲ್ಲ... ಮನೆ ಕಟ್ಟುತ್ತಾರೋ ?''

ಎಂದು ಮೇಲೆ ಮನೆಗಳನ್ನು ಕಟ್ಟಿಕೊಂಡ ಜನ ಪಾತಾಳಕ್ಕೆ ಬಗ್ಗಿ ನೋಡಿ ಮಾತನಾಡಿಕೊಂಡರು.

ಇವರಿಗೆ ಉತ್ತರ ಸಿಗುವ ಮೊದಲೇ ಅಲ್ಲೊಂದು ಬಾವಿ ತೋಡುವ ಕೆಲಸ ಕೂಡ ಪ್ರಾರಂಭವಾಯಿತು.

''ಅವರು ತುಂಬಾ ಆಳಕ್ಕೆ ಬಾವಿ ತೋಡಬೇಕಾಗಿಲ್ಲಪ್ಪ. ಪಕ್ಕದಲ್ಲಿ ಹಳ್ಳ ಇದೆಯಲ್ಲ.. ಮೂವತ್ತು ಅಡಿಗೆಲ್ಲ ನೀರು ಬರುತ್ತೆ. ಅಲ್ಲಿ ಒಳ್ಳೆ ನೀರ ಸೆಲೆ ಇದೆ'' – ಎಂದು ಮೇಲಿನವರು ತೀರ್ಪು ನೀಡಿ ಆಯಿತು.

ಬಾವಿಯ ಜೇಡಿ ಮಣ್ಣನ್ನು ಮೇಲೆ ತೆಗೆದು ರಾಶಿ ಹಾಕುತ್ತಿರುವಾಗಲೇ ಅದರ ಮುಂಬದಿಯಲ್ಲಿ ಮನೆಕಟ್ಟಲು ತಳಪಾಯ ತೆಗೆಯುವ ಕೆಲಸ ಕೂಡ ಆರಂಭವಾಯಿತು.

ಅಷ್ಟು ಹೊತ್ತಿಗೆ ಅಲ್ಲಿ ಮನೆ ಕಟ್ಟುತ್ತಿರುವವರು ಯಾರು ? ಅವರೀಗ ಎಲ್ಲಿದ್ದಾರೆ ? ಅವರು ಏನು ಕೆಲಸ ಮಾಡುತ್ತಿದ್ದಾರೆ ? ಅವರ ಹೆಸರು ಏನು ಎಂಬಿತ್ಯಾದಿ ವಿವರಗಳು ಜನರ ಗಮನಕ್ಕೆ ಬಂದವು. ನೀರಕೋಡ ಬಡಾವಣೆಯ ಗೋದಮ್ಮ ಈ ಎಲ್ಲ ವಿಷಯ ಸಂಗ್ರಹಿಸಿ ತಂದಳು.

ಶರಾವತಿ ಯೋಜನೆಯ ಕಾರ್ಗಲ್ಲಿನಲ್ಲಿ ಬಿಲ್ಡಿಂಗ್ಸ್ ವಿಭಾಗದಲ್ಲಿ ಅಕೌಂಟೆಂಟ್ ಆಗಿ ಕೆಲಸ ಮಾಡುತ್ತಿದ್ದ ಶೇಷಗಿರಿರಾಯರು ಇಲ್ಲಿ ಮನೆ ಕಟ್ಟಿಸುತ್ತಿದ್ದಾರೆ. ಪುರಸಭೆಯಿಂದ ಇಲ್ಲಿ ಎರಡು ಎಕರೆ ಜಾಗ ಕೊಂಡಿದ್ದಾರೆ. ಈ ಕೊರಕಲು ಕಂದಕದಲ್ಲಿ ಮನೆ ತೋಟ ಎಲ್ಲ ಮಾಡಬೇಕು ಎಂಬ ವಿಚಾರ ಅವರಿಗಿದೆ. ಸದ್ಯಕ್ಕೆ ಬಾವಿ ಮನೆ ಪ್ರಾರಂಭಿಸಿದ್ದಾರೆ. ಕ್ರಮೇಣ ಉಳಿದ ಕೆಲಸವನ್ನೂ ಮಾಡುತ್ತಾರೆ. ಶೇಷಗಿರಿರಾಯರು ಅವರ ಹೆಂಡತಿ, ಮಗ ಮೂವರೇ ಇರುವವರು.

ಯೋಜನೆಯಲ್ಲಿ ತುಂಬಾ ಹಣ ಮಾಡಿದ್ದಾರೆ.

ಅವರ ಸ್ವಂತ ಊರು ಹಾಸನ.

ಆದರೆ ಅವರಿಗೆ ಊರಿಗೆ ತಿರುಗಿ ಹೋಗುವ ಮನಸ್ಸಿಲ್ಲ. ಇಲ್ಲಿಯೇ ಇರುವ ಆಸೆ.

ನೀರಕೋಡ್ ವಾರ್ಡಿನ ಜನ ಈ ಎಲ್ಲ ಮಾಹಿತಿಯನ್ನು ಪರಸ್ಪರ ಹಂಚಿಕೊಳ್ಳುತ್ತಿರುವಾಗಲೇ ಶೇಷಗಿರಿರಾಯರು ಬಾವಿ ನೋಡಲು ಬಂದರು. ತಳಪಾಯದ ಕೆಲಸ ಆಗುತ್ತಿರುವುದನ್ನು ಪರಿಶೀಲಿಸಲು ಬಂದರು. ತುಸು ತೆಳ್ಳನೆಯ ಕೋಲು ದೇಹ. ಚಪ್ಪಟೆ ಮುಖ. ಮುಖದ ಮೇಲೆ ನಗೆ ಅನ್ನುವುದು ಮೂಡುವುದೇ ಇಲ್ಲವೇನೋ ಅನ್ನುವಂತಹ ಚಹರೆ. ಎಲ್ಲರನ್ನೂ ಎಲ್ಲವನ್ನೂ ಅನುಮಾನದಿಂದಲೇ ನೋಡುವಂತಹಾ ಕಣ್ಣ ದೃಷ್ಟಿ. ಜನ [illegible] ಹೋದರೆ ಅವರೇ ದೂರ ಓಡುವಂತೆ ಕಾಣುತ್ತಿತ್ತು.

ಶೇಷಗಿರಿರಾಯರು ಗಿಡ ಬಳ್ಳಿ ಹಿಡಿದುಕೊಂಡು ಹಳ್ಳಕ್ಕೆ ಇಳಿದರು. ಅಲ್ಲೆಲ್ಲ ತಿರುಗಾಡಿದರು. ಕೆಲಸ ನೋಡಿದರು. ಅಲ್ಲಲ್ಲಿ ನಿಂತು ಪರಿಶೀಲಿಸಿದರು. ಮತ್ತೆ ಗಿಡ ಬಳ್ಳಿ ಹಿಡಿದು ಏಣಿ ಏರಿ, ನೀರಕೋಡ ಬಡಾವಣೆಯ [illegible]

ಹಿಡಿದು ನಡೆದು ಹೋದರು.

ಅವರು ತಮ್ಮನ್ನು ಮಾತನಾಡಿಸಬಹುದು ಎಂದು ಅಂಗಳದಲ್ಲಿ, ರಸ್ತೆ ಬದಿಯಲ್ಲಿ ನಿಂತ ನೀರಕೋಡ್ ಬಡಾವಣೆಯ ಹಲವರಿಗೆ ನಿರಾಶೆಯಾಯಿತು – ಶೇಷಗಿರಿ ರಾಯರು ಬೇಲಿಗುಂಟ ನಡೆದು ಹೋದಂತೆ ಅತ್ತ ಇತ್ತ ನೋಡದೆ ಹೋಗೇಬಿಟ್ಟರು.

ಕೆಲವೇ ದಿನಗಳಲ್ಲಿ ಮಮ್ಮುಕಾಕನ ಲಾರಿ ಕೆಂಪು ಕಲ್ಲುಗಳನ್ನು ತುಂಬಿಸಿಕೊಂಡು ಮುಖ್ಯರಸ್ತೆಯಲ್ಲಿ ಬಂದು ಶೇಷಗಿರಿರಾಯರು ಮನೆಕಟ್ಟುವಲ್ಲಿ, ಕೊರಕಲು ಕಂದಕದಲ್ಲಿ ತಾನೇ ಒಂದು ದಾರಿ ಮಾಡಿಕೊಂಡು ಇಳಿಯಿತು.

ಹೀಗೆ ಇಳಿದ ಲಾರಿಯ ಮೇಲಿದ್ದ ಕೂಲಿಯವರು ಶೇಷಗಿರಿರಾಯರ ನಿವೇಶನದ ಮೇಲೆ ಕೆಂಪುಕಲ್ಲುಗಳನ್ನು ಇಳಿಸಿದರು. ಕೆಳಗೆ ಇಳಿದ ಲಾರಿ ಮತ್ತೆ ಮೇಲುಸಿರು ಬಿಡುತ್ತ ಇಳಿದ ದಾರಿಯನ್ನೇ ಹಿಡಿದು ಮೇಲೆ ಏರಿತು. ಗಿಡಬಳ್ಳಿ ಪೊದೆಗಳು ಮಲಗಿ ಲಾರಿಗೆ ದಾರಿ ಬಿಟ್ಟುಕೊಟ್ಟವು.

ಮಮ್ಮುಕಾಕನ ಲಾರಿ ಮತ್ತೆ ಮತ್ತೆ ಬಂದಿತು.

ಮರಳು, ಸಿಮೆಂಟು ಬಂದು ಬಿದ್ದಿತು.

ನಿತ್ಯ ಕೂಲಿಗಳು ಹಳ್ಳಕ್ಕೆ ಇಳಿಯುವ ಒಂದು ದಾರಿ ಮಾಡಿಕೊಂಡು ಕೆಳಗೆ ಇಳಿದು ಮನೆಕಟ್ಟುವ ಕೆಲಸ ಪ್ರಾರಂಭಿಸಿದರು.




ಶೇಷಗಿರಿರಾಯರ ಕೈಲಿ ಸಾಕಷ್ಟು ಹಣವಿದ್ದುದರಿಂದಲೋ ಏನೋ ಮನೆ ಕಾಮಗಾರಿ ತ್ವರಿತ ಗತಿಯಲ್ಲಿ ನಡೆಯಿತು. ಜೊತೆ ಜೊತೆಗೇನೆ ರಾಯರು ಮನೆಯ ಹಿಂದೆ ಮುಂದೆ ಬಾಳೆ ಗಿಡ ನೆಟ್ಟರು. ಚಿಕ್ಕು, ತೆಂಗು, ಮಾವು ಎಂದು ಸಸಿ ಬೆಳೆಸಿದರು.

ನೀರಕೋಡ್ ವಾರ್ಡಿನ ಜನರನ್ನು ಅವರೇನು ದೂರ ಮಾಡಲಿಲ್ಲ. ಹಾಗೆಂದು ಯಾರನ್ನೂ ಅತಿಯಾಗಿ ಹಚ್ಚಿಕೊಳ್ಳುವ, ಮೈಮೇಲೆ ಬಿದ್ದು ಮಾತನಾಡಿಸುವ ಗುಣವೂ ಅವರಿಗೆ ಇರಲಿಲ್ಲ.

''ಮನೆ ಕೆಲಸ ನಡೀತಿದೆಯೆ ?'' ಎಂದು ಅವರು ಕೇಳಿದರೆ ಇವರು - ''ಹೌದು'' ಎಂದಷ್ಟೇ ಹೇಳುತ್ತಿದ್ದರು.

ಈ ವಾರ್ಡಿನ ಕೆಲವರಿಗೆ ಶೇಷಗಿರಿರಾಯರ ಹತ್ತಿರ ಮಾತನಾಡುವಾಸೆ. ಅವರನ್ನು ನಿಲ್ಲಿಸಿಕೊಂಡು –

''ಮನೆ ಬಹಳ ಬೇಗ ಆಗತಿದೆ,'' ಎಂದರೆ ರಾಯರು –

''... ಹೌದು...'' ಎಂದು ಉತ್ತರಿಸುತ್ತಿದ್ದರು.

ಕೆಲವರು - ''ಬಾವಿ ತೆಗಿಸಿ ಒಳ್ಳೆದು ಮಾಡಿದ್ರಿ'' ಎಂದರೆ, ರಾಯರು – ''ಹೌದೆ ?'' ಎಂದು ಕೇಳುತ್ತಿದ್ದರು.

''ಹೌದು. ಇದು ನೀರಕೋಡ್ ವಾರ್ಡು ಹೌದು. ಆದರೆ ನಲ್ಲಿ ನೀರು ಇಲ್ಲಿಗೆ ಏರೋದಿಲ್ಲ. ಬೇಸಿಗೆ ಕಾಲದಲ್ಲಿ ಡ್ಯಾಮ್‌ನಲ್ಲಿ ನೀರು ಕಡಿಮೆ ಆದ ಹಾಗೆ ಇಲ್ಲಿಗೆ ನೀರು ಬರೋದೇ ಇಲ್ಲ. ಈ ವಾರ್ಡಿನ ಹೆಂಗಸರಿಗೆ ನೀರನ್ನು ಹುಡುಕಿಕೊಂಡು ಹೋಗೋದೇ ಒಂದು ಕೆಲಸ'' ಎಂದು ಹೇಳುತ್ತಿದ್ದರು ಇವರನ್ನು ನಿಲ್ಲಿಸಿಕೊಂಡು ಮಾತನಾಡಿಸಿದವರು.

ಈ ಮಾತಿಗೂ ಶೇಷಗಿರಿರಾಯರು – 'ಹೌದೇ ?' ಅನ್ನುತ್ತಿದ್ದರು.

ಅವರು ತೋಡಿಸಿದ ಬಾವಿಯಲ್ಲಂತೂ ಬರಪೂರ ನೀರಿತ್ತು. ಕೆಲಸಕ್ಕೆಂದು ತೆಗೆದಷ್ಟೂ ನೀರು ತುಂಬಿಕೊಳ್ಳುತ್ತಿತ್ತು. ಗಿಡಗಳಿಗೆ ಹಾಕಿದಷ್ಟೂ ಬಾವಿಗೆ ನೀರು ಬರುತ್ತಿತ್ತು. ಪಕ್ಕದಲ್ಲಿ ಹರಿಯುತ್ತಿದ್ದ ಮಂಕಾಳೆ ಹಳ್ಳದಿಂದಾಗಿ ನೀರಿನ ಕೊರತೆ ಬೇಸಿಗೆಯಲ್ಲೂ ಆಗಲಿಕ್ಕಿಲ್ಲ ಎಂದವರು ಸಂತಸಪಟ್ಟರು.

ಅಂತು ಕೆಲವೇ ತಿಂಗಳುಗಳಲ್ಲಿ ಮನೆಕೆಲಸ ಮುಗಿಯಿತು. ಹಳ್ಳದಲ್ಲಿ ಗಿಡಮರ ಪೊದೆಗಳ ನಡುವೆ ಈ ಮನೆ ಗುಪ್ತವಾಗಿ ಉಳಿದಂತೆ ಕಾಣತೊಡಗಿತು. ಸುತ್ತ ಎತ್ತರದ ಗೋಡೆ. ಗೋಡೆಯ ಮೇಲೆ ತಂತಿ-ಬೇಲಿ. ಮುಂಬದಿಯಲ್ಲಿ ಅಷ್ಟೇ ಭದ್ರವಾದ ಕಬ್ಬಿಣದ ಗೇಟು. ಬಾಳೆ ಗಿಡಗಳೆಲ್ಲ ಬೆಳೆದವು. ಇತರೆ ಸಸಿಗಳು ಕೂಡ ಆಳೆತ್ತರ ನಿಂತವು. ಹೂ ಗಿಡಗಳು ಕ್ರೋಟನ್‌ಗಳು ಅಲ್ಲಲ್ಲಿ ಕಂಗೊಳಿಸಿದವು.

ಮಮ್ಮುಕಾಕನ ಲಾರಿಗಳ ತಿರುಗಾಟದಿಂದಾಗಿ ಒಂದು ರಸ್ತೆಯಾಯಿತು. ಕೆಲಸಗಾರರು, ಕೂಲಿಯವರು ತಿರುಗಾಡಲೆಂದು ಒಂದು ಮೆಟ್ಟಲು ದಾರಿ ಮಾಡಿದರು. ಕಾಡುಗಲ್ಲನ್ನೇ ಜೋಡಿಸಿ ಈ ದಾರಿಗೆ ಆಕಾರ ಕೊಟ್ಟರು.

ಶೇಷಗಿರಿರಾಯರು ಒಂದು ದಿನ ನೋಡಿ ಗೃಹಪ್ರವೇಶ ಏರಿಸಿಕೊಂಡರು. ಕಾರ್ಗಲ್ಲು, ಲಿಂಗನಮಕ್ಕಿ, ಜೋಗ ಎಂದೆಲ್ಲ ರಾಯರ ಗುರುತು ಪರಿಚಯದ ಜನ ಬಂದರು.

ನೀರಕೋಡು ಬಡಾವಣೆಯ ಮುಖ್ಯರಸ್ತೆಗೆ ಬಂದು – ''ಇಲ್ಲಿ ಹೊಸ ಮನೆ 'ಜಲ ಸನ್ನಿಧಿ' ಅಂತ ಎಲ್ಲಿದೆ ?'' ಎಂದು ಕೇಳಿದರು. ರಾಯರು ತಮ್ಮ ಮನೆಗೆ ಜಲ ಸನ್ನಿಧಿ ಎಂದು ಹೆಸರನ್ನು ಇಟ್ಟಿದ್ದರು.

''ಅದೇ ಇರಬೇಕು ನೋಡಿ'' ಎಂದು ಬಡಾವಣೆಯ ಜನ ತೋರಿಸಿದಾಗ ಅವರು – ''...ಓ... ಶೇಷಗಿರಿರಾಯರು ಪಾತಾಳದಲ್ಲಿ ಮನೆ ಕಟ್ಟಿದ್ದಾರಲ್ಲಪ್ಪ'' ಎಂದು ಇರುವ ಮೆಟ್ಟಿಲ ಮೂಲಕ ನಿಧಾನವಾಗಿ ಕೆಳಗೆ ಇಳಿದರು.

ಶೇಷಗಿರಿರಾಯರು ಮನೆಗೆ ಏನೇ ಹೆಸರನ್ನು ಇಡಲಿ, ನೀರ್‌ಕೋಡ ಬಡಾವಣೆಯ ಜನ ಅದನ್ನು ಹಳ್ಳದ ಮನೆ ಎಂದು ಕರೆಯತೊಡಗಿದರು. ಈಗಾಗಲೇ ಈ ಬಡಾವಣೆಯ ಕೆಲ ರಸ್ತೆಗಳಲ್ಲಿ ಬೇರೆ ಬೇರೆ ಅಡ್ಡ ಹೆಸರುಗಳಿಂದ ಕರೆಯಲ್ಪಡುತ್ತಿದ್ದ ಶೇಷಗಿರಿರಾಯರುಗಳು ಇದ್ದುದರಿಂದ ಇವರು ಹಳ್ಳದ ಮನೆ ಶೇಷಗಿರಿರಾಯರಾದರು.

ತಾವು ಮನೆಗೆ ಒಂದು ಚೆಂದದ ಹೆಸರನ್ನು ಇಟ್ಟಿದ್ದರೂ ಜನ ಅದನ್ನು ಬೇರೊಂದು ಹೆಸರಿನಲ್ಲಿ ಕರೆಯುತ್ತಾರಲ್ಲ ಎಂಬ ಬಗ್ಗೆ ರಾಯರಿಗೆ ಬೇಸರವೂ ಆಯಿತು. ಆದರೆ ರಾಯ ರಾಗಲಿ ಅವರ ಹೆಂಡತಿ, ಏಕೈಕ ಮಗನಾಗಲಿ ಜನರ ಅಭಿಪ್ರಾಯ ವಿಚಾರಗಳ ಬಗ್ಗೆ ಎಂದೂ ತಲೆಕೆಡಿಸಿಕೊಂಡವರಲ್ಲವಾದ್ದರಿಂದ ಈ ಬಗ್ಗೆ ಅವರು ಹೆಚ್ಚು ಯೋಚನೆಯನ್ನೂ ಮಾಡಲಿಲ್ಲ.

ಶೇಷಗಿರಿರಾಯರ ಹೆಂಡತಿ ಜಲಜಾಕ್ಷಮ್ಮ ಪ್ರತಿ ಗುರುವಾರ ನೀರ್‌ಕೋಡ ವಾರ್ಡಿನ ರಸ್ತೆಗಳ ಮೇಲೆ ಕಾಣಿಸಿಕೊಳ್ಳುತ್ತಿದ್ದರು. ಕೈಯಲ್ಲಿ ಸ್ಟೀಲಿನ ಹಣ್ಣು ಕಾಯಿ ಪಾತ್ರೆ ಹಿಡಿದು ಅವರು ರಾಯರ ಮಠಕ್ಕೆ ಹೋಗುತ್ತಿದ್ದರು. ಹೋಗುವಾಗಲೂ ಗಂಭೀರ. ಬರುವಾಗಲೂ ಗಂಭೀರ. ಅತ್ತಿತ್ತ ನೋಡುವುದಿಲ್ಲ, ತಲೆ ಎತ್ತುವುದಿಲ್ಲ, ಅವರ ರೇಶಿಮೆ ಸೀರೆಯ ಸರಭರ ಬಿಟ್ಟರೆ ಬೇರೆ ಸದ್ದಿಲ್ಲ. ಅಂಗಳದಲ್ಲಿ ಬಾಗಿಲಲ್ಲಿ ಹೆಂಗಸರು ನಿಂತಿರುತ್ತಿದ್ದರು. ಜಲಜಾಕ್ಷಮ್ಮನನ್ನು ನೋಡಿ ಮುಗುಳು ನಗುತ್ತಿದ್ದರು. ಆ ನಗು ಇವರ ಕಣ್ಣಿಗೆ ಬೀಳುತ್ತಿರಲಿಲ್ಲ.

ಬಡಾವಣೆಯ ಮನೆ ಮನೆಗಳಿಗೆ ಹೋಗಿ ಬಾಗಿಲು ತಟ್ಟಿ - 'ಏನು ಚಂದ್ರಮ್ಮ ಆರಾಮಾಗಿದ್ದೀರ ?'

''ಏನು ಮೀನಾಕ್ಷಿ ಬಾಲು - ಮೊಮ್ಮಗ ಮಲಗಿದ್ದಾನ ?''

''ಏನು ಸಾವಿತ್ರಮ್ಮ - ಮಗಳ ಕಾಗದ ಬಂದಿತ್ತೆ ?''

''- ರಂಗಮ್ಮ ಅಡಿಗೆ ಆಯ್ತೆ ?''

''ಸರಸ್ವತಮ್ಮ - ಇವತ್ತು ಕಾಲೇಜಿಗೆ ರಜಾನೆ ?''

ಎಂದು ಇಡೀ ಬಡಾವಣೆಯ ಕ್ಷೇಮ ಸಮಾಚಾರ ಕೇಳುತ್ತಿದ್ದ, ಲೈಟು ಕಂಬಗಳನ್ನೂ ಮಾತನಾಡಿಸುವ ಶಕ್ತಿಯಿದ್ದ ಗೋದಮ್ಮ ಕೂಡ ಹಳ್ಳದ ಮನೆ ಜಲಜಾಕ್ಷಮ್ಮನವರನ್ನು ನಿಲ್ಲಿಸಿ ಮಾತನಾಡಿಸಲಾಗದೆ ಸೋತಳು.

ಇನ್ನು ಶೇಷಗಿರಿರಾಯರು, ಜಲಜಾಕ್ಷಮ್ಮನವರ ಏಕೈಕ ಸುಪುತ್ರ ಕೂಡ ಬೇರೆಯಾಗಿರಲಿಲ್ಲ. ಪಟ್ಟಣದ ಒಂದು ಬ್ಯಾಂಕಿನಲ್ಲಿ ಕೆಲಸ ಮಾಡುತ್ತಿದ್ದ ಈತ ಕೂಡ ಬಾಯಿಗೆ ಬೀಗ ಹಾಕಿಕೊಂಡವನೆ.

ಇವರನ್ನೆಲ್ಲ ಗಮನಿಸಿದ ಗೋದಮ್ಮ –

''ಇವರು ಜನರ ಮಧ್ಯೆ ಇರಲೇ ಇಲ್ಲ ಅಂತ ಕಾಣುತ್ತೆ. ಜನ ಅಂದರೆ ನೂರು ಮಾರು ಹೋಗತಾರೆ... ಕಾಡು ಮನುಷ್ಯರು...'' ಎಂದು ತೀರ್ಪು ಕೊಟ್ಟಾಯಿತು. ಜನರ ಮುದ್ರೆಯೂ ಅದಕ್ಕೆ ಬಿದ್ದಿತು.

* * *

ಹಳ್ಳದ ಮನೆ ಶೇಷಗಿರಿರಾಯರು ಇಲ್ಲಿಗೆ ಬಂದು ಮೂರು ತಿಂಗಳಾಯಿತು ಅನ್ನುವಾಗ ಪಟ್ಟಣದಲ್ಲಿ ನೀರಿನ ಬರ ಪ್ರಾರಂಭವಾಯಿತು. ಪ್ರತಿನಿತ್ಯ ಎರಡೆರಡು ಗಂಟೆ ಬರುತ್ತಿದ್ದ ನೀರು ಒಂದು ಗಂಟೆ ಬರತೊಡಗಿತು. ಕೆಲ ದಿನಗಳ ನಂತರ ಎರಡು ದಿನಕ್ಕೊಮ್ಮೆ ಎಂದರು. ಇದು ಕೂಡ ಬದಲಾಗಿ ಮೂರು ದಿನಕ್ಕೊಮ್ಮೆ ಎಂದಾಯಿತು. ನಲ್ಲಿ ತಿರುಗಿಸಿದರೆ ಕೇವಲ ಬಿಸಿಗಾಳಿ ಬರತೊಡಗಿತು.

ಹಾಗೆಯೇ ಪುರಸಭೆಯ ಟ್ಯಾಂಕರೊಂದು ಅಲ್ಲಲ್ಲಿ ನಿಂತು ಒಂದು ಎರಡು ಬಕೇಟು ನೀರು ನೀಡಿ ಹಿಂತಿರುಗಿತು. ಇದಕ್ಕೂ ಹೊಡೆದಾಟ ಬಡಿದಾಟ - ಜಗಳ.

ಬಡಾವಣೆ ಗಂಡಸರು ಸೈಕಲ್ಲಿಗೆ ಪ್ಲಾಸ್ಟಿಕ್ ಕೊಡಪಾನಗಳನ್ನು ಕಟ್ಟಿಕೊಂಡು ನೀರ ಸೇವೆಗೆ ಹೊರಟರು. ಹೆಂಗಸರು ಕೂಡ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು ಬೀದಿಗೆ ಇಳಿದರು.

ನಲ್ಲಿಯಲ್ಲಿ ನೀರು ಬರುವುದು ನಿಂತುಹೋಗಿತ್ತು.

ಈಗ ನೀರಿಗಾಗಿ ಬಾವಿಗಳನ್ನು ಹುಡುಕಿಕೊಂಡು ಹೋಗುವ ಪರಿಸ್ಥಿತಿ.

ಆದರೆ ಮನೆಗೊಂದರಂತೆ ಇದ್ದ ಬಾವಿಗಳನ್ನೆಲ್ಲ ನಲ್ಲಿ ಬಂದ ನಂತರ ಮುಚ್ಚಲಾಗಿತ್ತು. ಇಲ್ಲವೇ ಅವೇ ಮುಚ್ಚಿಹೋಗಿದ್ದವು. ಅಲ್ಲೊಂದು ಇಲ್ಲೊಂದು ಬಾವಿ ಇದ್ದರೂ ನೀರು ಕೆಳಗೆ ಇಳಿದಿತ್ತು. ಕೆಲ ಬಾವಿಗಳು ಒಣಗಿದ್ದವು.

ಆ ಮನೆಗಳವರೇ ಸಣ್ಣ ಸಣ್ಣ ಪಾತ್ರೆ ಇಳಿಬಿಟ್ಟು ನೀರನ್ನು ಗೋರುತ್ತಿದ್ದರು.

ನೀರಕೋಡ್ ಬಡಾವಣೆಯ ಎರಡು ಪ್ರಮುಖ ಬೀದಿಗಳಲ್ಲಿ ಎರಡು ಬಾವಿಗಳಿದ್ದವು.

ಒಂದು ಚಂದ್ರಮ್ಮನ ಮನೆ ಬಾವಿ. ಇನ್ನೊಂದು ಸಾವಿತ್ರಮ್ಮನ ಮನೆ ಬಾವಿ.

ಎಲ್ಲ ಜನ ಈ ಬಾವಿಗಳ ಮೇಲೆ ಹೋಗಿ ಮುತ್ತಿಗೆ ಹಾಕಿದ ಗಂಟೆಯೊಳಗೆ ಬಾವಿಗಳು ಬರಿದಾಗುತ್ತಿದ್ದವು.

ಆಗ ಗೋದಮ್ಮ– ''ಯೋಚನೆ ಮಾಡಬೇಡಿ... ಹಳ್ಳದ ಮನೆ ಬಾವೀಲಿ ನೀರಿದೆ. ಆ ಬಾವಿ ಒಣಗೋದಿಲ್ಲ. ಅಲ್ಲಿಂದ ಒಂದೊಂದು ಕೊಡಪಾನ ನೀರು ತರೋಣ ಬನ್ನಿ... ಬನ್ನಿ...''

ಈ ಮಾತು ಬಡಾವಣೆಯ ಎಲ್ಲರಿಗೂ ಸಂತಸ ತಂದಿತು. ಐವತ್ತು ಮೆಟ್ಟಿಲು ಇಳಿದರೆ ರಾಯರ ಮನೆ. ಮಂಕಾಳೆ ಹಳ್ಳದಲ್ಲಿ ತೆಳುವಾಗಿ ನೀರು ಹರಿಯುತ್ತದೆ. ಆದರೆ ರಾಯರ ಮನೆ ಬಾವಿಯಲ್ಲಿ ನೀರಿದೆ.

ಬಡಾವಣೆಯ ಎಲ್ಲ ಹೆಂಗಸರೂ ಕೊಡಪಾನ ಹಿಡಿದು ಕೆಳಗೆ ಇಳಿದರು.

ಪುರಸಭೆ ನೀರಿನ ಟ್ಯಾಂಕ್ ಬರುವ ತನಕ ಒಂದು ಕೊಡಪಾನ ನೀರು ಸಿಕ್ಕರೆ ಸಾಕಲ್ಲ. ಇಲ್ಲಿ ಈ ಮನೆಯಾದದ್ದು ಒಳ್ಳೆಯದಾಯಿತು. ನೀರನ್ನು ಹುಡುಕಿಕೊಂಡು ಇಗರ್ಜಿ ಬಾವಿಗೋ, ಸರಕಾರಿ ಬಾವಿಗೋ ಹೋಗುವುದು ತಪ್ಪಿತಲ್ಲ.

ಗೋದಮ್ಮ, ಮೀನಾಕ್ಷಿ ಬಾಯಿ, ಸಾವಿತ್ರಮ್ಮ, ರಂಗಮ್ಮ ಇನ್ನೂ ಹಲವರು ಕೊಡಪಾನ ಹಿಡಿದು ಜಾರುವ ಮೆಟ್ಟಿಲುಗಳನ್ನು ಇಳಿದು ''ಜಲಸನ್ನಿಧಿ''ಗೆ ಬಂದರು.

ಅಲ್ಲಿ ಹೋಗಿ ನಿಂತದ್ದಷ್ಟೆ. ಕಬ್ಬಿಣದ ಗೇಟು ಮುಚ್ಚಲಾಗಿತ್ತು. ಅದಕ್ಕೊಂದು ಹೊಸದಾದ ಹಿತ್ತಾಳೆ ಬೀಗ, ಬಿಸಿಲಿಗೆ ಲಕಲಕ ಹೊಳೆಯುತ್ತಿತ್ತು.

ಗೋದಮ್ಮ ಗೇಟು ಹಿಡಿದು ಅಲ್ಲಾಡಿಸಿ –

''ಜಲಜಾಕ್ಷಮ್ಮ... ಜಲಜಾಕ್ಷಮ್ಮ'' ಎಂದು ಕೂಗಿದಳು. ಐದಾರುಬಾರಿ ಕೂಗಿದ ನಂತರ ಜಲಜಾಕ್ಷಮ್ಮ ಬಂದರು. ಖಾಲಿ ಕೊಡಗಳ ದರ್ಶನವಾದದ್ದೇ ಅವರು –

''ನಮ್ಮ ಬಾವೀನೂ ಖಾಲಿಯಾಗಿದೆ... ನೀರಿಲ್ಲ'' ಎಂದು ಮುಖಮುರಿದು ಹೇಳಿ ಮನೆಯೊಳಗೆ ಮಾಯವಾದಳು.

ಗೋದಮ್ಮ ಎಲ್ಲರ ಮುಖ ನೋಡಿದಳು.

ಎಲ್ಲರೂ ಒಬ್ಬೊಬ್ಬರಾಗಿ ಅಲುಗಾಡುವ ಕಲ್ಲಿನ ಮೆಟ್ಟಿಲುಗಳ ಮೇಲೆ ಕಾಲಿರಿಸಿ ದಿಣ್ಣೆ ಏರಿದರು. ಮೇಲೆ ಬಂದು ತಿರುಗಿ ನೋಡಿದಾಗ ಜಲಸನ್ನಿಧಿಯ ಒಳ ಭಾಗದಲ್ಲಿ ರಾಯರು ಪೈಪು ಹಿಡಿದು ಹೂವಿನ ಗಿಡಗಳಿಗೆ ನೀರುಣಿಸುತ್ತಿರುವುದು ಕಂಡಿತು.

ನೀರಕೋಡ್ ಬಡಾವಣೆಯ ಜನ ನೀರಿಗಾಗಿ ತುಂಬಾ ತೊಂದರೆ ಪಟ್ಟುಕೊಂಡರು. ಮುಂದಿನ ಹದಿನೈದು-ಇಪ್ಪತ್ತು ದಿನಗಳವರೆಗೆ ಈ ಕಷ್ಟ ಮುಂದುವರಿದು, ಒಂದು ದಿನ ಬರಿದಾದ ಆಗಸದಲ್ಲಿ ಬಿಳಿ ಮುಗಿಲು ಕಾಣಿಸಿಕೊಂಡು, ಕ್ರಮೇಣ ಅದು ಕಪ್ಪಗಾಗಿ, ಸೆಖೆ ಅಧಿಕವಾಗಿ, ಗಾಳಿ ಬೀಸಿ, ಮರಗಳು ತೂಗಾಡಿ ಮಳೆ ಬಂದೇಬಿಟ್ಟಿತು. ಮುಂದಿನ ದಿನಗಳಲ್ಲಿ ನೀರಿನ ಅಭಾವ ಮಾಯವಾಯಿತು. ಆದರೆ ನೀರಕೋಡ್ ಬಡಾವಣೆಯ ಎರಡು ರಸ್ತೆಗಳ ಜನ ಹಳ್ಳದ ಮನೆಯ ಗೇಟಿಗೆ ತೂಗುಬಿದ್ದ ಹಿತ್ತಾಳೆ ಬೀಗವನ್ನು ಮರೆಯಲಿಲ್ಲ.

ಕಾಲ ಬದಲಾಗುವುದು ಪ್ರಕೃತಿ ನಿಯಮ.

ಮಳೆಗಾಲ ಮುಗಿಯುತ್ತಿದೆ ಅನ್ನುವಾಗ ಚಳಿಗಾಲ ಆರಂಭವಾಯಿತು. ಹಿಂದೆಯೇ ಹಬ್ಬಗಳು, ಮದುವೆಗಳು.

ಹಳ್ಳದಮನೆಯಲ್ಲಿ ಏನೋ ಸಡಗರ ಸಂಭ್ರಮ. ಅಲ್ಲಿಂದ ಇಲ್ಲಿಂದ ಬಂದು ತುಂಬಿಕೊಂಡ ನೆಂಟರು.

''ರಾಯರ ಮಗನಿಗೆ ಮದುವೆಯಂತೆ'' – ಎಂಬ ಸುದ್ದಿ ತಂದಳು ಗೋದಮ್ಮ.



''ಹೆಣ್ಣು ಯಾರೋ ?''

''ಮೈಸೂರಿನ ಹುಡುಗಿಯಂತೆ. ಅನುಕೂಲವಾಗಿದ್ದಾರೆ... ಹುಡುಗಿ ಎಂ.ಎ. ಮಾಡಿ ಕೊಂಡಿದ್ದಾಳಂತೆ...'' ಎಂದು ಗೋದಮ್ಮ ವರದಿ ಒಪ್ಪಿಸಿದಳು.

ಅವರು ಜನರನ್ನು ಮಾತನಾಡಿಸದಿದ್ದರೇನಂತೆ. ಜನರಿಗೆ ವಿಷಯ ತಿಳಿಯುವುದಿಲ್ಲವೇ ? ಹಳ್ಳದ ಮನೆಯವರು ಜವಳಿ ತೆಗೆದರು. ಹಳ್ಳದ ಮನೆಯವರು ಬಂಗಾರ ಮಾಡಿಸಿದರು. ಹಳ್ಳದ ಮನೆಯವರು ಊರಿನ ಕಲ್ಯಾಣ ಮಂಟಪವನ್ನು ಇಂತಹ ದಿನ ಕಾದಿರಿಸಿದ್ದಾರೆ. ಮದುವೆಯ ಆಮಂತ್ರಣ ಪತ್ರಿಕೆಗಳು ಮುದ್ರಣಗೊಂಡಿವೆ.

ಹೀಗೆ ಎಲ್ಲ ವಿಷಯಗಳೂ ನೀರ್‌ಕೋಡ್ ಬಡಾವಣೆಯ ಎಲ್ಲರಿಗೂ ತಿಳಿದುಬಂದಿತು.

ವಿಚಿತ್ರವೆಂದರೆ ಈ ಬಡಾವಣೆಯಲ್ಲಿ ಒಂದೆರಡು ಮನೆ ಬಿಟ್ಟರೆ ಬೇರೆ ಯಾರಿಗೂ ಆಹ್ವಾನ ಪತ್ರಿಕೆ ನೀಡಲಾಗಲಿಲ್ಲ. ಬ್ಯಾಂಕ್ ಮ್ಯಾನೇಜರ್ ಚಂದ್ರಶೇಖರ್‌ಗೆ ಸ್ವತಃ ಶೇಷಗಿರಿರಾಯರೇ ಆಹ್ವಾನ ಪತ್ರಿಕೆ ನೀಡಿ ಮದುವೆಗೆ ಆಹ್ವಾನಿಸಿದರು. ಹೀಗೆಯೇ ಲೋಕೋಪಯೋಗಿ ಇಲಾಖೆ ಮ್ಯಾನೇಜರ್ ಶ್ರೀಧರರಾಯರನ್ನೂ ಅವರು ಮದುವೆಗೆ ಕರೆದರು.

ಆದರೆ ಚಂದ್ರಶೇಖರ್ ಹೆಂಡತಿ ಮೀನಾಕ್ಷಿ ಬಾಯಿ – ''ನೀವು ಹೋಗಿಬನ್ನಿ... ನನಗೆ ಅವರು ಮಾಡಿರೋ ಅವಮಾನವನ್ನು ನಾನು ಮರೆತಿಲ್ಲ...'' ಎಂದಳು.

ಶ್ರೀಧರರಾಯರ ಹೆಂಡತಿ ಸರಸ್ವತಮ್ಮನವರದೂ ಇದೇ ತಕರಾರು.

ಹಳ್ಳದ ಮನೆ ಗೇಟಿನವರೆಗೆ ಹೋಗಿ ಬರೀ ಕೊಡ ಹಿಡಿದುಕೊಂಡು ಬಂದುದನ್ನು ಅವರು ಹೇಗೆ ಮರೆತಾರು ?

ಆದರೂ ಮದುವೆ ಏನೂ ನಿಲ್ಲಲಿಲ್ಲ.

ಮದುವೆ ಚೆನ್ನಾಗಿಯೇ ನಡೆದು ಹಳ್ಳದಮನೆ ಶೇಷಗಿರಿರಾಯರು, ಅವರ ಹೆಂಡತಿ ಮಗ, ಸೊಸೆಯನ್ನು ಮನೆತುಂಬಿಸಿಕೊಂಡರು.

ಹಳ್ಳದಮನೆಗೆ ಸೊಸೆ ಬಂದರೆ ನಮಗೇನು ಬಂತು ಭಾಗ್ಯ ಎಂದು ನೀರ್‌ಕೋಡ್ ಬಡಾವಣೆಯವರು ಅಂದುಕೊಂಡರು.

* * *

ಒಂದು ದಿನ ಬೆಳಿಗ್ಗೆ ಗಂಟೆ ಒಂಬತ್ತಾದರೂ ಮೇಲಿನಿಂದ ಇಳಿಬಿದ್ದ ಮಂಜಿನ ಬಿಳಿ ಪರದೆ ಕರಗಿರಲಿಲ್ಲ. ನೀರ್‌ಕೋಡ್ ಬಡಾವಣೆ ದಪ್ಪ ಮಂಜಿನ ಮರೆಯಲ್ಲಿ ಮಲಗಿತ್ತು.

ಆಗ ಹಳ್ಳದ ಮನೆಯಿಂದ ತಿಳಿಹಸಿರು ಸೀರೆಯುಟ್ಟ ಯುವತಿಯೋರ್ವಳು ಮೆಟ್ಟಿಲುಗಳನ್ನೇರಿ ಬಡಾವಣೆಯ ಪ್ರಮುಖ ರಸ್ತೆಗೆ ಬಂದಳು. ತಿಳಿಹಸಿರು ಬಣ್ಣದ ರವಿಕೆ, ಸೀರೆಯ ಅಂಚು ತಿಳಿ ಗುಲಾಬಿ ಬಣ್ಣದ್ದು. ಅವಳ ಕುತ್ತಿಗೆಯಲ್ಲಿ ತೆಳುವಾದ ತಾಳಿ ಚೈನು. ಕಿವಿಯಲ್ಲಿ ಹಗುರವಾದ ನಕ್ಷತ್ರ. ಮುಡಿಯಲ್ಲಿ ಒಂಟಿ ಗುಲಾಬಿ. ತಲೆಗೂದಲನ್ನು ಸಡಿಲವಾಗಿ ಕಟ್ಟಿ ಹಿಂದೆ ಕಟ್ಟಿದ್ದಾಳೆ. ಮುಖದ ಮೇಲಿನ ಮಂದಹಾಸ ಮಂಜಿನ ಮರೆಯಲ್ಲಿ ಮಿಂಚುತ್ತಿದೆ. ಸೀರೆಯ ನೆರಿಗೆಗಳು ಮೃದುವಾಗಿ ಚಿಮ್ಮುತ್ತಿವೆ. ಕಾಲ ಸರಪಳಿ ಸದ್ದು ಮಾಡುತ್ತಿದೆ.

ಇವಳು ರಸ್ತೆಗೆ ಬಂದದ್ದೇ ರಸ್ತೆಗೊಂದು ಸೊಬಗು ಬಂದಿತು.

ಗೋದಮ್ಮ ನಿಂತು ನೋಡಿದಳು.

ಮೀನಾಕ್ಷಮ್ಮ ರಂಗೋಲಿ ಹಾಕುವುದನ್ನು ಮರೆತಳು.

ಚಂದ್ರಮ್ಮ ಅಂಗಳಕ್ಕೆ ನೀರು ಚಿಮುಕಿಸುತ್ತಿದ್ದವಳು ಗೊಂಬೆಯಂತೆ ನಿಂತಳು.

ಸರಸ್ವತಮ್ಮ – ''ಚಂದ್ರಮ್ಮ... ಶೇಷಗಿರಿರಾಯರ ಸೊಸೆ ಇರಬೇಕು ಅಲ್ವಾ ?'' ಎಂದು ಕಿರುದನಿಯಲ್ಲಿ ಜಗಲಿಯ ಮೇಲೆ ಕುಳಿತು ಹೂ ಕಟ್ಟುತ್ತಿದ್ದ ಚಂದ್ರಮ್ಮನನ್ನು ಕೇಳಿದಳು.

ಐದಾರು ಜೋಡಿ ಕಣ್ಣುಗಳು ಈ ಯುವತಿಯನ್ನು ಕಣ್ಣುಗಳ ಮೂಲಕ ತಮ್ಮೊಳಗೆ ತುಂಬಿಕೊಳ್ಳುತ್ತಿರಲು ಈ ಯುವತಿ ಮನೆಗಳ ಎದುರಿನಿಂದ ನಡೆದು ಹೋದಳು.

ಹೋಗುವಾಗ –

ಶಾಲೆಗೆ ಹೊರಟ ಮಕ್ಕಳನ್ನು ನೋಡಿ ನಗುವಳು.

ಕೆಲವರ ಕೆನ್ನೆ ಸವರಿದಳು.

ಕಾಲೇಜಿಗೆ ಹೋಗುವ ಹುಡುಗಿಯರನ್ನು ಮಾತನಾಡಿಸಿದಳು.

ಅಂಗಳದಲ್ಲೋ, ಜಗಲಿಯ ಮೇಲೋ ಒಂದಲ್ಲಾ ಒಂದು ಕೆಲಸದಲ್ಲಿ ತೊಡಗಿದ್ದ ಹೆಂಗಸರತ್ತ ನಗೆ ಬೀರಿದಳು.

''ಏನೇ ಆಗಲಿ ರಾಯರಿಗೆ ಒಳ್ಳೆ ಸೊಸೆ ಸಿಕ್ಕಿದಾಳೆ...'' ಎಂದು ಎಲ್ಲರೂ ಸಹಮತ ವ್ಯಕ್ತಪಡಿಸಿದರು.

''ರಾಯರ ಸೊಸೆ ದಿನಾ ಸಂಗೀತ ಕಲೀಲಿಕ್ಕೆ ಹೋಗತಾಳೆ'' ಎಂದು ಗೋದಮ್ಮ ಮಾರನೇ ದಿನ ಸುದ್ದಿ ತಂದಳು.

''ಅವಳ ಹೆಸರು ಸರಿತಾ ಅಂತೆ'' ಎಂಬ ಮಾಹಿತಿಯೂ ಅವಳ ಮೂಲಕವೇ ಬಂದಿತು.

ಸರಿತಾ ನೀರ್‌ಕೋಡ್ ಬಡಾವಣೆಗೆಲ್ಲ ಪರಿಚಿತಳಾದಳು.

* * *

ಹೆಗಲ ಮೇಲೆ ಭಾರದ ಚೀಲ ಹೊತ್ತು ಶಾಲೆಗೆ ಹೊರಟ ಪುಟಾಣಿ ಹುಡುಗಿಯರಿಗೆ ಸರಿತಾ ಕೇಳಿದಳು –

''ನೀವು ನಿಮ್ಮ ಟೀಚರಿಗೆ ದಿನಾ ಹೂವು ತೊಗೊಂಡು ಹೋಗಿ ಕೊಡೋದಿಲ್ವಾ ?''

''ನಮ್ಮ ಮನೇಲಿ ಹೂವಿಲ್ಲ... ಹ್ಯಾಗೆ ಕೋಡೋದು ?''

''ನಾಳೆಯಿಂದ ನಮ್ಮ ಮನೆಗೆ ಬನ್ನಿ. ನಾನು ಹೂವು ಕೊಡುತ್ತೇನೆ.''

''ಆಯ್ತು...''

''ನಮ್ಮ ಮನೆ ನೋಡಿದೀರಾ ?''

''ಹೌದು... ಹಳ್ಳದ ಮನೆ... ದೂರದಿಂದ ನೋಡಿದೀವಿ...''

''ನಾಳೆ ಶಾಲೆಗೆ ಹೊರಟವರು ಬನ್ನಿ... ನಾನು ಹೂವು ತೆಗೆದುಕೊಡತೀನಿ...''

ಆ ರಸ್ತೆಯ ಹುಡುಗಿಯರಿಗೆಲ್ಲ ಈಗ ಸಂಭ್ರಮ.

ಎಲ್ಲ ಹಳ್ಳದ ಮನೆ ಗೇಟಿನ ಬಳಿ ಕಾದು ನಿಲ್ಲುತ್ತಾರೆ. ಅಲ್ಲಿ ಸರಿತಾ ಎಲ್ಲರಿಗೂ ಗುಲಾಬಿ, ಡೇರೆ ಎಂದೆಲ್ಲ ಹೂವು ಕಿತ್ತುಕೊಡುತ್ತಾಳೆ. ಆ ಹೂವನ್ನು ಜೋಪಾನವಾಗಿ ಹಿಡಿದುಕೊಂಡು ಮಕ್ಕಳು ಶಾಲೆಗೆ ಹೋಗುತ್ತವೆ.

* * *

ಪಾರ್ವತಮ್ಮ ಒಮ್ಮೆ ಅಂಜುತ್ತ ಅಳುಕುತ್ತ ಸರಿತಾಗೆ ಕೇಳುತ್ತಾಳೆ –

''...ತಾಯಿ... ದಿನಾ ನಾಲ್ಕು ಹೂವು ಕೊಡತೀಯ ದೇವರ ಪೂಜೆಗೆ...''

''ಅಯ್ಯೋ ತೊಕೊಂಡು ಹೋಗಿ ಆಂಟಿ... ಇದಕ್ಕೂ ಕೇಳಬೇಕೇ ?'' ಎಂದು ನುಡಿಯುತ್ತಾಳೆ ಸರೀತಾ.

* * *

ಬಡಾವಣೆಯ ರಸ್ತೆಯ ಕೊನೆಯ ಮನೆಯ ಪೀಟರ್ ಒಂದು ದಿನ ಬೆಳಿಗ್ಗೆ ಸ್ಟೀಲಿನ ಹೂದಾನಿ ಹಿಡಿದು ಬರುತ್ತಾನೆ.

''...ಏನು ಪೀಟರ್... ಏನು ಬಂದೆ ?'' ಎಂದು ಕೇಳುತ್ತಾಳೆ ಸರೀತಾ.

''ಇವತ್ತು ಮುಂತಿ ಮಾಲೆ ಹಬ್ಬ... ಇಗರ್ಜಿನಲ್ಲಿ ದೇವರಿಗೆ ನಾವು ಹೂವು ಬೀರಬೇಕು...''

''ಹೂವು ಬೇಕ ?''

''ಹೌದು...''

''ಯಾವ ಹೂವು...''

''ಯಾವುದೂ ಆದೀತು... ಗೊರಟೆ ಹೂವು, ಮಲ್ಲಿಗೆ, ಕನಕಾಂಬರ, ಗುಲಾಬಿ, ಚೆಂಡು ಹೂ...''

''ಒಳಗೆ ಬಂದು ಕಿತ್ಕೊಂಡು ಹೋಗು...''

ಪೀಟರ್ ತಿರುಗಿ ಹೋಗುವಾಗ ತುಸು ತಡೆದು ನಿಂತ.

''ಏನು ಪೀಟರ್ ?''

''...ಹಿಂದೆ ಒಂದ್ ಸಾರಿ ಬಂದಿದ್ದೆ ಅಕ್ಕ...''

''...ಹೌದಾ... ಕೇಳಬೇಕಿತ್ತು...''

''ಆವಾಗ ನೀವು ಇರಲಿಲ್ಲ, ಹೆದರಿಕೆ ಆಯ್ತು. ಹಾಗೇ ಹೋದೆ...''

ನಗುತ್ತಾಳೆ ಸರಿತಾ.

''ಇನ್ನು ಹೆದರಬೇಕಾಗಿಲ್ಲ...'' ಎಂದು ಅವನ ಬೆನ್ನು ತಟ್ಟುತ್ತಾಳೆ.

* * *

ಕಾಲ ಬದಲಾಗುವುದು ಪ್ರಕೃತಿ ನಿಯಮ.

ಬೇಸಿಗೆ ಕಾಲ ಪ್ರಖರವಾಗುತ್ತ ಹೋಗುತ್ತದೆ. ಬೆಂದ ನೆಲ ನೀರನ್ನೆಲ್ಲ ಕುಡಿದು ಬಿಡುತ್ತದೆ. ನೆಲ ಅಲ್ಲಲ್ಲಿ ಬಿರುಕು ಬಿಡುತ್ತದೆ. ಪಟ್ಟಣಕ್ಕೆ ನೀರು ಸರಬರಾಜು ಮಾಡಲೆಂದೇ ಕಟ್ಟಿದ ಅಣೆಕಟ್ಟು ಮೈ ತೆರೆದುಕೊಳ್ಳುತ್ತದೆ. ನೀರು ಸರಬರಾಜು ಒಂದು ದಿನಕ್ಕೊಮ್ಮೆ ಎರಡು ದಿನಕ್ಕೊಮ್ಮೆ ಎಂದು ಪುರಸಭೆ ಸಾರುತ್ತದೆ. ನೀರ್‌ಕೋಡ್ ಬಡಾವಣೆಯ ಹೆಂಗಸರೆಲ್ಲ ನೀರಿನ ಟ್ಯಾಂಕಿನ ದಾರಿ ಕಾಯುತ್ತಾರೆ. ಹಾಗೆಯೇ ಕೊಡಪಾನವನ್ನು ಸೊಂಟಕ್ಕೆ ಏರಿಸಿಕೊಂಡು ನೀರು ಹುಡುಕುತ್ತ ಹೊರಡುತ್ತಾರೆ.

ಸರಿತಾ ಸಂಗೀತ ಪಾಠ ಮುಗಿಸಿಕೊಂಡು ಬಡಾವಣೆಯ ರಸ್ತೆಗೆ ಬಂದಾಗ ಅವಳಿಗೆ ಮೊದಲು ಚಂದ್ರಮ್ಮ ಎದುರಾಗುತ್ತಾಳೆ –

''ಆಂಟಿ ಈ ಬಿಸಿಲಲ್ಲಿ ಎಲ್ಲಿಗೆ ಹೊರಟ್ರಿ ?''

''ನೀರು ಬೇಕಲ್ಲಮ್ಮ... ನಲ್ಲೀಲಿ ನೀರಿಲ್ಲ, ನಮ್ಮ ಮನೇಲಿ ಬಾವಿ ಇಲ್ಲ... ನೀರು ಇಲ್ಲಾ ಅಂದ್ರೆ ಏನೂ ಆಗೋದಿಲ್ವೆ.''

''ಎಲ್ಲಿಂದ ತರತೀರಿ ನೀರನ್ನ ?''

''ಇಗರ್ಜಿ ಬಾವೀಲಿ ಸದಾ ನೀರು ಇರುತ್ತೆ. ಅಲ್ಲಿಂದ ಒಂದು ಕೊಡಪಾನ ತರತೀನಿ... ಇಲ್ಲಿಂದ ಅರ್ಧ ಮೈಲಿ ಆಗುತ್ತೆ...''

''ಅಷ್ಟು ದೂರದಿಂದ...? ಬೇಡ ಬನ್ನಿ...''

ಸರಿತಾ ಚಂದ್ರಮ್ಮನ ಕೊಡಕ್ಕೆ ಕೈ ಹಾಕುತ್ತಾಳೆ.

''ನಮ್ಮ ಬಾವೀಲಿ ಧಂಡಿಯಾಗಿ ನೀರಿದೆ ಆಂಟಿ, ಬನ್ನಿ...''

ಚಂದ್ರಮ್ಮ ಸರಿತಾಳ ಜೊತೆ ಹೆಜ್ಜೆಹಾಕುತ್ತಾಳೆ.

ಆಗಲೇ ಅವರಿಗೆ ಸರಸ್ವತಮ್ಮ ಎದುರಾಗುತ್ತಾಳೆ. ಅವಳ ಕೈಯಲ್ಲೂ ಕೊಡಪಾನ.

''... ಅರೆ ಆಂಟಿ, ನೀವೂ ಹೊರಟ್ರಲ್ಲ...!''

''ಹೌದಮ್ಮ ನೀರು ಬೇಕಲ್ಲ... ಆ ಸರಕಾರಿ ಬಾವಿಯಿಂದ ಒಂದಷ್ಟು ನೀರು ತರತೀನಿ... ದೂರ ಹೌದು... ಬೇರೆ ದಾರಿ ಇಲ್ಲ...''

''ಛೇ ! ಛೇ !''

ಸರಿತಾ ಆ ಕೊಡಪಾನವನ್ನೂ ಹಿಡಿದುಕೊಳ್ಳುತ್ತಾಳೆ.

ಮೆಟ್ಟಿಲು ಇಳಿದು 'ಜಲಸನ್ನಿಧಿ'ಗೆ ಬಂದ ಸರಿತ ಕಬ್ಬಿಣದ ಗೇಟು ತಳ್ಳುತ್ತಾಳೆ. ಗೇಟು ತೆರೆದುಕೊಳ್ಳುವುದಿಲ್ಲ. ಆದರ ಹಿತ್ತಾಳೆಯ ಬೀಗ ಅಲುಗಾಡುತ್ತದೆ. ಸುಡು ಬಿಸಿಲಿಗೆ ಹೊಳೆಯುತ್ತದೆ.

''ಅತ್ತೇ... ಅತ್ತೇ... ಬೀಗ ತೆಗೀರಿ...''

ಎಂದು ಕೂಗುತ್ತಾಳೆ ಸರಿತಾ.

ಜಲಜಾಕ್ಷಮ್ಮ ಬೀಗದ ಕೈಗೊಂಚಲು ಹಿಡಿದು ಬರುತ್ತಾರೆ.

''...ಅತ್ತೆ, ಹಗಲು ಹೊತ್ತು ಗೇಟಿಗೆ ಬೀಗ ಹಾಕಬೇಡಿ ಅಂತ ನಾನು ಹೇಳಿರಲಿಲ್ವ... ಯಾರಿಗೆ ನೀರು ಬೇಕೋ ಅವರು ನಮ್ಮ ಬಾವಿಯಿಂದ ನೀರನ್ನ ತೊಗೊಂಡು ಹೋಗ್ಲಿ ಬಿಡಿ ಅತ್ತೆ...'' ಎಂದು ಜಲಜಾಕ್ಷಮ್ಮನಿಗೆ ಹೇಳಿ ಸರಿತಾ ಗೇಟಿನ ಹೊರಗೇ ನಿಂತ ಚಂದ್ರಮ್ಮ, ಸರಸ್ವತಮ್ಮ ಇಬ್ಬರಿಗೂ ಹೇಳಿದಳು –

''... ಹೋಗಿ ಆಂಟಿ... ನೀರು ಸೇದಿಕೊಳ್ಳಿ... ಉಳಿದವರಿಗೂ ಹೇಳಿ... ನಮ್ಮ ಬಾವೀಲಿ ನೀರು ತೆಗೆದಷ್ಟೂ ಬರುತ್ತೆ... ಹೋಗಿ...''

ನೀರ್‌ಕೋಡ್ ಬಡಾವಣೆಯ ಹೆಂಗಸರು ತಮ್ಮ ಮನೆ ಬಾವಿಯಿಂದ ನೀರು ಕೊಂಡೊಯ್ಯುವುದನ್ನು ಶೇಷಗಿರಿರಾಯರು, ಜಲಜಾಕ್ಷಮ್ಮನವರು ಅಸಹಾಯಕರಾಗಿ ನೋಡುತ್ತ ನಿಂತರು.

ನಾ. ಡಿಸೋಜ
೧೫/೧ ಜಿ. ೨ನೇ ಕ್ರಾಸ್. ನೆಹರು ನಗರ, ಸಾಗರ - ೫೭೭ ೪೦೧

# ಸುರಮಾಲಿ



ತಂದು ಮಣ್ಣಲ್ಲಿ ಹಡೆದವಳನ್ನು ಮಲಗಿಸಿದ ದಿನವೇ
ಬಹಳಾದರೆ ನಿರ್ಭಾವುಕನೆಂದು ಗುರುತಿಸಬಹುದಾದ
ಚಿಹರೆಯಿಂದ, ನೇಣಿಗೇರುವ ಮೊದಲು, ಗೀಳಿನ ಹೆಣ್ಣಿನ
ಮೊಲೆಗಳೊಡನೆ ಸಾರ್ವಜನಿಕತೆಯಲ್ಲೇ ರೂಢಿಗತ ಆಟವಾಡುತ್ತಿದ್ದ,
ಕಥಾನಾಯಕ,
ಬುದ್ಧನ ಆರ್ಯಸತ್ಯಗಳಾಚೆಗಿನ್ನೇನೋ ಕಂಡ
ಕಾಮೂನ ದಾರ್ಶನಿಕ.
ಆದಿ-ಭೌತಿಕ ಪ್ರಪಾತಗಳಲ್ಲಿ ತನ್ನಂತೆಯೇ ಆರ್ತವಾಗಿ
ಚೀರುತ್ತಿದ್ದವರ ಕಿರಲುಗಳಿಗೆ ಚಾರಿತ್ರಿಕ ಪ್ರಸ್ತಾರದ ಕೀಲು ಹಾಕಿ
ಕಾಲೋಚಿತ ರಾಗದ ಸ್ವರ-ಸಂಯೋಜಿಸಿದ ಮಾರ್ಕ್ಸ್‌ನಂಥವರನ್ನು
'ರಾಜಸ-ಜೀವ' ಎಂದು ಗುರುತಿಸಿ ಸರಿಸಿಬಿಡಬಹುದು.
ವಿಭಿನ್ನ ಸ್ತರಗಳನ್ನು ಒಪ್ಪುವ ಭರದಲ್ಲಿ, ಸತ್ಯದ ಏಕಾಂತವನ್ನೇ
ಭಂಗಿಸಿದ ಮಹಾವೀರ, ಕೊನೆಗೂ ನಗ್ನನಾದ
ವೇದ, ದೇವಗಳ, ಮಣಿ - ಮಂಗಳ ಸೂತ್ರವನ್ನು ನಿರಾಭರಣ
ಭಾರತಿಗೆ ಕಟ್ಟಿದ್ದ ಶಂಕರರು, ಲೋಕದ ಕೊರಳನ್ನೇ
ನಿರಾಕರಿಸುವಷ್ಟು, ಕಾಲದ ಕುಲಿಮೆಗೆ ನಿಷ್ಠರಾದರು.
ಅಗ್ನ್ಯಲಂಕರಣದ ಸಂಲಗ್ನತೆಯಲ್ಲಿದ್ದ ಶರಣರು
ಆಲಯದೊಳಗಿನ ಬಯಲನ್ನು ಕಂಡುಂಡೂ,
ಅಂಕಿತದ ಶೀಲವನ್ನು ಏಕೆ ಶಂಕಿಸಿದರೋ ತಿಳಿಯಲಿಲ್ಲ.
ವಿಮಾನಗಿರಿಯಿಂದಿಳಿದ ಮಧ್ವರು,
'ಸತ್ಯ' ಹೊರೆಸಿದ ಹೊಣೆಗಳಿಗೆಲ್ಲ ಬದ್ಧರು.
'ಹೀಗಿರಬೇಕು' ಎನ್ನುವುದಕ್ಕಿಂತ 'ಹೀಗಿದೆ' ಎನ್ನುವುದಕ್ಕಷ್ಟೇ ಬದ್ಧರು
ಕ್ಷೀರಸಾಗರದ ಅಹಿತಲ್ಪನಿಗೆ, ತಮ್ಮ
ಉಪ್ಪುಸಮುದ್ರದ ಅಚ್ಚ - ಗನ್ನಡದ ಉಗುರು - ಬೆಚ್ಚಗಿನ
ಅಭಿಷೇಕ ಮಾಡಿಯೂ, ಪ್ರವೇಶ ಪರೀಕ್ಷೆಯಲ್ಲಿ
ಕಿಂಡಿಯಾಚೆ ಕಂಬಳಿ ಹಾಸಿದ ದಾಸರು
ಲಜ್ಜೆಯಟ್ಟಲೆಂದೇ ಗೆಜ್ಜೆ ಕಟ್ಟಿ, ತೈಲಧಾರೆಯ ಲಯದಲ್ಲಿ
ವ್ಯಾಸಪೀಠದ ಧ್ಯಾನಸ್ಥರೆದುರು, 'ರಾಸಲೀಲೆ'ಯ ಕೋಲು ಹಾಕಿದವರು
ಸಾವನ್ನು ಗೆದ್ದ ಸಾವಿತ್ರಿಯಲ್ಲಿ, ಕೊಟ್ಟ - ಕುದುರೆಯ
ಲಗಾಮು ಜಗ್ಗಲು ಹೇಳುವ ಗೀತೆಯಲ್ಲಿ
ಸಂಕೇತ ಕಂಡ ರಮಣ - ಅರವಿಂದ - ಪರಮಹಂಸ
ಎಲ್ಲರೂ ಹೀಗೇ ಸರಳುಗಳ ಮಣಿಸಿ ಹೊರ ನೆಗೆದವರು
ಪಶ್ಚಿಮಕ್ಕೂ ಪೂರ್ವದ ಅಪೂರ್ವತೆಯ ಪ್ರಾಶನ ಮಾಡಿಸ
ಹೊರಟ ಗಾಂಧೀ, ಮಧ್ಯರಾತ್ರಿ,
ಪಟಪಟ ಬಿಚ್ಚಿದ ತ್ರಿವರ್ಣ ಬಟ್ಟೆಯೊಳಗಿಂದ ಬಣ್ಣಬಣ್ಣದ ಹೂ-ಪಕಳೆಗಳು
ಉದುರುತ್ತಿದ್ದಾಗಲೂ, ಗುಂಡಿಗೆಯನ್ನು ತೆರೆದಿಟ್ಟುಕೊಂಡೇ ಇದ್ದ



ವ್ರತನಿಷ್ಠರು,
ಸೊಕ್ಕಿನ ಚರಿತ್ರೆಗೆ ಆತ್ಮಕತೆ ಸೇರಿಸಿಕ್ಕದಂತೆ,
ಕಡಕೋಳ ಮಡಿವಾಳಪ್ಪ, ನಾಗಲಿಂಗ, ಶರೀಫ, ಅನಂತಾಧೀಶರು
ಬಹುವಚನದ ಅಂತರ ಉಳಿಸಿಕೊಂಡರು.

* * *

ಸನ್ಯಾಸಿ
ಬಾಗಿಲು ಮುಚ್ಚಿಕೊಂಡೇ ಮಾಡಬೇಕಾದ
ಕರ್ಮಗಳನ್ನು ಮೀರಲೆತ್ನಿಸುತ್ತಾನೆ.
ಅನುಭಾವಿ
ಯಾವ ಕ್ರಿಯೆಗಳಿಗೂ ಬಾಗಿಲು
ಮುಚ್ಚಿಕೊಳ್ಳದೆ ತೊಡಗುತ್ತಾನೆ.
ಹೊಸ್ತಿಲು ದಾಟಬಾರದೆನ್ನುವವರಿಗೆ
ಇವೆರಡೇ ದಾರಿ

ಆನಂದ ಝುಂಜರವಾಡ
ಆನಂದನಗರ, ಮುಧೋಳ



# ಭಗತ್ ಸಿಂಗ್

## ಹುತಾತ್ಮನಾಗಿ 75 ವರ್ಷ

ಪ್ರಕಾಶ ಹಿಟ್ಟಿನಹಳ್ಳಿ

ಭಾರತೀಯ ಜನಾಂದೋಲನಗಳ ಮೇಲೆ ನಿರಂತರ ಪ್ರೇರಣೆ ನೀಡುತ್ತಲಿರುವ ಭಗತ್ ಸಿಂಗನ ಬಲಿದಾನದ ದಿನ ೨೩ ಮಾರ್ಚ್ ೨೦೦೬ಕ್ಕೆ ೭೫ ವರ್ಷಗಳಾಗುತ್ತವೆ ಹಾಗೂ ಬರಲಿರುವ ೨೮ ಸೆಪ್ಟೆಂಬರ್ ೨೦೦೭ಕ್ಕೆ ಆತ ಹುಟ್ಟಿ ನೂರು ವರುಷಗಳಾಗುತ್ತವೆ. ಈ ಎರಡು ವರುಷಗಳನ್ನು ಭಗತ್ ಸಿಂಗನಿಂದ ನಿರಂತರವಾಗಿ ಪ್ರೇರಣೆ ಪಡೆಯುತ್ತಿರುವ ಇಂದಿನವರಾದ ನಾವು ಹೇಗೆ ಆಚರಿಸಬೇಕು ? ಆತನ ಕ್ರಾಂತಿಕಾರಿ ಪರಂಪರೆಯನ್ನು ಹೇಗೆ ಮುಂದುವರೆಸಿಕೊಂಡು ಹೋಗುವುದು ?

ಇಂದು ಎಲ್ಲ ಭಾರತೀಯರೂ ಹಾಗೂ ಜಾಗತಿಕ ಕ್ರಾಂತಿಗಳ ಇತಿಹಾಸದ ವಿದ್ಯಾರ್ಥಿಗಳೂ ತಿಳಿದಿರುವಂತೆ ಭಗತ್ ಸಿಂಗ್ ಒಬ್ಬ ಕ್ರಾಂತಿಕಾರಿ. ಆತನ ಸಂಗಾತಿಗಳೂ ಕ್ರಾಂತಿಕಾರಿಗಳಾಗಿದ್ದರು. ಅವರ ಹಿಂದೂಸ್ತಾನ ಸೋಶಲಿಸ್ಟ್ ರಿಪಬ್ಲಿಕನ್ ಅಸೋಸೀಯೇಶನ್ ಕೂಡ ಕ್ರಿಯಾಶೀಲವಾದ ಕ್ರಾಂತಿಕಾರಿ ಪಕ್ಷವಾಗಿತ್ತು. ಭಗತ್‌ಸಿಂಗ್ ತನ್ನ ಬಲಿದಾನದ ಮೊದಲ ದಿನ ಎಂದರೆ ದಿನಾಂಕ ೨೨ ಮಾರ್ಚ್ ೧೯೩೧ರಂದು, ಜೇಲಿನಲ್ಲಿದ್ದ ತನ್ನ ಪಕ್ಷದ ಸಂಗಾತಿಗಳಿಗೆ ಬರೆದ ಪತ್ರದಲ್ಲಿ ''ನನ್ನ ಹೆಸರು ಭಾರತೀಯ ಕ್ರಾಂತಿಯ ಸಂಕೇತವಾಗಿಬಿಟ್ಟಿದೆ. ನಾನು ಕ್ರಾಂತಿಯ ಮೂಲ ಮಂತ್ರವಾಗಿಬಿಟ್ಟಿದ್ದೇನೆ'' ಎಂದು ಬರೆದದ್ದು ಭಾರತೀಯ ಸ್ವಾತಂತ್ರ್ಯ ಹೋರಾಟದ ಕ್ರಾಂತಿಕಾರಿ ಪರಂಪರೆಯಲ್ಲಿ ಐತಿಹಾಸಿಕವಾಗಿ ಇಂದೂ ಕೂಡ ಸತ್ಯವಾಗುತ್ತದೆ.

ಕಾಕೋರಿಯ ರೈಲ್ವೆ ಸ್ಟೇಷನ್ನಿನಲ್ಲಿ ೧೯೨೫ರಲ್ಲಿ ಸರಕಾರಿ ತಿಜೋರಿಯ ಲೂಟಿಯ ನಂತರ ರಾಮಪ್ರಸಾದ ಬಿಸ್ಮಿಲ್ ನೇತೃತ್ವದ ಹಿಂದುಸ್ತಾನ ರಿಪಬ್ಲಿಕನ್ ಪಕ್ಷದ ಹೆಚ್ಚಿನ ಮುಖಂಡರನ್ನೆಲ್ಲ ಬಂಧಿಸಿದ ಮೇಲೆ, ಈ ಪಕ್ಷದ ಜವಾಬ್ದಾರಿಗಳು ಭಗತ್‌ಸಿಂಗ್ ಹಾಗೂ ಗೆಳೆಯರ ಮೇಲೆ ಬಿದ್ದವು. ಆಗ ಆತನಿಗೆ ಮತ್ತು ಅವನ ಇತರ ವಿಚಾರಶೀಲ ಗೆಳೆಯರಿಗೆ ತಮ್ಮ ನಾಯಕರು ಎಷ್ಟೇ ತ್ಯಾಗಿ-ಬಲಿದಾನಿಗಳಾಗಿದ್ದರೂ ಸ್ವಾತಂತ್ರ್ಯದ ಬಗ್ಗೆ, ಸ್ವತಂತ್ರ ಭಾರತದ ಭವಿಷ್ಯತ್ತಿನ ಬಗ್ಗೆ ಸ್ಪಷ್ಟ ಕಲ್ಪನೆಗಳಿರಲಿಲ್ಲ. ದೇಶದ ಜನರ ಸಮಸ್ಯೆಗಳ ಬಗ್ಗೆ ಏನೂ ತಿಳಿವು ಇರಲಿಲ್ಲ. ಇವೆಲ್ಲವುಗಳಿಗೆ ಉತ್ತರ ಪಡೆಯಲೆಂದು ಆತ ಗಂಭೀರ ಅಭ್ಯಾಸಕ್ಕೆ ತೊಡಗಿದ. ಆತನ ಬಲಿದಾನದ ಕಡೆಯ ಕ್ಷಣಗಳವರೆಗೆ ನಿರಂತರವಾಗಿ ಸಾಗಿದ್ದ ಈ ಅಭ್ಯಾಸದ ಪರಿಣಾಮವಾಗಿ ಭಗತ್‌ಸಿಂಗ್ ಒಬ್ಬ ರೋಮ್ಯಾಂಟಿಕ್ ಕ್ರಾಂತಿಕಾರಿಯಾಗಿದ್ದವನು ಬದಲಾಗುತ್ತ ವೈಜ್ಞಾನಿಕ ವಿಚಾರವಾದಿ ಕ್ರಾಂತಿಕಾರಿಯಾಗಿ ಮಾರ್ಪಟ್ಟನು. ಈ ಪ್ರಕ್ರಿಯೆಯಲ್ಲಿ ತಾನೊಬ್ಬನೇ ಅಲ್ಲ ಬದಲಾದದ್ದು, ತನ್ನ ಎಲ್ಲ ಗೆಳೆಯರನ್ನು ಪರಿವರ್ತಿಸಿದ; ತನ್ನ ಬಲಿದಾನದ ನಂತರ ಈ ೭೫ ವರ್ಷಗಳುದ್ದ ವೈಜ್ಞಾನಿಕ ದೃಷ್ಟಿಕೋನದ ಹೋರಾಟಗಾರರನ್ನು ಆತ ನಿರ್ಮಿಸುತ್ತಲೇ ಇದ್ದಾನೆ. ಅಂದಿನಿಂದಲೂ ಈವರೆಗೂ ಪ್ರತಿಯೊಬ್ಬ ವಿಚಾರವಾದಿ ಕ್ರಾಂತಿಕಾರಿಯ ನಡೆವಳಿಯು ಗಂಭೀರವಾಗಿ ಅಭ್ಯಾಸ ಮಾಡುವುದು, ಮನುಕುಲದ ಬಗ್ಗೆ ತನ್ನ ಕರ್ತವ್ಯ ಪ್ರಜ್ಞೆಯಿಂದ ಸೇವೆಗೆ ಸಿದ್ಧನಾಗಿರುವುದು, ಇದಕ್ಕಾಗಿ ಎಲ್ಲ ತರಹದ ಕಷ್ಟಗಳನ್ನು ಸಹಿಸಲು ಸಿದ್ಧನಿರುವುದು ಪರಂಪರೆಯಾಗಿಯೇ ಬೆಳೆದುಬಂದಿದೆ.

ಹಿಂದುಸ್ತಾನ ಸೋಶಲಿಸ್ಟ್ ರಿಪಬ್ಲಿಕನ್ ಪಕ್ಷದ ಒಂದೊಂದೂ ಚಟುವಟಿಕೆಗಳು, ಯತೀಂದ್ರನಾಥ ದಾಸ, ಚಂದ್ರಶೇಖರ ಆಜಾದ್, ಭಗವತಿ ಶರಣ ವೊಹರಾ, ಭಗತ್‌ಸಿಂಗ್, ರಾಜಗುರು, ಸುಖದೇವರ ಬಲಿದಾನದ ಪ್ರಸಂಗಗಳು ಭಾರತೀಯ ಜನತೆಯನ್ನು, ವಿಶೇಷವಾಗಿ ತರುಣರನ್ನು, ನಮ್ಮ ಸ್ವಾತಂತ್ರ್ಯ ಹೋರಾಟದ ಕಡುಗಲಿಗಳನ್ನಾಗಿ ಮಾಡಿತು. ಭಗತ್‌ಸಿಂಗನ ಹೆಸರು ಸಾವನ್ನು ಆಮಂತ್ರಿಸುವುದಕ್ಕೆ, ಸಾಹಸದಿಂದ ಬಲಿದಾನ ಮಾಡಲಿಕ್ಕೆ, ಮಹತ್ತರ ಉದ್ದೇಶಗಳ ಸಂಕಲ್ಪಗಳನ್ನು ಗೈಯ್ಯುವುದಕ್ಕೆ ಪರ್ಯಾಯವಾಯಿತು. ಭಾರತ ಮಾತಾ ಕಿ ಜೈ, ವಂದೇಮಾತರಮ್‌ಗಳ ಜೊತೆಗೆ ಭಗತ್‌ಸಿಂಗನಿಂದ ಘೋಷಿಸಲ್ಪಟ್ಟ ''ಇನ್‌ಕಿಲಾಬ್ ಜಿಂದಾಬಾದ್'' ಘೋಷಣೆಯು ಇಂದೂ ಕೂಡ ಹಳ್ಳಿ ಹಳ್ಳಿಗಳಲ್ಲಿ ಹರಡುತ್ತಲಿದೆ. ಭಗತಸಿಂಗನು ಹರಡಿದ ಕ್ರಾಂತಿಕಾರಿ, ಬಲಿದಾನದ ಸ್ಫೂರ್ತಿ- ಪ್ರೇರಣೆಗಳಿಂದ ನಮ್ಮ ದೇಶದಲ್ಲಿ ನಡೆದ ಎಲ್ಲ ಹೋರಾಟಗಳು ಎಂದರೆ ವೈಯಕ್ತಿಕ ಸತ್ಯಾಗ್ರಹ, ೧೯೪೨ರ ಚಲೇಜಾವ್ ಚಳುವಳಿ, ತೇ ಭಾಗಾ - ತೆಲಂಗಾಣ-ರೈತ ಚಳುವಳಿಗಳು, ಹಲವಾರು ಕಾರ್ಮಿಕರ ಮುಷ್ಕರಗಳು, ನಾವಿಕ ಬಂಡಾಯ, ಭೂಸೇನೆ-ವೈಮಾನಿಕ ಸೇನೆಗಳ ಬಂಡಾಯಗಳು, ಸುಭಾಷ್ ಚಂದ್ರ ಬೋಸರ ಆಜಾದ್ ಹಿಂದ್ ಸೇನೆಯ ಮುನ್ನಡೆಗಳು ಎಲ್ಲದರಲ್ಲೂ ಭಗತ್‌ಸಿಂಗ್, ರಾಜಗುರು, ಸುಖದೇವ, ಚಂದ್ರಶೇಖರ ಆಜಾದ್, ಯತೀಂದ್ರನಾಥ ದಾಸರ ಬಲಿದಾನಗಳು ಪ್ರೇರಣೆ ಇತ್ತಿದ್ದವು.

ಹೀಗೆ ಭಾರತೀಯ ಜನಾಂದೋಲನಗಳ ಮೇಲೆ ನಿರಂತರ ಪ್ರೇರಣೆ ನೀಡುತ್ತಲಿರುವ ಭಗತ್‌ಸಿಂಗನ ಬಲಿದಾನದ ದಿನ ೨೩ ಮಾರ್ಚ್ ೨೦೦೬ಕ್ಕೆ ೭೫ ವರ್ಷಗಳಾಗುತ್ತವೆ ಹಾಗೂ ಬರಲಿರುವ ೨೮ ಸೆಪ್ಟೆಂಬರ್ ೨೦೦೭ಕ್ಕೆ ಆತ ಹುಟ್ಟಿ ನೂರು ವರುಷಗಳಾಗುತ್ತವೆ. ಈ ಎರಡು ವರುಷಗಳನ್ನು ಭಗತ್ ಸಿಂಗನಿಂದ ನಿರಂತರವಾಗಿ ಪ್ರೇರಣೆ ಪಡೆಯುತ್ತಿರುವ ಇಂದಿನವರಾದ ನಾವು ಹೇಗೆ ಆಚರಿಸಬೇಕು ? ಆತನ ಕ್ರಾಂತಿಕಾರಿ ಪರಂಪರೆಯನ್ನು ಹೇಗೆ ಮುಂದುವರೆಸಿಕೊಂಡು ಹೋಗುವುದು ?

- ೨ -

ಭಗತ್‌ಸಿಂಗ್ ಎಂದರೆ ಕ್ರಾಂತಿ. ಕ್ರಾಂತಿ ಎಂದರೆ ಬಂದೂಕು-ಪಿಸ್ತೂಲುಗಳ ಬಳಕೆಯ, ಗುಪ್ತ ಸಂಘಟನೆಗಳ ಚಟುವಟಿಕೆಗಳೆಂದು ಇಂದೂ ಕೂಡ ತಿಳಿದುಕೊಳ್ಳುವುದಿದೆ. ಆದರೆ ಭಗತ್‌ಸಿಂಗ್ ಲಾಹೋರ ನ್ಯಾಯಾಲಯದಲ್ಲಿ

ಕೇಳಿದ ಪ್ರಶ್ನೆಗೆ ಉತ್ತರಿಸುತ್ತ ''ಕ್ರಾಂತಿಗಾಗಿ ರಕ್ತ ಸಿಕ್ತ ಹೋರಾಟಗಳೇ ಆಗಬೇಕಿಲ್ಲ. ವ್ಯಕ್ತಿಗತವಾದ ಸೇಡಿನ ಪ್ರತಿಹಿಂಸೆಗೆ ಇಲ್ಲಿ ಸ್ಥಳವಿಲ್ಲ. ಅದು ಪಿಸ್ತೂಲು-ಬಾಂಬುಗಳ ಸಂಪ್ರದಾಯವೂ ಆಗಿಲ್ಲ. ಕ್ರಾಂತಿಯ ಬಗೆಗಿನ ನಮ್ಮ ಅಭಿಪ್ರಾಯವು ಅನ್ಯಾಯದ ಆಧಾರದ ಮೇಲೆ ನೆಲೆಗೊಂಡಿರುವ ಈಗಿನ ಸಮಾಜ ವ್ಯವಸ್ಥೆಯ ಮೂಲಭೂತ ಪರಿವರ್ತನೆ ಆಗಿದೆ'' ಎಂದು ಸ್ಪಷ್ಟಪಡಿಸುತ್ತಾನೆ.

ಕ್ರಾಂತಿ ಕಾರ್ಯಾಚರಣೆಯನ್ನು ಭಗತ್‌ಸಿಂಗ್ ಮಾರ್ಕ್ಸೀಯ ವಿಧಾನದಲ್ಲಿಯೇ ತನ್ನ ಬೇರೆ ಬೇರೆ ಲೇಖನಗಳಲ್ಲಿ, ಜನಾಂದೋಲನಗಳ ಪರಿಣಾಮವಾಗಿ ಜರುಗುವ ಕ್ರಿಯೆಯೆಂದು ವ್ಯಾಖ್ಯಾನಿಸುತ್ತಾನೆ. ನ್ಯಾಯಾಲಯದಲ್ಲಿ ನೀಡಿದ ಅದೇ ಹೇಳಿಕೆಯಲ್ಲಿ ಮುಂದುವರಿಯುತ್ತಾ–

''ಇನ್‌ಕಿಲಾಬ್ ಜಿಂದಾಬಾದ್ ಹಾಗೂ ಸಾಮ್ರಾಜ್ಯವಾದ ಮುರ್ದಾಬಾದ್ ಘೋಷಣೆಗೆ ಸಂಬಂಧಿಸಿ, ನಾವು ನಮ್ಮ ವಿಚಾರ ಸ್ಪಷ್ಟಪಡಿಸಿದ್ದೇವೆ. ಇನ್‌ಕಿಲಾಬ್ ಜಿಂದಾಬಾದ್ ! ಕ್ರಾಂತಿ ಚಿರಾಯುವಾಗಲಿ ! ಇದನ್ನು ತಪ್ಪಾದ ರೀತಿಯಲ್ಲಿ ತಿಳಿದುಕೊಂಡಂತೆ ನಮ್ಮ ಉದ್ದೇಶವಿಲ್ಲ. ಪಿಸ್ತೂಲು ಬಂದೂಕುಗಳು ಕ್ರಾಂತಿಯನ್ನುಂಟುಮಾಡುವುದಿಲ್ಲ. ಆದರೆ ಕ್ರಾಂತಿಯ ಶಸ್ತ್ರವು ವೈಚಾರಿಕತೆಯ ಸಾಣೆಯ ಮೇಲೆ ಮಸೆಯುವುದರಿಂದ ಹರಿತವಾಗುತ್ತದೆ ಎಂದು ಸ್ಪಷ್ಟಪಡಿಸುವುದು ನಮ್ಮ ಉದ್ದೇಶವಾಗಿದೆ'' ಎಂದು ವೈಜ್ಞಾನಿಕತೆ, ವೈಚಾರಿಕತೆಗಳನ್ನು ಅವಲಂಬಿಸಬೇಕಾದುದು ಕ್ರಾಂತಿಕಾರಿಗಳ ಕರ್ತವ್ಯವೆಂದು ಹೇಳುತ್ತಾನೆ.

ವೈಚಾರಿಕತೆಯು ಸಾಮಾಜಿಕ, ರಾಜಕೀಯ, ಆರ್ಥಿಕ, ವಿಜ್ಞಾನ, ತಂತ್ರಜ್ಞಾನ, ಇತಿಹಾಸ, ಕಲೆಗಳು ಮುಂತಾದ ಎಲ್ಲ ರಂಗಗಳಲ್ಲಿ ಇರುವ ತಿರುಳನ್ನರಿತು, ಅವುಗಳಲ್ಲಿ ನೂತನವಾಗಿ ಹೊರಹೊಮ್ಮಿದ ಅಂಶಗಳನ್ನು ಗ್ರಹಿಸುವ ಶಿಸ್ತುಬದ್ಧವಾದ ಅಭ್ಯಾಸವು ಕ್ರಾಂತಿಕಾರಿ ಕಾರ್ಯಕರ್ತರಿಗೆ ಜರೂರಿದೆ ಎಂದು ತನ್ನ ಪಕ್ಷದ ''ಕ್ರಾಂತಿಕಾರಿ ಕಾರ್ಯಕ್ರಮದ ಕರಡಿ''ನಲ್ಲಿ ಒತ್ತಿ ಹೇಳುತ್ತಾನೆ.

- ೩ -

ಸ್ವಾತಂತ್ರ್ಯ ದೊರೆತ ನಂತರ ಬಂದ ಸರಕಾರಗಳು ಇಲ್ಲಿಯವರೆಗೆ ಸಂಧಿ ಸಾಧಕತನದ ವ್ಯವಹಾರಗಳಲ್ಲಿಯೇ ತೊಡಗಿವೆ. ಇದು ಭಾರತಕ್ಕಷ್ಟೇ ಅಲ್ಲ; ಭಗತ್ ಸಿಂಗನಿಗೂ ಪ್ರೇರಣೆ, ಮಾರ್ಗದರ್ಶಕವಾಗಿದ್ದ ಸೋವಿಯತ್ ಒಕ್ಕೂಟದ ಸಮಾಜವಾದವು ಕುಸಿದು, ಸಮಾಜವಾದ ಜಗತ್ತು ನಾಶವಾಗಿ ಜಗತ್ತಿಗೇ ಅನ್ವಯಿಸುತ್ತದೆ. ಚೀನವು ಈಗ ಯಾವುದೇ ರೀತಿಯ ಜಗತ್ತಿನ ಪುರೋಗಮನದ ಹೊಣೆ ಹೊರಲು ತಯಾರಿಲ್ಲ. ಸಮಾಜವಾದ ಬಲಗೊಂಡ ಮೇಲೆ, ಹೊಸ ಮನುಷ್ಯನ ಉದಯವಾಗುತ್ತದೆ ಎಂಬ ಕನಸು ನನಸಾಗಲಿಲ್ಲ. ಈಗ ೨೫ ವರ್ಷಗಳ ಹಿಂದೆ ನಮ್ಮ ಮುಖಂಡರು ''ದೇಶಕ್ಕೆ ರಾಜಕೀಯ ಸ್ವಾತಂತ್ರ್ಯ ಸಿಕ್ಕಿದೆ, ಇದಿಷ್ಟೇ ಸಾಲದು, ಆರ್ಥಿಕವಾಗಿಯೂ ಸ್ವಾತಂತ್ರ್ಯ ದೊರೆಯಬೇಕು. ಇದಕ್ಕಾಗಿ ರಾಷ್ಟ್ರೀಯ ಸ್ವಾವಲಂಬನೆ ಸಾಧಿಸಬೇಕು'' ಎಂದು ಹೇಳುತ್ತಿದ್ದರು. ಈಗ ರಾಷ್ಟ್ರೀಯ ಆರ್ಥಿಕ – ಸ್ವಾವಲಂಬನೆ ಎಂಬುದರ ಬದಲಾಗಿ 'ಅಭಿವೃದ್ಧಿ'ಯನ್ನು ಹೇಳಲಾಗುತ್ತಿದೆ. ಯಾರ ಅಭಿವೃದ್ಧಿ? ವಿದೇಶಿ ಬಂಡವಾಳವು ಚಂಡಮಾರುತ, ಮಹಾಪೂರಗಳಂತೆ ನುಗ್ಗಿ ಬರುತ್ತಿದೆ. ಇದರ ಪರಿಣಾಮವಾಗಿ ಗುತ್ತಿಗೆ ಆಧಾರದ ಉದ್ಯೋಗ ಸೃಷ್ಟಿಯಾಗುತ್ತಿದೆ. ಶೇ. ೬೦-೬೫ರಷ್ಟು ಇರುವ ರೈತರು ಹೊಲಗಳನ್ನು ಕಳೆದುಕೊಂಡು, ಇವರೂ ನಿರುದ್ಯೋಗಿಗಳ ಸೇನೆಯಲ್ಲಿ ಸೇರುತ್ತಾರೆ. ಉದಾರೀಕರಣ, ಖಾಸಗೀಕರಣ, ಜಾಗತೀಕರಣಗಳ ದುಷ್ಪರಿಣಾಮವು ಸಾಮಾನ್ಯ ಜನರ ಮೇಲೆ ಆಗುತ್ತಿರುವುದು ಎಲ್ಲ ದೇಶಗಳಲ್ಲಿಯೂ ಕಂಡುಬರುತ್ತಿದೆ. ಈ ಬಗ್ಗೆ ಎಲ್ಲ ಕಡೆಗೂ ಚರ್ಚೆಗಳು, ಪ್ರತಿಭಟನೆಗಳೂ ನಡೆಯುತ್ತಿದ್ದು, ಅವುಗಳನ್ನು ಪರಿಣಾಮಕಾರಿಯಾಗಿ, ನಿರ್ಣಾಯಕವಾಗುವಂತೆ ಗಟ್ಟಿಯಾಗಿ ಬೆಳೆಸಬೇಕಾಗಿದೆ.

ನವಸಾಮ್ರಾಜ್ಯಶಾಹಿ ವಿರೋಧಿ ಹೋರಾಟಗಳನ್ನು ಸಂಘಟಿಸುವುದರಲ್ಲಿ ಮುಂದಿನ ಕಾಲದಲ್ಲಿ ಭಗತ್‌ಸಿಂಗನ ಧ್ಯೇಯ ವಿಚಾರಗಳು ಬೇಕಾದಷ್ಟು ಸ್ಫೂರ್ತಿ ನೀಡಬಲ್ಲವು.

ಭಗತ್‌ಸಿಂಗನ ಜೀವನ ಚರಿತ್ರೆಗಳು ನಮ್ಮ ದೇಶೀಯ ಭಾಷೆಗಳಲ್ಲಿ ಬೇಕಾದಷ್ಟು ಬಂದಿವೆ. ''ನಾನೇಕ ನಾಸ್ತಿಕ ?'' ಕೂಡ ಭಾರತದ ಎಲ್ಲ ಭಾಷೆಗಳಲ್ಲಿಯೂ ಅನುವಾದಗೊಂಡಿದೆ. ಈ ಚಿಕ್ಕ ಪುಸ್ತಿಕೆಯು ಸಮಾಜದಲ್ಲಿ ಮತಾಂಧತೆ, ಮೂಢನಂಬಿಕೆಗಳು ಇರುವವರೆಗೆ ಅದರ ವಿರುದ್ಧ ವಿಚಾರವಾದಿಗಳು ಹೋರಾಡಲು ಬಲು ಉಪಯೋಗವಾಗುತ್ತದೆ. ಅದರಂತೆ ಪ್ರಸಿದ್ಧ ಸ್ವಾತಂತ್ರ್ಯ ಹೋರಾಟಗಾರ ದಿ. ಲಾಲ ರಾಮಶರಣ ದಾಸರ ''ಡ್ರೀಮ್‌ಲ್ಯಾಂಡ್'' ಕವನ ಸಂಕಲನಕ್ಕಾಗಿ ಬರೆದ ಮುನ್ನುಡಿಯಲ್ಲಿಯೂ ಕೂಡ ಐತಿಹಾಸಿಕ ಹಿನ್ನೆಲೆಯ ಉದಾಹರಣೆಗಳೊಂದಿಗೆ ಭಾವವಾದಿ ವಿಚಾರ ಸರಣಿಗೆ ಬದಲಾಗಿ ವಾಸ್ತವವಾದಿ ಗತಿಶೀಲ ವಿಚಾರಗಳನ್ನು ಪ್ರತಿಪಾದಿಸಲಾಗಿದೆ. ಇದೂ ಕೂಡ ಅಧ್ಯಯನಯೋಗ್ಯ ಬರೆಹವಾಗಿದೆ.

ಜಾತಿಗಳ ಹೆಸರಿನಲ್ಲಿ, ಧರ್ಮಗಳ ಹೆಸರಿನಲ್ಲಿ ಜನರನ್ನು ಸಂಘಟಿಸುವುದು, ಸಾಂಪ್ರದಾಯಿಕತೆಗಳನ್ನು ವೈಭವೀಕರಿಸುವುದು, ಮತೀಯ ದಂಗೆಗಳನ್ನು ಹರಡುವುದು ಭಗತ್‌ಸಿಂಗನ ಕಾಲಕ್ಕಿಂತ ಎಷ್ಟೋ ಪಟ್ಟು ಹೆಚ್ಚಾಗಿ ನಡೆಯುತ್ತಿದೆ. ಈ ಸಮಸ್ಯೆ ಪರಿಹಾರಕ್ಕೆ ಪ್ರಚೋದನೆಯಾಗಿ ''ಕೋಮು ದಂಗೆಗಳು ಹಾಗೂ ಪರಿಹಾರ'' ಲೇಖನವು ನಮಗೆ ಮಹತ್ವದ್ದಾಗುತ್ತದೆ. ೧೯೨೩ರಲ್ಲಿ ಕಾಂಗ್ರೆಸಿನ ಅಧ್ಯಕ್ಷರಾಗಿ ದಿ॥ ಬ್ಯಾ. ಮಹಮ್ಮದ ಅಲಿ ಜಿನ್ನಾರವರು ಭಾರತದ ಅಸ್ಪೃಶ್ಯತೆ ಸಮಸ್ಯೆ ಪರಿಹರಿಸಲು, ಮತೀಯವಾಗಿ ಅಸ್ಪೃಶ್ಯರನ್ನು ಹಿಂದು-ಮುಸ್ಲಿಮರು ಹಂಚಿಕೊಳ್ಳಬೇಕೆಂದು ಸಲಹೆ ಮಾಡಿದ್ದರು. ಆಗ ಈ ಬಗ್ಗೆ ದೊಡ್ಡ ಚರ್ಚೆ ನಡೆಯಿತು. ಚಿಕ್ಕ ವಯಸ್ಸಿನ ಭಗತ್‌ಸಿಂಗ್ ಈ ಚರ್ಚೆಯಲ್ಲಿ ಭಾಗವಹಿಸಿದ್ದನು. ಕೀರತಿ ಪತ್ರಿಕೆಯಲ್ಲಿ ''ಅಛೂತ ಸಮಸ್ಯಾ'' ಎಂಬ ಪಂಜಾಬಿ ಲೇಖನ ಬರೆದಿದ್ದನು. ಈ ಲೇಖನದಲ್ಲಿ ಆತ ಅಸ್ಪೃಶ್ಯತೆಯ ಸಮಸ್ಯೆ ಬಗ್ಗೆ ಕ್ರಾಂತಿಕಾರಿ ದೃಷ್ಟಿಯಿಂದ ವಿಚಾರ ಮಂಡಿಸಿದ್ದ. ಇದು ಇಂದಿನ ಅಂಬೇಡಕರವಾದಿಗಳ ದೃಷ್ಟಿಕೋನವನ್ನು ಹೊಂದುತ್ತದೆ. ಈ ಲೇಖನವು ಇಂದಿಗೂ ಕೂಡ ವಾಮಪಂಥೀಯ ಆಂದೋಲನದ ಎಲ್ಲ ನಾಯಕರು, ಕಾರ್ಯಕರ್ತರು ದಲಿತ ಆಂದೋಲನಗಳನ್ನು ವಾಸ್ತವಿಕವಾಗಿ ಅರಿಯಲು ಸಹಾಯ ಮಾಡುತ್ತದೆ.

ವಾಮಪಂಥೀಯ ಆಂದೋಲನದ ಎಲ್ಲ ಬಣಗಳು, ಪಕ್ಷಗಳ ಕಾರ್ಯಕರ್ತರು ಭಗತಸಿಂಗ್ ಹಾಗೂ ಆತನ ಸಂಗಾತಿಗಳು ಬರೆದಿರುವ ಬೃಹತ್ ಪ್ರಮಾಣದ ವಾಙ್ಮಯದ ಸ್ವಲ್ಪ ಭಾಗವನ್ನಾದರೂ ಅಭ್ಯಸಿಸಲೇಬೇಕಾಗುತ್ತದೆ. ಅದರಲ್ಲಿ ಅವರ ಪತ್ರಗಳು, ಕರಪತ್ರಗಳು, ಆಗಾಗ ನೀಡಿದ ಸಂದೇಶಗಳು, ಕಿರು ಜೀವನ ಚರಿತ್ರೆಗಳು, ನ್ಯಾಯಾಲಯಗಳಲ್ಲಿ ನೀಡದ ಹೇಳಿಕೆಗಳು, ಕ್ರಾಂತಿಕಾರಿ ಕಾರ್ಯಕ್ರಮದ ಕರಡು, ಪತ್ರಿಕಾ ಲೇಖನಗಳು ಮುಂತಾದುವೆಲ್ಲ ಬರುತ್ತವೆ. ಭಗತ್‌ಸಿಂಗನಿಗಿಂತ ಮೊದಲಿನವರೂ, ಆತನ ಸಮಕಾಲೀನರೂ ಆನಂತರ ಬದುಕಿ ಉಳಿದ ಕ್ರಾಂತಿಕಾರಿ ಹಿರಿಯ ಜೀವಿಗಳೂ ಬೇಕಾದಷ್ಟು ಬರೆದಿದ್ದಾರೆ. ಇವನ್ನೆಲ್ಲ ಇನ್ನು ಮುಂದೆಯೂ ಇತಿಹಾಸವನ್ನು ನಿರ್ಮಿಸಬೇಕಾದ ಪೀಳಿಗೆಗಳ ಕಾರ್ಯಕರ್ತರು ಓದಬೇಕು.

ಭಗತ್‌ಸಿಂಗ್ ಹಾಗೂ ಆತನ ಕ್ರಾಂತಿಕಾರಿ ಸಂಗಾತಿಗಳು ಇಂಗ್ಲಿಷ್, ಪಂಜಾಬಿ, ಹಿಂದಿಗಳಲ್ಲಿ ಬರೆದಿದ್ದ ಎಲ್ಲ ಬರೆಹಗಳನ್ನು ಶ್ರೀ ಜಗಮೋಹನಸಿಂಹ ಹಾಗೂ ಶ್ರೀ ಚಮನಲಾಲ ಎಂಬುವರು ಸಂಪಾದಿಸಿ, 'ಶಹೀದ ಭಗತ್‌ಸಿಂಗ್ ಸಂಶೋಧನ ಸಮಿತಿ'ಯಿಂದ ಪ್ರಕಟಿಸಿದ್ದಾರೆ. ಅಲ್ಲದೆ ಭಗತ್‌ಸಿಂಗ್ ಲಾಹೋರ ಜೇಲಿನಲ್ಲಿ ಇದ್ದಾಗ, ಆತ ಕಷ್ಟಪಟ್ಟು, ಪ್ರತಿಬಂಧಿತ ಪುಸ್ತಕಗಳನ್ನು ತರಿಸಿಕೊಂಡು ಓದಿದ ಕೃತಿಗಳಿಂದ ಡಾಯರಿಯಲ್ಲಿ ಟಿಪ್ಪಣಿ ಮಾಡಿಕೊಂಡ ಅಂಶಗಳ (ನಾಲ್ಕು ನೋಟ್‌ಬುಕ್ಸ್) ಕೃತಿಯೂ ೧೯೮೯ರಲ್ಲಿ ಪ್ರಕಟಗೊಂಡಿದೆ. ಕನ್ನಡದಲ್ಲಿ ಈ ಪೈಕಿ ಕೆಲವು ಅನುವಾದವಾಗಿವೆ. ಇನ್ನೂ ಆಗಬೇಕಾದದ್ದೂ ಬಹಳಷ್ಟಿದೆ. ಆತನ ಶತಮಾನೋತ್ಸವ ಸನಿಹದಲ್ಲಿರುವಾಗ, ಈ ಉಳಿದ ಲೇಖನಗಳೂ ಕೂಡ ಕನ್ನಡದಲ್ಲಿ ಅನುವಾದವಾದರೆ ಕರ್ನಾಟಕದಲ್ಲಿಯೂ ಕ್ರಾಂತಿಕಾರಿ ವಿಚಾರಾಂದೋಲನವು ಬೆಳೆಯಲು ಅನುಕೂಲವಾದೀತು.

ಇಂದಿನ ಪರಿಸ್ಥಿತಿಯ ಬಗ್ಗೆ ಹೇಳಬೇಕೆಂದರೆ ಜಗತ್ತು ಬಹಳಷ್ಟು ಬಲಪಂಥೀಯವಾಗಿದೆ. ವಿಶ್ವಬ್ಯಾಂಕು, ಜಾಗತಿಕ ಹಣಕಾಸು ಸಂಸ್ಥೆ ಜಾಗತಿಕ ವಿಶ್ವವ್ಯಾಪಾರ ಸಂಸ್ಥೆಗಳ ಮೂಲಕ ನವಸಾಮ್ರಾಜ್ಯಶಾಹಿ ತಾನೇ ತಾನಾಗಿ, ಎಲ್ಲ ಪ್ರತಿರೋಧಗಳನ್ನು ನಿರ್ಲಕ್ಷಿಸಿ ಮುನ್ನುಗ್ಗುತ್ತಿದೆ. ಇಂಥ ಜಡಸ್ಥಿತಿ ಬಗ್ಗೆಯೂ ಭಗತಸಿಂಗ್ –

''ಯಾವಾಗ ಗತಿರೋಧದ ಪರಿಸ್ಥಿತಿಯುಂಟಾಗುವುದೋ, ಜನಜೀವನವನ್ನು ತನ್ನ ತೆಕ್ಕೆಯಲ್ಲಿ ತೆಗೆದುಕೊಂಡು ಹಿಸುಕಲೆತ್ನಿಸುವುದೋ, ಆಗ ಜನರು ಯಾವುದೇ ರೀತಿಯ ಬದಲಾವಣೆಗೆ ಹಿಂಜರಿಯುತ್ತಾರೆ. ಆಗ ಈ ಜಡತೆಯನ್ನು ನಿವಾರಿಸಲು ಕ್ರಾಂತಿಕಾರಿ ಸ್ಫೂರ್ತಿಯನ್ನುಂಟುಮಾಡುವುದು ಜರೂರಾಗುತ್ತದೆ. ಇಲ್ಲದಿದ್ದರೆ ಘೋರ ಅಧಃಪತನ, ವಿನಾಶಕಾರಿ ವಾತಾವರಣವು ಉಂಟಾಗುತ್ತದೆ. ಆಗ ಜನರನ್ನು ಪ್ರತಿಗಾಮಿಗಳು, ತಪ್ಪು ವಿಚಾರಗಳನ್ನು ತುಂಬಿ, ತಪ್ಪು ದಾರಿಯಲ್ಲಿ ಕರೆದೊಯ್ಯುವುದರಲ್ಲಿ ಸಫಲರಾಗುತ್ತಾರೆ. ಆಗ ಮನುಷ್ಯನ ಪ್ರಗತಿಯು ತಡೆಹಿಡಿಯಲ್ಪಡುತ್ತದೆ. ಇದನ್ನು ತಪ್ಪಿಸಬೇಕಾದರೆ ಪರಿಸ್ಥಿತಿಯನ್ನು ಪರಿವರ್ತಿಸಲಿಕ್ಕಾಗಿ ಜನರಲ್ಲಿ ಕ್ರಾಂತಿಕಾರಿ ಚೈತನ್ಯವನ್ನು ಸ್ಫುರಣಗೊಳಿಸಬೇಕು. ಏಕೆಂದರೆ ಮಾನವಾತ್ಮವು ಎಚ್ಚರಗೊಂಡು ಕ್ರಿಯಾಶೀಲವಾಗಬೇಕಾಗಿದೆ'' ಎಂದು ವಿಶ್ಲೇಷಿಸಿ, ಸರಿಯಾದ ರೀತಿಯಲ್ಲಿ, ಸಕಾಲದಲ್ಲಿ ಮಾಡಬೇಕಾದದ್ದನ್ನು ತಿಳಿಸಿ ಎಚ್ಚರಿಸುತ್ತಾನೆ. ಈಗ ಅಂತಹ ಸಮಯ ಬಂದಿದೆ. ಕ್ರಾಂತಿಕಾರಿ ಶಕ್ತಿಗಳು ಸಂಕಲ್ಪಗೈದು ಮುನ್ನುಗ್ಗಬೇಕಾಗಿದೆ.

**ಪ್ರಕಾಶ ಹಿಟ್ಟನಹಳ್ಳಿ**
ಅಂಚೆ ಹಿಟ್ಟನಹಳ್ಳಿ, ವಿಜಾಪುರ ತಾಲ್ಲೂಕು ಮತ್ತು ಜಿಲ್ಲೆ

# ದೇವರ ಸುತ್ತಾ ಒಂದು ಪ್ರದಕ್ಷಿಣೆ

ಪ್ರೊ॥ ಬಿ. ವಿ. ವೀರಭದ್ರಪ್ಪ

ಪ್ರದಕ್ಷಿಣೆಗೆ ಹೊರಟವನ ಮುಂದೆ ಪ್ರಶ್ನೆಗಳು ಪ್ರತ್ಯಕ್ಷವಾಗುತ್ತಿವೆಯಲ್ಲಾ! ದೇವರಿದ್ದಾನೆಯೆ ? ಎಂಬ ಪ್ರಶ್ನೆಗೆ ಉತ್ತರ ಪಡೆಯುವುದಕ್ಕಿಂತ ಮೊದಲು ನಾವು 'ದೇವರು' ಎಂದರೇನು ಎಂಬುದನ್ನು ತಿಳಿಯಬೇಕಾಗಿದೆ. ನಮ್ಮ ಭಯ ಭೀತಿಗಳನ್ನು ತೊಲಗಿಸಿ ಆಸೆ, ಆಕಾಂಕ್ಷೆಗಳನ್ನು ಈಡೇರಿಸುವವನೇ ನಮ್ಮ ದೇವರಲ್ಲವೇ ? 'ನಮ್ಮ ದೇವರು' ಯಾಕೆಂದರೆ ಪ್ರಪಂಚದಲ್ಲಿ ಎಷ್ಟು ಧರ್ಮಗಳಿವೆಯೋ ಅಷ್ಟು ಬಗೆಯ ದೇವರುಗಳಿದ್ದಾರೆ. ಅಷ್ಟೇಕೆ ನಮ್ಮದು ಎನ್ನುವ ಹಿಂದು ಧರ್ಮದಲ್ಲಿಯೇ ಅನೇಕ ದೇವರುಗಳಿದ್ದಾರೆ. ಬ್ರಹ್ಮ, ವಿಷ್ಣು, ಮಹೇಶ್ವರ, ರಾಮ, ಕೃಷ್ಣ, ಆಂಜನೇಯ, ಗಣಪತಿ, ಲಕ್ಷ್ಮಿ, ಸರಸ್ವತಿ, ಪಾರ್ವತಿ, ಕಾಳಿ, ಮಾರಿ, ಚಾಮುಂಡಿ ಇತ್ಯಾದಿ, ಮೂವ್ವತ್ತ ಮೂರು ಕೋಟಿ ದೇವರುಗಳಿದ್ದಾರೆ ಎಂದು ಹೇಳುತ್ತಾರೆ. ಬಹುಶಃ ಭಾರತದ ಜನಸಂಖ್ಯೆ ೩೩ ಕೋಟಿ ಇದ್ದಾಗ ಅಷ್ಟು ದೇವರುಗಳಿದ್ದಿರಬೇಕು. ಇಂದು ಭಾರತದ ಜನಸಂಖ್ಯೆ ೧೦೬ ಕೋಟಿಯನ್ನು ದಾಟಿ ಮುನ್ನುಗ್ಗುತ್ತಲೇ ಇದೆ. ಆದ್ದರಿಂದ ದೇವರುಗಳ ಸಂಖ್ಯೆಯೂ ಬೆಳೆಯುತ್ತಿರಬೇಕು.

ಹಾಗಲ್ಲ, ಇರುವುದು ಒಬ್ಬನೇ ದೇವರು. ಅವನಿಗೆ ಅನೇಕ ಹೆಸರುಗಳಿವೆ ಅಷ್ಟೆ, ಎಂದು ಕೆಲವರು ಹೇಳುತ್ತಾರೆ. ಅವನು ನಿರಾಕಾರ, ನಿರ್ಗುಣ, ಸೃಷ್ಟಿಕರ್ತ, ಸರ್ವಶಕ್ತ, ಸರ್ವಾಂತರ್ಯಾಮಿ, ಅವಿನಾಶಿ ಎಂದೆಲ್ಲಾ ಹೇಳುತ್ತಾರೆ. ಈ ಜಗತ್ತು ಅವನ ಸೃಷ್ಟಿ. ಇದು ಅವನಿಂದಲೇ ಉದಿಸಿದೆ, ಅವನಲ್ಲೇ ಐಕ್ಯವಾಗುತ್ತದೆ ಎಂದೂ ಹೇಳುತ್ತಾರೆ. ಹೀಗೆ ದೇವರನ್ನು ಎಲ್ಲ ಕಡೆಗೂ ಅವನು, ಅವನು ಎಂದೇ ಸಂಬೋಧಿಸುತ್ತಾರೆಯೇ ವಿನಾ ಅವಳು ಎಂದು ಹೇಳುವುದು ಕಡಿಮೆ. ಇಲ್ಲಿ ನೋಡಿ, ದೇವರನ್ನು 'ಭಗವಂತ' ಎಂದೂ ಕರೆಯುತ್ತಾರೆ. ಏನು ಹಾಗೆಂದರೆ ? ಶಾಸ್ತ್ರದ ಪ್ರಕಾರ 'ಭಗ'ವುಳ್ಳವನು ಭಗವಂತ. (ಬುದ್ಧಿಯುಳ್ಳವನು ಬುದ್ಧಿವಂತ ಎನ್ನುವ ಹಾಗೆ). 'ಭಗ' ಎಂದರೇನು ? ಸ್ತ್ರೀ ಜನನಾಂಗ. ಭಗವತಿ ಎಂಬುದು ಸಹಜ ಸ್ವರೂಪ. ಜನ್ಮ ನೀಡುವವಳನ್ನು ಸೃಷ್ಟಿಕರ್ತಳನ್ನು 'ಭಗವತಿ' ಜಗನ್ಮಾತೆ ಎನ್ನಲಡ್ಡಿಯಿಲ್ಲ. 'ಭಗವಂತ' ಇರಲು ಹೇಗೆ ಸಾಧ್ಯ ? ಇದ್ದರೆ ಆ ಪದವನ್ನು ಪುಲ್ಲಿಂಗದಲ್ಲಿ ಸಂಬೋಧಿಸುವುದು ಎಷ್ಟು ಸರಿ ? ಪುರುಷನ ಉಡುಗೆಯಲ್ಲಿರುವ ಸ್ತ್ರೀಯೇ 'ಭಗವಂತ', ದೇವರು ಎಂದು ಒಪ್ಪಿಕೊಳ್ಳಲೇಬೇಕಾಗುತ್ತದೆ. ಮೂಲ ಸೃಷ್ಟಿಕರ್ತಳಾದ 'ಭಗವತಿ'ಯನ್ನು ಮೂಲೆಗೆ ತಳ್ಳಿ ಅಲ್ಲಿ 'ಭಗವಂತ' ಮಿಂಚುತ್ತಿದ್ದಾನೆ ಎಂಬುದು ಸ್ಪಷ್ಟ. ಇದು ಪುರುಷ ಪ್ರಧಾನ ಸಮಾಜ ಸ್ತ್ರೀಯನ್ನು ತನ್ನ ಅಧೀನ ಮಾಡಿಕೊಂಡ ಪ್ರಕ್ರಿಯೆಯನ್ನು ಸಾಬೀತುಪಡಿಸುತ್ತದೆ.

ಭಗವಂತ, ಅಲ್ಲ ಭಗವತಿಯಿಂದಲೇ ಜಗತ್ತು ಸೃಷ್ಟಿಯಾಯಿತು ಎಂಬುವುದನ್ನು ಒಪ್ಪುವುದಾದರೆ, ಅವನು ಅಲ್ಲ ಅವಳು ಜಗತ್ತನ್ನು ಸೃಷ್ಟಿಸುವ ಮುನ್ನ ಎಲ್ಲಿದ್ದಳು ? ಜಗತ್ತೇ ಇಲ್ಲದಿದ್ದಾಗ ಆ ಜಗನ್ಮಾತೆ ಹೇಗಿದ್ದಳು ? ಎಲ್ಲಿದ್ದಳು ? ಅವಳನ್ನು ಯಾರು ಸೃಷ್ಟಿ ಮಾಡಿದ್ದರು ? ಎಂಬ ಪ್ರಶ್ನೆಗಳು ಏಳುತ್ತವೆ. ಅದಕ್ಕೆ ಆಸ್ತಿಕ ಮಹಾಶಯರು ಕೊಡುವ ಉತ್ತರ ಹೀಗಿರುತ್ತದೆ. ದೇವರು ಸ್ವಯಂಭೂ, ಅವನು/ಳು ತನಗೆ ತಾನೇ ಸೃಷ್ಟಿಯಾದಳು, ಅವನ(ಳ)ನ್ನು ಯಾರೂ ಸೃಷ್ಟಿ ಮಾಡಲಾರರು ಎಂದು ಹೇಳುತ್ತಾರೆ. ಅವನು(ಳು) ಸ್ವಯಂಭುವಾದರೆ ತನಗೆ ತಾನೇ ಸೃಷ್ಟಿಯಾಗಿದ್ದರೆ ಈ ಜಗತ್ತು ಈ ವಿಶ್ವ ತನಗೆ ತಾನೇ ಏಕೆ ಸೃಷ್ಟಿಯಾಗಿರಬಾರದು ? ಡಾರ್ವಿನ್ನನ ವಿಕಾಸವಾದದಿಂದ ಇದು ಸ್ಪಷ್ಟವಾಗುತ್ತಿದೆಯಲ್ಲವೇ ?

ಇನ್ನು ಧರ್ಮಗಳ ಕಡೆಗೆ ಸ್ವಲ್ಪ ತಿರುಗೋಣ : ಹಿಂದು, ಯಹೂದಿ, ಕ್ರೈಸ್ತ, ಇಸ್ಲಾಂ, ಬೌದ್ಧ, ಜೈನ, ಸಿಖ್, ಪಾರಸಿ ಇತ್ಯಾದಿ ಎಷ್ಟೋ ಧರ್ಮಗಳಿವೆ. ಪ್ರತಿಯೊಂದು ತಾನೇ ಉಳಿದ ಧರ್ಮಗಳಿಗಿಂತ ಶ್ರೇಷ್ಠ ಎಂದು ಹೇಳುತ್ತದೆ. ಅಷ್ಟೇ ಅಲ್ಲ, ಅದನ್ನು ಸಾಧಿಸಲು ಧರ್ಮಯುದ್ಧಗಳೇ ನಡೆಯುತ್ತವೆ. ಕ್ರಿಶ್ಚಿಯನ್ನರು ಅದನ್ನು ಕ್ರುಸೇಡ್ ಅನ್ನುತ್ತಾರೆ. ಮುಸ್ಲಿಮರು ಅದನ್ನೇ ಜೆಹಾದ್ ಎನ್ನುತ್ತಾರೆ. ಹಿಂದುಗಳಿಗೆ ಅದು ಧರ್ಮಯುದ್ಧ.

ಧರ್ಮ ಸಂಸ್ಥಾಪನೆಗಾಗಿ ತಾನು ಪುನಃ ಪುನಃ ಅವತರಿಸುತ್ತೇನೆ ಎಂದು ಕೃಷ್ಣಪರಮಾತ್ಮ ಗೀತೆಯಲ್ಲಿ ಹೇಳಿದ್ದಾನೆ ಅಲ್ಲವೇ ! ಬಂಧು ಬಾಂಧವರನ್ನು ಹೇಗೆ ಕೊಲ್ಲಲಿ, ನನಗೆ ರಾಜ್ಯವೂ ಬೇಡ, ಕೋಶವೂ ಬೇಡ ಎಂದು ಅತ್ಯಂತ ಮಾನವೀಯವಾಗಿ ಸ್ಪಂದಿಸಿದ ಅರ್ಜುನನನ್ನು 'ಸತ್ತರೆ ವೀರಸ್ವರ್ಗ, ಗೆದ್ದರೆ ರಾಜ್ಯ' ಎಂದು ಹುರಿದುಂಬಿಸಿ ಅವನಿಂದ ಕುರುಕ್ಷೇತ್ರದಲ್ಲಿ ಮಾರಣ ಹೋಮ ಮಾಡಿಸಿದವನು ಭಗವಾನ್ ಶ್ರೀಕೃಷ್ಣ ಪರಮಾತ್ಮ! ಅಸಂಖ್ಯ ಸ್ತ್ರೀಯರನ್ನು ವಿಧವೆಯರನ್ನಾಗಿ ಮಾಡಿಸಿದ, ಮಕ್ಕಳನ್ನು ಅನಾಥರನ್ನಾಗಿಸಿದ ಅವನು ಧರ್ಮರಕ್ಷಕ !

ಮಹಾಭಾರತದ ಕೊನೆಯಲ್ಲಿ ವಿಜಯಿಗಳಾದ ಪಾಂಡವರು ಧರ್ಮರಾಯನ ಮುಂದಾಳತ್ವದಲ್ಲಿ ಹಸ್ತಿನಾವತಿಯ ಮುಖ್ಯದ್ವಾರದ ಬಳಿ ಬಂದಾಗ ಅಲ್ಲಿ ಅನೇಕ ಬ್ರಾಹ್ಮಣರು ಅವರನ್ನು ವಿಜಯಗೀತೆಗಳಿಂದ ಸ್ವಾಗತಿಸುತ್ತಾರೆ. ಅವರ ಮಧ್ಯದಿಂದ ಒಬ್ಬ ಬ್ರಾಹ್ಮಣ ಮುಂದೆ ಬಂದು ''ಧರ್ಮರಾಯ ನೀನು ಈ ಯುದ್ಧದಲ್ಲಿ ಗೆದ್ದು ಏನು ಸಾಧಿಸಿದೆ ? ಅಲ್ಲಿ ನೋಡು, ಎಷ್ಟು ಮಹಿಳೆಯರು, ಮಕ್ಕಳು ಅನಾಥರಾಗಿ ಆಕ್ರಂದನ ಮಾಡುತ್ತಿದ್ದಾರೆ'' ಎಂದು ತನ್ನ ಹೃದಯಾಂತರಾಳದ ಪ್ರಶ್ನೆಯನ್ನು ಮುಂದಿಡುತ್ತಾನೆ. ಆಗ ಆ ಬ್ರಾಹ್ಮಣ ಸಮುದಾಯ ಅವನನ್ನು ಹಿಡಿದು ಎಳೆದುಕೊಂಡುಹೋಗಿ ಹೊಡೆದು ಸಾಯಿಸುತ್ತದೆ. ಅವನು ಬ್ರಾಹ್ಮಣನಲ್ಲ, ಚಾರ್ವಾಕ ಎಂಬ ರಾಕ್ಷಸ, ಬ್ರಾಹ್ಮಣ ವೇಷದಲ್ಲಿ ಇಲ್ಲಿ ಬಂದು ಧರ್ಮರಾಯನಿಗೆ ಅವಮಾನ ಮಾಡಿದ. ಆದ್ದರಿಂದ ಅವನನ್ನು ಹಿಡಿದು ಕೊಲ್ಲಲಾಯಿತು ಎಂದು ಅವರು ಹೇಳುತ್ತಾರೆ. ಮಹಾಭಾರತದ ಈ ಪ್ರಸಂಗ ಅತ್ಯಂತ ಮಾರ್ಮಿಕವಾಗಿದೆ. ದಯೆ, ಅನುಕಂಪ, ಮಾನವೀಯ ಸಂಬಂಧಗಳಿಗೆ ಧರ್ಮದಲ್ಲಿ ಸ್ಥಾನವಿಲ್ಲ ಎಂಬುದನ್ನು ಅದು ಸ್ಪಷ್ಟಪಡಿಸುತ್ತದೆ. ಇಂದು ಪ್ರಪಂಚದಲ್ಲಿ ಧರ್ಮದ ಕಾರಣದಿಂದ ನಡೆಯುತ್ತಿರುವ ಪವಿತ್ರ ಯುದ್ಧಗಳಲ್ಲೇ ಹೆಚ್ಚು ಜನ ಹತರಾಗುತ್ತಿದ್ದಾರೆ.



ದೈವಾಧೀನಂ ಜಗತ್ಸರ್ವಂ
ದೈವಂ ಮಂತ್ರಾಧೀನಂ ತಥಾ ।
ಮಂತ್ರಂ ಬ್ರಾಹ್ಮಣಾಧೀನಂ
ಬ್ರಾಹ್ಮಣೋ ಮಮ ದೇವತಾ ॥

ಈ ಜಗತ್ತೆಲ್ಲಾ ದೇವರ ಅಧೀನ, ದೇವರು ಮಂತ್ರದ ಅಧೀನ, ಮಂತ್ರ ಬ್ರಾಹ್ಮಣಾಧೀನ. ಆದ್ದರಿಂದ ಬ್ರಾಹ್ಮಣನೇ ನನ್ನ ದೇವರು ಎಂಬ ಈ ಶ್ಲೋಕ ಮಹಾಭಾರತದಲ್ಲಿದೆ. ಇದು ದೇವರ ರಹಸ್ಯವನ್ನು ಬಿಚ್ಚಿಡುವ ಒಂದು ಪ್ರಾಮಾಣಿಕ ಯತ್ನ. ಇಲ್ಲಿ ಬ್ರಾಹ್ಮಣ ಎಂಬ ಪದವನ್ನು ವಿಶಾಲ ಅರ್ಥದಲ್ಲಿ ಗ್ರಹಿಸಬಹುದು. ಅದರಲ್ಲಿ ಪಾದ್ರಿ ಮುಲ್ಲಾಗಳೂ ಎಲ್ಲಾ ಧರ್ಮಗಳ ಪುರೋಹಿತರೂ ಸೇರುತ್ತಾರೆ. ಎಲ್ಲಾ ಧರ್ಮಗಳ ಪುರೋಹಿತರೇ ಜೀವಂತ ದೇವರುಗಳು. ಅವರು ಹೇಳಿದ ಹಾಗೆ ಆಯಾ ಧರ್ಮಗಳ ಮೂಗದೇವರುಗಳು ಕೇಳುತ್ತಾರೆ.

ಮುಗ್ಧ ಮಾನವರಲ್ಲಿ ಭಾವನಾತ್ಮಕ ಭೀತಿಗಳನ್ನು ಬಿತ್ತಿ ಬೆಳೆಸಿ ಅವರಿಗೆ ಪರಿಹಾರ ನೀಡುವ ದೇವರುಗಳನ್ನು ಹುಟ್ಟುಹಾಕಿ ಸಾಕಿ ಸಲಹುವುದು ಪುರೋಹಿತರುಗಳ ಕೆಲಸವಾಗಿದೆ. ಮುಗ್ಧರ ಮೂಢನಂಬಿಕೆಗಳೇ ಪೂಜಾರಿ, ಪುರೋಹಿತರ ಬಂಡವಾಳ. ಇದು ಹಿಂದು ಧರ್ಮಕ್ಕಷ್ಟೇ ಸೀಮಿತವಾಗಿಲ್ಲ. ವಿಶ್ವದ ಎಲ್ಲ ಧರ್ಮಗಳಿಗೂ ಈ ಮಾತು ಅನ್ವಯಿಸುತ್ತದೆ.

ಪ್ರಾಚೀನ ಕಾಲದಿಂದಲೂ ಅನೇಕರು ಈ ಪೂಜಾರಿ, ಪುರೋಹಿತರ ಶೋಷಣೆಯನ್ನು ಪ್ರತಿಭಟಿಸಿ ಅವರೊಡನೆ ಹೋರಾಟ ಮಾಡುತ್ತಾ ಬಂದಿದ್ದಾರೆ. ಈ ಪೂಜಾರಿಗಳು ಅವರನ್ನು ಚಾರ್ವಾಕರು, ರಾಕ್ಷಸರು, ನಾಸ್ತಿಕರು ಎಂದು ಏನೇನೋ ಹೆಸರುಗಳಿಂದ ಕರೆದು ಹೀಯಾಳಿಸಿದ್ದಾರೆ. ನಮ್ಮಲ್ಲಿ ಬಹು ಹಿಂದಿನಿಂದಲೂ ಚಾರ್ವಾಕ ಮತ, ಲೋಕಾಯತ, ಭೌತವಾದ, ಸಾಂಖ್ಯ, ವೈಶೇಷಿಕ ಇತ್ಯಾದಿ ಮತ ಪಂಥಗಳು ತಮ್ಮದೇ ಆದ ಜೀವನ ವಿಧಾನವನ್ನು, ಮಾನವತಾವಾದವನ್ನು ಪ್ರತಿಪಾದಿಸುತ್ತಾ ಬಂದಿವೆ. ಆದರೆ ಆಸ್ತಿಕ ಮಹಾಶಯರು ಬಹುಸಂಖ್ಯಾತರಾದ್ದರಿಂದ ಅಲ್ಪಸಂಖ್ಯಾತರ ಅಭಿಪ್ರಾಯಗಳನ್ನು ಧಿಕ್ಕರಿಸುತ್ತಾ ಅವರ ವಾದಗಳಲ್ಲಿ ತಮ್ಮ ಸಿದ್ಧಾಂತಗಳನ್ನು ಕಲಬೆರಕೆ ಮಾಡುತ್ತಾ ಮಾನವತಾವಾದವನ್ನು ನಾಶ ಮಾಡುತ್ತಾ ಬಂದಿದ್ದಾರೆ. ಭೌತವಾದಿಗಳ ಪ್ರಾಚೀನ ಚಿಂತನೆಗಳೇ ವಿಜ್ಞಾನದ ಉಗಮಕ್ಕೆ ಕಾರಣವಾಗಿರುವುದು ಎಲ್ಲರಿಗೂ ತಿಳಿದ ವಿಷಯ. ಕಣಾದ, ಕಪಿಲರು ನಮ್ಮ ಪ್ರಾಚೀನ ವಿಜ್ಞಾನಿಗಳು. ಯೂರೋಪಿನಲ್ಲೂ ೧೮ನೇ ಶತಮಾನದಲ್ಲಿ ಅನೇಕ ವಿಜ್ಞಾನಿಗಳನ್ನು ಚಿತ್ರಹಿಂಸೆಗೆ ಗುರಿಪಡಿಸಲಾಯಿತು. ಆದರೂ ಇಂದು ವಿಜ್ಞಾನ ಬೆಳೆದು ಅನೇಕ ರೀತಿಯಲ್ಲಿ ಮಾನವನ ಅಭಿವೃದ್ಧಿಗೆ ಕಾರಣವಾಗಿದೆ.

ಧರ್ಮನಿರಪೇಕ್ಷತೆ, ಜಾತ್ಯತೀತತೆ ಹಾಗೂ ಮಾನವತಾವಾದದಿಂದ ಅನೇಕ ರೀತಿಯಲ್ಲಿ ಮಾನವನ ಏಳಿಗೆಯಾಗಿದೆ.

೧. ವಿಜ್ಞಾನ ಮತ್ತು ವೈಜ್ಞಾನಿಕ ಮನೋಭಾವ ಬೆಳೆದು ಮೂಢನಂಬಿಕೆಗಳು ಹಿಂದೆ ಸರಿಯುತ್ತಿವೆ.

೨. ತಂತ್ರಜ್ಞಾನವನ್ನು ಮಾನವನ ಅಭ್ಯುದಯಕ್ಕಾಗಿ ಬಳಸಲಾಗುತ್ತಿದೆ.

೩. ಹಿಂದೆ ಶಿಕ್ಷಣ ಧರ್ಮದ ಏಕಸ್ವಾಮ್ಯವಾಗಿತ್ತು. ಇಂದು ಧರ್ಮ ನಿರಪೇಕ್ಷವಾದ ಮೌಲ್ಯಾಧಾರಿತ ನೈತಿಕ ಶಿಕ್ಷಣ ಶಾಲಾಕಾಲೇಜುಗಳಲ್ಲಿ ಕಾಲಿಟ್ಟಿದೆ.

೪. ಇಂದು ಕಲೆ ವಿಜ್ಞಾನ ಮತ್ತು ತತ್ವಜ್ಞಾನಗಳು ದೇವರು, ಧರ್ಮಗಳಿಂದ ಹೊರ ಬಂದು ಸ್ವತಂತ್ರವಾಗಿ ಬೆಳೆದು ಮನುಷ್ಯನಲ್ಲಿ ಮಾನವೀಯ ಸಂಬಂಧಗಳನ್ನು ಬೆಳಸುತ್ತಿವೆ.

೫. ಇಂದು ಪ್ರಜಾಪ್ರಭುತ್ವ, ಅಭಿಪ್ರಾಯ ಸ್ವಾತಂತ್ರ್ಯ, ಭಿನ್ನಮತಗಳು ಜೀವನದಲ್ಲಿ ರೂಢಿಗತವಾಗಲು ಧರ್ಮನಿರಪೇಕ್ಷತೆ ಸಹಾಯಕವಾಗಿದೆ.

೬. ಇಂದು ವಿಶ್ವದಾದ್ಯಂತ ಮಾನವ ಹಕ್ಕುಗಳಿಗಾಗಿ ಚಳುವಳಿಗಳು ನಡೆಯುತ್ತಿವೆ.

ದೇವರ ಸುತ್ತಾ ಪ್ರದಕ್ಷಿಣೆ ಹಾಕುವುದು ಎಂದರೆ ತನ್ನಲ್ಲಿ ತನಗೆ ನಂಬಿಕೆ ಇಲ್ಲ ಎಂದು ಒಪ್ಪಿಕೊಂಡು ಪೂಜಾರಿಯ ಮಂತ್ರತಂತ್ರಗಳಿಗೆ ಬಲಿಯಾಗುವುದು ಎಂದಲ್ಲವೆ ? ಆದರೆ ಇಂದು ಮಾನವನ ದೃಷ್ಟಿ ಪೂಜಾರಿಗಳಿಂದ ದೂರ ಸರಿದು ತನ್ನತ್ತ ಮತ್ತು ಸಹ ಮಾನವರತ್ತ ಹರಿಯತೊಡಗಿದೆ. ಕೇವಲ ಗಂಟಲಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದ-'ಅಹಂ ಬ್ರಹ್ಮಾಸ್ಮಿ' (ನಾನು ಬ್ರಹ್ಮನಾಗಿದ್ದೇನೆ) 'ಸರ್ವಂ ಖಲ್ವಿದಂ ಬ್ರಹ್ಮ' (ಸರ್ವಸ್ವವೂ ಬ್ರಹ್ಮನಿಂದ ಕೂಡಿದೆ) ಎಂಬ ಉಪನಿಷತ್ತಿನ ಮಹಾವಾಕ್ಯಗಳ ಅಂತರಾರ್ಥ ಮಾನವ ಹೃದಯದ ಅಂತರಾಳವನ್ನು ತುಂಬಿಕೊಳ್ಳಬೇಕಾಗಿದೆ. ಆಗಲೇ ಅವನಲ್ಲಿ ಮಾನವೀಯತೆ ಮತ್ತು ವಿಶ್ವಪ್ರೇಮ ನೆಲೆನಿಲ್ಲುವಂತಾದೀತು.

**ಪ್ರೊ॥ ಬಿ. ವಿ. ವೀರಭದ್ರಪ್ಪ**
ಬಿ.೧೮, ವಿದ್ಯಾನಗರ, ದಾವಣಗೆರೆ - ೫೭೭ ೦೦೫

ಪ್ರೊ॥ ಎಮ್. ಆರ್. ನಾಗರಾಜು

# ಅಂತಾರಾಷ್ಟ್ರೀಯ ಭೌತವಿಜ್ಞಾನ ವರ್ಷ 2005

## ಒಂದು ಮೆಲುಕು

*ಅಂತಾರಾಷ್ಟ್ರೀಯ ಭೌತವಿಜ್ಞಾನ ವರ್ಷದ ಈ ಸಂದರ್ಭದಲ್ಲಿ ದೈನಂದಿನ ಕಾರ್ಯದಕ್ಷತೆ, ವಿಚಾರವಂತಿಕೆಗಳನ್ನು ಬೆಳೆಸಿಕೊಳ್ಳುವುದರ ಜೊತೆಗೆ ಭವ್ಯಕಲ್ಪನೆಗಳನ್ನು ರೂಢಿಸಿಕೊಳ್ಳಲು ವಿಜ್ಞಾನ ವಿಪುಲ ಅವಕಾಶಗಳನ್ನು ಒದಗಿಸಿದೆ. 'ಬೆಳಕು ಬಂದಿದೆ ಮನೆಯ ಹೊಸ್ತಿಲವರೆಗೆ ಕಿಟಕಿ ಬಾಗಿಲ ತೆರೆದು ಬರಮಾಡು ಒಳಗೆ' ಎಂಬ ಕನ್ನಡ ಕವಿವಾಣಿಯನ್ನು ನೆನಪಿಸುತ್ತಾ ವಿಜ್ಞಾನದ ಬಗೆಗಿನ ಧೋರಣೆ ಬದಲಾಯಿಸಲು ಸದವಕಾಶವಾಗಿದ್ದ ೨೦೦೫ನೇ ವರ್ಷ ಸದ್ದಿಲ್ಲದೆ ಅಥವಾ ಕನಿಷ್ಠ ಸದ್ದಿನೊಂದಿಗೆ ಸಾಗುತ್ತಾ ನಿಟ್ಟುಸಿರು ಬಿಡುವುದು – ಎಲ್ಲ ಸಂವೇದನಶೀಲ ವಿಜ್ಞಾನ ಅಧ್ಯಯನಕಾರರಿಗೆ ಅನಿವಾರ್ಯವಾಗಿದೆ.*



**ಯಾ**ವುದೇ ವರ್ಷವನ್ನು ನಿರ್ದಿಷ್ಟ ಆಶಯದ ವಿಶೇಷ ಪ್ರತಿಪಾದನೆಗೆಂದು ಘೋಷಿಸುವುದು ವಾಡಿಕೆ. ಅದು ಸಾರ್ವಜನಿಕ ಮನ್ನಣೆಯ ಘೋಷಣೆಯಾಗಿ ಜನರ ಮನ ಗಮನವನ್ನು ಸೆಳೆಯುವುದು ಅಪರೂಪವೆ. ಅಂತಾರಾಷ್ಟ್ರೀಯ ಭೌತವಿಜ್ಞಾನ ವರ್ಷವಾಗಿ ೨೦೦೫ನೇ ವರ್ಷದ ಆಚರಣೆಯೂ ಇದಕ್ಕಿಂತ ಭಿನ್ನವಾಗಲಿಲ್ಲ. 'ಈ ಸಂಭ್ರಮ ಕೇವಲ ಭೌತವಿಜ್ಞಾನಿಗಳದ್ದೋ, ಹೆಚ್ಚೆಂದರೆ ವಿಜ್ಞಾನಿಗಳದ್ದೋ ಆಗಿರಬೇಕು. ಸಾಮಾನ್ಯ ಮಂದಿಯಾದ ನಮಗೇನು ಇದರ ಗೊಡವೆ ?' – ಎಂಬಂತೆ ಅನಿಸಿರಬಹುದೆಂದು ಊಹಿಸಲು ಸಾಧ್ಯ. ಅಂತಾರಾಷ್ಟ್ರೀಯವಾಗಿ ಕಂಡುಬಂದ ಈ ಉಪೇಕ್ಷೆ ಭಾರತದಲ್ಲಿ ಮತ್ತೂ ತೀವ್ರವಾಗಿ ಕಂಡುಬಂದಿದ್ದು ಸಹಜವೇ. ಈ ಉಪೇಕ್ಷೆಯ ಹಿಂದಿರುವ ಅಪಾಯಕಾರಿ ಪರಿಣಾಮಗಳತ್ತ ಗಮನ ಹರಿಸುವುದು ಈ ಲೇಖನದ ಆಶಯ.

'ನಿನ್ನ ಕಣ್‌ಮನ ತಿಳಿವಷ್ಟು ನಿನ್ನ ಜಗ; ನಿನ್ನನಳಿಸುವನಗಿಸುವರು ನಿನ್ನ ಮಂದಿ' – ಎಂದು ಮಂಕುತಿಮ್ಮನ ಕಗ್ಗ ನಮಗರಿಯದ ವಿಷಯದ ಬಗ್ಗೆ ಜನರ ನಿಲುವಿನ ಕಟುವಾಸ್ತವ ಸತ್ಯವನ್ನು ತಿಳಿಸುತ್ತದೆ. ಆಧುನಿಕ ಜಗತ್ತಿನಲ್ಲಿ ಈ 'ಅಜ್ಞತೆ'ಯನ್ನೂ ಅಪಾಯಕಾರಿ ಪರಿಣಾಮಗಳನ್ನುಂಟುಮಾಡಲು 'ತಜ್ಞರು' ಬಳಕೆ ಮಾಡಿಕೊಳ್ಳುವುದು ಇಡೀ ಜೀವಿಗೋಲವು ಗಂಡಾಂತರಕ್ಕೆ ಒಳಗಾಗಿರುವುದರಿಂದಲೇ ವಿದಿತ.

ಈ ಗಂಡಾಂತರಕಾರಿ ಪರಿಣಾಮದ ಪರಿಮಾಣ ಆಧುನಿಕ ಜಗತ್ತಿನಲ್ಲಿ ಅಧಿಕವಾಗಿರಬಹುದಾದರೂ ಈ ಪ್ರವೃತ್ತಿ ಇಂದಿನದೇನಲ್ಲ. ಯಾವುದೇ ಸತ್ಯವನ್ನು ಮೊದಲು ಗ್ರಹಿಸಿದ ಮಂದಿ ಉಳಿದವರು ಆ ಸತ್ಯವನ್ನು ಅರಿಯರೆಂಬುದು ಮನವರಿಕೆಯಾದ ಕೂಡಲೆ ಅದರ ದುರುಪಯೋಗಕ್ಕೆ ಮುಂದಾಗಿರುವುದು ಇತಿಹಾಸದುದ್ದಕ್ಕೂ ವೇದ್ಯವಾಗಿದೆ.

ಕೆಂಡದ ಮೇಲೆ ನಡೆದಾಡುವುದು (ಓಡುವುದು), ಅಂಗೈಯಲ್ಲಿ ಕರ್ಪೂರ ಉರಿಸುವುದು ಅಪಾಯಕಾರಿಯಲ್ಲವೆಂಬುದು ಅನುಭವದಿಂದ ಗ್ರಹಿಸಬಹುದಾದ ಸತ್ಯ. ಸರಳ ಭೌತಶಾಸ್ತ್ರ ತತ್ತ್ವಗಳೂ ಈ ವಿದ್ಯಮಾನಗಳು ಏಕೆ ನಿರಪಾಯಕಾರಿಯೆಂಬುದನ್ನು ವಿವರಿಸಬಲ್ಲವು. ಆ ವಿಷಯವನ್ನು ಪರೀಕ್ಷಿಸದೆ ಉಪೇಕ್ಷಿಸುವ ಜನತೆಗೆ, ತಮಗೆ ಅಲೌಕಿಕ ಶಕ್ತಿ ಇದೆ ಎಂದು ನಂಬಿಸಿ ದೇವರ ವಾರಸುದಾರರು ಮೆರೆಯಲಿಲ್ಲವೆ ? ಈಗಲೂ ಮೆರೆಯುತ್ತಿಲ್ಲವೆ ? ಈ ಮೋಸಕ್ಕೆ ಅವಕಾಶವಾದದ್ದು ಭೌತವಿಜ್ಞಾನದ ಉಪೇಕ್ಷೆಯ ಪರಿಣಾಮವಲ್ಲವೆ ? ಭೌತಶಾಸ್ತ್ರ ನಮ್ಮ 'ಕಣ್‌ಮನ'ದ ಗ್ರಹಿಕೆಗೆ ದೂರವಿರುವುದೆಂಬ ಕಾರಣದಿಂದ ನಾವು ಘೋಷಿಸಿಕೊಂಡ ಅಜ್ಞಾನ ಈ ಬಗ್ಗೆ ತಿಳಿದವರ 'ಬಂಡವಾಳ'ವಾಯಿತಲ್ಲವೆ ?

ಈ ಪ್ರವೃತ್ತಿ ಎಲ್ಲ ಕಾಲದ್ದು ಹೇಗೋ, ಹಾಗೆಯೇ ಎಲ್ಲ ದೇಶದ್ದೂ ಕೂಡಾ. ಗ್ರೀಸಿನ ದೇಗುಲವೊಂದರ ಬಾಗಿಲು, ಯಜ್ಞಕುಂಡದಲ್ಲಿ ಬೆಂಕಿ ಉರಿಸಿದಾಗ ತಂತಾನೆ ತೆರೆದುಕೊಳ್ಳುತ್ತಿತ್ತು. ವಾಸ್ತವವೆಂದರೆ ಯಜ್ಞಕುಂಡದ ಕೆಳಗೆ ಇರುವ ಗಾಳಿಯ ಆವರಣ ಬಿಸಿಯಾಗಿ ಬಿಸಿಗಾಳಿಯ ವಿಕಾಸದಿಂದ ಬಾಗಿಲು ತೆರೆದುಕೊಳ್ಳುವ ವಿನ್ಯಾಸ ಕೈಗೊಳ್ಳಲಾಗಿತ್ತು. ಸಾಮಾನ್ಯ ಭೌತಶಾಸ್ತ್ರದ ನಿಯಮವಾದ ಅನಿಲವಿಕಾಸದಿಂದ ಈ ವಿಷಯವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿತ್ತಾದರೂ ಜನರು ಈ ಬಗ್ಗೆ ಅಜ್ಞರಾದ ಕಾರಣ ಶೋಷಣೆ ಅವ್ಯಾಹತವಾಗಿ ನಡೆಯಿತು.

ಅದೃಷ್ಟವಶಾತ್ ಎಲ್ಲ ಭೌತವಿಜ್ಞಾನ ಅನ್ವೇಷಕರೂ ಈ ಬಗೆಯ ಮೋಸಗಾರಿಕೆಯವರಾಗಿರಲಿಲ್ಲ. ಅವರೂ ಮೋಸಗಾರಿಕೆಯವರಾಗಿ ತಮ್ಮ ಜ್ಞಾನವನ್ನು ಬಚ್ಚಿರಿಸಿದ್ದರೆ ವಿಜ್ಞಾನವು ಈ ಮಟ್ಟಕ್ಕೆ ಬೆಳವಣಿಗೆಯೂ ಆಗುತ್ತಿರಲಿಲ್ಲ. ತಮ್ಮ ಅರಿವನ್ನು ಮರೆಮಾಚದೆ ವಿವರಿಸಿದ್ದರಿಂದ ಭೌತವಿಜ್ಞಾನ ಬೆಳವಣಿಗೆ ಕಂಡಿತು. ಇಷ್ಟಾಗಿಯೂ ಭೌತವಿಜ್ಞಾನ ತಮಗೆ ಬೇಕಿಲ್ಲವೆಂಬ ಜಡತ್ವವನ್ನು ಶ್ರೀಸಾಮಾನ್ಯರು ಆಶ್ರಯಿಸಿದ್ದು ಶೋಷಣೆಯ ಮುಂದುವರಿಕೆಗೆ ಕಾರಣವಾಯಿತು !

ಇದಕ್ಕಾಗಿ ಭೌತಶಾಸ್ತ್ರವು ಕಠಿಣವೆಂದು ಆ ವಿಷಯವನ್ನು ದೂರದೂಡಲಾಗಿದೆ ? ಅದೂ ಸರಿಯಲ್ಲ

ಕಲಿಕೆಯ ಇತರ ಶಾಖೆಗಳ ಹಾಗೆಯೇ ಅದೂ ಸ್ವಾರಸ್ಯದ ಗಣಿ. ಅದರ ಪರಿಭಾಷೆಗೆ ಒಗ್ಗಿಕೊಂಡು ಓದುವ ಮಂದಿಗೆ ಭೌತಶಾಸ್ತ್ರವು ಅನೇಕ ಕೌತುಕಗಳ ಉಡುಗೊರೆ ನೀಡುತ್ತದೆ. ಸಾಮಾನ್ಯಜ್ಞಾನ ಹಾಗೂ ಆ ಜ್ಞಾನವನ್ನಾಧರಿಸಿದ ತರ್ಕ ಭೌತವಿಜ್ಞಾನದ ತಿಳಿವಿನೆದುರು ಮುರಿದುಬೀಳುತ್ತದೆ.

ಈ ಉದಾಹರಣೆಯನ್ನು ಗಮನಿಸಿ. ರಂಧ್ರವು ಧಾರಕದಲ್ಲಿನ ದ್ರವದ ಸೋರಿಕೆಗೆ ಕಾರಣವಾಗುತ್ತದೆಂಬುದು ಸಾಮಾನ್ಯ ಜ್ಞಾನ. 'ಜರಡಿಯಲ್ಲಿ ಗಂಗೆ ತರಲು ಕಬ್ಬಿಣದ ದೋಣಿಯಲ್ಲಿ ಕಾಶಿಗೆ ಹೋದ ಭಾವ' –ನನ್ನು ಕುರಿತು ಕೈಲಾಸಮ್ ನಗೆಯಾಡಿದ್ದಾರೆ. ಆದರೆ ರಂಧ್ರವಿರುವ ಕಾರಣದಿಂದಲೇ ಸ್ಪಂಜು ನೀರನ್ನು ಹೀರುತ್ತದೆ. 'ರಂಧ್ರ ಹಿರಿದಾದರೆ ಸೋರಿಕೆ; ಕಿರಿದಾದರೆ ಹೀರಿಕೆ' – ಎಂಬ ಹೇಳಿಕೆ ತಾರ್ಕಿಕ ವಿರೋಧಾಭಾಸ ಎನಿಸಿದರೂ ವಾಸ್ತವಸತ್ಯ. ರಂಧ್ರವಿಲ್ಲದ ಕೃತಕ ಎಳೆಯ ಬಟ್ಟೆ ಧರಿಸಿದಾಗ ಬೆವರು ಆವಿಯಾಗದೆ ಅದು ನಮಗೆ ಮುಜಗರವನ್ನು ಉಂಟುಮಾಡಿ 'ಬೆವರು ನೀರಿಳಿಸುತ್ತದೆ'. ದಪ್ಪಗಿರುವ ಹತ್ತಿಬಟ್ಟೆಯಾದರೂ ನಡುವೆ ರಂಧ್ರಗಳಿರುವ ಕಾರಣ ಬಿಸಿಲಿನಲ್ಲೂ ಬೆವರನ್ನು ಆವಿಗೊಳಿಸಿ ಹಿತಕರವಾಗಿರುತ್ತದೆ. ಇನ್ನು ದೋಣಿ ಹಡಗುಗಳನ್ನು ಮಾಡುವುದೇ ಕಬ್ಬಿಣದಲ್ಲಿ. ಆ ಕಬ್ಬಿಣಕ್ಕೆ ಪೇಂಟ್‌ಗಳ ರಕ್ಷಾಕವಚ ಹಾಕಿ ತುಕ್ಕುಹಿಡಿಯದಂತೆ ಮಾಡಲಾಗುತ್ತದೆ. ಹೀಗಾಗಿ ವಿಜ್ಞಾನವು ನಮಗೆ ಮೋಜಿನ ಪಾಠವನ್ನು ಹೇಳುವುದರ ಜೊತೆಗೆ ಸಾಮಾನ್ಯ ನಂಬಿಕೆಯನ್ನು ಮೀರಿಸಾಗಿ ಸೌಕರ್ಯವನ್ನು ಒದಗಿಸಿದೆ. ಆ ಸೌಕರ್ಯವನ್ನು ಸಂಕೋಚವಿಲ್ಲದೆ ಅನುಭವಿಸುವ ನಾವು ವಿಜ್ಞಾನವನ್ನು ಮಾತ್ರ ತಿಳಿಯಲು ಆಸೆ ತೋರುವುದಿಲ್ಲ. ('ನಮ್ಮ ಯುವಕ'ರು ವಿಧವಾ ವಿವಾಹವನ್ನು ವಿರೋಧಿಸುತ್ತಾರೆ. ವಿಧವೆಯರನ್ನಲ್ಲ' – ಎಂಬ ಗೊರೂರರ ಗೇಲಿಮಾತು ನೆನಪುಮಾಡಿಕೊಳ್ಳಿ.) ತಂತ್ರಜ್ಞಾನದ ಮುನ್ನಡೆಯ ಪ್ರತಿ ಹಂತದಲ್ಲೂ ಬಳಕೆಯಾದ ವಿಜ್ಞಾನ ಜನರ ಅವಜ್ಞೆಯಿಂದ ಅಸಹಾಯಕ ವಿಧವೆಯಂತಾಗಿದೆ.

ಶೋಷಣೆ ತಪ್ಪಿಸಿದ್ದು, ಶೋಷಣೆ ಮಾಡದೆ ಉಳಿದದ್ದು, ತಂತ್ರಜ್ಞಾನವನ್ನು ಬೆಂಬಲಿಸಿದ್ದು, ಸಾಮಾನ್ಯಜ್ಞಾನಕ್ಕೆ ಸವಾಲಾಗಿ ಗೇಲಿಮಾಡಿದ್ದು – ಇವಿಷ್ಟೇ ಭೌತವಿಜ್ಞಾನವನ್ನು ಕೊಂಚವಾದರೂ ಎಲ್ಲರೂ ತಿಳಿಯಬೇಕೆಂಬ ಒತ್ತಾಸೆಗೆ ಕಾರಣವಾಗಬೇಕಾಗಿಲ್ಲ. ಇನ್ನೂ ಕೆಲವು ಅಂಶಗಳನ್ನು ಗಮನಿಸೋಣ.



ಭೌತವಿಜ್ಞಾನದ ಅನೇಕ ನಿಯಮಗಳಿಗೆ ತಾತ್ವಿಕ ಆಯಾಮವನ್ನು ಕಲ್ಪಿಸಬಹುದು. ಇದು ಎಲ್ಲ ಜನರಿಗೂ ರೋಚಕತೆಯನ್ನುಂಟುಮಾಡಬಲ್ಲ ಸಂಗತಿ. ನ್ಯೂಟನ್ನನ ಮೊದಲ ನಿಯಮವನ್ನು ಉದಾಹರಣೆಗಾಗಿ ಇಲ್ಲಿ ಚರ್ಚಿಸುವಾ.

''ನಿಶ್ಚಲವಾಗಿರುವ ಯಾವುದೇ ಕಾಯ (ವಸ್ತು) ನಿಶ್ಚಲ ಸ್ಥಿತಿಯಲ್ಲಿಯೇ ಮುಂದುವರಿಯುತ್ತದೆ; ಚಲಿಸುತ್ತಿರುವ ಯಾವುದೇ ಕಾಯ ಚಲನಸ್ಥಿತಿಯಲ್ಲೇ ಮುಂದುವರಿಯುತ್ತದೆ. ಬಾಹ್ಯಬಲ ಪ್ರಯೋಗವಾದಾಗ ಮಾತ್ರ ಅದು ತನ್ನ ಸ್ಥಿತಿ ಬದಲಾಯಿಸುತ್ತದೆ'' – ಎಂಬುದು ನ್ಯೂಟನ್ನನ ಮೊದಲ ನಿಯಮ.

ಈ ನಿಯಮದ ಮೊದಲ ಭಾಗ ಸಾಮಾನ್ಯ ಜ್ಞಾನಕ್ಕೂ ಮಾನ್ಯವಾಗುವಂತಹದು. ಇಟ್ಟ ವಸ್ತುಗಳು ತಂತಾನೆ ಚಲಿಸತೊಡಗಿದರೆ ನಾವು ಬದುಕಿ ಉಳಿಯುವಂತೆಯೇ ಇಲ್ಲ. ನಿಷ್ಕ್ರಿಯ ವ್ಯಕ್ತಿಗಳನ್ನು ಜಡರೆಂದೂ ಅವರ ಪ್ರವೃತ್ತಿಯನ್ನು ಜಡತೆ ಎಂದೂ ಹೇಳುವುದು ವಾಡಿಕೆಯಲ್ಲೂ ಇದೆ. ಹೀಗೆ ಸಾಮಾನ್ಯ ಅನುಭವದ ಅಭಿವ್ಯಕ್ತಿಯಾದ ನ್ಯೂಟನ್ನನ ನಿಯಮದ ಮೊದಲರ್ಧ ದ್ರವ್ಯದ ಲಕ್ಷಣವನ್ನು ವಿವರಿಸುವುದರ ಜೊತೆಜೊತೆಗೆ ಮನುಷ್ಯ ಸ್ವಭಾವದ ಸಮಾಂತರತೆಯನ್ನು ಸಾಧಿಸುತ್ತದೆ.

ಈಗ ಎರಡನೆಯ ಅರ್ಧದತ್ತ ಲಕ್ಷ್ಯ ಹರಿಸೋಣ. ನಾವು ಯಾವುದಾದರೂ ಒಂದು ವಸ್ತುವನ್ನು ತಳ್ಳುವ ಮೂಲಕ ಚಲನೆ ನೀಡಿದರೆ ಕೊಂಚ ಸಮಯ ಕಳೆದ ನಂತರ ಅದು ನಿಶ್ಚಲಸ್ಥಿತಿಗೆ ಬರುವುದು. ಚಲನೆಗೆ ತೊಡಗಿದ ವಸ್ತುವು ಬಲ ಪ್ರಯೋಗದ ಪರಿಣಾಮ ಮುಗಿದೊಡನೆ ನಿಶ್ಚಲಸ್ಥಿತಿಗೆ ಬರುವುದು ಅನುಭವವೇದ್ಯ. ಆದರೆ, ನ್ಯೂಟನ್ನನ ನಿಯಮದ ಉತ್ತರಾರ್ಧದಲ್ಲಿ ಚಲಿಸುವ ವಸ್ತು ಚಲಿಸುತ್ತಲೇ ಇರುವುದೆಂದು ಪ್ರತಿಪಾದಿತವಾಗಿರುವುದೇಕೆ ?

ನಮ್ಮ ಅನುಭವ ಭೂಮಿಯ ಮೇಲಿರುವ ವಸ್ತುಗಳಿಗೆ ಸಂಬಂಧಿಸಿದ್ದು. ಈ ಭೂಮಿಯಲ್ಲಿ ಚಲನೆಗೆ ಅಡ್ಡಿಮಾಡುವ ಜಡತೆ ಅಲ್ಲದ ಇನ್ನೊಂದು ಅಗೋಚರ ಬಲವಿದೆ. ಅದು ಘರ್ಷಣೆ. ಘರ್ಷಣಾಬಲದಿಂದ ಪ್ರಭಾವಿತವಾಗಿ ಚಲಿಸುವ ವಸ್ತು ನಿಶ್ಚಲಸ್ಥಿತಿಗೆ ತಲುಪುತ್ತದೆ.

ಭೂಮಿಯ ಚಲನೆಯನ್ನು ಗಮನಿಸಿದರೆ ಅದು ನಿರಂತರವಾಗಿ ಚಲಿಸುತ್ತಲೇ ಇದೆ. ಇದಕ್ಕೆ ಕಾರಣ ಭೂಮಿಯ ಚಲನೆಯನ್ನು ವಿರೋಧಿಸುವ ಘರ್ಷಣೆ ಇಲ್ಲ. ಏಕೆಂದರೆ ಅದು ಚಲಿಸುವುದು ನಿರ್ವಾತದಲ್ಲಿ. ಭೂಮಿಯು ತನ್ನ ವಾಯು ಮಂಡಲವೂ ಸೇರಿದಂತೆ ಶೂನ್ಯದಲ್ಲಿ ಚಲಿಸುತ್ತಿರುವಾಗ ಅದಕ್ಕೆ ಯಾರೂ ಶಕ್ತಿಯನ್ನು ಒದಗಿಸುವುದಿಲ್ಲ. ಆದರೂ ಅದು ನಿರಂತರವಾಗಿ ಚಲಿಸುತ್ತಿದೆ. ಈ ಸಂಗತಿಯನ್ನು ವಿವರಿಸುವ ಸಲುವಾಗಿ ಸರ್ ಐಸ್ಯಾಕ್ ನ್ಯೂಟನ್ ತನ್ನ ಉತ್ತರಾರ್ಧದ ನಿಯಮದಲ್ಲಿ ಚಲಿಸುವ ವಸ್ತು ಚಲಿಸುತ್ತಲೇ ಇರುವುದಾಗಿ ಪ್ರತಿಪಾದಿಸಿದ್ದಾನೆ. ನಿಶ್ಚಲವಾಗಿರುವ ವಸ್ತುವಿನ ಜಡತೆಯನ್ನು ಸ್ಥಾಯಿ ಜಡತೆಯೆಂದು ಹೇಳಲಾಗುತ್ತದೆ. ವಸ್ತುವಿನ ಚಲನೆಗೆ ಈ ಜಡತೆ ಅಡ್ಡಿ. ಘರ್ಷಣಾ ಮುಕ್ತ ಪರಿಸರದಲ್ಲಿ ಚಲಿಸುವ ವಸ್ತು ನಿರಂತರ ಚಲನೆಗೆ ತೊಡಗುವುದನ್ನು ಗತಿಶೀಲ ಜಡತೆಯೆಂದು ಹೇಳಲಾಗುತ್ತದೆ. ಸ್ಥಾಯಿ ಜಡತೆ ಗತಿಶೀಲ ಜಡತೆಗೆ ಸಮಾಂತರ ವರ್ತನೆ ಮಾನವರಲ್ಲೂ ಉಂಟೇ ?

* * *

ಮಾನವರ ವರ್ತನೆಗೆ. ಸಮೀಕರಿಸುವಾಗ ಎರಡು ಬಗೆಯ ಜಡತೆಯನ್ನೂ ಒಪ್ಪಬೇಕಾಗುತ್ತದೆ. ದೇಹ ಜಡವಾಗಿದ್ದಾಗ ಅದನ್ನು ದೈಹಿಕ ಜಡತೆ ಎಂದೂ ಮನಸ್ಸು ಜಡವಾದಾಗ ಅದನ್ನು ಮಾನಸಿಕ ಜಡತೆಯೆಂದೂ ಹೇಳಬೇಕಾಗುತ್ತದೆ. ದೇಹ ಎಂದೂ ಜಡವಾಗಿರುವುದಿಲ್ಲ. ಹೃದಯಬಡಿತ, ರಕ್ತ ಪರಿಚಲನೆ ನಡೆದೇ ಇರುತ್ತದೆ. ಅಂತೆಯೇ ಮನಸ್ಸೂ ನಿರಂತರವಾಗಿ ಕಾರ್ಯಶೀಲವಾಗಿಯೇ ಇರುತ್ತದೆ. ಆದರೆ ನಿರ್ದಿಷ್ಟ ಕ್ರಿಯೆಗೆ ಸಂಬಂಧಿಸಿದಂತೆ ದೇಹ/ಮನಸ್ಸು ಜಡವೋ ಕಾರ್ಯಪ್ರವೃತ್ತವೋ ಎಂದು ನಿರ್ಧರಿಸಬೇಕಾಗುತ್ತದೆ.

ನಾವು ಯಾವುದೇ ಕೆಲಸವನ್ನು ಕೈಗೊಳ್ಳಬೇಕೆಂದು ಸಂಕಲ್ಪಮಾಡುವುದೇ ಬಾಹ್ಯ ಪ್ರಚೋದನೆ. ಆ ಬಾಹ್ಯಪ್ರಚೋದನೆಯಿಂದಾಗಿ ಸಂಕಲ್ಪಿಸಿದ ಕೆಲಸ ಮುಗಿಯುವವರೆಗೆ ಒಂದಲ್ಲ ಒಂದು ಬಗೆಯಲ್ಲಿ ದೇಹ ಹಾಗೂ ಮನಸ್ಸು ಆ ಕೆಲಸದ ಸಲುವಾಗಿ ಕ್ರಿಯೆಯಲ್ಲಿ ತೊಡಗಿರುತ್ತವೆ. ಆ ಕೆಲಸ ಮುಗಿಯಿತೆಂದರೆ ಆ ಕೆಲಸಕ್ಕೆ ಸಂಬಂಧಿಸಿದಂತೆ ದೇಹ/ಮನಸ್ಸು ನಿಷ್ಕ್ರಿಯವಾಗುತ್ತದೆ. ಇದು ಸ್ಥಾಯಿ ಜಡತ್ವಕ್ಕೆ ಸಂವಾದಿಯಾದ ಮಾನವ ವರ್ತನೆ.

ಗತಿಶೀಲ ಜಡತೆಗೆ ಸಮಾಂತರತೆಯನ್ನು ನಾವು ಕಾಣಬಹುದೆ ? ಯಾವುದೇ ಕೆಲಸದಲ್ಲಿ ದೇಹ/ಮನಸ್ಸು ತೊಡಗಿದ್ದಾಗಲೂ ಒಂದು ಬಗೆಯ ಜಡತೆ ಇರಲು ಸಾಧ್ಯವೆ ? ಸಾಧ್ಯ. ನಾವು ಯಾವುದೋ ಕೆಲಸವನ್ನು ಮೊದಲಬಾರಿಗೆ ಮಾಡುವಾಗ

ಸಂದರ್ಭ, ಅಗತ್ಯ, ಪರಿಣಾಮ ಮತ್ತು ವಿಧಾನಗಳ ಅರಿವಿನಿಂದ ಮಾಡ ತೊಡಗುತ್ತೇವೆ. ಆದರೆ ಆ ಕೆಲಸವನ್ನು ಮತ್ತೆ ಮತ್ತೆ ಮಾಡಬೇಕಾಗಿ ಬಂದಾಗ ನಮ್ಮ ದೇಹ ಮತ್ತು ಮನಸ್ಸುಗಳು ಕ್ರಿಯಾಶೀಲವಾಗಿದ್ದರೂ ವಿವೇಚನೆಯು ಜಡವಾಗ ತೊಡಗಿ ಒಂದು ಬಗೆಯ ಯಾಂತ್ರಿಕತೆ ತಲೆದೋರುತ್ತದೆ. ಈ ವಿವೇಚನೆಯ ಜಡತ್ವವನ್ನು ಗತಿಶೀಲಜಡತ್ವ ಎಂದು ಹೇಳಬಹುದು.

ವೇಗವಾಗಿ ಚಲಿಸುವ ಬಸ್ಸಿನಿಂದ ನೀವು ಇಳಿದಿರೆನ್ನೋಣ. ಆಗ ಬಸ್ಸು ಚಲಿಸುವ ದಿಕ್ಕಿನಲ್ಲಿಯೇ ಕೊಂಚದೂರ ಓಡಿ ವೇಗವನ್ನು ನಿಧಾನವಾಗಿ ತಗ್ಗಿಸಬೇಕು. ಇಲ್ಲವಾದರೆ ನೀವು ಮುಗ್ಗರಿಸುವಿರಿ.

ಹಾಗೆಯೇ ಯಾವುದೋ ಸಂದರ್ಭದಲ್ಲಿ ಆ ಸಂದರ್ಭದ ಅಗತ್ಯಕ್ಕನುಗುಣವಾಗಿ ರೂಪುಗೊಂಡ ಆಚರಣೆಗಳು ಆ ಸಂದರ್ಭ ಇಲ್ಲದೆ ಹೋದರೂ ಮುಂದುವರಿದು ಕೊಂಡು ಮೂಢನಂಬಿಕೆ ಆಗುವುದು ಒಂದರ್ಥದಲ್ಲಿ ಮಾನವ ವರ್ತನೆಯ ಗತಿಶೀಲ ಜಡತೆ ಎನ್ನಬಹುದು. ಮೂಢನಂಬಿಕೆಯ ಆಚರಣೆಯಲ್ಲಿ ದೇಹ ಮತ್ತು ಮನಸ್ಸಿನ ಚಲನೆ ಇದೆ. ಆದರೆ ವಿವೇಚನೆ/ಎಚ್ಚರ ಮಾತ್ರ ಜಡವಾಗಿದೆ.

ಅಂತೆಯೇ ಭಾಷೆಯಲ್ಲಿ ಕೂಡಾ ಈ ಗತಿಶೀಲ ಜಡತೆಯನ್ನು ಕಾಣಬಹುದು. ೧೯೬೦ರ ಸುಮಾರಿನಲ್ಲಿ ಆಣೆ ಚಲಾವಣೆ ನಿಂತುಹೋದರೂ ಈಗಲೂ ನಾಲ್ಕಾಣೆ, ಎಂಟಾಣೆ ಎಂಬ ಪದಗಳ ಬಳಕೆಯಾಗಲಿ, ಮೈಲಿಗೆ ಬದಲಾಗಿ ಕಿಲೋಮೀಟರ್ ಚಾಲ್ತಿಗೆ ಬಂದ ಮೇಲೂ ಸಾಧನೆಯ 'ಮೈಲಿಗಲ್ಲು' ಎಂಬ ಬಳಕೆಯಾಗಲಿ ಮುಂದುವರಿದಿರುವುದು ಗತಿಶೀಲ ಜಡತೆ ಮಾನವನ ವರ್ತನೆಯಲ್ಲಿಯೂ ಇರುವುದಕ್ಕೆ ಸಾಕ್ಷಿ.

* * *

ಹೀಗೆ, ಭೌತಶಾಸ್ತ್ರದ ಪರಿಕಲ್ಪನೆಗಳು ನಿಸರ್ಗದ ಸತ್ಯವನ್ನು ಅನಾವರಣಗೊಳಿಸುವುದರ ಜೊತೆಗೆ ಮಾನವ ವರ್ತನೆಗೆ ರೂಪಕಗಳೂ ಆಗಬಲ್ಲವು. ನಿಸರ್ಗದ ಸ್ಥೂಲದರ್ಶನ ಕೈಗೊಂಡ ಕವಿಗಳು ಅದನ್ನು ಕಾವ್ಯರಚನೆಗೆ ಬಳಕೆಮಾಡಿರುವ ಹಾಗೆಯೇ ನಿಸರ್ಗದ ಸೂಕ್ಷ್ಮ ವಿವರಗಳನ್ನು ದಾಖಲಿಸಿರುವ ವಿಜ್ಞಾನದ ಮಾಹಿತಿಗಳು, ನಿಯಮಗಳು, ವಾದಗಳು, ತತ್ತ್ವಗಳು ಬದುಕಿನ ಅನೇಕ ಸಂಗತಿಗಳಿಗೆ ರೂಪಕವಾಗಬಲ್ಲವು.

ಅಂತಾರಾಷ್ಟ್ರೀಯ ಭೌತವಿಜ್ಞಾನ ವರ್ಷದ ಈ ಸಂದರ್ಭದಲ್ಲಿ ದೈನಂದಿನ ಕಾರ್ಯದಕ್ಷತೆ, ವಿಚಾರವಂತಿಕೆಗಳನ್ನು ಬೆಳೆಸಿಕೊಳ್ಳುವುದರ ಜೊತೆಗೆ ಭವ್ಯಕಲ್ಪನೆಗಳನ್ನು ರೂಢಿಸಿಕೊಳ್ಳಲು ವಿಜ್ಞಾನ ವಿಪುಲ ಅವಕಾಶಗಳನ್ನು ಒದಗಿಸಿದೆ.

'ಬೆಳಕು ಬಂದಿದೆ ಮನೆಯ ಹೊಸ್ತಿಲವರೆಗೆ
ಕಿಟಕಿ ಬಾಗಿಲ ತೆರೆದು ಬರಮಾಡು ಒಳಗೆ'

ಎಂಬ ಕನ್ನಡ ಕವಿವಾಣಿಯನ್ನು ನೆನಪಿಸುತ್ತಾ ವಿಜ್ಞಾನದ ಬಗೆಗಿನ ಧೋರಣೆ ಬದಲಾಯಿಸಲು ಸದವಕಾಶವಾಗಿದ್ದ ೨೦೦೫ನೇ ವರ್ಷ ಸದ್ದಿಲ್ಲದೆ ಅಥವಾ ಕನಿಷ್ಠ ಸದ್ದಿನೊಂದಿಗೆ ಸಾಗುತ್ತಾ ನಿಟ್ಟುಸಿರು ಬಿಡುವುದು – ಎಲ್ಲ ಸಂವೇದನಶೀಲ ವಿಜ್ಞಾನ ಅಧ್ಯಯನಕಾರರಿಗೆ ಅನಿವಾರ್ಯವಾಗಿದೆ.

**ಪ್ರೊ|| ಎಮ್. ಆರ್. ನಾಗರಾಜು**
ಪ್ರಧಾನ ಸಂಪಾದಕರು, ಬಾಲವಿಜ್ಞಾನ, ಎಫ್-೩, ಎಸ್.ಎಫ್.ಎಸ್. ನಿವಾಸಗಳು,
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪

# ಲಂಘನ

'ಕುಕ್ಕರ್' ಒತ್ತಡಕ್ಕೆ ಸಿಲುಕಿ ಸಿಳ್ಳೆ ಹೊಡೆಯುವಾಗ,
ಸಾಸಿವೆ ಕುದಿವ ಎಣ್ಣೆಯೊಳಗೇ
ಚಟ ಚಟ ಸಿಡಿಯುವಾಗ,
ಹಾಲು ಬಿಸಿಗೆ ಉಕ್ಕಿ
ಪಾತ್ರೆ ಮೀರಿ ಹರಿಯುವಾಗೆಲ್ಲ
ನನ್ನಲ್ಲಿ ಗೋಡೆ ಮೀರುವ ಬಯಕೆ ಗಾಢವಾಗುತ್ತಿದೆ
ಕನಸುಗಳ ಗವನು ನನ್ನ ತೊಡುಗೆಯಾಗುತ್ತದೆ.

ಆಗೆಲ್ಲ ರೇಣುಕೆಯ ಬಿರುಕಿನ ಕೊಡಕ್ಕೆ
ಸಹಜತೆಯ ಬೆಸುಗೆ ಹಾಕಿ,
ಅಹಲ್ಯೆಯ ಕನವರಿಕೆಗೆ
ಆರ್ದ್ರ ಪ್ರೀತಿಯ ಪರದೆ ಕಟ್ಟಿ
ಒಂದು ಲೋಕಕ್ಕಷ್ಟೇ ಮೀಸಲಾದ
ಕಟ್ಟಳೆಗಳ ಕುಟ್ಟಿ
ಕಚ್ಚೆ ಕಟ್ಟಿ ನಿಟ್ಟಿಸುವ
ದಿಟ್ಟೆಯಾಗುತ್ತೇನೆ ನಾನು.

ಮೀಸೆ, ಮೊಲೆಗಳ ಕುರುಹುಗಳಾಗಿಸದ
ಮಾರ್ದವ, ಕೆಳೆ
ತಟ್ಟುವಾಗಲೆಲ್ಲ

ಗರಿಬಿಚ್ಚಿ, ರಾವಣರ ರಾಜ್ಯದಾಚೆಗೆ
ಹಾರುವ ಮನಸ್ಸು
ಮರಳಿ ಹಿಂತಿರುಗುವ ಗಳಿಗೆಗೆ
ಮೊಳಕೆಯೊಡೆಯದ
ಅಜ್ಜಿಯ ಕನಸುಗಳ ಬೀಜ
ಕಾಲಿಗೆ ತಡವುವಾಗ
ನನ್ನೊಳಗಿನ ರಕ್ತಮಾಂಸಗಳ ತುಣುಕನ್ನು
ಕುಂಡವಾಗಿಸಿ, ಕನಸುಗಳ ಪೋಷಿಸುತ್ತೇನೆ ನಾನು.

ಆ ಕನಸುಗಳು ಚಿತ್ತಾರ ಬಿಡಿಸಲು
ಜಾಗ ಬೇಡಿದಾಗ
ನನಗೆ ನನ್ನದೇ ಆದ ಕೋಣೆಯೊಂದು ಬೇಕು
ಎಂಬ ಹಂಬಲ ತೀವ್ರವಾಗುತ್ತದೆ.

**ಭಾರತೀದೇವಿ ಮೂಡುಮಾರ್ನಾಡು**
೧೦೮, 'ಶಿವ ಪ್ರಸಾದ', ೭ನೇ ಮೇಯಿನ್, ೭ನೇ ಕ್ರಾಸ್
ಪಡುವಾರಹಳ್ಳಿ, ಮೈಸೂರು - ೫೭೦ ೦೧೨





## ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದು ?

*ಡಿ. ಎನ್. ಶಂಕರ ಭಟ್*

**ಪುಟ : ೨೬೪** **ಬೆಲೆ : ರೂ. ೬೫**

**ಭಾಷಾ ಪ್ರಕಾಶನ,** ೪೦೨, ರೂಪಾನಗರ, ಮೈಸೂರು - ೨೬

ವ್ಯಾಕರಣಗಳನ್ನು ಕುರಿತು ಡಿ. ಎನ್. ಶಂಕರಭಟ್ ಅವರು ಸುಮಾರು ೪೦ ವರ್ಷಗಳಿಂದ ಸಂಶೋಧನೆ ನಡೆಸುತ್ತಿದ್ದು, ಇದು ಅವರ ಇತ್ತೀಚಿನ ಪುಸ್ತಕ. ಸಂಸ್ಕೃತ ಭಾಷೆಯ ವ್ಯಾಕರಣದ ಆಳವಾದ ತಿಳುವಳಿಕೆಯ ಹಿನ್ನೆಲೆಯಲ್ಲಿ ಕನ್ನಡ ವ್ಯಾಕರಣದ ಬಗ್ಗೆ ಅವರು ಚಿಂತನೆಯನ್ನು ನಡೆಸಿದಾಗ ಕಂಡುಕೊಂಡ ಸತ್ಯ ಹಳೆಗನ್ನಡ ವ್ಯಾಕರಣದ ರಚನೆಯಲ್ಲಿ ಸಂಸ್ಕೃತ ವ್ಯಾಕರಣ ಉತ್ತಮ ಮಾದರಿ ಆಗಲಾರದು ಎಂಬುದು. ಕನ್ನಡ ಭಾಷೆ ತನ್ನದೆ ಆದ ವ್ಯಾಕರಣವನ್ನು ರೂಪಿಸಿಕೊಳ್ಳಬೇಕು ಎಂಬುದು ಅವರ ಆಶಯ. ಹಳೆಗನ್ನಡ ವ್ಯಾಕರಣವನ್ನು ರಚಿಸಿದ ಕೇಶಿರಾಜ ಮುಂತಾದವರು ಹಳೆಗನ್ನಡ ಪದ ರಚನೆ ಮತ್ತು ವಾಕ್ಯ ರಚನೆಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಯಾವ ರೀತಿ ಸೋತಿದ್ದಾರೆ ಎಂಬ ಅಂಶವನ್ನು ಹನ್ನೆರಡು ಅಧ್ಯಾಯಗಳ ಈ ಕೃತಿ ವಿಶ್ಲೇಷಿಸುತ್ತದೆ.

## ಸ್ವಾತಂತ್ರ್ಯ ಶರಣ್ಯರು

*ಸಂ. ಮೋಹನ ನಾಗಮ್ಮನವರ*

**ಪುಟ : xxii+೨೧೦** **ಬೆಲೆ : ರೂ. ೧೦೦**

**ಕರ್ನಾಟಕ ವಿದ್ಯಾವರ್ಧಕ ಸಂಘ,** ಧಾರವಾಡ - ೧

ದಿವಂಗತ ಶಕುಂತಲಾ ದಾಬಡೆ ಮತ್ತು ನರಸಿಂಹ ದಾಬಡೆ ಅವರ ಆತ್ಮವೃತ್ತಾಂತವನ್ನು ಈ ಕೃತಿ ಒಳಗೊಂಡಿದೆ. ಪುಸ್ತಕಕ್ಕೆ ಹಿನ್ನೆಲೆಯಾಗಿ ಹಲವಾರು ಮುನ್ನುಡಿಗಳು, ಪತ್ರಗಳು ಸೇರಿಕೊಂಡಿವೆ. ಸ್ವಾತಂತ್ರ್ಯ ಹೋರಾಟದಲ್ಲಿ ಕರ್ನಾಟಕದ ಹಲವು ವ್ಯಕ್ತಿಗಳು ಭಾಗವಹಿಸಿದ್ದು, ಅಂತಹ ಒಂದು ದಾಖಲೆಯಾಗಿ ಈ ಪುಸ್ತಕ ಗಮನ ಸೆಳೆಯುತ್ತದೆ. ದಾಬಡೆಯವರು ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಮೂವತ್ಮೂರು ತಿಂಗಳ ಕಾಲ ಸೆರೆಮನೆಯಲ್ಲಿ ಬದುಕನ್ನು ಕಳೆದದ್ದಷ್ಟೇ ಅಲ್ಲದೆ ಗಾಂಧೀಜಿಯವರ ಸೂಚನೆಯಂತೆ ಸಮಾಜದ ಉದ್ಧಾರಕ್ಕಾಗಿ ದುಡಿದವರು. ಶಕುಂತಲಾ ದಾಬಡೆಯವರೂ ಸಹ ಪತಿಯ ದಾರಿಯಲ್ಲಿ ನಡೆದು ಹಲವು ಬಗೆಯಲ್ಲಿ ಸಮಸ್ಯೆಗಳನ್ನು ಎದುರಿಸಿದರೂ ಅಳು ನುಂಗಿ ಒಟ್ಟು ದೇಶಕ್ಕಾಗಿ ಶ್ರಮಿಸಿದ ಅವರ ವ್ಯಕ್ತಿತ್ವ ಅವರ ಆತ್ಮ ವೃತ್ತಾಂತದಲ್ಲಿ ಸಹಜವಾಗಿ ಕಂಡುಬಂದಿದೆ. ಸ್ವಾತಂತ್ರ್ಯ ಹೋರಾಟದಲ್ಲಿ ದಾಬಡೆ ದಂಪತಿಗಳು ಅನುಭವಿಸಿದ ನೋವು-ನಲಿವುಗಳನ್ನು ಈ ಕೃತಿ ಚಿತ್ರಿಸುತ್ತಿದ್ದು, ಯುವ ಪೀಳಿಗೆಗೆ ಸ್ಫೂರ್ತಿಯನ್ನು ಕೊಡಲಿ ಎಂದು ಮುನ್ನುಡಿಯಲ್ಲಿ ದಿವಂಗತ ಎಚ್ಚೆನ್‌ರವರು ಆಶಿಸಿದ್ದಾರೆ. ಪುಸ್ತಕಕ್ಕೆ ಇಟ್ಟಿರುವ ಸ್ವಾತಂತ್ರ್ಯ ಶರಣ್ಯರು ಎಂಬ ಹೆಸರು ಸ್ವಲ್ಪ ಭಾರ ಎನಿಸುತ್ತದೆ!



## ನನ್ನ ಮಿತ್ರ ಸೋರಣ್ಣ

*ಜೆ. ಬಿ. ಎಸ್. ಹಾಲ್ಡೇನ್*

*ಭಾವಾನುವಾದ : ಬಿ. ಎಸ್. ಶೈಲಜಾ*

**ಪುಟ : ೧೩೬** **ಬೆಲೆ : ರೂ. ೫೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಹಲವಾರು ವೈಜ್ಞಾನಿಕ ಸಂಶೋಧನೆಗಳನ್ನು ನಡೆಸಿದ ವಿಜ್ಞಾನಿ ಹಾಲ್ಡೇನ್‌ರವರು ಜನಪ್ರಿಯ ವಿಜ್ಞಾನ, ಬರಹಗಾರರಾಗಿಯೂ ಪ್ರಸಿದ್ಧರು. ಅವರು ಭಾರತದ ಬಗ್ಗೆ ಆತ್ಮೀಯ ಸಂಬಂಧವನ್ನು ಪಡೆದುಕೊಂಡಿದ್ದರು. ಅವರು ಬರೆದ ಇಂಗ್ಲಿಷ್ ಪುಸ್ತಕದ ಭಾವಾನುವಾದ 'ನನ್ನ ಮಿತ್ರ ಸೋರಣ್ಣ' ವಿಜ್ಞಾನದ ಸಂಗತಿಗಳನ್ನು ಮಕ್ಕಳಿಗೆ ಪ್ರಿಯವಾಗುವಂತೆ ಬಿ.ಎಸ್. ಶೈಲಜಾ ಅವರು ಕನ್ನಡಕ್ಕೆ ತಂದಿದ್ದಾರೆ. ಹಾಲ್ಡೇನ್ ಅವರ ಬಗ್ಗೆ ಪರಿಚಯಾತ್ಮಕ ಲೇಖನ ಇಲ್ಲಿ ಇರುವುದಲ್ಲದೆ ಕಥೆಗೆ ತಕ್ಕಂತೆ ಚಿತ್ರಗಳು ಕಂಡುಬಂದಿವೆ. ಅನುವಾದದಲ್ಲಿ ದೇಸೀಯ ಸೊಗಡನ್ನು ತರಲು ಲೇಖಕಿ ಪ್ರಯತ್ನಿಸಿದರೂ ಅದು ಅಷ್ಟಾಗಿ ಯಶಸ್ವಿಯಾಗಿಲ್ಲ. ಪಾಶ್ಚಾತ್ಯ ವಾತಾವರಣ ಮತ್ತು ಜಾನಪದ ವಾತಾವರಣಗಳ ಸರಿಯಾದ ಬೆಸುಗೆ ಕಂಡುಬರುವುದಿಲ್ಲ. ಆದರೂ ಉತ್ತಮವಾದ ಹಾಸ್ಯ, ಅದ್ಭುತ ರಮ್ಯತೆಗಳಿಂದ ಈ ಕೃತಿ ವಿಶಿಷ್ಟವಾಗಿದೆ.

## ವಿಚಾರ ವಿಹಾರ

*ಸಿ. ಪಿ. ಕೃಷ್ಣಕುಮಾರ್*

**ಪುಟ : ೧೩೫+೮** **ಬೆಲೆ : ರೂ. ೫೦**

**ಸಾಹಿತ್ಯ ಸಿರಿ, ಶ್ರೀ ತರಳಬಾಳು ಜಗದ್ಗುರು ಬೃಹನ್ಮಠ,** ಸಿರಿಗೆರೆ - ೫೭೭ ೫೪೧, ಚಿತ್ರದುರ್ಗ ಜಿಲ್ಲೆ

ಸಿ.ಪಿ. ಕೃಷ್ಣಕುಮಾರ್‌ರವರು ಸಾಹಿತ್ಯದ ಹಲವು ನೆಲೆಗಳನ್ನು ತಮ್ಮ ಹಲವಾರು ಪುಸ್ತಕಗಳಲ್ಲಿ ಮೊದಲಿನಿಂದಲೂ ಪರಿಚಯಿಸುವುದರಲ್ಲಿ ನಿರಂತರವಾದ ಉತ್ಸಾಹ ಮತ್ತು ನಂಬಿಕೆಯನ್ನು ಹೊಂದಿದ್ದಾರೆ. ನಮ್ಮ ಸಮಾಜವು ಸರಿಯಾದ ದಿಕ್ಕಿನಲ್ಲಿ ಹೋಗಬೇಕು ಎಂಬ ನೈತಿಕ ಕಾಳಜಿ ಅವರ 'ವಿಚಾರ ವಿಹಾರ' ಪುಸ್ತಕದಲ್ಲಿ ಕಂಡುಬಂದಿದೆ. ಜನಪರ ಧೋರಣೆ, ಸರ್ವೋದಯ ದೃಷ್ಟಿ ಮತ್ತು ಮೌಲ್ಯಗಳ ಬಗೆಗೆ ಕಳಕಳಿ ಇಲ್ಲಿನ ಲೇಖನಗಳ ಮುಖ್ಯವಾದ ಮೂರು ಅಂಶಗಳೆಂದು ಸಿ.ಪಿ.ಕೆ. ಅವರೆ ಅಭಿಪ್ರಾಯಪಟ್ಟಿದ್ದಾರೆ. ಬಸವಣ್ಣನವರು ಮತ್ತು ಕುವೆಂಪು ಅವರಿಗೆ ಸಂಬಂಧಪಟ್ಟಂತೆ ಇಲ್ಲಿನ ಅರ್ಧಕ್ಕೂ ಹೆಚ್ಚು ಲೇಖನಗಳು ಇವೆ. ಅವರಿಬ್ಬರ ವಿಚಾರವಾದ ಮತ್ತು ಮಾನವತಾವಾದದ ಪ್ರಾಮುಖ್ಯತೆಯನ್ನು ಲೇಖಕರು ಪರಿಚಯ ಮಾಡಿಕೊಡುತ್ತಾರೆ.

## ಮೊದಲು ಮಾನವನಾಗು

*ಎಲ್. ಪುಷ್ಪಲತ*

**ಪುಟ : x+೨೦೨** **ಬೆಲೆ : ರೂ. ೯೦**

**ಸಿಂಚನ : ಕನ್ನಡ ವೇದಿಕೆ,** ಎಸ್‌ಎಸ್‌ಎಂವಿಆರ್ ಕಾಲೇಜು ಆವರಣ, ೪ನೇ 'ಟಿ' ಬ್ಲಾಕ್, ಜಯನಗರ, ಬೆಂಗಳೂರು -೪೧

ಆರ್. ವಿ. ಶಿಕ್ಷಣ ಸಂಸ್ಥೆಯ ಕನ್ನಡ ವೇದಿಕೆ ಪ್ರಕಟಿಸಿರುವ ಡಿ. ಎಲ್. ಪಾಂಡು ಸ್ಮೃತಿ ಗ್ರಂಥಮಾಲೆಯ ಪ್ರಾರಂಭದ ಪುಸ್ತಕ ಇದು. ಮೂವತ್ಮೂರು ವೈಚಾರಿಕ ಬರಹಗಳನ್ನು ಈ ಸಂಕಲನ ಒಳಗೊಂಡಿದೆ. ಸಿದ್ಧಯ್ಯ ಪುರಾಣಿಕ ಅವರ ಕವನದ ಸಾಲಾದ 'ಮೊದಲು ಮಾನವನಾಗು' ಎಂಬುದು ಕೃತಿಯ ಹೆಸರಾಗಿದ್ದು, ಎಲ್ಲಾ ಲೇಖನಗಳ ಕೇಂದ್ರ ಕಾಳಜಿ ಮನುಷ್ಯ ಕುಲದ ಉನ್ನತಿಯೇ ಆಗಿದೆ. ಕುವೆಂಪು, ಬೇಂದ್ರೆ, ಮೂರ್ತಿರಾವ್ - ಅಂತಹ ಹಲವಾರು ಹಿರಿಯ ತಲೆಮಾರಿನ ಲೇಖಕರ ಜೊತೆ ಇಂದು ಬರೆಯುತ್ತಿರುವ ಜಿ. ರಾಜಶೇಖರ, ಜಿ. ರಾಮಕೃಷ್ಣ, ಕೆ. ವಿ. ನಾರಾಯಣ – ಮುಂತಾದವರ ಬರಹಗಳು ಇಲ್ಲಿ ಕಂಡುಬಂದಿವೆ. ನಮ್ಮ ಸಾಂಸ್ಕೃತಿಕ ವಾತಾವರಣದಲ್ಲಿ ಮಹತ್ವದ ಲೇಖನಗಳೆಂದು ಗುರುತಿಸಿರುವ 'ವಿಚಾರ ಕ್ರಾಂತಿಗೆ ಆಹ್ವಾನ', 'ರಾಕ್ಷಸರು' ಬಡತನವು ಸಾಹಿತ್ಯದ ವಸ್ತುವೇಕಾಗಿದೆ' ಇಂತಹ ಹಲವು ಲೇಖನಗಳು ಇಲ್ಲಿವೆ. ಕೆಲವು ಲೇಖನಗಳು ನೀತಿ ಪರವಾಗಿದ್ದರೆ, ಮತ್ತೆ ಕೆಲವು ಲೇಖನಗಳು ವೈಜ್ಞಾನಿಕ ಮನೋಧರ್ಮವನ್ನು ಪ್ರತಿಪಾದಿಸಿರುವುದು ಕಂಡುಬರುತ್ತದೆ. ಹಲವಾರು ಉತ್ತಮ ಬರಹಗಳು ಇಲ್ಲಿ ಕಂಡುಬಂದಿದ್ದರೂ ಅವುಗಳ ಜೋಡಣೆಯಲ್ಲಿ ಒಂದು ಕ್ರಮ ಇಲ್ಲ.




## ಗುಳ್ಳೇ ನರಿ

*ಶ್ರೀನಿವಾಸ ಪ್ರಭು*

**ಪುಟ : ೭೬** **ಬೆಲೆ : ರೂ. ೪೦**

**ಭಾಗ್ಯಲಕ್ಷ್ಮೀ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೮೫

ನಟ ಮತ್ತು ನಿರ್ದೇಶಕರಾಗಿ ಹೆಸರುಮಾಡಿರುವ ಶ್ರೀನಿವಾಸ ಪ್ರಭು ಅವರು ಬೆನ್ ಜಾನ್ಸನ್‌ನ 'ವೋಲ್ಪೋನ್' ನಾಟಕದ ಪ್ರೇರಣೆಯಿಂದ 'ಗುಳ್ಳೇನರಿ' ಎಂಬ ವಿಡಂಬನಾತ್ಮಕ ನಾಟಕವನ್ನು ರಚಿಸಿದ್ದಾರೆ. ಹಲವು ಪ್ರಾಣಿ ರೂಪಕಗಳ ಮೂಲಕ ಮನುಷ್ಯನ ಹಣದ ಆಸೆಯನ್ನು ನಾಟಕ ವಿಡಂಬನೆಗೆ ಗುರಿಪಡಿಸುತ್ತದೆ. ಒಬ್ಬರನ್ನೊಬ್ಬರು ಮೋಸಪಡಿಸಿ ಸಂತೋಷಪಡುವ ನಂತರ ದುಃಖಕ್ಕೆ ಒಳಗಾಗುವ ಸನ್ನಿವೇಶ ನಾಟಕೀಯವಾಗಿ ಕಂಡುಬರುತ್ತದೆ. ನರಿಯಣ್ಣ, ಪತಂಗಿ, ಹದ್ದಪ್ಪ, ಕಾಕರಾಯ – ಮುಂತಾದ ಹೆಸರುಗಳೇ ಸ್ವಭಾವಕ್ಕೆ ಅನ್ವರ್ಥಕವಾಗಿ ಬರುತ್ತವೆ. ರಂಗಭೂಮಿಗೆ ತಕ್ಕಂತೆ ಸಂಭಾಷಣೆ ಇದ್ದು, ಹಾಡುಗಳು ಅಂತಹ ಸತ್ವವನ್ನು ಒಳಗೊಂಡಿಲ್ಲ ಎಂದೆನಿಸುತ್ತದೆ 'ಗುಳ್ಳೇನರಿ' ತುಂಬಾ ಒಳ್ಳೆಯ ನಾಟಕವಲ್ಲದಿದ್ದರೂ ತನ್ನ ಹಾಸ್ಯ ಮತ್ತು ವಿಡಂಬನೆಯಿಂದ ಗಮನ ಸೆಳೆಯಬಲ್ಲದು. ಈ ಅಂಶಕ್ಕೆ ನಾಟಕದ ಜನಪ್ರಿಯ ಪ್ರಯೋಗಗಳು ಸಾಕ್ಷಿಯಾಗಿವೆ.

– ಎಚ್ಚೆಸ್ಸೆಮ್




# ಆರ್ಥಿಕ ದಿಗ್ಬಂಧನ ಎಂಬ ಬ್ರಹ್ಮಾಸ್ತ್ರ

**ಸೀಯಾರ್ಕೆ**

ರಾಷ್ಟ್ರ ಒಂದರ ಮೇಲೆ ವಿಧಿಸುವ ಆರ್ಥಿಕ ದಿಗ್ಬಂಧನದ ಪರಿಣಾಮಗಳು ಯುದ್ಧದಷ್ಟೇ ಭೀಕರ. ಅದು ಅಮಾಯಕ ಜನರ ಜೀವನವನ್ನು ಅಸ್ತವ್ಯಸ್ತ ಗೊಳಿಸುತ್ತದೆ. ಜೀವನಾವಶ್ಯಕ ವಸ್ತುಗಳು, ಔಷಧ ಸಾಮಗ್ರಿಗಳ ಕೊರತೆ ಉಂಟುಮಾಡಿ ಬದುಕನ್ನು ದುಸ್ತರಗೊಳಿಸುತ್ತದೆ. ಪೋಷಕ ಆಹಾರವಿಲ್ಲದೆ ಅಗತ್ಯವಾದ ವೈದ್ಯಕೀಯ ಸೇವೆ ಇಲ್ಲದೆ ಸಾವು ನೋವುಗಳು ಸಂಭವಿಸುತ್ತವೆ. ಇದರಲ್ಲಿ ಹೆಚ್ಚು ಬಾಧೆ ಗೀಡಾಗುವವರು ಮಕ್ಕಳು. ಸಂಕ್ಷೇಪವಾಗಿ ಹೇಳ ಬೇಕೆಂದರೆ ಅದು ಮನುಷ್ಯನ ಬದುಕುವ ಹಕ್ಕನ್ನೇ ಕಸಿದುಕೊಳ್ಳುತ್ತದೆ. ಇಂಥ ಒಂದು ಕ್ರಮ ನಿರೀಕ್ಷಿತ ಫಲಿತಾಂಶ ತಂದಿದೆಯೆ? ಜನಸಾಮಾನ್ಯರನ್ನು ಸಂಕಷ್ಟಕ್ಕೀಡುಮಾಡುವುದನ್ನು ಬಿಟ್ಟರೆ ಬೇರೇನಿಲ್ಲ. ಸಂಬಂಧಪಟ್ಟ ಸರಕಾರಗಳ ಮೇಲೆ ಪರಿಣಾಮ ಉಂಟುಮಾಡಿರುವುದು ಕಡಿಮೆ. ಆರ್ಥಿಕ ದಿಗ್ಬಂಧನ ವಿಧಿಸುವುದನ್ನು ಎರಡು ಬಗೆಯಾಗಿ ವಿಂಗಡಿಸ ಬಹುದು. ಒಂದು ಅಂತಾರಾಷ್ಟ್ರೀಯ ಸಮುದಾಯ ತಪ್ಪಿತಸ್ಥ ರಾಷ್ಟ್ರದ ಆಡಳಿತವನ್ನು ದಂಡಿಸಲು ಕೈಗೊಳ್ಳುವ ಕ್ರಮ, ಇನ್ನೊಂದು ಒಂದು ಪ್ರಬಲ ರಾಷ್ಟ್ರ ಅಥವಾ ಅಂಥ ರಾಷ್ಟ್ರಗಳ ಕೂಟ ಸೇಡು ತೀರಿಸಿಕೊಳ್ಳಲು, ಇಲ್ಲವೆ ಸಂಬಂಧಪಟ್ಟ ರಾಷ್ಟ್ರದ ಸರಕಾರವನ್ನು ಪದಚ್ಯುತ ಗೊಳಿಸಲು ವಿಧಿಸುವ ನಿರ್ಬಂಧ. ಮೊದಲನೆಯದು ಸಮರ್ಥನೀಯ (ಇದರಲ್ಲಿ ಬಲಿಷ್ಠ ರಾಷ್ಟ್ರಗಳ ಮೇಲುಗೈ ಇಲ್ಲದೇನಿಲ್ಲ). ಎರಡನೆಯದು ಅಕ್ರಮ. ಜನಸಾಮಾನ್ಯರ ಮಟ್ಟಿಗೆ ಎಂದೂ ಮಾರಕವೆ.

ಹಿಂದಿನ ಕಾಲದಲ್ಲಿ ಶತ್ರುದೇಶವನ್ನು ಮಣಿಸಲು ಯುದ್ಧದ ಸಮಯದಲ್ಲಿ ಇಂಥ ದಿಗ್ಬಂಧನಗಳನ್ನು ಮಾಡುತ್ತಿದ್ದರು. ಕೋಟೆಕೊತ್ತಲಗಳನ್ನು ವಶಪಡಿಸಿ ಕೊಳ್ಳಲು ಅನುಸರಿಸುತ್ತಿದ್ದ ಕ್ರಮಗಳಲ್ಲಿ ಇದೊಂದಾಗಿತ್ತು. ಆಹಾರ ಸಾಮಗ್ರಿಗಳೇನೂ ಕೋಟೆಯೊಳಗೆ ಹೋಗ ದಂತೆ ತಡೆಯಲಾಗುತ್ತಿತ್ತು. ಶಾಂತಿಯ ಸಮಯದಲ್ಲಿ ನಿರ್ಬಂಧ ಪಾಲಿಸುವ ಕ್ರಮ ಪ್ರಾರಂಭವಾದ್ದು ಇಪ್ಪತ್ತನೆಯ ಶತಮಾನದಲ್ಲಿ, ಮೊದಲನೇ ಮಹಾಯುದ್ಧದ ನಂತರ. ಅದರ ದುರುಪಯೋಗ ಶುರುವಾದ್ದು ಎರಡನೇ ಮಹಾಯುದ್ಧದ ನಂತರ. ಮೊದಲನೇ ಮಹಾಯುದ್ಧದ ನಂತರ ಶಾಂತಿ ಕಾಪಾಡಲು ಸ್ಥಾಪನೆಗೊಂಡ ಲೀಗ್ ಆಫ್ ನೇಷನ್ಸ್ ಸಂಸ್ಥೆಯು ೧೯೩೫-೩೬ರಲ್ಲಿ ಅಬಿಸೀನಿಯ ಯುದ್ಧದ ಕಾಲದಲ್ಲಿ ಇಟಲಿಯ ಫಾಸಿಸ್ಟ್ ಸರಕಾರದ ದುರಾಕ್ರಮಣಕಾರಿ ನೀತಿಯನ್ನು ವಿರೋಧಿಸಿ ಮೊದಲ ಬಾರಿಗೆ ಅಂತಾರಾಷ್ಟ್ರೀಯ ಕಾಯಿದೆಗನುಸಾರವಾಗಿ ಇಟಲಿಯ ಮೇಲೆ ಆರ್ಥಿಕ ದಿಗ್ಬಂಧನ ವಿಧಿಸಿತು. ಅದೇ ಬಗೆಯಲ್ಲಿ ಜರ್ಮನಿಯ ಪುನಶ್ಶಸ್ತ್ರೀಕರಣವನ್ನು ತಡೆಯಲು ಕೆಲವು ನಿರ್ಬಂಧಗಳನ್ನು ವಿಧಿಸಲಾಗಿತ್ತು. ಆದರೆ ಎರಡೂ ಪರಿಣಾಮಕಾರಿಯಾಗಿರಲಿಲ್ಲ. ಅಕ್ಟೋಬರ್ ಮಹಾಕ್ರಾಂತಿಯ ದಿಗ್ವಿಜಯದ ನಂತರ ರಷ್ಯಾದಲ್ಲಿ ಸ್ಥಾಪನೆಗೊಂಡ ಸಮಾಜವಾದಿ ಸರಕಾರವನ್ನು ಮೊಳಕೆಯಲ್ಲೇ ಚಿವುಟಿಹಾಕಲು ಪಾಶ್ಚಿಮಾತ್ಯ ಸಾಮ್ರಾಜ್ಯಶಾಹಿ ಸರಕಾರಗಳು ಆರ್ಥಿಕ ದಿಗ್ಬಂಧನವನ್ನು ವಿಧಿಸಿದ್ದವು. ಶೀತಲ ಯುದ್ಧದ ಕಾಲದಲ್ಲಿ ಅಮೆರಿಕಾ ಮತ್ತು ಇತರ ಪಶ್ಚಿಮ ರಾಷ್ಟ್ರಗಳು ಸೋವಿಯೆತ್ ಒಕ್ಕೂಟದ ಪ್ರಗತಿಯನ್ನು ತಡೆಯಲು ನಾನಾ ಬಗೆಯ ನಿರ್ಬಂಧಗಳನ್ನು ಹಾಕಿದ್ದವು. ಅಂದಿನ ದಿನಗಳಲ್ಲಿ ಅಮೆರಿಕಾ ತನ್ನ ಹೆಚ್ಚುವರಿ ಗೋಧಿ ಯನ್ನು ಸಮುದ್ರಕ್ಕೆಸೆಯಲು ಸಿದ್ಧವಾಗಿತ್ತೇ ಹೊರತು, ಅದರ ಅಗತ್ಯವಿದ್ದ ಸೋವಿಯೆತ್ ಒಕ್ಕೂಟಕ್ಕೆ ಮಾರಾಟ ಮಾಡಲು ತಯಾರಾಗಿರಲಿಲ್ಲ. ತಾನು ನಿರ್ಬಂಧ ವಿಧಿಸುವುದಿರಲಿ, ಇತರರೂ ಅದನ್ನೇ ಅನುಸರಿಸಬೇಕೆಂದು ಅಮೆರಿಕಾ ಇತರ ದೇಶಗಳ ಮೇಲೆ ಒತ್ತಡ ತರುತ್ತಿತ್ತು. ಮಾನವ ಹಕ್ಕುಗಳು ಹಾಗೂ ಮುಕ್ತ ಮಾರುಕಟ್ಟೆಯ ಪ್ರತಿಪಾದಕನೆಂದು ಹೇಳಿಕೊಳ್ಳುತ್ತಿದ್ದ, ಈಗಲೂ ಹೇಳಿಕೊಳ್ಳುತ್ತಿರುವ, ಅಮೆರಿಕಾ ಆಚರಣೆಯಲ್ಲಿ ಮಾಡುತ್ತಿದ್ದುದು ಇಂಥ ಹೀನ ಕೃತ್ಯ. ಅತ್ಯಂತ ಪ್ರಬಲ ರಾಷ್ಟ್ರವಾಗಿರುವುದರಿಂದ ಅಮೆರಿಕಾ ಏನೇ ದುಷ್ಕೃತ್ಯ ಎಸಗಿದರೂ, ದಂಡನೆಗೆ ಅರ್ಹವಾಗಿದ್ದರೂ ಪಾರಾಗುತ್ತಿದೆ.

ಆರ್ಥಿಕವಾಗಿ, ಸೈನಿಕವಾಗಿ ಅತ್ಯಂತ ಪ್ರಬಲ ರಾಷ್ಟ್ರವಾಗಿ ಬೆಳೆದ ಅಮೆರಿಕಾ ಎರಡನೇ ಮಹಾಯುದ್ಧದ ನಂತರ ಮನಸ್ಸಿಗೆ ಬಂದ ಹಾಗೆ ತನಗೆ ಬೇಡವಾದ ದೇಶಗಳ ಮೇಲೆ ನಾನಾ ಬಗೆಯ ನಿರ್ಬಂಧಗಳನ್ನು ಹೇರುತ್ತ ಬಂದಿದೆ. ತನ್ನ ಪ್ರಭಾವವನ್ನು ಬೀರಿ, ಒತ್ತಡದ ತಂತ್ರ ಅನುಸರಿಸಿ ವಿಶ್ವಸಂಸ್ಥೆಯ ಮೂಲಕವಾಗಿಯೂ ಆರ್ಥಿಕ ದಿಗ್ಬಂಧನ ವಿಧಿ ಸುವುದರಲ್ಲಿ ಸಫಲಗೊಂಡಿದೆ. ಅಮೆರಿಕಾದ ಆಡಳಿತೆಗೆ ನಿರ್ಬಂಧ ಹೇರುವ ಈ ಅಸ್ತ್ರ ಅದರ ವಿದೇಶಾಂಗ ನೀತಿಯ ಅನುಷ್ಠಾನಕ್ಕೆ ಪ್ರಧಾನಸೂತ್ರವಾಗಿಬಿಟ್ಟಿದೆ. ಅದರ ಹಿತಾಸಕ್ತಿಗಳಿಗೆ ಅನುಗುಣವಾಗಿಲ್ಲದ ದೇಶದ ಮೇಲೆ ಅದು ನಾನಾ ಬಗೆಯ ನಿರ್ಬಂಧಗಳನ್ನು ವಿಧಿಸುತ್ತದೆ. ನಮ್ಮ ದೇಶವೂ ಒಳಗೊಂಡಂತೆ ಅನೇಕ ದೇಶಗಳು ಅಮೆರಿಕಾದ ಈ ದುರಾಚಾರಕ್ಕೆ ಒಳಗಾಗಿವೆ. ಎಲ್ಲ ದ್ವಿಪಕ್ಷೀಯ ಒಪ್ಪಂದಗಳನ್ನು ಗಾಳಿಗೆ ತೂರಿ ಅಮೆರಿಕಾ ನಿರ್ಬಂಧಗಳನ್ನು ಹೇರುತ್ತದೆ. ಭಾರತದ ಸ್ವತಂತ್ರ ಅಲಿಪ್ತನೀತಿಯನ್ನು ಸಹಿಸದಿದ್ದ ಅಮೆರಿಕಾ ಇಲ್ಲದ ನೆಪ ಒಡ್ಡಿ ಆರ್ಥಿಕ ಹಾಗೂ ಬೇರೆ ಇತರ ಕ್ಷೇತ್ರಗಳಲ್ಲಿ ಪ್ರಗತಿಗೆ ಮಾರಕವಾಗುವಂತೆ ಸರಂಜಾಮುಗಳ ಸರಬರಾಜು ತಡೆಹಿಡಿದಿದೆ. ತಂತ್ರಜ್ಞಾನ ನೀಡದಿರುವ ವಿಚಾರ ಇಲ್ಲಿ ಹೇಳುತ್ತಿಲ್ಲ. ಅದು ಅಮೆರಿಕಾದ ಆಂತರಿಕ ವಿಷಯ. ಆದರೆ ಅಮೆರಿಕಾದಿಂದ ಖರೀದಿಸಿರುವ ಯಂತ್ರೋಪಕರಣಗಳಿಗೆ ಒಪ್ಪಿಕೊಂಡಿದ್ದ ಬಿಡಿ ಭಾಗಗಳನ್ನು ಸರಬರಾಜು ಮಾಡದಿರುವುದು ಹೇಯ ಕೃತ್ಯ. ತಾನು ಕೊಡದಿರುವುದು ಹೋಗಲಿ ಎಂದರೆ ಇತರ ದೇಶಗಳೂ ಕೊಡದಿರುವ ಹಾಗೆ ಒತ್ತಡ ತರುತ್ತದೆ. ಅಂತರಿಕ್ಷವಿಜ್ಞಾನದ ಕ್ಷೇತ್ರದಲ್ಲಿ, ನ್ಯೂಕ್ಲಿಯರ್ ಶಕ್ತಿಯನ್ನು ಶಾಂತಿಯುತ ಉದ್ದೇಶಗಳಿಗಾಗಿ ಬಳಸುವ ವಿಚಾರದಲ್ಲಿ ಭಾರತದ ಪ್ರಗತಿಗೆ ಅಮೆರಿಕಾ ಸಾಕಷ್ಟು ಅಡ್ಡಿ ಉಂಟುಮಾಡಿದೆ. ಭಾರತದ ಪರಮಾಣು ವಿದ್ಯುತ್ ಕೇಂದ್ರಕ್ಕೆ ಅಗತ್ಯವಾದ ಇಂಧನ ಪೂರೈಕೆ ನಿಲ್ಲಿಸಿದ್ದು, ಬೇರೆಯವರೂ ಪೂರಯಿಸದಂತೆ ಒತ್ತಾಯ ತಂದಿರುವುದು ಅದಕ್ಕೊಂದು ಉದಾಹರಣೆ. ಇಪ್ಪತ್ತನೇ ಶತಮಾನದ ಐವತ್ತು ಅರವತ್ತರ ದಶಕಗಳಲ್ಲಿ ಅಮೆರಿಕಾ ಹೊಸದಾಗಿ ಸ್ವತಂತ್ರಗೊಂಡ ದೇಶಗಳ ಮೇಲೆ ಒತ್ತಡ ತರಲು ಆರ್ಥಿಕ ನಿರ್ಬಂಧವನ್ನು ಯಥೇಚ್ಛವಾಗಿ ಬಳಸಿಕೊಂಡಿದೆ.

ಮಾತೆತ್ತಿದರೆ ಅಂತಾರಾಷ್ಟ್ರೀಯ ನ್ಯಾಯ ಎತ್ತಿಹಿಡಿಯಲು ಬದ್ಧವಾಗಿರುವ ರಾಷ್ಟ್ರ ತಾನೆಂದು ಹೇಳಿಕೊಳ್ಳುವ ಅಮೆರಿಕಾ ನಡವಳಿಕೆಯಲ್ಲಿ ಅದಕ್ಕೆ ವಿರುದ್ಧ. ದಕ್ಷಿಣ ಆಫ್ರಿಕಾದ ಕುಲವಾದಿ ಸರಕಾರ ಎಲ್ಲ ಅಂತಾರಾಷ್ಟ್ರೀಯ ನಿಯಮ ಗಳನ್ನು ಉಲ್ಲಂಘಿಸಿ, ವಿಶ್ವಸಂಸ್ಥೆಯ ನಿರ್ಣಯಗಳನ್ನು ಗಾಳಿಗೆ ತೂರಿ ಅತ್ಯಂತ ಕ್ರೂರವಾದ, ಅಮಾನವೀಯವಾದ ವರ್ಣಭೇದ ನೀತಿಯನ್ನು ಅನುಸರಿಸುತ್ತಿದ್ದಾಗ ಆರ್ಥಿಕ ದಿಗ್ಬಂಧನ ವಿಧಿಸಲು ಅಮೆರಿಕಾ ಮುಂದಾಗಲಿಲ್ಲ. ಪ್ರಪಂಚದ ಬಹುತೇಕ ರಾಷ್ಟ್ರಗಳ, ಜನತೆಯ ಅಭಿಪ್ರಾಯಗಳನ್ನು ಧಿಕ್ಕರಿಸಿ ಅಮೆರಿಕಾ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ವೀಟೋ ಚಲಾಯಿಸಿ ತಡೆಹಿಡಿಯಿತು ವರ್ಷಗಳ ಕಾಲ. ಆದರೆ ಅದೇ ಸಮಯದಲ್ಲಿ ಉತ್ತರ ಕೊರಿಯ, ಚೀಣಾ, ವಿಯೆಟ್ನಾಮ್ ಮೊದಲಾದ ದೇಶಗಳ ಮೇಲೆ ನಿರ್ಬಂಧ ವಿಧಿಸಲು ಹೇಸಲಿಲ್ಲ. ಇದರ ಅರ್ಥ ಸ್ಪಷ್ಟ. ನ್ಯಾಯವಾದ ಪ್ರಶ್ನೆಗಳು ಉದ್ಭವಿಸಿದಾಗ, ಅದು ಅಮೆರಿಕಾ ಹಾಗೂ ಅದರ ಮಿತ್ರರಾಷ್ಟ್ರಗಳಿಗೆ ಅನುಕೂಲವಾಗದಿದ್ದಲ್ಲಿ ಸಂಬಂಧಪಟ್ಟ ದೇಶ ಏನೇ ಅಪರಾಧ ಎಸಗಿದ್ದರೂ ವಿನಾಯಿತಿ, ಅಮೆರಿಕಾಗೆ ಬೇಡವಾಗಿದ್ದಲ್ಲಿ ತಕ್ಷಣ ಕ್ರಮ ಜರುಗಿಸುವುದು. ಇದಕ್ಕೆ ಉದಾಹರಣೆ, ಇಸ್ರೇಲ್. ವಿಶ್ವಸಂಸ್ಥೆಯ ಆದೇಶಗಳನ್ನು ಇಸ್ರೇಲ್ ಉಲ್ಲಂಘಿಸಿರುವಷ್ಟು ಬೇರಾವ ದೇಶವೂ ಮಾಡಿಲ್ಲ. ಅದು ಅಕ್ರಮವಾಗಿ ನ್ಯೂಕ್ಲಿಯರ್ ಅಸ್ತ್ರ ತಯಾರಿಸಿದ್ದರೂ ಅದರ ಮೇಲೆ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಏಕೆಂದರೆ ಅದು ಅಮೆರಿಕಾದ ಆಪ್ತ. ಹೀಗೆ ಎಷ್ಟೋ ಉದಾಹರಣೆಗಳನ್ನು ಪಟ್ಟಿಮಾಡುತ್ತ ಹೋಗಬಹುದು.

ಕ್ಯೂಬಾದ ಮೇಲೆ ಕಳೆದ ಮುವ್ವತ್ತೈದು ವರ್ಷಗಳಿಂದ ಅಮೆರಿಕಾ ಆರ್ಥಿಕ ನಿರ್ಬಂಧ ಹೇರಿದೆ. ವಿಶ್ವಸಂಸ್ಥೆಯ ಮಹಾಸಭೆ ಕಳೆದ ಹತ್ತು ಹದಿನೈದು ವರ್ಷಗಳಿಂದ ಬಹುಮತದಿಂದ (ಅಮೆರಿಕಾ, ಇಸ್ರೇಲ್ ಮಾತ್ರ ವಿರೋಧ) ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನವನ್ನು ರದ್ದುಗೊಳಿಸಬೇಕೆಂದು ಶಿಫಾರಸು ಮಾಡುತ್ತಿದ್ದರೂ ಕಡೆಗಣಿಸ ಲಾಗಿದೆ. ವಿಶ್ವಸಂಸ್ಥೆಯ ಭದ್ರತಾಮಂಡಲಿಯಲ್ಲಿ ಅಮೆರಿಕಾದ ವಿರೋಧದಿಂದಾಗಿ ನಿರ್ಬಂಧ ಇಂದಿಗೂ

ಮುಂದುವರಿಯುತ್ತಿದೆ. ಹಿಂದಿನ ಸೋವಿಯೆತ್ ಒಕ್ಕೂಟ ಮತ್ತು ಸಮಾಜವಾದಿ ದೇಶಗಳ ಬೆಂಬಲದಿಂದ, ಹಾಗೂ ಏಶಿಯಾ, ಆಫ್ರಿಕಾ, ಲ್ಯಾಟಿನ್ ಅಮೆರಿಕಾಗಳ ಕೆಲದೇಶಗಳ ಸಹಾಯದಿಂದ ಕ್ಯೂಬಾ ಉಳಿದುಕೊಂಡಿತು. ನಿರ್ಬಂಧ ಇಲ್ಲದೆ ಹೋಗಿದ್ದರೆ ಸಮಾಜವಾದಿ ರಾಷ್ಟ್ರ ಕ್ಯೂಬಾದ ಪ್ರಗತಿ ಅದ್ಭುತವಾದ್ದಾಗಿರುತ್ತಿತ್ತು. ಈಗ ಅಮೆರಿಕಾ ಸಮಾಜವಾದಿ ಪಥದಲ್ಲಿ ಅಡಿಯಿರಿಸಲು ಹೊರಟಿರುವ ಲ್ಯಾಟಿನ್ ಅಮೆರಿಕಾದ ವೆನೆಜುವೇಲವನ್ನು ಕಬಳಿಸಲು ಹೊಂಚುಹಾಕುತ್ತಿದೆ.




ಅಮಾನುಷವಾದ ಆರ್ಥಿಕ ದಿಗ್ಬಂಧನಕ್ಕೆ ಗುರಿಯಾಗಿ ಅಪಾರವಾದ ಕಷ್ಟನಷ್ಟಗಳನ್ನೂ, ಪ್ರಾಣ ಹಾನಿಯನ್ನೂ ಅನುಭವಿಸಿದ ಇನ್ನೊಂದು ದೇಶ ಇರಾಕ್. ಕುವೇತ್‌ನ ಆಕ್ರಮಣ ಇರಾಕಿನ ಸದ್ದಾಮ್ ಹುಸೇನ್ ಸರಕಾರ ಎಸಗಿದ ಅಪರಾಧ ಎನ್ನುವುದು ನಿಜ. ವಿಶ್ವಸಂಸ್ಥೆಯ ಪತಾಕೆಯಡಿಯಲ್ಲಿ ದುರಾಕ್ರಮಣವನ್ನು ತೆರವುಗೊಳಿಸಲು ಸೇನಾ ಕಾರ್ಯಾಚರಣೆ ನಡೆಸಲಾಯಿತು. ಅಮೆರಿಕಾ ಮುಂದಾಳತ್ವದಲ್ಲಿ ಅದು ಜರುಗಿತು. ಸದ್ದಾಮ್ ಹುಸೇನ್ ಸರಕಾರವನ್ನು ದಂಡಿಸಲು ಇರಾಕಿನ ಮೇಲೆ ಅಮೆರಿಕದ ವಿಮಾನಗಳು ಸಾಕಷ್ಟು ಬಾಂಬು ಸುರಿಸಿದವು. ಆದರೆ ಸದ್ದಾಮ್ ಹುಸೇನ್ ಸರಕಾರವನ್ನು ಪದಚ್ಯುತಗೊಳಿಸಲಾಗಲಿಲ್ಲ. ವಿಶ್ವಸಂಸ್ಥೆಯನ್ನು ಬಳಸಿಕೊಂಡು ೧೯೯೦ರಲ್ಲಿ ಆರ್ಥಿಕ ದಿಗ್ಬಂಧನವನ್ನು ಅಮೆರಿಕಾ ವಿಧಿಸಿತು. ಇದು ಅತ್ಯಂತ ಕಠೋರವಾದ ದಿಗ್ಬಂಧನವಾಗಿತ್ತು. ಹನ್ನೆರಡು ವರ್ಷಗಳಲ್ಲಿ ಆ ದೇಶದಲ್ಲಿ ಸಂಭವಿಸಿದ ಹಾನಿ ಅಪಾರ, ಸಂಭವಿಸಿದ ಸಾವುನೋವುಗಳು ಹತ್ತಿರ ಹತ್ತಿರ ಇಪ್ಪತ್ತು ಲಕ್ಷ. ಇವರಲ್ಲಿ ಪೋಷಕ ಆಹಾರ ಲಭ್ಯವಿಲ್ಲದೆ ಅಸುನೀಗಿದ ಮಕ್ಕಳ ಸಂಖ್ಯೆಯೇ ಹೆಚ್ಚು. ಸದ್ದಾಮ್ ಹುಸೇನ್‌ನ ಮೇಲೆ ಸೇಡು ತೀರಿಸಿಕೊಳ್ಳಲು ಅವನನ್ನು ಪದಚ್ಯುತಗೊಳಿಸಲು ಅಮೆರಿಕಾದ ಆಡಳಿತ ಪಟ್ಟುಹಿಡಿದು ಕೈಗೊಂಡ ಕ್ರಮದಿಂದ ಪರಿತಪಿಸಿದ್ದು ಜನಸಾಮಾನ್ಯರು. ಸದ್ದಾಮ್ ಹುಸೇನನನ್ನು ಪದಚ್ಯುತಗೊಳಿಸಲು ಕಡೆಗೆ ಸುಳ್ಳು ಆಪಾದನೆಗಳನ್ನು ಹೊರಿಸಿ ಅಮೆರಿಕಾ ದುರಾಕ್ರಮಣ ನಡೆಸಿತು. ಹನ್ನೆರಡು ವರ್ಷಗಳು ಇರಾಕಿ ಜನರ ಜೀವನ ನರಕಸದೃಶ ಅಷ್ಟೆ. ಅಮೆರಿಕಾ ಈ ಬ್ರಹ್ಮಾಸ್ತ್ರವನ್ನು ಉತ್ತರ ಕೊರಿಯ, ಇರಾನ್ ಮೊದಲಾದ ದೇಶಗಳ ಮೇಲೆ ಪ್ರಯೋಗಿಸಲು ಸಿದ್ಧತೆ ನಡೆಸಿದೆ.

ತಪ್ಪಿತಸ್ಥ ದೇಶಗಳನ್ನು ದಂಡಿಸಲು ಈ ಆರ್ಥಿಕ ನಿರ್ಬಂಧದ ಕ್ರಮ ಎಷ್ಟು ಸಮಂಜಸ ಎನ್ನುವುದನ್ನು ಅಂತಾರಾಷ್ಟ್ರೀಯ ಸಮುದಾಯ ಆಲೋಚಿಸಬೇಕಾಗಿದೆ. ಪ್ರಬಲ ರಾಷ್ಟ್ರವೊಂದರ ಪ್ರಮುಖ ಅಸ್ತ್ರವಾಗಿ ಬಳಕೆಯಾಗುತ್ತಿರುವ ಈ ಅಮಾನವೀಯ ಕ್ರಮ ಜನಸಾಮಾನ್ಯರಿಗೆ ಕಂಟಕವಾಗುವುದೇ ಹೊರತು, ಆಳುವ ವರ್ಗದವರಿಗೆ, ಶ್ರೀಮಂತರಿಗೆ ಅಲ್ಲ. ಆರ್ಥಿಕ ನಿರ್ಬಂಧದ ಕ್ರಮದ ದುರುಪಯೋಗವನ್ನು ತಡೆಯಲು ಅಂತಾರಾಷ್ಟ್ರೀಯ ಸಮುದಾಯ ಮಾನವೀಯ ದೃಷ್ಟಿಯಿಂದ ಸೂಕ್ತವಾದ ನಿರ್ಧಾರಗಳನ್ನು ಕೈಗೊಳ್ಳಬೇಕಾದ ಕಾಲ ಸನ್ನಿಹಿತವಾಗಿದೆ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ಮೂರನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



↑ ಅಲಂಕಾರಕ್ಕೆ ಹಚ್ಚೆ



# ಚಿತ್ರಸಂತೆ - ೨೦೦೫

ಚಿತ್ರಸಂತೆ - ೨೦೦೫, ಕಳೆದ ವರ್ಷಕ್ಕಿಂತ ಹೆಚ್ಚು ಮಂದಿ ಕಲಾಕಾರರನ್ನು ಆಕರ್ಷಿಸಿತ್ತು. ಈ ವರ್ಷ ಕೋಲ್ಕತ್ತ, ದಿಲ್ಲಿ, ಭೋಪಾಲ್, ಧುಲೆ, ಪುಣೆ ನಗರಗಳಿಂದಲ್ಲದೆ ತಮಿಳ್ನಾಡು, ಒರಿಸ್ಸಾ, ಆಂಧ್ರಪ್ರದೇಶ ಮತ್ತು ಕೇರಳ ರಾಜ್ಯಗಳಿಂದ ಬಂದ ಸುಮಾರು ೧೨೦೦ ಮಂದಿ ಕಲಾಕಾರರು ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದರು. ಪೆನ್ಸಿಲ್ ಸ್ಕೆಚ್, ಜಲವರ್ಣ, ತೈಲವರ್ಣ, ಚಾರ್‌ಕೋಲ್, ಗಾಜಿನ ಮೇಲೆ ಚಿತ್ರಗಳು, ಸೂಕ್ಷ್ಮ ಮಿನಿಯೇಚರ್ ಚಿತ್ರಗಳಲ್ಲದೆ ಮರದ ಕೆತ್ತನೆ, ಕಂಚು, ಶಿಲಾಶಿಲ್ಪಗಳು, ಫೈಬರ್‌ಗ್ಲಾಸ್ ರಚನೆಗಳು ಹಾಗೂ ಕಂಪ್ಯೂಟರ್ ಕಲಾಚಿತ್ರಗಳವರೆಗೆ ನಾನಾಬಗೆಯ ಕಲಾಕೃತಿಗಳು ಪ್ರದರ್ಶನವಾಗಿದ್ದವು. ಕಲಾಸಕ್ತರು ಅಲ್ಲಲ್ಲಿ ನಿಂತು, ಬಗೆಬಗೆಯ ಕಲಾಕೃತಿಗಳನ್ನಲ್ಲದೆ ತಮ್ಮ ಭಾವಚಿತ್ರಕ್ಕಾಗಿ ಅಲುಗಾಡದೆ ಕುಳಿತ ರೂಪದರ್ಶಿಗಳನ್ನೂ, ಅಲಂಕಾರದ ಹಚ್ಚೆ ಹಾಕಿಸಿಕೊಳ್ಳುವ ಯುವತಿಯರನ್ನೂ, ವರ್ಷದಲ್ಲೊಮ್ಮೆ ಆರಾಮವಾಗಿ ಜನರ ಮಧ್ಯೆ ತಿರುಗಾಡುವ ಪೊಲೀಸ್ ಕಲಾರಸಿಕರನ್ನೂ, ಬಿಸಿ ಬಿಸಿ ಸಮೋಸಾ ಮುಕ್ಕುವ ತಿಂಡಿ ರಸಿಕರನ್ನೂ, ನಿಧಾನಕ್ಕೆ ತಿರುಗಾಡುತ್ತ ಮೆಚ್ಚಿ, ಆನಂದಿಸಿ, ಆಸಕ್ತರು ಸಾಧ್ಯವಾದಷ್ಟು ಕಲಾಕೃತಿಗಳನ್ನು ಖರೀದಿಸಿದರು.

ಮುಖ್ಯಮಂತ್ರಿಗಳ ನಿವಾಸ, ಅಶೋಕಾ ಹೋಟೆಲ್, ಕುಮಾರಕೃಪಾ ಗೆಸ್ಟ್ ಹೌಸ್ – ಮುಂತಾದ ಪ್ರತಿಷ್ಠಿತ ತಾಣಗಳಿರುವ ರಸ್ತೆ ಒಂದು ದಿನ ಮುಕ್ತವಾಗಿ ಚಿತ್ರಸಂತೆಗೆ ತೆರೆದುಕೊಂಡಿತು. ಒಂದು ದಿನದ ಅವಕಾಶವನ್ನು ಎರಡು ದಿನಗಳಿಗೆ ವಿಸ್ತರಿಸಿದರೆ ಚೆನ್ನಾಗಿರುತ್ತದೆ ಎಂಬುದು ಕೆಲವು ಕಲಾಕಾರರ ಹಾಗೂ ಚಿತ್ರರಸಿಕರ ಅಭಿಪ್ರಾಯ, ಆಶಯ.

ಚಿತ್ರಕಲಾ ಪರಿಷತ್ತು ತಮಗೆ ನೀಡಿದ ಈ ಅವಕಾಶದ ಬಗ್ಗೆ ಕಲಾಕಾರರು ಮೆಚ್ಚುಗೆ ವ್ಯಕ್ತಪಡಿಸಿದರು.

ಚಿತ್ರ-ಲೇಖನ : ಕೆ. ವಿ. ಸ್ವಾಮಿ



↑ ಪಯಣ : ಚಿತ್ರ - ನಾಗರಾಜು



↑ ಚಿತ್ರ - ವಿನೋದ್‌ಕುಮಾರ್



ಮುದುಕ - ಚಿತ್ರ : ವಿಷ್ಣು ↑

↓ ಮುಖವಾಡಗಳು : ಶಿವರಾಂ - ವಿಲಿಯಂ



↓ ಊಟದ ವೇಳೆ : ಚಿತ್ರ - ಇಳಂಚೇಳಿಯನ್





# ಮಾಧವ ಮಾಸ್ತರಿಗೆ ಕಣ್ಣು ಬಂದ ಕತೆ

ಅಜಿತ್ ಹರೀಶಿ

''ಮಾಧವ ಮಾಸ್ತರಿಗೆ ಕಣ್ಣು ಕಾಣೋದೇ ಇಲ್ವಂತೆ; ಕೈಹಿಡಿದು ನಡೆಸಬೇಕಂತೆ - ನೋಡ್ಕೊಂಡು ಬಂದೆಯಾ ?'' ಅಪ್ಪಯ್ಯನ ಮಾತು ಕಿವಿಗೆ ಬೀಳುತ್ತಿದ್ದಂತೆ ಆಗಷ್ಟೇ ಪೇಟೆಯಿಂದ ಬಂದು ಸೈಕಲ್ಲು ನಿಲ್ಲಿಸುತ್ತಿದ್ದ ರಾಜಾರಾಮನ ಎದೆ ಧಸಕ್ಕೆಂದಿತು. ಅಯ್ಯೋ ! ಮಾಧವ ಮಾಸ್ತರಿಗೆ ಕುರುಡು ! ಎಂಥವರಿಗೆ ಎಂಥ ಕಷ್ಟವಪ್ಪ ! ರಾಜಾರಾಮನಿಗೆ ಒಂದು ಕ್ಷಣ ಕಣ್ಣು ಕತ್ತಲಾಗಿಬಿಟ್ಟಿತು. ಸ್ವಲ್ಪ ಸುಧಾರಿಸಿಕೊಂಡು ಹೇಳಿದ : ''ಇಲ್ಲ ಅಪ್ಪಯ್ಯ, ಸುಳ್ಳೇ ಸೈ; ಬೆಳಗಿನಿಂದ ಸಾಗರದಲ್ಲೇ ಇದ್ದೆ. ಆದರೆ ಯಾರೂ ನಂಗೆ ಹೇಳಲೇ ಇಲ್ಲವಲ್ಲ ?'' ಅಪ್ಪಯ್ಯನ ಸುದ್ದಿಯ ಸತ್ಯತೆಯ ಬಗ್ಗೆ ರಾಜಾರಾಮನಿಗೆ ಎಳ್ಳಷ್ಟೂ ಅನುಮಾನವಿರಲಿಲ್ಲ; ಆದರೆ, ಆ ಸುದ್ದಿಯನ್ನು ಒಮ್ಮೆಲೇ ಒಳಗೆ ಸುರಿದುಕೊಳ್ಳಲು ಮನಸ್ಸು ಒಪ್ಪಲಿಲ್ಲ. ಒಂದು ಚಣವಾದರೂ ಆಘಾತದಿಂದ ತಪ್ಪಿಸಿಕೊಳ್ಳುವ ಉಪಾಯ ಆ ಪ್ರಶ್ನೆಯಾಗಿತ್ತು ಅಷ್ಟೆ. ಆದರೆ, ಕೂಡಲೇ ಅವನ ಅಪ್ಪಯ್ಯ ಹೇಳಿದರು : ''ಸಾಕು ಸುಮ್ನೆ ಇರು ಮಾರಾಯ. ನನಗೆ ಈ ಸುದ್ದಿ ಹೇಳಿದವರು ಮತ್ತೆ ಯಾರೂ ಅಲ್ಲ - ಅವರ ಮಗ ಪುಂಡಲೀಕನೇ ಸೈ. ಇವತ್ತು ಹೊಸಬಾಳೆ ಪಂಡಿತರ ಹತ್ತಿರ ಔಷಧಿಗೆ ಅಂತ ಬಂದಿದ್ದ. ಇಷ್ಟಕ್ಕೂ ನಿನಗೆ ನಂಬಿಕೆ ಬರದೇ ಇದ್ದರೆ ನಾನೇನು ಮಾಡಲಿ ?'' ಆ ಕಹಿ ಸುದ್ದಿಯನ್ನು ತಾನು ಯಾಕಾದರೂ ದೃಢಪಡಿಸಿಕೊಂಡೆನೋ ಎಂದು ರಾಜಾರಾಮ ಪೇಚಾಡಿಕೊಂಡ. ಕೂಡಲೇ ಅವನಿಗೆ ಮಾಧವ ಮಾಸ್ತರನ್ನು ನೋಡಿಕೊಂಡು ಬರುವ ಮನಸ್ಸಾಯಿತು. ಆದರೆ, ಹತ್ತು ಮೈಲಿ ದೂರದ ಪೇಟೆಗೆ ಉರಿ ಬಿಸಿಲಿನಲ್ಲಿ ಪುನಃ ಸೈಕಲ್ಲನ್ನು ತುಳಿಯಲಾರನೇನೋ ಎನ್ನಿಸಿತು. ಹೊರ ಜಗುಲಿಯಲ್ಲಿದ್ದ ಚಿಕ್ಕ ಕಾಲುಮಣೆಯ ಮೇಲೆ ಸುಮ್ಮನೆ ಕುಳಿತುಬಿಟ್ಟ. ಅಷ್ಟರಲ್ಲಿ ಅವನ ಅಮ್ಮ ಜಗುಲಿಗೆ ಬಂದು, ಮಗನನ್ನು ನೋಡಿ, ''ಮಾಣಿ, ಎಂತಕೆ ಹಿಂಗೆ ತಲೀಗೆ ಕೈಕೊಟ್ಕೊಂಡು ಕುಂತಿದ್ದೀಯ ?'' ಎಂದು ಕೇಳಿದಳು. ರಾಜಾರಾಮ ಉತ್ತರಿಸಲಿಲ್ಲ. ಅವಳು ಅಷ್ಟಕ್ಕೇ ಒಳಗೆ ಹೋದಾಳು ಎಂದುಕೊಂಡಿದ್ದ ಅವನ ಊಹೆ ಸುಳ್ಳಾಯಿತು. ಅಮ್ಮ ಮುಂದುವರೆಸಿದಳು. ''ಈ ಉರಿ ಬಿಸಲಾಗೆ ಸೈಕಲ್ಲು ಹೊಡೀಬ್ಯಾಡ ಅಂದರೆ, ಕೇಳೋದಿಲ್ಲ ನೋಡು; ಹೋಗ್ಲಿ, ಮಜ್ಜಿಗೆ-ಬೆಲ್ಲ ತಂದು ಕೊಡ್ಲೇನೋ ?'' ರಾಜಾರಾಮ ಸುಮ್ಮನೆ ತಲೆಯಾಡಿಸಿದ; ಆದರೂ ಅಮ್ಮ ಅಲ್ಲೇ ನಿಂತಿದ್ದನ್ನು ನೋಡಿ ಹೇಳಿದ : ''ಬ್ಯಾಡ ಅಮ್ಮ, ನಂಗೆ ಈಗೇನೂ ಬ್ಯಾಡ. ಒಂದು ಗಂಟೆ ಹಂಗೆ ಮಲ್ಕೊತ್ತೀನಿ; ಯಾರೂ ಎಬ್ಬಿಸಬೇಡಿ''. ರಾಜಾರಾಮ ಕಾಲುಮಣೆಯ ಮೇಲೆ ಮಲಗುತ್ತಿದ್ದಂತೆಯೇ ಅಮ್ಮ ಅದೇನೋ ಗೊಣಗುತ್ತಾ ಒಳಗೆ ಹೋದಳು. ದೊಡ್ಡ ದೊಡ್ಡ ಕಿಟಕಿಗಳಿಂದ ನುಗ್ಗಿ ಬರುತ್ತಿದ್ದ ಧಗಧಗಿಸುವ ಬಿಸಿಲಿನಲ್ಲೂ ರಾಜಾರಾಮ ಕತ್ತಲಿನ ಆಳಕ್ಕೆ ಇಳಿದುಬಿಟ್ಟ..

ಶರಾವತಿಗೆ ಲಿಂಗನಮಕ್ಕಿಯಲ್ಲಿ ಅಣೆಕಟ್ಟನ್ನು ಕಟ್ಟಿದಾಗ ಸಾವಿರಾರು ಊರುಗಳು ಮುಳುಗಿದವು, ನೂರಾರು ಊರುಗಳು ತೇಲಿದವು. ಹಾಗೆ ತೇಲಿದ ಊರುಗಳಲ್ಲಿ, ನವಿಲೇಸರವೂ ಒಂದು. ಈಗಲೂ ಕುಗ್ರಾಮವಾಗಿರುವ ಈ ಊರು, ಮೂವತ್ತು-ನಲವತ್ತು ವರ್ಷಗಳ ಹಿಂದೆ ಹೇಗಿದ್ದೀತು ! ಆದರೆ, ಆಗಲೂ ಆ ಊರಿನಲ್ಲೊಂದು ಶಾಲೆಯಿತ್ತು. ಸಾಮಾನ್ಯವಾಗಿ ಬಯಲು ಸೀಮೆಯವರೇ ಅಲ್ಲಿಗೆ ಮಾಸ್ತರಾಗಿ ಬರುತ್ತಿದ್ದರು. ಬಂದು ಒಂದೋ-ಎರಡೋ ವಾರವಷ್ಟೇ ಇದ್ದು, ಕೊನೆಗೆ ಸಂಬಂಧಪಟ್ಟವರ ಕೈ ಬೆಚ್ಚಗೆ ಮಾಡಿ ವರ್ಗ ಮಾಡಿಸಿಕೊಂಡುಬಿಡುತ್ತಿದ್ದರು. ಮಲೆನಾಡಿನಲ್ಲಿಯೇ ಹುಟ್ಟಿ ಬೆಳೆದವರೂ ಕೂಡ ಆ ದ್ವೀಪದ ಶಾಲೆಯಲ್ಲಿ ಒಂದು ಇಡೀ ವರ್ಷ ಪಾಠ ಮಾಡಿದ ದಾಖಲೆಯಿಲ್ಲ. ಇದರಿಂದಾಗಿ, ಅಲ್ಲಿಯ ಸುತ್ತಮುತ್ತಲ ಊರಿನ ಜನರೆಲ್ಲರೂ 'ಮೇಟಿ ವಿದ್ಯೆಯೇ ಮೇಲು' ಎಂದುಕೊಂಡು ತಮ್ಮದೋ ಅಥವಾ ಇನ್ನಾರದ್ದೋ ತುಂಡು ಭೂಮಿಯನ್ನು ಉತ್ತು-ಬಿತ್ತಿ ಜೀವನದ ತೇರನ್ನು ಹಿಂದೂ-ಮುಂದೂ ಎಳೆಯುತ್ತಾ ಬದುಕಿದ್ದರು. ಆಗ ಅಲ್ಲಿಗೆ ವರ್ಗವಾಗಿ ಬಂದವರು ಮಾಧವರಾವ್ ಬಾಪಟ್‌ರು ಅಥವಾ ಮಾಧವ ಮಾಸ್ತರು. ರಾಜಾರಾಮನಿಗೆ ಆಗಿನ್ನೂ ಆರೋ ಏಳೋ ವರ್ಷವಿದ್ದೀತು. ಆದರೂ ಇಂದಿಗೂ ಕಣ್ಣಿಗೆ ಕಟ್ಟುವಂತೆ ಎಲ್ಲವೂ ನೆನಪಿದೆ: ಮಾಧವ ಮಾಸ್ತರು ಅವತ್ತು ನವಿಲೇಸರಕ್ಕೆ ಬಂದಾಗ ಮಳೆ 'ಧೋ' ಎಂದು ಸುರಿಯುತ್ತಿತ್ತು. ತಿಂಗಳುಗಟ್ಟಲೆ ಮುಚ್ಚಿಯೇ ಇದ್ದ ಶಾಲೆಯ ಕೀಲಿಕೈ ಇರುತ್ತಿದ್ದದ್ದೂ ರಾಜಾರಾಮನ ಮನೆಯಲ್ಲಿಯೇ. ಆದ್ದರಿಂದ ಯಾರೋ ಮಾಸ್ತರನ್ನು ನೇರವಾಗಿ ಇವನ ಮನೆಗೇ ಕರೆದುಕೊಂಡು ಬಂದಿದ್ದರು. ಆಗ ಯಾರಿಗೂ ಇದೊಂದು ವಿಶೇಷವೆನ್ನಿಸಿರಲಿಲ್ಲ. ಅದರ ಬಗ್ಗೆ ಕುತೂಹಲವಾಗಲಿ, ಸಂತೋಷವಾಗಲೀ ಆಗಿರಲಿಲ್ಲ. ಅವತ್ತು ಅಪ್ಪಯ್ಯ ಮಾಸ್ತರಿಗೆ ಕೈಮುಗಿದು ಕೇಳಿಕೊಂಡಿದ್ದರು: ''ಮಾಸ್ತರೆ, ದಯಮಾಡಿ ಇಲ್ಲಿಂದ ಹೋಗಬೇಡಿ; ನಮ್ಮ ಊರಿನ ಮಕ್ಕಳಿಗೆಲ್ಲಾ ವಿದ್ಯೆಯ ಗಂಧವೂ ಇಲ್ಲ. ಈಗಿನ ಕಾಲದಲ್ಲಿ, ಓದು ಬರಹ ಬರದವರು ಮನುಷ್ಯರಾಗಿ ಬದುಕಿಯಾರೆ - ನೀವೆ

ಹೇಳಿ ?'' ಆಗ ಮಾಧವ ಮಾಸ್ತರೂ ಸ್ವಲ್ಪ ಭಾವುಕರಾಗಿಯೇ ಉತ್ತರಿಸಿದ್ದರು : ''ಪಟೇಲರೆ, ನೀವು ಏನೂ ಯೋಚನೆ ಮಾಡಬೇಡಿ; ನೀವೆಲ್ಲಾ ನನ್ನನ್ನು ಈ ಊರಿಂದ ಓಡಿಸೋತನಕ ನಾನು ಹೋಗೋನಲ್ಲ!'' ಅಂದು ಅವರು ತೆರೆದ ಶಾಲೆಯ ಬಾಗಿಲು ಇಂದಿಗೂ ಮುಚ್ಚಲೇ ಇಲ್ಲ. ಸಾವಿರಾರು ಮಕ್ಕಳ ಕಣ್ಣುಗಳಲ್ಲಿ ಜ್ಞಾನದ ದೀಪವನ್ನು ಬೆಳಗಿ ಕೊನೆಗೆ ಇಲ್ಲಿಯೇ ನಿವೃತ್ತರಾದರು. ಹಾಗೆ ಅವರಿಂದ ಕಣ್ಣು ಪಡೆದವರ ಸಾಲಿನಲ್ಲಿ ರಾಜಾರಾಮನೂ, ನಂತರ ಅವನ ತಮ್ಮ ಶಾಂತಾರಾಮನೂ ಇದ್ದಾರೆ.

''ಅಪ್ಪಿ, ಏಳೋ, ಊಟಕ್ಕಾಯ್ತು'' ಎಂದು ಅಮ್ಮ ಕರೆಯುತ್ತಿದ್ದಂತೆಯೇ ರಾಜಾರಾಮ ಮೇಲಕ್ಕೆದ್ದು, ಕೈಕಾಲು ಮುಖ ತೊಳೆದು, ಊಟ ಮುಗಿಸಿದವನೆ, ''ಅಮ್ಮ , ತಾಳಗುಪ್ಪೆಗೆ ಹೋಗಿ ತಮ್ಮಂಗೆ ಫೋನ್‌ಮಾಡಿ ಬರ್ತೀನಿ'' ಎಂದ. ''ಇಷ್ಟು ಅರ್ಜೆಂಟಾಗಿ ಯಾಕೊ ? ಬಿಸಿಲು ಇಳಿದ ಮೇಲೆ ಹೋದರೆ ಆಗೋಲ್ವ ?'' ಎಂದು ಅಮ್ಮ ಕೇಳಿದಳು. ''ಮಾಧವ ಮಾಸ್ತರಿಗೆ ಕಣ್ಣು ಕಾಣಸೋದೆ ಇಲ್ವಂತೆ. ತಮ್ಮನಿಗೆ ಯಾರಾದರೂ ದೊಡ್ಡ ಕಣ್ಣಿನ ಡಾಕ್ಟರ ಪರಿಚಯ ಇದೆಯಾ ಅಂತ ಕೇಳ್ತೀನಿ'' ಎನ್ನುತ್ತಾ ಸೈಕಲನ್ನು ಹೊರತೆಗೆದ. ''ಅಲ್ಲೋ ರಾಜೂ, ನಿಂಗೆಲ್ಲೋ ಭ್ರಾಂತು; ನಂಗೂ ಕಣ್ಣು ಕಾಣಿಸ್ದೆ ಐದು ವರ್ಷ ಆಯ್ತು; ನಿನ್ನ ತಮ್ಮ ಏನ್ ಮಾಡ್ದ ? ಮಾಸ್ತ್ರಿಗೇನು ಕಡಿಮೆ ವರ್ಷ ಆಗಿದೆಯಾ ? ನಂಗಿಂತಲೂ ದೊಡ್ಡವರು. ಇನ್ನು ಕಣ್ಣು ಕಂಡ್ರೂ ಅವರು ಏನು ಮಾಡ್ಬೇಕು ಹೇಳು ? ದೇಶ ಸುತ್ತಬೇಕ -ಕೋಶ ಓದಬೇಕ ? ಅವರಿಗೂ ನನ್ನ ತರಾನೆ ಶುಗರ್ರು ಬೀಪಿ. ಈಗಂತೂ ಹಬ್ಬದ ಸಾಲು. ಅದೂ-ಇದೂ ಅಂತ ಸಿಹಿ ತಿಂದಿರ್ತಾರೆ - ಎಷ್ಟು ಮಾತ್ರೆ ತಿಂದ್ರೂ ಸಾಕಾಗೋದಿಲ್ಲ, ಕಣ್ಣು ಮಂಜಾಗಿರ ಬಹುದು. ಅಷ್ಟಕ್ಕೆಲ್ಲಾ ಬೆಂಗ್ಳೂರು-ಬೊಂಬಾಯಿ ಅಂದರೆ...'' ಅಷ್ಟರಲ್ಲಿ ಅಪ್ಪಯ್ಯ ಜಗುಲಿಗೆ ಬಂದರು. ''ಏನೂ ಅಂತ ಮಾತಾಡ್ತೀಯೆ ಶಾರದೆ ? ನಿಂಗೂ ಅವರಿಗೂ ಸಮವಾ ? ಮಾಧವ ಮಾಸ್ತರು ಈ ಊರಿಗೇ ಕಣ್ಣು ಕೊಟ್ಟವರು; ಅವರು ಇಲ್ಲದೆ ಹೋಗಿದ್ದರೆ, ಈ ರಾಜಾರಾಮ ನನ್ನ ಹಾಗೆ ಹೆಬ್ಬೆಟ್ಟು ಹಾಕಬೇಕಿತ್ತು; ಶಾಂತಾರಾಮ ಬೆಂಗಳೂರಿಗೆ ಹೋಗಿ ಅಷ್ಟು ದೊಡ್ಡ ಕೆಲಸ ಮಾಡ್ತಿದ್ದನ ? ಇನ್ನು , ಈ ಶಿಷ್ಯರಿಗೆ ಗುರುವಿನ ಋಣ ತೀರಿಸೋ ಪುಣ್ಯ ಇದ್ದರೆ ಕೈಲಾದ್ದು ಮಾಡಲಿ ಬಿಡು; ನೀನ್ಯಾಕೆ 'ಬ್ಯಾಡ' ಅಂತೀಯ ?'' ಅಮ್ಮ , ಇನ್ನೇನೂ ಹೇಳುತ್ತಿದ್ದಾಗಲೇ ರಾಜಾರಾಮನ ಸೈಕಲ್ಲು ದಣಪೆಯನ್ನು ದಾಟಿಯಾಗಿತ್ತು.



ನವಿಲೆಸರದ ಕಾಡಿನ ಕಲ್ಲು ಮುಳ್ಳುಗಳ ಕೊರಕಲು ದಾರಿಯನ್ನು ದಾಟಿ, ರಾಜಾರಾಮ ಟಾರು ರಸ್ತೆಗೆ ಬಂದ. ಈಗ ಸವಾರಿ ಸುಲಭವೆನ್ನಿಸಿದರೂ ಎದುರು ಬಿಸಿಲು ಮುಖವನ್ನು ಸುಡುತ್ತಿತ್ತು. ಅವನು ಅದಾವುದನ್ನೂ ಲೆಕ್ಕಿಸದೆ ಏನೋ ಯೋಚಿಸುತ್ತಾ ಸೈಕಲನ್ನು ತುಳಿಯುತ್ತಲೇ ಇದ್ದ:

ನನ್ನ ಕೈಲಾದ್ದನ್ನು ಮಾಡಿ ಮಾಸ್ತರಿಗೆ ಕಣ್ಣು ಕಾಣಿಸುವಂತೆ ಮಾಡಲೇಬೇಕು. ಶಿವಮೊಗ್ಗಕ್ಕೋ, ಹುಬ್ಬಳ್ಳಿಗೋ ಕರೆದುಕೊಂಡು ಹೋಗಬಹುದು; ಆದರೆ, ಮೊದಲು ತಮ್ಮನನ್ನು ಕೇಳುವುದು; ಅವನು ಒಮ್ಮೆ ಪಿರಪಿರಿ ಅಂದರೆ, ಸುತ್ತಮುತ್ತಲ ಊರಿಗೆ ಹೋಗಿ ಜನರನ್ನು ಕೇಳುವುದು. ಹಿಂಗಾರಕೊಡಿಗೆಯ ಹಿರಣ್ಣಯ್ಯ, ಹೂವಿನಕೊಪ್ಪದ ಮಾಬ್ಲಯ್ಯ, ಹಸಿರವಳ್ಳಿಯ ಸಂಬಯ್ಯ- ಶಿವಯ್ಯ... ಎಲ್ಲರೂ ಅನುಕೂಲಸ್ಥರೆ. ಇವರೆಲ್ಲರ ಮಕ್ಕಳೂ ನಾಲ್ಕು ಅಕ್ಷರಗಳನ್ನು ಕಲಿತಿದ್ದರೆ ಅದು ಮಾಧವ ಮಾಸ್ತರಿಂದಲೇ. ಅಪ್ಪಯ್ಯನೂ ಕೈಲಾದಷ್ಟು ಕೊಡುತ್ತಾರೆ. ಇನ್ನು ತಾಳಗುಪ್ಪೆಯಲ್ಲಿ ನಮ್ಮ ಮಂಜುನಾಥನೇ ಇದ್ದಾನಲ್ಲ! ಅವನು ಮಾಧವ ಮಾಸ್ತರ ಶಿಷ್ಯನಾಗಿದ್ದದ್ದು ಕೇವಲ ನಾಲ್ಕು ವರ್ಷ; ಆಮೇಲೆ ಶಾಲೆಗೆ ಹೋಗಲೇ ಇಲ್ಲ. ಆದರೆ, ಅವನೇ ಹೇಳುವಂತೆ ಇಡೀ ಭರತಖಂಡವೇ ಅವನ ವಿದ್ಯಾ ಮಂದಿರವಾಗಿಬಿಟ್ಟಿತು. ಮಾಧವ ಮಾಸ್ತರಿಗೆ ನಿವೃತ್ತಿಯಾದಾಗ ಅವನು ತನ್ನ 'ಸಂಘ'ದ ವತಿಯಿಂದ ನಡೆಸಿದ 'ಗುರುನಮನ' ಕಾರ್ಯಕ್ರಮ ಮಾತ್ರ ಎಲ್ಲರ ನೆನಪಿನಲ್ಲೂ ಇವತ್ತಿಗೂ ಉಳಿದಿದೆ. ಮಂಜುನಾಥ ತನ್ನ ದೇಶವ್ಯಾಪಿ ಸೇವಾಜಾಲದಲ್ಲಿ ಹೊಕ್ಕು ಎಲ್ಲಿಂದ ಲಾದರೂ ಯಾವುದಾದರೂ ರೀತಿಯ ಪರಿಹಾರವನ್ನು ಕಂಡುಹಿಡಿಯದೆ ಇರಲಾರ. ಸಣ್ಣ ಸಣ್ಣ ಪಿಳ್ಳೆಗಳಿಂದ ಹಿಡಿದು ಹಣ್ಣು ಮುದುಕರವರೆಗೂ ಅಸಂಖ್ಯ ಸದಸ್ಯರು ಇರುವ ಅವನ ಸಂಘ ಮನಸ್ಸುಮಾಡಿದರೆ, ಮಾಸ್ತರಿಗೆ ಎಷ್ಟು ಕಣ್ಣುಗಳನ್ನಾದರೂ ತಂದಾರು. ಮಂಜುನಾಥನ ಕಿಸೆಯಲ್ಲಿ ಹಣವಿಲ್ಲದಿರಬಹುದು; ಆದರೆ, ಹಣವಿದ್ದವರು ಅವನ ಕಿಸೆಯಲ್ಲಿದ್ದಾರೆ. ಇದಕ್ಕೆ ಮಂಜುನಾಥನೇ ಸರಿ. ನಾನು ಓದಿದ್ದು ಅವನಷ್ಟೇ; ಆದರೆ, ಈ ದ್ವೀಪದಂತಹ ಊರಿನಲ್ಲಿದ್ದು ದ್ವೀಪವೇ ಆಗಿಬಿಟ್ಟಿದ್ದೇನೆ. ನಾನು ಕಂಡ ನಗರವೆಂದರೆ, ಅತ್ತ ಶಿವಮೊಗ್ಗ, ಇತ್ತ ಸಿರಸಿ ಅಷ್ಟೆ. 'ಅದರಾಚೆ ಏನಿದ್ದರೂ ಇದರ ಹಾಗೇ ಇದೆ. ಆದರೆ ಇನ್ನೂ ದೊಡ್ಡದು ಅಷ್ಟೆ' - ಎಂದು ಶಾಂತಾರಾಮ ಹೇಳಿದ್ದ. ಅವನು ಹೇಳಿದಮೇಲೆ ಸತ್ಯವಿರಲೇಬೇಕು. ಶಾಂತಾರಾಮನೆಂದರೆ ಸಾಮಾನ್ಯನೆ ?

ಅವನು ತನ್ನ ಕಂಪ್ಯೂಟರಿನ ಮುಂದೆ ಕುಳಿತುಕೊಂಡು ಇಡೀ ವಿಶ್ವವನ್ನೇ ಸುತ್ತುತ್ತಾನಂತೆ! ಅಮೆರಿಕಾದ ದಿನಪತ್ರಿಕೆಯನ್ನು 'ಪ್ರಜಾವಾಣಿ'ಗಿಂತಲೂ ಮುಂಚೆ ಓದುತ್ತಾನಂತೆ. ನಾನೊಮ್ಮೆ ಶಾಂತಾರಾಮನನ್ನು ಕೇಳಿದ್ದೆ: 'ಕಂಪ್ಯೂಟರ್ ಅಂದರೆ ಅದೆಂತದು ಮಾರಾಯ !?' ಅದಕ್ಕೆ ಅವನು ಒಂದೇ ಮಾತಿನಲ್ಲಿ ಹೇಳಿದ್ದ ಉತ್ತರ ನನಗೆ ಎಂದೂ ಮರೆಯುವುದಿಲ್ಲ. ''ಶ್ರೀ ಕೃಷ್ಣ ಸಣ್ಣವನಿದ್ದಾಗ ಯಶೋದೆ ಅವನ ಬಾಯಿಯಲ್ಲಿ ಏನಿದೆ ಎಂದು ನೋಡಲು ಬಾಯಿ ತೆರೆಸಿದಳಂತೆ; ಅವನು 'ಆ' ಎಂದಾಗ ಅವಳು ಏನು ನೋಡಿದಳು ಹೇಳು ? ಅಮ್ಮ ಹಾಡು ಹೇಳ್ತಾಳಲ್ಲೋ, 'ಕಂಡಳೋ ಬ್ರಹ್ಮಾಂಡವನ್ನು ಹರಿಯ ಬಾಯೊಳು' ಅಂತ! ಕಂಪ್ಯೂಟರ್ ಅಂದರೆ ಅದೇ ಕಣೋ. ನಾನು ಎಷ್ಟು ಹೇಳಿದರೂ ನಿನಗೆ ಅರ್ಥವಾಗೋದಿಲ್ಲ; ಬೆಂಗಳೂರಿಗೆ ಬಾ ತೋರಿಸ್ತೇನೆ. ಒಂದು ಮುಷ್ಟಿಯಲ್ಲಿ ನಿನಗೆ ಏನು ಬೇಕು ಹೇಳು ಅದನ್ನ ತಂದು ನಿನ್ನ ಮುಂದೆ ಇಡ್ತೀನಿ''... ನನಗೆ ಇಂಥ ತಮ್ಮನಿರುವಾಗ ಎಲ್ಲಿಂದಲಾದರೂ, ಹೇಗಾದರೂ ಮಾಡಿ, ಮಾಧವ ಮಾಸ್ತರ ಕಣ್ಣಿಗೆ ಬೆಳಕನ್ನು ಕೊಡೋದಿಲ್ಲವೆ ? ಖಂಡಿತ ಕೊಡಬಲ್ಲ, ಆದರೆ, ಯಾವುದಕ್ಕೂ ಮೊದಲು ಮಂಜುನಾಥನನ್ನೇ ನೋಡಿಬಿಡೋಣ - ಇಲ್ಲೇ ಬರೀ ಹತ್ತು ಮಾರು ದೂರವಷ್ಟೆ.

'ಶ್ರೀ ಮಹಾಲಸ ರೈಸ್ ಮಿಲ್ಲಿ'ನ ಎದುರು ಸೈಕಲನ್ನು ನಿಲ್ಲಿಸಿ, ರಾಜಾರಾಮ ಒಳಗೆ ಹೋದ. ಮಂಜುನಾಥ ಇರುವುದು ಇಲ್ಲೆ, ಅದು ಅವನ ಸಂಘದ ಪ್ರಧಾನ ಕಚೇರಿ. ಅಲ್ಲಿ, ಮೊಟ್ಟ ಮೊದಲು ಅವನ ಕಣ್ಣಿಗೆ ಬಿದ್ದವನೇ ಮಂಜುನಾಥ! ಮೊಬೈಲನ್ನು ತನ್ನ ಕಿವಿಯೊಳಗೆ ತುರುಕಿಕೊಂಡು ಕತ್ತನ್ನು ವಾರೆಯಾಗಿಸಿ ದೊಡ್ಡದಾಗಿ ಮಾತನಾಡುತ್ತಿದ್ದ. ರಾಜಾರಾಮನಿಗೆ ಬಚ್ಚಗಾರು ಮೇಳದಲ್ಲಿ ಭಾಗವತಿಗೆ ಮಾಡುತ್ತಿದ್ದ ಸುಬ್ರಾಯಭಟ್ಟರ ನೆನಪಾಯಿತು. ಅವರಂತೆಯೇ ಇವನೂ ಎರಡು ಹುಬ್ಬುಗಳ ನಡುವೆ ದೊಡ್ಡದಾಗಿ ಕುಂಕುಮ ಹಚ್ಚಿ ಕೊಂಡಿದ್ದಾನೆ; ನಡುವೆ ಬೈತಲೆ ತೆಗೆದು ತಲೆ ಬಾಚಿದ್ದಾನೆ; ಕತ್ತನ್ನು ಬಿಗಿದ ಕಂದು ಬಣ್ಣದ ಶಾಲೊಂದು ಭುಜದ ಮೇಲಿಂದ ಮೊಣಕಾಲಿನವರೆಗೂ ಇಳಿದಿದೆ. ರಾಜಾರಾಮನನ್ನು ನೋಡಿದವನೇ ಅವನು ಕುಳಿತುಕೊಳ್ಳಲು ಕೈಸನ್ನೆಯಲ್ಲಿ ಸೂಚಿಸಿ ತಾನು ಮಾತನಾಡುತ್ತಲೇ ಹೊರಗೆ ಹೋಗಿಬಿಟ್ಟ. ಸ್ವಲ್ಪ ಹೊತ್ತಿನಲ್ಲಿಯೇ ಹಿಂದಕ್ಕೆ ಬಂದು ರಾಜಾರಾಮನ ಬೆನ್ನುತಟ್ಟಿ ''ಈಗ ಕುಡೀಲಿಕ್ಕೆ ಏನು ಆದೀತು ? ನನಗಂತೂ ಚಹಾ ಕುಡಿಯಲೇಬೇಕು'' ಎಂದವನೆ ಯಾರನ್ನೊ ಕರೆದು, ಚಹಾ ತರಲು ಹೇಳಿ, ''ಮತ್ತೇನಯ್ಯಾ ರಾಜಾರಾಮ ?'' ಎಂದು

ನೇರವಾಗಿ ವಿಚಾರಕ್ಕೆ ಬಂದ. ಈಗ ರಾಜಾರಾಮ ಉಗುಳು ನುಂಗಿಕೊಂಡು, ''ಭಾರೀ ಕೆಟ್ಟ ಸುದ್ದಿ ಕಣಯ್ಯ'' ಎಂದು ಗಂಭೀರ ವಾತಾವರಣವನ್ನು ಸೃಷ್ಟಿಸುತ್ತಾ ಪ್ರಾರಂಭಿಸಿದ. ''ಮಾಧವ ಮಾಸ್ಟರು...'' ಎನ್ನುತ್ತಿದ್ದಂತೆಯೇ ಮಂಜುನಾಥ, ''ಸತ್ತುಹೋದ್ರಾ ?'' ಎಂದುಬಿಟ್ಟ. ''ಅಯ್ಯೋ! ಇಲ್ಲ ಮಾರಾಯ್ನೆ, ಆದರೆ ಅವರ ಕತೆ ಮುಗಿದ ಹಾಗೇನೆ; ಅವರು ಸಂಪೂರ್ಣ ಕುರುಡರಾಗಿಬಿಟ್ಟಿದ್ದಾರೆ; ಪಾಪ! ಕೈ ಹಿಡಿದು ನಡೆಸ್ಬೇಕಂತೆ. ಮಂಜು, ನಾನು ನಿನ್ನ ಹತ್ರ ಯಾಕೆ ಬಂದೆ ಅಂದ್ರೆ, ನಾನು-ನೀನು ಅವರಿಂದ ನಾಕು ಅಕ್ಷರ ಕಲಿತು ದೊಡ್ಡವರಾದವರು. ನಾವು ಅವರಿಗೆ ಈಗ ಏನಾದರೂ ಮಾಡಲೇಬೇಕು. ನನಗೆ ವಿಚಾರ ತಿಳಿದ ಕೂಡಲೆ ಮೊದಲು ನೆನಪಾದವನು ನೀನೇ ನೋಡು; ಅದಕ್ಕೆ ತಕ್ಷಣ ಬಂದೆ.'' ರಾಜಾರಾಮ ತನ್ನ ಗುರುವಿನ ಮೇಲಿನ ಭಕ್ತಿಯಿಂದ ಅವರ ಒಳಿತಿಗಾಗಿ ಒಂದಿಷ್ಟು 'ಪೊಕಳೆ' ಬಿಟ್ಟಿರಬಹುದು - ಆದರೆ, ಅದು ಉದ್ದೇಶಿತ ಪರಿಣಾಮವನ್ನು ಬೀರುವುದರಲ್ಲಿ ಯಶಸ್ವಿಯಾಯಿತು. ''ನೋಡು ರಾಜು, ನಮ್ಮಲ್ಲಿ ವಿಶ್ವಾಸವಿಟ್ಟವರಿಗೆ ನಾವು ಜೀವ ಕೊಡಲಿಕ್ಕೂ ಸಿದ್ಧ; ಅದರಲ್ಲೂ ಅವರು ನಮ್ಮ ಗುರುಗಳು; ಅಜ್ಞಾನದಿಂದ ಕುರುಡರಾದ ನಮಗೆ ಅವರು ಜ್ಞಾನದ ಬೆಳಕನ್ನು ಕೊಟ್ಟವರು; ಅಂಥ ಗುರುಗಳಿಗೆ ಬರೀ 'ಗುರವೇನ್ನಮಃ' ಅಂದರೆ ಸಾಲದು. ಹೇಳು, ನಾನು ಏನು ಮಾಡ್ಲಿ? ದುಡ್ಡು ಬೇಕಾ ? ಎಷ್ಟು ಬೇಕು ?'' ಈಗ ರಾಜಾರಾಮ ಗಲಿಬಿಲಿಗೊಂಡ. ಆ ಕ್ಷಣದಲ್ಲಿ ಅವನಲ್ಲಿ ಸಮಸ್ಯೆಯ ಪರಿಹಾರಕ್ಕೆ ಯಾವುದೇ ಗಟ್ಟಿ ವಿವರವೂ ಇರಲಿಲ್ಲ. ಸುದ್ದಿಯನ್ನು ಕೇಳಿದವನೇ ಆಘಾತಗೊಂಡು, ತನ್ನ ಗುರುಗಳಿಗೆ ತನು-ಮನ-ಧನದ ಅರ್ಪಣೆಗೆ ಸಂಕಲ್ಪವನ್ನು ಮಾಡಿಕೊಂಡಿದ್ದೇನೋ ನಿಜ; ಆದರೆ, ಅದಕ್ಕೊಂದು ಸ್ಪಷ್ಟ ರೂಪ ಬಂದಿರಲಿಲ್ಲ. ಕಾರ್ಯ ಯೋಜನೆಯಂತೂ ಏನೇನೂ ಸಿದ್ಧವಾಗಿರಲಿಲ್ಲ. ಅಷ್ಟರಲ್ಲಿ ಚಹಾ ಬಂತು. ರಾಜಾರಾಮನಿಗೆ ಯೋಚಿಸಲು ಒಂದಿಷ್ಟು ಸಮಯಾವಕಾಶ ಸಿಕ್ಕಂತಾಯಿತು. ಮಂಜುನಾಥನೇ ಪ್ರಾರಂಭಿಸಿದ : ''ನೋಡು ರಾಜು, ಈ ಇಂಗ್ಲಿಷರು ನಮ್ಮ ದೇಶವನ್ನು ಆಳಿ ಸಾವಿರಾರು ವರ್ಷಗಳ ನಮ್ಮ ಜೀವನ ಕ್ರಮವನ್ನು ಬದಲಿಸಿಬಿಟ್ಟರು ನೋಡು. ಈಗ ಔಷಧಿ ವಿಚಾರಕ್ಕೆ ಬರೋಣ...'' ರಾಜಾರಾಮನಿಗೆ ಮಂಜುನಾಥನ ಮಾತಿನ ವರಸೆ ಚಿರಪರಿಚಿತ; ಅವನಿನ್ನು ಮಾಧವ ಮಾಸ್ಟರ ವಿಚಾರಕ್ಕೆ ಬರಲು ಕನಿಷ್ಠ ಅರ್ಧ ಗಂಟೆಯಾದರೂ ಬೇಕಾದೀತು ಎಂದುಕೊಂಡು ತಾನೇ ಮಾತಿನ ಎಳೆಯನ್ನು ಜಗ್ಗಿ ತನ್ನ ಮುಷ್ಟಿಗೇ ತಂದುಕೊಂಡು ಹೇಳಿದ: ''ನಾಟಿ ಔಷಧಿಯೆಲ್ಲ ಬ್ಯಾಡ ಮಾರಾಯ. ಪಾಪ! ಇದ್ದ ಕಣ್ಣೂ ಹೋದೀತು.'' ಈಗ ಮಂಜುನಾಥನಿಗೆ ರೇಗಿತೋ ಇಲ್ಲವೋ ಹೇಳುವುದು ಕಷ್ಟ; ಆದರೆ, ನೇರವಾಗಿ ವಿಷಯಕ್ಕಂತೂ ಬಂದ : ''ರಾಜು, ಮಾಧವ ಮಾಸ್ಟರು ನನಗೆ ತಂದೆಯ ಸಮಾನ; ಅವರ ಕಣ್ಣೊಳಗೆ ಬೆರಳಿಟ್ಟು ಸರಸ ಆಡೋವಷ್ಟು ಮೂರ್ಖ ನಾನು ಅಂತ ಮಾತ್ರ ನೀನು ತಿಳ್ಕೋಬೇಡ. ರಾಜಾಜಿನಗರದಲ್ಲಿ, ಒಂದು ಆಯುರ್ವೇದದ ಆಸ್ಪತ್ರೆ ಇದೆ. ಅಲ್ಲಿ, ಜಿ. ಜಿ. ಹೆಗಡೆ ಅಂತ, ಒಳ್ಳೆ ಕಣ್ಣಿನ ಡಾಕ್ಟರೊಬ್ಬರಿದ್ದಾರೆ. ಅವರೂ ನಮ್ಮ ಸಂಘದ ಪ್ರಚಾರಕರು. ಅವರಿಗೆ ಮಾಧವ ಮಾಸ್ಟರನ್ನು ತೋರಿಸು. ಇನ್ನು, ನೀನು ಅವರ ಊಟ, ವಸತಿ ಇತ್ಯಾದಿ ವಿಚಾರವನ್ನು ನಮ್ಮ ಸಂಘಕ್ಕೆ ಬಿಟ್‌ಬಿಡು. ನೋಡು, ಮುಂದಿನ ವಾರವೇ ನಮ್ಮ ಸಂಘಟಕರು ಒಂದು ವೆಹಿಕಲ್ ಮಾಡಿಸಿಕೊಂಡು ಬೆಂಗಳೂರಿಗೆ ಹೋಗ್ತಿದ್ದಾರೆ; ಇವರನ್ನೂ ಕರೆದುಕೊಂಡು ಹೋದರಾಯಿತು – ಏನಂತೀಯ ?'' ರಾಜಾರಾಮನಿಗೆ ಮಂಜುನಾಥನ ಮಾತಿನಲ್ಲಿ ವಿಶ್ವಾಸವಿತ್ತಾದರೂ ಯಾಕೋ ಏನೋ ಅಷ್ಟೊಂದು ಗಂಭೀರವಾದ ಸಮಸ್ಯೆ ಇಷ್ಟು ಸರಳವಾಗಿ ಪರಿಹಾರವಾದೀತೆಂದು ನಂಬಲು ಸಾಧ್ಯವಾಗಲಿಲ್ಲ. ಇವನ ಒಳಮನಸ್ಸಿನ ಅರಿವು ಹೇಗೋ ಮಂಜುನಾಥನಿಗೆ ಸಿಕ್ಕಿಬಿಟ್ಟಿರಬೇಕು - ಅವನೆಂದ : ''ನೋಡು, ನೀನು ಅವರ ಬಗ್ಗೆ ಯೋಚನೆ ಮಾಡೋದನ್ನ ಬಿಟ್‌ಬಿಡು; ಮಾಧವ ಮಾಸ್ಟರಿಗೆ ಕಣ್ಣು ಬಂತು ಅಂತಾನೆ ತಿಳ್ಕೊ; ಮೊದಲು ಅವರ ಮನೆಗೆ ಹೋಗಿ ಎಲ್ಲಾ ವಿಚಾರವನ್ನೂ ತಿಳಿಸಿ, ಅವರನ್ನು ರೆಡಿ ಮಾಡು. ತಗೊ, ನನ್ನ ವಿಸಿಟಿಂಗ್ ಕಾರ್ಡು. ನೋಡು, ದಿನದ ಇಪ್ಪತ್ತನಾಲ್ಕು ಗಂಟೇನೂ ನಾನು ಇಂಡಿಯಾದಲ್ಲಿ ಎಲ್ಲಿದ್ದರೂ ನಿನಗೆ ಸಿಕ್ಕತೀನಿ. ಗೊತ್ತಾಯ್ತಲ್ಲ? ಹಾಂ! ಮತ್ತೊಂದು ವಿಚಾರ : ನೋಡು, ನೀನು ಇಂಗ್ಲಿಷ್ ಮೆಡಿಸಿನ್ನು, ಆಪರೇಷನ್ನು ಅದೂ ಇದೂ ಅಂತ ಹೋದ್ರೆ, ಮೇಷ್ಟರ ಕಣ್ಣೂ ಹಾಳು - ತಲೆಯೂ ಬೋಳು - ಬರೆದಿಟ್ಕೋ! ಸರಿ. ಮತ್ತೇನಾದರೂ ಕೆಲಸ ಇತ್ತ?'' ಮಂಜುನಾಥ, ತನಗೆ ಹೋಗಲು ಸೂಚಿಸುತ್ತಿದ್ದಾನೆಂದು ರಾಜಾರಾಮನಿಗೆ ಅರ್ಥವಾಯಿತು. ಸರಿ, ಬಂದ ಕೆಲಸವಾದ ಮೇಲೆ ಹೊರಡುವುದೇ ತಾನೆ ? ಹೊರಗೆ, ಸೈಕಲ್ಲಿನ ಹತ್ತಿರ ಬಂದು ನಿಲ್ಲುತ್ತಿದ್ದಂತೆಯೇ ಅವನ ಮನಸ್ಸು ವಿತರ್ಕದಲ್ಲಿ ಮುಳುಗಿಹೋಯಿತು...

ನನ್ನ ಅಪ್ಪಯ್ಯನೇ ಸ್ವತಃ ಪಂಡಿತನಾಗಿದ್ದು, 'ವಾತ-ಪಿತ್ತ-ಕಫ-ಜ್ವರ' ಅಂತೇನೋ ಹೇಳುತ್ತಾ ತರತರದ ನಾರು-ಬೇರುಗಳನ್ನು ಹಾಲು, ಜೇನುತುಪ್ಪಗಳಲ್ಲಿ ತೇಯ್ದು ಕೊಡುತ್ತಿದ್ದರು. ಆದರೆ, ಅವರ ಹತ್ತಿರ ಔಷಧಿಗೆಂದು ಬರುತ್ತಿದ್ದವರು ಎಂಥವರು ? ಸಾಗರಕ್ಕೆ ಬಸ್ಸಿನಲ್ಲಿ ಹೋಗಲಾಗದವರು; ಡಾಕ್ಟರಿಗೆ, ಔಷಧಿಗೆ ಕೊಡಲು ಕಾಸಿಲ್ಲದವರು. ಹೆಚ್ಚು ತಿಳುವಳಿಕೆಯುಳ್ಳವರು ಎಂದೂ ಅಪ್ಪಯ್ಯನ ಔಷಧಿಗೆಂದು ಬಂದಿದ್ದು ನನಗೆ ನೆನಪಿಲ್ಲ; ಅಷ್ಟೇ ಯಾಕೆ, ಸ್ವತಃ ನನ್ನ ಅಮ್ಮನ 'ಬಿಪಿ' ಮತ್ತು 'ಶುಗರ್ರಿ'ಗೆ ಎಷ್ಟೋ ವರ್ಷಗಳಿಂದ ಔಷಧಿಯನ್ನು ಕೊಡುತ್ತಿರುವವರು ಸಾಗರದ ಮೋಹನ್ ಡಾಕ್ಟರ್ ಅಲ್ಲವೆ ?... ಈ ಮಂಜುನಾಥ ಒಂದು ಅರ್ಥದಲ್ಲಿ ರಾಜಕೀಯದವನೆ. ಚುನಾವಣೆಯ ವೇಳೆಯಲ್ಲಿ ಅವನ ಪರಿವಾರದ ಒಲವು ಎಲ್ಲರಿಗೂ ಗೊತ್ತಿರುವ ವಿಚಾರವೆ. ಇನ್ನು, ನಾನು ಇವನ ಬಣ್ಣದ ಮಾತುಗಳಿಗೆ ಮರುಳಾಗಿ, ಮಾಧವ ಮಾಸ್ಟರ ಕಣ್ಣನ್ನು ಮುಂದೆ ಎಂದೂ ಸರಿ ಮಾಡಲಾಗದಷ್ಟು ಕುರುಡಾಗಿಸಿಬಿಟ್ಟರೆ ? ನಾನು ಮೊದಲು ಇವನಲ್ಲಿಗೆ ಬರಲೇ ಬಾರದಿತ್ತೇನೋ... ಇರಲಿ. ಯಾವುದಕ್ಕೂ ಬುದ್ಧಿವಂತನಾದ ತಮ್ಮನಿದ್ದಾನಲ್ಲವೆ ? ಅವನ ಸಲಹೆಯನ್ನು ಸಂಪೂರ್ಣ ಕೇಳಿಬಿಡುವುದು; ಅವನು ಏನೇ ಹೇಳಲಿ ಅದಕ್ಕೆ 'ಹೂಂ' ಗುಡುವುದು. ಶಾಂತಾರಾಮನಿಗೆ ಮಾಧವ ಮಾಸ್ಟರು ಅಂದರೆ ದೇವರಿಗೆ ಸಮಾನ. ಅವರು ನಿವೃತ್ತರಾದಾಗ ಇವನು ಒಂದು ಸಾವಿರ ರೂಪಾಯಿಗಳನ್ನು ಕೊಟ್ಟಿದ್ದನಲ್ಲವೆ ? ಅದಕ್ಕಿಂತಲೂ ಹೆಚ್ಚಾಗಿ, ಅವನು ಮಂಜುನಾಥನಿಗಿಂತ ಎಷ್ಟೋ ಎಷ್ಟೋ ಹೆಚ್ಚಿಗೆ ಓದಿದ್ದಾನೆ - ತನ್ನ ಮುಷ್ಟಿಯಿಂದಲೇ ಜಗತ್ತನ್ನೆಲ್ಲ ಜಾಲಾಡಿ ಜ್ಞಾನಸಂಪಾದನೆ ಮಾಡಿದ್ದಾನೆ; ಮತ್ತು ಇವನಂತೆ ಅವನು ರಾಜಕೀಯ ಪುಢಾರಿಯಲ್ಲ. ಯಾವುದನ್ನೂ ಪೂರ್ವಾಪರ ಚಿಂತಿಸಬಲ್ಲ; ಯಾವುದೇ ಪೂರ್ವಗ್ರಹದ ಲವಲೇಶವೂ ಇಲ್ಲದೆ ನಿರ್ಭಾವುಕನಾಗಿ ಸಲಹೆಯನ್ನು ಕೊಡಲು ಸಂಪೂರ್ಣ ಸಮರ್ಥನಿದ್ದಾನೆ... ಅವನೇ ಸರಿ.

ರಾಜಾರಾಮ ಮನಸ್ಸನ್ನು ದೃಢಮಾಡಿಕೊಂಡು, ಸೈಕಲ್ಲು ಹತ್ತಿದ. ದಾರಿಯಲ್ಲಿ ತನ್ನ ಮನಸ್ಸು ಮತ್ತೆ ವಿಚಲಿತವಾಗದಂತೆ ಎಚ್ಚರವಹಿಸಿ, ಏನೂ ಸಂಬಂಧವಿಲ್ಲದ ವಿಚಾರದ ಬಗ್ಗೆ ಯೋಚಿಸುತ್ತಾ ಸೈಕಲನ್ನು ತುಳಿದು ಪೋಸ್ಟಾಫೀಸಿನ ಮುಂದೆ ಇಳಿದ. ಆಫೀಸಿನ ಒಳಗೆ ಬರುತ್ತಿದ್ದಂತೆಯೇ ಗಾಢಾಂಧಕಾರದ ಕೂಪವನ್ನು ಹೊಕ್ಕಂತಾಗಿ ಸ್ವಲ್ಪ ಹೊತ್ತು ಬದಿಯಲ್ಲಿ ನಿಂತು ಸುಧಾರಿಸಿಕೊಂಡ. ತಾನು ಬಿಸಿಲಿನಲ್ಲಿ ಹೊರಗಿನಿಂದ ಬಂದದ್ದು, ಒಳಗೆ ಕರೆಂಟು ಇಲ್ಲದೆ ಇರುವುದು, ಹೀಗೆ, ಒಂದೊಂದೆ ಅರಿವು ಮೂಡಿ, ಕೊನೆಗೆ ತಾನು ಬಂದಿದ್ದ ಮಹತ್ವದ ಕಾರ್ಯಕ್ಕೆ ಸಿದ್ಧನಾದ.

ಮುಚ್ಚಿದ ಕಿಟಕಿಯೊಂದರ ಕೆಳಭಾಗದಲ್ಲಿ ಅರ್ಧ ಚಂದ್ರಾಕಾರದಲ್ಲಿ ಕೊರೆದ ತೂತಿನಲ್ಲಿ ಮುಖ ತೂರಿಸಿ, 'ಬೆಂಗಳೂರಿಗೆ ಒಂದು ಫೋನ್ ಮಾಡಬೇಕಿತ್ತು' ಎಂದ. ಒಳಗಿನಿಂದ, ಕರ್ರನೆಯ ಕೊಳಕು ಮೆತ್ತಿಕೊಂಡಿದ್ದ ಫೋನೊಂದು ಹೊರಗೆ ಬಂತು. ರಾಜಾರಾಮ ಒಂದೊಂದೆ ಅಂಕೆಗಳನ್ನು ಒಳಗೆ ಅಡಗಿಸಿಕೊಂಡಿದ್ದ ತೂತುಗಳಿಗೆ ಬೆರಳಿಟ್ಟು, ಅದು ತಿರುಗುವಷ್ಟೂ ತಿರುಗಿಸಿ ಮತ್ತೆ ಹೊಸ ಅಂಕೆಗಳ ತೂತಿಗೆ ಬೆರಳು ತೂರಿಸಿ ತಿರುಗಿಸಿ ಮುಗಿಸುವಷ್ಟರಲ್ಲಿ ಸುಸ್ತಾಗಿಬಿಟ್ಟಿದ್ದ. ಆ ಕಡೆಯಿಂದ ಮೋಹಕ ಸ್ತ್ರೀ ಧ್ವನಿಯೊಂದು ಇಂಪಾಗಿ ತೇಲಿಬಂದು ರಾಜಾರಾಮನ ಕಿವಿಗೆ ಕಚಗುಳಿಯನ್ನಿಟ್ಟಿತು. ಆದರೆ, ಅವನಿಗೆ ಅದರ ಸುಖವನ್ನು ಅನುಭವಿಸುವುದಿರಲಿ, ಅತ್ತಲಿಂದ ಬಂದ ಮಾತು ಅರ್ಥವೇ ಆಗದೆ ತೊಳಲಾಡಿದ. ಆ ಕಡೆಯಿಂದ ಅದಾರೋ ಇಂಗ್ಲಿಷಿನಲ್ಲಿ ಏನೋ ಹೇಳುತ್ತಿದ್ದಾರೆ ಎಂದುಕೊಂಡು ರಾಜಾರಾಮ ತಡ ಮಾಡದೆ, 'ಶಾಂತಾರಾಮ್, ಪಿಆರ್ ಸೆಲ್' ಎಂದ. ಇದ್ದಕ್ಕಿದ್ದಂತೆ ವಿಚಿತ್ರ ವಾದ್ಯಗಳ ಮೇಳ ಪ್ರಾರಂಭವಾಗಿಬಿಟ್ಟಿತು. ಸ್ವಲ್ಪ ಹೊತ್ತಿನ ನಂತರ ಅತ್ತ ಕಡೆಯಿಂದ, ''ನಾನೇ ಶಾಂತಾರಾಮ್, ಏನು ಬೇಕಿತ್ತು?'' ಎಂಬ ಧ್ವನಿಯನ್ನು ಕೇಳುತ್ತಿದ್ದಂತೆಯೇ, ರಾಜಾರಾಮನಿಗೆ ವಿದ್ಯುತ್ ಸಂಚಾರವಾದಂತಾಯಿತು. ಈಗ ಅವನ ಧ್ವನಿಯಷ್ಟೇ ಅಲ್ಲ, ನಿಲುವು ಹಾವ ಭಾವಗಳೂ ಬದಲಾಗಿಬಿಟ್ಟವು! ಅವನಿಗೆ ತಾನು ಫೋನಿನಲ್ಲಿ ಮಾತನಾಡುತ್ತಿದ್ದೇನೆಂಬುದೇ ಮರೆತು ಹೋಯಿತು. ತನ್ನ ಪ್ರೀತಿಯ ತಮ್ಮ ತನ್ನ ಎದುರೇ ನಿಂತಿದ್ದಾನೆ ಎಂಬಂತೆ, ಸ್ವಲ್ಪ ಹೆಚ್ಚೇ ಅನ್ನುವ ಆತ್ಮೀಯತೆ ಸಲುಗೆ ನಗುವಿನಿಂದ ದೊಡ್ಡ ಧ್ವನಿಯಲ್ಲಿ ಮಾತನಾಡತೊಡಗಿದ :

''ಶಾಂತು, ನಾನು ಕಣೋ ರಾಜಣ್ಣ. ಅದೇ ನಮ್ಮ ಮಾಸ್ಟರು... ಮಾಧವ ಮಾಸ್ಟರು... ಅವರೇ ಕಣೋ ನಮ್ಮ ಊರಿನಲ್ಲಿದ್ದರಲ್ಲೋ... ಆಮೇಲೆ ರಿಟೈರ್ ಆದಮೇಲೆ ಸಾಗರಕ್ಕೆ ಹೋಗಿದ್ದರಲ್ಲ?... ಕರೆಕ್ಟ್... ಕರೆಕ್ಟ್... ಅವರಿಗೆ ಕಣ್ಣು ಒಂಚೂರೂ ಕಾಣಿಸೋದೆ ಇಲ್ವಲ್ಲೋ... ಸಂಪೂರ್ಣ ಕುರುಡರಾಗಿಬಿಟ್ಟಿದಾರೆ... ಅರವತ್ತೆಂಟು... ಅದೇನು ಜಾಸ್ತಿ ಬಿಡೋ... ಪೆನ್ಷನ್ ಎಷ್ಟು ಬರುತ್ತೋ ಗೊತ್ತಿಲ್ಲ... ಹಾಂ... ಒಂದು ನಾಲ್ಕೈದು ಬಂದೀತು... ಅದೆಲ್ಲಿ ಸಾಕಾಗುತ್ತೋ... ಆದರೆ, ಕಣ್ಣು... ಕಣ್ಣು ಕಾಣೋದೇ ಇಲ್ವಲ್ಲೋ... ಆಸ್ತಿ ಏನೂ ಇಲ್ಲ. ಸ್ವಂತ ಮನೆ ಇದೆ... ಅದಾಯ್ತಲ್ಲ... ಕಣ್ಣು ?... ಮಗ, ಅದೆಲ್ಲಿಗೋ ಕೆಲಸಕ್ಕೆ ಹೋಗ್ತಾನೆ... ಸಂಬಳ ಗೊತ್ತಿಲ್ಲ... ಅಲ್ಲವೋ ಅವರ ಕಣ್ಣಿಗೆ ಏನ್ ಮಾಡೋದು ಹೇಳು... ಡಾಕ್ಟ್ರಿಗೆ ತೋರ್ಸಿದಾರೋ... ಆದರೆ... ಗೊತ್ತು ಕಣೋ. ನೀನು

ಡಾಕ್ಟರಲ್ಲ.. ಆದರೆ, ನಿನಗೆ ಒಳ್ಳೆ ಡಾಕ್ಟ್ರು ಯಾರಾದರೂ ಗೊತ್ತಿದ್ದರೆ... ಮಿಂಟೋ ಆಸ್ಪತ್ರೆ ಯಾರಿಗೆ ಗೊತ್ತಿಲ್ಲವೋ ? ನಂಗೇ ಗೊತ್ತಪ್ಪ... ಅಲ್ಲೋ ಈಗ ಎಂತೆಂತದೋ ಹೊಸಾ ತರ ಆಪರೇಷನ್ನು ಬಂದಿದೆ ಯಂತಲ್ಲೋ... ಇವರಿಗೆ ಆಗೋಲ್ಲ ಅಂತೀಯ ?... ವಯಸ್ಸಾಗಿರಬಹುದು... ಆದರೆ, ನಿನಗೆ ಮತ್ತೇನಾದರೂ ಪರಿಹಾರ...? ಹಂಗಾರೆ ನಿನಗೆ ಏನೂ ಗೊತ್ತಿಲ್ಲ, ಸಾಕು ಸುಮ್ಮನಿರೋ, ಕಣ್ಣಿನ ತೊಂದರೇಗೆ ಅಪ್ಪಯ್ಯ ಏನು ಔಷಧಿ ಕೊಡ್ತಾರೋ... ಹೋಗೋ... ಎದೆ ಹಾಲು ಬಿಟ್ಟರೆ ಕಣ್ಣು ಬರುತ್ತಾ? ಸಾಕು ಮಾರಾಯ್ನೆ... ವಯಸ್ಸಾಗಿದ್ದು ನಂಗೂ ಗೊತ್ತಪ್ಪಾ... ಅಮ್ಮನೂ ಅದನ್ನೇ ಹೇಳಿದಳು... ನೀನೂ ಹಾಗೇ ಹೇಳತೀಯಲ್ಲೋ... ಹಂಗಾದರೆ ಅವರು ಏನೂ ನೋಡಬೇಕಾದ್ದೇ ಇಲ್ಲವ ?... ಸಾಕು ಸುಮ್ನಿರು ಮಾರಾಯ... ತಮ್ಮ ಕೆಲಸನಾದರೂ ತಾವು... ಸರಿ. ಸರಿ, ಆಯ್ತು. ಹಬ್ಬಕ್ಕೆ-ಹಲೋ ಹಲೋ.'' ಆ ಕಡೆಯಿಂದ ಪ್ರಶ್ನೆ-ಉತ್ತರ, ಸಲಹೆ- ಸೂಚನೆ, ಎಲ್ಲಾ ಮುಗಿದು ಬರೀ ಮಂಗಳವಾದ್ಯಗಳು ಮೊಳಗತೊಡಗಿದವು. ರಾಜಾರಾಮನ ಮುಖ ಅದೇಕೋ ಕಪ್ಪಗಾಗಿತ್ತು. ಅವನಿಗೆ ತನ್ನ ತಮ್ಮನ ಹತ್ತಿರ ಇನ್ನೂ ಕೆಲವು ವಿಷಯ ಗಳನ್ನು ಹೇಳುವುದಿತ್ತು. ಅವನು ಮನಸ್ಸಿನಲ್ಲಿಯೇ ತಮ್ಮನೊಡನೆ ಮಾತನ್ನು ಮುಂದುವರಿಸಿದ...

ಅಪ್ಪಯ್ಯನಿಗೆ ಗಂಟುನೋವು ಜಾಸ್ತಿಯಾಗಿದೆ ಮಾರಾಯ... ಒಂದು ಸಮಾಧಾನದ ವಿಚಾರ ಅಂದರೆ, ಅಮ್ಮನ ಬಿಪಿ-ಶುಗರು ಕಂಟ್ರೋಲಿನಲ್ಲಿದೆ. ಮೊನ್ನೆಯಷ್ಟೇ ಟೆಸ್ಟ್ ಮಾಡ್ಸಿದೀನಿ... ಅಂದ ಹಾಗೆ, ಶಾಂತೂ, ನಿಂಗೆ ನಮ್ಮ ಮಂಜು ಗೊತ್ತಲ್ಲವ ?... ಹೋಗಲಿ ಬಿಡು... ಇನ್ನೊಮ್ಮೆ ನಿನಗೆ ಅವನನ್ನೇ ತೋರಿಸಿ ವಿಷಯ ಹೇಳತೀನಿ... ಯಾವುದಕ್ಕೂ ನಿನಗೆ ಒಂದಿಷ್ಟೂ ಪುರುಸತ್ತೇ ಇರೋದಿಲ್ವಲ್ಲೋ, ಪಾಪ ! ಎಷ್ಟೊಂದು ಜವಾಬ್ದಾರಿಯ ಕೆಲಸ ಮಾರಾಯ ನಿಂದು ? ನೀನು ಇಷ್ಟು ಹೊತ್ತು ತಾಳ್ಮೆಯಿಂದ, ನನ್ನ ಜೊತೆ ಮಾತನಾಡಿದ್ದೂ ದೊಡ್ಡದೇ ! ನೀನೇನು ನನ್ನ ಹಾಗೆ ಅಲ್ಲವಲ್ಲ !

ರಾಜಾರಾಮ, ಅಲ್ಲಿಂದ ಹೊರಗೆ ಬಂದ. ಪ್ರಕಾಶಮಾನವಾದ ಬೆಳಕು ಒಮ್ಮೆಲೇ ಅವನ ಕಣ್ಣಿನೊಳಗೆ ನುಗ್ಗಿ , ಒಂದು ಕ್ಷಣ ಕತ್ತಲೆಗಟ್ಟಿತು. ನಿಧಾನವಾಗಿ ತಡವುತ್ತಾ ಹಿಂದಕ್ಕೇ ಬಂದು, ಬೆಂಚಿನ ಮೇಲೆ ಕುಳಿತುಕೊಂಡು ಗೋಡೆಗೆ ಒರಗಿದ.

ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ, ಮಾಧವ ಮಾಸ್ತರು ಬಂದು, ರಾಜಾರಾಮನ ತಲೆಯನ್ನು ಮೆದುವಾಗಿ ಸವರಿದರು. ಮುಚ್ಚಿಕೊಂಡಿದ್ದ ಅವನ ಕಣ್ಣುಗಳನ್ನು ಬಲವಂತವಾಗಿ ತೆರೆಸುತ್ತಾ , ಹೇಳಿದರು :

''ರಾಜಾರಾಮ, ಇಲ್ಲಿ ನೋಡು, ಈಗ ನನಗೆ ಎರಡು ಕಣ್ಣುಗಳೂ ಕಾಣಿಸುತ್ತಪ್ಪಾ ; ಎಲ್ಲವೂ ಚೆನ್ನಾಗಿ ಕಾಣಿಸುತ್ತೆ. ಶಿಷ್ಯ ಅಂದರೆ ನೀನು ಕಣಯ್ಯ, ನೀನು !''


ಅಲಕ ತೀರ್ಥಹಳ್ಳಿ
೮೨, ತ್ಯಾಗರಾಜ ರಸ್ತೆ, ಸೀಬಿನಕೆರೆ ಅಂಚೆ, ತೀರ್ಥಹಳ್ಳಿ - ೫೭೭ ೪೩೨


# ಹರಿವ ಗಂಗೆ... ಹಾರುವ ಹಕ್ಕಿ...

ಕೆಳಗೆ ನೋಡುತ್ತಲೇ
ಗಗನದಲ್ಲಿ ನಲಿದಾಡುವ ತೊನೆದಾಡುವ
ಸೂರ್ಯ, ಚಂದ್ರ, ನಕ್ಷತ್ರ
ದೃಷ್ಟಿ ಚೆಲ್ಲಿದತ್ತ
ಅವರವರ ಕಣ್ ಗೊಂಬೆಯಲಿ
ಮನದ ಭಾವದಲಿ – ತೂರಿ ಕಾಣುವ
ಹಳ್ಳ, ಕೊಳ್ಳ, ತೊರೆಗಳ ನೀರು
ಹಸಿರು, ಹೂ, ಕಾಯಿ ಹೊತ್ತ ಗಿಡ, ಮರ, ಬಳ್ಳಿ
ಎಲ್ಲೆಂದರಲ್ಲಲ್ಲಿ – ಸುಳಿವ ತಂಗಾಳಿ, ಕುಳಿರ್ಗಾಳಿ
ಪ್ರಾಣಿ, ಪಕ್ಷಿ, ಜೀವಸಂಕುಲ
ಅರಳಲು ತವಕಿಸುವ ಬಕುಲ
ಇರಬೇಕು ಹೀಗೆ ಮನುಕುಲ

ಇದು ಕನಕನ ಹಂಬಲ

ಅವನ ಹಂಬಲಕೆ ಸಿಗಲಿಲ್ಲ ಬೆಂಬಲ
ಕಂಡದ್ದನ್ನು – ಬಚ್ಚಿಡದೇ, ಕಂಡಂತೆ ತೆರೆದಿಟ್ಟರೆ
ಸುತ್ತಲು ಕೆಂಡ ಮಂಡಲದ ಕೂಪ

ಹಂಗಿನರಮನೆ ಕೆಡುವಿ
ಯಾವ ಗುಂಗಿಲ್ಲದ – ಕನಕ
ಆತ್ಮ–ಪರಮಾತ್ಮ–ಸಂಬಂಧ ಬಿಡಿಸಿಟ್ಟ
ಹಗಲು ಶಾಸ್ತ್ರ ಹೇಳಿ
ಇರುಳು ಕಚ್ಚೆ ಹರಕುತನದಲಿ ಮುಳುಗುವ
ಬರುಕಟಗರನು ಕನಸಿನಲಿ ಬೆಚ್ಚಿಸಿದ

ಎಲ್ಲರದಲ್ಲವೆ ? ಈ ನೆಲ, ಜಲ

ಕನಕನ ಪ್ರಭೆ, ಪ್ರಜ್ಞೆ , ಪ್ರಶ್ನೆ
ಭಕ್ತಿ , ಶ್ರದ್ಧೆ, ಸಾಮರ್ಥ್ಯ ಕಂಡು
ಕಂಡಿರಬೇಕು ಕೃಷ್ಣ

ನೆಟ್ಟ ದೃಷ್ಟಿಗೂ ಉಂಟು
ಬೆವರಿನ ಬೇರು
ತಂತಿಲ್ಲದೇ ತಾಳವಿಲ್ಲ
ತಾಳವಿಲ್ಲದೇ ಲಯವಿಲ್ಲ
ಕಿತ್ತೆಸೆದ ಹೆಚ್ಚು ಕಡಿಮೆಯ ಮಾತು
ಅಕ್ಕಿ, ರಾಗಿಯನಿಟ್ಟು
ತಿಳಿಸಿದ ಬೆವರಿನ ಬೆಲೆಯನು

ಕನಕನದು ಹರಿವ ಗಂಗೆಯ ಮನಸ್ಸು
ಹಾರುವ ಹಕ್ಕಿಯ ಕನಸ್ಸು

ಇಂಥಪ್ಪ ಕನಕನಿಗೆ
ನಾವು ಮಾಡಿದ್ದೇನು
ನಾವು ಕೊಟ್ಟದ್ದೇನು

ಕನಕ, ಕೇಳುತ್ತಾನೆ ಈಗಲೂ
ಹಾರುವ ಹಕ್ಕಿಯನು
ಹಿಡಿದು ಕಟ್ಟಿದ ಹಾಗೆ
ವ್ಯರ್ಥ–ನನ್ನನ್ನೇಕೆ ಕಟ್ಟಿಹರೋ
ಹೇಳು ಬಾ, ಕೇಶವ ನೀನೇ
''ಆತ್ಮ ಯಾವ ಕುಲ,ಜೀವ ಯಾವ ಕುಲ''
'ನಾನು' ಯಾವ ಕುಲ ?
'ನಾನು' ಹೋದರೆ ಯಾವ ಕುಲ ?




ಸತ್ಯಾನಂದ ಪಾತ್ರೋಟ
ಜಾಜಿ ಮಲ್ಲಿಗೆ, ಸೆಕ್ಟರ್ ನಂ. ೪೨, ಮ. ನಂ. ೪೪
ನವನಗರ, ಬಾಗಲಕೋಟೆ



ದೆಹಲಿಯ 'ದಿ ಸ್ಟೇಟ್ಸ್‌ಮನ್' ಪತ್ರಿಕೆಯ ಜಂಟಿ ಸಂಪಾದಕರಾಗಿದ್ದ ಶ್ರೀ. ಲಾಲ್ ದೇಶದ ಭೂತ – ಭವಿಷ್ಯಗಳ ಬಗ್ಗೆ ಒಂದು ನೋಟವನ್ನು ಹರಿಸಿದ್ದಾರೆ. ಆದ್ಯತೆಗಳ ಪರಿವೆ ಇಲ್ಲದ ವರ್ತಮಾನಕ್ಕೆ ಇದೊಂದು ಸವಾಲು.

# ಮೊದಲು ಮಾಡಬೇಕಾದ್ದು ಮೊದಲು

— ಎಂ. ಬಿ. ಲಾಲ್ —

ಚಳಿಶಿರದ ಒಂದು ದಿನ. ಸ್ಥಳ: ಅಲಹಾಬಾದ್. ಮಳೆಗಾಲವಲ್ಲದ ತಿಂಗಳುಗಳಲ್ಲಿ ಯಮುನೆ ತನ್ನ ಶಾಂತ ನೀಲಿ ನೀರಿನ ಹರಿವಿನಿಂದ ಕಂಗೊಳಿಸುತ್ತಾಳೆ. ನದಿಯ ತಟದಲ್ಲೊಂದು ಇಂಟರ್‌ಮೀಡಿಯೇಟ್ ಕಾಲೇಜು. ಒಂದು ಉಪನ್ಯಾಸ ಮಂದಿರದಲ್ಲಿ ಮುನ್ನೂರು ವಿದ್ಯಾರ್ಥಿಗಳ ಎದುರಿನಲ್ಲಿ ಪ್ರಾಚಾರ್ಯರು ಮಾತನಾಡುತ್ತಿದ್ದಾರೆ; ಅಷ್ಟೇನೂ ವೃದ್ಧರಲ್ಲದ ಇವರು ಗುಂಡನೆಯ ವ್ಯಕ್ತಿ, ಬೋಳುತಲೆಯವರು.

ನಾನು ಹೇಳಲಿರುವ ಘಟನೆ ಆ ಕಾಲೇಜಿನಲ್ಲಿ ಪ್ರತಿವಾರವೂ ಘಟಿಸುತ್ತಿದ್ದಂತಹುದು. ಕ್ರೈಸ್ತ ಪಂಥೀಯರು ನಡೆಸುತ್ತಿದ್ದ ವಸತಿಶಾಲೆ ಅದು. ಪಾಠಗಳನ್ನು ಗಂಟಲಲ್ಲಿ ತುರುಕಿ ವಿದ್ಯಾರ್ಥಿಗಳನ್ನು ಭಾರಿ ಬುದ್ಧಿವಂತರನ್ನಾಗಿಸಿ ದೊಡ್ಡ ಹುದ್ದೆಗಳಿಗೆ ತಳ್ಳುವುದು ಆ ಶಾಲೆಯ ಹೆಮ್ಮೆಯಾಗಿರಲಿಲ್ಲ. ಬೃಹತ್ತಾದ ಕಟ್ಟಡಗಳು ಹಾಗೂ ವಿದ್ಯಾರ್ಥಿಗಳ ನೈತಿಕ ಪ್ರಜ್ಞೆಯ ಬಗೆಗಿನ ಕಾಳಜಿ ಆ ಕಾಲೇಜಿನ ವೈಶಿಷ್ಟ್ಯವಾಗಿತ್ತು. (ಇಂತಹ ಅಸಾಂಪ್ರದಾಯಿಕ ಆದ್ಯತೆಗಳಿದ್ದಾಗ್ಯೂ, ಆ ಶಾಲೆಯ ವಿದ್ಯಾರ್ಥಿಗಳ ಭವಿಷ್ಯ ರೂಪಿಸುವುದರಲ್ಲಿ ಕೊರತೆಯೇನೂ ಉಂಟಾಗಲಿಲ್ಲ ಎಂಬುದು ಬೇರೆ ಮಾತು. ಅವರಲ್ಲಿ ಎಷ್ಟೋ ಮಂದಿ ತಮ್ಮ ತಮ್ಮ ಆಯ್ಕೆಯ ಕ್ಷೇತ್ರಗಳಲ್ಲಿ ಸುಲಭವಾಗಿ ಯಶಸ್ಸು ಗಳಿಸಿದರು. ರಾತ್ರಿಯಿಡೀ ಕೂತು ಓದುವ ಕೂಚಂಭಟ್ಟರು ಅಲ್ಲಿರಲಿಲ್ಲ).

ಆ ಸಂಜೆಯ ಸಭೆ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯಲು ಕಾರಣ ಅದು ವಿಶಿಷ್ಟವಾದ ತಿರುವೊಂದನ್ನು ನೀಡುವಂಥದಾಗಿದ್ದರಿಂದ. ನನ್ನ ಜೀವನದ ಒಂದು ಅವಿಸ್ಮರಣೀಯ ಘಟ್ಟ ಅದು ಎನ್ನಬಹುದು. ನನ್ನ ಆಗಿನ ಚಿಂತನಾಲಹರಿಯನ್ನು ಬದಲಿಸಿ ಜೀವನವನ್ನೇ ಬದಲಾಯಿಸಿಬಿಟ್ಟಿತೇನೋ ಎನಿಸುತ್ತದೆ.

ಉಪನ್ಯಾಸ ನೀಡಿದ ಡಾ|| ಬಿ. ಬಿ. ಮಾಳವೀಯ ಒಂದು ಘಂಟೆಯಲ್ಲಿ ಹೇಳಿದ್ದುದನ್ನು ಬಹುಶಃ ಮೂರು ಸೆಕೆಂಡುಗಳಲ್ಲಿ ಉಚ್ಚರಿಸಬಹುದಾದ ಮೂರೇ ಪದಗಳಲ್ಲಿ ಹೇಳಿಬಿಡಬಹುದು. ಉಪನ್ಯಾಸದ ಆ ಮೂರೇ ಪದಗಳು ನನ್ನ ಸ್ಮೃತಿಪಟಲದಲ್ಲಿ ಉಳಿದಿರುವುದು. ಆದರೆ, ಅಷ್ಟು ಪ್ರಾಮಾಣಿಕವಾದ ಉದ್ಘೋಷ ಅವರಿಂದ ಬರುತ್ತಿರದಿದ್ದರೆ ಸಂದೇಶವು ಗಾಢವಾದ ಪರಿಣಾಮ ಬೀರುವಂತೆ ನನ್ನ ಅಂತಃಕರಣದಲ್ಲಿ ಹುದುಗಿರುತ್ತಿರಲಿಲ್ಲವೆಂದು ತೋರುತ್ತದೆ. ಒಂದು ಔಷಧಿಯಂತೆ ತಕ್ಷಣದಲ್ಲಿ ಅದು ಪರಿಹಾರ ನೀಡುವಂಥದ್ದಾಗಿರಲಿಲ್ಲ; ಮಿದುಳಿನ ಮೇಲೆ ನಿಧಾನವಾಗಿ ಪ್ರಭಾವ ಬೀರುವ ದ್ರಾಕ್ಷಾರಸದಂತಿತ್ತು ಅದು. ತನ್ನ ಶಿಷ್ಯರಿಗೆ ಈ ಮೃದುಭಾಷಿ ಏನೋ ಒಂದು ಮಾಂತ್ರಿಕ ಸೂತ್ರವನ್ನು ಕೊಡುಗೆಯಾಗಿ ನೀಡ ಹೊರಟದ್ದು; ಅದೇ "ಮೊದಲು ಮಾಡಬೇಕಾದ್ದು ಮೊದಲು" (first things first) ಎಂಬುದು.

ಪ್ರಾಚಾರ್ಯರ ಈ ಉಪದೇಶ ನನ್ನ ಮಟ್ಟಿಗೆ ಹೇಳುವುದಾದರೆ ಬಹಳ ತಡವಾಗಿ ಬಂದಿತ್ತು. ಆ ಸಂಜೆ ಸಭಾಗೃಹದಿಂದ ನನ್ನ ಹಾಸ್ಟೆಲ್‌ನ ಕೊಠಡಿಗೆ ಹಿಂದಿರುಗುವಾಗ ಒಂದು ರೀತಿಯ ಕಲಕಿದ ಭಾವನೆ ನನ್ನನ್ನು ಆವರಿಸಿತ್ತು. ನನ್ನ ಚಿಂತನೆಗೆ ಡಾ|| ಮಾಳವೀಯ ಬೇಕಾದಷ್ಟು ಗ್ರಾಸ ಒದಗಿಸಿದ್ದರು. ಆಗ ಒಂದು ವಾರದ ಹಿಂದಷ್ಟೇ ನಾನೊಂದು ಬಹು ಆಕಾಂಕ್ಷೆಯ ಯೋಜನೆಯಲ್ಲಿ ತೊಡಗಿಬಿಟ್ಟಿದ್ದೆ: ದೀರ್ಘವಾದ ಕಾದಂಬರಿಯೊಂದನ್ನು ಇಂಗ್ಲಿಷಿನಲ್ಲಿ ಬರೆಯಲು. ಆ ಮೂರ್ಖ ಸಾಹಸಕ್ಕೆ ನಾನು ಕೈಹಾಕಿದ್ದು ಆಗ್ಗೆ ಕೆಲವೇ ವರ್ಷಗಳ ಹಿಂದೆ ಪರ್ಲ್ ಎಸ್. ಬಕ್‌ಗೆ ನೊಬೆಲ್ ಪಾರಿತೋಷಕ ತಂದಿತ್ತಿದ್ದ ಕಾದಂಬರಿ 'ಗುಡ್ ಅರ್ತ್'ನ ಪ್ರೇರಣೆಯಿಂದ. ಚೀಣಾದ ಒಬ್ಬ ಗ್ರಾಮಸ್ಥನ ಕತೆ ಅದು.

ಆ ಕಾದಂಬರಿ ಅದೆಷ್ಟು ಸರಳ ಮತ್ತು ಇಹದ ಹಿನ್ನೆಲೆಯದೆಂದರೆ ಒಬ್ಬ ಮಗು ಬೇಕಾದರೂ ಅದನ್ನು ಬರೆಯಬಹುದೆಂಬ ಭಾವನೆ ನನ್ನಲ್ಲಿತ್ತು. ಭಾರತದ ಹಳ್ಳಿಗಳು, ಇಲ್ಲಿಯ ಸನ್ನಿವೇಶ, ಇವೆಲ್ಲಾ ಆಗಿನ ಚೀಣಾಕ್ಕೆ ಹೋಲಿಸಿದರೆ ಅಷ್ಟೇನೂ ಭಿನ್ನವಾಗಿರಲಿಲ್ಲ; ಆದ್ದರಿಂದ ನಾನೂ 'ಗುಡ್ ಅರ್ತ್'ಗೆ ಸಮಾನವಾದ ಕೃತಿಯೊಂದನ್ನು ರಚಿಸಬಲ್ಲೆನೆಂಬ ಹುಚ್ಚು ತುಂಬಿತ್ತು. ನನ್ನ ಕತೆಯ ಕೆಲವು ಅಧ್ಯಾಯಗಳನ್ನು ಆಗಲೇ ಬರೆದೂ ಆಗಿತ್ತು, ಅದರ ಬಗ್ಗೆ ಅಭಿಮಾನವೂ ಮೂಡಿತ್ತು. ಅಂತಹ ಸಂದರ್ಭದಲ್ಲಿ ಡಾ|| ಮಾಳವೀಯರ ಸದಾಶಯ ತುಂಬಿದ ಮಧ್ಯಪ್ರವೇಶ ನನ್ನನ್ನು ಅಲುಗಿಸಿತು. ನನ್ನ ಕಾಲೇಜು ತರಗತಿಗಳು, ಪುಸ್ತಕಗಳು, ಇವನ್ನೆಲ್ಲಾ ಮರೆತು, ತೊರೆದು, ಸಮಯಪ್ರಜ್ಞೆಯನ್ನು ಪೂರ್ತಿಯಾಗಿ ಕಳೆದುಕೊಂಡಿದ್ದೆ; ನನ್ನದೇ ಪ್ರಪಂಚದ ತೂಗುಯ್ಯಾಲೆಯಲ್ಲಿ ತೇಲಿಹೋಗಿದ್ದೆ. ಯಾವುದೋ ಕಾದಂಬರಿ ಅಥವಾ ಕಾವ್ಯ ಓದಿ ನನ್ನ ಶೈಲಿಗೆ ಸ್ಫೂರ್ತಿ ದೊರಕಿಸಿಕೊಳ್ಳುವ ಆಸೆ, ಗೊತ್ತು ಗುರಿಯಿಲ್ಲದೆ ಅಲ್ಲಲ್ಲಿ ಅಡ್ಡಾಡುವುದು, ಸೈಕಲ್ ಹತ್ತಿ ಎಲ್ಲೆಲ್ಲೋ ಸಂಚರಿಸುವುದು, ಹೀಗಿತ್ತು ನನ್ನ ದಿನಚರಿ. ತಮ್ಮ ತಕ್ಷಣದ ಪ್ರಪಂಚವನ್ನು ಮರೆತು ಸಾಹಿತಿಗಳು ಮತ್ತು ಕಲಾವಿದರು ಏನೇನೋ ಮಾಡಹೊರಡುತ್ತಾರೆಂದು ಕೇಳಿದ್ದೆ; ಅದನ್ನು ಅನುಕರಿಸದೆ ನಾನು ಹೇಗೆ ತಾನೆ ಸಾಹಿತಿಯಾಗಬಲ್ಲೆ!

ಪ್ರಾಚಾರ್ಯರ ಒಂದು ಘಂಟೆಯ ಪ್ರಬಲ ಮಾತು ನನ್ನನ್ನು ಹೊಡೆದೆಬ್ಬಿಸಿತು: ಎಲಾ. ನಾನೇನು ಮಾಡುತ್ತಿದ್ದೇನೆಂದು ಅವಲೋಕಿಸಲು ವಾಸ್ತವಕ್ಕೆ ನನ್ನನ್ನು ದೂಡಿತು. ಯೋಚಿಸಿದೆ: ಪುಸ್ತಕ ಬರೆಯುವುದನ್ನು ಹೀಗೆಯೇ ಮುಂದುವರಿಸಿದರೆ ಒಂದಂತೂ ಖಂಡಿತ,

ಎಷ್ಟೋ ತಿಂಗಳುಗಳು ಹೀಗೇ ಕಳೆದುಹೋಗುತ್ತವೆ, ಆಮೇಲೆ ಪರೀಕ್ಷೆಯಲ್ಲಿ ತೇರ್ಗಡೆಯಾಗುವ ಪ್ರಶ್ನೆಯೇ ಇಲ್ಲ. ಅದರಿಂದ ಅವಮಾನದ ಮಾತಿರಲಿ, ನನ್ನ ಭವಿಷ್ಯವು ಕತ್ತಲಿನಲ್ಲಿ ಮುಳುಗಿ ಹೋಗುತ್ತದೆ. ಆದರೇನು ಮಾಡುವುದು ? ಆರಂಭಿಸಿದ್ದಾಗಿ ಹೋಗಿದೆಯಲ್ಲ, ಎಂದುಕೊಂಡೆ. ಒಂದು ರಾತ್ರಿ ನಿದ್ದೆಯಿಲ್ಲದೆ ಹೊರಳಾಡಿದೆ, ಮತ್ತೆ ಯಥಾಪ್ರಕಾರ ನನ್ನ ಸಾಹಿತ್ಯ ಕೃಷಿಗೆ ಹಿಂದಿರುಗಿದೆ. ಡಾ|| ಮಾಳವೀಯ ಅವರು ಹೇಳಿದ್ದ ಸಾರಭೂತ ಮಾತು 'ಮೊದಲು ಮಾಡಬೇಕಾದ್ದು ಮೊದಲು' ಎಂದು. ಅದನ್ನು ಪರಾಮರ್ಶೆ ಮಾಡಿ ಅನ್ವಯಿಸಿದರೆ ನನ್ನ ಕೆಲಸ ಸ್ಫುಟವಾಗಿ ನಿರ್ಧಾರವಾಗಿತ್ತು; ಏನೇ ಬರಲಿ, ಕಾದಂಬರಿ ಬರೆದು ಮುಗಿಸು, ಎನ್ನುವುದೇ ಸಂದೇಶವೆಂದು ನನಗೆ ನಾನೇ ಸಮರ್ಥನೆ ನೀಡಿಕೊಂಡೆ.

ಎರಡು ತಿಂಗಳ ತರುವಾಯ ಒಂದು ದಿನ ರಸಾಯನಶಾಸ್ತ್ರ ಪ್ರಯೋಗಾಲಯದ ಒಂದು ಕಡೆ ಯಾವುದೋ 'ಪ್ರಯೋಗ' ನಡೆಸುತ್ತಿದ್ದೆ ಅಥವಾ ನಡೆಸುವಂತೆ ನಟಿಸುತ್ತಿದ್ದೆ. ನನ್ನ ಹಿಂದಿನಿಂದ ಯಾರದೋ ಧ್ವನಿ ಮೊಳಗಿದಂತಾಯಿತು : ''ಕ್ರಮಸಂಖ್ಯೆ ೭೫೪೮.'' ಬರಲಿದ್ದ ಅಂತಿಮ ಪರೀಕ್ಷೆಗಾಗಿ ನನಗೆ ನೀಡಲಾಗಿದ್ದ ಸಂಖ್ಯೆ ಅದೇ. ಹಿಂದಿರುಗಿ ನೋಡಿದೆ. ಅಲ್ಲಿ ನಿಂತಿದ್ದ ವ್ಯಕ್ತಿ ಸ್ವತಃ ಡಾ|| ಮಾಳವೀಯ ಅವರೇ ಆಗಿರಬೇಕೆ !

''ನನ್ನೊಡನೆ ನನ್ನ ಕೊಠಡಿಗೆ ಬಾ'' ಎಂದರು. ಮೌನವಾಗಿ ಅವರೊಡನೆ ಹೆಜ್ಜೆ ಹಾಕಿದೆ. ಕಾಲೇಜಿನ ಒಳಾಂಗಣ ಅದೆಷ್ಟು ಉದ್ದದ್ದು ಎನಿಸಿತು. ಇದೇ ನಮ್ಮ ಆಟದ ಮೈದಾನವೂ ಆಗಿರುತ್ತಿತ್ತು. ಅವರ ಕಚೇರಿ ತಲುಪಿದಾಗ ಏನನ್ನೋ ನಿರೀಕ್ಷಿಸುತ್ತಾ ಅವರ ಮುಂದೆ ನಿಂತೆ; ನಿಧಾನವಾಗಿ ಹೋಗಿ ಮೇಜಿನ ಇನ್ನೊಂದು ಭಾಗದಲ್ಲಿ ಅವರು ಕುಳಿತಿದ್ದರು.

''ನಿನ್ನಿಂದ ನಾನಿದನ್ನು ನಿರೀಕ್ಷಿಸಿರಲಿಲ್ಲ. ಈ ಬಾರಿ ಬೋರ್ಡ್ ಪರೀಕ್ಷೆಗೆ ನೀನು ಕುಳಿತುಕೊಳ್ಳುವಂತಿಲ್ಲ. ಅಗತ್ಯವಾದಷ್ಟು ಪ್ರಮಾಣದಲ್ಲಿ ನೀನು ತರಗತಿಗಳಿಗೆ ಹಾಜರಾಗಿಲ್ಲ. ನೀನೊಂದು ಪುಸ್ತಕ ಬರೆದು ಪ್ರಕಟಿಸಿದ್ದೀಯೆ ಎಂಬುದು ನನಗೆ ತಿಳಿದಿದೆ. ನನಗೂ ಒಂದು ಪ್ರತಿ ಕೊಟ್ಟಿದ್ದೆಯಲ್ಲವೆ ? ಅದಕ್ಕೆ ನಿನ್ನನ್ನು ಮೆಚ್ಚಿಕೊಳ್ಳುತ್ತೇನೆ. ಆದರೆ ಬೇಕಾಬಿಟ್ಟಿಯಾಗಿ ತರಗತಿಗಳಿಂದ ಹೊರಗುಳಿಯುವುದಕ್ಕೆ ಅದು ಸಮರ್ಥನೆಯಾಗಲಾರದು. ಮೊದಲು ಮಾಡಬೇಕಾದ್ದನ್ನು ಮೊದಲು ಮಾಡಬೇಕು'' ಎಂದು ನಿಧಾನವಾಗಿ ಹೇಳಿದರು.



ವೈಯಕ್ತಿಕವಾದ ಈ ಪ್ರಸಂಗವನ್ನು ಇಷ್ಟು ವಿಸ್ತಾರವಾಗಿ ನಿರೂಪಿಸಿದ್ದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದ ಅರವತ್ತು ವರ್ಷಗಳ ನಂತರ ಒಮ್ಮೆ ಹಿಂದಕ್ಕೆ ತಿರುಗಿ ನೋಡಿದರೆ ನನ್ನ ಕತೆಯು ನನ್ನ ನೆಚ್ಚಿನ ದೇಶವಾದ ಭಾರತದ ಇಂದಿನ ಕತೆಯನ್ನು ಸೊಗಸಾಗಿ ನಿರೂಪಿಸುತ್ತದೆ ಎಂಬ ಕಾರಣದಿಂದ.

ನಮ್ಮ ಸಾಧನೆಗಳನ್ನು ಅಲ್ಲಗಳೆಯುವಂತಿಲ್ಲ. ವಸಾಹತು ರಾಷ್ಟ್ರವಾಗಿದ್ದಾಗ ನಮ್ಮದು ಅಷ್ಟೇನೂ ಪ್ರಮುಖ ದೇಶವಾಗಿರಲಿಲ್ಲ. ೧೯೪೭ರ ನಂತರ ನಾವು 'ದೊಡ್ಡ' ರಾಷ್ಟ್ರವೆನಿಸಿಕೊಂಡಿದ್ದೇವೆ. ತಂತ್ರಜ್ಞಾನ, ರಾಜಕೀಯ, ಕ್ರೀಡೆ ಹೀಗೆ ಪ್ರತಿಯೊಂದು ಕ್ಷೇತ್ರದಲ್ಲೂ ನಮಗೆ ಹೆಸರಿದೆ. ಜೊತೆಗೆ ನಮ್ಮಲ್ಲೀಗ 'ಬಾಂಬ್' ಇದೆ, ಅಣ್ವಸ್ತ್ರ ಹೊಂದಿರುವ ಶಕ್ತಿಶಾಲಿ ರಾಷ್ಟ್ರವೆಂಬ ನಾಮಕರಣವೂ ಆಗಿದೆ. ವಿಶ್ವದ ರಾಷ್ಟ್ರಗಳಲ್ಲಿ ಅತಿದೊಡ್ಡ ಸೈನ್ಯ ಹೊಂದಿರುವವರ ಪೈಕಿ ನಾವು ಎರಡನೆಯವರು. ಇನ್ನೇನು ವಿಶ್ವಸಂಸ್ಥೆಯ ಭದ್ರತಾ ಮಂಡಲಿಯ ಖಾಯಂ ಸದಸ್ಯತ್ವವೂ ಲಭಿಸುವ ಹಂತವನ್ನೂ ಮುಟ್ಟಿದ್ದೇವೆ. ಮಾಹಿತಿ ತಂತ್ರಜ್ಞಾನದಲ್ಲಿ ನಾವೇ ಅಗ್ರೇಸರರೆಂಬ ಪಟ್ಟ ಇದೆ; ಜಾಗತಿಕ ಆರ್ಥಿಕತೆಯ ನಿರ್ಧಾರಕ ಸೂತ್ರಗಳಲ್ಲಿ ಮಾಹಿತಿ ತಂತ್ರಜ್ಞಾನಕ್ಕೆ ಮಹತ್ವದ ಸ್ಥಾನವುಂಟು. ತಂತ್ರಜ್ಞಾನದ ಕೌಶಲ್ಯವು ಎಷ್ಟು ವಿಸ್ತಾರವಾಗಿ ಬೆಳೆದಿದೆಯೆಂದರೆ ನಮ್ಮಲ್ಲಿ ಎಲ್ಲ ತರಹದ ಉತ್ಪಾದನೆಯೂ ಉಂಟು, ಅದು ಶಸ್ತ್ರಾಸ್ತ್ರ ಇರಬಹುದು ಇಲ್ಲವೇ ಔಷಧಿ ಸಾಮಗ್ರಿಗಳಿರಬಹುದು. ನಾವೇ ಉತ್ಪಾದಿಸದಿದ್ದರೆ ಅವನ್ನು ತಂದು ಜೋಡಿಸುವುದಂತೂ ನಿಶ್ಚಿತ. ಅಂತರಿಕ್ಷಯಾನಕ್ಕೆ ಸಂಬಂಧಿಸಿದಂತೆ ಅಗ್ರ ರಾಷ್ಟ್ರಗಳ ಸಮಾನರಾಗಲು ಬಹಳ ಕಾಲ ಬೇಕಿಲ್ಲ; ಚಂದ್ರಗ್ರಹಕ್ಕೆ ಅಂತರಿಕ್ಷಯಾನವೊಂದನ್ನು ರವಾನಿಸುವ ಸಿದ್ಧತೆ ಸಹ ನಡೆಯುತ್ತಿದೆ.

ನಂಬಿದರೆ ನಂಬಬಹುದು ಇಲ್ಲವೆ ಬಿಡಬಹುದು, ಆದರೆ ವಾಸ್ತವದಲ್ಲಿ ಭಾರತವು ವಿಲಾಸಿ ಉಪಭೋಗ ವಸ್ತುಗಳಿಗೆ ದೊಡ್ಡ ಮಾರುಕಟ್ಟೆಯಾಗಿ ವಿಶ್ವದಲ್ಲಿ ಗಣನೀಯವಾದ ಗಮನ ಸೆಳೆದಿದೆ. ಇಂಗ್ಲೆಂಡ್ ಮತ್ತು ಫ್ರಾನ್ಸ್ ಎರಡೂ ದೇಶಗಳ ಒಟ್ಟು ವಹಿವಾಟಿಗಿಂತಲೂ ಹೆಚ್ಚಾಗಿ ಭಾರತವೊಂದರಲ್ಲೇ ಈ ಪ್ರಕಾರದ ಸರಕುಗಳ ಮಾರಾಟ ನಡೆಯುತ್ತಿದೆ. ಬೆಂಗಳೂರಿನಂತಹ ನಮ್ಮ ನಗರಗಳು ವಿಶ್ವದಲ್ಲಿ ಉತ್ತಮವಾದ ಮತ್ತು ಶ್ರೀಮಂತಿಕೆಯಿಂದ ತುಂಬಿದ ಸಿಂಗಪುರ ಮತ್ತು ಹಾಂಕಾಂಗ್‌ನಂತಹ ನಗರಗಳ ಜೊತೆ ಸ್ಪರ್ಧಿಗಿಳಿಯುತ್ತಿವೆ. ಭಾರತೀಯರು ವಿಶ್ವದಲ್ಲಿ ಶ್ರೀಮಂತಿಕೆ ಹಾಗೂ ಬುದ್ಧಿವಂತಿಕೆಗಳಿಗೆ ಹೆಸರು ಮಾಡಿದ್ದಾರೆ. ನಮ್ಮ ಕೆಲವು ದೊಡ್ಡ ನಗರಗಳಲ್ಲಿ ಶಾಲೆಗಳು ಹಾಗೂ ಅವುಗಳ ಸಂಚಾರಿ ವಾಹನಗಳು ವಾತಾನುಕೂಲದಿಂದ ಸಜ್ಜಾಗಿವೆ. ನಮ್ಮ ಪಂಚತಾರಾ ಹೋಟೇಲ್‌ಗಳು ವಿಶ್ವದಲ್ಲೇ ಅತಿದುಬಾರಿಯಾದುವು ಮತ್ತು ಅವು ಬಹುಮಟ್ಟಿಗೆ ಯಾವಾಗಲೂ ತುಂಬಿರುತ್ತವೆ; ಅದೂ ಭಾರತದ ನಾಗರಿಕರಿಂದ ಎಂಬುದನ್ನು ಮರೆಯದಿರೋಣ. ವಿಶೇಷ ಸವಲತ್ತುಗಳನ್ನು ಹೊಂದಿರುವವರಿಗಾಗಿ ಇರುವ ನಮ್ಮ ಆಸ್ಪತ್ರೆಗಳಲ್ಲಿ ಪಂಚತಾರಾ ಹೋಟೇಲುಗಳಲ್ಲಿ ಲಭ್ಯವಿರುವ ಅನುಕೂಲಗಳೆಲ್ಲಾ ದೊರೆಯುತ್ತವೆ ಮತ್ತು ಅದೇ ಮಾದರಿಯ ವಿದೇಶಿ ಆಸ್ಪತ್ರೆಗಳಲ್ಲಿರುವ ಪರಿಣತಿಗಿಂತಲೂ ಉತ್ತಮ ಪರಿಣತಿ ಇಲ್ಲಿದೆ.

ಇಷ್ಟೆಲ್ಲಾ ಇದ್ದರೂ ಸಿನಿಕತನದಿಂದ ಆವೃತವಾಗಿರುವ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ಅಂದು ಡಾ|| ಮಾಳವೀಯ ಅವರ ಕೊಠಡಿಯಲ್ಲಿ ನಿಂತಿದ್ದಾಗ ನನ್ನ ಸ್ಥಿತಿ ಏನಿದ್ದಿತೋ ಅದಕ್ಕಿಂತಲೂ ಇಂದು ನಮ್ಮ ದೇಶದ ಸ್ಥಿತಿ ಹೆಚ್ಚು ಉತ್ತಮವಾಗೇನಿಲ್ಲ. ನನ್ನ ಭವಿಷ್ಯವನ್ನು ರೂಪಿಸಿಕೊಳ್ಳಲು ಶ್ರಮಿಸುವ ಬದಲು ನೊಬೆಲ್ ಪ್ರಶಸ್ತಿ ಪಡೆದಿದ್ದ ಲೇಖಕರ ಶೈಲಿಯನ್ನನುಕರಿಸಿ ಒಂದು ಕಾದಂಬರಿಯನ್ನು ಬರೆದು ಮುಗಿಸಿದ್ದೇನೆಂದು ಬೀಗುತ್ತಿದ್ದ ಕಾಲ ಅದು. ಎಂದಾದರೊಂದು ದಿನ ತೀರ್ಪನ್ನು ಕೊಡುವ ಸಂದರ್ಭ ಬಂದರೆ, ನ್ಯಾಯಾಲಯದ ಅಧ್ಯಕ್ಷಗಿರಿಯಲ್ಲಿರುವ ನ್ಯಾಯಾಧೀಶ ಆಧುನಿಕ ಭಾರತದ ನಿರ್ಮಾತೃಗಳ ಬಗ್ಗೆ ತೀರ್ಪು ಕೊಡುವಾಗ ನನ್ನನ್ನು ಬೋರ್ಡ್ ಪರೀಕ್ಷೆಗೆ ಕುಳಿತುಕೊಳ್ಳಲು ಅನರ್ಹನೆಂದು ನಿಂದಿಸಿದ್ದ ನನ್ನ ಪ್ರಾಚಾರ್ಯರು ಹೇಳಿದ್ದುದನ್ನೇ ಹೇಳಬೇಕಾಗುತ್ತದೆ: ''ಮೊದಲು ಮಾಡಬೇಕಾದುದನ್ನು ಮಾಡುವುದರಲ್ಲಿ ನೀನು ಸಂಪೂರ್ಣವಾಗಿ ವಿಫಲನಾಗಿದ್ದೀಯೆ.''

ನಾವು ಬ್ರಿಟಿಷ್ ಯಜಮಾನರ ವಿರುದ್ಧ ಹೋರಾಡುತ್ತಿದ್ದಾಗ, ಕಳೆದ ಆರು ದಶಕಗಳ ಸಾಧನೆಯೆಂದು ನಾನು ಪಟ್ಟಿ ಮಾಡಿರುವುಗಳ ಪೈಕಿ ಯಾವುದೂ ಸಹ ಸ್ವಾತಂತ್ರ್ಯದ ಪ್ರಣಾಲಿಕೆಯ ಆಶಯಗಳಲ್ಲಿ ಅಡಕವಾಗಿರಲಿಲ್ಲ. ಇವೆಲ್ಲಾ ಅದಕ್ಕೆ ಹೊರತಾದುವೇ ಆಗಿವೆ. ಆಗಿನ ಪ್ರಣಾಲಿಕೆ ಬಹಳ ಸರಳವಾಗಿತ್ತು: ''ಎಲ್ಲರಿಗೂ ಆಹಾರ ಮತ್ತು ನೀರು, ಎಲ್ಲರಿಗೂ ವಸತಿ ಸೌಕರ್ಯ, ಎಲ್ಲರಿಗೂ ಕನಿಷ್ಠ ಉಡುಗೆ - ತೊಡುಗೆ, ಎಲ್ಲರಿಗೂ ಸಾಮಾಜಿಕ ನ್ಯಾಯ (ಅಂದರೆ, ಸಂಪತ್ತಿನ ಸಮಾನ ಹಂಚಿಕೆ). ಎಲ್ಲರಿಗೂ

ಶಿಕ್ಷಣ, ಎಲ್ಲರಿಗೂ ವೈದ್ಯಕೀಯ ಸೌಲಭ್ಯ, ಎಲ್ಲ ಮಹಿಳೆಯರಿಗೂ ಪುರುಷರೊಡನೆ ಸಮಾನತೆ, ಎಲ್ಲ ವರದಕ್ಷಿಣೆಯ ನಿರ್ಮೂಲನ, ಎಲ್ಲ ಜಾತಿ ಭೇದದ ಉತ್ಪಾಟನೆ.''

ಈ ಪ್ರಣಾಲಿಕೆಯ ವಾಕ್ಯದಲ್ಲಿರುವ ಎಲ್ಲ ಎಂಬ ಪದವನ್ನು ಅಳಿಸಿಹಾಕಿ ''ಜನಸಂಖ್ಯೆಯ ಶೇಕಡ ಹತ್ತು ಮಂದಿ'' ಎಂದು ಬರೆದುಕೊಂಡರೆ, ನೂತನ ಭಾರತದ ನಿರ್ಮಾತೃಗಳ ಮಹತ್ಸಾಧನೆಗೆ ಪೂರ್ಣಾಂಕಗಳನ್ನು ಕೊಡಲು ಸಮರ್ಥನೆ ಇರುತ್ತದೆ.

ಹಾಗಿದ್ದರೆ ನಾವು ತಪ್ಪಿದ್ದೆಲ್ಲಿ? ಜೀವಂತವಾಗಿ ಉಳಿಯುವುದಕ್ಕೆ ಕೂಡ ಹೋರಾಟ ಮಾಡಬೇಕಾದ ಪರಿಸ್ಥಿತಿ ಭಾರತದ ಶೇಕಡ ತೊಂಬತ್ತು ಮಂದಿಗೆ ಬಂದಿದ್ದೇಕೆ? ಆಹಾರದ ತಲಾವಾರು ಸೇವನೆ ಅರವತ್ತು ವರ್ಷಗಳ ಹಿಂದೆ ಇದ್ದಷ್ಟೇ ಈಗಲೂ ಏಕಿದೆ? (ಅಂದರೆ, ಕೆಲವರು ಪೌಷ್ಟಿಕ ಆಹಾರ ಪಡೆಯುತ್ತಾರೆ ಮತ್ತು ಇನ್ನಿತರರು ಸ್ವಾತಂತ್ರ್ಯ ಪೂರ್ವದ ಸ್ಥಿತಿಗಿಂತಲೂ ಕೆಳಗೆ ಹೋಗಿದ್ದಾರೆ ಎಂದರ್ಥ.) ಆಹಾರ ಮಳಿಗೆಗಳಲ್ಲಿ ಟನ್ನುಗಟ್ಟಲೆ ಆಹಾರದ ದಾಸ್ತಾನಿದೆ, ಆದರೆ ಲಕ್ಷಾಂತರ ಮಂದಿ ಹೊಟ್ಟೆಗಿಲ್ಲದೆ ನರಳುತ್ತಿದ್ದಾರೆ ಮತ್ತು ಸಾವಿರಾರು ಮಂದಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ; ಏಕೆಂದರೆ, ಆಹಾರ ಕೊಳ್ಳಲು ಅವರ ಬಳಿ ಹಣವಿಲ್ಲ. ಇಂತಹ ದುರವಸ್ಥೆಗೆ ಕಾರಣವೇನು? ಈಗಲೂ ದೇಶದ ಶೇ. ೭೦ರಷ್ಟು ನಾಗರಿಕರಿಗೆ ಶುದ್ಧ ಕುಡಿಯುವ ನೀರಿಗೆ ಕೊರತೆಯಿದೆಯಲ್ಲಾ, ಏಕೆ? ಹೀಗೆ ನೀರಿಗೆ ಪರದಾಡುವವರ ಸಂಖ್ಯೆ ಶೀಘ್ರಗತಿಯಲ್ಲಿ ಹೆಚ್ಚಾಗುತ್ತಿದೆಯಲ್ಲವೆ?

– ಹೀಗೆ ಹತ್ತಾರು ಅಂಶಗಳನ್ನು ನಮೂದಿಸುತ್ತಾ ಹೋಗಬಹುದು. ಸ್ವಾತಂತ್ರ್ಯ ಹೋರಾಟದ ಕಾಲದ ಆಶ್ವಾಸನೆಗಳನ್ನು ಎಷ್ಟು ಮರೆಯಲಾಗಿದೆಯೆಂಬುದು ಒಂದು ಇಡೀ ಪುಸ್ತಕವನ್ನೇ ತುಂಬುತ್ತದೆ. ಆದರೂ ನಮ್ಮ ದೇಶದ ನಾಯಕರಿಗೆ ಯಾವ ಅಂಜಿಕೆಯೂ ಇಲ್ಲ. ಅವರ ಪ್ರಜ್ಞಾವಂತಿಕೆ, ದೂರದೃಷ್ಟಿ, ಚಾರಿತ್ರ್ಯ, ಯಾವುದನ್ನು ಬೇಕಾದರೂ ಖಂಡಿಸಿ; ಅವರು ವಿಚಲಿತರಾಗುವುದಿಲ್ಲ. ನೀರು-ಆಹಾರಗಳಂತಹ ಚಿಕ್ಕ ಚಿಕ್ಕ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳಲು ಅವರಿಗೆ ವ್ಯವಧಾನವಿಲ್ಲ; ಅವರ ಹಾಗೂ ಅವರ ನೆಂಟರಿಷ್ಟರ ದಂಗುಬಡಿಸುವಂತಹ ಶ್ರೀಮಂತಿಕೆಯ ಪ್ರಭೆ ಅವರ ಮನಸ್ಸುಗಳನ್ನು ಆವರಿಸಿಕೊಂಡಿದೆ. ದೇಶದ ನೂತನ ಮಹಾರಾಜರೆಂದರೆ ಇವರೇ. ರಾಜನಿಗೆ ದೈವತ್ವದಿಂದ ಆಳುವ ಹಕ್ಕು ದಕ್ಕಿದ್ದಂತೆ ಇವರಿಗೆ ದೇಶವನ್ನಾಳಲು ಭಗವಂತನಿಂದ ಆಣತಿ ಇದೆ!

ಅದಿರಲಿ, ಈ ಲೇಖನ ''ಮೊದಲು ಮಾಡಬೇಕಾದ್ದು ಮೊದಲು'' ಎಂಬುದರ ಬಗೆಗಾದ್ದರಿಂದ ಯಾರೇ ಆದರೂ ಕೇಳಬಹುದಾದ ಪ್ರಶ್ನೆ ಇದು: ದೇಶವನ್ನು ಕಟ್ಟಿದವರು, ಸಮರೋಪಾದಿಯಲ್ಲಿ ಮೊಟ್ಟಮೊದಲು ಕೈಗೊಳ್ಳಬೇಕಾಗಿದ್ದ ಕೆಲಸ ಯಾವುದು? ಉತ್ತರ ಸುಲಭ: ಜನಸಂಖ್ಯಾ ನಿಯಂತ್ರಣ. ೧೯೪೦ರ ದಶಕದಲ್ಲಿ ನಾವು ಉತ್ಪಾದಿಸುತ್ತಿದ್ದ ಆಹಾರ ಧಾನ್ಯಗಳಿಗಿಂತ ನಾಲ್ಕು ಪಟ್ಟು ಹೆಚ್ಚನ್ನು ಈಗ ಉತ್ಪಾದಿಸುತ್ತಿದ್ದೇವೆ. ನೀರಿನ ಮೂಲಗಳ ಬಳಕೆ ಆಗಿಗಿಂತ ಎರಡರಷ್ಟು ಜಾಸ್ತಿಯಾಗಿದೆ. ಬೇರೆಲ್ಲ ಸಂಪನ್ಮೂಲಗಳೂ ಸಹ ದೊಡ್ಡ ಪ್ರಮಾಣದಲ್ಲಿ ಹೆಚ್ಚಾಗಿವೆ. ಹಾಗಿದ್ದರೂ ಶ್ರೀಸಾಮಾನ್ಯನು ಮಾತ್ರ ಎಲ್ಲಿದ್ದನೋ ಅಲ್ಲೇ ಉಳಿದಿದ್ದಾನೆ, ಒಬ್ಬ ಕಡು ನಿರ್ಗತಿಕನಂತಿದ್ದಾನೆ. ನಮ್ಮ ನಾಗಾಲೋಟ ಭರದಿಂದ ಸಾಗಿದೆ, ಆದರೆ ಆ ಓಟವು ಅರವತ್ತು ವರ್ಷಗಳ ಹಿಂದೆ ನಾವೆಲ್ಲಿದ್ದೆವೋ ಅಲ್ಲಿ ನಿಂತಿರಲು ಮಾತ್ರ ಸಹಾಯ ಮಾಡಿದೆ.

ಇದನ್ನು ಬೇರೊಂದು ರೀತಿಯಲ್ಲಿ ನೋಡಬಹುದು. ೧೯೩೦ ಮತ್ತು ೪೦ರ ದಶಕಗಳಲ್ಲಿ ಬ್ರಿಟನ್ನಿನ ಜನಸಂಖ್ಯೆ ಸುಮಾರು ಆರು ಕೋಟಿ ಇದ್ದಿತು; ಅದರಲ್ಲಿ ನಾಲ್ಕೂವರೆ ಕೋಟಿ ಇದ್ದದ್ದು ಇಂಗ್ಲೆಂಡಿನಲ್ಲಿ. (ಮಿಕ್ಕವರು ವೇಲ್ಸ್, ಸ್ಕಾಟ್ಲೆಂಡ್, ಮನ್‌ಮತ್‌ಷೈರ್ ಮತ್ತು ಉತ್ತರ ಐರ್ಲೆಂಡಿನಲ್ಲಿದ್ದರು.) ಈಗ ಎಪ್ಪತ್ತು ವರ್ಷಗಳ ನಂತರ ಇಂಗ್ಲೆಂಡಿನ ಜನಸಂಖ್ಯೆ ಅಷ್ಟೇ ಇದೆ; ಬ್ರಿಟನ್ನಿನದೂ ಅಷ್ಟೆ. ಅದೇ ಕಾಲಾವಧಿಯಲ್ಲಿ ಭಾರತವು ಸುಮಾರು ೩೦ ಕೋಟಿಯಿಂದ ೧೦೦ ಕೋಟಿಗೆ ಜಿಗಿದಿದೆ; ಅಂದರೆ ಮೂರು ಪಟ್ಟಿಗಿಂತಲೂ ಅಧಿಕ. ನಮ್ಮ ದೇಶದ ಪ್ರಮಾಣದಲ್ಲಿ ಬ್ರಿಟನ್ನಿನ ಜನಸಂಖ್ಯೆ ಹೆಚ್ಚಿದ್ದಿದ್ದರೆ ಅಲ್ಲಿ ಈಗ ೨೦ ಕೋಟಿ ಜನರಿರಬೇಕಾಗಿತ್ತು!

ಇಪ್ಪತ್ತನೆಯ ಶತಮಾನದುದ್ದಕ್ಕೂ ಯೂರೋಪಿನ ಜನಸಂಖ್ಯೆ ಹೆಚ್ಚು ಕಡಿಮೆ ಸ್ಥಿರವಾಗಿಯೇ ಇದೆ, ಅಮೆರಿಕಾದ್ದು ಸ್ವಲ್ಪ ಮಾತ್ರವೇ ಹೆಚ್ಚಿದೆ. ಜಪಾನಿನ ಜನಸಂಖ್ಯಾ ಬೆಳವಣಿಗೆ ಸೊನ್ನೆ ಪ್ರಮಾಣದ್ದು, ರಷ್ಯಾದ್ದು ಸೊನ್ನೆಗೂ ಕಡಿಮೆ (ಅಂದರೆ, ಜನಸಂಖ್ಯೆ ಕಡಿಮೆಯಾಗುತ್ತಿದೆ). ಈಚಿನ ವರ್ಷಗಳಲ್ಲಿ ಚೀಣಾವು ತನ್ನ ಹೆಚ್ಚಳದ ಪ್ರಮಾಣವನ್ನು ಶೇ. ೧ಕ್ಕೂ ಕಡಿಮೆ ಮಾಡಿಕೊಂಡಿದೆ.

ವಿಶ್ವದಲ್ಲಿ ಯಾವ ದೇಶವೂ ಸಾಧಿಸಿರದ ಒಂದು ಪವಾಡವೆಂದರೆ ಜನಸಂಖ್ಯೆ ಮತ್ತು ಜೀವನದ ಅಂತಸ್ತು, ಎರಡನ್ನೂ ಏಕಪ್ರಕಾರದಲ್ಲಿ ಹೆಚ್ಚಿಸಿಕೊಳ್ಳುತ್ತಾ ಹೋಗುವುದು. ಅದನ್ನು ಸಾಧಿಸಬಹುದೆಂಬುದು ಕೇವಲ ಒಂದು ಭ್ರಮೆ. ಯಾವ ಶೈಕ್ಷಣಿಕ ನೈಪುಣ್ಯವನ್ನೂ ಪಡೆಯದೆ ಯುವಕನಾಗಿದ್ದಾಗ ನಾನು ನೊಬೆಲ್ ಪ್ರಶಸ್ತಿಗೆ ಆಶಿಸುತ್ತಿದ್ದೆನಲ್ಲಾ, ಹಾಗೆ. ಹಲವು ದಶಕಗಳಲ್ಲಿ ನಮ್ಮ ನಾಯಕರು ನೀಡುತ್ತಾ ಬಂದಿರುವ ಆಶ್ವಾಸನೆ ಇದೇ, ಅದನ್ನು ಸಾಧಿಸಿಬಿಡುತ್ತೇವೆ, ಎಂಬುದು. ಅವರು ಸ್ವತಃ ಅವರನ್ನೇ ವಂಚಿಸಿಕೊಳ್ಳುತ್ತಿದ್ದಾರೆ, ಜನರನ್ನೂ ವಂಚಿಸುತ್ತಿದ್ದಾರೆ. ಕಡೆಗೆ ಆಗಿರುವುದಾದರೂ ಏನು? ಜನಸಂಖ್ಯೆಯ ಶೇ. ೧೦ರಷ್ಟು ಮಂದಿಯ ಆಸೆಗಳನ್ನು ಪೂರೈಸಿ ಇತರರನ್ನು ತಮ್ಮ ಹಣೆಬರಹ ಕಂಡುಕೊಳ್ಳಲು ಬಿಟ್ಟುಬಿಡುವುದು!

ಆದರೆ ಆ ಉಳಿದ ಶೇ. ೯೦ ಮಂದಿ ಇಲ್ಲವೇ ಇಲ್ಲವೆಂಬಂತೆ ನಟಿಸಲಾಗುತ್ತದೆಯೆ? ತೀರ್ಮಾನದ ಒಂದು ದಿನ ಬಹಳ ದೂರವಿಲ್ಲ. ಅದು ೧೯೬೦ರ ದಶಕದಲ್ಲೇ ಬರಲಿತ್ತು, ಏಕೆಂದರೆ ಆಗ್ಗೆ ಜನಸಂಖ್ಯೆಯ ಹೆಚ್ಚಳಕ್ಕೆ ಸಮನಾಗಿ ಆಹಾರ ಧಾನ್ಯಗಳ ಬೆಳೆ ಹೆಚ್ಚುತ್ತಿರಲಿಲ್ಲ. ಅಂದು ಜರುಗಬೇಕಾಗಿದ್ದ ಆಘಾತಕರ ಘಟನೆಯನ್ನು 'ಹಸಿರು ಕ್ರಾಂತಿ'ಯು ಮುಂದೂಡಿತು. ಆದರೆ ಹಾಗೇ ಅದನ್ನು ಮುಂದೂಡುತ್ತ ಹೋಗಲಾಗುವುದಿಲ್ಲ. ಹೊರಪ್ರಪಂಚಕ್ಕೆ ಕಾಣುವುದು ಶ್ರೀಮಂತಿಕೆ ಮತ್ತು ಅಭಿವೃದ್ಧಿ; ಆದರೆ ಪ್ರತಿಯೊಂದು ಜೀವನ ವಿಭಾಗದಲ್ಲೂ ಪದಾರ್ಥಗಳ ಕೊರತೆ ನಮ್ಮನ್ನು ಕಾಡಿಸುತ್ತಿದೆ. ಆಹಾರ, ನೀರು, ವಿದ್ಯುಚ್ಛಕ್ತಿ, ಪೆಟ್ರೋಲಿಯಂ, ಶಿಕ್ಷಣ, ಸಾರಿಗೆ, ಆರೋಗ್ಯ ಹೀಗೆ ಪ್ರತಿಯೊಂದು ಜೀವನಾವಶ್ಯಕ ವಸ್ತುಗಳ ವಿಷಯದಲ್ಲೂ ಅಭಾವ ಕಿತ್ತುತಿನ್ನುತ್ತಿದೆ, ಜನಸಂಖ್ಯೆಯ ಅರ್ಧಭಾಗದವರಿಗೆ ಇವಾವುವನ್ನೂ ಕೊಳ್ಳಲು ಸಾಧ್ಯವಿರದಷ್ಟು ಬೆಲೆಯೇರಿಕೆ ಕಂಡುಬಂದಿದೆ. ಇನ್ನು ಮೂವತ್ತು ವರ್ಷಗಳಲ್ಲಿ ಆ ಅರ್ಧ ಎಂಬುದು ನೂರು ಕೋಟಿಯನ್ನು ಮುಟ್ಟಿರುತ್ತದೆ. ಮೇಲೆ ಹೇಳಿದ ಎಲ್ಲ ವಸ್ತುಗಳ ಪೈಕಿ ನೀರಿನ ಕೊರತೆ ದಟ್ಟವಾಗಿ ಕಾಡಲಿದೆ ಮತ್ತು ನೀರಿನ ಅವಶ್ಯಕತೆಯನ್ನು ಚೌಕಾಸಿ ಮಾಡಿ ಕಡಿಮೆ ಮಾಡಲಾಗುವುದಿಲ್ಲ!

ಈ ಎಲ್ಲ ಸಮಸ್ಯೆಗಳನ್ನು ವಿಸ್ತಾರವಾಗಿ ಚರ್ಚಿಸಲು ಇಲ್ಲಿ ಅವಕಾಶವಿಲ್ಲ. ನನ್ನ ಉದ್ದೇಶ ಇಷ್ಟೇ: ನಮ್ಮ ದೇಶವು ಎದುರಿಸಬೇಕಾಗಿ ಬರುವ ಆಘಾತದ ಪ್ರಮಾಣ ಎಷ್ಟು ಬೃಹತ್ತಾದ್ದು ಎಂಬುದನ್ನು ಮನದಟ್ಟು ಮಾಡಿಕೊಡುವುದು. ಅಭಿವೃದ್ಧಿಯನ್ನು ಸಂಖ್ಯೆಗಳ ಪರಿಮಾಣವನ್ನು ಕೈಬಿಟ್ಟು ಲೆಕ್ಕಹಾಕಲು ಬರುವುದಿಲ್ಲ. ಅಂತೆಯೇ, ಸಂಖ್ಯೆಗಳನ್ನು ನಮ್ಮ ಮನಬಂದಂತೆ ಹಿಗ್ಗಿಸುವುದು ಅಥವಾ ಕುಗ್ಗಿಸುವುದು ಸಾಧ್ಯವಿಲ್ಲ. ಅಂದರೆ, ಇರುವ ಜನಸಂಖ್ಯೆಯನ್ನು ಯಾವುದೋ ಚಮತ್ಕಾರದಿಂದ ಕಡಿಮೆಗೊಳಿಸಿಕೊಂಡಿದ್ದೇವೆ ಎಂದು ಕಲ್ಪಿಸಿಕೊಳ್ಳಲಾಗುವುದಿಲ್ಲ. ಅದು ಎಷ್ಟಿದೆಯೋ ಅಷ್ಟು ವಾಸ್ತವ. ನಮ್ಮದು ಮಾನವ ನಿರ್ಮಿತ ವಿಪತ್ತು; ಎಚ್ಚೆತ್ತುಕೊಂಡು ಈಗಲೂ ಅದನ್ನು ತಡೆಯಲು ಸಾಧ್ಯವಿದೆ. ''ಮೊದಲು ಮಾಡಬೇಕಾದ್ದನ್ನು ಮೊದಲು'' ಮಾಡುವುದು ಇನ್ನೂ ಸ್ವಲ್ಪ ಕಾಲಾವಕಾಶವಿರುವಾಗ ಈಗಲೇ ಕೈಗೊಳ್ಳಬೇಕಾದ ಕೆಲಸ. ತಡ ಮಾಡಿದರೆ ಆರಂಭದಲ್ಲಿ ನನ್ನ ಕತೆ ಹೇಳಿದೆನಲ್ಲಾ ಅದರಂತೆ ಪರಿಣಮಿಸುತ್ತದೆ.

ನಿಮಗೆ ಸ್ವಂತದ ಅನುಭವ ಇಲ್ಲದಿದ್ದರೆ ಇಂಥದೊಂದು ಸನ್ನಿವೇಶವನ್ನು ಊಹಿಸಿಕೊಳ್ಳಿ: ಐವತ್ತು ಜನರಿಗೆಂದು ಮಾಡಿರುವ ಬಸ್ಸಿನ ಮೇಲ್ಭಾಗದಲ್ಲೋ ಬಸ್ ಹತ್ತುವ ಪ್ರವೇಶದ ಮೆಟ್ಟಿಲುಗಳ ಮೇಲೋ ಇನ್ನೂರು ಜನ ಪ್ರಯಾಣಿಸುತ್ತಿದ್ದಾರೆ. ಬಸ್ ಮುಂದೆ ಹೋಗುತ್ತಿದ್ದಂತೆ ಮಧ್ಯದಲ್ಲಿ ಒಂದು ನಿಲ್ದಾಣ ಬರುತ್ತದೆ. ಬಸ್ಸನ್ನು ಏರಿರುವ ಜನರ ಪೈಕಿ ಮುಕ್ಕಾಲು ಜನ ಇಳಿದುಬಿಡುತ್ತಾರೆ. ನಿಮಗೆ ಕುಳಿತುಕೊಳ್ಳಲು ಒಳಗೆ ಜಾಗ ದೊರಕಿ ಹಾಯೆನಿಸುತ್ತದೆ. ಈ ಮಾನಸಿಕ ವ್ಯಾಯಾಮವು ಭಾರತದಲ್ಲಿ ಇಂದಿನ ಜೀವನಕ್ಕೂ ಈಗ್ಗೆ ಎಪ್ಪತ್ತು ವರ್ಷಗಳ ಹಿಂದಿನ ಜೀವನಕ್ಕೂ ಇರುವ ಅಂತರವನ್ನು ವಿಶದಪಡಿಸುತ್ತದೆ. ಈ ಎರಡು ಅವಧಿಗಳ ನಡುವಣ ವ್ಯತ್ಯಾಸವನ್ನು ಮಾಪನ ಮಾಡಲು ಮೇಲಿನ ತುಲನೆಯನ್ನು ಯಾವ ಜೀವನಕ್ಷೇತ್ರಕ್ಕೆ ಬೇಕಾದರೂ ಅನ್ವಯಿಸಿ ನೋಡಬಹುದು. ಹುಚ್ಚು ಹಿಡಿಸಿಕೊಳ್ಳಬೇಕೆಂಬ ಆಸಕ್ತಿ ನಿಮಗಿಲ್ಲದಿದ್ದರೆ, ಭವಿಷ್ಯದ ಚಿತ್ರಣ ಪಡೆಯಲು ಈ ತುಲನೆಯನ್ನು ಅನ್ವಯ ಮಾಡಬೇಡಿರೆಂದು ವಿನಂತಿಸಿಕೊಳ್ಳುತ್ತೇನೆ. ಖಂಡಿತ ಅದು ನಿಮ್ಮನ್ನು ಜಗ್ಗಿಸಿಬಿಡುತ್ತದೆ. ಆ ಕರಾಳತೆಯನ್ನೆದುರಿಸುವ ಸಮಯ ಮುಂದಿನ ಪೀಳಿಗೆಗಳ ಮೊಮ್ಮಕ್ಕಳಿಗೆ ಬಿಟ್ಟುಬಿಡಿ. ಅವರೆಂತಹ ಫಸಲು ಅನುಭವಿಸಬಹುದೆಂಬುದು ಇಂದು ನಾವು ಬಿತ್ತುವ ಬೀಜದಿಂದ ನಿರ್ಧಾರವಾಗುತ್ತದೆ.

ಎಂ. ಬಿ. ಲಾಲ್
ಡಿ - ೩೦, ಪ್ರೆಸ್ ಎನ್‌ಕ್ಲೇವ್, ಸಾಕೇತ್, ನವದೆಹಲಿ - ೧೧೦ ೦೧೭
ಕನ್ನಡಕ್ಕೆ : ಜಿ. ರಾಮಕೃಷ್ಣ





# ಅನನ್ಯ ಸಮ್ಮಿಳಿತ ಸಂಸ್ಕೃತಿ

## ನಮ್ಮ ರಾಷ್ಟ್ರದ ಭದ್ರ ಬುನಾದಿ

ಮ. ಶ್ರೀ. ಮುರಳಿ ಕೃಷ್ಣ

ನಿಘಂಟಿನಲ್ಲಿ 'ಸಂಸ್ಕೃತಿ' ಎಂಬ ಪದಕ್ಕೆ ಬುದ್ಧಿವಿಕಾಸ, ಮಾನಸಿಕ ಪಕ್ವತೆ, ಒಂದು ದೇಶದ ಮಾನಸಿಕ ಸಾಧನೆ, ನಾಗರಿಕತೆಯ ಬೌದ್ಧಿಕ ಸಾಧನೆ ಎಂಬ ಸರಳ ಅರ್ಥಗಳು ಸಿಗುತ್ತವೆ. ಒಂದು ರಾಷ್ಟ್ರದ ಜನರ ಅಥವಾ ಗುಂಪಿನ ಕಲೆಗಳು, ಆಚಾರಗಳು, ರೂಢಿಗಳು, ಪರಂಪರೆಗಳು ಮುಂತಾದುವುಗಳ ಸಮ್ಮಿಶ್ರಣವೇ 'ಸಂಸ್ಕೃತಿ' ಎಂದು ವಿಶೇಷಜ್ಞರು ಗುರುತಿಸುತ್ತಾರೆ. ಡಾ॥ ನಿ. ಮುರಾರಿ ಬಲ್ಲಾಳರು (ದಿವಂಗತ) ತಮ್ಮ 'ಒಂಟಿ ಧ್ವನಿ' ಪುಸ್ತಕದಲ್ಲಿ 'ಸಂಸ್ಕೃತಿ'ಯನ್ನು ವ್ಯಾಖ್ಯಾನಿಸುವುದು ಹೀಗೆ – 'ಸಂಸ್ಕೃತಿ' ಎಂಬ ಪದವನ್ನು ನಾವು ಯಾವ ಅರ್ಥದಲ್ಲಿ ಬಳಸುತ್ತೇವೆ ಎಂಬುದನ್ನು ಸ್ಪಷ್ಟವಾಗಿ ನಿರೂಪಿಸಬೇಕಾಗಿದೆ. ಹೆಚ್ಚಿನ ಸಂದರ್ಭದಲ್ಲಿ 'ಸಂಸ್ಕೃತಿ' ಎಂಬ ಪದವನ್ನು ಕೇವಲ ವಿವಿಧ ಕಲಾ ಪ್ರಕಾರಗಳು, ಸಾಹಿತ್ಯ, ಧರ್ಮ, ಭಾಷೆಗಳಿಗೆ ಸೀಮಿತಗೊಳಿಸಿ ಬಳಸಲಾಗುತ್ತದೆ. ಆದರೆ 'ಸಂಸ್ಕೃತಿ' ಪದದ ವ್ಯಾಪ್ತಿ ಇಷ್ಟೇ ಅಲ್ಲ. ಹಾಗಾದರೆ 'ಸಂಸ್ಕೃತಿ' ಎಂದರೇನು ? ಪ್ರಾಣಿಗಳು, ತಾವಿದ್ದ ಪರಿಸರದ ಜತೆ ಹೊಂದಿಕೊಂಡು ಬಾಳುತ್ತಿದ್ದರೆ, ಸ್ವಯಂಪ್ರಜ್ಞೆಯಿರುವ ಮನುಷ್ಯ ಮಾತ್ರ ತನ್ನ ಬಾಳಿಗೆ ಅನುಕೂಲವಾಗುವಂತೆ ಪರಿಸರವನ್ನೇ ಮಾರ್ಪಾಟು ಮಾಡಿ ಹೊಂದಿಸಿಕೊಳ್ಳಲು ಪ್ರಯತ್ನಿಸುತ್ತಾನೆ; ತನ್ನ ಬುದ್ಧಿಶಕ್ತಿಯಿಂದ ತನಗೆ ಬೇಕಾದ್ದನ್ನು ಸೃಷ್ಟಿಸಿಕೊಳ್ಳುತ್ತಾನೆ. ಈ ಎಲ್ಲಾ ಮಾರ್ಪಾಟುಗಳ ಒಟ್ಟು ಸ್ವರೂಪವನ್ನೇ ಅಥವಾ ಪ್ರಕ್ರಿಯೆಯನ್ನೇ 'ಸಂಸ್ಕೃತಿ' ಎಂದು ಕರೆಯಬಹುದು. ಹೀಗೆ, 'ಸಂಸ್ಕೃತಿ'ಯ ಅರ್ಥವ್ಯಾಪ್ತಿ ದೊಡ್ಡದು.

ನಮ್ಮ ರಾಷ್ಟ್ರದ 'ಸಂಸ್ಕೃತಿ'ಯ ಬಗ್ಗೆ ವಿಶ್ಲೇಷಿಸಬೇಕಾದರೆ, 'ಸಮ್ಮಿಳಿತ ಸಂಸ್ಕೃತಿ'ಯ ಆಯಾಮವನ್ನು ಪರಿಗಣಿಸಲೇಬೇಕು. ಸಮ್ಮಿಳಿತ ಸಂಸ್ಕೃತಿಯೆಂಬುದು ಅನೇಕ ವೈಶಿಷ್ಟ್ಯತೆಗಳಿಂದ ಕೂಡಿದೆ. ಇದರಲ್ಲಿ ಏಕ ಸಂಸ್ಕೃತಿಯ ಪ್ರಭುತ್ವಾಧಿಕಾರದ ಅನಂಗೀಕಾರ, ಬಹುತ್ವ ಮತ್ತು ಬಹು ಮುಖೀ ಸಂಸ್ಕೃತಿಯ ಪುನಃದೃಢೀಕರಣಗಳೇ ಪ್ರಧಾನ ಲಕ್ಷಣಗಳಾಗಿರುತ್ತವೆ. ಇದು ಸಮ್ಮಿಶ್ರ ಸಮಾಜದಲ್ಲಿ ದೃಢವಾದ ಹಾಗೂ ಸಿಂಧುವಾದ ರೂಪುರೇಷೆಗಳನ್ನು ಪಡೆದಿರುತ್ತದೆ. ಸಮ್ಮಿಳಿತ ಸಂಸ್ಕೃತಿಯಲ್ಲಿ ಕೊಡು-ಕೊಳ್ಳುವಿಕೆ, ಹಂಚಿಕೆ, ಮುಖಾಮುಖಿ, ಮಿಲನಗಳ ಮೂಲಕ ಪ್ರಕ್ರಿಯೆಗಳು ಜರುಗುತ್ತಿರುತ್ತವೆ. ಇದಕ್ಕೆ ಉತ್ಕೃಷ್ಟ ನಿದರ್ಶನವೆಂದರೆ ನಮ್ಮ ಭಾರತದ ಸಮಾಜ.



ಸಮ್ಮಿಳಿತ ಸಂಸ್ಕೃತಿಯೇ ನಮ್ಮ ರಾಷ್ಟ್ರದ ಭದ್ರ ಬುನಾದಿ. ನಮ್ಮ ಶಕ್ತಿಯಿರುವುದು ಇದರಲ್ಲೇ. ಇದರಿಂದಲೇ ನಮ್ಮ ಐಕ್ಯತೆ ಉಳಿದಿರುವುದು ಹಾಗೂ ಆಧುನಿಕ ಭಾರತ ಒಂದು ಮಾದರಿ ರಾಷ್ಟ್ರವೆನಿಸಿರುವುದು. ವಿಶ್ವದಲ್ಲಿ ಹಲವು ದೇಶಗಳು ಛಿದ್ರವಾಗಿವೆ. ಆದರೆ ಭಾರತದ ತಳಪಾಯ ಗಟ್ಟಿಯಾಗಿದೆ. ಸ್ವಾತಂತ್ರ್ಯ ಗಳಿಸಿದ ಅವಧಿಯಲ್ಲಿ ವಿಭಜನೆಯಾದದ್ದು ಒಂದು ದುರ್ಘಟನೆ ನಿಜ. ಇದು ಘಟಿಸಿದ್ದು ವಿಧ್ವಂಸಕ, ಕರಾಳ ಕೋಮುವಾದೀ ಶಕ್ತಿಗಳಿಂದ ಎಂಬುದು ಗಮನಾರ್ಹ ಅಂಶ. ಆದಾಗ್ಯೂ, ಭಾರತದ ಸಮ್ಮಿಳಿತ ಸಂಸ್ಕೃತಿ ಬಲಿಷ್ಠವಾಗಿದೆ. ಈ ಸಮ್ಮಿಳಿತ ಸಂಸ್ಕೃತಿಯ ಲೋಕ ಹೊಕ್ಕರೆ, ಅದ್ಭುತ ಹಾಗೂ ವಿಸ್ಮಯಕಾರಿ ಆಯಾಮಗಳ ಆಳ ಹಾಗೂ ವಿಸ್ತಾರಗಳ ಪರಿಚಯ ನಮಗಾಗುವುದು.

ಅನೇಕ ಬಾಹ್ಯ ಪ್ರಭಾವಗಳು ನಮ್ಮ ಸಮಾಜವನ್ನು ರೂಪಿಸಿವೆ. ಇದರ ಹಲವು ದೃಷ್ಟಾಂತಗಳು ನಮ್ಮ ಚರಿತ್ರೆಯ ಪುಟಗಳಲ್ಲಿವೆ. ಅವು ವ್ಯಾಪಾರ, ವಾಣಿಜ್ಯ, ಜ್ಞಾನ, ಆಕ್ರಮಣ, ಧರ್ಮ, ಮತ, ಸಂಸ್ಕೃತಿ, ವಿಚಾರ, ತಂತ್ರಜ್ಞಾನ ಮುಂತಾದವುಗಳ ರೂಪದಲ್ಲಿ ಆಗಿವೆ. ಇವುಗಳಿಗೆ ಸಂಬಂಧಿಸಿದ ಪ್ರಕ್ರಿಯೆಗಳು ಸಂಕೀರ್ಣ. ಸಮ್ಮಿಳಿತ ಸಂಸ್ಕೃತಿಯ ಇತಿಹಾಸ ತೀರ ಪುರಾತನವಾದುದು. ಕೆಲವು ವಿದ್ವಾಂಸರ ಪ್ರಕಾರ ಅದು ದ್ರಾವಿಡರು ಹಾಗೂ ಇತರ ದೇಶೀಯ ಜನರು ವಾಸಿಸುತ್ತಿದ್ದ ಕಾಲಕ್ಕೆ ಹೋಗುತ್ತದೆ. ಮೊದಲು ಭಾರತಕ್ಕೆ ಬಂದವರು ಆರ್ಯರು. ಶಕರು, ಯವನರು, ಕುಶಾನರು, ಬ್ಯಾಕ್ಟ್ರಿಯನ್ನರು, ಸಿಥಿಯನ್ನರು, ಹೂಣರು ಹಾಗೂ ಇತರರು ಹಿಂಬಾಲಿಸಿದರು. ಮಧ್ಯ ಯುಗದಲ್ಲಿ ಉಜ್‌ಬೇಕರು, ತುರ್ಕಮಾನರು, ತಾಜಿಕರು, ಇರಾನಿಗಳು, ಟುರಾನಿಗಳು, ಆಫ್ಘಾನರು ಹಾಗೂ ಪಠಾಣರು ದಂಡೆತ್ತಿ ಬಂದರು. ಸಹಜವಾಗಿ ಆಕ್ರಮಣಕಾರರ ಹಾಗೂ ಸ್ಥಳೀಯರ ನಡುವೆ ಸಂಘರ್ಷಗಳಾದವು. ಸಂಸ್ಕೃತಿಯ ಕ್ಷೇತ್ರದಲ್ಲಿ ಅನೇಕ ಬಗೆಯ ವಿನಿಮಯಗಳು ಜರುಗಿದವು. ಇವು 'ಸಾಂಸ್ಕೃತಿಕ ಪಚನ' (cultural assimilation) ಹಾಗೂ ಸಂಕ್ಷೇಪಣೆಗೆ (synthesis) ಎಡೆಮಾಡಿಕೊಟ್ಟವು. ವಿಭಿನ್ನ ಸಂಸ್ಕೃತಿಗಳ ಸಮ್ಮಿಲನದ ಪ್ರಕ್ರಿಯೆಗಳು ಸುಗಮವಾಗಿರಲಿಲ್ಲ. ಅದು ಅನೇಕ ವಿಘ್ನಗಳನ್ನು ಎದುರಿಸಬೇಕಾಯಿತು.

ಈ ಸಮ್ಮಿಳಿತ ಸಂಸ್ಕೃತಿ ೧೨ನೇ ಮತ್ತು ೧೬ನೇ ಶತಮಾನಗಳ ನಡುವಿನ ಅವಧಿಯಲ್ಲಿ ಘನೀಭವಿಸಿತೆಂದು ಅನೇಕ ಪ್ರಾಜ್ಞರ ಅಭಿಮತ. ಆ ಕಾಲದಲ್ಲಿ ಭಾರತೀಯ, ಇರಾನಿ ಹಾಗೂ ಅರೇಬಿಕ್





ಪರಂಪರೆಗಳ ಸಂಗಮವಾಯಿತು. ಅವು ಕ್ರಮವಾಗಿ ಹಿಂದೂ, ಜೊರಾತುಷ್ಟ್ರ ಹಾಗೂ ಇಸ್ಲಾಂ ಧರ್ಮ ಹಾಗೂ ತತ್ವಶಾಸ್ತ್ರಗಳನ್ನು ಪ್ರತಿನಿಧಿಸಿದ್ದವು.



ಈ ಸಮ್ಮಿಳಿತ ಸಂಸ್ಕೃತಿಯ ಕೆಲವು ಪ್ರತೀಕಗಳತ್ತ ಗಮನ ಹರಿಸಿದರೆ, ನಮಗೆ ಹಲವು ಒಳನೋಟಗಳು ಸಿಗುತ್ತವೆ. ಹಾಗೂ ಇಸ್ಲಾಂ ಧರ್ಮಗಳ ಮಿಲನದಿಂದ ಉದಯಿಸಿತು ಸೂಫಿ ತತ್ವ. ಈ ಎರಡು ಕೋಮಿನವರ ಸಾಮಾನ್ಯ ಜನರನ್ನು ಬೆಸೆಯುವ ಕ್ರಿಯೆಯಲ್ಲಿ ಸೂಫಿ ಸಂತರು, ಅನುಭಾವಿಗಳು ಹಾಗೂ ಕವಿಗಳ ಪಾತ್ರ ಮಹತ್ವಪೂರ್ಣದ್ದಾಗಿತ್ತು. ಅವರನ್ನು ಜನರು ಗೌರವಾದರಗಳಿಂದ ಕಾಣುತ್ತಿದ್ದರು. ಕಬೀರ್, ಶೇಖ್ ಸಲೀಂ ಚಿಸ್ತಿ, ಹಜ಼ರತ್ ಬಾಬಾ ಫರೀದ್ ಗಂಜ್-ಶಕ್ಕರ್, ಹಜ಼ರತ್ ನಿಜಾಮುದ್ದೀನ್ ಔಲಿಯ ಮುಂತಾದ ಸೂಫಿ ಸಂತರು ಆ ಕಾಲದಲ್ಲಿ ಜೀವಿಸಿದ್ದರು. ಭಕ್ತಿ ಚಳುವಳಿಯೂ ಜನಮಾನಸದಲ್ಲಿ ಸ್ಥಾನ ಪಡೆಯುವುದರಲ್ಲಿ ಸಫಲವಾಯಿತು. ಸಮಾಜದಲ್ಲಿ ಆಗ ಚಾಲ್ತಿಯಲ್ಲಿದ್ದ ಅನೇಕ ಅನಿಷ್ಟ ಆಚಾರಗಳು, ಸಂಪ್ರದಾಯಗಳು, ಹಾಗೂ ನಂಬಿಕೆಗಳನ್ನು ಪ್ರಶ್ನಿಸಿದ ಹಿರಿಮೆ ಅದಕ್ಕಿತ್ತು. ಚೈತನ್ಯ ಮಹಾಪ್ರಭು ಹಾಗೂ ಇತರ ವೈಷ್ಣವ ಸಂತ-ಕವಿಗಳು ಅವರ ಕಾಲದ ಮುಸಲ್ಮಾನ ಬರಹಗಾರರ ಮೇಲೆ ಗಣನೀಯ ಪ್ರಭಾವ ಬೀರಿದ್ದರು. ಮೊಗಲ್ ಬಾದಶಹರಲ್ಲೇ ಅಪ್ರತಿಮನಾಗಿದ್ದ ಅಕ್ಬರ್ 'ದಿನ್-ಎ-ಇಲಾಹಿ' ಎಂಬ ಹೊಸ ಧರ್ಮವನ್ನೇ ಸ್ಥಾಪಿಸಿದ. ಇದಕ್ಕೆ ಹಿಂದೂ ಹಾಗೂ ಇಸ್ಲಾಂ ಧರ್ಮಗಳ ಉದಾರ ಮೌಲ್ಯಗಳು ಆಧಾರವಾಗಿದ್ದವು. ಆದರೆ ಅದು ಅಲ್ಪ ಸಮಯದಲ್ಲೇ ಕೊನೆಯುಸಿರೆಳೆಯಿತು. ಹೀಗಾದರೂ, ಆ ಕಾಲಘಟ್ಟದಲ್ಲಿ ಅಕ್ಬರನದು ದಿಟ್ಟ ಪ್ರಯತ್ನವಾಗಿತ್ತು.

ದಕ್ಷಿಣ ಭಾರತದಲ್ಲಿ ಬಿಜಾಪುರದ ಆದಿಲ್‌ಶಾಹಿ ಸುಲ್ತಾನರ ಆಳ್ವಿಕೆಯಲ್ಲಿ ಮತಾಂಧತೆ ಮೂಗು ತೂರಿಸಿದ್ದರ ಬಗ್ಗೆ ಉಲ್ಲೇಖಗಳಿಲ್ಲ. ಅವರ ಆಸ್ಥಾನಗಳಲ್ಲಿ ಅನೇಕ ಹಿಂದೂಗಳು ಉನ್ನತ ಹುದ್ದೆಗಳಲ್ಲಿದ್ದರು. ಎರಡನೇ ಇಬ್ರಾಹಿಂ ಅದಿಲ್ ಶಹನನ್ನು 'ಜಗದ್ಗುರು' ಎಂದೇ ಜನರು ಕರೆಯುತ್ತಿದ್ದರು. ಅವನು ಕಲೆ, ವಾಸ್ತುಶಿಲ್ಪ, ಸಂಗೀತ, ಸಂಸ್ಕೃತಿಯ ಆರಾಧಕನಾಗಿದ್ದನು. ಅವನು ರಚಿಸಿದ 'ಕಿತಾಬ್-ಎ-ಜೌರಸ್' ಎಂಬ ಸಂಗೀತ ಕುರಿತ ಗ್ರಂಥದಲ್ಲಿ ಗಣಪತಿ, ಸರಸ್ವತಿಯರ ಸ್ತುತಿಗಳಿವೆ.

ಸಾಹಿತ್ಯದಲ್ಲಿ ಸಮ್ಮಿಳಿತ ಸಂಸ್ಕೃತಿಯ ಅನೇಕ ಉದಾತ್ತ ಉದಾಹರಣೆಗಳಿವೆ. ಅವಧಿ ಭಾಷೆಯ ಪ್ರಥಮ ಮಹಾಕೃತಿ ಬರೆದದ್ದು ಮಾಲೀಕ್ ಮೊಹಮ್ಮದ್ ಜೈಸಿ. ಈ ಭಾಷೆಯಲ್ಲೇ ತುಲಸಿದಾಸ ರಾಮಾಯಣ ರಚಿಸಿದ್ದು. ರತನ್ ಸೇನ್ ಮತ್ತು ಪದ್ಮಾವತಿ ನಡುವಿನ ಪ್ರೇಮ ಕಥೆಯೇ ಮಾಲೀಕ್‌ನ ಕೃತಿಯ ವಸ್ತು. ಇದರಲ್ಲಿ ಕೃಷ್ಣ ಮತ್ತು ಅರ್ಜುನರ ಪ್ರತಿಮಾಭಿವ್ಯಕ್ತಿ ಹಾಗೂ ಅನುಭಾವಿ ವಿಚಾರಗಳು ಅಡಕವಾಗಿವೆ. ತುಲಸೀದಾಸ್ ಮತ್ತು ಮುಸಲ್ಮಾನ ಕವಿ ಅಬ್ದುಲ್ ರಹೀಂ ಖಾನೇಖಾನನ ಮಧ್ಯೆ ಪತ್ರ ಸಂಪರ್ಕವಿತ್ತು. ಇವರೀರ್ವರು ಪರಸ್ಪರ ಪ್ರಭಾವಿತರಾಗಿದ್ದರು. ಆ ಕಾಲದ ಭಕ್ತಿ ವಚನಗಳಲ್ಲಿ ಎತ್ತರವಾದ ಸ್ಥಾನವನ್ನಲಂಕರಿಸಿದ್ದು ರಾಮನನ್ನು ಶ್ಲಾಘಿಸಿದ ಅಬ್ದುಲ್ ರಹೀಂನ ಸಂಸ್ಕೃತ ರಚನೆಗಳು. ಅಲಿ ವಜೀಂನಂಥ ಪರ್ಶಿಯನ್ ಕವಿ ವಾರಾಣಸಿಯನ್ನು ಅತೀವವಾಗಿ ಪ್ರೀತಿಸುತ್ತಿದ್ದ. ಅವನು ಅಲ್ಲೇ ವಾಸ್ತವ್ಯ ಮಾಡಿ, ಸಮ್ಮಿಶ್ರ ಸಂಸ್ಕೃತಿಯ ಬಗ್ಗೆ ಅಮೋಘವಾಗಿ ಬರೆದ. ಬ್ರಜ್ ಭಾಷೆಯಲ್ಲಿ ಉತ್ತಮ ಭಕ್ತಿ ಶ್ಲೋಕಗಳನ್ನು ಸೈಯದ್ ಇಬ್ರಾಹಿಂ ರಸ್‌ಖಾನ್ ರಚಿಸಿದ್ದಾನೆ. ಇಂದಿಗೂ ಜಗನ್ನಾಥನನ್ನು ಸ್ವಾಗತಿಸಲು ಒರಿಯಾ ಜನರು ಮುಸಲ್ಮಾನ ಕವಿ ಸಾಲ್‌ಬೇಗ್‌ನ ಭಾವಗೀತೆಗಳನ್ನು ಹಾಡುತ್ತಾರೆ. ಕನ್ನಡದ ಪ್ರಥಮ ಮುಸಲ್ಮಾನ ಕವಿ ಶಿಶುನಾಳ ಷರೀಫ ಸಾಹೇಬರು ಸೂಫಿ ಪಂಥದಿಂದ ಆಕರ್ಷಿತರಾಗಿದ್ದರು. ಅವರಿಗೆ ಗುರು ಗೋವಿಂದ ಭಟ್ಟರ ಮಾರ್ಗದರ್ಶನವಿತ್ತು. ಕರ್ನಾಟಕದ ಸುಗಮ ಸಂಗೀತದ ಕಛೇರಿಗಳಲ್ಲಿ ಷರೀಫರ ರಚನೆಗಳು ಜನಜನಿತವಾಗಿವೆ. ಕವಿ ಇಕ್ಬಾಲ್ ರಾಮನನ್ನು 'ಹಿಂದೂಸ್ಥಾನದ ಇಮಾಮ್' ಎಂದು ವರ್ಣಿಸಿದ್ದಾನೆ.

ಸಂಗೀತ ಕ್ಷೇತ್ರದಲ್ಲೂ ವಿಪುಲ ದೃಷ್ಟಾಂತಗಳಿವೆ. ಹಿಂದೂಸ್ಥಾನಿ ಸಂಗೀತ ದೇಶೀಯ ಮತ್ತು ಇಸ್ಲಾಂ ಸಂಸ್ಕೃತಿಗಳ ಮಿಲನದ ಉತ್ಪನ್ನ. ತಾನಸೇನ್‌ನ ಕಾಲದಿಂದಲೂ ಹಿಂದೂಸ್ಥಾನಿ ಸಂಗೀತದಲ್ಲಿ ಶಿವ, ಕೃಷ್ಣ ಮತ್ತು ಗಣಪತಿಯ ಸ್ತುತಿಗಳಿವೆ. ಆಧುನಿಕ ಕಾಲದ ಮಹಾನ್ ಮುಸಲ್ಮಾನ ಗಾಯಕರಾದ ನೌಬತ್ ಖಾನ್, ಫಯ್ಯಾಜ್ ಅಹಮ್ಮದ್, ಗುಲಾಂ ರಸೂಲ್ ಖಾನ್, ಗೌಹರ್ ಬಾಯಿ, ವಿಲಾಯತ್ ಖಾನ್, ಅಮೆನ್ ಅಲಿ, ಬಡೇ ಗುಲಾಂ ಅಲಿ ಖಾನ್ ಮುಂತಾದವರು ತಮ್ಮ ಪೂರ್ವಜರ ಉದಾರ ಪರಂಪರೆಯನ್ನು ಪಾಲಿಸಿದರು. ಅವರ ಗಾಯನದಲ್ಲಿ ದೇಶೀಯ ಸಂಸ್ಕೃತಿಯನ್ನು ಬಿಂಬಿಸುವ ಹಾಡುಗಳಿರುತ್ತಿದ್ದವು. ಪ್ರಸಿದ್ಧ ಸಿತಾರ್ ವಾದಕ ಪಂಡಿತ ರವಿಶಂಕರ್‌ರ ಮಾವ ಅಲ್ಲಾವುದ್ದೀನ್ ಖಾನ್‌ರ ಮೈಹಾರದ ಮನೆಯಲ್ಲಿ ಸರಸ್ವತಿಯ ಮೂರ್ತಿಗಳಿದ್ದವು. ಅವರು ಮನೆಯ ಹತ್ತಿರದಲ್ಲಿದ್ದ ಶಾರದಾಂಬೆಯ ದೇಗುಲಕ್ಕೆ ಆಗಾಗ್ಗೆ ಭೇಟಿ ನೀಡುತ್ತಿದ್ದರು. ಹಿಂದೂಸ್ಥಾನಿ ಸಂಗೀತದ ದಿಗ್ಗಜರಾಗಿದ್ದ ದಿ॥ ಮಲ್ಲಿಕಾರ್ಜುನ ಮನ್ಸೂರರ ಧಾರವಾಡದ ಮನೆಯ ಗೋಡೆಯಲ್ಲಿ ಅವರ ಗುರು ಅಲ್ಲಾದಿಯ ಖಾನ್‌ರ ಭಾವಚಿತ್ರವಿರುವುದನ್ನು ಮತ್ತು 'ಗಾಯನಗಂಗೆ' ಎಂದೇ ಹೆಸರುವಾಸಿಯಾಗಿರುವ ಗಂಗೂಬಾಯಿ ಹಾನಗಲ್‌ರ ಮನೆಯ ಪೂಜಾಸ್ಥಳದ ಪಕ್ಕದಲ್ಲೇ ತೂಗುಹಾಕಲಾಗಿರುವ ಅಬ್ದುಲ್ ಕರೀಂ ಖಾನ್‌ರ ಚಿತ್ರದ ಬಗ್ಗೆ ಸಮ್ಮಿಳಿತ ಸಂಸ್ಕೃತಿಯ ವಿಶ್ಲೇಷಕರು ಗಮನ ಸೆಳೆಯುತ್ತಾರೆ.

ವಾಸ್ತುಶಿಲ್ಪದ ಕ್ಷೇತ್ರದಲ್ಲೂ ಹಿಂದೂ ಮತ್ತು ಇಸ್ಲಾಂ ಶೈಲಿಯ ಕಟ್ಟಡ ರಚನಾ ಶೈಲಿ ಮೇಳೈಸಿರುವುದನ್ನು ಕಾಣಬಹುದು. ಭಾರತದಾದ್ಯಂತ ಅನೇಕ ಇಮಾರತುಗಳು ಸಮ್ಮಿಳಿತ ಸಂಸ್ಕೃತಿಯ ಹೆಗ್ಗುರುತುಗಳಾಗಿ ಭಾವೈಕ್ಯತಾ ಸಂದೇಶವನ್ನು ಸಾರುತ್ತಿವೆ. ರಾಜಾಸ್ಥಾನದ ಗಂಗಾನಗರದ ಗೋಗಾ ಮೆಹ್ರಿಯಲ್ಲಿ ಒಂದು ದೇಗುಲವಿದೆ. ಅದು ಮಸೀದಿಯೂ ಆಗಿರುವುದು ಕೌತುಕದ ಸಂಗತಿ. ದೇಗುಲದ ದ್ವಾರದಲ್ಲಿ ಅಲ್ಲಾಹುವನ್ನು ಸ್ತುತಿಸುವ ಪದಗಳಿವೆ. ಮಸೀದಿಯ ಒಳಗಡೆಯಿದೆ ಒಂದು ವಿಗ್ರಹ! ಅಹಮದಾಬಾದಿನಿಂದ ಸುಮಾರು ೧೮ ಕಿ.ಮೀ. ದೂರದಲ್ಲಿರುವ ಪಿರಾನದಲ್ಲಿ ಇಮಾಮ್‌ಶಹ ಬಾಬಾರ ಪೂಜಾ ಸ್ಥಳವಿದೆ. ಇದನ್ನು ನೋಡಿಕೊಳ್ಳುತ್ತಿರುವವರು ಹಿಂದೂ ಪಟೇಲರು.

ಇವಲ್ಲದೆ, ಸಮ್ಮಿಳಿತ ಸಂಸ್ಕೃತಿಯನ್ನು ಸಂಕೇತಿಸುವ ಅನೇಕ ಪರಂಪರೆಗಳು ಜೀವಂತವಾಗಿವೆ. ರಾಜಾಸ್ಥಾನದ ಜೈಸಲ್ಮೇರ್ ಮರಳುಗಾಡಿನ ಸುಂದರ ನಗರ. ಇಲ್ಲಿಯ ಆಸುಪಾಸು ಪ್ರದೇಶಗಳಲ್ಲಿರುವ ಮಂಗನೀಯರ್ ಹಾಡುಗಾರರು ಮುಸಲ್ಮಾನರು. ಇಂದಿಗೂ, ಅವರು ತಮ್ಮ ಕಛೇರಿಗಳಲ್ಲಿ ಮೀರಾಬಾಯಿ, ಬಲ್ಲೇ ಶಹ, ಶಹ ಅಬ್ದುಲ್ ಲತೀಫ್ ಕುರಿತು ಹಾಡುತ್ತಾರೆ. ಅರ್ಜುನ ಮತ್ತು ಭೀಮನ ವಂಶಾವಳಿ ಯವರೆಂದು ಭರತಪುರದ ಮುಸಲ್ಮಾನರಾದ ಮೇವರು ತಮ್ಮನ್ನು ಗುರುತಿಸಿ ಕೊಳ್ಳುತ್ತಾರೆ. ಪ್ರವಾದಿ ಮೊಹಮ್ಮದ್‌ನ ಅಳಿಯ ಅಲಿಯ ಬಗ್ಗೆ ಹಾಡುವಾಗ ಅಲಿ, ಅಲ್ವಾರ್ ಹಾಗೂ ಭರತ್‌ಪುರದ ಜಾನಪದ ನಾಯಕನಾಗಿ ಹೊರಹೊಮ್ಮುತ್ತಾನೆ.

ಕೇರಳದ ಶಬರಿಮಲೈನ ಅಯ್ಯಪ್ಪ ದೇವಸ್ಥಾನಕ್ಕೆ ಅಧಿಕ ಸಂಖ್ಯೆಯಲ್ಲಿ ಭಕ್ತಾದಿಗಳು ಬರುತ್ತಾರೆ. ದೇಗುಲಕ್ಕೆ ಹೋಗುವ ಮುನ್ನ ಅವರಲ್ಲಿ ಹಲವರು ವಾವರ್‌ಸಾಮಿ ಎಂಬ ಮುಸಲ್ಮಾನ ಸಂತನ ಪವಿತ್ರ ಮಂದಿರಕ್ಕೆ ಭೇಟಿ ನೀಡುತ್ತಾರೆ. ಇಲ್ಲಿ ಭಕ್ತರ ಹಣೆಯ ಮೇಲೆ ವಿಭೂತಿಯನ್ನು ಮುಸಲ್ಮಾನ ಮೇಲ್ವಿಚಾರಕ ಇಡುತ್ತಾನೆ. ಕಾಶ್ಮೀರದ ಅಮರನಾಥ ಕ್ಷೇತ್ರಕ್ಕೆ ಹೋಗಬೇಕಾದರೆ ದುರ್ಗಮ ಹಾದಿಗಳ ಮೂಲಕ ಸಾಗಬೇಕು. ದಾರಿಯಲ್ಲಿ ಮುಸಲ್ಮಾನರು ಬಹುಸಂಖ್ಯಾತರಿರುವ ಹಳ್ಳಿಗಳ ಮೂಲಕ

---

*ಸಮ್ಮಿಳಿತ ಸಂಸ್ಕೃತಿಯೇ ನಮ್ಮ ರಾಷ್ಟ್ರದ ಭದ್ರಬುನಾದಿ. ನಮ್ಮ ಶಕ್ತಿಯಿರುವುದು ಇದರಲ್ಲೇ. ಇದರಿಂದಲೇ ನಮ್ಮ ಐಕ್ಯತೆ ಉಳಿದಿರುವುದು ಹಾಗೂ ಆಧುನಿಕ ಭಾರತ ಒಂದು ಮಾದರಿ ರಾಷ್ಟ್ರವೆನಿಸಿರುವುದು. ವಿಶ್ವದಲ್ಲಿ ಹಲವು ದೇಶಗಳು ಛಿದ್ರವಾಗಿವೆ. ಆದರೆ ಭಾರತದ ತಳಪಾಯ ಗಟ್ಟಿಯಾಗಿದೆ. ಸ್ವಾತಂತ್ರ್ಯ ಗಳಿಸಿದ ಅವಧಿಯಲ್ಲಿ ವಿಭಜನೆಯಾದದ್ದು ಒಂದು ದುರ್ಘಟನೆ ನಿಜ. ಇದು ಘಟಿಸಿದ್ದು ವಿಧ್ವಂಸಕ, ಕರಾಳ ಕೋಮುವಾದೀ ಶಕ್ತಿಗಳಿಂದ ಎಂಬುದು ಗಮನಾರ್ಹ ಅಂಶ. ಆದಾಗ್ಯೂ, ಭಾರತದ ಸಮ್ಮಿಳಿತ ಸಂಸ್ಕೃತಿ ಬಲಿಷ್ಠವಾಗಿದೆ. ಈ ಸಮ್ಮಿಳಿತ ಸಂಸ್ಕೃತಿಯ ಲೋಕ ಹೊಕ್ಕರೆ, ಅದ್ಭುತ ಹಾಗೂ ವಿಸ್ಮಯಕಾರಿ ಆಯಾಮಗಳ ಆಳ ಹಾಗೂ ವಿಸ್ತಾರಗಳ ಪರಿಚಯ ನಮಗಾಗುವುದು.*

ಹಾದುಹೋಗಬೇಕು. ಅವರು ಯಾತ್ರಿಕರಿಗೆ ಆತಿಥ್ಯವನ್ನು ನೀಡುತ್ತಾರೆ. ಶತಮಾನಗಳ ಹಿಂದೆ, ಅಮರನಾಥನ ಗುಹೆಯನ್ನು ಪತ್ತೆ ಮಾಡಿದ್ದು ಅದಂ ಮಾಲೀಕ್ ಎಂಬ ಮುಸಲ್ಮಾನ. ಈಗಲೂ ಅವನ ಕುಟುಂಬಕ್ಕೆ ಈ ಕ್ಷೇತ್ರದ ಆದಾಯದ ಮೂರನೇ ಒಂದು ಭಾಗ ಸಂದಾಯವಾಗುತ್ತಿದೆ.

ಕರ್ನಾಟಕದಲ್ಲೂ ಹಿಂದೂ-ಇಸ್ಲಾಂ ಭಾವೈಕ್ಯತೆಯನ್ನು ಸಾರುವ ಅನೇಕ ಕ್ಷೇತ್ರಗಳಿವೆ. ಶಿರಹಟ್ಟಿಯ ಫಕೀರ ಸ್ವಾಮಿ ಹಾಗೂ ಬಾಬಾಬುಡನ್ ಗಿರಿ ಕ್ಷೇತ್ರಗಳು ಹಾಗೂ ನಮ್ಮ ರಾಜ್ಯಾದ್ಯಂತ ಇರುವ ಅನೇಕ ದರ್ಗಾಗಳಿಗೆ ಮುಸಲ್ಮಾನರೊಡನೆ ಅಧಿಕ ಸಂಖ್ಯೆಯ ಹಿಂದೂಗಳು ನಡೆದುಕೊಳ್ಳುತ್ತಾರೆ. ಹಂಪಿ, ಕೊಟ್ಟೂರು, ಕೆರಗೋಡು, ಕೊಪ್ಪಳ, ಗುಲ್ಬರ್ಗಾದ ಜಾತ್ರೆಗಳಲ್ಲಿ ಮುದ್ಗಲ್‌ನ ಮೊಹರಂ ಹಬ್ಬದಲ್ಲಿ ಹಾಗೂ ಇತರ ಅನೇಕ ತಾಣಗಳಲ್ಲಿ ಎಲ್ಲಾ ಕೋಮಿನ ಜನರು ಭಾಗವಹಿಸುತ್ತಾರೆ. ಇವಲ್ಲದೆ, ಹೆಚ್ಚು ಪ್ರಚಾರದಲ್ಲಿರದ ಅನೇಕ ಸಣ್ಣ ಸ್ಥಳಗಳೂ ಇವೆ. ಅವುಗಳಲ್ಲಿ ಒಂದು – ನೇತ್ರಾಣಿ ಗುಡ್ಡ. ಉತ್ತರ ಕನ್ನಡದ ಮುರುಡೇಶ್ವರ ಒಂದು ಪ್ರಸಿದ್ಧ ಯಾತ್ರಾಸ್ಥಳ. ಇದರ ಸಮೀಪದಲ್ಲಿದೆ ನೇತ್ರಾಣಿ ಗುಡ್ಡ. ಇದೊಂದು ಪ್ರೇಕ್ಷಣೀಯ ಸ್ಥಳವೂ ಹೌದು. ಇದನ್ನು ತಲುಪಲು ದೋಣಿಯಾನದ ಮೂಲಕವೇ ಸಾಧ್ಯ. ಇಲ್ಲಿ ಹಿಂದೂ, ಕಿರಿಸ್ತಾನ ಹಾಗೂ ಮುಸಲ್ಮಾನ ಧರ್ಮಗಳಿಗೆ ಸೇರಿದ ಮೀನುಗಾರರು ಹೊನ್ನಾವರ, ಉಡುಪಿ ಮುಂತಾದ ಕಡಲ ತೀರದ ಊರುಗಳಿಂದ ಪೂಜೆ ಮಾಡಲು ಬರುತ್ತಾರೆ. ಹಿಂದೂಗಳು ಜಟಕೇಶ್ವರನಿಗೆ ಪೂಜೆ ಸಲ್ಲಿಸಿದರೆ, ಮುಸಲ್ಮಾನರು ದರ್ಗಾಕ್ಕೆ ಭೇಟಿ ನೀಡುತ್ತಾರೆ. ಕಿರಿಸ್ತಾನರು ಅಲ್ಲಿರುವ ಪವಿತ್ರ ಶಿಲುಬೆಗೆ ನಮಿಸುತ್ತಾರೆ.

ಇನ್ನು, ಭಾರತದಲ್ಲಿ ಜರುಗಿರುವ, ಜರುಗುತ್ತಿರುವ ವಿವಿಧ ಹೋರಾಟಗಳತ್ತ ಗಮನಹರಿಸಿದರೆ, ಅಲ್ಲೂ ಅನೇಕ ಉಜ್ವಲ ಉದಾಹರಣೆಗಳಿವೆ. ೧೯ನೇ ಶತಮಾನದ ಸಾಮಾಜಿಕ ಸುಧಾರಣಾವಾದಿ ರಾಜಾರಾಮ್ ಮೋಹನ್ ರಾಯ್‌ಗೆ ಹಿಂದೂ ಹಾಗೂ ಇಸ್ಲಾಂನ ತತ್ವಶಾಸ್ತ್ರಗಳು ಹಾಗೂ ಧರ್ಮಗ್ರಂಥಗಳ ಬಗ್ಗೆ ಅಪಾರ ಪಾಂಡಿತ್ಯವಿತ್ತು. ಅಲ್ಲದೆ, ಅವರು ಕ್ರೈಸ್ತ ಧರ್ಮದ ವಾತ್ಸಲ್ಯ ಪದ್ಧತಿ ಹಾಗೂ ಐರೋಪ್ಯ ವಿಚಾರವಾದದಿಂದ ಪ್ರಭಾವಿತರಾಗಿದ್ದರು. ನಮ್ಮ ಸ್ವಾತಂತ್ರ್ಯ ಸಂಗ್ರಾಮದಲ್ಲೂ ಎಲ್ಲಾ ಕೋಮುಗಳ ಜನರು ಭಾಗವಹಿಸಿದ್ದು ತಿಳಿದ ವಿಚಾರವೇ.

ನಮ್ಮ ಸಂಸ್ಕೃತಿಗೆ ಹೆಚ್ಚಿನ ಕೊಡುಗೆಗಳನ್ನು ನೀಡಿದ್ದಾರೆ ಯೂರೋಪಿಯನ್ನರು; ಅದರಲ್ಲೂ ಪ್ರಮುಖವಾಗಿ ಆಂಗ್ಲರು. ಅವರ ಪ್ರಭಾವಗಳು ನಮ್ಮ ರಾಜಕೀಯ, ಸಾಮಾಜಿಕ ಕ್ಷೇತ್ರಗಳು, ಕಲೆ, ಸಾಹಿತ್ಯ, ಕೈಗಾರಿಕೋದ್ಯಮ ಮುಂತಾದ ರಂಗಗಳ ಮೇಲೆ ಆಗಿರುವುದನ್ನು ಕಾಣಬಹುದು. ಈ ನಿಟ್ಟಿನಲ್ಲಿ ಗಾಂಧೀಜಿಯ ಮಾತುಗಳು ಮನನೀಯ – ''ನನ್ನ ಮನೆಯನ್ನು ಎಲ್ಲಾ ದಿಕ್ಕಿನಲ್ಲೂ ಗೋಡೆಯಿಂದ ಮುಚ್ಚಿ, ಕಿಟಕಿ ಬಾಗಿಲುಗಳ ಕದವನ್ನೂ ಇಕ್ಕಿ ಭದ್ರವಾಗಿಡಲು ನಾನು ಅಪೇಕ್ಷಿಸುವುದಿಲ್ಲ. ಎಲ್ಲಾ ರಾಷ್ಟ್ರಗಳ ಸಂಸ್ಕೃತಿಯ ಗಾಳಿ ನನ್ನ ಮನೆಗೆ ಮುಕ್ತವಾಗಿ ಬೀಸುವುದನ್ನು ನಾನು ಸ್ವಾಗತಿಸುತ್ತೇನೆ.''

ಆದರೆ ಕಳೆದ ಕೆಲವು ದಶಕಗಳಿಂದ ನಮ್ಮ ರಾಷ್ಟ್ರದ ಸಮ್ಮಿಳಿತ ಸಂಸ್ಕೃತಿಗೆ ಸಂಚಕಾರ ಒದಗಿರುವುದು ಆತಂಕಕಾರಿ ಬೆಳವಣಿಗೆ. ನಮ್ಮ ಬಹುಮುಖೀ ಸಂಸ್ಕೃತಿಯ ಅಡಿಪಾಯಕ್ಕೆ ಪ್ರಹಾರಗಳನ್ನು ಮಾಡುತ್ತಿವೆ ಕೋಮುವಾದಿ ಹಾಗೂ ಮೂಲಭೂತವಾದಿ ಶಕ್ತಿಗಳು. ಇವು ಮಾಡುತ್ತಿರುವುದು ವಿಚ್ಛಿದ್ರಕಾರಿ ಕಾರ್ಯಗಳು. ಇತಿಹಾಸವನ್ನು ಕರಾರುವಾಕ್ಕಾಗಿ ವಿಶ್ಲೇಷಿಸದೆ, ತಮ್ಮ ಹಿತಾಸಕ್ತಿಗಳಿಗಾಗಿ ಅದನ್ನು ತಿರುಚಿ, ಕೋಮು ವೈಷಮ್ಯವನ್ನು ಹಬ್ಬುತ್ತಿದ್ದಾರೆ, ಜನರ ನಡುವೆ ಗೋಡೆಗಳನ್ನು ಎಬ್ಬಿಸುತ್ತಿದ್ದಾರೆ. ಅವರಿಗೆ ನಮ್ಮ ಬಹುಮುಖೀ ಪರಂಪರೆಗಳ ಬಗ್ಗೆ ತೀವ್ರ ಅಸಡ್ಡೆ, ದ್ವೇಷ ಹಾಗೂ ತಿರಸ್ಕಾರ. ರಾಜಕೀಯ ಲಾಭ ಪಡೆಯಲು ರಾಜಕಾರಣದಲ್ಲಿ ಧರ್ಮವನ್ನು ಬೆರೆಸುತ್ತಾರೆ. ಅವರ ಕಾರ್ಯಸೂಚಿಯಲ್ಲಿ ಏಕ ಸಂಸ್ಕೃತಿ, ಧರ್ಮಕ್ಕೇ ಪ್ರಾಧಾನ್ಯತೆ. ಅವರು ಚರ್ಚೆ, ವಿಚಾರ ವಿನಿಮಯಕ್ಕೆ ಆಸ್ಪದ ನೀಡದೆ ಭಿನ್ನಾಭಿಪ್ರಾಯಗಳ ದನಿಗಳನ್ನು ಹತ್ತಿಕ್ಕುತ್ತಾರೆ.

ಇಂತಹ ಸಮಾಜ-ವಿಭಂಜಕ ಶಕ್ತಿಗಳಿಗೆ ಬೇಕಿರುವುದು ಕೋಮು ಆಧಾರಿತ ಪ್ರಭುತ್ವದ ಸ್ಥಾಪನೆ. ಅಂತಹ ಪ್ರಭುತ್ವವಿರುವ ದೇಶದ ಹೀನ ಸ್ಥಿತಿಯನ್ನು ಅರಿಯಲು ದೂರದ ಉದಾಹರಣೆ ಬೇಕಿಲ್ಲ. ವಿಭಿನ್ನ, ಅನೇಕತೆಯ, ವೈಶಿಷ್ಟ್ಯಪೂರ್ಣ ಸಮ್ಮಿಳಿತ ಸಂಸ್ಕೃತಿಯನ್ನು ಜತನ ಮಾಡುವ ಕಾಳಜಿ ಜನಸಾಮಾನ್ಯರಲ್ಲಿ ಉಳಿಸಲು ಹಾಗೂ ಬೆಳೆಸಲು ಪುರೋ ಗಾಮಿ, ಜಾತ್ಯತೀತ ಶಕ್ತಿಗಳು ಒಂದಾಗಬೇಕು. ಆಗ ಮಾತ್ರ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆಗೆ ಉತ್ತಮ ನಾಳೆಗಳಿರುತ್ತವೆ. *(ಆಧಾರ : ಹಲವು ಮೂಲಗಳು)*

ಮ. ಶ್ರೀ. ಮುರಳಿ ಕೃಷ್ಣ
ನಂ. ೮೮೩/೧೦೧೬ (ಔಟ್ ಹೌಸ್), ೧ನೇ 'ಇ' ಮುಖ್ಯರಸ್ತೆ, ಗಿರಿನಗರ ೨ನೇ ಹಂತ, ಬೆಂಗಳೂರು -೮೫

# ಭಾರತೀಯ ಸಂಶೋಧನಾ ವಿಶ್ವವಿದ್ಯಾಲಯಗಳ ಮುಂದಿರುವ ಪ್ರತೀಕ್ಷೆಗಳು

ಭಾರತದಲ್ಲಿ ಕೆಲವು ''ಪ್ರಧಾನ (ಮೇಜರ್) ವಿಶ್ವವಿದ್ಯಾಲಯಗಳ''ನ್ನು ಸ್ಥಾಪಿಸಬೇಕೆಂಬ ಶಿಕ್ಷಣ ಆಯೋಗ (೧೯೬೪-೬೬)ದ ಶಿಫಾರಸನ್ನು ಭಾರತದ ಕೇಂದ್ರ ಶಿಕ್ಷಣ ಸಚಿವಾಲಯವು ೧೯೭೧ರಲ್ಲಿ ತಿರಸ್ಕರಿಸಿ ಅನೇಕ ತಿದ್ದುಪಾಟುಗಳನ್ನು ಸೇರಿಸಿತು. ಆದರೆ ಅದು ಆಯೋಗದ ಶಿಫಾರಸುಗಳಿಗೆ ತೇಪೆ ಹಾಕಹೋದುದು ಪರಿಸ್ಥಿತಿಯನ್ನೇನೂ ಸುಧಾರಿಸಲಿಲ್ಲ. ಖ್ಯಾತ ಖಭೌತ-ವಿಜ್ಞಾನಿ ಜಯಂತ್ ವಿ. ನಾರ್ಳಿಕರ್ ವರ್ಣಿಸಿರುವಂತೆ ''ನಮ್ಮ ಉನ್ನತ ಶಿಕ್ಷಣ ರಂಗದ ದಿಗಂತದಲ್ಲಿ ನಿಜಕ್ಕೂ ಅಪಾಯಕಾರಿ ಮೋಡಗಳು ಮುಸುಕುತ್ತಿವೆ, ಅವಕಾಶಗಳನ್ನು ನಾಶಗೊಳಿಸುತ್ತಿವೆ.''

**ಭಾ**ರತದಲ್ಲಿ ಕೆಲವು ''ಪ್ರಧಾನ (ಮೇಜರ್) ವಿಶ್ವವಿದ್ಯಾಲಯಗಳ''ನ್ನು ಸ್ಥಾಪಿಸಬೇಕೆಂಬ ಶಿಕ್ಷಣ ಆಯೋಗ (೧೯೬೪-೬೬)ದ ಶಿಫಾರಸನ್ನು ಭಾರತದ ಕೇಂದ್ರ ಶಿಕ್ಷಣ ಸಚಿವಾಲಯವು ೧೯೭೧ರಲ್ಲಿ ತಿರಸ್ಕರಿಸಿ ಅನೇಕ ತಿದ್ದುಪಾಟುಗಳನ್ನು ಸೇರಿಸಿತು. ಆದರೆ ಅದು ಆಯೋಗದ ಶಿಫಾರಸುಗಳಿಗೆ ತೇಪೆ ಹಾಕಹೋದುದು ಪರಿಸ್ಥಿತಿಯನ್ನೇನೂ ಸುಧಾರಿಸಲಿಲ್ಲ. ಖ್ಯಾತ ಖಭೌತ-ವಿಜ್ಞಾನಿ ಜಯಂತ್ ವಿ. ನಾರ್ಳಿಕರ್ ವರ್ಣಿಸಿರುವಂತೆ ''ನಮ್ಮ ಉನ್ನತ ಶಿಕ್ಷಣ ರಂಗದ ದಿಗಂತದಲ್ಲಿ ನಿಜಕ್ಕೂ ಅಪಾಯಕಾರಿ ಮೋಡಗಳು ಮುಸುಕುತ್ತಿವೆ, ಅವಕಾಶಗಳನ್ನು ನಾಶಗೊಳಿಸುತ್ತಿವೆ.''

ಭಾರತದಲ್ಲಿಂದು ೩೨೩ ವಿಶ್ವವಿದ್ಯಾಲಯ-ಸ್ಥಾನಮಾನದ ವಿದ್ಯಾಸಂಸ್ಥೆಗಳಿವೆ. ಇವುಗಳಲ್ಲಿ ೧೭೮ ರಾಜ್ಯ ಹಾಗೂ ೧೮ ಕೇಂದ್ರ ವಿಶ್ವವಿದ್ಯಾಲಯಗಳು, ೧೮ ವೈದ್ಯಕೀಯ ಹಾಗೂ ೪೦ ಕೃಷಿ ವಿಶ್ವವಿದ್ಯಾಲಯಗಳು, ೫೨ 'ಪರಿಗಣಿತ-ವಿಶ್ವವಿದ್ಯಾಲಯಗಳು', ೧೨ ರಾಷ್ಟ್ರೀಯ ಪ್ರಾಮುಖ್ಯತೆಯ ವಿದ್ಯಾಸಂಸ್ಥೆಗಳು ಹಾಗೂ ಐದು ರಾಜ್ಯ ಶಾಸನಸಭಾ ವಿಧಿಯಡಿ ಸ್ಥಾಪಿತವಾದ ವಿದ್ಯಾಸಂಸ್ಥೆಗಳು. ಇವಲ್ಲದೆ ದೇಶದಲ್ಲಿ ೧೩,೧೫೦ ಕಾಲೇಜುಗಳು, ಸುಮಾರು ೯೦೦ ಪಾಲಿಟೆಕ್ನಿಕ್‌ಗಳಿವೆ. ಭಾರತವು ಚೀಣಾ, ಅಮೆರಿಕ ನಂತರ ಜಗತ್ತಿನಲ್ಲೇ ಅತ್ಯಂತ ಹೆಚ್ಚು ಉನ್ನತ ಶೈಕ್ಷಣಿಕ ವ್ಯವಸ್ಥೆಯುಳ್ಳ ಮೂರನೆಯ ರಾಷ್ಟ್ರವಾಗಿದೆ. ಈ ಶೈಕ್ಷಣಿಕ ವ್ಯವಸ್ಥೆಯಲ್ಲಿ ಸುಮಾರು ೪೧೧,೬೦೦ ಅಧ್ಯಾಪಕರು, ಸುಮಾರು ೮,೪೦೦,೦೦೦ ವಿದ್ಯಾರ್ಥಿಗಳು ಇದ್ದಾರೆ. ಈ ವ್ಯವಸ್ಥೆಗೆ ೧೫೦ ವರ್ಷಗಳ ಇತಿಹಾಸವಿದೆ. ಇದು ವಿಜ್ಞಾನ, ಯಂತ್ರಕಲೆ, ಮಾನವಿಕ, ವೈದ್ಯಕೀಯ, ಕಾನೂನು ಇತ್ಯಾದಿ ಕ್ಷೇತ್ರಗಳಲ್ಲಿ ಪ್ರತಿವರ್ಷವೂ ಸಹಸ್ರಾರು ಪದವೀಧರರನ್ನು ಡಾಕ್ಟರೇಟ್‌ಗಳನ್ನು ಸಿದ್ಧಗೊಳಿಸುತ್ತಿದೆ. ಹಾಗಾಗಿ ಭಾರತವಿಂದು ಪದವೀಧರರ ಸಂಖ್ಯೆಯಲ್ಲಿ ಜಗತ್ತಿನಲ್ಲೇ ದ್ವಿತೀಯ ಸ್ಥಾನವನ್ನೂ, ವಿಜ್ಞಾನ ಯಂತ್ರಕಲಾ ತಂತ್ರಜ್ಞಾನ ಸಂಖ್ಯೆಯಲ್ಲಿ ನಾಲ್ಕನೆಯ ಸ್ಥಾನವನ್ನೂ ಪಡೆದಿದೆ.

ವಿಪರ್ಯಾಸವೆಂದರೆ, ಇಷ್ಟೊಂದು ಭಾರಿ ಪ್ರಮಾಣದ ಹಾಗೂ ಅನುಭವೀ ಉನ್ನತ ಶೈಕ್ಷಣಿಕ ವಿದ್ಯಾ ವ್ಯವಸ್ಥೆ ಇದ್ದರೂ ಭಾರತವು ಸಂಶೋಧನಾ ಕ್ಷೇತ್ರದಲ್ಲಿ ಪಾರಮ್ಯತೆಗೆ ಎಷ್ಟು ಮಾತ್ರವೂ ಗಣನೆಗೆ ಬಂದಿಲ್ಲ. ಸಿ. ವಿ. ರಾಮನ್, ಎಚ್. ಖುರಾನಾ ಹಾಗೂ ಎಸ್. ಚಂದ್ರಶೇಖರ್ - ಈ ಮೂವರಷ್ಟೆ ವಿಜ್ಞಾನದಲ್ಲಿ ನೊಬೆಲ್ ಪ್ರಶಸ್ತಿ ಪಡೆದ 'ಭಾರತೀಯರು'. ಅಮರ್ತ್ಯ ಸೇನ್‌ರಷ್ಟೇ ಅರ್ಥಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದವರು. ಜೆ. ಸಿ. ಬೋಸ್, ಎಸ್. ರಾಮಾನುಜನ್, ಎಸ್. ಎನ್. ಬೋಸ್, ಹೋಮಿ ಭಾಭಾ, ಎಸ್. ಎನ್. ಭಟ್ನಾಗರ್, ಪಿ. ಸಿ. ಮಹಲನೋಬಿಸ್, ಪಿ. ಸಿ. ರಾಯ್, ವಿಕ್ರಮ್ ಸಾರಾಭಾಯ್, ಎಂ. ಎನ್. ಸಾಹಾ ಮುಂತಾದ ಖ್ಯಾತ ವಿಜ್ಞಾನಿಗಳ ಸಂಖ್ಯೆ ಬೆರಳೆಣಿಕೆಯಷ್ಟು ಅಷ್ಟೆ. ಕೇವಲ ೪೬ ಭಾರತೀಯರು – ಮೂವರು ಎಂಜಿನಿಯರ್‌ಗಳು, ೪೩ ವಿಜ್ಞಾನಿಗಳು – ರಾಯಲ್ ಸೊಸೈಟಿಯ ಫೆಲೋ ಆಗಿದ್ದಾರೆ. ಸಮಕಾಲೀನ ಖ್ಯಾತ ಭಾರತೀಯ ವಿಜ್ಞಾನಿಗಳಲ್ಲಿ ಹೆಚ್ಚಿನ ಮಂದಿ ಹೊರದೇಶಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಭಾರತದಲ್ಲಿ ಪ್ರಕಟವಾಗುತ್ತಿರುವ ವೈಜ್ಞಾನಿಕ ಪತ್ರಿಕೆಗಳು ಅಷ್ಟಾಗಿ ಅಂತಾರಾಷ್ಟ್ರೀಯ ಗುಣ ಪಡೆದಿಲ್ಲ. ೧೯೯೮ರಲ್ಲಿ ಭಾರತ ಹತ್ತು ಲಕ್ಷ ನಿವಾಸಿಗಳ ಲೆಕ್ಕದಲ್ಲಿ ಕೇವಲ ಒಂದು ಪೇಟೆಂಟ್ ಪಡೆಯಲು ಸಮರ್ಥವಾಯಿತು. ಭಾರತೀಯ ವಿಜ್ಞಾನ ಸಂಸ್ಥೆ (ಬೆಂಗಳೂರು), ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆ (ಮುಂಬಯಿ), ಭಾರತೀಯ ತಂತ್ರಜ್ಞಾನ ವಿದ್ಯಾಸಂಸ್ಥೆಗಳು (ಚೆನ್ನೈ, ಮುಂಬಯಿ, ದಿಲ್ಲಿ, ಕಾನ್‌ಪೂರ್, ಖರಗ್‌ಪೂರ್), – ಇವುಗಳಲ್ಲಷ್ಟೆ ಅಲ್ಪ ಸ್ವಲ್ಪ ಮಹತ್ವದ ಸಂಶೋಧನಾ ಕಾರ್ಯ ಜರುಗುತ್ತಿದೆ.

''ಚಿಲ್ಲರೆ'' ಜ್ಞಾನಕ್ಕೆ ಒತ್ತು ಕೊಡುವ ವಿಶ್ವವಿದ್ಯಾಲಯ ವ್ಯವಸ್ಥೆ ವಿಸ್ತರಿಸುತ್ತಿದೆ. ಮಹತ್ವಪೂರ್ಣ ಸಂಶೋಧನಾ ಕಾರ್ಯವನ್ನು ವಿಶ್ವವಿದ್ಯಾಲಯಕ್ಕೆ ಹೊರತಾದ ವಿಶೇಷ ವಿದ್ಯಾಸಂಸ್ಥೆಗಳಿಗೂ ಪ್ರಯೋಗಶಾಲೆಗಳಿಗೂ ವರ್ಗಾಯಿಸಿ ಬಿಡಲಾಗಿದೆ. ಇದು ವಸಾಹತು ಪದ್ಧತಿಯಿಂದ ಬಂದ ಪರಿಣಾಮವಾಗಿದೆ.

**ಚಿಲ್ಲರೆ ಜ್ಞಾನದ ವಿಶ್ವವಿದ್ಯಾಲಯಗಳು – ವಸಾಹತು ಪದ್ಧತಿಯ ಅವಶೇಷ**

ಭಾರತದ ಇಂದಿರುವ ಉನ್ನತ ಶಿಕ್ಷಣ ವ್ಯವಸ್ಥೆಯ ಅಡಿಪಾಯವನ್ನು ವಸಾಹತು ಆಳ್ವಿಕೆ ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಹಾಕಿಕೊಟ್ಟಿತು. ಈಸ್ಟ್ ಇಂಡಿಯಾ ಕಂಪನಿಯ ಕ್ರಿಶ್ಚಿಯನ್ ಪಾದ್ರಿಗಳ ಆರಂಭಿಕ ಯತ್ನಗಳು ಇಂಗ್ಲಿಷ್ ತಜ್ಞರ ಹಾಗೂ ಪ್ರಾಚ್ಯತಜ್ಞರ ನಡುವೆ ವಿವಾದ ಹುಟ್ಟಿಸಿದವು. ಇಂಗ್ಲಿಷ್ ತಜ್ಞರು ಪಾಶ್ಚಿಮಾತ್ಯ ವಿಧಾನ ಪ್ರತಿಪಾದಿಸಿದರೆ ಪ್ರಾಚ್ಯತಜ್ಞರು ಸ್ಥಳೀಯತೆಗೆ ಒತ್ತುಕೊಟ್ಟರು. ಕೊನೆಗೆ ವಿಲಿಯಮ್ ಬೆಂಟಿಂಕ್ ಇಂಗ್ಲಿಷ್ ತಜ್ಞರ ಪರವಾಗಿಯೇ ನಿರ್ಧಾರ ನೀಡಿದ. ಅದರಂತೆ ೧೮೫೭ರಲ್ಲಿ ಬಾಂಬೇ (ಮುಂಬಯಿ), ಕಲ್ಕತ್ತ (ಕೋಲ್ಕತ), ಹಾಗೂ ಮದರಾಸು (ಚೆನ್ನೈ)ಗಳಲ್ಲಿ ಮೊದಲ ಮೂರು ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಲಾಯಿತು.

೧೮೩೬ರಲ್ಲಿ ಸ್ಥಾಪಿತವಾದ ಲಂಡನ್ ವಿಶ್ವವಿದ್ಯಾಲಯದ ಮಾದರಿಯಲ್ಲೇ ಸ್ಥಾಪಿತವಾದ ಈ ಆದ್ಯ ವಿಶ್ವವಿದ್ಯಾಲಯಗಳು ಕೇವಲ ಅಂಗಸಂಸ್ಥೆಗಳಾಗಿ ಕೆಲಸ ಮಾಡಿದವೇ ಹೊರತು ಸ್ವಂತ ಬೌದ್ಧಿಕ ವಿಕಾಸಕ್ಕೆ ಎಷ್ಟು ಮಾತ್ರವೂ ಗಮನ ನೀಡಲಿಲ್ಲ. ಮಾನವಿಕ ವಿದ್ಯೆ ಹಾಗೂ ಭಾಷಾ ಬೋಧನೆಗೆ ಒತ್ತುಕೊಟ್ಟು ವಿಜ್ಞಾನ ಯಂತ್ರಕಲೆಗಳನ್ನು ಕಡೆಗಾಣಿಸಿದವು. ಬ್ರಿಟಿಷರ ಆರ್ಥಿಕ, ರಾಜಕೀಯ ಹಾಗೂ ಆಡಳಿತಾತ್ಮಕ ಹಿತಗಳ ಸೇವೆ ಸಲ್ಲಿಸುವುದು ಅವುಗಳ ಮುಖ್ಯ ಗುರಿಯಾಗಿದ್ದಿತು.

೨೦ನೆಯ ಶತಮಾನದ ಆರಂಭಿಕ ವರ್ಷಗಳಲ್ಲಷ್ಟೇ ಆಗ (೧೮೯೮-೧೯೦೫) ವೈಸರಾಯ್ ಆಗಿದ್ದ ಲಾರ್ಡ್ ಕರ್ಜನ್‌ನ ಸ್ತುತ್ಯಾರ್ಹ ಉಪಕ್ರಮದ ಫಲವಾಗಿ ವಿಶ್ವವಿದ್ಯಾಲಯ ವ್ಯವಸ್ಥೆಯನ್ನು ಈ ಸಂಕುಚಿತ ವಿನಾಶಕಾರೀ ಪ್ರಕಲ್ಪನೆಯಿಂದ ಆದಷ್ಟು ಮಟ್ಟಿಗೆ ಬಿಡುಗಡೆಗೊಳಿಸಲು ಯತ್ನ ಮಾಡಲಾಯಿತು. ವಸಾಹತು ಆಳ್ವಿಕೆಯ ಕೊನೆಯ ಮೂರು ದಶಕಗಳಲ್ಲಿ ಅನೇಕ ತನಿಖಾ ಕಾರ್ಯಗಳನ್ನು ಕೈಗೊಳ್ಳಲಾಯಿತು. ಆದರೆ ಅವುಗಳ ಯಾವುವೇ ಪ್ರಧಾನ ಶಿಫಾರಸುಗಳನ್ನು ಆಚರಣೆಗೆ ತರಲಿಲ್ಲ.

ಡಾ|| ಎನ್. ಜಯರಾಮ್

ಹಾಗಾಗಿ ಭಾರತವು ೧೯೪೭ರಲ್ಲಿ ಸ್ವಾತಂತ್ರ್ಯಗಳಿಸಿದಾಗ ಪೂರ್ವಾರ್ಜಿತವಾಗಿ ಪಡೆದುಕೊಂಡ ಉನ್ನತ ಶೈಕ್ಷಣಿಕ ವ್ಯವಸ್ಥೆಯು ಆಗಲೇ ಶಕ್ತಿಹೀನವಾಗಿದ್ದಿತು, ವಿಕೃತಗೊಂಡಿದ್ದಿತು ಮತ್ತು ನಿಷ್ಕ್ರಿಯವಾಗಿದ್ದಿತು. ಈ ಪೂರ್ವಾರ್ಜಿತ ವಿಕೃತಿ ಮುಂದುವರಿದರೂ, ೧೯೫೦ ಹಾಗೂ ೧೯೬೦ರ ದಶಕಗಳಲ್ಲಿ ಉನ್ನತ ಶೈಕ್ಷಣಿಕ ವ್ಯವಸ್ಥೆ ಅಭೂತಪೂರ್ವ ವಿಸ್ತರಣೆ ಕಂಡಿತು. ವರ್ಷಕ್ಕೆ ಶೇ. ೧೩-೧೪ರಷ್ಟು ಹೆಚ್ಚಾಯಿತು. ಆದರೆ ಇದು ೧೯೮೨-೮೩ರಲ್ಲಿ ಶೇ. ೬.೧ಕ್ಕೂ ೧೯೯೯-೯೦ರಲ್ಲಿ ಶೇ ೭.೪ಕ್ಕೂ ಇಳಿಯಿತು. ಅಂದಿನಿಂದ ಈ ವಿಸ್ತರಣೆ ಶೇ. ೪.೫ರಷ್ಟು ಸ್ಥಿರ ಪ್ರವೃತ್ತಿ ತೋರಿದೆ. ಉನ್ನತ ವಿದ್ಯಾಸಂಸ್ಥೆಗಳ ಸಂಖ್ಯೆ ಹೀಗೆ ವ್ಯಾಪಕವಾಗಿ ಬೆಳೆದರೂ ೧೮-೨೩ ವಯೋವೃಂದದವರಲ್ಲಿ ಕೇವಲ ಶೇ. ೮.೯ರಷ್ಟು ಜನರಷ್ಟೆ ಇವುಗಳಲ್ಲಿ ನೋಂದಾಯಿಸಿಕೊಂಡರು. ಶೇ ೭೪ರಷ್ಟು ಕಾಲೇಜುಗಳು ಕಲೆ, ವಾಣಿಜ್ಯ, ಶಿಕ್ಷಣ, ಕಾನೂನು ಮತ್ತಿತರ ವ್ಯಾಸಂಗ ವಿಭಾಗಗಳಲ್ಲಷ್ಟೆ ಉನ್ನತ ಶಿಕ್ಷಣ ನೀಡುತ್ತಿದ್ದವು. ಕೇವಲ ಶೇ. ೨೦ರಷ್ಟು ಕಾಲೇಜುಗಳು ವಿಜ್ಞಾನ ವ್ಯಾಸಂಗಕ್ಕೆ ಮೀಸಲಾಗಿದ್ದವು. ಈ ಅಂಕಿ ಅಂಶಗಳು ವಸಾಹತು ಪದ್ಧತಿಯಿಂದ ನಾವು ಪಡೆದ ದಾರುಣ ಪರಿಸ್ಥಿತಿಯನ್ನು ಸ್ಪಷ್ಟಪಡಿಸುತ್ತವೆ.

ವಿಶ್ವವಿದ್ಯಾಲಯ ವ್ಯವಸ್ಥೆಯಲ್ಲಿ ಸಂಶೋಧನೆ ಒಂದು ಸಾರಭೂತ ಅಂಗವಾಗಿರತಕ್ಕದ್ದು ಎಂಬುದನ್ನು ವಸಾಹತು ಆಳ್ವಿಕೆಯ ಕಾಲದಲ್ಲಿ ಉಪೇಕ್ಷಿಸಲಾಯಿತು. ೧೮೫೭ರಲ್ಲಿ ಸಂಸ್ಥಾಪಿತವಾದ ಕಲ್ಕತ್ತ ವಿಶ್ವವಿದ್ಯಾಲಯವು ೧೯೧೧ರಲ್ಲಷ್ಟೆ ಅರ್ಥಶಾಸ್ತ್ರದಲ್ಲಿ ಪ್ರಥಮ ಡಾಕ್ಟೋರೇಟ್ ಪದವಿಯನ್ನು ಯಜ್ಞೇಶ್ವರ ಘೋಷ್‌ಗೆ ''ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ ಹಾಗೂ ರಷ್ಯಗಳಲ್ಲಿ ಭೂ ಹಿಡುವಳಿಗಳು ಮತ್ತು ಭೂಸಂಬಂಧಿ ಪ್ರಶ್ನೆ'' ಎಂಬ ಪ್ರೌಢ ಪ್ರಬಂಧಕ್ಕೆ ನೀಡಿತು. ಇದೇ ಸಾಮಾಜಿಕ ವಿಜ್ಞಾನಗಳಲ್ಲಿ ನೀಡಿದ ಪ್ರಪ್ರಥಮ ಪಿಎಚ್.ಡಿ. ಪದವಿಯಾಗಿದ್ದಿತು. ಮೆಕಾಲೆಯನಂತರದ ವಸಾಹತು ಕಾಲದಲ್ಲೂ, ಸ್ವಾತಂತ್ರ್ಯಾನಂತರದ ಆರಂಭಿಕ ವರ್ಷಗಳಲ್ಲೂ ಭಾರತದ ಅನೇಕ ವಿಜ್ಞಾನಿಗಳೂ ವಿದ್ವಾಂಸರೂ ಉನ್ನತ ಮಟ್ಟದ ವ್ಯಾಸಂಗ ಹಾಗೂ ಸಂಶೋಧನೆಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಿದೇಶಗಳಿಗೆ, ಹೆಚ್ಚಾಗಿ ಇಂಗ್ಲೆಂಡಿಗೆ, ಹೋದುದರಲ್ಲಿ ಆಶ್ಚರ್ಯವೇನಿಲ್ಲ.

ಇಷ್ಟಾದರೂ ವಿಶ್ವವಿದ್ಯಾಲಯಗಳು ಚಿಲ್ಲರೆ ಜ್ಞಾನಾರ್ಜನೆಯ ಕೇಂದ್ರಗಳಾಗಿದ್ದುದು ಮುಂದುವರಿದೇ ಇದ್ದಿತು. ೧೯೮೦-೨೦೦೦ ಅವಧಿಯಲ್ಲಿ ವಿಶ್ವವಿದ್ಯಾಲಯಗಳ ಸಂಖ್ಯೆ ಇಮ್ಮಡಿಯಾದರೂ, ಸಂಶೋಧನೆ ಹಾಗೂ ಅಭಿವೃದ್ಧಿ ವೆಚ್ಚ ೧೬ ಪಟ್ಟು ಹೆಚ್ಚಿದರೂ ಸಂಶೋಧನಾ ಕೃತಿಗಳ ಸಂಖ್ಯೆ ಮಾತ್ರ ಕಮ್ಮಿಯೇ ಆಗಿದ್ದಿತು. ವಿಶ್ವಬ್ಯಾಂಕ್‌ನ ವರದಿಯೊಂದರ ಪ್ರಕಾರ ವಿಜ್ಞಾನ ಹಾಗೂ ಸಾಮಾಜಿಕ ವಿಜ್ಞಾನಗಳಿಗೆ ಸಂಬಂಧಿಸಿ ಭಾರತದಿಂದ ಬಂದ ಪ್ರಬಂಧಗಳ ಸಂಖ್ಯೆ ೧೯೮೧ರಲ್ಲಿ ೧೩,೬೨೩ ಆಗಿದ್ದುದು ೧೯೯೫ರಲ್ಲಿ ೧೪,೮೮೩ಕ್ಕಷ್ಟೆ ಏರಿತು. (ಅಂದರೆ ೧೫ ವರ್ಷಗಳಲ್ಲಿ ಕೇವಲ ಶೇ೯.೨೫ ಅಷ್ಟು ಏರಿತು). ಇದೇ ಕಾಲಾವಧಿಯಲ್ಲಿ ಚೀಣಾದಿಂದ ಬಂದ ಪ್ರಬಂಧಗಳ ಸಂಖ್ಯೆ ಶೇ. ೭೮೪.೩೪ರಷ್ಟು ಏರಿತು (೧,೯೩೩ ರಿಂದ ೧೧,೪೩೫ಕ್ಕೆ ಏರಿತು).

'ಅಂತಾರಾಷ್ಟ್ರೀಯ ವಿಜ್ಞಾನ ಉಲ್ಲೇಖ ಸೂಚ್ಯಂಕ'ದ ಪ್ರಕಾರ ಭಾರತದ ಉಲ್ಲೇಖಿತ ವೈಜ್ಞಾನಿಕ ಪ್ರಬಂಧಗಳ ಸಂಖ್ಯೆ ೧೯೮೦-೨೦೦೦ದಲ್ಲಿ ೧೫,೦೦೦ದಿಂದ ೧೨,೦೦೦ಕ್ಕೆ ಕುಸಿದು ಭಾರತ ಜಗತ್ತಿನಲ್ಲಿ ೮ನೆಯ ಸ್ಥಾನದಿಂದ ೧೫ನೆಯ ಸ್ಥಾನಕ್ಕೆ ಇಳಿದರೆ, ಚೀಣಾ ೧೫ನೆಯ ಸ್ಥಾನದಿಂದ ೯ನೆಯ ಸ್ಥಾನಕ್ಕೆ ಏರಿತು. ಚೀಣೀ ವೈಜ್ಞಾನಿಕ ಪ್ರಬಂಧಗಳಿಂದ ಉಲ್ಲೇಖಗಳೂ ಏರಿದವು. ಭಾರತದ ಸಿಎಸ್‌ಐಆರ್ ಸಂಸ್ಥೆಯ ವರದಿಯೊಂದರ ಪ್ರಕಾರ, ಭಾರತೀಯ ವಿಜ್ಞಾನಿಗಳು ಪ್ರಕಟಿಸಿದ ೨೦,೦೦೦ ಪ್ರಬಂಧಗಳಲ್ಲಿ ಕೇವಲ ಮೂರು ಪ್ರಬಂಧಗಳು ೧೦೦ ಬಾರಿ ಉಲ್ಲೇಖಗೊಂಡಿವೆ. ಒಂದು ಸಾವಿರ ಉಲ್ಲೇಖ ಪಡೆದ ಪ್ರಬಂಧಗಳಂತೂ ಇಲ್ಲವೇ ಇಲ್ಲ, ಅಥವಾ ತೀರ ಅಪರೂಪ. ದೇಶದಲ್ಲಿ ವೈಜ್ಞಾನಿಕ ಶಿಕ್ಷಣ ಹಾಗೂ ಸಂಶೋಧನೆಗಳ ಗುಣಮಟ್ಟ ತಗ್ಗುತ್ತಿದೆ ಅನ್ನುವುದಕ್ಕೆ ಇದಕ್ಕಿಂತ ಹೆಚ್ಚಿನ ಪುರಾವೆ ಬೇಕೆ?

**ಕೊಠಾರಿ ಆಯೋಗ ಹಾಗೂ ''ಪ್ರಧಾನ'' ವಿಶ್ವವಿದ್ಯಾಲಯಗಳ ವಿಚಾರ...**

ಸ್ವಾತಂತ್ರ್ಯಾನಂತರ ಭಾರತ ಸರಕಾರ ೧೯೪೮-೪೯ರಲ್ಲಿ ನೇಮಿಸಿದ ರಾಧಾಕೃಷ್ಣನ್ ಆಯೋಗವು ವಿಶ್ವವಿದ್ಯಾಲಯಗಳನ್ನು ''ನಾಗರಿಕತೆಯ ಅಂಗಭಾಗಗಳು'', ''ಬೌದ್ಧಿಕ ಸಾಹಸಗಳ ತವರು'' ಎಂದು ವರ್ಣಿಸಿ ಬೋಧನೆ ಸುಧಾರಣೆಗೆ ನಾನಾ ಕ್ರಮಗಳನ್ನು ಸಲಹೆ ಮಾಡಿದರೂ, ಅಧ್ಯಾಪಕರು ಸಂಶೋಧನೆಯಲ್ಲಿ ತೊಡಗಬೇಕು, ತಮ್ಮ ಜ್ಞಾನವನ್ನು ಆಧುನಿಕೀಕರಿಸಿಕೊಳ್ಳುತ್ತಿರಬೇಕು, ಎಂದು ಹೇಳಿದುದನ್ನು ಬಿಟ್ಟು ವಿಶ್ವವಿದ್ಯಾಲಯಗಳ ಮೂಲ ಗುರಿಯನ್ನು ಸಂಶೋಧನೆಯತ್ತ ಪರಿವರ್ತಿಸುವಂತಹ ಸ್ವಲ್ಪ ಸುಳಿವನ್ನೂ ನೀಡಲಿಲ್ಲ.

೧೯೬೪-೬೬ರಲ್ಲಿ ಭಾರತದ ಸಮಗ್ರ ಶೈಕ್ಷಣಿಕ ನೀತಿ ನಿಯಮಗಳ ನೀಲಿನಕ್ಷೆ ತಯಾರಿಸಲು ನೇಮಿಸಲಾದ ಮೊದಲ ಕೊಠಾರಿ ಆಯೋಗವು ದೇಶದ ನಾಲ್ಕನೆಯ, ಐದನೆಯ ಹಾಗೂ ಆರನೆಯ ಪಂಚವಾರ್ಷಿಕ ಯೋಜನೆಗಳ ನೀತಿಗಳ ಹಾಗೂ ಕಾರ್ಯಕ್ರಮಗಳ ಗಾಢ ಅಧ್ಯಯನ ನಡೆಸಿ ೧೯೭೧ರಲ್ಲಿ ಒಂದು ಬೃಹತ್ ವರದಿ ಸಲ್ಲಿಸಿತು. ಇದರಲ್ಲಿ ವಿಶ್ವವಿದ್ಯಾಲಯ ವ್ಯವಸ್ಥೆಯನ್ನು ಸಂಶೋಧನ ಮುಖಿಯನ್ನಾಗಿಸುವ ಬಗೆಗೆ ಸುಸ್ಪಷ್ಟ ಸಲಹೆ ನೀಡಲಾಗಿದ್ದಿತು.

ಕೊಠಾರಿ ಆಯೋಗ ಸೂಚಿಸಿದ ಒಂದು ಅತ್ಯಂತ ಮುಖ್ಯ ಸಲಹೆಯೆಂದರೆ, ದೇಶದಲ್ಲಿ ಐದು ಅಥವಾ ಆರು ''ಪ್ರಧಾನ (ಮೇಜರ್) ವಿಶ್ವವಿದ್ಯಾಲಯಗಳ'' ಸ್ಥಾಪನೆಯಾಗಿದ್ದಿತು. ಇವುಗಳಲ್ಲಿ ಅಧ್ಯಾಪಕರಿಗೂ ವಿದ್ಯಾರ್ಥಿಗಳಿಗೂ ಸಂಶೋಧನೆಗೆ ಅವಶ್ಯವಾದ ವಾತಾವರಣ ಹಾಗೂ ಸಜ್ಜುಸಾಧನಗಳ ವ್ಯವಸ್ಥೆ ಏರ್ಪಡಬೇಕು, ಈ ವಿಶ್ವವಿದ್ಯಾಲಯಗಳಲ್ಲಿ ಬೋಧನೆ ಹಾಗೂ ಸಂಶೋಧನೆಯ ಗುಣಮಟ್ಟ ಜಗತ್ತಿನ ಯಾವುದೇ ಭಾಗದಲ್ಲೂ ಇರಬಹುದಾದ ಅತ್ಯುತ್ತಮ ಶೈಕ್ಷಣಿಕ ಗುಣಮಟ್ಟಗಳಿಗೆ ಹೋಲಿಸುವಂತಹುದಾಗಿರಬೇಕು, ಎಂದು ವರದಿ ಒತ್ತಿಹೇಳಿತು. ಉನ್ನತ ಆದ್ಯತೆ ನೀಡಿದಲ್ಲಿ ಈ 'ಪ್ರಧಾನ ವಿಶ್ವವಿದ್ಯಾಲಯಗಳ' ವಿಚಾರವನ್ನು ಹತ್ತು ವರ್ಷಗಳಲ್ಲಿ ಕಾರ್ಯಗತಗೊಳಿಸಲು ಸಾಧ್ಯವಿದೆ ಎಂದೂ ಅದು ತಿಳಿಸಿತು. ಈ ಪ್ರಧಾನ ವಿಶ್ವವಿದ್ಯಾಲಯಗಳು :

- ವಿದ್ಯಾರ್ಥಿಗಳಿಗೆ ಉನ್ನತ ಮಟ್ಟದ ತರಬೇತು ಹಾಗೂ ಸಂಶೋಧನಾ ಕಾರ್ಯಕ್ರಮಗಳನ್ನು ಒದಗಿಸಿ ತನ್ಮೂಲಕ ವಿಶ್ವ ಮನ್ನಣೆ ಗಳಿಸಬೇಕು;
- ಇತರ ಉನ್ನತ ಶೈಕ್ಷಣಿಕ ಸಂಸ್ಥೆಗಳಿಗೂ, ಕಾಲೇಜು ಗಳಿಗೂ, ವಿಶ್ವವಿದ್ಯಾಲಯಗಳಿಗೂ ಅವಶ್ಯವಾದ ಶ್ರೇಷ್ಠ ದರ್ಜೆಯ ಶಿಕ್ಷಕರನ್ನು ಒದಗಿಸಬೇಕು;
- ಶೈಕ್ಷಣಿಕವಾಗಿ ಮುಂದುವರಿದ ಜಗತ್ತಿನ ಇತರ ದೇಶ ಗಳಿಗೆ ಹೋಲಿಸಬಹುದಾದಂಥ ಪ್ರಥಮ ದರ್ಜೆಯ ಸ್ನಾತಕೋತ್ತರ ಶಿಕ್ಷಣವನ್ನು ನಮ್ಮ ದೇಶದೊಳಗೇ ಒದಗಿಸಬೇಕು;
- ಭಾರತದ ಶೈಕ್ಷಣಿಕ ವ್ಯವಸ್ಥೆ ತನ್ನದೇ ಸ್ವಂತ ಹಿರಿಮೆ ಸಾಧಿಸಿಕೊಳ್ಳುವಂತೆ ಅದಕ್ಕೆ ನೆರವಾಗಬೇಕು.

ಬಹುಮಟ್ಟಿಗೆ ಭಾರತದ ಹೊರಗೇ ಇದ್ದ ಶೈಕ್ಷಣಿಕ ಕ್ಷೇತ್ರದ ಗುರುತ್ವ ಕೇಂದ್ರವನ್ನು ದೇಶದೊಳಕ್ಕೆ ವರ್ಗಾಯಿಸಿ, ಭಾರತೀಯ ವಿದ್ವಾಂಸರು ಉನ್ನತ ಶಿಕ್ಷಣ ಹಾಗೂ ಸಂಶೋಧನೆಗಾಗಿ ಹೊರದೇಶಗಳಿಗೆ ಹೋಗುವುದನ್ನು ತಪ್ಪಿಸಿ ದೇಶಕ್ಕೆ ಅಮೂಲ್ಯ ವಿದೇಶೀ ವಿನಿಮಯದ ಉಳಿತಾಯವಾಗುವಂತೆಯೂ ''ಮೇಜರ್ ವಿಶ್ವವಿದ್ಯಾಲಯಗಳು'' ಮಾಡಬೇಕಿದ್ದಿತು. ಈ ಸಲಹೆ ಅಮೆರಿಕದ ವಿಜ್ಞಾನಿಗಳ ಅಕಾಡೆಮಿಯ ಪ್ರೊ|| ಎಫ್. ಸೆಯಿಟ್ಜ್‌ರವರ ಹಾಗೂ ಆಗ ಬ್ರಿಟಿಷ್ ರಾಯಲ್ ಸೊಸೈಟಿಯ ಅಧ್ಯಕ್ಷರಾಗಿದ್ದ ಪ್ರೊ|| ಪಿ. ಎಮ್. ಎಸ್. ಬ್ಲಾಕೆಟ್‌ರವರ ಬೆಂಬಲ ಪಡೆಯಿತು.

ಅಂಥ ವಿಶ್ವವಿದ್ಯಾಲಯಗಳನ್ನು ಹೊಸದಾಗಿ ಸ್ಥಾಪಿಸಲು ತುಂಬ ಬಂಡವಾಳ ಬೇಕಾಗುತ್ತದೆ ಹಾಗೂ ಸ್ವಲ್ಪ ಕಾಲ ಹಿಡಿಸಬಹುದು ಎಂಬುದನ್ನು ಗಮನಿಸಿದ ಕೊಠಾರಿ ಆಯೋಗವು, ಅಸ್ತಿತ್ವದಲ್ಲಿರುವವುಗಳಲ್ಲೇ ಆರು ವಿಶ್ವವಿದ್ಯಾಲಯಗಳನ್ನು ಯುಜಿಸಿ ಆಯ್ಕೆ ಮಾಡಬೇಕು (ಇವುಗಳಲ್ಲಿ ಒಂದು ಐಐಟಿಗಳಿಂದ ಹಾಗೂ ಒಂದು ಕೃಷಿ ವಿಶ್ವವಿದ್ಯಾಲಯಗಳಿಂದ ಆಯ್ಕೆಯಾಗಬೇಕು) ಎಂದು ಸಲಹೆ ಮಾಡಿತು.

ಇಂತಹ ''ಮೇಜರ್ ವಿಶ್ವವಿದ್ಯಾಲಯಗಳ'' ಸ್ಥಾಪನೆಯ ಜೊತೆಗೆ ಯುಜಿಸಿಯ ಉನ್ನತ ಅಧ್ಯಯನ ಕೇಂದ್ರಗಳ ಕಾರ್ಯಕ್ರಮವನ್ನು ಮುನ್ನವೇ ಇಲ್ಲವೇ ಅನಂತರ ವಿಸ್ತರಿಸಿ ದೃಢಗೊಳಿಸಬೇಕೆಂದೂ ಕೊಠಾರಿ ಆಯೋಗ ಶಿಫಾರಸು ಮಾಡಿತು. ಇದನ್ನು ಆಗುಗೊಳಿಸಲು ದಿಲ್ಲಿ ವಿಶ್ವವಿದ್ಯಾಲಯ ಮಾಡಿದಂತೆ ಉನ್ನತ ಅಧ್ಯಯನ ಕೇಂದ್ರಗಳ ''ಗುಚ್ಛಗಳ''ನ್ನು ಸ್ಥಾಪಿಸಬೇಕು, ಅವು ಸಂಶೋಧನೆಯಲ್ಲಿ ಪರಸ್ಪರ ನೆರವಾಗಬಲ್ಲವು. ಅಂಥ ಗುಚ್ಛಗಳು ಇಲ್ಲದಿರುವೆಡೆ ಸ್ನಾತಕೋತ್ತರ ಬೋಧನ ಕೇಂದ್ರಗಳನ್ನು ಯುಜಿಸಿ ಈ ಕಾರ್ಯಕ್ಕೆ ಬಳಸಿಕೊಳ್ಳಬೇಕು ಎಂದು ಆಯೋಗ ಸೂಚಿಸಿತು. ಇತರ ವಿಶ್ವವಿದ್ಯಾಲಯಗಳಲ್ಲೂ ಬೋಧನ ಹಾಗೂ ಸೌಲಭ್ಯಗಳ ವಿಸ್ತರಣೆಯ ಕಡೆಗೂ ಆಯೋಗ ಗಮನ ನೀಡಿ ಸುದೀರ್ಘ ಸಲಹೆಗಳನ್ನು ನೀಡಿತು.

ಆದರೆ ''ಮೇಜರ್ ವಿಶ್ವವಿದ್ಯಾಲಯಗಳ''ನ್ನು ಸ್ಥಾಪಿಸುವ ಆಯೋಗದ ಈ ಅತ್ಯಮೂಲ್ಯ ಸಲಹೆಯನ್ನು ಇತರೆಲ್ಲ ವಿಭಾಗಗಳೂ ತಿರಸ್ಕರಿಸಿದವು. ಪಾರ್ಲಿಮೆಂಟ್ ಸಮಿತಿಯೂ ವೈಸ್- ಛಾನ್ಸಲರ್‌ಗಳ ಸಮ್ಮೇಳನವೂ ಅದನ್ನು ಸಾರಾಸಗಟಾಗಿ ತಿರಸ್ಕರಿಸಿದವು. ಡಾ|| ಡಿ. ಆರ್. ಗಾಡ್ಗಿಲ್‌ರಂಥ ಖ್ಯಾತ ವಿದ್ವಾಂಸರುಗಳೂ ಅದನ್ನು ಮನ್ನಿಸಲಿಲ್ಲ. ಅದು ಸಮಾಜವಾದಿ- ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆಗೆ ವಿರೋಧವಾಗಿದ್ದಿತೆಂಬುದು ಅವರ ವಾದವಾಗಿದ್ದಿತು. ಇಂತಹ ವಿರೋಧವನ್ನು ನಿರೀಕ್ಷಿಸಿಯೇ ಕೊಠಾರಿ ಆಯೋಗವು ''ಈ ಸಲಹೆಯು ಕೊರತೆಯ ಆರ್ಥಿಕತೆಗೆ ಅನಿವಾರ್ಯವಷ್ಟೆ ಅಲ್ಲ ಅಂತ್ಯದಲ್ಲಿ ಎಲ್ಲರಿಗೂ ಅತ್ಯಲ್ಪಾವಧಿಯಲ್ಲೇ ನೆರವಾಗುವ ಖಚಿತವಾದ ಹಾಗೂ ಆಚರಣೀಯ

ವಿಧಾನ''ವಾಗಿದ್ದಿತೆಂದು ಒತ್ತಿ ನುಡಿದಿದ್ದಿತು. ಗುಣಕ್ಕೆ ಆದ್ಯತೆ ನೀಡದೆ ಎಲ್ಲರಿಗೂ ಸಮಾನ ಸಂಪನ್ಮೂಲ ಒದಗಿಸುವುದು ಬೆಳವಣಿಗೆಗೆ ಕಂಟಕಪ್ರಾಯವಲ್ಲದೆ ಕಳಪೆ ಕಾರ್ಯಕ್ಕೆ ಪ್ರೋತ್ಸಾಹಕಾರಿ, ಎಂದೂ ಅದು ಹೇಳಿದ್ದಿತು.

ಇದನ್ನು ವಿರೋಧಿಸಿದವರು, ''ವಿಶ್ವವಿದ್ಯಾಲಯವನ್ನಲ್ಲ, ಇಲಾಖೆಯನ್ನು ಒಂದು ಘಟಕವನ್ನಾಗಿ ತೆಗೆದುಕೊಳ್ಳಬೇಕು, ಎಲ್ಲ ವಿಶ್ವವಿದ್ಯಾಲಯಗಳ ಎಲ್ಲಾ ಇಲಾಖೆಗಳೂ ಉನ್ನತ ವ್ಯಾಸಂಗದ ಕೇಂದ್ರಗಳಾಗಿ ಆಯ್ಕೆಗೊಳ್ಳಲು ಬಾಧ್ಯವಾದವು'' ಎಂದು ವಾದಿಸಿದರು. ಪರಿಸ್ಥಿತಿ ಅನುಕೂಲವಾಗಿದ್ದೆಡೆ ಕೆಲವು ವಿಶ್ವವಿದ್ಯಾಲಯಗಳ ಗುಚ್ಛಗಳನ್ನು ಏರ್ಪಡಿಸುವ ವಿಚಾರಕ್ಕೆ ಪಾರ್ಲಿಮೆಂಟರಿ ಸಮಿತಿ ಒಪ್ಪಿಗೆ ನೀಡಿತು. ಆದರೆ ಈ ಮಾರ್ಪಟ್ಟ ರೀತಿಯಲ್ಲೂ ಕಾರ್ಯಕ್ರಮವನ್ನು ಆಚರಣೆಗೆ ತರಲಿಲ್ಲ. ೧೯೮೭ರ ಮಾರ್ಚ್‌ನಲ್ಲಿ ವಿಜ್ಞಾನ ವಿಭಾಗದಲ್ಲಿ ೨೫ ಹಾಗೂ ಮಾನವಿಕ ವಿಭಾಗದಲ್ಲಿ ೧೫ ಸ್ವತಂತ್ರ ಉನ್ನತ ವ್ಯಾಸಂಗ ಕೇಂದ್ರಗಳಿದ್ದವು.

**ವಿಶ್ವವಿದ್ಯಾಲಯ ವ್ಯವಸ್ಥೆಯ ಸಾಮೂಹಿಕೀಕರಣ ಹಾಗೂ ಗುಣಮಟ್ಟದ ಪ್ರಶ್ನೆ**

ಸ್ವಾತಂತ್ರ್ಯಾನಂತರದ ಭಾರತದಲ್ಲಿ ನಿರೀಕ್ಷಿಸಿದ್ದಂತೆಯೇ ಉನ್ನತ ವ್ಯಾಸಂಗ ವ್ಯವಸ್ಥೆಯ ತ್ವರಿತ ವಿಸ್ತರಣೆಯು ಗುಣಮಟ್ಟದ ನಷ್ಟದೊಂದಿಗೆ ಉಂಟಾಯಿತು. ಆದರೂ ಕೆಲವು ವಿಶ್ವವಿದ್ಯಾಲಯಗಳೂ ಅಂಗೀಕೃತ ಕಾಲೇಜುಗಳೂ ಉನ್ನತ ಗುಣಮಟ್ಟ ಉಳಿಸಿಕೊಂಡಿವೆ ಎಂಬುದೂ ಗಮನಾರ್ಹ.

ಸಾಮಾನ್ಯವಾಗಿ ರಾಜ್ಯ ವಿಶ್ವವಿದ್ಯಾಲಯಗಳಲ್ಲಿ ಹಾಗೂ ಮನ್ನಿತ ಕಾಲೇಜುಗಳ ಪದವಿ ಪೂರ್ವ ವಿಭಾಗಗಳಲ್ಲಿ ಕಳಪೆ ಗುಣಮಟ್ಟ ಎದ್ದುಕಾಣುತ್ತಿದ್ದಿತು. ಇದೀಗ ಸ್ನಾತಕೋತ್ತರ ವಿಭಾಗಗಳಿಗೂ ವ್ಯಾಪಿಸಿದೆ. ಈ ಕಳಪೆ ಗುಣಮಟ್ಟ ಅರ್ಥಗ್ರಾಹ್ಯ, ಏಕೆಂದರೆ, ಈ ವಿಭಾಗಗಳಲ್ಲಿ ವಿದ್ಯಾರ್ಥಿಗಳು ನೀಡುತ್ತಿರುವ ವ್ಯಾಸಂಗ ಶುಲ್ಕವು ಖಾಸಗಿ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳು ನೀಡುತ್ತಿರುವ ಶುಲ್ಕಕ್ಕಿಂತ ತುಂಬ ಕಮ್ಮಿಯಾಗಿದೆ. ಈ ವಿಭಾಗಗಳ ಕ್ರಮ ವಿಹೀನ ವಿಸ್ತರಣೆಯೇ ಗುಣಮಟ್ಟದ ಇಳಿಮುಖಕ್ಕೆ ಮುಖ್ಯ ಕಾರಣವೆಂದು ಗೊತ್ತುಹಚ್ಚಲಾಗಿದೆ.

ಕೆಲವು ವಿಶ್ವವಿದ್ಯಾಲಯಗಳಲ್ಲಿ ಗ್ರಂಥಭಂಡಾರ ಹಾಗೂ ಪ್ರಯೋಗಶಾಲಾ ಸೌಲಭ್ಯಗಳು ಎಷ್ಟು ಹೀನಾಯ ಸ್ಥಿತಿಯಲ್ಲಿವೆಯೆಂದರೆ ಅವನ್ನು ನ್ಯಾಯವಾಗಿಯೇ 'ವ್ಯಾಸಂಗ ಕೊಳಚೆಪ್ರದೇಶಗಳೆ'ಂದು ಕರೆಯಲಾಗುತ್ತಿದೆ. ಇದಕ್ಕೆ ಸಂಪನ್ಮೂಲಗಳ ಕೊರತೆ ಒಂದು ಕಾರಣವಾದರೆ, ಅಧ್ಯಾಪಕರನ್ನೂ, ಶಿಕ್ಷಕರನ್ನೂ ನೇಮಿಸುವಾಗ ಕನಿಷ್ಠ ವಿದ್ಯಾರ್ಹತೆಯನ್ನೂ ಕಡೆಗಾಣಿಸುತ್ತಿರುವುದು ಮತ್ತೊಂದು ಮುಖ್ಯಕಾರಣವಾಗಿದೆ. ಇವುಗಳಲ್ಲಿ ಕನಿಷ್ಠ ಕೆಲಸದ -ದಿನಗಳ ನಿಯಮವನ್ನು ಉಲ್ಲಂಘಿಸಲಾಗುತ್ತಿದೆ, ಶೈಕ್ಷಣಿಕ ಚಟುವಟಿಕೆಗಳ ದಿನಚರಿ ಕಾಗದದ ಮೇಲಷ್ಟೆ ಉಳಿದಿದೆ. ಬೋಧನೆ-ಕಲಿಕೆಗಳಿಗಿಂತ ಸರ್ಟಿಫಿಕೇಟ್ ಗಳಿಗೇ ಹೆಚ್ಚಿನ ಒತ್ತು ನೀಡುತ್ತಿರುವುದು, ವಿಶ್ವವಿದ್ಯಾಲಯ ಶಿಕ್ಷಣ ವ್ಯವಸ್ಥೆಯ ಗೊತ್ತುಗುರಿ ಗಳನ್ನೇ ವಿಕೃತಗೊಳಿಸಿದೆ. ಪ್ರತಿಭಾನ್ವಿತರನ್ನು ಆಕರ್ಷಿಸಲು ಈ ಸಂಸ್ಥೆಗಳಲ್ಲಿ ಏನೂ ಉಳಿದಿಲ್ಲ.

ಕಳಪೆ ಗುಣಮಟ್ಟಕ್ಕೆ ಪಿಎಚ್.ಡಿ. ನೀಡುತ್ತಿರುವ ವಿಧಾನವನ್ನು ನಿದರ್ಶನವಾಗಿ ನೀಡಬಹುದು. ಕಳೆದು ಎರಡು ದಶಕಗಳಲ್ಲಿ ಭಾರತೀಯ ವಿಶ್ವವಿದ್ಯಾಲಯಗಳು ಪ್ರತಿವರ್ಷವೂ ೧೦,೦೦೦ ಪಿಎಚ್.ಡಿ. ಪದವೀಧರರನ್ನು ಸಿದ್ಧಗೊಳಿಸುತ್ತಿವೆ. ೧೯೯೯- ೨೦೦೦ದಲ್ಲಿ ಒಟ್ಟು ೧೧,೨೯೬ ಡಾಕ್ಟೋರೇಟ್ ಡಿಗ್ರಿಗಳನ್ನು ನೀಡಲಾಯಿತು (ಕಲೆ ೪,೨೮೦, ವಿಜ್ಞಾನ ೩,೮೮೫, ವಾಣಿಜ್ಯ ೫೭೧, ವೈದ್ಯಕೀಯ ೨೨೮, ಎಂಜನಿಯರಿಂಗ್ ೭೨೩ ಹಾಗೂ ಶಿಕ್ಷಣ ೩೬೪, ಕೃಷಿ ೭೮೭, ಪಶುವಿಜ್ಞಾನ ೧೪೬, ಕಾನೂನು ೭೪, ಸಂಗೀತ, ಗ್ರಂಥ ಭಂಡಾರ, ಶಾರೀರಿಕ ಶಿಕ್ಷಣ, ಪತ್ರಿಕೋದ್ಯಮ, ಸಾಮಾಜಿಕ ಕಾರ್ಯ ಇತ್ಯಾದಿಗಳಲ್ಲಿ ೨೩೮).

ಸಾಂಪ್ರದಾಯಿಕ ಕ್ಷೇತ್ರಗಳಲ್ಲಿ ಭಾರಿ ಪ್ರಮಾಣದಲ್ಲಿ ಡಾಕ್ಟೋರೇಟ್ ಪದವಿ ನೀಡಿರುವುದು ಸಂಶೋಧನೆಯಲ್ಲಿ ನೈಜ ಆಸಕ್ತಿಯನ್ನೇನೂ ತೋರದು. ಕಾಲೇಜು ವಿಶ್ವ ವಿದ್ಯಾಲಯಗಳಲ್ಲಿ ಶಿಕ್ಷಕ ವೃತ್ತಿ ಪಡೆಯಲೂ ಉಪನ್ಯಾಸಕ ಸ್ಥಾನದಿಂದ ರೀಡರ್ ಸ್ಥಾನಕ್ಕೇರಲೂ ಡಾಕ್ಟೋರೇಟ್ ಡಿಗ್ರಿಯನ್ನು ಕಡ್ಡಾಯ ಮಾಡಿರುವುದೂ ಈ ಏರಿಕೆಗೆ ಮುಖ್ಯ ಕಾರಣವಾಗಿದೆ. ಉಪನ್ಯಾಸಕ ವೃತ್ತಿ ಪಡೆದ ಮೇಲೂ ಕಾರ್ಯನಿರ್ವಹಣ ಸುಧಾರಣಾ ಕಾರ್ಯಕ್ರಮದಡಿ ವಿಶೇಷ ರಜೆ ನೀಡಿ ಡಾಕ್ಟೊರೇಟ್ ಡಿಗ್ರಿ ಪಡೆಯಲು ಪ್ರೋತ್ಸಾಹಿಸುತ್ತಿರುವುದೂ ಆ ಡಿಗ್ರಿ ಪಡೆದನಂತರ ಎರಡು ಇಂಕ್ರಿಮೆಂಟ್ ನೀಡುತ್ತಿರುವುದೂ ಇದಕ್ಕೆ ಇನ್ನಷ್ಟು ಇಂಬು ನೀಡಿದೆ. ಹೀಗಾಗಿ ಈ ಡಾಕ್ಟೋರೇಟ್ ಡಿಗ್ರಿಯ ಸ್ಥಾನಮಾನ ಹಾಗೂ ಗುಣ ನಶಿಸಿದೆ.

ಹೋಗಲಿ, ಈ ಡಿಗ್ರಿ ಪಡೆಯಲೋಸುಗ ಪದವೀಧರರು ಸಮಾಜಕ್ಕೆ ಅನುಕೂಲ ವಾಗುವಂಥ ಹೊಸ ವಿಷಯದಲ್ಲಿ ಸಂಶೋಧನೆ ನಡೆಸುವುದೂ ಇಲ್ಲ. ಇತರ ಭಾರತೀಯ ಅಥವಾ ವಿದೇಶೀ ವಿಶ್ವವಿದ್ಯಾಲಯದ ಯಾವುವಾದರೂ ಹಳೆಯ ವಿಷಯಗಳನ್ನೇ ಎತ್ತಿಕೊಂಡು ಭಾಷೆಯನ್ನಷ್ಟೆ ಬದಲಿಸಿ ಪ್ರೌಢ ಪ್ರಬಂಧಗಳನ್ನು ರಚಿಸ ಲಾಗುತ್ತಿದೆ,

ಎಂಬುದು 'ಯೂನಿವರ್ಸಿಟಿ ನ್ಯೂಸ್' ವಾರಪತ್ರಿಕೆ ಪ್ರಕಟಿಸುವ ಪ್ರೌಢ ಪ್ರಬಂಧಗಳ ಪಟ್ಟಿಯಿಂದ ಸ್ಪಷ್ಟವಾಗುತ್ತದೆ.

ಡಾಕ್ಟೋರಲ್ ಡಿಗ್ರಿ ಪಡೆದರಾಯಿತು, ಸಂಶೋಧನಾ ಕಾರ್ಯ ಮುಗಿಯುತ್ತದೆ. ಈ ಪ್ರೌಢ ಪ್ರಬಂಧವನ್ನು ಪ್ರಕಟಿಸುವುದು ಹಾಗಿರಲಿ, ಅದರ ಮೇಲೆ ಲೇಖನವನ್ನೂ ಬರೆಯುವುದಿಲ್ಲ. ಆ ಪ್ರಬಂಧಗಳು ವಿಶ್ವವಿದ್ಯಾಲಯದ ಗ್ರಂಥ ಭಂಡಾರ ಅಥವಾ ಮತ್ತಾವುದೋ ಕೇಂದ್ರದಲ್ಲಿ ಒಟ್ಟಾಗಿ ಕೊಳೆಯುತ್ತ ಬಿದ್ದಿರುತ್ತವೆ. ಡಾಕ್ಟೋರೇಟ್ ಪದವಿ ಪಡೆಯುವುದು ಕೆಲಸ ಪಡೆಯುವ ಹಂಗಾಮಿ ಏರ್ಪಾಟಷ್ಟೇ ಆಗಿದೆ.

ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣದ ಗುಣ ಮಟ್ಟವನ್ನು ನಿಯಂತ್ರಿಸುವುದು ಯುಜಿಸಿಯ ಜವಾಬ್ದಾರಿ. ಆದರೆ ಕಾಲೇಜು ವಿಶ್ವವಿದ್ಯಾಲಯಗಳು ಇಷ್ಟೊಂದು ಭಾರಿ ಸಂಖ್ಯೆಯಲ್ಲಿದ್ದು ಯುಜಿಸಿಗೆ ಹೆಚ್ಚು ಶಕ್ತಿಯೂ ಇಲ್ಲದಿರುವುದರಿಂದ ಇಂತಹ ನಿಯಂತ್ರಣ ಅಸಾಧ್ಯ ವಾಗಿದೆ. ಯುಜಿಸಿ ಒಂದು ನಿಧಿ ಹಂಚಿಕೆ ಸಂಸ್ಥೆಯಂತಷ್ಟೆ ಆಗಿದೆ. ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ನಿರ್ದಿಷ್ಟ ವಿದ್ಯಾಭ್ಯಾಸದ ಮಟ್ಟ ಇದೆಯೇ, ಪ್ರಯೋಗಶಾಲೆ ಮುಂತಾದ ಆವಶ್ಯಕತೆಗಳಿವೆಯೆ ಎಂಬುದನ್ನು ನಿರ್ಧರಿಸಲು ಯುಜಿಸಿ ಒಂದು ಕೌನ್ಸಿಲ್ಲನ್ನು (NAAC) ೧೯೯೪ರಲ್ಲಿ ಸ್ಥಾಪಿಸಿತು. ೨೦೦೪ರ ನವೆಂಬರ್ ಹೊತ್ತಿಗೆ ಈ ಕೌನ್ಸಿಲ್ ಕೇವಲ ೧೧೩ ವಿಶ್ವವಿದ್ಯಾಲಯ ಹಾಗೂ ೨೦೮೮ ಕಾಲೇಜುಗಳ ಮೌಲ್ಯನಿರ್ಣಯವನ್ನಷ್ಟೆ ಮಾಡಿದ್ದಿತು. ಇಂತಹ ಮೌಲ್ಯ ನಿರ್ಣಯವಾಗದ ಕಾಲೇಜುಗಳಿಗೆ ವಿಕಾಸನಿಧಿ ನೀಡಲಾಗುವುದಿಲ್ಲವೆಂದು ಈಗ ಘೋಷಿಸಲಾಗಿದೆ. ಇದು ಎಷ್ಟರಮಟ್ಟಿಗೆ ಪರಿಸ್ಥಿತಿಯನ್ನು ಸುಧಾರಿಸುವುದೋ ಕಾದು ನೋಡಬೇಕಾಗಿದೆ.

**ವಿಶ್ವವಿದ್ಯಾಲಯಗಳಿಗೆ ಸಂಬಂಧಿಸಿದಂತೆ ವಿಜ್ಞಾನ ನೀತಿ-ಒಂದು ದೋಷಪೂರಿತ ಮಾದರಿ**

ರಾಷ್ಟ್ರೋನ್ನತಿಯಲ್ಲಿ ವಿಜ್ಞಾನದ ಪ್ರಾಮುಖ್ಯವನ್ನು ಮನ್ನಿಸಿಯೇ ನೆಹರೂರವರು ೧೯೫೮ರಲ್ಲೇ ವಿಜ್ಞಾನ ನೀತಿ ನಿರ್ಣಯವೊಂದನ್ನು ಮುಂದಿಟ್ಟಿದ್ದರು. ಅದಾಗಲೀ ೧೯೮೩ರ ವಿಜ್ಞಾನ ತಂತ್ರಜ್ಞಾನ ನೀತಿಯಾಗಲೀ ವಿಜ್ಞಾನದ ಉನ್ನತಿಯಲ್ಲಿ ವಿಶ್ವವಿದ್ಯಾಲಯಗಳ ಅಥವಾ ಉನ್ನತ ಶಿಕ್ಷಣದ ಪಾತ್ರ ಎಷ್ಟು ಮುಖ್ಯ ಎಂಬುದನ್ನು ಎಷ್ಟು ಮಾತ್ರವೂ ಗಣನೆಗೆ ತಂದುಕೊಳ್ಳಲಿಲ್ಲ. ೨೦೦೩ರ ಈಚೆಗಿನ ನಿರ್ಣಯವಷ್ಟೆ ಅದಕ್ಕೆ ಉಲ್ಲೇಖ ಮಾಡಿದೆ.

ವಿಜ್ಞಾನ ನೀತಿ ನಿರೂಪಣೆಯಲ್ಲಿ ವಿಶ್ವವಿದ್ಯಾಲಯ ಗಳನ್ನು ಉಪೇಕ್ಷಿಸಿದುದು ಒಂದು ಗಹನವಾದ ತಪ್ಪಾಗಿದ್ದಿತು. ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆ (TIFR) ಮಾದರಿಯಲ್ಲೇ ರಚಿತವಾದ ಸಂಶೋಧನಾ ಸಂಸ್ಥೆ ಮತ್ತು ಪ್ರಯೋಗಶಾಲೆಗಳೆಲ್ಲ ಸಾಕಷ್ಟು ಸ್ವಾಯತ್ತತೆ, ನಿಧಿ ಸೌಲಭ್ಯಗಳನ್ನೆಲ್ಲ ಪಡೆದಿದ್ದವು. ಆದರೆ ಅವನ್ನು ವಿಶ್ವವಿದ್ಯಾಲಯಗಳಿಂದ ಪ್ರತ್ಯೇಕಗೊಳಿಸಲಾಯಿತು. ಪದವಿಪೂರ್ವ ಅಥವಾ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೋಧನೆ ಮಾಡುವುದು ಈ ಸಂಸ್ಥೆಗಳ ಸಂಶೋಧನಾ ಕಾರ್ಯಕ್ಕೆ ಅಡ್ಡ ಬರುತ್ತದೆಂದು ಹಾಗೆ ಮಾಡಲಾಯಿತು. ಹಾಗಾಗಿ ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆ ಹಿಂದಕ್ಕೆ ಸರಿಯಿತು, ಸಂಶೋಧನಾ ಸಂಸ್ಥೆಗಳಲ್ಲಿ ಬೋಧನೆ



ಗಮನಾರ್ಹವಾಗಿ ಇಲ್ಲವಾಯಿತು.

ಮೂಲ ವಿಜ್ಞಾನಿಗಳ ವಿಷಯದಲ್ಲಷ್ಟೆ ಅಲ್ಲ ವೈದ್ಯಕೀಯ ಎಂಜಿನಿಯರಿಂಗ್ ಕ್ಷೇತ್ರಗಳಲ್ಲೂ ಇದೇ ಜರುಗಿತು. ಸುಪ್ರಸಿದ್ಧ ಆಸ್ಪತ್ರೆಗಳು ತಮ್ಮನ್ನು 'ಸಂಶೋಧನಾ ಕೇಂದ್ರ'ಗಳೆಂದು ಘೋಷಿಸಿಕೊಂಡವು, ಆದರೆ ಎಂದೂ ಸಂಶೋಧನೆಯಲ್ಲಿ ತೊಡಗಲಿಲ್ಲ. ವೈದ್ಯಕೀಯ ವಿದ್ಯಾರ್ಥಿಗಳು ತಮ್ಮನ್ನು ವೈದ್ಯ ಅಥವಾ ಶಸ್ತ್ರ ವೈದ್ಯರೆಂದು ಭಾವಿಸಿಕೊಂಡರೇ ಹೊರತು, ವೈದ್ಯಕೀಯ ಸಂಶೋಧನಾಕಾರರೆಂದು ಎಂದೂ ಪರಿಗಣಿಸಿಕೊಳ್ಳಲಿಲ್ಲ. 'ಜೈಪೂರ್ ಪಾದ' ಖ್ಯಾತಿಯ ಡಾ|| ಪ್ರಮೋದ್ ಕಿರಣ್ ಸೇಥಿ, ಉದರದರ್ಶಕ ಕಾರ್ಯ ಖ್ಯಾತಿಯ ಡಾ|| ದುರ್ಗಾದತ್ ಗೌರ್ ಅಥವಾ ಶಸ್ತ್ರಕ್ರಿಯೆಯಲ್ಲಿ ನವೀಕರಣ ಖ್ಯಾತಿಯ ಡಾ|| ವಿ. ಎನ್. ಶೀರ್ಖಂಡೆಯವರಷ್ಟೆ ಇದಕ್ಕೆ ಅಪವಾದ. ಇವರ ಮಾದರಿಯು ಭಾರತೀಯ ವೈದ್ಯ ವಿದ್ಯಾರ್ಥಿ ಗಳನ್ನು ಎಷ್ಟು ಮಾತ್ರವೂ ಪ್ರಭಾವಿಸುತ್ತಿಲ್ಲ.

ಸಂಶೋಧನೆಗಾಗಿಯೇ ವಿಶೇಷ ಸಂಸ್ಥೆ ಪ್ರಯೋಗಶಾಲೆಗಳನ್ನು ಸ್ಥಾಪಿಸಿದುದು ಸಂಶೋಧನಾಕಾರ್ಯಕ್ಕೆ ಭಾರಿ ಪ್ರೋತ್ಸಾಹ ನೀಡಿತು, ನಿಜ. ಆದರೆ ಇವನ್ನು ವಿಶ್ವವಿದ್ಯಾಲಯ ಕ್ಷೇತ್ರದ ಹೊರಗೆ ವಿಕಾಸಗೊಳಿಸಲಾದುದು ವಿಶ್ವವಿದ್ಯಾಲಯ ಗಳಲ್ಲಿ ನಡೆಯುತ್ತಿದ್ದ ಅಲ್ಪಸ್ವಲ್ಪ ಸಂಶೋಧನಾ ಕಾರ್ಯಕ್ಕೂ ಭಾರಿ ಹೊಡೆತ ನೀಡಿತು. ಜೊತೆಗೆ 'ಆಂತರಿಕ ಪ್ರತಿಭಾ ಪಲಾಯನ'ವೂ ಪ್ರಾರಂಭವಾಯಿತು. ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದ ಜೆ. ಸಿ. ಬೋಸ್‌ರು ಅಲ್ಲಿಂದ ಹೊರ ನಡೆದು 'ಬಸು ವಿಜ್ಞಾನ ಮಂದಿರ' ಸ್ಥಾಪಿಸಿದರು. ಕಲ್ಕತ್ತ ವಿಶ್ವವಿದ್ಯಾಲಯದಲ್ಲಿದ್ದ ಸಿ. ವಿ. ರಾಮನ್ ಅಲ್ಲಿಂದ ಹೊರಬಂದು ಬೆಂಗಳೂರಿನ 'ಭಾರತೀಯ ವಿಜ್ಞಾನ ಮಂದಿರ' ಸೇರಿ ಅನಂತರ ತಮ್ಮದೇ 'ರಾಮನ್ ಸಂಶೋಧನಾ ಕೇಂದ್ರ' ಸ್ಥಾಪಿಸಿದರು. ಅದೇ ರೀತಿ ಎಂ. ಎಸ್. ಸಾಹಾರವರು ಅಲಹಾಬಾದ್ ವಿಶ್ವವಿದ್ಯಾಲಯದಿಂದ ಹೊರಬಂದು 'ಸಾಹಾ ಬೈಜಿಕ ಭೌತವಿಜ್ಞಾನ ಸಂಸ್ಥೆ' ಸ್ಥಾಪಿಸಿದರು.

ಇದರಿಂದ ವಿಶ್ವವಿದ್ಯಾಲಯಗಳಂತೆ ಈ ಸಂಶೋಧನಾ ಕೇಂದ್ರಗಳ ಮೇಲೆಯೂ ದುಷ್ಪರಿಣಾಮ ಉಂಟಾಯಿತು. ಈ ಸಂಸ್ಥೆಗಳು ಯುವ ಪ್ರತಿಭೆಗಳನ್ನು ಆಕರ್ಷಿಸುವುದನ್ನು ಹೆಚ್ಚು ಕಷ್ಟವಾಗಿ ಮಾಡಿಕೊಂಡವು. ವಿಶ್ವವಿದ್ಯಾಲಯಗಳಿಂದ ಈ ಸಂಸ್ಥೆಗಳಿಗೆ ಬರುತ್ತಿದ್ದ ವಿಜ್ಞಾನ ಪದವೀಧರರ ಸಂಖ್ಯೆ ಶೂನ್ಯವಾಗುತ್ತಿದೆ. ಹೀಗೆ ಬೋಧನೆ ಹಾಗೂ ಸಂಶೋಧನೆಗಳ ನಡುವಿನ ವಿಭಜನ ರೇಖೆ ಜ್ಞಾನ ಸೃಷ್ಟಿ ಕೇಂದ್ರಗಳಾದ ವಿಶ್ವವಿದ್ಯಾಲಯಗಳಿಗೆ ಭಾರಿ ಅಪಾಯ ತಂದೊಡ್ಡಿದೆ.

ಭಾರತೀಯ ವಿಶ್ವವಿದ್ಯಾಲಯಗಳ ಅತ್ಯುತ್ತಮ ವಿದ್ಯಾರ್ಥಿಗಳೆಲ್ಲ ಉನ್ನತ ವ್ಯಾಸಂಗ ಹಾಗೂ ಸಂಶೋಧನೆ ಕೈಗೊಳ್ಳಲು ಹೊರದೇಶಗಳಿಗೆ, ಹೆಚ್ಚಾಗಿ ಅಮೆರಿಕಕ್ಕೆ ಹೋಗುತ್ತಿದ್ದಾರೆ. ಅವರಲ್ಲಿ ಹೆಚ್ಚಿನವರು ಹಿಂದಕ್ಕೆ ಬರುವುದೇ ಇಲ್ಲ. ಬಂದರೂ ಅವರು ತಮ್ಮೊಂದಿಗೆ ತಂದ ಉನ್ನತ ಕೈಗಾರಿಕಾ ದೇಶಗಳ ಸಂಶೋಧನಾ ಕಾರ್ಯಕ್ರಮಗಳು ತಮ್ಮ ತಾಯ್ನಾಡಿನಲ್ಲಿ ಸರಿಹೊಂದುತ್ತಿಲ್ಲವೆಂಬುದನ್ನು ಕಂಡುಕೊಳ್ಳುತ್ತಿದ್ದಾರೆ.

**ಹೊಸ ಶೈಕ್ಷಣಿಕ ನೀತಿ : ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಯತ್ತ...**

೧೯೮೬ರಲ್ಲಿ ಭಾರತ ಸರಕಾರವು ಪಾರ್ಲಿಮೆಂಟಿನಲ್ಲಿ ಮಂಡಿಸಿದ ಹೊಸ ಶೈಕ್ಷಣಿಕ ನೀತಿಯು, ವಿಶ್ವ ವಿದ್ಯಾಲಯಗಳಿಂದ ಹೊರಗೆ ಸಂಶೋಧನಾ ಕಾರ್ಯ ಹೋಗಿರುವ ಪ್ರಧಾನ ದೋಷವನ್ನು ತಿದ್ದಲು ಯತ್ನಿಸಿತು. ಸಾಂಪ್ರದಾಯಿಕ ರೀತಿಯ ಕಾಲೇಜು ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಅಂತ್ಯಹಾಕಬೇಕೆಂದು ಅದು ಒತ್ತಾಯಿಸಿತು.

೧೯೯೨ರಲ್ಲಿ ಪಾರ್ಲಿಮೆಂಟು ಅಂಗೀಕರಿಸಿದ ಪರಾಮರ್ಶಿತ ಕಾರ್ಯಕ್ರಮವು ಅಂತರ-ವಿಶ್ವವಿದ್ಯಾಲಯ ಕೇಂದ್ರ ಗಳನ್ನು ಸ್ಥಾಪಿಸುವ ಸಲಹೆ ಮಾಡಿತು. ಯುಜಿಸಿ ಮತ್ತು ಸಿಎಸ್ಐಆರ್‌ಗಳ ನಡುವೆ ಒಂದು ಒಪ್ಪಂದವಾಗಿ ಸಿಎಸ್ಐಆರ್‌ನ ಸಂಶೋಧನಾ ಸೌಲಭ್ಯಗಳು ವಿಶ್ವವಿದ್ಯಾಲಯಗಳಿಗೆ ಒದಗುವಂತೆ ಮಾಡಲಾಯಿತು. ಅದೇ ರೀತಿ ನಗರಗಳಲ್ಲಿ ವಿಶ್ವವಿದ್ಯಾಲಯ ಹಾಗೂ ಕೈಗಾರಿಕೆಗಳ ನಡುವೆ, ಭಾರತದ ಮತ್ತು ಹೊರದೇಶಗಳ ಸಂಶೋಧನಾ ಕೇಂದ್ರಗಳ ನಡುವೆ ಸಂಪರ್ಕ ಸ್ಥಾಪನೆಗೆ ಆದ್ಯತೆ ನೀಡಲಾಯಿತು. ಇವನ್ನೆಲ್ಲ ನೋಡಿಕೊಳ್ಳುವುದಕ್ಕೆ ಒಂದು ಉನ್ನತ ಮಟ್ಟದ ಸಂಸ್ಥೆ ಸ್ಥಾಪಿತ ವಾಗಿದ್ದರೂ ಸಾಕಷ್ಟು ಪ್ರಗತಿ ಸಾಧಿಸಲಾಗಿಲ್ಲ.

**ವಿಶ್ವವಿದ್ಯಾಲಯಗಳಲ್ಲಿ ಸಂಶೋಧನೆಗೆ ಪ್ರೋತ್ಸಾಹ : ಯುಜಿಸಿಯ ಯತ್ನಗಳು...**

ಸಂಶೋಧನೆ ಇಲ್ಲದೆ ಬೋಧನೆ ನಿರರ್ಥಕ ಅನ್ನುವುದನ್ನು ಮನಗಂಡ ಯುಜಿಸಿ, ವಿಶ್ವವಿದ್ಯಾಲಯಗಳಲ್ಲಿ ಬೋಧನ ಹಾಗೂ ಸಂಶೋಧನ ಚಟುವಟಿಕೆಗಳನ್ನು ದೃಢಗೊಳಿಸಲು ಅನೇಕ ಯೋಜನೆಗಳನ್ನು ರೂಪಿಸುತ್ತ ಬಂದಿದೆ. ೮




ಗದಗ ನಗರದಲ್ಲಿ ನವಕರ್ನಾಟಕ ಪುಸ್ತಕ ಪ್ರದರ್ಶನವನ್ನು ೨.೧೨.೨೦೦೫ರಂದು ಸಾಹಿತಿ ಶ್ರೀ ಶೇಖರ ಲದವಾ ಅವರು ಉದ್ಘಾಟಿಸಿದರು. ಛಾಯಾಗ್ರಾಹಕ ಉದ್ಯಮಿ ಶ್ರೀ ದಯಾನಂದ ಮುಂಡರಗಿ, ಪ್ರಾಚ್ಯವಸ್ತು ಸಂಶೋಧಕ ಶ್ರೀ ಅ. ದ. ಕಟ್ಟೀಮನಿ ಹಾಗೂ ಇನ್ನಿತರ ಪುಸ್ತಕ ಪ್ರೇಮಿಗಳು ಭಾಗವಹಿಸಿದ್ದರು. ಶ್ರೀ ಚೆನ್ನಪ್ಪ ಸ್ವಾಗತಿಸಿದರು, ಶ್ರೀ ಜಗದೀಶ್ ಆಭಾರ ಮನ್ನಣೆಗೈದರು. ಶ್ರೀ ಇರ್ಫಾನ್ ಮುದಗಲ್ ಕಾರ್ಯಕ್ರಮ ನಿರೂಪಿಸಿದರು.

ಕಾರ್ಯಕ್ರಮಗಳನ್ನು ಎರಡು ಭಿನ್ನ ಮಟ್ಟಗಳಲ್ಲಿ ಕೈಗೊಳ್ಳಲಾಯಿತು : (೧) ಕೆಲವು ಆಯ್ದ ಕಾಲೇಜುಗಳಲ್ಲಿ ಸಂಬಂಧಪಟ್ಟ ಇಡೀ ಬೋಧನ ವಿಭಾಗವನ್ನು ಆವರಿಸುವಂತೆ; (೨) ವಿಶ್ವವಿದ್ಯಾಲಯವೊಂದಕ್ಕೆ ಲಗತ್ತಾದ ಎಲ್ಲ ಕಾಲೇಜುಗಳಲ್ಲೂ ಒಂದು ವಿಷಯ ಕುರಿತಂತೆ.

ಯುಜಿಸಿಯು ವಿಶಿಷ್ಟ ಕ್ಷೇತ್ರಗಳಲ್ಲಿ ಶೈಕ್ಷಣಿಕ ಕಾರ್ಯಕ್ರಮ ಕೈಗೊಳ್ಳಲು ಆಯ್ದ ಸುಸಂಸ್ಥಾಪಿತ ಇಲಾಖೆಗಳಿಗೆ ಹಣಕಾಸು ನೆರವು ನೀಡುತ್ತಿದೆ. ಇದಲ್ಲದೆ, ಬಿಡಿ ಅಧ್ಯಾಪಕರು ಇಲ್ಲವೇ ಅಧ್ಯಾಪಕ ವೃಂದ ಅಥವಾ ಇಲಾಖೆಯೇ ಇಡಿಯಾಗಿ ಕೈಗೊಂಡ ''ಮೇಜರ್'' (ದೀರ್ಘಕಾಲಿಕ) ಹಾಗೂ ''ಮೈನರ್'' (ಹ್ರಸ್ವಕಾಲಿಕ) ಸಂಶೋಧನಾ ಪ್ರಾಯೋಜನೆಗಳಿಗೂ ಅದು ಹಣಕಾಸು ನೆರವು ನೀಡುತ್ತಿದೆ. ಬಿಡಿ ಯುವ ಅಧ್ಯಾಪಕರಿಗೆ ಡಾಕ್ಟೋರಲ್ ಸಂಶೋಧನೆಯನ್ನು ಪೂರೈಸಲು, ಸೆಮಿನಾರ್‌ಗಳಲ್ಲಿ ಮತ್ತು ಕಮ್ಮಟಗಳಲ್ಲಿ ಭಾಗವಹಿಸಲೂ ಹಣಕಾಸು ನೆರವು ನೀಡುತ್ತಿದೆ.

ಹಿರಿಯ ಅಧ್ಯಾಪಕರು ಸಂಶೋಧನೆಯಲ್ಲಿ ಸಂಪೂರ್ಣವಾಗಿ ತೊಡಗಿಕೊಳ್ಳಲು ಅನುವಾಗುವಂತೆ ಯುಜಿಸಿಯು ಒಂದು ಪ್ರಾಯೋಜನೆಯಡಿ ಅವರಿಗೆ ಒಂದು ವರ್ಷ ರಜೆ ಒದಗಿಸುತ್ತದೆ. ಇದೇ ರೀತಿ ಹಿರಿಯ ಅಧ್ಯಾಪಕರೂ ಸಂಶೋಧನ ಕಾರ್ಯಕರ್ತರೂ ಇತರ ಕಾಲೇಜು ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸ ನೀಡಲು ಮತ್ತು ಶೈಕ್ಷಣಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಲು ನೆರವು ನೀಡಲಾಗುತ್ತಿದೆ. ಯುಜಿಸಿಯ ಮತ್ತೊಂದು ಪ್ರಾಯೋಜನೆಯ ಪ್ರಕಾರ, ೬೫ ವರ್ಷ ಮೀರದ ನಿವೃತ್ತ ಪ್ರಾಧ್ಯಾಪಕರುಗಳ ತಜ್ಞತೆಯನ್ನು ವಿಶ್ವವಿದ್ಯಾಲಯಗಳು ಬಳಸಿ ಕೊಳ್ಳುವುದು ಸಾಧ್ಯವಾಗಿದೆ. ಇವಲ್ಲದೆ ಯುಜಿಸಿಯು ಕೊಠಾರಿ ಆಯೋಗ ಸೂಚಿಸಿದ್ದ 'ಮೇಜರ್ ವಿಶ್ವವಿದ್ಯಾಲಯಗಳ' ಯೋಜನೆಯ ಮುಖ್ಯಾಂಶಗಳನ್ನು ಆಗುಗೊಳಿಸಲು ನಾನಾ ಕಾರ್ಯಕ್ರಮ ಗಳನ್ನು ರೂಪಿಸಿದೆ. ಆದರೆ ಉನ್ನತ ವ್ಯಾಸಂಗ ಕ್ಷೇತ್ರದಲ್ಲಿ ರಾಜಕಾರಣದ ಹಸ್ತಕ್ಷೇಪ ಅನೇಕ ನವ್ಯ ಉಪಕ್ರಮಗಳಿಗೆ ಅಡ್ಡಬರುತ್ತಿದೆ.

**ರಾಜ್ಯ ನೆರವಿನಲ್ಲಿ ಕಡಿತ**

ಶಿಕ್ಷಣಕ್ಕಾಗಿ ಸಾರ್ವಜನಿಕ ವೆಚ್ಚ ಯಾವತ್ತೂ ಅಸಮರ್ಪಕವಾಗಿದ್ದರೂ ಈಚೆಗೆ ವಿಶ್ವ ವಿದ್ಯಾಲಯಗಳು ರಾಜ್ಯ ಸರಕಾರಗಳಿಂದಲೂ ಯುಜಿಸಿಯಿಂದಲೂ ಪಡೆಯುತ್ತಿರುವ ಹಣ ಅವುಗಳ ಕೇವಲ ಉಳಿವಿಗಷ್ಟೆ ಸಾಲುವಷ್ಟಾಗಿದೆ. ಇದು ಸಹಜವಾಗಿಯೇ ಉನ್ನತ ಶಿಕ್ಷಣ ಹಾಗೂ ಸಂಶೋಧನೆಗೆ ಬಾಧಕ ಉಂಟುಮಾಡಿದೆ.

ಉನ್ನತ ವ್ಯಾಸಂಗ ಕ್ಷೇತ್ರವನ್ನು ಖಾಸಗೀಕರಣಗೊಳಿಸುವ ಪ್ರವೃತ್ತಿಯೂ ರಾಜ್ಯದ ನೆರವಿನಲ್ಲಿ ಕಡಿತಕ್ಕೆ ಕಾರಣವಾಗಿದೆ. ಆದರೆ ಇಂತಹ ಖಾಸಗೀಕರಣ ಪ್ರವೃತ್ತಿಯು ಆಡಳಿತ ನಿರ್ವಹಣೆ, ಸಮಾಚಾರ ತಾಂತ್ರಿಕತೆ, ಜೈವಿಕ ತಂತ್ರಜ್ಞಾನ ಇತ್ಯಾದಿ ಕ್ಷೇತ್ರಗಳಲ್ಲಷ್ಟೆ ವ್ಯಾಪಕವಾಗಿದೆ. ಶೀಘ್ರ ಪ್ರತಿಫಲ ನೀಡುವ ಆನ್ವಿತ- ಯಂತ್ರಕಲೆಯಲ್ಲಷ್ಟೆ ಖಾಸಗಿಯವರಿಗೆ ಆಸಕ್ತಿ. ಗೂಗಲ್ ಸಂಸ್ಥೆಯು ಈಚೆಗೆ ವಿಶ್ವವಿದ್ಯಾಲಯಗಳಲ್ಲಿ ಕಂಪ್ಯೂಟರ್ ವಿಜ್ಞಾನ/ಎಂಜಿನಿಯರಿಂಗ್ ಕುರಿತು ಸಂಶೋಧನೆ ನಡೆಸಲು ನೆರವಾಗುವಂತೆ ಬೆಂಗಳೂರಿನಲ್ಲಿ ಒಂದು ಕೇಂದ್ರ ಸ್ಥಾಪಿಸಿರುವುದು ಇದಕ್ಕೆ ಒಂದು ನಿದರ್ಶನ.

**ವ್ಯಾಸಂಗ ಕ್ಷೇತ್ರದಲ್ಲಿ ಬದಲುತ್ತಿರುವ ಕೇಳಿಕೆ...**

ಭಾರತೀಯ ವಿದ್ಯಾರ್ಥಿಗಳು ವ್ಯಾಸಂಗ ಕ್ಷೇತ್ರದಲ್ಲಿ ಮಾಡಿಕೊಳ್ಳುತ್ತಿರುವ ಆಯ್ಕೆಯೂ ಬದಲಾಗುತ್ತಿದೆ. ಸಾಂಪ್ರದಾಯಿಕ ಪದವೀಧರರ ಮಧ್ಯೆ ನಿರುದ್ಯೋಗ ತಾಂಡವವಾಡುತ್ತಿದೆ. ಈಚೆಗಿನ ಆರ್ಥಿಕ ಉದಾರೀಕರಣವು ಪರಿಸ್ಥಿತಿಯನ್ನು ಮತ್ತಷ್ಟು ಹದಗೆಡಿಸಿದೆ. ಹಾಗಾಗಿ ವೈದ್ಯ, ದಂತವೈದ್ಯ, ನರ್ಸಿಂಗ್, ಕಂಪ್ಯೂಟರ್ ಹಾಗೂ ಸಮಾಚಾರ ತಾಂತ್ರಿಕತೆ ಇತ್ಯಾದಿ ವೃತ್ತಿಪರ ವ್ಯಾಸಂಗ ಕ್ಷೇತ್ರಗಳಲ್ಲಿ ಬೇಡಿಕೆ ಹೆಚ್ಚುತ್ತಿದೆ. ಈ ಕ್ಷೇತ್ರಗಳಲ್ಲಿ ಯಶಸ್ಸು ಕಾಣದವರು ಪ್ಯಾಕೇಜಿಂಗ್, ಪ್ಲಾಸ್ಟಿಕ್ ತಾಂತ್ರಿಕತೆ, ವಸ್ತ್ರವಿನ್ಯಾಸ, ಹವಾ ನಿಯಂತ್ರಣ ಇತ್ಯಾದಿ ಕ್ಷೇತ್ರಗಳನ್ನು ಪ್ರವೇಶಿಸುತ್ತಿದ್ದಾರೆ.

ಪ್ರತಿಭೆಯುಳ್ಳ ವಿದ್ಯಾರ್ಥಿಗಳು ಮೂಲ ಹಾಗೂ ಶುದ್ಧ ವಿಜ್ಞಾನ ಕ್ಷೇತ್ರಗಳಲ್ಲಿ ಆಸಕ್ತಿ ತೋರದೆ ಹೋಗುತ್ತಿರುವುದು ಕಾಳಜಿಯ ವಿಷಯವಾಗಿದೆ. ಈ ವಿದ್ಯಾರ್ಥಿಗಳ ಸಂಖ್ಯೆ ಸತತವಾಗಿ ಇಳಿಮುಖವಾಗುತ್ತಿದೆ. ಆದ್ದರಿಂದಲೇ ಪಿಎಚ್.ಡಿ. ವ್ಯಾಸಂಗಕ್ಕಷ್ಟೆ ಪ್ರವೇಶ ನೀಡುತ್ತಿದ್ದ ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಂಥ ಕೇಂದ್ರಗಳು ಈಗ ೫ ವರ್ಷಗಳ ಎಂ.ಎಸ್‌ಸಿ. ವ್ಯಾಸಂಗ ಕ್ಷೇತ್ರಗಳನ್ನು ತೆರೆದಿವೆ. ಭೌತಶಾಸ್ತ್ರದಲ್ಲಿ ಬಿ.ಎಸ್‌ಸಿ ವ್ಯಾಸಂಗ ತೆರೆಯಲೂ ಅವು ಯೋಚನೆ ಮಾಡುತ್ತಿವೆ.

**ಉಪಸಂಹಾರ**

ಭಾರತದಲ್ಲಿ ಆಯ್ದ ಕೆಲವು ಉನ್ನತ ವಿದ್ಯಾಸಂಸ್ಥೆಗಳು, ವಿಶೇಷವಾಗಿ ಬೈಜಿಕ ಹಾಗೂ ಅಂತರಿಕ್ಷ ವಿಜ್ಞಾನ ಕ್ಷೇತ್ರಗಳಲ್ಲಿ, ಉತ್ತಮ ಕಾರ್ಯನಿರ್ವಹಿಸಿದ್ದರೂ ವೈಜ್ಞಾನಿಕ ಮತ್ತು ಯಂತ್ರಕಲಾ ಸಾಮರ್ಥ್ಯಕ್ಕೆ ಸಂಬಂಧಿಸಿದಂತೆ ಭಾರತ ಮತ್ತು ಇತರ ಮುಂದುವರಿದ ದೇಶಗಳ ನಡುವೆ ಅಂತರ ಗಣನೀಯವಾಗಿ ವಿಸ್ತಾರ ಗೊಂಡಿದೆ. ಕೆಲವು ವಿಶ್ವವಿದ್ಯಾಲಯಗಳು ಸಂಶೋಧನೆಗೆ ಒತ್ತು ನೀಡತೊಡಗಿದ್ದರೂ ಹೆಚ್ಚಿನವು 'ಚಿಲ್ಲರೆ ಜ್ಞಾನ' ನೀಡುವುದರಲ್ಲೇ ತೃಪ್ತಿ ಪಡೆಯುತ್ತಿವೆ. ಹಾಗಾಗಿಯೆ ಪ್ರಪಂಚದ ೧೦೦ ಪ್ರಮುಖ ಉನ್ನತ ವಿಶ್ವವಿದ್ಯಾಲಯಗಳ ಪಟ್ಟಿಯಲ್ಲಿ ಭಾರತದ ಹೆಸರು ಕಾಣಿಸದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ ೨೦೨-೩೦೦ರ ನಡುವೆ ಸ್ಥಾನ ಪಡೆದಿದೆ. ಖರಗ್‌ಪುರದ ಐಐಟಿ ಹಾಗೂ ಕೋಲ್ಕತ್ತದ ವಿಶ್ವವಿದ್ಯಾಲಯ ೪೦೪-೫೦೨ರ ನಡುವೆ ಸ್ಥಾನ ಪಡೆದಿವೆ.

ಭಾರತದಲ್ಲಿಂದು ಸಮ್ಮಿಶ್ರ ರಾಜಕಾರಣ ಮೇಲುಗೈ ಪಡೆಯುತ್ತಿರುವ ಸಮಯದಲ್ಲಿ ಉನ್ನತ ಶಿಕ್ಷಣವನ್ನು ಮೂಲ ಭೂತವಾಗಿ ಪುನರ್‌ನಿರ್ಮಿಸುವ ಸಲಹೆ ಮಾಡುವುದು ಸರಿಹೋಗದು. ನಾರ್ಲೀಕರರವರ ಪ್ರಕಾರ ಮೂಲ ವಿಜ್ಞಾನ ಬೋಧನೆಯಲ್ಲಿ ಸುಧಾರಣೆ ಇಂದಿನ ಅಗತ್ಯವಾಗಿದೆ. ಅವರ ಸಲಹೆಗಳು : (೧) ಖ್ಯಾತ ವಿಜ್ಞಾನಿಗಳ ಭಾಗವಹಿಸುವಿಕೆಯೊಂದಿಗೆ ತರಗತಿಗಳ ನಡುವೆ ಅಂತರ ಕ್ರಿಯೆ; (೨) ಆಕರ ಗ್ರಂಥ ಭಂಡಾರಗಳ ಜಾಲ ಬಂಧ ರಚನೆ ಹಾಗೂ ವಿದ್ಯುನ್ಮಾನ ಸಮಾಚಾರ ವರ್ಗಾವಣೆ; (೩) ವಿಶ್ವವಿದ್ಯಾಲಯಗಳ ನಡುವೆ ಸೌಲಭ್ಯಗಳ ಪಾಲ್ಗೊಳ್ಳುವಿಕೆ; (೪) ಸ್ವಾಯತ್ತ ಸಂಶೋಧನ ಸಂಸ್ಥೆಗಳನ್ನು ಫ್ಯಾಕಲ್ಟಿ ವಿನಿಮಯದ ಮೂಲಕ ವಿಶ್ವವಿದ್ಯಾಲಯಗಳಿಗೆ ಹತ್ತಿರ ತರುವುದು, ಇತ್ಯಾದಿ. ಆದರೆ ರಾಜ್ಯದ ಹಣಕಾಸು ಬೆಂಬಲವಿಲ್ಲದೆ ಉನ್ನತ ವ್ಯಾಸಂಗದ ಯಾವುದೇ ಸುಧಾರಣೆ ಸಾಧ್ಯವೇ ಎಂಬುದು ಮುಖ್ಯ ಪ್ರಶ್ನೆ.

ಭಾರತದಲ್ಲಿ ಸ್ಥಳೀಯ ಪ್ರತಿಭೆ ಇಲ್ಲವೆಂದೇನೂ ಅಲ್ಲ. ಯುಜಿಸಿಯು ಕಳೆದ ಕೆಲವು ವರ್ಷಗಳಲ್ಲಿ ''ಉತ್ಕೃಷ್ಟತೆಯ ಕೇಂದ್ರಗಳಿ''ಗೆ ನೀಡುತ್ತಿರುವ ಬೆಂಬಲವು ಅವುಗಳನ್ನು ಭಾರತದ ಶ್ರೇಷ್ಠ ದರ್ಜೆಯ ''ಸಂಶೋಧನಾ ವಿಶ್ವವಿದ್ಯಾ ಲಯಗಳ''ನ್ನಾಗಿ ಪರಿವರ್ತಿಸುವುದೇ, ಅವು ಹೆಚ್ಚು ಹೆಚ್ಚು ಬೋಸ್, ರಾಮನ್, ಸಾಹಾರಂಥ ಪ್ರತಿಭಾವಂತರನ್ನು ಸೃಷ್ಟಿಸಲಿರುವುವೇ ಎಂಬುದು ಮುಖ್ಯ ಪ್ರಶ್ನೆಯಾಗಿದೆ. ಭಾರತೀಯ ವಿಶ್ವವಿದ್ಯಾಲಯ ವ್ಯವಸ್ಥೆಯ ಇತಿಹಾಸ ನೋಡಿದಲ್ಲಿ ನಾವು ಅಷ್ಟು ಆಶಾವಾದಿಗಳಾಗಿರಲು ಸಾಧ್ಯವೇ ಎಂಬ ಸಂಶಯ ಮೂಡುತ್ತದೆ.

**ಡಾ|| ಎನ್. ಜಯರಾಮ್**
ಪ್ರಾಧ್ಯಾಪಕರು ಹಾಗೂ ಸಂಶೋಧನಾ ಕ್ರಮಶಾಸ್ತ್ರ ವಿಭಾಗದ ಮುಖ್ಯಸ್ಥರು,
ಟಾಟಾ ಸಾಮಾಜಿಕ ವಿಜ್ಞಾನ ಸಂಸ್ಥೆ, ಮುಂಬಯಿ - ೪೦೦ ೦೮೮



# ಕಾರ್ಮಿಕರ ಕಾಯಿದೆಗಳು ಮತ್ತು ಕಾರ್ಮಿಕರ ಮುಂದಿರುವ ಸವಾಲುಗಳು

**ಭಾ**ರತದಲ್ಲಿ ಕಾರ್ಮಿಕರ ಕಾಯಿದೆಗಳ ಬೆಳವಣಿಗೆಯನ್ನು ೧೮೬೦ರಿಂದಲೂ ನಾವು ನೋಡಬಹುದಾಗಿದೆ. ಮಾಲೀಕರು ಮತ್ತು ಕಾರ್ಮಿಕರ ವಿವಾದಗಳ ಕಾಯಿದೆ ೧೮೬೦ರಲ್ಲಿ ಜಾರಿಯಲ್ಲಿದ್ದು, ಈ ಕಾಯಿದೆ ಮಾಲೀಕರು ಮತ್ತು ಕಾರ್ಮಿಕರ ನಡುವಿನ ವಿವಾದಗಳನ್ನು ಬಗೆಹರಿಸುತ್ತಿತ್ತು. ಆನಂತರ ಬಾಂಬೆಯ ಫ್ಯಾಕ್ಟರಿಗಳ ಮುಖ್ಯ ಮೇಲ್ವಿಚಾರಕ ಮೇಜರ್ ಮೂರ್ ೧೮೭೫ರಲ್ಲಿ ಒಂದು ವರದಿ ಸಲ್ಲಿಸಿ, ಸಾರ್ವಜನಿಕರ ಗಮನವನ್ನು ಕಾರ್ಖಾನೆಗಳಲ್ಲಿದ್ದ ದುಃಸ್ಥಿತಿಯ ಕಡೆ ಸೆಳೆದ. ಇದರ ಪರಿಣಾಮವಾಗಿ ಫ್ಯಾಕ್ಟರಿ ಕಾಯಿದೆ ೧೮೮೧ರಲ್ಲಿ ಜಾರಿಗೆ ಬಂತು. ಆನಂತರ ಕಾಲಕಾಲಕ್ಕೆ ಈ ಕಾಯಿದೆ ಕಾರ್ಮಿಕರ ಅಗತ್ಯಕ್ಕೆ ತಕ್ಕಂತೆ ತಿದ್ದುಪಡಿಗೆ ಒಳಗಾಯಿತು.

ಲೀಗ್ ಆಫ್ ನೇಷನ್ಸ್‌ನ ಭಾಗವಾಗಿ ಉದಯಿಸಿದ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆ ವಿಶ್ವದ ಎಲ್ಲಾ ಕಾರ್ಮಿಕ ಸಂಘಟನೆಗಳನ್ನು ವಿದ್ಯುದ್ದೀಪನಗೊಳಿಸಿತು. ಭಾರತದ ಕಾರ್ಮಿಕ ಸಂಘಟನೆಗಳೂ ಕೂಡ ಈ ಪ್ರಭಾವದಿಂದ ಹೊರತಾಗಿರಲಿಲ್ಲ. ಭಾರತ ಅಂತಾರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಸ್ಥಾಪಕ ಸದಸ್ಯನಾಗಿ ತಂತಾನೆ ಕಾರ್ಮಿಕ ಸಂಘಟನೆಯ ಹಕ್ಕನ್ನೂ ಎತ್ತಿ ಹಿಡಿಯಿತು. ಈ ಬೆಳವಣಿಗೆಯಿಂದಾಗಿ ದೇಶದಲ್ಲಿ ಅನೇಕ ಕಾರ್ಮಿಕ ಸಂಘಟನೆಗಳು ಮೂಡಿ ಬರಲು ಮತ್ತು ಸ್ವತಂತ್ರವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಯಿತು. ೧೯೧೮ರಲ್ಲಿ ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಅಹಮದಾಬಾದಿನಲ್ಲಿ ಕಾರ್ಮಿಕ ಸಂಘವೊಂದನ್ನು ಸ್ಥಾಪಿಸಲಾಯಿತು. ಅಂಬಾಲಾಲ್ ಸಾರಾಭಾಯಿಯವರ ತಂಗಿ, ಸಾಮಾಜಿಕ ಕಾರ್ಯಕರ್ತೆ ಶ್ರೀಮತಿ ಅನಸೂಯಾಬೆನ್ ಸಾರಾಭಾಯಿ ಈ ಟೆಕ್ಸ್‌ಟೈಲ್ ಲೇಬರ್ ಅಸೋಸಿಯೇಷನ್‌ನ ಮುಖ್ಯಸ್ಥರಾಗಿದ್ದರು. ಮಿಲ್ ಮಾಲೀಕರ ತಂಗಿಯಾಗಿದ್ದರೂ ಸಹ, ಫ್ಯಾಕ್ಟರಿಗಳಲ್ಲಿ ಕಾರ್ಮಿಕರ ಪರಿಸ್ಥಿತಿಯ ಬಗ್ಗೆ ಮತ್ತು ಅವರ ಚಿಂತಾಜನಕ ಸ್ಥಿತಿಯ ಬಗ್ಗೆ ಆಕೆ ವರದಿಯನ್ನು ಫ್ಯಾಕ್ಟರಿಗಳ ನಿರೀಕ್ಷಣಾಧಿಕಾರಿಗೆ ಸಲ್ಲಿಸಿ, ಅಲ್ಲಿನ ಪರಿಸ್ಥಿತಿಯನ್ನು ಉತ್ತಮಪಡಿಸಲು ಒತ್ತಾಯಿಸಿದ್ದರು. ಆ ನಂತರ ಅನಸೂಯಾಬೆನ್‌ರವರು ೧೯೧೯ರಲ್ಲಿ ಮಜೂರ್ ಮಿತ್ರ ಮಂಡಲ್‌ನ್ನೂ ಸ್ಥಾಪಿಸಿ ಕಾರ್ಮಿಕರ ಹಿತವನ್ನು ಕಾಪಾಡಲು ಶ್ರಮಿಸಿದರು. ಈ ಎಲ್ಲಾ ಪ್ರಕ್ರಿಯೆಗಳ ಫಲವಾಗಿ ಬೊಂಬಾಯಿ ಪ್ರಾಂತ್ಯದಲ್ಲಿ ಮುಷ್ಕರಗಳ ಸರಮಾಲೆ ನಡೆಯಿತು.

ಮೊದಲನೆಯ ಮಹಾಯುದ್ಧ ಮುಗಿಯುತ್ತಿದ್ದಂತೆಯೇ, ಪ್ರಪಂಚದ ಕಾರ್ಮಿಕರಲ್ಲಿ ಎಚ್ಚರಿಕೆ ಮೂಡಿ ಅವರಲ್ಲಿದ್ದ ಸುಪ್ತಶಕ್ತಿ ಹೊರಚಿಮ್ಮಿತ್ತು. ಯಾವ ಶಾಂತಿ ಒಪ್ಪಂದಗಳೂ ಕಾರ್ಮಿಕರ ಪಾಲುದಾರಿಕೆಯಿಲ್ಲದೆ ಆಗಬಾರದೆಂದು ಅಮೆರಿಕಾದ ಕಾರ್ಮಿಕ ಸಂಘದ ಅಧ್ಯಕ್ಷ ಸ್ಯಾಮ್ಯುಯಿಲ್ ಗೋಂಪರ್ಸ್ ಘೋಷಿಸಿದರು.

ಈ ಎಲ್ಲಾ ಪ್ರಗತಿಪರ ಬೆಳವಣಿಗೆಗಳು ನಡೆಯುತ್ತಿದ್ದಾಗ, ೧೯೧೮ರಲ್ಲಿ ಮಾಲೀಕರ ಕಾರ್ಮಿಕರ ವಿರೋಧಿ ನಿಲುವು ಮತ್ತು ಅವರ ದುಷ್ಟತನ ಬಿ. ಪಿ. ವಾಡಿಯಾ ಪ್ರಕರಣದಲ್ಲಿ ಹೊರಹೊಮ್ಮಿತು. ಗಿರಣಿ ಕಾರ್ಮಿಕರಾದ ಬಿ. ಪಿ. ವಾಡಿಯಾ ಮತ್ತು ಅವರ ಸಹಕಾರ್ಮಿಕರು ೯ ಜನ ತಮ್ಮ ಬೇಡಿಕೆಗಳಿಗಾಗಿ 'ಮದ್ರಾಸ್ ಲೇಬರ್ ಯೂನಿಯನ್' ಎಂಬ ಹೆಸರಿನಡಿ ಮುಷ್ಕರ ಹೂಡಿದರು. ಈ ಮುಷ್ಕರದ ಉದ್ದೇಶ ಬಕ್ಕಿಂಗ್‌ಹ್ಯಾಂ ಮತ್ತು ಕಾರ್ನಾಟಿಕಾ ಗಿರಣಿಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರ ಹಿತ ಕಾಪಾಡುವ ಸಲುವಾಗಿತ್ತು. ಈ ಪ್ರಕರಣ ಇಂಗ್ಲೆಂಡಿನ ಟಫ್‌ವಾಲೆ ರೈಲ್ವೆ ಕಂಪನಿಯಲ್ಲಿ ನಡೆದ ಸಂಗತಿಗಳನ್ನು ಹೋಲುತ್ತದೆ. ಈ ಎರಡೂ ಪ್ರಕರಣಗಳಲ್ಲಿರುವ

ಕಾರ್ಮಿಕರ ಬದುಕಿನ ದಾರುಣ ಪರಿಸ್ಥಿತಿಗಳೇ ಅವರನ್ನು ಹೋರಾಟಕ್ಕೆ ಪ್ರಚೋದಿಸಿವೆ. ಐಕ್ಯ ಹೋರಾಟಗಳ ಮೂಲಕ ತಮ್ಮ ಬೇಡಿಕೆಗಳನ್ನು ಪಡೆದುಕೊಂಡಿದ್ದಾರೆ. ಕಾರ್ಮಿಕರು ಆಳುವ ವರ್ಗದವರ ರಕ್ಷಣೆಯಲ್ಲಿರುವ ಮಾಲೀಕರ ವಿರುದ್ಧ ಕ್ರಾಂತಿಕಾರಕವಾದ ಹೋರಾಟಗಳನ್ನು ನಡೆಸಿ ಎಲ್ಲ ರೀತಿಯಲ್ಲಿ ಸಮರ್ಪಕವಲ್ಲದಿದ್ದರೂ, ಕಾರ್ಮಿಕರ ಹಿತ ಕಾಪಾಡುವ ಕಾನೂನುಗಳನ್ನು ಆಳುವ ಸರ್ಕಾರಗಳು ಅನಿವಾರ್ಯವಾಗಿ ರೂಪಿಸುವಂತೆ ಮಾಡಿದ್ದಾರೆ. ಪ್ರತಿಯೊಂದು ಕಾಯಿದೆಯೂ ಕಾರ್ಮಿಕರ ತ್ಯಾಗ, ಬಲಿದಾನಗಳಿಂದಲೇ ರೂಪಿತವಾಗಿದೆ ಎನ್ನುವುದನ್ನು ನಾವು ಮರೆಯುವಂತಿಲ್ಲ.




■

ಎಂ. ಕೃಷ್ಣಮೂರ್ತಿ

ಅಪಾದನೆಯೆಂದರೆ ಕಾರ್ಮಿಕ ಸಂಘ ಸ್ಥಾಪನೆಯು ಅತ್ಯಂತ ದೊಡ್ಡ ಅಪರಾಧ ಎನ್ನುವುದಾಗಿತ್ತು. ನ್ಯಾಯಾಲಯವು ಕಾರ್ಖಾನೆ ಮಾಲೀಕರಿಗೆ, ಬಿ ಪಿ. ವಾಡಿಯಾ ಮತ್ತು ಆತನ ಸಹಚರರು ೭೫,೦೦೦ ರೂ. ಪರಿಹಾರ ನೀಡಬೇಕೆಂದು ತೀರ್ಪು ನೀಡಿತು. ಟಫ್‌ವಾಲ್ ರೈಲ್ವೆ ಕಂಪನಿಯ ಮೊಕದ್ದಮೆಯಲ್ಲಿ ಕಾರ್ಮಿಕ ಸಂಘ ೨೩,೦೦೦ ಪೌಂಡ್ ಹಣವನ್ನು ಪರಿಹಾರಾರ್ಥವಾಗಿ ಮಾಲೀಕರಿಗೆ ನೀಡಬೇಕೆಂದು ಇಂಗ್ಲೆಂಡಿನ ನ್ಯಾಯಾಲಯ ೧೯೦೧ರಲ್ಲಿ ತೀರ್ಪನ್ನು ಕೊಟ್ಟಿತು. ''ಬಿ. ಪಿ. ವಾಡಿಯಾ ಮತ್ತು ಆತನ ಬೆಂಬಲಿಗರು ಹಣ ಕೊಡುವ ಶಕ್ತಿಯಿಲ್ಲದೆ ಅನಿವಾರ್ಯವಾಗಿ ಜೈಲಿಗೆ ಹೋಗುವ ಪರಿಸ್ಥಿತಿ ಬಂತು. ಆ ನಂತರ ರಾಜಕಾರಣಿಗಳು ಮತ್ತು ಆಡಳಿತ ಮಂಡಲಿಯವರು ವಾಡಿಯಾ ಮೇಲೆ ಒತ್ತಡ ಹೇರಿ ಮೊಕದ್ದಮೆಯನ್ನು ಹಿಂತೆಗೆದುಕೊಂಡರು. ಆದರೆ ಅದಕ್ಕೆ ವಾಡಿಯಾ ಮತ್ತು ಸಹಚರರು ತೆತ್ತ ಬೆಲೆ, ''ಬಿ. ಪಿ. ವಾಡಿಯಾ ಮತ್ತು ಇತರೆ ೯ ಜನ ಕಾರ್ಮಿಕರು ಮದ್ರಾಸ್ ನಗರ ಬಿಟ್ಟು ಹೋಗಬೇಕು. ಆತ ಮತ್ತು ಇತರೆ ೯ ಜನ ಕಾರ್ಮಿಕರು ಇನ್ನು ಮುಂದೆ ಯಾವತ್ತೂ ಕಾರ್ಮಿಕ ಸಂಘಟನೆಗೆ ಕೈಹಾಕಬಾರದು'' ಎಂಬುದಾಗಿತ್ತು. ಹೇಗಿದೆ ಮಾಲೀಕರ ಮತ್ತು ರಾಜಕಾರಣಿಗಳ ಕುತಂತ್ರ?

ಈ ಪ್ರಕರಣಗಳು ಕಾರ್ಮಿಕ ಸಂಘಗಳ ಮತ್ತು ಕಾರ್ಮಿಕ ನಾಯಕರ ಕಣ್ಣನ್ನು ತೆರೆಯಿಸಿದವು. ಅವರು ಮತ್ತಷ್ಟು ಉತ್ಸುಕರಾಗಿ ತಮ್ಮ ಹಕ್ಕುಗಳಿಗೆ ಹೋರಾಟ ನಡೆಸಲು ಇವು ಪ್ರೇರಣೆ ನೀಡಿದವು. ಕಾರ್ಮಿಕರ ನಿರಂತರ ಹೋರಾಟದ ಫಲವಾಗಿ ೧೯೩೮ರಲ್ಲಿ ಎಂಪ್ಲಾಯೀಸ್ ಲಯಬಿಲಿಟೀಸ್ ಕಾಯಿದೆ ಜಾರಿಗೆ ಬಂತು. ಅಂದಿನ ನ್ಯಾಯಾಲಯಗಳೂ ಸಹ ಕಾರ್ಮಿಕರ ಹಕ್ಕಿನ ರಕ್ಷಣೆಗೆ ನಿಂತವು. ೧೯೫೦ನೆಯ ಇಸವಿಯಲ್ಲಿ, ರಾಷ್ಟ್ರೀಯ ಮಿಲ್ ಮಜದೂರ್ ಸಂಘ v/s ಮಿಲ್ ಮಾಲೀಕರ ಒಕ್ಕೂಟ, ಬೊಂಬಾಯಿ, ಎಂಬ ಮೊಕದ್ದಮೆಯಲ್ಲಿ ನ್ಯಾಯಾಲಯವು ಕಾರ್ಮಿಕರು ಬೋನಸ್ಸನ್ನು ಹಕ್ಕಾಗಿ ಪಡೆಯಬೇಕೇ ಹೊರತು ಅದು ಅವರಿಗೆ ಪರಿಹಾರಾರ್ಥವಲ್ಲವೆಂದು ತೀರ್ಪು ನೀಡಿತು. ೧೯೬೧ರಲ್ಲಿ ಕೇಂದ್ರ ಸರ್ಕಾರ ಬೋನಸ್ ಕಮೀಷನ್‌ನನ್ನು ನೇಮಿಸಿತು. ಕಮೀಷನ್ನು ತನ್ನ ವರದಿಯನ್ನು ೧೯೬೪ರಲ್ಲಿ ಸಲ್ಲಿಸಿತು. ವರದಿಯ ಆಧಾರದ ಮೇಲೆ ೧೯೬೫ರಲ್ಲಿ ಬೋನಸ್ ಕಾಯ್ದೆ ಜಾರಿಗೆ ಬಂತು.

ಅನೇಕ ದೇಶಗಳಲ್ಲಿ ಗುತ್ತಿಗೆ ಕಾರ್ಮಿಕರ ಸೇರ್ಪಡೆ ಆರಂಭವಾಯಿತು. ಕಾರ್ಮಿಕರ ಹಿತ ಮತ್ತು ಆರೋಗ್ಯವನ್ನು ಕಡೆಗಣಿಸಿ ಭಾರತದಲ್ಲೂ ಯದ್ವಾತದ್ವಾ ಗುತ್ತಿಗೆ ಕಾರ್ಮಿಕರ ನೇಮಕ ಆರಂಭವಾಯಿತು. ಗುತ್ತಿಗೆ ಕಾರ್ಮಿಕರ ಸಂಕಷ್ಟಗಳನ್ನು ಗಮನಿಸಿ, ಸರ್ಕಾರ ಗುತ್ತಿಗೆ ಕಾರ್ಮಿಕರ ಕಾಯಿದೆಯನ್ನು ೧೯೭೦ರಲ್ಲಿ ಜಾರಿಗೊಳಿಸಿತು. ಗುತ್ತಿಗೆ ಕಾರ್ಮಿಕ ಪದ್ಧತಿ ಮಾಲೀಕರಿಗೆ ಉಪಯೋಗಕರ. ಈ ಕ್ರಮದಿಂದಾಗಿ ಮಾಲೀಕರು ನೇರ ಮೇಲ್ವಿಚಾರಣೆಯ ಜವಾಬ್ದಾರಿಯಿಂದ ಮುಕ್ತಗೊಳ್ಳುತ್ತಾರೆ. ಅವರಿಗೆ ಒಪ್ಪಿಸಿದ ಕ್ಲುಪ್ತ ಕಾಲದಲ್ಲಿ ಕೆಲಸ ಪೂರ್ಣವಾಗುತ್ತದೆ. ಮಾಲೀಕ ಇತರೆ ಕಾರ್ಮಿಕ ಕಾಯಿದೆಗಳ ಮೇಲೆ ತನ್ನ ದೃಷ್ಟಿಯನ್ನು ಕೇಂದ್ರೀಕರಿಸುವುದು ತಪ್ಪುತ್ತದೆ. ಈ ಪದ್ಧತಿಯಿಂದ ಮಾಲೀಕರು ಅತಿ ಕಡಿಮೆ ಕೂಲಿಗೆ ಕಾರ್ಮಿಕರನ್ನು ಕೆಲಸಕ್ಕೆ ಸೇರಿಸಿಕೊಳ್ಳಬಹುದು. ಹಾಗೆಯೇ ಕೈಗಾರಿಕಾ ಸಂಬಂಧಗಳಿಂದ ಅವರು ಮುಕ್ತರಾಗಲು ಈ ಪದ್ಧತಿ ಅನುವು ಮಾಡಿಕೊಡುತ್ತದೆ. ಆದುದರಿಂದಲೇ ಈ ಗುತ್ತಿಗೆ ಕಾರ್ಮಿಕ ಪದ್ಧತಿ ಮಾಲೀಕರಿಗೆ ಅತ್ಯಂತ ಪ್ರಿಯವಾದದ್ದು.

ನಮ್ಮ ಸರ್ಕಾರ ಕಾರ್ಮಿಕ ಸಂಘಗಳ ಒತ್ತಾಯಕ್ಕೆ ಮಣಿದು ಈ ಗುತ್ತಿಗೆ ಕಾರ್ಮಿಕರ ಪದ್ಧತಿಯನ್ನು ನಿಯಂತ್ರಿಸಲು ಒಂದು ಶಾಸನವನ್ನು ತಂದಿದೆ. ಎಲ್ಲಾ ವಲಯಗಳಲ್ಲಿ ಗುತ್ತಿಗೆ ಕಾರ್ಮಿಕರ ಸೇರ್ಪಡೆಗೆ ಅವಕಾಶವಿಲ್ಲ. ಸೀಮಿತ ಕ್ಷೇತ್ರಗಳಲ್ಲಿ ಮಾತ್ರ ಈ ಪದ್ಧತಿಗೆ ಅವಕಾಶವಿದೆ. ನಮ್ಮ ದೇಶದ ಸರ್ವೋಚ್ಚ ನ್ಯಾಯಾಲಯ ಸಹ ಬಿಡು ಬೀಸಾಗಿ ಗುತ್ತಿಗೆ ಕಾರ್ಮಿಕರ ನೇಮಕದ ಬಗ್ಗೆ ಅಸಂತೃಪ್ತಿ ವ್ಯಕ್ತಪಡಿಸಿ, ಕಟ್ಟುನಿಟ್ಟಾಗಿ ನಿರ್ಬಂಧಗಳನ್ನು ಹೇರಿದೆ. ನ್ಯಾಯಾಲಯದ ತೀರ್ಪು ೧೯೯೯ LLR ೪೩೩, ಹರ್ಯಾಣ ವಿದ್ಯುಚ್ಛಕ್ತಿ ಮಂಡಲಿ v/s ಸುರೇಶ ಎಂಬ ಮೊಕದ್ದಮೆಯಲ್ಲಿ ಇದನ್ನು ನಾವು ಕಾಣಬಹುದಾಗಿದೆ.

ಅಂದರೆ ಈ ಕಾಯ್ದೆ ತಿದ್ದುಪಡಿಯಾಗುವವರೆಗೂ ಮಾಲೀಕರು ಈ ಗುತ್ತಿಗೆ ಕಾರ್ಮಿಕರ ವಿಷಯವಾಗಿ ಬೇಕಾಬಿಟ್ಟಿಯಾಗಿ ವರ್ತಿಸುವಂತಿಲ್ಲ. ಅವರು ಕಟ್ಟುನಿಟ್ಟಾಗಿ ಕಾನೂನುಗಳನ್ನು ಮುಂಜಾಗರೂಕತೆಯಿಂದ ಪಾಲಿಸಲೇಬೇಕಾದ ಅನಿವಾರ್ಯತೆ ಇದೆ.

ಕಾರ್ಮಿಕರ ಬದುಕಿನ ದಾರುಣ ಪರಿಸ್ಥಿತಿಗಳೇ ಅವರನ್ನು ಹೋರಾಟಕ್ಕೆ ಪ್ರಚೋದಿಸಿವೆ. ಐಕ್ಯ ಹೋರಾಟಗಳ ಮೂಲಕ ತಮ್ಮ ಬೇಡಿಕೆಗಳನ್ನು ಪಡೆದು ಕೊಂಡಿದ್ದಾರೆ. ಕಾರ್ಮಿಕರು ಆಳುವ ವರ್ಗದವರ ರಕ್ಷಣೆಯಲ್ಲಿರುವ ಮಾಲೀಕರ ವಿರುದ್ಧ ಕ್ರಾಂತಿಕಾರಕವಾದ ಹೋರಾಟಗಳನ್ನು ನಡೆಸಿ ಎಲ್ಲ ರೀತಿಯಲ್ಲಿ ಸಮರ್ಪಕ ವಲ್ಲದಿದ್ದರೂ, ಕಾರ್ಮಿಕರ ಹಿತ ಕಾಪಾಡುವ ಕಾನೂನುಗಳನ್ನು ಆಳುವ ಸರ್ಕಾರಗಳು ಅನಿವಾರ್ಯವಾಗಿ ರೂಪಿಸುವಂತೆ ಮಾಡಿದ್ದಾರೆ. ಪ್ರತಿಯೊಂದು ಕಾಯಿದೆಯೂ ಕಾರ್ಮಿಕರ ತ್ಯಾಗ, ಬಲಿದಾನಗಳಿಂದಲೇ ರೂಪಿತವಾಗಿದೆ ಎನ್ನುವುದನ್ನು ನಾವು ಮರೆಯುವಂತಿಲ್ಲ.

ಪ್ರಪಂಚದ ಎಲ್ಲಾ ಕಾರ್ಖಾನೆಗಳ ಮಾಲೀಕರು ತಮಗೆ ಇಷ್ಟ ಬಂದ ರೀತಿಯಲ್ಲಿ ಕಾರ್ಮಿಕರನ್ನು ನಡೆಸಿಕೊಳ್ಳುತ್ತ ಅವರ ಹಕ್ಕುಗಳನ್ನು ತುಳಿದು, ಶೋಷಿಸಿ, ಉಗ್ರ ದಬ್ಬಾಳಿಕೆ ನಡೆಸಿ ಅತ್ಯಂತ ಹೆಚ್ಚಿನ ಲಾಭ ಗಳಿಸಬೇಕೆಂದು ಬಯಸುತ್ತಾರೆ. ಕಾರ್ಮಿಕರಿಗೆ ನೀಡುವ ಸವಲತ್ತುಗಳು ನಿರರ್ಥಕ ಮತ್ತು ದೇಶದ ಆರ್ಥಿಕ ಪ್ರಗತಿಗೆ ಮಾರಕ ಎಂಬ ವಿಷಯವನ್ನು ಎಲ್ಲಾ ಬಲಪಂಥೀಯ ಆರ್ಥಿಕ ತಜ್ಞರು ಮತ್ತು ಬಂಡವಾಳಶಾಹಿ ವ್ಯವಸ್ಥೆಯ ಪ್ರತಿಪಾದಕರು ಅತ್ಯಂತ ಉಗ್ರವಾಗಿ ಪ್ರತಿಪಾದಿಸುತ್ತಾರೆ.

ಕಾರ್ಮಿಕರಿಗೆ ಕೊಡುವ ಸವಲತ್ತು ಆರ್ಥಿಕ ಬೆಳವಣಿಗೆಗೆ ಇರುವ ದೊಡ್ಡ ತೊಡಕು ಎಂಬುದು ನಮ್ಮ ದೇಶದ ಅರ್ಥಮಂತ್ರಿಗಳ ವಾದ. ವಿದೇಶೀಯರು, ಸ್ವದೇಶಿ ಬಂಡವಾಳಗಾರರು ನಮ್ಮಲ್ಲಿ ಬಂಡವಾಳ ತೊಡಗಿಸಲು, ಆರ್ಥಿಕ ಬೆಳವಣಿಗೆಗೆ ಇರುವ ಎಲ್ಲಾ ತೊಡಕುಗಳನ್ನು ನಿವಾರಿಸಬೇಕೆಂದು ಅವರು ಬಯಸುತ್ತಾರೆ. ಮಾಜಿ ಪ್ರಧಾನಿ ವಾಜಪೇಯಿ ಎಂಬ ಕಾರ್ಮಿಕ ವಿರೋಧಿ ವ್ಯಕ್ತಿ ಹಿಂದೊಮ್ಮೆ ಜಾಗತೀಕರಣದಿಂದಾಗಿ ಯಾವುದೇ ಕಾರ್ಮಿಕನಾಗಲಿ ತನ್ನ ಕೆಲಸ ಕಳೆದುಕೊಂಡಿಲ್ಲವೆಂದು ಪೆದ್ದು ಪೆದ್ದಾಗಿ ಫರಮಾನು ಹೊರಡಿಸಿದ್ದರು.

ಗ್ಯಾಟ್ ಒಪ್ಪಂದದ ಒಂದು ಕಾಲಂನಲ್ಲಿ ಹೀಗೆ ಬರೆಯಲಾಗಿದೆ : ''ಒಪ್ಪಂದದಲ್ಲಿ ಸೇರಿರುವ ಎಲ್ಲಾ ಸದಸ್ಯ ರಾಷ್ಟ್ರಗಳು ತಮ್ಮ ನೆಲದ ಕಾರ್ಮಿಕ ಕಾಯಿದೆಗಳನ್ನು ಗ್ಯಾಟ್ ಒಪ್ಪಂದದ ಅನುಷ್ಠಾನಕ್ಕೆ, ಅಂದರೆ ಬಹುರಾಷ್ಟ್ರೀಯ ಕಂಪನಿಗಳಿಗೆ ರಾಷ್ಟ್ರೀಯ (ಅಂದರೆ, ಸ್ಥಳೀಯ) ಬಂಡವಾಳಗಾರರಿಗೆ, ಮಾಲೀಕರಿಗೆ ಅನುಕೂಲವಾಗುವಂತೆ, ಸೂಕ್ತವಾಗಿ ಬದಲಾಯಿಸಬೇಕು.'' ಈ ನಿರ್ದೇಶನವನ್ನು ಚಾಚೂ ತಪ್ಪದೆ ಪಾಲಿಸಲು ಭಾರತ ಸರ್ಕಾರ ತನ್ನ ನಿರಂತರ ಪ್ರಯತ್ನ ನಡೆಸುತ್ತಲೇ ಇದೆ. ಗ್ಯಾಟ್ ಒಪ್ಪಂದದಲ್ಲಿ ಸಹಿ ಹಾಕಿರುವ ಎಲ್ಲಾ ದೇಶಗಳು ಈಗಾಗಲೇ ಅಲ್ಲಿಯ ಜನರ, ಕಾರ್ಮಿಕರ ವಿರೋಧದ ನಡುವೆಯೂ ಕಾರ್ಮಿಕರ ಪರವಾಗಿದ್ದ ಕಾಯಿದೆಗಳನ್ನು ತಿದ್ದುಪಡಿ ಮಾಡಿವೆ.

ಪ್ರಪಂಚದ ಎಲ್ಲ ಶ್ರೀಮಂತರು ಗ್ಯಾಟ್ ಒಪ್ಪಂದದ ಹಾಗೂ ವಿಶ್ವ ವ್ಯಾಪಾರ ಸಂಸ್ಥೆಯ ರೂಪದಲ್ಲಿ ಒಂದಾಗಿದ್ದಾರೆ. ಅಂತಾರಾಷ್ಟ್ರೀಯ ಬಂಡವಾಳಗಾರರು ಅಮೇರಿಕಾದ ನೇತೃತ್ವದಲ್ಲಿ ಒಂದು ದೊಡ್ಡ ಕೂಟ ಕಟ್ಟಿಕೊಂಡಿದ್ದಾರೆ. ದುರದೃಷ್ಟವಶಾತ್ ಸೋವಿಯತ್ ಮತ್ತು ಅದರ ಮಿತ್ರ ದೇಶಗಳಲ್ಲಿದ್ದ ಜನಪರ ಧೋರಣೆ ಸರ್ಕಾರಗಳು ನಿರ್ಗಮಿಸಿರುವ ಈ ಪರಿಸ್ಥಿತಿಯಲ್ಲಿ ಏಕಸಂಸ್ಕೃತಿ ಇಂದು ಪ್ರಪಂಚವನ್ನು ಕಾಡುತ್ತಿದೆ. ಈ ವ್ಯವಸ್ಥೆಗೆ ಮಾನವೀಯ ಮುಖವಿಲ್ಲ. ಅದರ ಮುಖ ಲಾಭವೊಂದೇ. ಲಾಭಕ್ಕಾಗಿ ಅದು ದುಡಿಯುವ ಜನರ ಎಲ್ಲಾ ಹಕ್ಕುಗಳನ್ನು ಕಾನೂನು ಗಳನ್ನು ತುಳಿದುಹಾಕುತ್ತಿದೆ. ಖಾಸಗಿ ಬಂಡವಾಳದ ದೌರ್ಜನ್ಯವನ್ನು ಅದರ ಸರ್ವಾಧಿಕಾರವನ್ನು ಪರಿಣಾಮಕಾರಿಯಾಗಿ ಬಲವಾಗಿ ಹತೋಟಿಯಲ್ಲಿಟ್ಟುಕೊಳ್ಳಲು 'ಪ್ರಜಾಪ್ರಭುತ್ವ'ಗಳಿಗೆ ಸಾಧ್ಯವಾಗಿಲ್ಲವೆಂಬುದನ್ನು ಈಗಾಗಲೇ ಚರಿತ್ರೆ ತೋರಿಸಿದೆ.

ಎರಡು ದಶಕಗಳ ಹಿಂದೆಯೇ ಪ್ರಾರಂಭವಾದ ಖಾಸಗೀಕರಣ, ಹೊಸ ಆರ್ಥಿಕ ನೀತಿಯ ಪ್ರವೇಶಗಳು ದುಡಿಯುವ ಜನರನ್ನು ಹಣ್ಣಾಗಿಸಿವೆ. ಅವರ ಬದುಕನ್ನು ಘಾಸಿ ಗೊಳಿಸಿವೆ. ಜಾಗತೀಕರಣ ಎಂಬುದು ಶ್ರೀಮಂತ ದೇಶಗಳು ನವವಸಾಹತುಶಾಹಿಯ ರೂಪದಲ್ಲಿದ್ದು ಬಡ ದೇಶಗಳನ್ನು ಲೂಟಿ ಮಾಡುವ ಒಂದು ಪ್ರಕ್ರಿಯೆ.

ನಮ್ಮ ಸಂವಿಧಾನವು ಸಾಮಾಜಿಕ ನ್ಯಾಯದ ಅಡಿಯಲ್ಲಿ ಲಾಭದ ಹಂಚಿಕೆಯಾಗ ಬೇಕು, ಕಾರ್ಮಿಕರ ಆರೋಗ್ಯ, ಸ್ಥಿತಿ ಹಾಗೂ ಅವರು ಆಡಳಿತದಲ್ಲಿ ಪಾಲ್ಗೊಳ್ಳು ವಂತಿರಬೇಕೆಂಬುದನ್ನು ಸಾರಿ ಹೇಳುತ್ತದೆ. ಆದರೆ ನಮ್ಮ ರಾಜಕಾರಣಿಗಳು ಈ ಎಲ್ಲಾ ಸಂವಿಧಾನಾತ್ಮಕ ವಿಧಿವಿಧಾನಗಳನ್ನು ಗಾಳಿಗೆ ತೂರಿ ಕಾರ್ಮಿಕ ಕಾಯ್ದೆಗಳಿಗೆ ತಿದ್ದುಪಡಿ ತರಲು ಹೊರಟಿದ್ದಾರೆ. ಈ ಹಿಂದೆ ವಾಜಪೇಯಿಯವರ ಸರ್ಕಾರ ಕಾರ್ಮಿಕರ ಹಕ್ಕುಗಳನ್ನು ಮೊಟಕುಗೊಳಿಸಲು ಕಾರ್ಮಿಕ ವಿವಾದಗಳ ಕಾಯಿದೆಗೆ ತಿದ್ದುಪಡಿ ತರುವ ಪ್ರಯತ್ನ ಮಾಡಿತ್ತು. ಎಲ್ಲಾ ಕಾರ್ಮಿಕರು ವಿಶಾಲ ಮನೋಭಾವದಿಂದ ದೇಶದ ಆರ್ಥಿಕ ಸ್ಥಿತಿಯನ್ನು ಶೇ. ೮ರಿಂದ ೯ರವರೆಗೆ ಏರಿಸಲು ಮತ್ತು ಈ ದೇಶದ ಎಲ್ಲಾ ಕೈಗಾರಿಕೆಗಳ ಮಾಲೀಕರನ್ನು ಮತ್ತು ಅವರ ಬೆಳವಣಿಗೆಯನ್ನು ಪ್ರೋತ್ಸಾಹಿಸಲು ಕಾರ್ಮಿಕ ಕಾಯಿದೆಯಲ್ಲಿ ತಿದ್ದುಪಡಿಗಳು ಅವಶ್ಯಕವೆಂದು ವಾಜಪೇಯಿ ಸಾರಿದ್ದರು. ಇಂತಹ ಜೀವ ವಿರೋಧಿ ನಾಯಕರಿಗೆ ಜನಸಾಮಾನ್ಯರ ಕನಿಷ್ಠ ಅಗತ್ಯತೆಗಳ ಬಗ್ಗೆ ಕಳಕಳಿಯಿಲ್ಲ. ಕಾರ್ಮಿಕರಿಗೆಂದು ಕೊಡುವ ಸಂಬಳ, ಸಾರಿಗೆ ಸೌಲಭ್ಯ, ಬೋನಸ್ ಇತ್ಯಾದಿಗಳು ಅನುತ್ಪಾದಕವೆಂದೂ ಅವುಗಳನ್ನು ಕಡಿತ ಮಾಡಬೇಕೆಂದೂ ಈ ತರಹದ ಜನ ಬಯಸುತ್ತಾರೆ. ಇಡೀ ದೇಶದ ಬೃಹತ್ ಕಾರ್ಮಿಕ ಸಂಘಟನೆಗಳ ಪ್ರತಿನಿಧಿಗಳ ಮಾತನ್ನು ಕೇಳದೆ, ಅವರೊಂದಿಗೆ ಮಾತನಾಡುವ ಸೌಜನ್ಯ ಸಹ ತೋರಿಸದೆ ತಿದ್ದುಪಡಿಗೆ ವಾಜಪೇಯಿ ಮುಂದಾಗಿದ್ದರು. ಈ ವಿಷಯವಾಗಿ ೨೦೦೧ನೇ ಮೇ ತಿಂಗಳಲ್ಲಿ ಅಖಿಲ ಭಾರತ ಮಟ್ಟದಲ್ಲಿ ಕಾರ್ಮಿಕ ಸಮಾವೇಶ ನಡೆದು ಅಂದಿನ ಕೇಂದ್ರ ಸರ್ಕಾರದ ಕಾರ್ಮಿಕ ವಿರೋಧಿ ನೀತಿಯನ್ನು ಒಕ್ಕೊರಲಿನಿಂದ ಖಂಡಿಸಲಾಯಿತು. ಉದ್ದೇಶಿತ ಕಾರ್ಮಿಕ ವಿರೋಧಿ ತಿದ್ದುಪಡಿಗಳನ್ನು ತರುವಷ್ಟರಲ್ಲಿಯೇ ಈ ದೇಶದ ಮಹಾಜನತೆ ವಾಜಪೇಯಿ ಮತ್ತು ಅವರ ಬೆಂಬಲಿಗರನ್ನು ಶಾಶ್ವತವಾಗಿ ಮನೆಗೆ ಕಳುಹಿಸಿತು.

ಇತ್ತೀಚೆಗೆ ಕೇಂದ್ರದಲ್ಲಿ ಅಧಿಕಾರಕ್ಕೆ, ಎಡಪಕ್ಷಗಳ ಬೆಂಬಲದೊಂದಿಗೆ, ಬಂದಿರುವ ಸಮ್ಮಿಶ್ರ ಸರ್ಕಾರ ಸಹ ಬಿಜೆಪಿ ಸರ್ಕಾರಕ್ಕಿಂತ ಭಿನ್ನವಾಗಿಲ್ಲ. ಎಡಪಕ್ಷಗಳ ನಿರಂತರ ಒತ್ತಡದ ನಡುವೆಯೂ, ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಅಂಶಗಳನ್ನು ಗಾಳಿಗೆ ತೂರಿ ತನ್ನ ಸರ್ವಾಧಿಕಾರಿ ಧೋರಣೆ ಮುಂದುವರೆಸುತ್ತಿದೆ. ಈ ದಿಸೆಯಲ್ಲಿ ಭಗವತಿ ಸಮಿತಿ, ಗೋಸ್ವಾಮಿ ಸಮಿತಿಯ ಶಿಫಾರಸ್ಸುಗಳು ಮಾಲೀಕರ ಪರವಾಗಿವೆ. ಕಾರ್ಮಿಕ ವಿವಾದಗಳ ಕಾಯಿದೆ ೧೯೪೭ರ ೨೫ (N)(D)ಯನ್ನು ಸಂಪೂರ್ಣವಾಗಿ ತೆಗೆದುಹಾಕಬೇಕೆಂದೂ, ಎಲ್ಲಾ ವಲಯಗಳಲ್ಲಿ ಗುತ್ತಿಗೆ ಕಾರ್ಮಿಕರ ಸೇರ್ಪಡೆಗೆ ಅವಕಾಶ ನೀಡಬೇಕೆಂದೂ, ಮಾಲೀಕರಿಗೆ ಕಾರ್ಮಿಕರ ವಿಷಯವಾಗಿ ಅವರನ್ನು ತುಳಿಯಲು ಅವಕಾಶ ನೀಡಬೇಕೆಂದೂ, ಆ ದಿಸೆಯಲ್ಲಿ ತಿದ್ದುಪಡಿಗಳಾಗಬೇಕೆಂದೂ ಅವರು ಬಯಸುತ್ತಾರೆ. ೨೦೦೨ನೆಯ ಇಸವಿಯಲ್ಲಿ ೨ನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ಶಿಫಾರಸ್ಸಿನಂತೆ ಈ ತಿದ್ದುಪಡಿ ತರಲಾಗುತ್ತಿದೆ. ಬಹುರಾಷ್ಟ್ರೀಯ ವಿದೇಶಿ ಕಂಪನಿಗಳು ಈ ದೇಶದಲ್ಲಿ ಬಂಡವಾಳ ತೊಡಗಿಸಲು ಕಾರ್ಮಿಕ ಕಾಯಿದೆಗೆ ತಿದ್ದುಪಡಿ ಅಗತ್ಯವೆಂದು ವಿತ್ತಮಂತ್ರಿ ಚಿದಂಬರಂ ಮತ್ತು ಪ್ರಧಾನಿ ಮನಮೋಹನ್‌ಸಿಂಗ್ ಬಯಸುತ್ತಾರೆ.

ಆದರೆ ಈ ದೇಶಕ್ಕೆ ನೂರಾರು ಬಹುರಾಷ್ಟ್ರೀಯ ಕಂಪನಿಗಳು ಬಂದಿದ್ದರೂ ಸಹ ಈ ದೇಶದ ಕಾರ್ಮಿಕರಿಗೆ ಉದ್ಯೋಗ ಕಲ್ಪಿಸುವಲ್ಲಿ ಅವು ವಿಫಲವಾಗಿವೆ. ಆದರೂ ಅವನ್ನು ಸರಕಾರ ಓಲೈಸುವುದು ಯಾವ ನ್ಯಾಯ ? ಈ ತಿದ್ದುಪಡಿಗಳು ಕಾರ್ಮಿಕರ ಬಡತನ, ಅಸಂಘಟನೆ, ಅನಕ್ಷರತೆಯನ್ನು ಬಳಸಿ, ಕಂಪನಿಗಳು ತಮ್ಮ ಸರ್ವಾಧಿಕಾರಿ ನಿಲುವಿನಿಂದ ಅತ್ಯಂತ ಹೆಚ್ಚು ಲಾಭ ಗಳಿಸುವ ಉದ್ದೇಶ ಹೊಂದಿವೆ. ಈ ತಿದ್ದುಪಡಿಗಳಿಂದ ಕಾರ್ಮಿಕರ ಸ್ಥಿತಿ ಅತ್ಯಂತ ಹೀನಾಯವಾಗುತ್ತದೆ; ನಿರುದ್ಯೋಗ ಹೆಚ್ಚುತ್ತದೆ; ನಿರುದ್ಯೋಗಿ ಕಾರ್ಮಿಕರ ಮೀಸಲು ಪಡೆ ಅಧಿಕಗೊಳ್ಳುತ್ತದೆ. ಸಂಘಟಿತ ಕಾರ್ಮಿಕರನ್ನು ಸಮಾಪ್ತಿಗೊಳಿಸುವುದು ಮತ್ತು ಅಸಂಘಟಿತ ಕಾರ್ಮಿಕರನ್ನು ಶಾಶ್ವತವಾಗಿ ನಿರ್ನಾಮ ಮಾಡುವುದು ಇದರ ಮೂಲ ಉದ್ದೇಶವಾಗಿದೆ.

ಈಗಾಗಲೇ ಈ ದೇಶದ ಹೊಸ ಆರ್ಥಿಕ ನೀತಿ, ಜಾಗತೀಕರಣದ ಪ್ರಭಾವದಿಂದಾಗಿ ದೇಶದ ೧,೮೦,೦೦೦ ಕೈಗಾರಿಕೆಗಳನ್ನು ಮುಚ್ಚಿದೆ. ಸಾರ್ವಜನಿಕ ವಲಯದ ಕೈಗಾರಿಕೆಗಳು ರೋಗಗ್ರಸ್ತವಾಗಿ ಮುಚ್ಚುವ ಸ್ಥಿತಿಗೆ ಬಂದಿವೆ. ಬಟ್ಟೆ ಗಿರಣಿಗಳ ಪರಿಸ್ಥಿತಿ ಕೇಳುವಂತಿಲ್ಲ. ಕಾರ್ಮಿಕರು ಕೆಲಸ ಕಳೆದುಕೊಂಡು ನಿರ್ಗತಿಕ ರಾಗಿದ್ದಾರೆ. ಶ್ರೀಮಂತ ಮತ್ತು ಬಡವರ ಮಧ್ಯೆ ಅಂತರ ಹೆಚ್ಚುತ್ತಿದೆ. ಕಾರ್ಮಿಕರು ಸಂಘಟಿತ ವಲಯದಿಂದ ಅಸಂಘಟಿತ ವಲಯಕ್ಕೆ ಸೇರ್ಪಡೆ ಯಾಗುತ್ತಿದ್ದಾರೆ. ಅಸಂಘಟಿತ ವಲಯದ ಕಾರ್ಮಿಕರನ್ನು ಕೇಳುವವರಿಲ್ಲ.

ಕೈಗಾರಿಕೆಗಳಲ್ಲಿನ ಸ್ಥಿತಿಗತಿಗಳು ತುಂಬಾ ಹೀನಾಯವಾಗಿವೆ. ಪ್ರತಿ ವರ್ಷ ಒಂದು ಲಕ್ಷ ಜನ ಕಾರ್ಮಿಕರು ಕೈಗಾರಿಕಾ ಅಪಘಾತಗಳಲ್ಲಿ ಸಾಯುತ್ತಿದ್ದಾರೆ. ಅವರ ಸ್ಥಿತಿ ಕರುಳು ಚುಚ್ಚುವಂತಿದೆ. ಇಡೀ ದೇಶದಲ್ಲಿ ೨೨ ಲಕ್ಷ ಜನ ಕಾರ್ಮಿಕರು ತಮ್ಮ ವೃತ್ತಿಪರ ಕಾಯಿಲೆಗಳಿಂದ ಸಾಯುತ್ತಿದ್ದಾರೆಂದರೆ ಈ ದೇಶದ ಕಾರ್ಮಿಕರ ಸ್ಥಿತಿ ಯಾವ ಗತಿ ಮುಟ್ಟಿದೆ ಎಂಬ ಅಂಶವು ನಮ್ಮ ಅರಿವಿಗೆ ಬಾರದಿರದು.

ಜಾಗತೀಕರಣದ ಪ್ರಭಾವದಲ್ಲಿ ನಮ್ಮನ್ನು ಆಳುವ ಸರ್ಕಾರ ತನ್ನ ಸಾಮಾಜಿಕ

ಜವಾಬ್ದಾರಿಯಿಂದ ನುಣುಚಿಕೊಳ್ಳುವ ಸಲುವಾಗಿ ಹೆಚ್ಚು ಹೆಚ್ಚು ಖಾಸಗೀಕರಣಕ್ಕೆ ಒತ್ತುಕೊಡುತ್ತಿದೆ. ಹೆಚ್ಚು ಖಾಸಗೀಕರಣವೆಂದರೆ ಕುರಿ ಕಾಯಲು ತೋಳ ನೇಮಿಸಿದಂತೆ. ಮುಂದೊಂದು ದಿನ ಖಾಸಗಿ ಸಂಸ್ಥೆಗಳೇ ಸಂಪೂರ್ಣವಾಗಿ ಸರ್ಕಾರವನ್ನು ನಿಯಂತ್ರಿಸುವ ಸ್ಥಿತಿ ಬಂದರೆ ನಾವು ಆಶ್ಚರ್ಯಪಡಬೇಕಾಗಿಲ್ಲ.

ನಮ್ಮ ಕರ್ನಾಟಕ ರಾಜ್ಯದಲ್ಲಿ ೫ ಲಕ್ಷಕ್ಕೂ ಅಧಿಕ ಕಾರ್ಮಿಕರು ಐ.ಟಿ. ಸಂಸ್ಥೆಗಳಲ್ಲಿ ದುಡಿಯುತ್ತಿದ್ದಾರೆ. ಅವರ ಸ್ಥಿತಿ ಚಿಂತಾಜನಕವಾಗಿದೆ. ಐ.ಟಿ. ಮತ್ತು ಬಿ.ಟಿ. ಕಂಪನಿಗಳಲ್ಲಿ ಸಮಯ ನಿಗದಿ ಇಲ್ಲ, ಕೆಲಸದ ಅವಧಿ ೧೨ರಿಂದ ೧೫ ಗಂಟೆಗಳಷ್ಟಿದೆ. ಈ ರೀತಿ ಕಾರ್ಮಿಕ ಕಾನೂನುಗಳನ್ನು ಗಾಳಿಗೆ ತೂರಿ ಐ.ಟಿ.ಕಂಪನಿಗಳು ಕಾರ್ಮಿಕರನ್ನು ಶೋಷಿಸಿದರೂ ನಮ್ಮ ರಾಜ್ಯ ಸರ್ಕಾರ ಚಕಾರವೆತ್ತುತ್ತಿಲ್ಲ. ಏಕೆಂದರೆ, ಸರ್ಕಾರ ಐ.ಟಿ. ದೊರೆಗಳ ಗುಲಾಮ! ನಮ್ಮ ರಾಜ್ಯದ ನೆಲ, ನೀರು, ವಿದ್ಯುತ್, ತೆರಿಗೆ, ಸಾರಿಗೆ ಸೌಲಭ್ಯ – ಹೀಗೆ ಎಲ್ಲವನ್ನೂ ಬಿಡು ಬೀಸಾಗಿ ದುಗ್ಗಾಣಿ ಬೆಲೆಗೆ ಪಡೆಯುವ ಐ.ಟಿ.ಮತ್ತು ಬಿ.ಟಿ. ಸಂಸ್ಥೆಗಳು ಈ ನೆಲದ ಕಾನೂನಿಗೆ ಗೌರವ ಕೊಡುವುದಿಲ್ಲ. ಅಲ್ಲಿರುವ ನೌಕರರು ತಪ್ಪಿಯೂ ಕಾರ್ಮಿಕ ಸಂಘಟನೆಯ ಮಾತು ಎತ್ತುವಂತಿಲ್ಲ. ಅಂತಹ ಪ್ರಯತ್ನ ನಡೆಸಿದರೆ ತಕ್ಷಣವೇ ಅವರಿಗೆ ಗೇಟ್‌ಪಾಸ್ ಕೊಡಲಾಗುತ್ತದೆ. ಅಂದರೆ ವಾಡಿಯಾ ಪ್ರಕರಣ ೧೯೧೮ರಲ್ಲಿ ನಡೆದಿದ್ದರೂ, ಇಂದಿನ ೨೦೦೫ರ ಸ್ಥಿತಿಗೂ ವ್ಯತ್ಯಾಸ ನಾವು ಕಾಣುವಂತಿಲ್ಲ. ಇಂತಹ ಸ್ಥಿತಿಯಲ್ಲಿ ತಿದ್ದುಪಡಿ ತಂದು ಮಾಲೀಕರಿಗೆ ಇನ್ನೂ ಹೆಚ್ಚು ಅಧಿಕಾರ ಕೊಟ್ಟರೆ ಈ ದೇಶದ ದುಡಿಯುವ ಜನರ ಗತಿ ಏನು ?



ಸ್ವಾತಂತ್ಯ ಪೂರ್ವದ ನ್ಯಾಯಾಲಯದ ತೀರ್ಪುಗಳು ಕಾರ್ಮಿಕ ವಿರೋಧಿಯಾಗಿ ಪ್ರಕಟಗೊಂಡಿದ್ದವು. ಈಗಲೂ ಆ ಪರಿಸ್ಥಿತಿ ಮುಂದುವರೆದಿದೆ. ಇತ್ತೀಚಿನ ನಮ್ಮ ನ್ಯಾಯಾಲಯಗಳ ತೀರ್ಪುಗಳು ಕಾರ್ಮಿಕರ ಹಿತ ಕಾಪಾಡುವ ಬದಲು ಈ ವ್ಯವಸ್ಥೆಯ ರಕ್ಷಣೆಗೆ ನಿಂತಂತೆ ಕಾಣುತ್ತವೆ. ಕಾರ್ಮಿಕರ ಸಾಮೂಹಿಕ ಚೌಕಾಶಿಯ ಹಕ್ಕಾದ ಮುಷ್ಕರವನ್ನು ನಿಷೇಧಿಸಿರುವುದು ತುಂಬಾ ದುರದೃಷ್ಟಕರ.

ತಾರೀಖು ೨೯-೯-೨೦೦೫ರಂದು ಇಡೀ ದೇಶದ ಶ್ರಮಿಕರು ಕೇಂದ್ರ ಸರ್ಕಾರದ ಕಾರ್ಮಿಕ ಕಾಯ್ದೆಗಳಿಗೆ ತಿದ್ದುಪಡಿ ತರುವುದನ್ನು ವಿರೋಧಿಸಿ ಸಾರ್ವತ್ರಿಕ ಮುಷ್ಕರ ನಡೆಸಿದರು. ಮುಷ್ಕರ ಅತ್ಯಂತ ಯಶಸ್ವಿಯಾಯಿತು. ಈ ಮುಷ್ಕರ ನಡೆದದ್ದು ಕಾರ್ಮಿಕರ ಕಾಯಿದೆಗಳಿಗೆ ತಿದ್ದುಪಡಿ ತರುವುದರ ವಿರುದ್ಧವಾಗಿ, ಕಾರ್ಮಿಕರ ಹಕ್ಕುಗಳ ರಕ್ಷಣೆಗಾಗಿ. ಕೇಂದ್ರ ಸರ್ಕಾರ ಈ ತಿದ್ದುಪಡಿಗಳ ಮೂಲಕವಾಗಿ ಕಾರ್ಮಿಕ ಸಂಘಟನೆಗಳ ಸಂಖ್ಯೆಗೆ ಕಡಿವಾಣ ಹಾಕುವುದು, ಕಾರ್ಮಿಕರ ರಜಾದಿನಗಳಲ್ಲಿ ಕಡಿತ, ಪೂರ್ವ ಸೂಚನೆಯಿಲ್ಲದೆ ನೌಕರನನ್ನು ವಜಾ ಮಾಡುವುದು, ೨ನೇ ಕಾರ್ಮಿಕ ಆಯೋಗದ ಶಿಫಾರಸ್ಸುಗಳನ್ನು ಜಾರಿಗೆ ತರುವುದು, ವೇತನ ನಿರ್ಧರಿಸುವ ಹಕ್ಕನ್ನು ಮಾಲೀಕರಿಗೆ ನೀಡುವುದು, ಎಲ್ಲಾ ಕ್ಷೇತ್ರಗಳಲ್ಲಿ ಗುತ್ತಿಗೆ ಕಾರ್ಮಿಕರನ್ನು ನೇಮಿಸಿಕೊಳ್ಳುವ ಅಧಿಕಾರವನ್ನು ಮಾಲೀಕರಿಗೆ ನೀಡುವುದು, ಶೇ. ೬೬ ಸದಸ್ಯರ ಅಗತ್ಯ ಕಾರ್ಮಿಕ ಸಂಘಟನೆಯ ಮಾನ್ಯತೆಗೆ ಮಾಪನ ಮಾಡುವುದು, ಇತ್ಯಾದಿ... ಅನೇಕ ರೀತಿಯ ಅತ್ಯಂತ ಅಮಾನವೀಯ ತಿದ್ದುಪಡಿಗಳನ್ನು ತರಲು ಸರ್ಕಾರ ಉದ್ದೇಶಿಸಿದೆ.

ಇಂತಹ ಸ್ಥಿತಿಯಲ್ಲಿ ಸಾಮಾಜಿಕ ಬದಲಾವಣೆಯ ಹರಿಕಾರರಾದ ಕಾರ್ಮಿಕರು ತಮ್ಮ ಕೆಲಸ ಕಾರ್ಯಗಳನ್ನು ಒಂದು ದಿನದ ಮಟ್ಟಿಗೆ ನಿಲ್ಲಿಸಿ ಸಾರ್ವತ್ರಿಕ ಮುಷ್ಕರದಲ್ಲಿ ಪಾಲುಗೊಂಡಿದ್ದು ಅಗತ್ಯವೆನಿಸದಿರದು.

ಇತ್ತೀಚಿನ ದಿನಗಳಲ್ಲಿ ಕಾರ್ಮಿಕರ, ಬಡಜನರ, ಶೋಷಿತರ ಹೋರಾಟಗಳನ್ನು ತುಂಬಾ ಲಘುವಾಗಿ ಪರಿಗಣಿಸುವ ಪರಿಪಾಠ ಮೊದಲಾಗಿದೆ. ಈ ದೇಶದ ಮಧ್ಯಮ ವರ್ಗದ ಜನರಲ್ಲಿ ಈ ಭಾವನೆ ಬೆಳೆಯುತ್ತಿರುವುದು ಅತ್ಯಂತ ದುರದೃಷ್ಟಕರ. ಈ ರೋಗಗ್ರಸ್ತ ಮನಸ್ಸಿನ ಪರಿಸ್ಥಿತಿಗೆ ನಮ್ಮ ಮಾಧ್ಯಮಗಳ ಕೊಡುಗೆಯೂ ಇದೆ.

೧೯೨೯ನೆಯ ಇಸವಿಯಲ್ಲಿ ಬ್ರಿಟಿಷರು ಅಂದಿನ ಪಾರ್ಲಿಮೆಂಟಿನಲ್ಲಿ ಕಾರ್ಮಿಕ ವಿವಾದಗಳ ಕಾಯ್ದೆ ಮತ್ತು ಸಾರ್ವಜನಿಕ ರಕ್ಷಣಾ ಕಾಯ್ದೆಗಳನ್ನು ಮಂಡಿಸಲು ಪ್ರಯತ್ನಿಸಿದಾಗ, ಹುತಾತ್ಮ ಭಗತ್‌ಸಿಂಗ್ ಮತ್ತು ಬಟುಕೇಶ್ವರ್ ದತ್ ಬಾಂಬ್‌ಗಳನ್ನು ಸಿಡಿಸಿ ಅತ್ಯುಗ್ರ ಪ್ರತಿಭಟನೆ ನಡೆಸಿ ಅಮರರಾಗಿದ್ದು ನಮಗೆ ನೆನಪಿಗೆ ಬರುತ್ತದೆ. ಆ ರೀತಿಯ ಮೂರ್ಖತನದ ಕಾನೂನುಗಳನ್ನು ಮಾಡುವವರು, ಅಂತಹ ದಮನಕಾರಿ ಕಾಯಿದೆಗಳನ್ನು ಜಾರಿಗೊಳಿಸುವವರು, ಮತ್ತೆಂದೂ ಆ ರೀತಿಯ ಕಾನೂನುಗಳನ್ನು ಮಾಡುವ ಪ್ರಯತ್ನ ಮಾಡದಿರುವಂತೆ ಅವರಿಗೆ ಬುದ್ಧಿ ಕಲಿಸಲು ಈ ಇಬ್ಬರು ಹುತಾತ್ಮರು ಬಾಂಬ್‌ಗಳನ್ನು ಸಿಡಿಸಿದರು. ಬೇಜವಾಬ್ದಾರಿ ಕಾರ್ಮಿಕರ ಹಿತದ ವಿರುದ್ಧದ ಕಾನೂನುಗಳಿಗೆ ಸ್ಥಾನವಿಲ್ಲವೆಂದು ಆ ಇಬ್ಬರೂ ಸಾರಿ ಹೇಳಿದ್ದರು. ಆದರೆ ಇಂದು ಭಗತ್‌ಸಿಂಗ್ ಫೋಟೋಗೆ ಪೂಜೆ ಮಾಡುವ ಜನ, ಭಗತ್‌ಸಿಂಗ್ ಯಾವ ಕಾರಣಕ್ಕೆ ಹುತಾತ್ಮನಾದ ಎಂದು ಹೇಳಲು ಹಿಂಜರಿಯುತ್ತಾರೆ. ಇದು ಆ ಜನರ ಎಡಬಿಡಂಗಿತನದ ಒಂದು ಉದಾಹರಣೆಯಾಗಿದೆ.

ಸರ್ಕಾರಗಳು ಕಾರ್ಮಿಕ ಚಳುವಳಿಗಳನ್ನು ಅತ್ಯಂತ ಹೀನಾಯವಾಗಿ ಬಗ್ಗು ಬಡಿಯುತ್ತಿವೆ. ಕಾರ್ಮಿಕ ಸಂಘದ ಪ್ರತಿನಿಧಿಗಳ ಮೇಲೆ ಇಲ್ಲಸಲ್ಲದ ಆಪಾದನೆಗಳನ್ನು ಮಾಡಿ, ಸುಳ್ಳು ಕೇಸುಗಳನ್ನು ಹಾಕಿ, ಅವರನ್ನು ಭಯೋತ್ಪಾದಕರಂತೆ ಚಿತ್ರಿಸಲಾಗುತ್ತದೆ. ಕಾರ್ಮಿಕ ಸಂಘಟನೆಗೆ ಹಿನ್ನಡೆ ಉಂಟಾಗಿದೆ.

ನಮ್ಮ ದೇಶದ ಆಳುವ ಸರ್ಕಾರಗಳು ಅವರ ಏಜಂಟರಾದ ಪೊಲೀಸರನ್ನು ಬಳಸಿಕೊಂಡು ಹೇಗೆ ನಿರ್ದಯವಾಗಿ ಕಾರ್ಮಿಕರ ಪ್ರಜಾಪ್ರಭುತ್ವದ ಚಳವಳಿಗಳನ್ನು ಹತ್ತಿಕ್ಕುತ್ತಿದ್ದಾರೆಂಬುದಕ್ಕೆ ಇತ್ತೀಚೆಗೆ ಹರಿಯಾಣ ರಾಜ್ಯದ ಗುರುಗಾಂವ್‌ನಲ್ಲಿ ಹೋಂಡಾ ಮೋಟಾರ್ಸ್ ಕಾರ್ಖಾನೆಯ ದುರ್ಘಟನೆ ಒಂದು ಉದಾಹರಣೆ. ಗುರುಗಾಂವ್‌ನ ದುರ್ಘಟನೆ ನಮ್ಮ ಮನಸ್ಸಿನಿಂದ ಮಾಸಿ ಹೋಗುವ ಮೊದಲೇ ಮತ್ತೊಂದು ದುರ್ಘಟನೆ ಗುಹಾನದಲ್ಲಿ ಸಂಭವಿಸಿದೆ. ಇದರಿಂದಾಗಿ ಸರ್ಕಾರಗಳು ಹೇಗೆ ಕಾರ್ಮಿಕರ, ದುಡಿಯುವ ಜನರ ವಿರೋಧಿಯಾಗುತ್ತವೆ ಎಂಬುದನ್ನು ನಾವು ಗಮನಿಸಬೇಕಾಗಿದೆ.

ಆದುದರಿಂದ ನಮ್ಮ ದೇಶದ ಕಾರ್ಮಿಕರು ತಮ್ಮ ಹೋರಾಟಗಳನ್ನು ಕೂಲಿ ಹೆಚ್ಚಳ, ತುಟ್ಟಿ ಭತ್ಯ, ಬೋನಸ್ ಹೆಚ್ಚಳ ಮತ್ತಿತರ ಸೌಲಭ್ಯಗಳಿಗೆ ಮಾತ್ರ ಸೀಮಿತಗೊಳಿಸದೆ, ಕ್ರಾಂತಿಕಾರಿಗಳಾಗಿ ಈ ದರಿದ್ರ ವ್ಯವಸ್ಥೆಯನ್ನು ಬದಲಾಯಿಸುವ ಕಾರ್ಯವನ್ನು ಮಾಡಬೇಕಾಗಿದೆ. ಕಾರ್ಮಿಕರು ತಮ್ಮ ಸಾಮಾಜಿಕ ಪರಿವರ್ತನೆಯ ಕೆಲಸ ಮಾಡಿರುವುದನ್ನು ಪ್ರಪಂಚದ ಚರಿತ್ರೆ ತೋರುತ್ತಿದೆ.

ಎಡ ಪಕ್ಷಗಳು, ಎಡ ಸರ್ಕಾರಗಳು ಶ್ರಮಿಕರ ರಕ್ಷಣೆಗೆ ನಿಲ್ಲುವ ಬದಲು ಅವರ ವಿರುದ್ಧವಾಗಿ ಕೆಲಸ ನಿರ್ವಹಿಸುತ್ತಿರುವುದು ದುರದೃಷ್ಟಕರ. ಪಶ್ಚಿಮ ಬಂಗಾಲದ ಫಲವತ್ತಾದ ೬೪೦೦ ಎಕರೆ ಪ್ರದೇಶ ಇಂಡೋನೇಶಿಯಾದ ಬಹುರಾಷ್ಟ್ರೀಯ ಕಂಪನಿಗೆ ಕೊಟ್ಟಿರುವುದು ಅತ್ಯಂತ ದುರದೃಷ್ಟಕರ. ಒಂದು ಕ್ರಾಂತಿಕಾರಕ ಪಕ್ಷ ಹೇಗೆ ಪರಿಷ್ಕರಣವಾದಕ್ಕೆ ದೂಡಲ್ಪಡುತ್ತದೆ ಎಂಬುದಕ್ಕೆ ಇದಕ್ಕಿಂತ ಬೇರೆ ಉದಾಹರಣೆ ಬೇಕಿಲ್ಲ.

ಇಷ್ಟಾದರೂ ಈ ದೇಶದ ಕಾರ್ಮಿಕರು ತಮ್ಮ ಜವಾಬ್ದಾರಿಯನ್ನು ಅರಿತು ತಮ್ಮ ಕ್ರಾಂತಿಕಾರಕವಾದ ಸಾಮಾಜಿಕ ಬದಲಾವಣೆಗೆ ತೊಡಗುತ್ತಾರೆಂಬುದೇ ಈ ಲೇಖನದ ಆಶಯ.

ಎಂ. ಕೃಷ್ಣಮೂರ್ತಿ
ಅಡ್ವೊಕೇಟ್, ದೊಡ್ಡಬಳ್ಳಾಪುರ - ೫೬೧ ೨೦೩

# ದುಡಿಯುವ ಜನತೆಗೊಂದು ತತ್ವಶಾಸ್ತ್ರ

ಎಸ್. ಎಸ್. ಹಿರೇಮಠ

**ನಮಗರಿವಿಲ್ಲದೇ, ನಾವಿರುವ ವ್ಯವಸ್ಥೆಯ ಪರವಾದ ದೃಷ್ಟಿಕೋನ ನಮಗೆ ಬೆಳೆದಿರುತ್ತದೆ. ಇದಕ್ಕೆ ಬಹುಮಟ್ಟಿಗೆ ವ್ಯವಸ್ಥೆ ನೀಡುವ ಶಿಕ್ಷಣ ಪದ್ಧತಿ ಕಾರಣ. ಈ ವ್ಯವಸ್ಥೆ ಕೆಟ್ಟಿದೆ, ಕೊಳೆತಿದೆ, ಇದು ನಾಶವಾಗಬೇಕು ಎಂದುಕೊಳ್ಳುವವರು ಸಂಘಟನೆ ಮತ್ತು ಹೋರಾಟದ ಹಾದಿಗೆ ಬರುತ್ತಾರೆ. ಅವರಿಗೆ ಬೇಕಾಗುವ ಪ್ರಾಥಮಿಕ ಕಲಿಕೆ ಎಂದರೆ ವೈಜ್ಞಾನಿಕ ತತ್ವಜ್ಞಾನದ್ದೇ. ಇದರ ಕೊರತೆಯಿಂದ ನಾವು ಯಾವುದೋ ಗಳಿಗೆಯಲ್ಲಿ ಸಂಘಟನೆಯಿಂದ ಹೋರಾಟದಿಂದ ದೂರಾಗಬಹುದು. ಇಂದಿನ ವೈಜ್ಞಾನಿಕ ಯುಗದ ಶೋಧನೆ ಸಾಧನೆಗಳ ಪೂರ್ಣ ತಿಳುವಳಿಕೆ ಇರುವವರು, ಹಿಂದಲ ತತ್ತ್ವಗಳನ್ನು ವಿಮರ್ಶಾತ್ಮಕವಾಗಿ ನೋಡಿ, ಸಾರವತ್ತಾದುದರ ಬಗ್ಗೆ ಹೆಮ್ಮೆ ತಾಳುತ್ತಾರಷ್ಟೇ. ಆದರೆ ಅದೇ ಪರಿಪೂರ್ಣವೆಂದು ನಂಬುವುದು ನಮ್ಮ ತಿಳುವಳಿಕೆಯ ಮಿತಿಯನ್ನು, ಅರೆಕೊರೆಯನ್ನು ಸೂಚಿಸುತ್ತದೆ.**

'ಜಗತ್ತಿನ ಶ್ರಮಿಕರೆಲ್ಲ ಒಂದಾಗಿ' ಎಂದು ಕರೆಕೊಟ್ಟ ಮಹಾದಾರ್ಶನಿಕ ಕಾರ್ಲ್ ಮಾರ್ಕ್ಸ್, ದುಡಿಮೆಗಾರರ ಐಕ್ಯತೆ ಮತ್ತು ಹೋರಾಟಕ್ಕೆ ಬೇಕಾದ ವೈಜ್ಞಾನಿಕ ತತ್ತ್ವಜ್ಞಾನವನ್ನು ರೂಪಿಸಿದ. ಅದೇ 'ದ್ವಂದ್ವಮಾನ ಭೌತಿಕವಾದ'. ಜಗತ್ತಿನ ಚಿಂತನೆಯ ದಿಕ್ಕನ್ನೇ ಬದಲಿಸಿದ ಸಿದ್ಧಾಂತ ಇದು. ಅವರೆಗೂ ನಡೆದ ವೈಜ್ಞಾನಿಕ ಸಂಶೋಧನೆಗಳ ಆಧಾರದಲ್ಲಿ ಈ ಜಗತ್ತನ್ನು, ವಿಶ್ವವನ್ನು, ಮಾನವ ಬದುಕಿನ ಅರ್ಥವನ್ನು, ಉದ್ದೇಶವನ್ನು, ಪ್ರಕೃತಿಯ ಪರಿವರ್ತನೆಯ ನಿಯಮಗಳನ್ನು ವಿಶ್ಲೇಷಿಸಿ ಖಚಿತವಾದ ದೃಷ್ಟಿಕೋನವನ್ನು ಒದಗಿಸಿತು 'ದ್ವಂದ್ವಮಾನ ಭೌತಿಕವಾದ'. ಪರಿವರ್ತನೆಯ ನಿಯಮಗಳನ್ನು ಸ್ಪಷ್ಟವಾಗಿ ಕಂಡದ್ದು ವೈಜ್ಞಾನಿಕ ಭೌತಿಕವಾದವೇ ಹೊರತು, ಯಾವುದೇ ಧರ್ಮ ಇಲ್ಲವೇ ಆತ್ಮವಾದೀ ತತ್ವಜ್ಞಾನವಲ್ಲ. ಚರಿತ್ರೆಯನ್ನು ಭೌತವಾದೀ ದೃಷ್ಟಿಯಿಂದ ಗ್ರಹಿಸುವುದಕ್ಕೆ ಬೇಕಾದ ತಾತ್ವಿಕತೆಯನ್ನು ಕೂಡ ಇದು ಒದಗಿಸಿತು.

ಬದುಕಿನ ಬಗ್ಗೆ ಪ್ರತಿಯೊಬ್ಬರಿಗೂ ಒಂದಿಲ್ಲೊಂದು ದೃಷ್ಟಿಕೋನ ಇದ್ದೇ ಇರುತ್ತದೆ. ಅದು ಅವರು ಹುಟ್ಟಿದ ಕುಟುಂಬ, ಜಾತಿ, ಸಾಮಾಜಿಕ ಪರಿಸರ, ವರ್ಗ ಸ್ಥಿತಿ, ಶಿಕ್ಷಣ ಒಟ್ಟಾರೆ 'ವ್ಯವಸ್ಥೆ'ಯ ಪ್ರಭಾವಗಳನ್ನು ಆಧರಿಸಿರುತ್ತದೆ. ಇದನ್ನು ಪ್ರವಾಹದ ಜತೆ ತೇಲಿ ಹೋಗುವ ಮನುಷ್ಯನಿಗೆ ಹೋಲಿಸಬಹುದು.

ನಾವಿರುವ 'ವ್ಯವಸ್ಥೆ'ಯ ಸ್ಥಿತಿಗತಿಗಳನ್ನು ಅರಿತು, ಇದನ್ನು ಬದಲಾಯಿಸಬೇಕೆಂಬ ನಿರ್ಧಾರಕ್ಕೆ ಬಂದಾಗ ನಮಗೆ ಅಗತ್ಯವಾಗಿ ಬೇಕಾಗುವ ತಾತ್ವಿಕ ಕಣ್ನೋಟ ವೈಜ್ಞಾನಿಕವಾಗಿರಲೇಬೇಕಾಗುತ್ತದೆ. ಈ ಹಿನ್ನೆಲೆ ಇಲ್ಲದಿದ್ದರೆ, ತತ್ವದಲ್ಲಿ ಬದ್ಧತೆ ಬರಲಾರದು; ಕೊನೆಯವರೆಗೂ ನಮ್ಮ ಉತ್ಸಾಹ, ಉದ್ದೇಶ ಕ್ರಿಯಾಶೀಲತೆ ಉಳಿಯಲಾರದು.

ನಮಗರಿವಿಲ್ಲದೇ, ನಾವಿರುವ ವ್ಯವಸ್ಥೆಯ ಪರವಾದ ದೃಷ್ಟಿಕೋನ ನಮಗೆ ಬೆಳೆದಿರುತ್ತದೆ. ಇದಕ್ಕೆ ಬಹುಮಟ್ಟಿಗೆ ವ್ಯವಸ್ಥೆ ನೀಡುವ ಶಿಕ್ಷಣ ಪದ್ಧತಿ ಕಾರಣ. ಈ ವ್ಯವಸ್ಥೆ ಕೆಟ್ಟಿದೆ, ಕೊಳೆತಿದೆ, ಇದು ನಾಶವಾಗಬೇಕು ಎಂದುಕೊಳ್ಳುವವರು ಸಂಘಟನೆ ಮತ್ತು ಹೋರಾಟದ ಹಾದಿಗೆ ಬರುತ್ತಾರೆ. ಅವರಿಗೆ ಬೇಕಾಗುವ ಪ್ರಾಥಮಿಕ ಕಲಿಕೆ ಎಂದರೆ ವೈಜ್ಞಾನಿಕ ತತ್ವಜ್ಞಾನದ್ದೇ. ಇದರ ಕೊರತೆಯಿಂದ ನಾವು ಯಾವುದೋ ಗಳಿಗೆಯಲ್ಲಿ ಸಂಘಟನೆಯಿಂದ ಹೋರಾಟದಿಂದ ದೂರಾಗಬಹುದು.

ಜಗತ್ತಿನಲ್ಲಿ ಅನೇಕ ಬಗೆಯ ಸಿದ್ಧಾಂತಗಳು ಮತ್ತು ಅದರಿಂದಾಗಿ ಅನೇಕ ಬಗೆಯ ದೃಷ್ಟಿಕೋನಗಳಿವೆ. ಇವೆಲ್ಲವುಗಳಲ್ಲಿ ವೈಜ್ಞಾನಿಕವಾದುದು ಮಾತ್ರ ಉಳಿಯುತ್ತದೆ, ಬೆಳೆಯುತ್ತದೆ. ಇಂಥ ವೈಜ್ಞಾನಿಕ ತಾತ್ವಿಕ ಮಾನದಂಡದಿಂದ ಉಳಿದ ಸಿದ್ಧಾಂತಗಳ ಇತಿಮಿತಿಗಳನ್ನು, ತಪ್ಪು-ಒಪ್ಪುಗಳನ್ನು ಅಳೆಯಲು ಸಾಧ್ಯ. ನಿದರ್ಶನಕ್ಕೆ ನಮ್ಮ ದೇಶದಲ್ಲಿ ಹಿಂದಿನಿಂದಲೂ ಲೋಕಾಯತ (ಚಾರ್ವಾಕ), ಸಾಂಖ್ಯ, ವೈಶೇಷಿಕ, ನ್ಯಾಯ, ಯೋಗ, ಶೈವ, ವೈಷ್ಣವ, ಬೌದ್ಧ, ಜೈನ ಹೀಗೆ ಅನೇಕ ತತ್ವಜ್ಞಾನಗಳು ಜನತೆಯಲ್ಲಿ ಜೀವಂತವಿದ್ದವು. ವಿದ್ವಾಂಸರು ಹೇಳುವಂತೆ ಇವುಗಳಲ್ಲಿ ಶೇಕಡ ೮೦ ತತ್ವಜ್ಞಾನಗಳು ನಾಸ್ತಿಕವಾದಿ. ಇಂಥ ನಿರೀಶ್ವರ ತತ್ವಜ್ಞಾನ ಮಾತ್ರ ಜಾತ್ಯತೀತ, ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದಿವೆ. ಮಾನವೀಯತೆಗೆ ವಿರೋಧವಿದ್ದ, ಆಳುವ ಶೋಷಕ ವರ್ಗಗಳ ಹಿತವನ್ನು ಕಾಪಾಡುತ್ತಿದ್ದ ಹಲವಾರು ತತ್ವಜ್ಞಾನಗಳು ಜನತೆಯ ದಿಕ್ಕುತಪ್ಪಿಸುತ್ತ ಬಂದಿವೆ.

ಪ್ರಭುತ್ವಗಳ ಬೆಂಬಲದಿಂದ ಸಾಕಷ್ಟು ಆಸ್ತಿಪಾಸ್ತಿ ಮಾಡಿಕೊಂಡು ಅಂದರೆ ಸಾಂಸ್ಥೀಕರಣಗೊಂಡು ಈ ಮತ ಧರ್ಮಗಳು ಶೋಷಕ ವರ್ಗಗಳಲ್ಲಿ ಒಂದಾಗಿ ವ್ಯವಸ್ಥೆಯನ್ನು ಸಂರಕ್ಷಿಸಿಕೊಂಡುಬಂದಿವೆ. ಇವುಗಳ ವಿರುದ್ಧ ವಿವಿಧ ಬಗೆಯ ನಾಸ್ತಿಕ ಮತ ಧರ್ಮಗಳು ಮತ್ತು ಸಿದ್ಧಾಂತಗಳು ಹೋರಾಡುತ್ತ, ಪರೋಕ್ಷವಾಗಿ ಜನತೆಯ ಹಿತಾಸಕ್ತಿಯನ್ನು ಕಾಪಾಡಲು ಯತ್ನಿಸಿವೆ. ಚರಿತ್ರೆಯಿಂದ ಪಾಠ ಕಲಿಯುವುದು ಅನಿವಾರ್ಯವಾದ್ದರಿಂದ ಈ ಬಗೆಯ ಶೋಧನೆ ಅಗತ್ಯ. ಕರ್ನಾಟಕದ ಅನುಭವವನ್ನು ನೋಡುವುದಾದರೆ ಇಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ ಧರ್ಮಗಳು ಪ್ರಭಾವಶಾಲಿಯಾಗಿದ್ದವು. ತಂತ್ರ, ಯೋಗ, ಸಾಂಖ್ಯ, ನ್ಯಾಯ, ಕಾಪಾಲಿಕ, ಕಾಳಾಮುಖ, ಲಾಕುಳ, ವೀರಶೈವ, ಅದ್ವೈತ, ದ್ವೈತ, ವಿಶಿಷ್ಟಾದ್ವೈತ – ಹೀಗೆ ಹಲವಾರು ವಿಚಾರಧಾರೆಗಳು ಅಸ್ತಿತ್ವದಲ್ಲಿದ್ದವು.

ಹನ್ನೆರಡನೇ ಶತಮಾನದ ಶ್ರಮಿಕ ಜನ ಕುಲಗಳ ಐಕ್ಯತೆ, ಹೋರಾಟ 'ವೀರಶೈವ' ಎಂಬ ಜಾತಿ ಸಮೂಹ ಮತ್ತು ತಾತ್ವಿಕತೆಯನ್ನು ಸೃಷ್ಟಿಸಿತು. ಅದು ಇಂದಿಗೂ ಮಾದರಿಯಾಗಿದೆ ಎಂಬ ತಪ್ಪುಗ್ರಹಿಕೆ ಬಹಳಷ್ಟು ಜನರಲ್ಲಿದೆ. ಕೆಲವು ಅಂಶಗಳಲ್ಲಿ ಸಮಾಜವಾದದ ಜತೆ ಹೋಲಿಕೆ ಕಾಣಬಹುದು. ಹಾಗೆಂದ ಮಾತ್ರಕ್ಕೆ ಅವೇ ತತ್ವಗಳು ಇಂದು ಪ್ರಸ್ತುತವೆಂದು ಭಾವಿಸುವುದು ಸರಿಯಲ್ಲ. ಒಬ್ಬ ಮಾರ್ಕ್ಸ್‌ವಾದಿ ಬಂಡಾಯ ಲೇಖಕ 'ಬಸವಣ್ಣನವರದ್ದು ಆಧ್ಯಾತ್ಮಿಕ ಭೌತಿಕವಾದ (ಬಸವಾದ್ವೈತ)ವೆಂದೂ, ಇದು ಮೌನಕ್ರಾಂತಿಯಾಗಿತ್ತೆಂದೂ, ಈ ಪರ್ಯಾಯ ಸಮಾಜ ವಿಶ್ವಕ್ಕೇ ಮಾದರಿ' ಎಂದೂ ಬರೆಯುತ್ತಾರೆ. ಬಸವ ಇವರಿಗೆ 'ತ್ರ್ಯಕ್ಷರ ಮಂತ್ರ'. ದಾಸೋಹವು ಮಿಗುತಾಯ ಮೌಲ್ಯ ಸೃಷ್ಟಿಯಾಗದಂತೆ ನೋಡಿಕೊಳ್ಳುತ್ತದಂತೆ! ಇನ್ನೊಬ್ಬ ಖ್ಯಾತ ಬಂಡಾಯ ಸಾಹಿತಿ, 'ಶರಣರು ಮುಂದೆ ನಡೆದ ಪ್ರಗತಿಪರ ಹೋರಾಟಗಳಿಗೆ ಭದ್ರ ನೆಲೆಯನ್ನು ಶತಮಾನಗಳ ಹಿಂದೆಯೇ' ನಿರ್ಮಿಸಿದರು ಎಂದು ಬರೆಯುತ್ತಾರೆ. ಇವೆಲ್ಲವೂ ತಪ್ಪುಕಲ್ಪನೆಗಳೆಂದು ಬೇರೆ ಹೇಳಬೇಕಿಲ್ಲ.

ಬುದ್ಧ ಕಲ್ಪಿಸಿದ್ದ ಸಂಘ, ಶರಣರು ಕಲ್ಪಿಸಿದ್ದ ಭಕ್ತ ಸಮಾಜ, ಜೈನರು ಹೇಳುತ್ತಿದ್ದ ಶ್ರಾವಕ-ಶ್ರಾವಿಕ ಸಮಾಜ ಇವೆಲ್ಲ ಆಯಾ ಕಾಲದ ಇತಿಮಿತಿಯಲ್ಲಿ ಹುಟ್ಟಿದ್ದ ಆಶಯಗಳಷ್ಟೇ. ೧೨ನೇ ಶತಮಾನದ ಶರಣರ ಕಾಯಕದಲ್ಲಿ ಶೋಷಕ ವೃತ್ತಿ, ಶೋಷಿತ ವೃತ್ತಿಗಳ ಸ್ಪಷ್ಟ ಪರಿಕಲ್ಪನೆ ಇರಲಿಲ್ಲ. 'ಭವಿ' ಸಮಾಜದ ಜತೆಯ ಸಂಬಂಧದ ಪ್ರಶ್ನೆ ಜೀವಂತವಾಗುಳಿಯಿತು. ಚಳುವಳಿಗೆ ಅಂದಿನ ತೊತ್ತುಗಳು (ಗುಲಾಮರು) ಸೇರಿಕೊಂಡಿರುವ ಸಾಧ್ಯತೆ ಇರಲಿಲ್ಲ. ತಾತ್ವಿಕವಾಗಿ 'ವೀರಶೈವ' ಆಧ್ಯಾತ್ಮಿಕವಾದಿಯಾಗಿತ್ತು. ಇಂಥ ಗಂಭೀರ ಮಿತಿಗಳಿಂದಾಗಿ ಚಳುವಳಿ ಸಫಲವಾಗುವಂತಿರಲಿಲ್ಲ. ಆದರೆ ಅನೇಕ ಜಾತಿಗಳ ಶ್ರಮಿಕರು ಒಗ್ಗಟ್ಟಾದುದು, ಹೋರಾಟದಲ್ಲಿ ಚಕ್ರವರ್ತಿಯೊಬ್ಬ ಹತನಾದುದು, ಸಮಾನತೆಯ ಆಶಯ ಹೊತ್ತು ತಮ್ಮ ತತ್ವಕ್ಕೆ ಬದ್ಧರಾಗಿ ನಿಂತುದು ಇವೇ ಮೊದಲಾದ ಇತ್ಯಾತ್ಮಕ ಅಂಶಗಳು ಕುತೂಹಲಕಾರಿಯಾಗಿವೆ. ಆದರೆ ೧೨ನೇ ಶತಮಾನದ ಕಣ್ಣಿನಿಂದ ೨೧ನೇ ಶತಮಾನವನ್ನು

ನೋಡುವುದು ಆಭಾಸವಾಗುತ್ತದೆ. ಆಳುವ ವರ್ಗಗಳನ್ನು ತಾತ್ವಿಕವಾಗಿ ಬೆಂಬಲಿಸಿದ ವೈದಿಕಶಾಹಿಯನ್ನು ವಿರೋಧಿಸಿ ಹುಟ್ಟಿದ ತತ್ವಗಳು ಒಂದು ಹಂತದವರೆಗೆ 'ಜನಪರ'ವೆಂದು ತೋರಿಸಿಕೊಂಡರೂ ಕಾಲಾಂತರದಲ್ಲಿ ತಾವೂ ಶೋಷಕ ವರ್ಗವಾಗಿವೆ. ಇಂಥ ಅನುಭವಗಳೇ ನಮಗೆ ಇಂದು ತಕ್ಕ ಪಾಠ ಕಲಿಸಿ ವೈಜ್ಞಾನಿಕ ತತ್ವಜ್ಞಾನದ ಬದ್ಧತೆಯ ಅಗತ್ಯವನ್ನು ನಿಜಗೊಳಿಸುತ್ತಿವೆ.

ಇಂದು ಅಂಬೇಡಕರ್‌ವಾದ, ಲೋಹಿಯಾವಾದ, ನಕ್ಸಲ್‌ವಾದದಂಥ ಕೆಲವು ತಾತ್ವಿಕತೆಗಳು ಕರ್ನಾಟಕದಲ್ಲಿ ಚಾಲ್ತಿಯಲ್ಲಿವೆ. ಇವು ದುಡಿಯುವ ಜನಸಮುದಾಯಗಳನ್ನು ವಿಭಜಿಸಿ ಪ್ರತ್ಯೇಕ ಗುಂಪುಗಳನ್ನಾಗಿಸುತ್ತಿವೆ. ಜಾತಿ ಸಂಘಟನೆಗಳಂತೂ ಆಯಾ ಜಾತಿಗಳ ಶ್ರೀಮಂತ ಶೋಷಕ ಗುಂಪುಗಳ ಹೊಲಸು ರಾಜಕೀಯಕ್ಕೆ ದುರ್ಬಳಕೆಯಾಗುತ್ತಿವೆ. ಸಿದ್ಧರಾಮಯ್ಯರಂಥವರು ವರ್ಗ ಹೋರಾಟದ ಮಾತನ್ನೂ ಹೇಳುತ್ತಿದ್ದಾರೆ. ಇಂಥವರಿಗೆ ಡೊನೇಶನ್, ಕ್ಯಾಪಿಟೇಶನ್ ದೊರೆಗಳಾದ ಮಠಾಧೀಶರ ಆಶೀರ್ವಾದವೂ ಲಭಿಸುತ್ತಿದೆ. ಶರಣರ ನೇತ್ಯಾತ್ಮಕ ತತ್ವಗಳನ್ನು ತಮ್ಮ ವರ್ಗ ಹಿತಕ್ಕೆ ಬಳಸಿಕೊಂಡು ಜನಸಮುದಾಯಗಳ ದಿಕ್ಕು ತಪ್ಪಿಸುವ ಕೆಲಸ ನಿರಂತರವಾಗಿ ನಡೆಯುತ್ತಿದೆ. ಇದಕ್ಕೆ ಸಾಂಸ್ಕೃತಿಕ ಸಂಘಗಳ ನೆರವು ಪಡೆಯಲಾಗುತ್ತಿದೆ.

ಹಿಂದೂ ಅಥವಾ ಮುಸ್ಲಿಂ ಕೋಮುವಾದಿ ಶಕ್ತಿಗಳು ಬೆಳೆಯುತ್ತಿರುವುದಕ್ಕೆ ತಾತ್ವಿಕತೆಯ ಗೊಂದಲ ಗೋಜಲುಗಳೇ ಮುಖ್ಯ ಕಾರಣ. ಹಾಗಾಗಿ ದುಡಿಯುವ ಜನತೆಯ ಸಂಕಷ್ಟಗಳ ಪರಿಹಾರಕ್ಕೆ ಇರುವ ಏಕೈಕ ಸಿದ್ಧಾಂತ 'ವೈಜ್ಞಾನಿಕ ತತ್ವಜ್ಞಾನ'.

ಈ ತತ್ವವೇನೆಂಬ ಕುತೂಹಲ ಓದುಗರಲ್ಲಿ ಮೂಡಿದ್ದರೆ, ಅದನ್ನು ಸಂಕ್ಷಿಪ್ತವಾಗಿ ಇಲ್ಲಿ ನಿರೂಪಿಸಬಹುದು.

ವಿಶ್ವಗಳು, ನಾವಿರುವ ವಿಶ್ವವಾದ 'ಆಕಾಶಗಂಗೆ', ಸೌರವ್ಯೂಹ, ನಮ್ಮ ಗ್ರಹವನ್ನೊಳಗೊಂಡ ಎಲ್ಲವೂ ಎಡೆಬಿಡದೇ ಚಲಿಸುತ್ತಿವೆ. ಚಲನೆಯಿಲ್ಲದ ವಸ್ತು ಅಸ್ತಿತ್ವದಲ್ಲಿರಲಿಕ್ಕೆ ಸಾಧ್ಯವಿಲ್ಲ. ಯಾವುದೇ ಬಗೆಯ 'ದೇವರಿ'ಂದ ಇದೆಲ್ಲ ಹುಟ್ಟಿಲ್ಲ. ಇದು ಯಾವಾಗಲೂ ಇತ್ತು ಮತ್ತು ಚಲಿಸುತ್ತ ರೂಪಾಂತರಗೊಳ್ಳುತ್ತ ಇದ್ದೇ ಇರುತ್ತದೆ. ಪರಮಾಣುವಿನಲ್ಲಿರುವ ಪ್ರೋಟಾನ್, ಎಲೆಕ್ಟ್ರಾನ್, ನ್ಯೂಟ್ರಾನ್ ಮೊದಲಾದ ಶಕ್ತಿಗಳು ಇಂಥ ಚಲನೆಗೆ ಕಾರಣ. ಈ ಚಲನೆಯ ನಿಯಮಗಳನ್ನು ವಿಜ್ಞಾನ ಶಿಸ್ತುಗಳ ತಿಳುವಳಿಕೆಯನ್ನು ಆಧರಿಸಿ ಮೂರೆಂದು ಗುರುತಿಸುತ್ತಾರೆ. (೧) ಗಾತ್ರಾತ್ಮಕ ಬದಲಾವಣೆ ಗುಣಾತ್ಮಕ ಬದಲಾವಣೆಗೆ ಕಾರಣ. (೨) ಇದು ವೈರುಧ್ಯಗಳ ಸಾಮೀಪ್ಯ ಮತ್ತು ಸಂಘರ್ಷದಿಂದುಂಟಾಗುತ್ತದೆ. (೩) ಇದರಿಂದ ಹಳೆಯದರಲ್ಲಿರುವ ನೇತ್ಯಾತ್ಮಕವಾದುದು ಅಳಿಯುತ್ತ ಇತ್ಯಾತ್ಮಕವಾದುದು ಉಳಿಯುತ್ತ ಬೆಳೆಯುತ್ತದೆ. ಇದನ್ನು ನಿಷೇಧದ ನಿಷೇಧ ನಿಯಮ ಎನ್ನುತ್ತಾರೆ.

ಈ ಮೂರು ನಿಯಮಗಳಲ್ಲದೆ 'ಒಳತಿರುಳು ಹೊರರೂಪ'ದಂಥ ಕೆಲವು ಕೆಟಗರಿ (ವಿಭಾಗ)ಗಳೂ ಜತೆಗೂಡಿರುತ್ತವೆ. ಇದೆಲ್ಲವನ್ನು ಒಟ್ಟಂದದಲ್ಲಿ ಗ್ರಹಿಸಿದಾಗ, ಮಾನವನ, ಸಮಾಜದ, ಪ್ರಕೃತಿಯ ಬೆಳವಣಿಗೆಯ ನಿಜಸ್ಥಿತಿಯ ಅರಿವುಂಟಾಗುತ್ತದೆ. ಸರಳ ರೂಪದಿಂದ ಸಂಕೀರ್ಣವಾಗಿ, ಕೆಳಹಂತದಿಂದ, ಮೇಲಿನ ಹಂತಕ್ಕೆ ಸಮಾಜ ಬೆಳೆಯುತ್ತ ಬಂದಿದೆ.

ದಲಿತ ಸಂಘರ್ಷ ಸಮಿತಿಯ ಹಲವಾರು ಸ್ನೇಹಿತರು ಅಂಬೇಡಕರ ಅವರ ಮಾರ್ಗವನ್ನು ಅನುಸರಿಸುತ್ತ ಬೌದ್ಧ ಮತಕ್ಕೆ ಸೇರುತ್ತಿರುವ ಒಂದು ಕ್ರಮವನ್ನು ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದಾಗಿದೆ. ಈ ಸಂಘಟನೆಯನ್ನು ಹುಟ್ಟು ಹಾಕಿ ಬೆಳೆಸಿದವರಲ್ಲಿ ಒಬ್ಬರಾದ ದಲಿತಕವಿ ಸಿದ್ಧಲಿಂಗಯ್ಯ ಹಿಂದೆಯೇ ಈ ಕ್ರಮವನ್ನು ಅರ್ಥಪೂರ್ಣವಾಗಿ ಟೀಕಿಸಿದ್ದಾರೆ. 'ಅಂಬೇಡಕರ' ಎಂಬ ಅವರ ಕಾವ್ಯದಲ್ಲಿ ''ಬಂಗಾರದ ಕೊಳ ಹೊಕ್ಕ ಮಹಾ ಬೌದ್ಧ ಭಿಕ್ಷುವೆ'' ಎಂಬ ಮಾತಿದೆ. ಯಾವುದೇ ಧರ್ಮಕ್ಕೆ ಮತಾಂತರಗೊಳ್ಳುವುದರಿಂದ ಸಮಸ್ಯೆಗೆ ಪರಿಹಾರವಿಲ್ಲ. ಬೌದ್ಧಮತ ಸೇರುವುದು 'ಬಂಗಾರದ' ಬೇಡಿಯನ್ನು ಹಾಕಿಕೊಂಡಂತೆ ಅಷ್ಟೆ.

ಇಂದಿನ ವೈಜ್ಞಾನಿಕ ಯುಗದ ಶೋಧನೆ ಸಾಧನೆಗಳ ಪೂರ್ಣ ತಿಳುವಳಿಕೆ ಇರುವವರು, ಹಿಂದಲ ತತ್ತ್ವಗಳನ್ನು ವಿಮರ್ಶಾತ್ಮಕವಾಗಿ ನೋಡಿ, ಸಾರವತ್ತಾದುದರ ಬಗ್ಗೆ ಹೆಮ್ಮೆ ತಾಳುತ್ತಾರಷ್ಟೇ. ಆದರೆ ಅದೇ ಪರಿಪೂರ್ಣವೆಂದು ನಂಬುವುದು ನಮ್ಮ ತಿಳುವಳಿಕೆಯ ಮಿತಿಯನ್ನು, ಅರೆಕೊರೆಯನ್ನು ಸೂಚಿಸುತ್ತದೆ.

ಸಂಘಟನೆ, ಹೋರಾಟಗಳನ್ನು ಬೆಳೆಸುವಾಗ, ಇರಬೇಕಾದ ತಾತ್ತ್ವಿಕ ಬದ್ಧತೆಯ ಅನಿವಾರ್ಯತೆ ಮತ್ತು

ಅಗತ್ಯವನ್ನು ನಿರ್ಲಕ್ಷಿಸುವುದು ಜನತೆಗೆ ಮಾಡುವ ಒಂದು ಬಗೆಯ ದ್ರೋಹವೇ. ಈ ತಾತ್ತ್ವಿಕ ಬದ್ಧತೆ ವೈಚಾರಿಕ ನೆಲೆಯಲ್ಲಿ ಬೆಳೆಯುತ್ತಿರುತ್ತದೆಯೇ ಹೊರತು ಕುರುಡಾಗಿರುವುದಿಲ್ಲ. ಈ ಮಾತನ್ನು ಕಾರ್ಲ್ ಮಾರ್ಕ್ಸ್ ಆಗಲೇ ಒತ್ತಿಹೇಳಿದ್ದ.

ಜಾಗತೀಕರಣ ಮುಂತಾದ ಇಂದಿನ ಕ್ರಮಗಳು ಸಾಮ್ರಾಜ್ಯಶಾಹಿಯ ನವ ವಸಾಹತುಶಾಹಿ ಹುನ್ನಾರದ ಆಧುನಿಕ ರೂಪವೇ ಹೊರತು ಬೇರೆಯಲ್ಲ. ಇದು ದುಡಿಯುವ ಜನತೆಯ ಸಂಘಟನೆ ಮತ್ತು ಹೋರಾಟಗಳನ್ನು ಮತ್ತಷ್ಟು ಚುರುಕುಗೊಳಿಸುತ್ತಿದೆ. ಸ್ಥಳೀಯ ಪರಂಪರೆ, ಪರಿಸರ ಒಡ್ಡುವ ಸವಾಲುಗಳ ಜತೆ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಒತ್ತಡಗಳ ಹಿನ್ನೆಲೆಯಲ್ಲಿ ಮಾತ್ರ ಸಂಘಟನೆ ಹೋರಾಟಗಳ ಏಳುಬೀಳಿನ ಪ್ರಕ್ರಿಯೆ ಇದೆ.

ಇಲ್ಲಿ ಇನ್ನೊಂದು ನಿದರ್ಶನ. ಕನ್ನಡಿಗರಿಗೆ ಉದ್ಯೋಗದ ಮೀಸಲಾತಿ (ಸರೋಜಿನಿ ಮಹಿಷಿ ವರದಿ); ಸಿಲಿಕಾನ್ ಸಿಟಿಯ ಗಣಕಯಂತ್ರ ಸಂಸ್ಥೆಗಳಲ್ಲಿ ಕನ್ನಡಿಗರಿಗೆ ಉದ್ಯೋಗದ ಮೀಸಲಾತಿ ಪ್ರಶ್ನೆ. ಇದು ಬೆಂಗಳೂರಿನಲ್ಲಿ ಕನ್ನಡಿಗರೇ ಅಲ್ಪಸಂಖ್ಯಾತರಾಗುತ್ತಿದ್ದಾರೆಂಬ 'ಭಾಷೆ ಪ್ರಶ್ನೆ'ಯ ಇನ್ನೊಂದು ಮುಖ. ಕಾನ್ವೆಂಟ್ ಇಂಗ್ಲಿಷ್ ಭ್ರಮೆ ಮತ್ತು ಕಂಪ್ಯೂಟರ್ ಕಲಿಕೆಯ ಒಳಸಂಬಂಧ, ತಾಂತ್ರಿಕ ಶಿಕ್ಷಣವನ್ನು ಶ್ರೀಮಂತರ ಸೊತ್ತಾಗಿಸುತ್ತಿರುವುದು, ಇವೆಲ್ಲಕ್ಕೂ ಆಳುವ ವರ್ಗಗಳ ಹಿತಾಸಕ್ತಿಯ ಹಿನ್ನೆಲೆಯಿರು ವುದನ್ನು ಮರೆತರೆ ಕೇಡುಂಟು. ಅಂಬೇಡಕರ ಅವರು ಹೇಳಿದರೆನ್ನಲಾದ 'ಶಿಕ್ಷಣ' (ಸಂಘಟನೆ, ಹೋರಾಟ) ವೆಂಬುದು, ಯಾವ ಬಗೆಯ ಶಿಕ್ಷಣ ಎಂಬ ಮೂಲಭೂತ ಪ್ರಶ್ನೆಯಿಂದ ದೂರವಾಗುತ್ತಿದೆ. ನಿಜ, ಎಲ್ಲರಿಗೂ ಶಿಕ್ಷಣ ಬೇಕು. ಆದರೆ ಎಂಥ ಶಿಕ್ಷಣ ಬೇಕು ? ಈಗ ಲಭಿಸುತ್ತಿರುವ ಶಿಕ್ಷಣದ ಅವೈಜ್ಞಾನಿಕತೆ, ಅತಾರ್ಕಿಕತೆ, ಅಸಂಬದ್ಧತೆಗಳ ಚರ್ಚೆ ಆಗಬೇಡವೇ ? ನಮ್ಮ ದೇಶದ ನಿರುದ್ಯೋಗ ಸಮಸ್ಯೆ ನಾವು ಅನುಸರಿಸುತ್ತಿರುವ ಬಂಡವಾಳಶಾಹಿ ಮಾರ್ಗ ದಿಂದಾಗಿ ಹುಟ್ಟಿರುವಂಥದು. ಇದರಲ್ಲಿ ಬೆಂಗಳೂರು, ಮುಂಬಯಿ, ಕೋಲ್ಕತ್ತಾ, ಚೆನ್ನೈಗಳ ಕತೆ ಪ್ರತ್ಯೇಕವೇನಿಲ್ಲ. ಚೆನ್ನೈ, ಮುಂಬಯಿ, ದೆಹಲಿಗಳಲ್ಲೂ ಕನ್ನಡಿಗರಿದ್ದಾರಲ್ಲ.

'ರಾಷ್ಟ್ರೀಯತೆ' (ಕನ್ನಡ ನ್ಯಾಶನಾಲಿಟಿ ಇತ್ಯಾದಿ) ಎಂಬ ಒಂದು ದೊಡ್ಡ ಪ್ರಶ್ನೆ ರಷಿಯಾದ ಸಮಾಜವಾದದ ಪತನದ ಕಾರಣಗಳಲ್ಲಿ ಒಂದಾಗಿದೆ ಎಂಬ ಈಚಿನ ಪಾಠವನ್ನು ಮರೆಯಲಿಕ್ಕಾದೀತೇ ?

೧೯೪೯ರ ಜಾಗತಿಕ ಸಂದರ್ಭ ಮತ್ತು ಆ ಹಿನ್ನೆಲೆಯಲ್ಲಿ ಚೀನಾದಲ್ಲಿ ಮಾವೋ ಅನುಸರಿಸಿದ ಮಾರ್ಗ ಇಂದಿಗೂ ಪ್ರಸ್ತುತವೆಂದು ಭ್ರಮಿಸಿರುವ ನಕ್ಸಲ್ ಗುಂಪುಗಳು ಕ್ರಾಂತಿಗೆ ಮಾರಕವಾಗುತ್ತಿಲ್ಲವೇ ? ಭಾರತದಲ್ಲಿ ಗಾಂಧೀವಾದದ ಪ್ರಭಾವ ದೇಶವ್ಯಾಪಿಯಾಗಿದ್ದಂತೆ, ಅಂದು ಚೀನಾದಲ್ಲಿ ಮಾವೋವಾದ ಜನಪ್ರಿಯವಾಯಿತು. ಗಾಂಧೀವಾದದ ಗಂಭೀರವಾದ ಮಿತಿಯ ಅರಿವು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಬಹುಬೇಗನೆ ಬೆಳಕಿಗೆ ಬಂತು. ವಿನೋಬಾ ಭಾವೆಯ ಭೂದಾನ ಚಳುವಳಿಯ ವಿಫಲತೆ ಒಂದು ಸಣ್ಣ ನಿದರ್ಶನವಷ್ಟೇ.

ಎಡಪಕ್ಷಗಳ ಬೆಂಬಲ ಮತ್ತು ಒತ್ತಡಗಳ ಹಿನ್ನೆಲೆಯಲ್ಲಿ ಕೇಂದ್ರದ ಸಮ್ಮಿಶ್ರ ಸರಕಾರ ಕೆಲಸ ಮಾಡಬೇಕಾಗಿರುವ ಇಂದಿನ ಸನ್ನಿವೇಶದಲ್ಲಿ ದುಡಿಯುವ ಜನತೆಯ ಸಂಘಟನೆಗಳ ಎದುರು ಬಹುಮುಖಿ ಸವಾಲುಗಳು, ವೈರುಧ್ಯ-ಸಂಘರ್ಷಗಳ ಸೂಕ್ಷ್ಮಗಳು ಜ್ವಲಂತವಾಗಿವೆ.

ಅಂತರರಾಷ್ಟ್ರೀಯ, ರಾಷ್ಟ್ರೀಯ ಸಮಸ್ಯೆಗಳು ದೇಸೀಯ ಅಥವಾ ಸ್ಥಳೀಯ ಪರಂಪರಾಗತ ಪ್ರಶ್ನೆಗಳ ಜತೆ ತಳುಕುಗೊಂಡಿರುವ ಹಿನ್ನೆಲೆಯಲ್ಲಿ ಈ ಜಟಿಲತೆಯ ಅರ್ಥೈಸುವಿಕೆ ಮತ್ತು ಚಟುವಟಿಕೆ ನಡೆಯಬೇಕಿದೆ.

ತೀರ ಈಚಿನ ಇನ್ನೊಂದು ಉದಾಹರಣೆಯನ್ನು ಗಮನಿಸುವುದಾದರೆ – ದಸರಾ ಉತ್ಸವದಲ್ಲಿ ಪೂಜೆ ಯಿಲ್ಲದೆ ಉದ್ಘಾಟನೆ ಮಾಡಿದ ಬರಗೂರರ ವಿರುದ್ಧ ಬಜರಂಗದಳದವರು ಮಾಡುತ್ತಿರುವ ದಾಂಧಲೆ. ಇದು ತಾತ್ತ್ವಿಕವಾಗಿ ಭೌತವಾದ ಮತ್ತು ಅಧ್ಯಾತ್ಮವಾದಗಳ ನಡುವಿನ ಸಂಘರ್ಷ; ಪ್ರಗತಿಪರತೆ ಮತ್ತು ಸನಾತನತೆಗಳ ನಡುವಿನ ತಿಕ್ಕಾಟ. ಸನಾತನವಾದುದು, ಸಾಂಪ್ರದಾಯಿಕ ವಾದುದೆಲ್ಲ ಪ್ರಶ್ನಾತೀತ, ಸರ್ವಶ್ರೇಷ್ಠ ಎಂದು ಕುರುಡಾಗಿ ನಂಬಿರುವವರ ಹುಚ್ಚಾಟಕ್ಕೆ ಮಿತಿಯೆ ಇಲ್ಲವಾಗಿದೆ. ಇದು ಬಾಬಾಬುಡನ್ ಗಿರಿ, ಹುಬ್ಬಳ್ಳಿ ಈದ್ಗಾ ಮೈದಾನ ಮುಂತಾದ ಪ್ರಶ್ನೆಗಳ ಸಂದರ್ಭದಲ್ಲೂ ವ್ಯಕ್ತವಾಗಿದೆ. ಪ್ರಧಾನ ವೈರುಧ್ಯಗಳನ್ನು ಮತ್ತು ಸಂಘರ್ಷವನ್ನು ಅಳ್ಳಕಗೊಳಿಸಿ, ಕ್ಷುಲ್ಲಕ ವೈರುಧ್ಯಗಳನ್ನು ಕೃತಕವಾಗಿ ಸೃಷ್ಟಿಸಿ, ಜನತೆಯ ಅಜ್ಞಾನವನ್ನು ಬಂಡವಾಳ ಮಾಡಿಕೊಂಡು, ದೇಶದ ಪ್ರಗತಿ ಪರ ಬದಲಾವಣೆಗೆ ಹೊಡೆತ ಕೊಡುತ್ತಿರುವ ಕೋಮುವಾದಿ, ಪ್ರತಿಗಾಮಿ ಶಕ್ತಿಗಳ ವಿರುದ್ಧ ಹೋರಾಡುವುದು ಅನಿವಾರ್ಯ. ಇದೆಲ್ಲಕ್ಕೂ ಶ್ರಮಿಕ ಜನತೆಯನ್ನು ಮುನ್ನಡೆ ಸುವುದು. ದಿಕ್ಸೂಚಿಸುವುದು ವೈಜ್ಞಾನಿಕ ತತ್ತ್ವಜ್ಞಾನವೇ.

ಎಸ್. ಎಸ್. ಹಿರೇಮಠ
ಪ್ರಾಚಾರ್ಯರು, ಕೊಟ್ಟೂರೇಶ್ವರ ಮಹಾವಿದ್ಯಾಲಯ
ಕೊಟ್ಟೂರು -



# ಚಂದಿರ ಕನ್ನಡಿ ಮತ್ತು ರೊಟ್ಟಿ

ಸೋತರು ರಾಜ ರಾಣಿಯರು ಯುದ್ಧದಲಿ
ನೆಲಕ್ಕೆ ಬಿದ್ದು ಹಟ ಹಿಡಿದು ಅತ್ತ ಬಲರಾಮ
ಚಂದಿರ ಬೇಕೆಂದು ಆಟಕ್ಕೆ
ಮಂಥರೆ ದರ್ಪಣದಲಿ ಚಂದಿರನ ಕೊಟ್ಟು ಕೃತಾರ್ಥಳಾದಳು !

ರೊಟ್ಟಿಯೊಂದನ್ನು ಬಾಯಲಿ ಹಿಡಿದು
ಕೆರೆಯಲಿ ನೆರಳನು ನೋಡಿ
ಸಿಕ್ಕ ರೊಟ್ಟಿಯನ್ನೂ ಕಳೆದುಕೊಂಡಿತು ಹಸಿದ ನಾಯಿ
ರಾಮನಂತೆ ನೀರನಾಯಿ ರೊಟ್ಟಿಯುದ್ಧ

ಹಟಮಾಡಿ ಅಳುತ್ತಿದ್ದಾಳೆ
ಹಸಿದ ಹೊಟ್ಟೆಯ ಬಟ್ಟೆಯಿಲ್ಲದ ಹುಡುಗಿ
ಗುಡಿಸಲ ಸಂದಿಯಲಿ ಕಾಣುವ ಚಂದ್ರನ ನೋಡಿ
ನೆಲುವ ಮೇಲಿನ ರೊಟ್ಟಿಯೆಂದು ಆ ಚಂದಿರನ ಬೇಡುತಿಹಳು
ಯಾವ ಮಂಥರೆ ಬಂದರೇನು ?
ಯಾವ ರಾಜರಾಣಿಯರಿದ್ದೇನು ಫಲ, ಬಾಲರಾಮನಲ್ಲ ಈ ಹುಡುಗಿ

ಕಣ್ಣಿಗೆ ರೊಟ್ಟಿ ಚಂದ್ರಮನಾಗಬಹುದು
ಚಂದ್ರ ರೊಟ್ಟಿಯಾಗಲುಂಟೆ ಹೊಟ್ಟೆಗೆ ?
ಉಕ್ಕಿಸಬಹುದು ಹಾಲು ಮಧುಚಂದ್ರಿಕೆ
ಆಟಕ್ಕುಂಟು ಊಟಕ್ಕಲ್ಲ ಚಂದಮಾಮ.



ಪ್ರೊ॥ ಅರವಿಂದ ಮಾಲಗತ್ತಿ
ನಿರ್ದೇಶಕ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ
ಮೈಸೂರು - ೫೭೦ ೦೦೬

ಡಿ. ಎಸ್. ಚೌಗಲೆ



# ಹೇ ಮಹಾತ್ಮ!

**ಕು**ದಿಬಂದು ಉಕ್ಕುವ ನೀರಿನಂತೆ ಬಾಬುರಾವ ಸಾವಂತ ಕೋಪ-ಕಸಿವಿಸಿಗಳಿಂದ ಕೊತಕೊತ ಕುದಿಯುತ್ತಿದ್ದರು. ಅದನ್ನು ಹತೋಟಿಗೆ ತರಲೆಂಬಂತೆ ಶತಪಥ ಹೆಜ್ಜೆಗಳನ್ನಿಡುತ್ತಿದ್ದರು. ಬೆಳಗಿನ ಹತ್ತು ಗಂಟೆಯ ನಿಗದಿತ ವೇಳೆಗೆ ಮೊದಲೇ ಬಂದಿದ್ದರು. ಕಡಲೂರಿನ ಕಸ್ತೂರಬಾ ಧಾಮದಲ್ಲಿ ಜರುಗುವ ಆರೋಗ್ಯ ಶಿಬಿರದ ಅತಿಥಿಯಾಗಿ ಸಾವಂತರು ಆಗಮಿಸಿದ್ದರು. ಸಂಘಟಿಸಿದ ಸಾಮಾಜಿಕ ಕಾರ್ಯಕರ್ತೆ ಸೋನುಬಾಯಿಗೂ ಆಕೆಯ ಬಲಗೈಬಂಟ-ಸೇವಕ ನಾಭಿರಾಜನಿಗೂ ಬಾಬುರಾವರ ಚಡಪಡಿಕೆ ಕಂಡು ಮುಜುಗರ. ಈಗಾಗಲೇ ಹಲವು ಸಲ ಅವರ ಬಳಿ ಸರಿದು ಸಾವಂತರು – ''ಎಲ್ರಿ... ನಿಮ್ಮ ಗೆಸ್ಟ್‌ಗಳು. ಒಬ್ಬರಿಗೂ ವ್ಯಾಳ್ಯಾದ ಕಿಮ್ಮತ್ತಿಲ್ಲ... ಒಳಗೆ ಕುಂತ ಡಾ|| ಚೌಧರಿ ಬಂದಾರ ಸುರುವು ಮಾಡ್ರೆಲ... ಯಾಕ ಸುಳ್ಳS ಕಾಲದ ಮಹತ್ವ ಗೊತ್ತಿಲ್ಲದವರ ಸಲುವಾಗಿ ಕಾಯಾಕತ್ತೇರಿ...'' ಎಂದು ಬುಸುಗುಟ್ಟಿದ್ದರು.

ಒಳಗೆ ಸಮಾಜಶಾಸ್ತ್ರ ಅಧ್ಯಾಪಕ ಡಾ|| ಅವಿನಾಶ ಚೌಧರಿ ಮತ್ತು ಸಾವಂತ ಅವರು ಬಹುಕಾಲದಿಂದ ಹರಟೆ ನಡೆಸಿದ್ದರು. ಹರಟೆಗೆ ಬೇಸತ್ತು ಬಾಬುರಾವ ಸಾವಂತರು ಹೊರಬಂದು ಬಾಲಸುಟ್ಟ ಬೆಕ್ಕಿನಂಗ ಲುಡುಲುಡು ಮಾಡುತ್ತಿರುವುದು ಸೋನುಬಾಯಿ, ನಾಭಿರಾಜರ ಗಮನಕ್ಕೆ ಬಂದಿತ್ತು. ಆದರೆ ಸೋನುಬಾಯಿ ಪತಿ ಡಾ|| ಮೃತ್ಯುಂಜಯ ವಾಲಿ ಮತ್ತು ಪಿ. ಜಿ. ಹುಡುಗರ ತಂಡ ಶಿಬಿರಕ್ಕೆ ಇನ್ನೂ ಬಂದಿರಲಿಲ್ಲ. ಅವರು ಉದ್ಘಾಟನೆ ಮುಗಿಯುವ ತನಕ ಬಂದರೂ ಇಲ್ಲಿ ಅಡಚಣೆಯಿಲ್ಲ.

ಕಡಲೂರು ಪರಿಸರದಲ್ಲಿ ಬಾಬುರಾವ ಸಾವಂತರನ್ನು ಎಲ್ಲರೂ 'ಕಾಕಾ' ಎಂದೇ ಸಂಬೋಧಿಸುತ್ತಿದ್ದರು. ಈ ಹಿರಿಯ ಜೀವ ಗಾಂಧೀಜಿಯವರ ಮಡಿಲಲ್ಲಿ ಬಾಳಿ ಬದುಕಿ ಹಣ್ಣಾಗಿದೆ. ಸ್ವಾತಂತ್ರ್ಯ ಚಳವಳಿಯಲ್ಲಿ ಪಕ್ಕಾಗಿ ನಲ್ವತ್ತೇಳರ ತರುವಾಯ ತಮ್ಮ ಕಡಲೂರು ಪಕ್ಕದ ತೋಟದಲ್ಲಿ ಆಶ್ರಮ ಪರಿಕಲ್ಪನೆಯ ಬದುಕನ್ನೇ ಈ ಜೀವ ಸೃಷ್ಟಿಸಿತು. ದಂತಕತೆಯಂತೆ ತನ್ನ ಜೀವನವನ್ನು ಈ ಜೀವ ರೂಪಿಸಿಕೊಂಡಿತು. ನಾಭಿರಾಜ, ಸೋನುಬಾಯಿ ಕಾಕಾರ ಮುಂದೆ ನಾಲ್ಕಾರು ಸಲ ಹಲ್ಕಿರಿದು, ಕೈಮುಗಿದು ತಡಕೊಳ್ಳಲು ಅವಲತ್ತುಕೊಂಡಾಗಿತ್ತು.

ಸೋನುಬಾಯಿ ತನ್ನ ಹಲವು ಸಂಘಟನೆಗಳಲ್ಲಿ ಒಂದಾದ ಮಹಿಳಾ ಸಂಘಟನೆಯ ವಾರ್ಷಿಕ ದಿನೋತ್ಸವವನ್ನು ಒಂದು ದಿನ ಆರೋಗ್ಯ ಶಿಬಿರವನ್ನಾಗಿ ಆಚರಿಸಲು ಬಯಸಿದ್ದಳು. ನಾಭಿರಾಜನ ಮೂಲಕ ಬಾಬುರಾವ ಸಾವಂತರನ್ನು ಒಪ್ಪಿಸಿದ್ದಳು. ರಾಜಕಾರಣ ಸಂಗಾತಿ ಹಾಗೂ ಕಡಲೂರು ಗ್ರಾಮ ಪಂಚಾಯತಿ ಅಧ್ಯಕ್ಷ ಶಿವಾಜಿ ಅಠವಲೆ ಮತ್ತು ಜಿಲ್ಲಾ ಪಂಚಾಯತ್ ಸದಸ್ಯ – ಧರ್ಮಜಾಗರಣ ಸಂಘಟನೆಯ ನವೀನ ಕಡೇಮನಿ ವಿಶೇಷ ಆಹ್ವಾನಿತರು. ಈ ಭಾಗದಲ್ಲಿ ಸಮಾಜ ಶಾಸ್ತ್ರೀಯ ನೆಲೆಯಲ್ಲಿ ಒಳ್ಳೆಯ ಮಾತುಗಾರರೆಂದು ಖ್ಯಾತಿವೆತ್ತ ಡಾ|| ಅವಿನಾಶ ಚೌಧರಿ ಅವರನ್ನು ಕರೆಸಲಾಗಿತ್ತು. ಡಾ|| ಚೌಧರಿ ಕೂಡ ವಿವಿಧ ಸಮಾಜಗಳಲ್ಲಿ ಓಡಾಡಲು, ಒಡನಾಡಲು, ಮನುಷ್ಯ ಸ್ವಭಾವದ ಸೂಕ್ಷ್ಮಗಳನ್ನು ಅರಿಯಲು ಇಂಥ ಕಾರ್ಯಕ್ರಮಗಳನ್ನು ಒಪ್ಪಿಕೊಳ್ಳುತ್ತಿದ್ದರು.

ಸೋನುಬಾಯಿ ಪುಢಾರಿಯೊಬ್ಬರ ಮಗಳು. ಸಾಕಷ್ಟು ಆಸ್ತಿ-ನೌಕರ-ಚಾಕರರ ನಡುವೆ ಬೆಳೆದವಳು. ಅವಳ ಮದುವೆಯನ್ನು ಮೆದುಮಾತಿನ ಡಾ|| ಮೃತ್ಯುಂಜಯ ವಾಲಿ ಜತೆ ನಡೆಸಿ ಪುಢಾರಿಗಳೇ ಜಿಲ್ಲಾ ಕೇಂದ್ರದಲ್ಲಿರುವ ವೈದ್ಯಕೀಯ ಕಾಲೇಜಿನಲ್ಲಿ ಕೆಲಸ ದೊರೆವಂತೆ ನೋಡಿಕೊಂಡಿದ್ದರು. ಡಾ|| ವಾಲಿಗೂ, ಸೋನುಬಾಯಿಗೂ ಸ್ವಭಾವದಲ್ಲಿ ಅಜಗಜಾಂತರ ವ್ಯತ್ಯಾಸ. ಸರಳ ಸ್ವಭಾವ ಡಾಕ್ಟರ್ರುದಾದರೆ ಸೋನುಬಾಯಿ ಹಠಮಾರಿ. ಹಿಡಿದ ಕೆಲಸ ಜಿಗಳಿಯಂತೆ ಗಟ್ಟಿಡಿದು ಮಾಡುವವಳು. ಅವಳಿಗೆ ಬಹುದೊಡ್ಡ ಆಕಾಂಕ್ಷೆಗಳಿದ್ದವು. ರಾಜಕಾರಣದಲ್ಲಿ ಹೆಸರು ಮಾಡಬೇಕು. ಎಮ್ಮೆಲ್ಲೇನೋ, ಎಮೆಲ್ಸಿನೋ ಆಗಿ ಮಂತ್ರಿಯಾಗಬೇಕು. ದಿನನಿತ್ಯ ಟಿವಿ, ಪತ್ರಿಕೇಲಿ ಠಳಾಯಿಸಬೇಕು. ತನ್ನ ಪ್ರಭಾವ ಬಳಸಿ ಮಂತ್ರಿಗಳನ್ನೂ ಕಾರ್ಯಕ್ರಮಕ್ಕೆ ಅನೇಕಬಾರಿ ಕರೆಸಿದವಳು. ವಿಧಾನಸೌಧ ಮೆಟ್ಟಿಲುಗಳು ಅವಳ ಕನಸಲ್ಲಿ ತೇಲಿ ಬರುತ್ತವಂತೆ !

ಸೋನುಬಾಯಿ ಕುರಿತು ಅಥೆಂಟಿಕ್ಕಾಗಿ ಮಾತಾಡುವವನೆಂದರೆ ಡಾ|| ವಾಲಿ ಕೂಡ ಅಲ್ಲ, ನಾಭಿರಾಜ ! ಅದೇ ಕಾಲೇಜಿನಲ್ಲಿ ಕರ್ಮವಾಗಿ ಸ್ವೀಕರಿಸಿದ ಕಾರಕೂನಿಗಿಂತ ಸೋನುಬಾಯಿ ಅವರ ಉಸಾಬರಿಗಳಲ್ಲೇ ಬಸವಳಿದು ಹೋಗುತ್ತಾನೆ. ಅವರ ಕಾರ್ಯಕ್ರಮಗಳ ಉಸ್ತುವಾರಿಯಿಂದ ಪ್ರಚಾರತನಕ. ಅತಿಥಿಗಳಿಂದ ಅದನ್ನೆಲ್ಲ ದಾಖಲಾತಿ ಮಾಡುವ ತನಕ ಅವನ ಕಾರ್ಯಭಾರ. ಕಡಲೂರಿನ ಕಸ್ತೂರ ಬಾ ಧಾಮದಲ್ಲಿ ಆರೋಗ್ಯ ಶಿಬಿರದ ಆಲೋಚನೆ ಕೂಡ ನಾಭಿರಾಜನದೆ. ಆದರೆ ಯಾರ್‍ಯಾರನ್ನು ಎಲ್ಲೆಲ್ಲಿ ಬಳಸಿಕೊಳ್ಳಬೇಕು ಎಂಬ ಮಹತ್ವಾಕಾಂಕ್ಷೆ [illegible] ಸೋನುಬಾಯಿದು.

ಡಾ|| ಅವಿನಾಶ ಚೌಧರಿ ಮುಂದೆ ಸೋನುಬಾಯಿ

ಮೇಡಂ ಕುರಿತು ನಾಭಿರಾಜ ಹೇಳಿದ್ದನ್ನು ಕೇಳಿ ಚೌಧರಿ ವಿಸ್ಮಯಗೊಂಡರು.

''ಏನಪ್ಪ... ನಿಮ್ಮ ಮ್ಯಾಡಂ ಬರೀ ಟಿವಿ, ಪೇಪರದಾಗ ಕಾಣ್ತಿರತಾರಲ್ಲ'' ಅಂತ ಆಮಂತ್ರಿಸಲು ನಾಭಿರಾಜ ಹೋದಾಗ ಡಾಕ್ಟರು ಚೌಧರಿ ಕೆಣಕಿದ್ದರು.

''ಸರ್.... ಮ್ಯಾಡಂ ಎಂಥ ವಂಡರ್‌ಫುಲ್ ಕನಸ ಕಂಡ್ಯಾರ ಗೊತ್ತೇತಿ ಏನ್ರಿ ?'' ಸೊಟ್ಟಮಾರಿ ಮಾಡಿ ನಾಭಿರಾಜ ಅಂದಿದ್ದ.

''ಎಂಥಾದ್ರಿ ?'' ಬೇಕಂತಲೇ ಡಾ॥ ಚೌಧರಿ ಕೇಳಿದ್ದರು.

''ಅವರು ಸತ್ತಾಗ ದೇಹದ ಮ್ಯಾಲ ರಾಷ್ಟ್ರಧ್ವಜ ಇರಬೇಕಂತರಿ !'' ವಿಸ್ಮಯದಿಂದ ಕಣ್ಣಗಲಿಸಿ ಹೇಳಿದ್ದ.

''ಮತ್ತ! ನೀ ಇಷ್ಟೆಲ್ಲ ಖಟಪಟಿ ಮಾಡೋದ ನೋಡಿದರ... ಸಾಧ್ಯದ ಬಿಡು'' ಡಾ॥ ಚೌಧರಿ ಧೂಪ ಚೆಲ್ಲಿದ್ದರು.

''ಅಲ್ಲಿತನ ನಾನsು ಸತ್ತ ಹೋಗಿರತ್ಯಾನರಿ... ಅಲ್ಲ ಸರ್... ಇವರ ಹಿಂದ ಬೆನ್ಹತ್ತಿ ನನಗ ನನ್ನ ಮನೀ ಅನ್ನೋದ ಮರತ ಹೋಗೆತ್ರಿ. ಚೋವಿಸತಾಸ ಬಾರಾ ಮಹಿನೆ ಇವರದs ಧಂದಾ ಆಗೇತ್ರಿ... ಅತಿಥಿಗಳನ್ನ ಕರಕೊಂಡು ಬರೋದು, ಕಳಿಸಿ ಕೊಡೋದು. ಅವರ ಊಟ ತಿನಿಸಿನ್ಯಾಗ ನನ್ನ ಹಸಿವಿ ನೀರಡಿಕೇನ ಹಾಳಾಗ್ಯಾವ... ಅದ ಹೋಗಲಿ... ನನ್ನ ಹ್ಯಾಂತಿ ಸಂಶಾ ಪಡಲಿಕ್ಕಿ ಹತ್ಯಾಳ. 'ನೀವ್ಯಾನ ನನ್ನ ಮದ್ವಿ ಆಗಿರ್ಯೋ... ಇಲ್ಲ ಆ ನಿಮ್ಮ ಬಾಯಿನ್ನ ಕಟ್ಟಿಕೊಂಡಿರ್ಯೋ' ಅಂತ ಗಚವಾಟಿ ತಿವಿದು ಕೇಳಲಿಕ್ಕಿ ಹತ್ಯಾಳರಿ. ನನಗ ನನ್ನ ಮಕ್ಕಳು ಯಾವ ಕ್ಲಾಸಿನ್ಯಾಗ ಕಲ್ಯಾಕತ್ಯಾವ ಅನ್ನೋದs ಮರತ ಹೋಗೇತ್ರಿ ಸರ್.'' ಹೀಗೆಂದು ನಾಭಿರಾಜ ತನ್ನ ಸ್ಥಿತಿಯ ಸಮಗ್ರ ಚಿತ್ರಣ ನೀಡಿದ್ದ. ಅವಳ ಆಸೆಗಳ ಪ್ರಭಾವಕ್ಕೆ ಡಾ॥ ಚೌಧರಿ ಒಂದಷ್ಟು ಕಾಲ ಒಳಗಾಗಿದ್ದರು.

ಕಡಲೂರು ಒಂದು ಆದರ್ಶಗ್ರಾಮ. ಹಲವು ಕ್ಷೇತ್ರದಲ್ಲಿ ಪ್ರಗತಿ ಸಾಧಿಸಿದೆ. ಸುತ್ತಲೂ ಹಸಿರು. ಮಲೆನಾಡಿನ ಸೆರಗಿಗೆ ಮಳೆಯ ಚೆಲುವು ಚಿತ್ತಾರ. ಪಡುವಲದ ಬೆಟ್ಟಕ್ಕೆ ನೀರು ಇಂಗಲು ಟ್ರೆಂಚಿಸ್ ಕೊರೆದಿದ್ದಾರೆ. ಕೆರೆ, ಬಾವಿಗೆ ನೀರಿನ ಬರವಿಲ್ಲ. ಊರ ಹಿರಿ-ಕಿರಿಯರು ಗ್ರಾಮಾಭ್ಯುದಯಕ್ಕೆ ಕಟಿಬದ್ಧರು. ಜನರೇ ನೆಟ್ಟ ಸಾವಿರಾರು ಸಸಿಗಳು ಇಂದು ಹೆಮ್ಮರವಾಗಿ ನಳನಳಿಸುತ್ತಿವೆ. ತೆಂಗು-ಮಾವು ಗ್ರಾಮದ ಆರ್ಥಿಕ ಭಾರದ ನೊಗ ಹೊತ್ತಿದೆ. 'ಸೋಶಿಯಲ್ ಫಾರೆಸ್ಟ್ರಿ' ಒಂದು ಮಾಡೆಲ್ ! ಅದನ್ನು ನಾಶ ಮಾಡಿಯಾರು ಎಂದು ಮನೆಗೊಂದು ಗ್ಯಾಸ್‌ಪ್ಲಾಂಟ್ ಇದೆ. ಬೆಳಗು ಮೂಡಿದೊಡನೆಯೇ ಪುರುಷರು ಹೊಲಗದ್ದೆ ಅಪ್ಪುವರು. ಮಹಿಳೆಯರು ಮನೆ-ದನ-ಕರು ಸಂಭಾಳಿಸುವರು. ಮಕ್ಕಳು ಶಾಲೆ – ಬಾಕಿಯವರು ತಂತಮ್ಮ ಉದ್ಯೋಗ-ಧಂಧೆಯೊಳಗೆ ತಲ್ಲೀನ ! ಹೆಂಡದಂಗಡಿಯಿಲ್ಲ. ತಂಬಾಕು, ಗುಟಕಾ ಸ್ಯಾಂಪಲ್ಲಿಗೂ ಸಿಗುವುದಿಲ್ಲ. ವ್ಯಸನಿಮುಕ್ತ ಗ್ರಾಮವೆಂಬ ಹೆಗ್ಗಳಿಕೆ. ಇದೇ ಬಾಬುರಾವರ ನನಸಿನ ಆಶ್ರಮ ಪರಿಕಲ್ಪನೆ ಸಾಕಾರ ರೂಪವಾಗಿತ್ತು.

ಇಷ್ಟೆಲ್ಲ ಮಜಬೂತಾದ ವ್ಯವಸ್ಥೆ ಮಧ್ಯೆ ಹೊರಗಿನವರು ಕುಡಿದು ಬಂದರೆ, ಯಾರಾದರೂ ಕದ್ದುಮುಚ್ಚಿ ಮಾರಾಟ ನಡೆಸುತ್ತಿದ್ದರೆ ಅಂಥವರ ಶೋಧಕ್ಕೆ ಸಮಿತಿಯಿದೆ. ಒಂದು ಬಾರಿ ನಗರದಿಂದ ವಿದೇಶಿ ಮದ್ಯ ತಂದು ಮಾರುವ ಯುವಕ ಸಿಕ್ಕಿಬಿದ್ದ. ಆತನನ್ನು ಊರ ಅಗಸಿಗೆ ಕರೆತಂದು ಶಿಕ್ಷಿಸಿ-ಮೆರವಣಿಗೆ ನಡೆಸಿದರು. ಮತ್ತಾರು ಇಂಥ ತಪ್ಪು ಮಾಡಬಾರದೆಂಬ ಎಚ್ಚರಿಕೆ. ಈ ಘಟನೆ ನಡೆದಾಗ ಬಾಬುರಾವ ಊರಲ್ಲಿ ಇರಲಿಲ್ಲ. ಅವರು ಬಂದ ಬಳಿಕ ಬಹು ನೊಂದುಕೊಂಡರು. ಇಷ್ಟು ದೊಡ್ಡ ಶಿಕ್ಷೆ ನೀಡಬಾರದಾಗಿತ್ತು ಎಂದು ವಿಷಾದಿಸಿದರು.

ಆದರೆ ಇದನ್ನು ಕಾಯ್ದುಕೊಂಡು ಹೋಗುವುದು ಕಷ್ಟಸಾಧ್ಯ. ಈಗೀಗ ಬಾಹ್ಯ ಒತ್ತಡಗಳು ಅಧಿಕವಾಗುತ್ತಿವೆ. ಜಾಗತಿಕ ಪಾತಳಿಯ ಆರ್ಥಿಕ ನೀತಿ, ಮಾರುಕಟ್ಟೆ ಪ್ರಭಾವ ಮತ್ತು ಬದಲಾಗುತ್ತಿರುವ ಸಾಮಾಜಿಕ ಮೌಲ್ಯಗಳು. ಇವುಗಳ ಬಿಸಿ, ಝಳ ಕಡಲೂರಿಗೂ ತಟ್ಟುತ್ತಿದೆ. ಹೊಸ ಚಿಂತನೆ, ರಾಜಕಾರಣ ಪರಿಣಾಮಗಳ ಗಾಳಿ ತಣ್ಣಗೆ ಕಡಲೂರು ಹಾದು ಹೋಗುತ್ತಿದೆ.

ಇವೆಲ್ಲದರ ನಡುವೆ ಬಾಬುರಾವ ಸಾವಂತರೆಂದರೆ ಜನರಿಗೆ ಅಪಾರ ಗೌರವ ಶ್ರದ್ಧೆ. ತಮ್ಮ ಗಾಂಧೀಜಿ ಚಿಂತನೆ ಮತ್ತು ಮೌಲ್ಯಗಳಿಂದ ಒಳಿತು ಮಾಡಿದವರು. ಕಡಲೂರಿಗೆ ಖ್ಯಾತಿ ಕೊಟ್ಟವರು. ಇವರ ಮೇಲೆ ಬಾಪೂ ಪ್ರಭಾವ ಬೀರಲು ಎರಡು ಘಟನೆಗಳು ಕಾರಣವಾಗಿವೆ. ಒಂದು ಯುವಕನಿದ್ದಾಗ ನಡೆದುದು, ಇನ್ನೊಂದು ಬಾಪೂ ಇದೇ ಊರಿಗೆ ಬಂದುದು. ಇದೇ ಕಸ್ತೂರಬಾ ಧಾಮದಲ್ಲಿ ಬಾಪೂ ಕೆಲಕಾಲ ತಂಗಿದ್ದರು. ಬೆಳಗಾವಿ ಅಧಿವೇಶನಕ್ಕೆ ಬಂದಾಗ ಬಾಬುರಾವರ ತಂದೆ ಸಯಾಜಿರಾವ್ ಕರೆತಂದಿದ್ದರು. ಕಾಕತಾಳಿಯೋ ಕಡಲೂರಿನ ಭಾಗ್ಯವೋ ಇದೇ ಗ್ರಾಮಕ್ಕೆ ಒಮ್ಮೆ ವಿನೋಬಾ ಭಾವೆ ಕೂಡ ಆಗಮಿಸಿ ಈ ಜಾಗದಲ್ಲೇ ತಂಗಿದ್ದರು. ಗಾಂಧಿ-ವಿನೋಬಾ ಕಡಲೂರು ಮಣ್ಣು ಮೆಟ್ಟಿ

ಗಾಳಿ-ನೀರುಂಡ ಪ್ರತೀಕವಾಗಿ ಕಸ್ತೂರ ಬಾ ಧಾಮ ಸ್ಮಾರಕದಂತಿದೆ. ಅಂಥ ಜಾಗೆಯಲ್ಲಿ ಸೋನುಬಾಯಿ ಆರೋಗ್ಯಶಿಬಿರ ಹಮ್ಮಿದ್ದಾರೆ.

ಬಾಬುರಾವ ಸ್ವಾತಂತ್ರ್ಯ ಚಳುವಳಿಗೆ ಕಿವಿಗೊಟ್ಟಿದ್ದೂ ಒಂದು ಆಕಸ್ಮಿಕವೇ ಸರಿ. ಕಡಲೂರನ್ನು ಬಾಪೂ ಮೆಟ್ಟಿದ್ದಾಗಿಂದ ಅದಕ್ಕೆ ಗಾಂಧಿ ಸಿದ್ಧಾಂತಗಳ ಅಮಲೇರಿತ್ತು. ಆಗ ಬಾಬುರಾವ ಮೀಸೆ ಒಡೆಯುತ್ತಿರುವ ಎಳೆ ಪೋರ! ಸಯಾಜಿರಾವ ಮಗನನ್ನು ಉನ್ನತ ಶಿಕ್ಷಣಕ್ಕೆಂದು ಪುಣೆಗೆ ಕಳಿಸಿದರು. ಮಗ ಭಲೋ ಕಲಿಯಬೇಕೆಂಬ ಹಂಬಲ ಸಯಾಜಿರಾವರದು. ಗಾಂಧಿ ಹುಚ್ಚು ಯುವ ಪೋರನೊಳಗೆ ಮೊಳಕೆಯೊಡೆದಿತ್ತು. ಬಾಪೂ ಹೋರಾಟದ ಕಸುವುನೆಲ್ಲ ಮೈ-ಮನಗಳಲ್ಲಿ ತುಂಬಿಕೊಂಡಿದ್ದ. ಆಗೊಂದು ವಿಚಿತ್ರ ಪ್ರಸಂಗ ನಡೆದುಹೋಯಿತು. ಅದೊಂದು ಅವಘಡ!

ಕಾಲೇಜು ಸಮಾರಂಭಕ್ಕೆ ಬ್ರಿಟಿಷ್ ಅಧಿಕಾರಿ ಅತಿಥಿಯಾಗಿದ್ದರು. ಸಭಾಗ್ರಹ ತುಂಬಿ ತುಳುಕುತ್ತಿತ್ತು. ಬಾಬುರಾವ ಮುಂದಿನ ಸಾಲಿನಲ್ಲಿ ಆಸೀನರಾಗಿದ್ದರು. ಇವರಂತೆ ಚಿಂತಿಸುವ, ಸ್ವಾತಂತ್ರ್ಯ ಬಗ್ಗೆ ಗಾಂಧಿ ವಿಚಾರವನ್ನು ಮನನ ಮಾಡುವ ಹುಡುಗರೂ ಇದ್ದರು. ಅತಿಥಿಗಳ ಭಾಷಣದ ಸರದಿ. ಬ್ರಿಟಿಷ್ ಅಧಿಕಾರಿ ಮಾತಿಗಾರಂಭಿಸಿದರು. ವಿದ್ಯಾರ್ಥಿಗಳು ಈ ಚಳುವಳಿಯಲ್ಲಿ ತಲೆಹಾಕಕೂಡದೆಂದು ಕರೆ ನೀಡುತ್ತ, ಬಾಪೂ ಸೇರಿ ರಾಷ್ಟ್ರನಾಯಕರನ್ನು ಹೀಯಾಳಿಸಿ ಬೈಯ್ಯತೊಡಗಿದರು. ಎದುರು ಸಾಲಿನ ಹುಡುಗರ ರಕ್ತ ಕಾವೇರಹತ್ತಿತು. ಬಾಬುರಾವ ಕುದಿಕುದಿದು ಹಲ್ಲು ಕಡಿದರು. ಆ ಅಧಿಕಾರಿ ಬಯ್ಯುವುದನ್ನು ಮುಂದುವರೆಸಿದ. ಬಿಸಿರಕ್ತದ ಬಾಬುರಾವ ಮಿಂಚಿನಂತೆ ಸಿಡಿದೆದ್ದವರೇ ವೇದಿಕೆಗೆ ಹಾರಿದರು. ಆ ಕೆಂಪು ಮೋರೆಯ ಅಧಿಕಾರಿ ಕೆನ್ನೆಗೆ ರಪರಪನೆ ಝಾಡಿಸಿದರು. ಅನಿರೀಕ್ಷಿತ ಅಘಾತಕ್ಕೊಳಗಾದ ಅಧಿಕಾರಿ ರಕ್ಷಣೆಗೆ ಕಾವಲು ಪಡೆ ಧಾವಿಸಿತು. ಉಳಿದ ಹುಡುಗರು ವೇದಿಕೆಗೆ ಧಾವಿಸುವುದನ್ನು ಸಿಬ್ಬಂದಿ ತಡೆಯಿತು. ಬಾಬುರಾವರನ್ನು ಬಂಧಿಸಲಾಯಿತು. ಇಡೀ ಸಭಾಗೃಹ ಗೊಂದಲದ ಗೂಡಾಯಿತು. ಸ್ವಾತಂತ್ರ್ಯ ಚಳುವಳಿ ಕಾವಿನ ವಿದ್ಯುತ್ ಸಂಚಲನವನ್ನು ಬ್ರಿಟಿಷ್ ಅಧಿಕಾರಿಗೆ ಕೊಟ್ಟ ಬಾಬುರಾವರ ಸುದ್ದಿ ಮರುದಿನ ಪತ್ರಿಕೆಯ ಮುಖಪುಟ ಸುದ್ದಿಯಾಗಿ ರಾರಾಜಿಸಿತು. ಬಾಪೂಜಿ ಈ ಪೋರನನ್ನು ಖುದ್ದಾಗಿ ಕಾಣಲು ಬಯಸಿದರು. ಕಾಲೇಜು ಪ್ರವೇಶ ಕಿತ್ತುಹಾಕಿತ್ತು. ಯಾವ ಪರಿವೆಯಿಲ್ಲದೆ ಬಾಬುರಾವ ಬಾಪೂ ಚಳುವಳಿಗೆ ಧುಮುಕಿದರು.

ಬಾಬುರಾವ ಈಗಲೂ ಖಾದಿ ಉಡುತ್ತಾರೆ. ಸರಳ ಆಹಾರ. ಚಾಪೆ-ಚರಕದ ಬದುಕು. ತಮ್ಮ ಬಟ್ಟೆಗಳನ್ನು ತಾವೇ ತೊಳೆದುಡುವುದು. ಇದರ ದೀಕ್ಷೆಯನ್ನು ಈ ಕಡಲೂರಿಗೆ ಕೊಟ್ಟರು. ಊರಿಗೆ ದೀಕ್ಷೆ ಕೊಡುವಾಗ ಕಷ್ಟ-ತೊಂದರೆ ಎದುರಾದವು. ಒಂದಷ್ಟು ಜನರನ್ನು ಕೂಡಿಸಿ 'ಗ್ರಾಮ ನೈರ್ಮಲ್ಯ ಮೋಹಿಮ್'ಗೆ ನಾಂದಿಹಾಡಿದರು. ಸ್ವತಃ ಪೊರಕೆ ಹಿಡಿದರು. ಬೆಳಿಗ್ಗೆದ್ದು ಊರನ್ನು ಗುಡಿಸಹತ್ತಿದರು. ಮಲ ಎತ್ತಿದರು. ಬೆಟ್ಟದಲ್ಲಿ ಸಸಿ ನೆಡುವುದನ್ನು ಮಾಡುತ್ತ, ಮನೆಗೊಂದು ಶೌಚ ಯೋಜನೆ, ಗ್ಯಾಸ್ ಪ್ಲಾಂಟು – ಹೀಗೆ ಗ್ರಾಮಕ್ಕೆ ಸರಕಾರದ ಸವಲತ್ತು ಒದಗಿಸಲು ಪ್ರಾರಂಭಿಸಿದರು. ಗಾಂಧಿಯ ಅವತಾರವೇ ಮಲ ಎತ್ತುವುದನ್ನು ನೋಡುತ್ತ ಸುಮ್ಮನಿರದ ಊರಮಂದಿ ತಾವೂ ಜತೆಗೂಡಿದರು. ಆ ಪ್ರಕ್ರಿಯೆ ನಿರಂತರತೆ ಕಾಯ್ದುಕೊಂಡಿತು.

ಅಠವಲೆ, ಕಡೇಮನಿ ತಡಮಾಡಿ ಬರುವವರೆ ಖರೇ ನಾಯಕರೆಂಬ ಠೀವಿಲಿ ಹಾಜರಾದರು. ಸೋನುಬಾಯಿ, ನಾಭಿರಾಜ ಆ ಗೆಸ್ಟ್‌ಗಳ ಜತೆಗೂಡಿದರು. ಕಡೇಮನಿ ''ಕಾಕಾರೀ... ನಮಸ್ಕಾರ. ಜರ ವ್ಯಾಳ್ಯಾ ಆತು... ಪಾರ್ಟಿ ಮೀಟಿಂಗ ಇತ್ತಲ್ಲ ಬೆಳಗಾವಿಗಿ ಹೋಗಿನ್ರಿ'' ಎಂದೊಂದು ದಿಮಾಕಿನ ಸಬೂಬು ಎಸೆದ. ಅಠವಲೆ ತನ್ನದೂ ಒಂದಿಷ್ಟು ಸರಿಪಡಿಸಲೋಸುಗ – ''ಇವರ ಬರತಾರಂತ... ಮನಿಗಿ ಹೋದಿನಿ... ಮತ್ತಿನ್ಯಾ ನ ಕಾಯಿಕೋಂತ ಕುಂದರಬೇಕಾತು'' ಅಠವಲೆ ನುಡಿದ. ಅವರಿಬ್ಬರ ಮಾತುಗಳಲ್ಲಿ ತಡಮಾಡಿದುದಕ್ಕೆ ಯಾವ ಕ್ಷಮೆಯ ಛಾಯೆಯೇ ಇರಲಿಲ್ಲ. ಸೋನುಬಾಯಿ ಡಾ|| ಅವಿನಾಶ ಚೌಧರಿಯವರ ಪರಿಚಯ ಮಾಡಿಸಿದಳು. ಬಾಬುರಾವರಿಗೆ ''ಇನ್ನು ಸುರುವು ಮಾಡೋನಲ್ಲ'' ಎಂದು ಕರೆದು ಅವರ ಕೋಪ-ಜುಗುಪ್ಸೆಗೆ ಒಂದಿಷ್ಟು ತಣ್ಣನೆಯ ಮುಲಾಮು ಸವರಿದಳು.

ನಾಭಿರಾಜನನ್ನು ಕರೆದ ಸೋನುಬಾಯಿ ''ಅಲ್ಲ... ಇವರು ಇನ್ನೂ ತಮ್ಮ ಪಿಜಿ ಹುಡುಗೋರ ಸಂಗಡ ಬಂದೇ ಇಲ್ಲಲ್ಲ... ಇವರ ಯಾವಾಗ್ಲೂ ಹಿಂಗs ಭಾಳ ಸ್ಲೋ!'' ಗೊಣಗಿದರು. ನಾಭಿರಾಜ ಮೊದಲು ಕಾರ್ಯಕ್ರಮ ಆರಂಭಿಸಿದರೆ ಅದು ಮುಗಿಯೋ ತನಕ ಬರಬಹುದೆಂದುಕೊಂಡು – ''ಮೇಡಂ ತಡ ಆಗೇತಿ... ಪೈಲಿ ಕಾರ್ಯಕ್ರಮ ನಡಿಲಿ.. ಅಲ್ಲಿತನ ಡಾಕ್ಟರು, ಪಿಜಿ ವಿದ್ಯಾರ್ಥಿಗಳು ಬರಬೋದು'' ಅಂದು ವೇದಿಕೆಯತ್ತ ನಡೆದ. ಸೋನುಬಾಯಿ ಎಲ್ಲರನ್ನು ಕರೆದುಕೊಂಡು ವೇದಿಕೆ ಹತ್ತಿದಳು.

ವೇದಿಕೆ ಎದುರು ಒಂದಷ್ಟು ಜನ ಕುಳಿತಿದ್ದರು. ಹೊಲ-ಗದ್ದೆಗಳಲ್ಲಿ ಕೆಲಸ-ಧಂಧೆಗಳಿರುವುದರಿಂದ ಸಂಖ್ಯೆ ವಿರಳವಾಗಿತ್ತು. ತಮ್ಮ ಒಡಲೊಳಗ ಏನೆಲ್ಲ ಇವೆಯೋ ಇಲ್ಲವೋ? ಎಂಬುದನ್ನು ಉಚಿತವಾಗಿ ಪತ್ತೆಹಚ್ಚುತಾರಲ್ಲ! ಎಂಬ ನಂಬುಗೆಯಿಂದ ಮಹಿಳೆ-ಮಕ್ಕಳು-ಪುರುಷರಾದಿಯಾಗಿ ಕಸ್ತೂರ ಬಾ ಧಾಮದ ಒಳ ಹೊರಗೆ ಠಿಕಾಣಿ ಹೂಡಿದ್ದರು.

ಶಿಬಿರೋದ್ಘಾಟನೆ ಶುರುವು ಆಯಿತು. ಸ್ವಾಗತ ಪ್ರಸ್ತಾವನೆಯಲ್ಲಿ ನುಡಿಮುತ್ತು ಉದುರಿಸಲು ನಿಂತ ಸೋನುಬಾಯಿ ಮೇಕಪ್ಪು ಓಡಾಟದ ರಭಸಕ್ಕೋ, ಬಿಸಿಲಿನ ಶಾಖಕ್ಕೋ ಬೆವರೊಡೆದು ಕರಗಲು ತೊಡಗಿತ್ತು. ಒರೆಸಿಕೊಳ್ಳುತ್ತ ನಗೆ ನಸು ಚೆಲ್ಲಿ – ''ಕಡಲೂರು ಈ ನಾಡಿನಾಗ ಹೆಸರುವಾಸಿ. ಕಾಕಾರು ಅದರ ಕೀರ್ತಿಗಿ ಕಾರಣ. ಅಂಥ ಊರೊಳಗ, ಗಾಂಧಿ ಅವತಾರದಂಥ ವ್ಯಕ್ತಿ... ನಮ್ಮ ಮುಂದ ಇರೋದು ನನ್ನ ಪುಣ್ಯ! ಅವರಿಗಿ ಸಮಾಜ ಶಾಸ್ತ್ರದೊಳಗ ಹೆಸರು ಮಾಡಿದ ಡಾ|| ಚೌಧರಿ ಸಾಹೇಬರಿಗಿ... ನಮ್ಮ ಕಾರ್ಯಕರ್ತ ಬಳಗ ಅಠವಲೆ, ಕಡೇಮನಿ ಮತ್ತ ನಿಮ್ಮನ್ನ ಸ್ವಾಗತಿಸುತೀನಿ. ಇಂಥ ಗೌರವದ ಹಳ್ಳಿಯೊಳಗ ಮಹಿಳಾ ಸಂಘಟನಿ ಕಾರ್ಯಕ್ರಮ ಆಗ್ತಿರೋದು ಒಂದು ದೊಡ್ಡ ಯೋಗಾಯೋಗ. ಇನ್ನೇನು ಕಾರ್ಯಕ್ರಮ ಮುಗಿತ ಇದ್ದಂಗ ತಪಾಸಣಿ ಸುರುವು ಆಕ್ಕೇತಿ... ಎಲ್ಲರು ಸಹಕಾರ ನೀಡ್ರಿ...''

ಸೋನುಬಾಯಿ ಬಾಬುರಾವರ ಸ್ತುತಿ ಮಾಡುವ ಸಂದರ್ಭದಲ್ಲಿ ಅಠವಲೆ, ಕಡೇಮನಿ ಪರಸ್ಪರ ಕಣ್ಣರಳಿಸಿ ಅರ್ಥಪೂರ್ಣ ನಗೆಯನ್ನು ವಿನಿಮಯಿಸಿಕೊಂಡರು.

''ನನಗೂ ರಾಜಕಾರಣಂದರ ಪ್ರೀತಿ... ಆದರ ಅದರೊಳಗಿನ ಕೆಸರ ಎರಚಾಟ ಕಂಡು ಹೊಲಸಂತ ಬ್ಯಾಡನಿಸತೇತಿ. ಕಾಕಾರಂತೋರು ಇದ್ದಿದ್ದರಂದರ ಅವರ ಪಕ್ಷಾನ ಸೇರತಿದ್ನಿ. ಪ್ರತಿ ಹಳ್ಳಿನು ಕಡಲೂರು ಆಗತಿತ್ತು... ಗಾಂಧಿ ಕನಸ ನನಸಾಗತಿತ್ತು'' ಎಂದು ಮಾತು ಮುಗಿಸಿ ಎಲ್ಲರಿಗೂ ಹೂಗುಚ್ಛ ನೀಡಿದಳು. ಬಾಬುರಾವ ಸಾವಂತರು ಜ್ಯೋತಿ ಬೆಳಗಿಸಿ ಮಾತನಾಡಲು ಅನುವುಗೊಂಡರು.

''ಕಡಲೂರು ಗ್ರಾಮಸ್ಥರೆ, ಗಣ್ಯ ಮಾನ್ಯರೆ ನನ್ನನ್ನಿಲ್ಲಿಗಿ ಕರೆತಂದ ಸಾಮಾಜಿಕ ಕಾರ್ಯಕರ್ತೆ ಸೋನುಬಾಯಿ ಅವರೆ, ಎಲ್ರಿಗೂ ನಮಸ್ಕಾರ. ನಾನ ಈ ಕಾರ್ಯಕ್ರಮಕ್ಕ ಎಷ್ಟು ಸರಿಯಾದ ವ್ಯಕ್ತಿನೋ ಗೊತ್ತಿಲ್ಲ. ಆದರ ನೀವ ದೂರಿಂದ ಬಂದು ನಮ್ಮೂರಾಗ ಆರೋಗ್ಯ ಶಿಬಿರ ಹಮ್ಮಿಕೊಂಡೀರಿ... ಅಂದ ಮ್ಯಾಲ ಬರೋದ ನನ್ನ ಕರ್ತವ್ಯನ ಅದ... ಆರೋಗ್ಯ! ಈ ಪದಾನ ಏನೆಲ್ಲದಕ್ಕ ಬಳಸ್ತೀವಿ... ದೇಹದ ಆರೋಗ್ಯ! ಮನಸ್ಸಿನ ಆರೋಗ್ಯ! ಆರೋಗ್ಯವಂತ ಸಮಾಜ! ಹಿಂಗೆಲ್ಲವು... ಇವೆಲ್ಲದಕ್ಕ ಒಂದ ಅಂತರಸಿಸ್ತ ಅದ... ಒಂದನ್ನ ಬಿಟ್ಟು ಇನ್ನೊಂದಿಲ್ಲ... ಸಮಾಜದ ಪ್ರತಿಬಿಂಬನ ನಾಡು, ದೇಶ. ಹಂಗಾರ ನಮ್ಮ ನಾಡೋ, ದೇಶಾನೋ ಆರೋಗ್ಯವಾಗಿ ಅದs ಏನ್ರಿ? ನಾವೆಷ್ಟು ಕಾಯಕ ನಿಷ್ಠರಿದೀವಿ... ಪ್ರಾಮಾಣಿಕತಾ ನಮ್ಮಲ್ಲಿ ಅದನ? ಭ್ರಷ್ಟತೆಯಲ್ಲಿ ನಮ್ಮ ರ್ಯಾಂಕ್ ನೋಡೇರಿ...! ಸಮಾಜಶಾಸ್ತ್ರದ ತಜ್ಞರ ಇಲ್ಲಿನ ಅದಾರ... ಅವರಿಗೆ ಎಲ್ಲಾನು ಗೊತ್ತೇತಿ ಕೇಳ್ರಿ... ನನ್ನಂಥೋರು ಇಂಥದ್ರೊಳಗ ಬದುಕೋದು ಉಸಿರು ಗಟ್ಟಿದಂಗ. ದಿನ ಬೆಳಗಾದರ ಸಾವು, ಸುಲಿಗಿ, ಮೋಸ! ಜಾತಿ, ಭಾಷಾ ಕದನ... ಮನಸ್ಯಾನ ಮಾರಣ ಹೋಮ... ನಮಗ ಮನಸ್ಯಾರ ಪ್ರೇಮ ಮಾಡೋರು ಬೇಕಾಗ್ಯಾರ.. ಜಾತಿ,



ಭಾಷೆ ಕೋಮನ್ನಲ್ಲ.'' ಉದ್ವೇಗಗೊಂಡಿದ್ದರು. ಅವು ಅವರ ಕರುಳಿಂದ ಬಂದ ಮಾತುಗಳು. ಕೆಲಕ್ಷಣ ತಲೆಕೆಳಗೆ ಹಾಕಿದರು.

''ಕಡಲೂರು ಆಶ್ರಮಕ್ಕೆ ಬಿರುಕು ಬಿಡಲಿಕ್ಕಿ ಹತ್ತೇತಿ... ನಾವೀಗ ಇದ್ದ ಈ ಹಳೀಜಾಗ, ಈ ಕಟ್ಟಡದ ಗೋಡಿಗಳು ಬಿರುಕು ಬಿಡಲಾಕ ಹತ್ಯಾವ... ತೊಲಿಗಳಿಗಿ, ಕಿಟಕಿ, ಬಾಗಿಲುಗಳಿಗಿ ಕೆಟ್ಟ ಹುಳ ಬಿದ್ದಾವ... ಅಲ್ಲಿ ಆ ಮಹಾನುಭಾವರ ಫೋಟೋ ಅವs ಅಲ್ಲ!'' ಜನರ ಹಿಂದೆ ಗೋಡೆಗೆ ತೂಗಿದ ಗಾಂಧೀ-ವಿನೋಬಾರ ಭಾವ ಚಿತ್ರ ತೋರಿಸುತ್ತ ಬಾಬುರಾವರು – ''ಅದರ ಕೆಳಗsನ ಆ ಪುಣ್ಯಾತ್ಮರು ಕುಂತಿದ್ದರು... ಆ ಕಟ್ಟಿ ನಮಗ ಪ್ರೇರಣಾಸ್ಥಾನ... ನನಗೂ ವಯಸ್ಸಾತು... ಆದರ ಬರೋ ದಿನಗಳ ಭಲೋ ಇಲ್ಲಂತ ಮನಸ ಹೇಳಾಕತ್ತೇತಿ ಯಾಕಂದರ ?'' ತುಸು ತಡೆದು – ''ಈ ನಮ್ಮ ಯುವಕರಿದ್ದಾರ... ಅವರನ್ನು ಕರದೇರಿ ಭಲೂನs ಮಾಡೇರಿ... ಅವರು ಬ್ಯಾರೆ ಬ್ಯಾರೆ ಪಾರ್ಟಿ, ಸಂಘಟನದೋರು... ಬೇಕಾದಾಗ ಕೂಡತಾರ ಬ್ಯಾಡದಾಗ ಕೆಸರ ಎರಚುತಾರ...'' ಅಠವಲೆ ಮತ್ತು ಕಡೇಮನಿಗೆ ಮಾರಿಗೆ ರಪ್ಪನೆ ಹೊಡೆದಂಗಾತು. ಅತ್ತು ಕರೆದು ತಂದು ಮುಖಕ್ಕೆ ಉಗಿಸಿಕೊಂಡಂಗಾತು. ಡಾ॥ ಚೌಧರಿ, ಸೋನುಬಾಯಿ, ನಾಭಿರಾಜರಿಗೆ ಎಲ್ಲಿ ಆರೋಗ್ಯಶಿಬಿರದ 'ಹೆಲ್ತ್'ನ ಕೆಡುತದೆಯೋ ಏನೋ ಎಂಬ ಭಯ ಕಾಡಹತ್ತಿತು.

''ನಮ್ಮ ಕಾಲದಾಗ ದೇಶ, ನಾಡು, ಹಳ್ಳಿ, ನಗರ ಎಲ್ಲವು ಒಂದs ಆಗಿತ್ತು. ಬಂಧು ಬಾಂಧವರಂಗ ಬದುಕಿತ್ತು. ಈಗ ? ಮೊನ್ನಿ ಮೊನ್ನಿನ ಕಡಲೂರಾಗ ಏನಾತು ? ಐವತ್ತೈದು ವರ್ಷಕಾಲ ಕಟ್ಟಿದ ಸೌಹಾರ್ದದ ಸೌಧ ಕ್ಷಣದಾಗ ಧ್ವಂಸ ಆಯಿತು. ನಾಡೊಳಗ, ದೇಶದಾಗ ಆದರ್ಶಗ್ರಾಮದ ಮರ್ಯಾದಿ ಕ್ಷಣ ಹೊತ್ನಲ್ಲಿ ಮಣ್ಣಾತು. ಮೊನ್ನಿ ನಡೆದ ಬೆಂಕಿ, ಲೂಟಿ, ಗಲಭೆ ನನ್ನಾತ್ಮಕ್ಕ ಇಟ್ಟ ಬೆಂಕಿಯದು. ಇರೋ ಮುಟ್ಟಿಗಿ ಅಷ್ಟ ಮಂದೀ ಮನೀನ ಸುಡೋದು ಯಾವ ಗಂಡಸುತನ ? ಇಲ್ಲಿರೋ ನಾಯಕರಿಗೆ ಕೇಳ್ರಿ ಸುಟ್ಟಸೂರ ಕಳಕೊಂಡ, ಆಸ್ತಿಪಾಸ್ತಿ ಕಳಕೊಂಡ ಜನರ ಹತ್ತರ ಹೋಗ್ಯಾರೇ ಕೇಳ್ರಿ...? ಅವರ ದುಃಖದೊಳಗ ಭಾಗಿಯಾಗಿ ಕಣ್ಣೀರ ಒರೆಸಿದ್ದಾರೇನ ಕೇಳ್ರಿ ?'' ಬಾಬುರಾವ ತಳಮಳಿಸುತ್ತ ಹೇಳುತ್ತಿದ್ದರು. ಅವರ ಕಳವಳ ಸ್ವಾಭಾವಿಕ. ಕಾಕಾರ ಪ್ರಶ್ನೆಗಳು ಒಂದೊಂದು ಸುಡುಗುಂಡಿನಂತೆ ಅಠವಲೆ, ಕಡೇಮನಿಯವರ ಎದೆಯನ್ನು ಸೀಳಿದ್ದವು. ಈ ಸಮಾರಂಭ ನಮ್ಮ ಮಾನ ಮರ್ಯಾದೆಯನ್ನು ಮೂರು ಕಾಸಿಗೂ ಇರಲಾರದ ಹಾಗೆ ಮಾಡಲು ಏರ್ಪಡಿಸಿದಂತೆ ಅನಿಸಿತು ಅವರಿಬ್ಬರಿಗೂ. ಬಾಬುರಾವರ ಮಾತುಗಳು ಹರಿತ ಅಲಗಿನ ಕತ್ತಿಯಿಂದ ಸಪಸಪನೆ ಅವರ ಹೃದಯವನ್ನು ತುಂಡರಿಸಿದಂತೆ ಭಾಸವಾಯಿತು.

ಡಾ॥ ಅವಿನಾಶ ಚೌಧರಿ ಕುತೂಹಲದಿಂದ ಸ್ವಲ್ಪವೂ ವಿಚಲಿತರಾಗದೆ ಕುಳಿತಿದ್ದರು. ಸೋನುಬಾಯಿ, ನಾಭಿರಾಜ ಮುಂದೇನಾಗುತ್ತದೆಯೋ ಎಂಬ ಚಿಂತನೆಯಲ್ಲಿ ಮುಳುಗಿದ್ದಂತೆ ತೋರಿತು.

ಈಚೆಗೆ ಕಡಲೂರಿನಲ್ಲಿ ಕೋಮುಗಲಭೆ ನಡೆದಿತ್ತು. ಅದು ಮಾಧ್ಯಮಗಳಲ್ಲಿ ಬಹು ದೊಡ್ಡ ಬಾತಮಿಯಾಗಿತ್ತು. ಬಾಬುರಾವ ಮತ್ತು ಅವರ ಜತೆಗಾರರು ಊರೊಳಗಿರಲಿಲ್ಲ. ಉಪ್ಪಿನ ಸತ್ಯಾಗ್ರಹ ನೆನಪಿನ ದಂಡಿಯಾತ್ರೆ ಕಾಲ್ನಡಿಗೆ ಜಾಥಾಗೆ ಹೋಗಿದ್ದರು.

ಕಡಲೂರಿನ ಬೆರಳೆಣಿಕೆ ಮನಿಗಳ ಪಿಂಜಾರರು ತಲೆತಲಾಂತರದಿಂದ ಇಲ್ಲಿ ಬದುಕುತ್ತಿದ್ದಾರೆ. ತಮ್ಮ ಹಸನಾದ ಬದುಕನ್ನು ರೂಪಿಸಲು ಊದುಬತ್ತಿ, ಅತ್ತರು, ಬಳೆ ಮಾರುವುದು, ಹತ್ತಿ ಹಿಂಜಿ ಗಾದಿ-ದಿಂಬು ನಿರ್ಮಿಸುವುದನ್ನು ನಂಬಿದವರು. ಊರ ದೇವರ ಜಾತ್ರೆಯಲ್ಲಿ ತಾಳಸೆ ನುಡಿಸುವುದು ಅವರ ಹಕ್ಕಿನದು. ಆಯಗಾರ ಸಮುದಾಯಗಳಲ್ಲೊಂದಾಗಿ ಪರಂಪರೆ ನಿಭಾಯಿಸುತ್ತಿದ್ದರು. ಜತೆಗೆ ಬಾಬುರಾವರ ಗಾಂಧಿ ಸಿದ್ಧಾಂತದಲ್ಲಿ ಊರೇ 'ಏಕಜೂಟ' ಆಗಿತ್ತು.

ಎಷ್ಟೇ ಮಾಡಿದರೂ ಹೊರ ಪ್ರಪಂಚದಲ್ಲಿ ಘಟಿಸುವ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಪರಿಣಾಮಗಳು, ನಿಧಾನ ವಿಷದ ಗಾಳಿಯಾಗಿ ಬೆರೆತು ಅವ್ಯಕ್ತ ರೂಪದಲ್ಲಿ ಮನೆಮಾಡಿದ್ದವು. ಅಂಥದರ ದರುಶನ ಒಂದು ಕೊಲೆ ನಡೆಯುವುದರ ಮೂಲಕ ಆಯಿತು. ಹಳ್ಳಿ ಹೊತ್ತಿ ಉರಿಯಿತು. ಮುನ್ನಾಭಾಯಿ ಎಂಬುವವ ಸಿದ್ಧಾರ್ಥನೆಂಬ ಯುವಕನನ್ನು ಹಲ್ಲೆಮಾಡಿ ಕೊಂದುದು ಕಾಲಾಂತರದಲ್ಲಿ ವೈಯಕ್ತಿಕ ಕಾರಣಗಳಿಂದ ಎಂಬುದು ಸಾಬೀತಾದರೂ, ಆ ಕ್ಷಣದಲ್ಲಿ ಪಿಂಜಾರರ ಮನೆ ಹೊಕ್ಕು ಲೂಟಿ ಮಾಡಲಾಯಿತು. ಮನೆಗಳಿಗೆ ಬೆಂಕಿ ಹಚ್ಚಲಾಯಿತು. ಯಾರು ಯಾರಿಗೆ ಹೊಡೆದುರುಳಿಸುತ್ತಿದ್ದಾರೋ ಎನ್ನುವುದು ಅರಿವಿಗೆ ಬರದಂತೆ ದೊಂಬಿ ಹಲ್ಲೆಗಳು ಆದವು. ರಸ್ತೆ, ಬೀದಿಗಳಲ್ಲೆಲ್ಲ ಸಾಮಾನುಗಳ ರಾಶಿ. ಸುಟ್ಟ, ಅರೆ ಸುಟ್ಟವು. ಇಡೀ ಊರು ಸ್ಮಶಾನ ಮೌನದಲ್ಲಿ ತೇಲಿತು. ಪೊಲೀಸ್ ಪಹರೆ, ಕರ್ಫ್ಯೂ, ಬಂದೋಬಸ್ತ್‌ಗಳು. ವಿನೋಬಾ-ಗಾಂಧಿ ಮೆಟ್ಟಿದ

ಮಣ್ಣಲ್ಲಿ ರಕ್ತದ ಕಲೆಗಳು ಹೆಪ್ಪುಗಟ್ಟಿದ್ದವು. ಆ ಬಳಿಕ ಬಂದ ಬಾಬುರಾವ ಬಹಳ ನೊಂದಿದ್ದರು. ಹಲವು ದಿನ ಉಪವಾಸ ಕೈಗೊಂಡು ಪ್ರತಿಭಟಿಸಿದರು. ಪಿಂಜಾರರ ಮನೆಗಳಿಗೆ ತೆರಳಿ ಸ್ವಂತ ಖರ್ಚಿನಲ್ಲಿ ಪಾತ್ರೆ-ಪಗಡ, ಕಾಳು, ಬಟ್ಟೆ, ಹಾಸಿಗೆಗಳನ್ನು ನೀಡಿಬಂದರು. ಅಲ್ಲಿಯೇ ಇದ್ದು ಅವರ ಕಣ್ಣೀರು ಒರೆಸಿ ಸಾಂತ್ವನ ನೀಡಿದರು.

ಬಾಬುರಾವರ ಕರುಳಲ್ಲಿ ಹುಟ್ಟಿದ ಮಾತುಗಳು ಖಾಲಿಯಾಗಹತ್ತಿದ್ದವು –

''ನಾ ಹೀಂಗ ಮಾತಾಡ್ತೀನಿ ಅಂತ ಯಾರು ತಪ್ಪು ತಿಳಿಬಾರದು. ನನ್ನ ನೋವ, ಸಂಕಟ ತೋಡಿಕೊಂಡೇನಿ. ಅಹಿಂಸಾ ಸಾಮ್ರಾಜ್ಯವೊಂದನ್ನ ಹಿಂಸೆಯಿಂದ ಕೆಡವಿದರ ಕರುಳ ಕೊಯ್ದಂತ ನೋವ ಆಗತೇತಿ... ಈಗ ಗುಪ್ತವಾಗಿ ಎಲ್ಲಾನು ನಡಿಲಿಕ್ಕಿ ಹತ್ಯಾವಂತ...'' ಈ ಮಾತಿನ ಮಧ್ಯೆ ಮಹಿಳೆಯೊಬ್ಬಳು ಎದ್ದು ನಿಂತಳು. ''ಕಾಕಾರ, ನೀವ ನೋವ, ಸಂಕಟ ಪಡ್ತಿದೀರಿ... ಅದು ಯಾರ ಮ್ಯಾಲು ಪರಿಣಾಮ ಬೀರೂದಿಲ್ಲ... ಯಾರೂ ಸಾಚಾ ಆಗಿ ಉಳಿದಿಲ್ಲ... ಬ್ಯಾರೆ ಊರಿಗೆ ಹೋಗಿ ಕುಡಿದು ಬರತಾರ... ಕದ್ದು ಒಮ್ಮೊಮ್ಮೆ ತಗೊಂಡ ಬರತಾರ... ಮಟಕಾ, ಇಸ್ಪೀಟು ನಡದೇತಿ... ನಿಮ್ಮ ಬೆನ್ನಿಗೆಲ್ಲಿ ಕಣ್ಣಿರತಾವ... ನೋಡಿ ನೋಡಿ, ನಾವು ಹೆಂಗಸರು ಮೋರ್ಚಾ ತಗಿತೀವಿ ತಡ್ರಿ'' ಎಂದು ಜೋರು ದನಿಯಲ್ಲಿ ಕಿರುಚಿದಳು.

ಬಾಬುರಾವರಿಗೆ ಆಘಾತವಾಯಿತು – ''ಇಷ್ಟೆಲ್ಲ... ನಡೀತಿದ್ದರ ನನ್ನ ಕೈಕಟ್ಟಿ ಹಕ್ಕಿದಂಗಾತು... ದೇವರು ಎಲ್ಲರಿಗೂ ಸದ್ಬುದ್ಧಿ ನೀಡಲಿ...'' ಎಂದು ವಿರಮಿಸಿದರು.

ಧರ್ಮ ಜಾಗರಣ ಸಂಘಟನೆಯ ನವೀನ ಕಡೇಮನಿ ಇದುವರೆಗೆ ಕಾಕಾನ ಮಾತುಗಳಿಗೆ ಆಹಾರವೆನಿಸಿದವರು, ಅದಕುತ್ತರ ಕೊಡುವ ದಿರಿಸಿನಲ್ಲಿ – ''ಕಾಕಾರ ವಿಚಾರ ಗಳಿಗೆ ನಮ್ಮದ್ಯಾನ ತಕರಾರಿಲ್ಲ... ಇಂಥವು ಒಮ್ಮೊಮ್ಮೆ ಘಟಿಸಿ ಬಿಡತಾವು... ಅದ್ಯಾರ ಕೈಯೊಳಗಿನ ಮಾತಲ್ಲ... ಯಾರೂ ಯಾರದಾದರ ಬಂಧನದೊಳಗಿರುವುದಿಲ್ಲ. ಆದರ ಜಗತ್ತ ಈಗ ಭಾಳ ಲಗೂನ ಬದಲಾಗಾಕ ಹತ್ತೇತಿ... ಅದರ ಫಾಯದಾ ಎಲ್ಲಾರೂ ತಗೊಳ್ಳಾವರಾಽನ... ನಮುಗ ಕಾಕಾರ ಹಂಗ ಬದುಕೋದಂದರ ತ್ರಾಸಽನ ಐತಿ.. ಅವರು ತಪ್ಪ ತಿಳಿಬಾರದು... ಬದಲಾವಣಿಗಿ ನಾವ ತಲಿಬಾಗಲಿಕ್ಕಿ ಬೇಕಾಗತೇತಿ'' ಅಂತ ತನ್ನ ಜಿ.ಪ. ಸಭೆಗಳಲ್ಲಿ ಮೆತ್ತಗೆ ವಿರೋಧ ಪಕ್ಷದವರಿಗೆ ಜವಾಬು ನೀಡಿದಂತೆ ಚುಟುಕಾಗಿ ನುಡಿದು ಕೂತರು.

ಆದರೆ ಶಿವಾಜಿ ಅಠವಲೆ ಒಳಗೊಳಗೆ ದುಮು ಗುಡುತ್ತಿದ್ದ. ಕಡಲೂರು ದೊಂಬಿ ಮಾತು ಅವನಿಗೆ ವಿಹ್ವಲನಾಗಿಸಿತ್ತು. ಬಾಬುರಾವರು ತಮ್ಮನ್ನ ಅಪರೋಕ್ಷ ಹೊಣೆಮಾಡಿದ್ದು, ಬಹಿರಂಗ ಸಭೆಯಲ್ಲಿ ಮಾನ ಹರಾಜು ಹಾಕಿದ್ದು ಅಠವಲೆ ಕಂಪನಗೊಳ್ಳಲು ಕಾರಣ. ಆತ ಅತ್ಯಂತ ಪ್ರಕ್ಷೋಭನೆಯ ಭಾಷೆಯಲ್ಲಿ ಅರಚಿದ. ಇದೇನು ರಾಜಕೀಯ ಪಕ್ಷದ ಸಭೆಯೋ ಏನೋ ? ಅನುಮಾನ ಕಾಡುವಂತೆ ಮಾತಾಡಿ ಕೊನೆಯಲ್ಲಿ ಅಂದ – ''ಕಾಕಾರ ಜಮಾನಾ ಈಗ ಉಳಿದೇ ಇಲ್ಲ... ನಾವು ಸುಮ್ಮನಽ ಕೈಕಟ್ಟಿ ಕೂಡ್ರಾವರಲ್ಲ... ಎಲ್ಲೆಲ್ಲಿ ಯಾವ್ಯಾವ ಅಸ್ತ್ರದಿಂದ ಉತ್ತರ ಕೊಡಬೇಕೋ, ಅವೆಲ್ಲ ಅಸ್ತ್ರ, ಶಸ್ತ್ರಗಳಿಂದಲೇ ಜವಾಬ ನೀಡತೀವಿ...'' ಎಂದು ಕೈಬಾಯಿ ಜೋರು ಮಾಡಿ ಮಾತು ಮುಗಿಸಿದಾಗ ಏದುಸಿರು ಬಿಡುತ್ತಿದ್ದ.

ಡಾ|| ಅವಿನಾಶ ಚೌಧರಿ ಮೂರು ಭಿನ್ನ ನೆಲೆಯ ಆಲೋಚನೆಗಳಿಗೆ ಸಾಕ್ಷಿಯಾಗಿದ್ದರು. ಅವುಗಳಿಗೆ ಸೂಕ್ತ ಸ್ಪಂದನ ನೀಡಿ ಮೌಲಿಕ ನುಡಿಗಳಿಗೆ ಡಾ|| ಚೌಧರಿ ಜಾರಿದರು –

''ಮಾನ್ಯರೇ, ಇಷ್ಟೊತ್ತ ಎಲ್ಲರ ಮಾತ ಕೇಳಿನಿ... ಅದಕ್ಕ ಟಿಪ್ಪಣಿ ಹೇಳಲಿಕ್ಕಿ ನಾ ಹೋಗೂದಿಲ್ಲ... ಮನುಷ್ಯನೊಳಗಿನ ಒಳಿತು-ಕೆಡುಕುಗಳು ಎರಡ ಕೇಂದ್ರಬಿಂದುಗಳು... ಆದರ ನಮ್ಮ ಆಯ್ಕೆ ಸಂದರ್ಭದಲ್ಲಿ ಎಡವತೀವಿ... ನಮುಗ ಈಗ ಜರೂರು ಇದ್ದದ್ದು ಪ್ರೇಮ...! ಅದೂ ಸಹ ಅಂತಿಂಥ ಪ್ರೇಮ ಅಲ್ಲ... ಭೂಮಿತಾಯಿ ವಾತ್ಸಲ್ಯ ಬೇಕು... ಧರ್ಮ, ಕೋಮುಗಳಿಗೆ ಈ ವಾತ್ಸಲ್ಯದ ಸಂಸ್ಕಾರ ಆಗಬೇಕು... ಅದು ಸಕಲ ಜೀವಾತ್ಮರಿಗೆ ಲೇಸನ್ನ ಬಯಸತದ... ಅದರೆದುರು ನಾವು ಕ್ಷುದ್ರ ಹುಳುಗಳು ಆಗಬಾರದು... ಜೀವ ತೆಗೆವ ಕ್ರಿಯೆ ರಕ್ಕಸ ಪ್ರವೃತ್ತಿಯಾದರೆ, ಪ್ರಾಣನೀಡುವುದು ನಿಜ ದೈವತ್ವಕ್ಕೆ ಸಮ... ಕಾಕಾರ ಕಾಳಜಿ ಮಹತ್ವದ್ದು... ಈಗೊಂದ ನಮೂನಿ ಗೊಂದಲ ನಮ್ಮ ಯುವಕರಾಗ ಮೂಡೇತಿ ಖರೆ ! ಈ ಗೊಂದಲಕ್ಕ ಬೆಳಕಾಗಿ ನಿಲ್ಲೋದು ಅಂದರ ಗಾಂಧಿ ಜೀವನ ಮೌಲ್ಯ... ಅದು ನಮಗೆ ಇಷ್ಟವಾದದ್ದು. ಅವರು ಉತ್ತಮ ಜೀವನ ಸೂತ್ರ ಹೇಳ್ಯಾರ.. ಆರೋಗ್ಯ, ಆನಂದ ಕೊಡೋ ಕಲ್ಪನೆ-ನಿಸ್ವಾರ್ಥ ಸರಳತನ ! ಕಾಕಾರು ಮಾಡಿದ್ದು ಅದನ್ನ. ಅದೊಂದು ವಿಸ್ಮಯ ಪವಾಡ ! ಅವರ ಬಗ್ಗಿ ಕೇಳಿದ್ನಿ... ಸಾಕ್ಷಾತ್ ಕಂಡು ಧನ್ಯ ನಾದ್ನಿ... ನಾವೆಲ್ಲ ಅವರ ಹೆಜ್ಜೆಗಳಲ್ಲಿ ನಡೆಯೋಣ... ನಮಸ್ಕಾರ !'' ತಣ್ಣಗೆ ಕುಳಿತರು.

ಡಾ|| ಚೌಧರಿ ಸಹ ಕಾಕಾರನ್ನು ಪ್ರಶಂಸಿಸಿದ್ದು ಅಠವಲೆ, ಕಡೇಮನಿಗೆ ನುಂಗಲಾರದ ಬಿಸಿ ತುಪ್ಪಾಗಿತ್ತು... ಪಕ್ಕದಲ್ಲಿ ಕುಳಿತಿರೋದರಿಂದ ನಗೆಬೀರಿ 'ಭಲೋ ಮಾತಾಡಿದ್ರಿ' ಅಂತ ಇಬ್ಬರು ಗೊಣಗಿದರು.

ಸೋನುಬಾಯಿ ಎಲ್ಲರಿಗೂ ಕಾಣಿಕೆಯಾಗಿ 'ಚರಕ' ಸ್ಮರಣಿಕೆ ನೀಡಿದಳು. ಗತಿಶೀಲ ಬದುಕಿನ ಸಂಕೇತದಂತೆ ಅದು ಅರ್ಥಪೂರ್ಣವೆನಿಸಿತು.

ಅಷ್ಟರಲ್ಲಿ ವೈದ್ಯಕೀಯ ತಂಡದ ಪಿಜಿ ವಿದ್ಯಾರ್ಥಿಗಳು, ಡಾ|| ಮೃತ್ಯುಂಜಯ ವಾಲಿ – ಇತರರು ವಾಹನದಿಂದ ಇಳಿಯಹತ್ತಿದ್ದರು. ತಮ್ಮ ತಮ್ಮ ವಿಭಾಗದ ತಪಾಸಣೆ ಜಾಗ ಹಿಡಿಯುವ ಭರಾಟೆಯಲ್ಲಿದ್ದರು. ಪಿ.ಜಿ. ವಿದ್ಯಾರ್ಥಿಗಳಿಗೆ ಈ ಹಳ್ಳಿಯಲ್ಲಿ ಯಾವುದೆ ದುಶ್ಚಟ ನಿಷಿದ್ಧ ಎಂದು ಸೋನುಬಾಯಿ ಫರಮಾನು ಹೊರಡಿಸಿಯೇ ಕರೆತಂದಿದ್ದಳು.

ಸೋನುಬಾಯಿ ಕಾಕಾರನ್ನು, ಡಾ. ಅವಿನಾಶ ಚೌಧರಿಯವರನ್ನು ಅವರ ವಾಹನ ಗಳಲ್ಲಿಗೆ ಕರೆತಂದು ಬೀಳ್ಕೊಡಲು ಸಜ್ಜಾಗಿದ್ದಳು. ನಾಭಿರಾಜ ಹಿಂದಿಂದೆ ಹೂಗುಚ್ಛ, ಸ್ಮರಣಿಕೆ ಹಿಡಿದು ನಿಂತಿದ್ದ. ಡಾ|| ಅವಿನಾಶ ಬಾಬುರಾವರ ಬಳಿ ಹೋದರು. ಅವರ ಮುದಿಕೈಯಲ್ಲಿ ಕೈಸೇರಿಸಿ – ''ನಿಮ್ಮ ಆಶ್ರಮಕ್ಕ ಬಂದು ಒಂದಷ್ಟು ಸಮಯ ಕಳಿಯೋ ಆಸೆ... ಗಾಂಧಿಯನ್ನು ಸ್ಪರ್ಶಿಸಿದ ನಿಮ್ಮಂಥವರ ಬಳಿ ಇರೋದಂದರ ಭಾಗ್ಯ'' ವಿನಮ್ರಪೂರ್ವಕ ಬೇಡಿ ಕೊಂಡರು. ನಸುನಕ್ಕ ಬಾಬುರಾವ ಸಾವಂತರು – ''ಅವಶ್ಯ ಬರ್‍ರಿ... ಅದು ಎಲ್ಲರಿಗೂ ತೆರೆದ ಬಾಗಿಲು. ನಮ್ಮ ಬಾಗಿಲುಗಳಿಗೆ ಬೀಗಾನ ಇಲ್ಲ... ಸಮಾಜಕ್ಕ ನಿಮ್ಮಂಥ ಬುದ್ಧಿಜೀವಿ ಹೆಂಗಬೇಕೋ... ಹಾಂಗ ಆಶ್ರಮಕ್ಕನು ಬೇಕು... ಬರ್‍ರಿ...'' ಎಂದಾಗ ಡಾ|| ಅವಿನಾಶ ''ಅದು ನಿಮ್ಮ ದೊಡ್ಡಗುಣ... ಬರ್ತೀನಿ... ನಮಸ್ತೆ'' ಎಂದು ಕಾರುಹತ್ತಿ ಹೋದರು. ಬಾಬುರಾವರನ್ನು ಕರೆತಂದ ಸೋನುಬಾಯಿಯವರ ವಾಹನವೇರಿ ಬಾಬುರಾವರು ಆಶ್ರಮದ ಕಡೆಗೆ ಸಾಗಿದರು.

ಅಠವಲೆ-ಕಡೇಮನಿ ಸೋನುಬಾಯಿಯವರು ಬರುವುದನ್ನೇ ಕಾಯುತ್ತ ಯಾರದೋ ಬಳಿ ಹರಟುತ್ತ ವೇದಿಕೆಗೆ ಅಂಟಿಕೊಂಡು ನಿಂತಿದ್ದರು.

* * *

ಅಂದಿನ ಬೆಳಗಿನ ಭಾನು ಯಾಕೋ ಮೋಡದ ಮುಸುಕು ಧರಿಸಿದ್ದ. ಆಕಾಶ-ಭುವಿ ನಿಶ್ಚಲಗೊಂಡಿತ್ತು. ಹಕ್ಕಿಗಳ ಉಲಿವಿಲ್ಲ. ಗಾಳಿಯ ಸುಂಯ್‌ಗುಡುವಿಕೆಯಿಲ್ಲ. ಡಾ|| ಅವಿನಾಶ ಚೌಧರಿ ತಡಮಾಡಿ ಎದ್ದವರು ಪತ್ರಿಕೆ ಎತ್ತಿಕೊಂಡರು... ಎದೆ ಜೋರಾಗಿ ಹೊಡೆದುಕೊಳ್ಳಲಾರಂಭಿಸಿತು. ಕನಸೋ-ನನಸೋ ಒಮ್ಮೆ ಮುಂಗೈಯಿಂದ ಕಣ್ಣುಜ್ಜಿಕೊಂಡರು. ಮತ್ತು ಓದಿದರು. ''ಕಡಲೂರಿನಲ್ಲಿ ದೊಂಬಿ-ಗಲಭೆ, ಬೆಂಕಿ ಲೂಟಿ. ಹಿರಿಯ ಗಾಂಧಿವಾದಿ ಬಾಬುರಾವ ಸಾವಂತರ ಹತ್ಯೆಗೆ ಪ್ರತಿಭಟನೆ ! ಬಾಬುರಾವ ಸಾವಂತರು ಪ್ರಾರ್ಥನೆಗೆ ಕುಳಿತಾಗ ಅಜ್ಞಾತ ಮುಸುಕು ಧಾರಿಗಳಿಂದ ಗುಂಡಿನ ಸುರಿಮಳೆ. ಅವರು 'ಹೇ ಮಹಾತ್ಮ!' ಎಂದು ನೆಲಕ್ಕುರುಳಿದರು. ಅವರ ಪ್ರಾಣಪಕ್ಷಿ ಹಾರಿಹೋಗಿತ್ತು!'' ಮುಂದೆ ಓದಲಾಗದೆ ಡಾ|| ಅವಿನಾಶ ದಿಙ್ಮೂಢರಾದರು.

ಡಾ|| ಅವಿನಾಶ ಆಘಾತದಿಂದ ಖುರ್ಚಿಯಲ್ಲಿ ಕುಸಿದರು. ಅವರ ಕಣ್ಮುಂದೆ ಗಾಂಧೀಜಿಯವರ ಆಶ್ರಮದ ಚಿತ್ರವೊಂದು ತೇಲಿ ಹೋದಂತಾಯಿತು.

ಡಿ. ಎಸ್. ಚೌಗಲೆ
[illegible]



# ಶುಕ್ರದ ವಿದಾಯ

ಡಾ|| ಬಿ. ಎಸ್. ಶೈಲಜಾ

ಸಂಜೆಯ ಆಕಾಶದ ಬೆಳ್ಳಿ ಯಾರನ್ನಾದರೂ ಆಕರ್ಷಿಸುವುದು ಸಹಜವೇ. ಅದೆಲ್ಲಿದೆ ಎಂದು ನೋಡಲು ನಕ್ಷೆ ದಿಕ್ಕುಗಳ ಸೂಚನೆ ಏನೂ ಬೇಕಿಲ್ಲ. ಹೊಸ ವರ್ಷದ ಸಂಜೆಯಲ್ಲಿ ವೈಭವೋಪೇತ ದೃಶ್ಯ - ಬಾಲಚಂದ್ರ ಮತ್ತು ಶುಕ್ರದ ಜೋಡಿ. ದೂರದರ್ಶಕ ಅಥವಾ ದುರ್ಬೀನಿನಿಂದ ನೋಡಿದಿರಾದರೆ ಶುಕ್ರದ ಆಕಾರವೂ ಬಾಲಚಂದ್ರನಂತೆಯೇ ಇದೆ ಎಂದು ಸ್ಪಷ್ಟವಾಗಿ ತಿಳಿಯುವುದು. ಆದರೆ ಈ ನೋಟ ಕೆಲವೇ ದಿನ ಮಾತ್ರ. ದಿನದಿನಕ್ಕೆ ಪಶ್ಚಿಮದಂಚಿಗೆ ಜಾರುವ ಶುಕ್ರ ೧೫ನೆಯ ತಾರೀಖಿನ ಹೊತ್ತಿಗೇ ವಿದಾಯ ಹೇಳಿ ಕಾಣೆಯಾಗುತ್ತದೆ. ಈ ವರ್ಷ ಪುನಃ ಯಾವ ಸಂಜೆಯೂ ಅದು ನೋಡಲು ಸಿಗುವುದಿಲ್ಲ. ಈ ಮುಂದೆ ಮುಂಜಾವಿನಲ್ಲಿ ಕಾಣಸಿಗುವುದರ ಸೂಚನೆ ಇದು.

ಬುಧಗ್ರಹ ಮುಂಜಾವಿನಿಂದ ಸಂಜೆಗೆ ಬರಲು ತಯಾರಿ ನಡೆಸುತ್ತಿದೆ. ಒಟ್ಟಿನಲ್ಲಿ ಇವೆರಡೂ ಈ ತಿಂಗಳು ನೋಡಲು ಸಿಗುವುದಿಲ್ಲ.

ಸಂಜೆಯ ಆಕಾಶದ ಇನ್ನೊಂದು ಗ್ರಹ ಮಂಗಳ. ಕ್ರಮೇಣ ಅದರ ಪ್ರಕಾಶ ಕಡಿಮೆಯಾಗುತ್ತಿದೆ ಯಾದರೂ ಗುರುತಿಸುವುದು ಕಷ್ಟವೇನಿಲ್ಲ. ಸುಮಾರು ನೆತ್ತಿಯ ನೇರಕ್ಕೇ ಕಾಣುವ ಇದು ಮೇಷ ದಿಂದ ವೃಷಭದತ್ತ ಚಲಿಸುತ್ತಿದೆ.

ಸಂಜೆಯ ಆಕಾಶಕ್ಕೆ ಸೇರ್ಪಡೆ ಯಾಗಲಿರುವ ಇನ್ನೊಂದು ಗ್ರಹ ಶನಿ. ತಿಂಗಳ ಮೊದಲಲ್ಲಿ ಸೂರ್ಯಾಸ್ತವಾದ ಒಂದು ಗಂಟೆಯ ನಂತರ ಉದಯಿಸುವ ಇದು ತಿಂಗಳ ಕೊನೆಗೆ ಸಂಜೆಗೇ ಉದಯಿಸುತ್ತದೆ. ಇದರ ವಿಯುತಿ, ಅಂದರೆ ಸೂರ್ಯಾಸ್ತವಾಗುವಾಗಲೇ ಉದಯಿಸುವ ಘಟನೆ, ೨೬ರಂದು. ಅಂದರೆ ಅದರ ಪ್ರಕಾಶ ಅಂದು ಗರಿಷ್ಠ; ಅಷ್ಟೇ ಅಲ್ಲ , ರಾತ್ರಿ ಇಡೀ ನೋಡಲು ಸಿಗುತ್ತದೆ. ಇದರ ಪಕ್ಕದಲ್ಲಿಯೇ ಕಟಕರಾಶಿಯ ಪ್ರೆಸಿಪಿ ನಕ್ಷತ್ರಗುಚ್ಛವಿದೆ.

ವಿಶಾಖಾ ಎಂಬುದೊಂದು ಕ್ಷೀಣ ನಕ್ಷತ್ರ. ಇದನ್ನು ಗುರುತಿಸಲು ಈಗ ಒಳ್ಳೆಯ ಅವಕಾಶವಿದೆ. ಬೆಳಗಿನ ಜಾವ ಗುರುಗ್ರಹವನ್ನು ಹುಡುಕಿ. ನಕ್ಷೆಯ ಸಹಾಯವೇನೂ ಬೇಕಾಗುವುದಿಲ್ಲ. ಗುರುಗ್ರಹದ ಪಕ್ಕದಲ್ಲಿ ಅಂಟಿಕೊಂಡಂತೆ ಕಾಣುವ ಚುಕ್ಕೆಯೇ ವಿಶಾಖಾ. ತುಲಾರಾಶಿಯ ಕ್ಷೀಣ ನಕ್ಷತ್ರ. ಮುಂದೆ ವೈಶಾಖ ಮಾಸದಲ್ಲಿ ಹುಣ್ಣಿಮೆಯ ಚಂದ್ರ ಈ ನಕ್ಷತ್ರದ ಪಕ್ಕವೇ ಕಾಣುತ್ತದೆ.

ಮಾರ್ಗದರ್ಶಿ ಚಂದ್ರ ಈ ತಿಂಗಳು ಎರಡು ಆಚ್ಛಾದನೆಗಳನ್ನು ಸೃಷ್ಟಿಸುತ್ತಾನೆ; ಎರಡೂ ನಮಗೆ ಲಭ್ಯವಿಲ್ಲ. ಆದರೂ ನಕ್ಷತ್ರ ಮತ್ತು ಚಂದ್ರ ಅಂಟಿಕೊಂಡಂತೆ ಕಾಣುವುವು. ೨೨ರಂದು ಚಿತ್ರಾ ನಕ್ಷತ್ರ; ೨೫ರಂದು ಜ್ಯೇಷ್ಠಾ – ಈ ಎರಡೂ ಅವಕಾಶಗಳು ಛಾಯಾಗ್ರಹಣಕ್ಕೆ ಸೂಕ್ತವಾಗಿವೆ.

೩ರಂದು ಕ್ವಾಡ್ರಾಂಟಿಡ್ಸ್ ಎಂಬ ಹೆಸರಿನ ಉಲ್ಕಾವೃಷ್ಟಿ ಇದೆ. ಸಪ್ತರ್ಷಿ ಮಂಡಲದ ದಿಕ್ಕಿನಿಂದ ಹೊರಟಂತೆ ಉಲ್ಕೆಗಳು ಕಾಣುವುವು. ವಾಸ್ತವವಾಗಿ ಇದರ ರೇಡಿಯೆಂಟ್ ಬಿಂದು ಸಪ್ತರ್ಷಿಮಂಡಲ ಮತ್ತು ಸಹದೇವ (ಬೂಟಿಸ್) ನಡುವೆ ಇದೆ. ಗಂಟೆಗೆ ೫೦-೬೦ ಉಲ್ಕೆಗಳು ಕಾಣುವುವು.

ಭೂಮಿ ತನ್ನ ಕಕ್ಷೆಯಲ್ಲಿ ನಿರ್ದಿಷ್ಟವಾದೊಂದು ಬಿಂದುವನ್ನು ೪ರಂದು ದಾಟುತ್ತದೆ. ಪುರಭೂ ಎಂಬ ಈ ಬಿಂದುವಿನಲ್ಲಿದ್ದಾಗ ಭೂಮಿ-ಸೂರ್ಯರ ದೂರ ಕನಿಷ್ಠ.

ಶುಭ್ರ ಆಕಾಶ ಒದಗಿಸುವ ಆಕಾಶಗಂಗೆಯ ನೋಟಕ್ಕೆ ಪೂರ್ವ ದಿಕ್ಕಿನತ್ತ ದೃಷ್ಟಿ ಹರಿಸಿ, ಉದಯಿಸುತ್ತಿರುವ ಪ್ರಖರ ನಕ್ಷತ್ರ ಸಿರಿಯಸ್ (ಲುಬ್ಧಕ); ಸ್ವಲ್ಪ ಉತ್ತರಕ್ಕೆ ಒರೈಯನ್ (ಮಹಾವ್ಯಾಧ). ಅದರ ಉತ್ತರಕ್ಕೆ ಥಳಗುಟ್ಟುವ ನಕ್ಷತ್ರ ಕಪೆಲ್ಲಾ ಬ್ರಹ್ಮ ಹೃದಯ. ಅದರ ಆಸುಪಾಸಿನ ಪಂಚಕೋಣಾಕೃತಿಯೇ ಆರಿಗಾ (ವಿಜಯಸಾರಥಿ), ಮಹಾವ್ಯಾಧನಿಂದ ಹೊರಟು ವಿಜಯಸಾರಥಿಯ ಮೂಲಕ ಹಾದುಹೋಗುವ ಗಂಗೆ ಮುಂದೆ ಕಾಸಿಯೋಪಿಯಾ (ಕುಂತಿ) ತಲುಪುತ್ತದೆ. ಆಕಾಶಗಂಗೆಯ ಈ ಭಾಗವನ್ನು ಈಗ ಸಂಜೆ ನೋಡಬಹುದು. ಉಳಿದ ಕ್ಷೀಣ ಪುಂಜಗಳಲ್ಲಿ ಕೆಲವಕ್ಕೆ ಮಂಗಳ ಮಾರ್ಗದರ್ಶಿ ಆಗುವುದು. ಮಂಗಳನ ಸನಿಹದಲ್ಲೇ ಸ್ವಲ್ಪ ಪೂರ್ವಕ್ಕೆ ಅದರ ಪ್ರತಿಸ್ಪರ್ಧಿಯಂತೆ ಕಾಣುವ ಕೆಂಪು ನಕ್ಷತ್ರ ರೋಹಿಣಿ. ಸನಿಹದ ನಕ್ಷತ್ರ ಗುಚ್ಛ ಕೃತ್ತಿಕಾ. ಮಂಗಳದಿಂದ ಪಶ್ಚಿಮಕ್ಕೆ ದೃಷ್ಟಿ ಹಾಯಿಸಿದರೆ ಕಾಣುವ ಚೌಕ ಪೆಗಸಸ್ (ನಕುಲ). ವಿಜಯಸಾರಥಿಗೂ ಕುಂತಿಗೂ ನಡುವೆ ಇರುವ ಪುಂಜವೇ ಪರ್ಸಿಯುಸ್ (ಪಾರ್ಥ).

## ಖಗೋಳ ದಿನಚರಿ

೧ ಶುಕ್ರ-ಚಂದ್ರ ಜೋಡಿ*
೨ ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೪ ಭೂಮಿ-ಸೂರ್ಯರ ಅಂತರ ಕನಿಷ್ಠ
೬ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೮ ಚಂದ್ರ-ಮಂಗಳ ಜೋಡಿ*
೧೪ ಹುಣ್ಣಿಮೆ ೨೦.೩೧ಕ್ಕೆ
೧೫ ಚಂದ್ರ-ಶನಿ ಜೋಡಿ*
೧೬ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ
೨೨ ಚಂದ್ರ-ಚಿತ್ರಾ ಜೋಡಿ ಚಾಂದ್ರಮಾಸದ ಕೊನೆಯ ಪಾದ
೨೪ ಗುರು-ಚಂದ್ರ ಜೋಡಿ*
೨೫ ಚಂದ್ರ-ಜ್ಯೇಷ್ಠಾ ಜೋಡಿ*
೨೬ ಶನಿ ಗ್ರಹದ ವಿಯುತಿ
೩೦ ಅಮಾವಾಸ್ಯೆ ೦೦.೪೬ಕ್ಕೆ; ಚಂದ್ರ-ಭೂಮಿ ನಡುವೆ ಕನಿಷ್ಠ ದೂರ

*(ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

ಡಾ॥ ಸಿ. ಆರ್. ಚಂದ್ರಶೇಖರ್



"ಕಾಯಿಲೆ ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ" ಎಂಬುದು ಜನಪ್ರಿಯ ಗಾದೆಮಾತು. ಅಂದರೆ ಪ್ರತಿಯೊಬ್ಬ ಮನುಷ್ಯ ತನ್ನ ಜೀವಿತಾವಧಿಯಲ್ಲಿ ಹಲವಾರು ಬಾರಿ ಕಾಯಿಲೆಗೆ ಒಳಗಾಗುತ್ತಾನೆ/ಳೆ. ಸಣ್ಣ ಪುಟ್ಟ ಕಾಯಿಲೆಗಳಾದ ನೆಗಡಿ, ಕೆಮ್ಮು, ಜ್ವರ, ವಾಂತಿ-ಭೇದಿ, ತಲೆನೋವುಗಳಿಂದ ಹಿಡಿದು, ಪ್ರಾಣಾಂತಿಕ ಕಾಯಿಲೆಗಳಾದ ಸಿಹಿಮೂತ್ರ ರೋಗ, ಅಧಿಕ ರಕ್ತದೊತ್ತಡ, ಹೃದ್ರೋಗ, ಕ್ಯಾನ್ಸರ್‌ಗಳವರೆಗೆ ಪಟ್ಟಿ ಬೆಳೆಯುತ್ತದೆ. ಶರೀರದ ಯಾವುದೇ ಹೊರ ಅಂಗ ಅಥವಾ ಒಳ ಅಂಗ ರೋಗಗ್ರಸ್ತವಾಗಬಹುದು. ಈಗ, ಯಾವುದೇ ದಿನ ಜನಸಂಖ್ಯೆಯ ಶೇಕಡಾ ೬೫ರಷ್ಟು ಜನ ಅನಾರೋಗ್ಯ ಪೀಡಿತರಾಗಿರುತ್ತಾರೆ. ಅನಾರೋಗ್ಯದಿಂದಾಗಿ ಅವರ ಶಾರೀರಿಕ ಮತ್ತು ಮಾನಸಿಕ ಸಾಮರ್ಥ್ಯಗಳು ಕುಂಠಿತಗೊಳ್ಳುತ್ತವೆ. ಜೊತೆಗೆ ದೈಹಿಕ ಮತ್ತು ಮಾನಸಿಕ ನೋವು ಹಿಂಸೆಗಳನ್ನು ಅನುಭವಿಸುತ್ತಾರೆ. ಮನೆಯಲ್ಲಿ ಒಬ್ಬರು ರೋಗ ಪೀಡಿತರಾದರೆ ಉಳಿದವರೆಲ್ಲರ ದೈನಂದಿನ ಚಟುವಟಿಕೆಗಳು ಅಸ್ತವ್ಯಸ್ತಗೊಳ್ಳುತ್ತವೆ. ಆಸ್ಪತ್ರೆಗೆ ಭೇಟಿ, ವೈದ್ಯರ ದರ್ಶನ, ಔಷಧಿ ಉಪಚಾರದ ಖರ್ಚು, ಜೊತೆಗೆ ವ್ಯಕ್ತಿಯ ಉತ್ಪಾದಕ ಸಾಮರ್ಥ್ಯಕ್ಕೆ ಹೊಡೆತಗಳು ಕುಟುಂಬಕ್ಕೆ ಮತ್ತು ಸಮಾಜಕ್ಕೆ ದೊಡ್ಡ ಹೊರೆಯಾಗುತ್ತದೆ. ಶೇಕಡಾ ೪೦ರಷ್ಟು ಜನರು ಅನಾರೋಗ್ಯ ನಿರ್ವಹಣೆಗೆ ಸಾಲ ಮಾಡುತ್ತಾರೆ. ಉಳಿದವರು ತಮ್ಮ ಉಳಿತಾಯ ಹಣ-ಸಂಪತ್ತನ್ನು ಕಳೆದುಕೊಳ್ಳುತ್ತಾರೆ.

ಐವತ್ತು ವರ್ಷಗಳ ಹಿಂದೆ, ನಮ್ಮ ಜನರ ಸರಾಸರಿ

# ಕರ್ನಾಟಕದಲ್ಲಿ ಆರೋಗ್ಯ ಸೇವೆಗಳು: ಸ್ಥಿತಿ-ಗತಿ

ಆಯುರ್ಮಾನ ಕೇವಲ ೨೭ ವರ್ಷಗಳು. ಈಗ ಅದು ೬೫ ವರ್ಷಕ್ಕೆ ಏರಿದೆ. ಸಾವಿರಾರು ಜನರನ್ನು ಸಾವಿನ ದವಡೆಗೆ ನೂಕುತ್ತಿದ್ದ ಕಾಲೆರಾ, ಪ್ಲೇಗ್, ಸಿತಾಳಸಿಡುಬು, ಮಲೇರಿಯಾ, ನ್ಯುಮೋನಿಯಾ, ಕ್ಷಯರೋಗಗಳಂತಹ ಸಾಂಕ್ರಾಮಿಕ ರೋಗಗಳು ಈಗ ಹತೋಟಿಗೆ ಬಂದಿವೆ. ಗರ್ಭಧಾರಣೆ, ಹೆರಿಗೆ ಮತ್ತು ಬಾಣಂತನದ ಅವಧಿಯ ಸಾವುಗಳು ಗಣನೀಯ ಪ್ರಮಾಣದಲ್ಲಿ ತಗ್ಗಿವೆ. ನ್ಯೂನ ಪೋಷಣೆ, ಮಲಿನ ವಾತಾವರಣ, ಸೋಂಕುಗಳಿಂದ ಸಾಯುವ ಮಕ್ಕಳ ಸಂಖ್ಯೆಯೂ ಕ್ಷೀಣಿಸುತ್ತಿದೆ. ಶಿಶು ಸಾವಿನ ಪ್ರಮಾಣ ಈಗ ೫೦ಕ್ಕೆ ಇಳಿದಿದೆ. ಜನನ ಪ್ರಮಾಣ ೨೧ ಇದ್ದು ಒಟ್ಟು ಸಾವಿನ ಪ್ರಮಾಣ ೬.೫ಕ್ಕೆ ಇಳಿದಿದೆ. ರಾಜ್ಯದ ಜನಸಂಖ್ಯೆ ಐದೂವರೆ ಕೋಟಿಗೂ ಮಿಕ್ಕಿದೆ. ಇಳಿ ವಯಸ್ಸಿನವರ ಸಂಖ್ಯೆ ಅರ್ಧಕೋಟಿಗೂ ಹೆಚ್ಚಿದೆ.

ಆದರೆ ಜನರ ಆರೋಗ್ಯ ಸ್ಥಿತಿ ದಿನೇ ದಿನೇ ಹದಗೆಡುತ್ತಿದೆ. ಶೇಕಡಾ ೨೫ರಷ್ಟು ಜನರಿರುವ ನಗರ ಪ್ರದೇಶಗಳಲ್ಲಾಗಲೀ, ೬೫ರಷ್ಟು ಜನರಿರುವ ಗ್ರಾಮೀಣ ಪ್ರದೇಶಗಳಲ್ಲಾಗಲೀ, ಅನಾರೋಗ್ಯ ತಾಂಡವವಾಡುತ್ತಿದೆ. ಇದಕ್ಕೆ ಕಾರಣಗಳು ಏಳು. Disease (ರೋಗ) ಈ ಪದದಲ್ಲಿರುವ ಪ್ರತಿಯೊಂದು ಅಕ್ಷರ ಒಂದು ಕಾರಣವನ್ನು ವಿವರಿಸುತ್ತದೆ.

**D : Defects and deficiency :** ನ್ಯೂನತೆಗಳು ಮತ್ತು ಕೊರತೆಗಳು, ಅನುವಂಶೀಯ ಕಾರಣಗಳು. ಗರ್ಭಧಾರಣೆ ಮತ್ತು ಹೆರಿಗೆ ಅವಧಿಯಲ್ಲಿ ಅಥವಾ ಆನಂತರ ದೇಹದ ಅಂಗಾಂಗಗಳಿಗೆ ಹಾನಿಯಾಗುವುದು. ಶೇಕಡ ೪೦ರಷ್ಟು ಜನ ಬಡತನದ ರೇಖೆಯ ಕೆಳಗಿರುವುದರಿಂದ ಪೌಷ್ಟಿಕ ಆಹಾರದ ಕೊರತೆ, ಸೂಕ್ತ ಪರಿಸರದ ಕೊರತೆಗಳಿಂದಲೂ ಕಾಯಿಲೆ ಬರುತ್ತವೆ. ಉದಾಹರಣೆಗೆ, ಬುದ್ಧಿಮಾಂದ್ಯತೆ, ಏಕಾಗ್ರತೆಯ ಕೊರತೆ – ಅತಿ ತೀಟೆಯ ಸ್ಥಿತಿ (attention deficit and hyperactive disorder), ಫಿಟ್ಸ್, ಇರುಳು ಕುರುಡುತನ, ಹೈಪೋಥೈರಾಯಿಡಿಸಂ, ಅನೀಮಿಯಾ (ಇಂದಿಗೂ ಶೇಕಡ ೫೦ರಷ್ಟು ಮಕ್ಕಳು ಮತ್ತು ಸ್ತ್ರೀಯರು ರಕ್ತಕೊರೆ- ಅನೀಮಿಯಾದಿಂದ ಬಳಲುತ್ತಾರೆ), ರಿಕೆಟ್ಸ್ ಇತ್ಯಾದಿ.

**I : Infections :** ಸೋಂಕು; ಏಕಾಣುಜೀವಿಗಳು (ಪ್ರೋಟೋಜೋವಾ) ಬೆಕ್ಟೀರಿಯಾ, ವೈರಸ್, ಫಂಗಸ್‌ನಂತಹ ರೋಗಾಣುಗಳು ಕೊಳಕು ಪರಿಸರದಲ್ಲಿ ಸಮೃದ್ಧಿಯಾಗಿ ವೃದ್ಧಿಯಾಗುತ್ತವೆ. ಇಂದಿಗೂ ನಮ್ಮ ಜನ ವೈಯಕ್ತಿಕ ಸ್ವಚ್ಛತೆ. ಮನೆ ಸ್ವಚ್ಛತೆ, ಊರು-ಕೇರಿ ಸ್ವಚ್ಛತೆ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರಿಸುತ್ತಾರೆ. ಎಲ್ಲೆಂದರೆ ಅಲ್ಲಿ ಕಸ-ಕೊಳಕನ್ನು ಎಸೆಯುತ್ತಾರೆ. ಮಲಮೂತ್ರ ವಿಸರ್ಜನೆ ಮಾಡುತ್ತಾರೆ, ಉಗಿಯುತ್ತಾರೆ. ವಾಸಮಾಡುವ ಮನೆಯೊಳಗೆ ಒಳ್ಳೆಯ ಗಾಳಿ ಬೆಳಕಿಲ್ಲವಾಗಿ ರೋಗಾಣುಗಳು ನಮ್ಮ ಜೊತೆಯಲ್ಲೇ ಇರುತ್ತವೆ. ರೋಗಾಣುಗಳು ಕುಡಿಯುವ ನೀರು, ಸೇವಿಸುವ ಆಹಾರದ ಜೊತೆಗೆ ಸೇರಿಬಿಡುತ್ತವೆ. ಹೀಗಾಗಿ, ರಾಜ್ಯದ ಪ್ರತಿಯೊಂದು ಊರು, ಹಳ್ಳಿ, ನಗರಗಳಲ್ಲಿ ವಾಂತಿ ಭೇದಿ, ಆಮಶಂಕೆ, ಶ್ವಾಸನಾಳ-ಶ್ವಾಸಕೋಶಗಳ ಸೋಂಕು, ಜಠರ-ಕರುಳಹುಣ್ಣು, ಕ್ಷಯ, ಟೈಫಾಯಿಡ್, ಪೋಲಿಯೋ, ಗಂಟಲಬೇನೆ, ಟೆಟನಸ್, ಚರ್ಮದ ಸೋಂಕು ರೋಗಗಳು, ಜಾಂಡೀಸ್, ಮಿದುಳಜ್ವರ, ಮಲೇರಿಯಾ, ಡೆಂಗೂ ಜ್ವರದಿಂದ ದೊಡ್ಡವರು ಚಿಕ್ಕವರು ನರಳುತ್ತಾರೆ.

**S : Stress :** ಟೆನ್ಶನ್, ಮಾನಸಿಕ ಒತ್ತಡ ಬದುಕಿನ ಒಂದು ಅಂಗವಾಗೇ ಬಿಟ್ಟಿದೆ. ಅತೀ ಸ್ಪರ್ಧೆ, ಮಹತ್ವಾಕಾಂಕ್ಷೆ, ವೇಗದ ಜೀವನಶೈಲಿ ಈ ಟೆನ್ಶನ್‌ಗೆ ಕಾರಣ. ಇತಿಮಿತಿ ಇಲ್ಲದ ಬೇಕು ಬೇಡಗಳು, ಅತೃಪ್ತಿಯಿಂದ ನಾವೆಲ್ಲರೂ ಅತಿಯಾದ ಒತ್ತಡಕ್ಕೆ ಒಳಗಾಗುತ್ತಿದ್ದೇವೆ. ಪರಿಣಾಮ : ಬೆಂಗಳೂರಿನಂತಹ ನಗರ ಪ್ರದೇಶಗಳಲ್ಲಿ ಶೇಕಡ ೨೦ರಷ್ಟು ಜನ ಬೊಜ್ಜು, ಶೇಕಡ ೧೩ರಷ್ಟು ಜನ ಸಿಹಿಮೂತ್ರರೋಗ, ಶೇಕಡ ೨ರಷ್ಟು ಜನ ಅಧಿಕ ರಕ್ತದೊತ್ತಡ ಮತ್ತು ಹೃದ್ರೋಗಗಳಿಂದಲೂ, ಮತ್ತಷ್ಟು ಜನ, ಇತರ ಒತ್ತಡ ಸಂಬಂಧೀ ರೋಗಗಳಾದ ಅಸ್ತಮ, ಕೀಲುಬೇನೆ, ಅಧಿಕ ಆಮ್ಲಸ್ಥಿತಿ (ಅಸಿಡಿಟಿ) ಮೈಗ್ರೇನ್ ತಲೆನೋವು, ಎಕ್ಸೀಮಾ – ಸೋರಿಯಾಸಿಸ್‌ನಂತಹ ಚರ್ಮದ ಕಾಯಿಲೆಗಳು, ಖಿನ್ನತೆ, ಆತಂಕ – ಸೋಮಾಟೋಫಾರಂ ಡಿಸಾರ್ಡರ್ ಅಂತಹ ಅಲ್ಪಮಟ್ಟದ ಮಾನಸಿಕ ಅಸ್ವಸ್ಥತೆಗಳಿಂದ ಬಳಲುತ್ತಿದ್ದಾರೆ. ಖಿನ್ನತೆ ಮತ್ತು ಸೋಮಾಟೋಫಾರಂ ಡಿಸಾರ್ಡರ್ ಶೇಕಡ ೧೦ರಷ್ಟು ಜನರನ್ನು ಆವರಿಸಿದೆ ಎಂದು ಸರ್ವೇಕ್ಷಣೆಗಳು ತಿಳಿಸುತ್ತವೆ.

**E : Environment :** ಪರಿಸರ ಮಾಲಿನ್ಯ : ಕೈಗಾರಿಕೆಗಳ ಕಲ್ಮಶಗಳು, ಅಧಿಕ ಜನ ಸಾಂದ್ರತೆ, ಉಪಯೋಗದಲ್ಲಿರುವ ವಿವಿಧ ರಾಸಾಯನಿಕ ವಸ್ತುಗಳು, ಅತ್ಯಧಿಕ ವಾಹನಗಳು, ಎಲ್ಲೆಂದರೆ ಅಲ್ಲಿ ಕೊಳೆಯುತ್ತಿರುವ ತ್ಯಾಜ್ಯವಸ್ತುಗಳು, ಗಿಡ-ಮರ-ಅರಣ್ಯನಾಶ, ಗಣಿಗಾರಿಕೆ – ಇವೆಲ್ಲ ಭೂ-ಜಲ-ವಾಯು-ಶಬ್ದಮಾಲಿನ್ಯವನ್ನು ಉಂಟುಮಾಡುತ್ತಿವೆ. ಈ ಮಾಲಿನ್ಯದಿಂದ ವಾತಾವರಣ ಕಲುಷಿತವಾಗಿ, ನಮಗೆ ಶುದ್ಧಗಾಳಿ, ನೀರು ಪ್ರಶಾಂತ ವಾತಾವರಣ ಸಿಗುತ್ತಿಲ್ಲ. ಇದು ಕಾಯಿಲೆಗಳು ಹೆಚ್ಚಾಗಲು ಹೇಳಿ ಮಾಡಿಸಿದ ವಾತಾವರಣ.

**A : Alcohol and other toxic materials :** ವಿಷ ವಸ್ತುಗಳ ಸೇವನೆ. 'ಶುದ್ಧ' ಸಾರಾಯಿಯನ್ನು ಬೀದಿ ಬೀದಿಗಳಲ್ಲಿ ಮಾರಾಟಮಾಡಿ ಸರ್ಕಾರದ ಖಜಾನೆಯನ್ನು ತುಂಬುತ್ತಿರುವ ಮಂತ್ರಿಗಳಿದ್ದಾರೆ. ಹೆಜ್ಜೆಹೆಜ್ಜೆಗೆ ಸಾರಾಯಿ ಅಂಗಡಿ, ಬೀರ್-ವೈನ್ ಶಾಪ್, ಬಾರ್‌ಗಳನ್ನು ತೆರೆದು ಜನ ಹೆಚ್ಚು ಕುಡಿಯಲು ಸರ್ಕಾರವೇ ಪ್ರೋತ್ಸಾಹಿಸುತ್ತಿದೆ ! ಶೇಕಡ ೫೦ರಷ್ಟು ಪುರುಷರು ಈಗ ಕುಡಿಯಲು ಕಲಿತಿದ್ದಾರೆ. ಅವರಲ್ಲಿ ೫ರಷ್ಟು ಜನ ಮದ್ಯ ಚಟಿಗಳಾಗಿದ್ದಾರೆ. ಜೊತೆಗೆ ಸಿಗರೇಟು, ಬೀಡಿ, ಪಾನ್ ಮಸಾಲ, ಗುಟ್ಕಾ, ಖೈನಿ-ಗಾಂಜಾ-ಅಫೀಮು ಇತ್ಯಾದಿ ವಿಷವಸ್ತುಗಳ ಸಾಲುಸಾಲೇ ಮಾರುಕಟ್ಟೆಯಲ್ಲಿದೆ.

**S : Unsafe sex :** ಹದಿಹರೆಯದವರು, ಪ್ರೌಢರು, ಹೆಂಡತಿಯಿಂದ ದೂರ ವಿರುವವರು, ಒಂಟಿಯಾಗಿ ವಾಸಿಸುತ್ತಿರುವವರು, ಜೊತೆಗೆ ಮೋಜು ಮಾಡುವವರ ಸುರಕ್ಷಿತವಲ್ಲದ ಲೈಂಗಿಕ ಚಟುವಟಿಕೆ ಹೆಚ್ಚುತ್ತಿದೆ. ವೇಶ್ಯಾವಾಟಿಕೆಗಳನ್ನು ನಡೆಸುವವರ ಸಂಖ್ಯೆಯೂ ಹೆಚ್ಚುತ್ತಿದೆ. ಕಾಮ ಪ್ರಚೋದಕ ಮಾಹಿತಿ ಚಿತ್ರಗಳು ಮಾಧ್ಯಮಗಳ ಮೂಲಕ ಎಲ್ಲೆಡೆ ಲಭ್ಯವಿವೆ. ಪರಿಣಾಮ ಇಂದು ಕರ್ನಾಟಕದಲ್ಲಿ ಐದು ಲಕ್ಷ ಏಡ್ಸ್‌ರೋಗಿಗಳಿದ್ದಾರೆ. ಹೆಚ್‌ಐವಿ ಪಾಸಿಟಿವ್ ಆಗಿರುವ ವ್ಯಕ್ತಿಗಳ ಸಂಖ್ಯೆ ದಿನೇ ದಿನೇ ಏರುತ್ತಿದೆ.

**E : Bad eating and sleeping habits, no exercise :** ಇತ್ತೀಚಿನ ದಿನಗಳಲ್ಲಿ ಜನ ಹೊರಗಡೆ ಹೋಗಿ ತಿನ್ನುವುದು ಹೆಚ್ಚಾಗಿದೆ. ಎಲ್ಲೆಂದರೆ ಅಲ್ಲಿ ಯಾವಾಗೆಂದರೆ ಅವಾಗ, ಬಾಯಿಗೆ ರುಚಿಯಾದ, ಮಸಾಲೆ ಅಥವಾ ಎಣ್ಣೆ-ಬೆಣ್ಣೆಯಲ್ಲಿ ಕರಿದ ತಿಂಡಿಗಳು, ಕೆನೆ ಮತ್ತು ಸಿಹಿಪದಾರ್ಥಗಳನ್ನು ಯಥೇಚ್ಛವಾಗಿ ಸೇವಿಸುತ್ತಾರೆ. ಕೂತು, ಮಲಗಿ, ವಿರಮಿಸಿ ಕಾಲ ಕಳೆಯಲು ಇಷ್ಟಪಡುತ್ತಾರೆ. ನಡೆಯಲು, ಬಯಲಲ್ಲಿ ಆಡುವ ಆಟವಾಡಲು, ಯಾವುದೇ ಶಾರೀರಿಕ ಚಟುವಟಿಕೆ ಮಾಡಲು ಸಿದ್ಧರಿಲ್ಲ. ಸೆಡೆಂಟರಿ ಲೈಫ್ ! ಪ್ಯಾಸಿವ್ ಮನರಂಜನೆ – ಮುಖ್ಯವಾಗಿ ಟೀವಿ ಸಿನೆಮಾ ವೀಕ್ಷಣೆ. ಈ ಬಗೆಯ ಜೀವನಶೈಲಿಯಿಂದ ಅನೇಕ ದೀರ್ಘಕಾಲೀನ ಕಾಯಿಲೆಗಳಿಗೆ ತುತ್ತಾಗುತ್ತಾರೆ. ಕ್ರಮಬದ್ಧವಾಗಿ ನಿದ್ರೆ ಮಾಡುವುದಿಲ್ಲ, ಯಾವುದೇ ಆರೋಗ್ಯದಾಯಕ ಹವ್ಯಾಸಗಳಿಲ್ಲ.

**ಆರೋಗ್ಯ ಸೇವೆಗಳು**

ಹೀಗೆ ಅತ್ಯಧಿಕ ಮಟ್ಟದಲ್ಲಿ ಅನಾರೋಗ್ಯ ಸೃಷ್ಟಿಯಾಗುತ್ತಿರಬೇಕಾದರೆ, ಚಿಕಿತ್ಸೆ, ಔಷಧಿ ಉಪಚಾರಕ್ಕೆ ವೈದ್ಯರು-ದಾದಿಯರು ಔಷಧಶಾಸ್ತ್ರಜ್ಞರ ದೊಡ್ಡ ದಂಡೇ ಬೇಕು. ಜನರಿಗೆ ಉಚಿತ ಆರೋಗ್ಯಸೇವೆ ತನ್ನ ಕರ್ತವ್ಯ ಎಂದು ಘೋಷಿಸಿಕೊಂಡ ರಾಜ್ಯ ಸರ್ಕಾರ, ಇಂದು ಆ ಕೆಲಸ ಮಾಡಲಾಗದೆ ಏದುಸಿರು ಬಿಡುತ್ತಿದೆ. ಹಾಗೆಯೇ ಸರ್ಕಾರೀ ಆಸ್ಪತ್ರೆಗಳಿಗೆ ಬರುವ ರೋಗಿಗಳೂ ನಿರಾಶೆಯಿಂದ ಏದುಸಿರು ಬಿಡುವಂತಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರ-ಪ್ರಾಥಮಿಕ ಆರೋಗ್ಯ ಸೇವೆಗಳನ್ನು ೧೯೩೫ರ ಸುಮಾರಿನಲ್ಲೇ ಪ್ರಾರಂಭಮಾಡಿ, ಇತರ ರಾಜ್ಯಗಳಿಗೆ-ದೇಶಕ್ಕೆ ಮಾದರಿಯಾದ ನಮ್ಮ ರಾಜ್ಯ, ಈಗ ಈ ರಂಗದಲ್ಲಿ ಬಹುಮಟ್ಟಿಗೆ ವಿಫಲವಾಗಿದೆ ಎನ್ನಬಹುದು.

**ಪ್ರಾಥಮಿಕ ಆರೋಗ್ಯ ಸೇವೆಗಳು**

ಪ್ರತಿ ೫೦೦೦ ಜನಸಂಖ್ಯೆಗೆ, ಒಂದು ಮಹಿಳಾ ಆರೋಗ್ಯ ಕಾರ್ಯಕರ್ತೆ ಇರುವ

ಪ್ರಾಥಮಿಕ ಆರೋಗ್ಯ ಉಪಕೇಂದ್ರ, ಪ್ರತಿ ೩೦,೦೦೦ ಜನಸಂಖ್ಯೆಗೆ ಇಬ್ಬರು ವೈದ್ಯರಿರುವ ಪ್ರಾಥಮಿಕ ಆರೋಗ್ಯ ಕೇಂದ್ರ, ಪ್ರತಿ ಒಂದು ಲಕ್ಷ ಜನಸಂಖ್ಯೆಗೆ ಒಂದು ಸಮುದಾಯ ಆರೋಗ್ಯ ಕೇಂದ್ರ, ಪ್ರತಿ ಜಿಲ್ಲಾ ಕೇಂದ್ರದಲ್ಲಿ ಏಳು ಸ್ಪೆಶಾಲಿಟಿ ವಿಭಾಗಗಳಿರುವ (ಮೆಡಿಸಿನ್, ಸರ್ಜರಿ, ಪ್ರಸೂತಿ ಶಾಸ್ತ್ರ, ಚರ್ಮ, ಕಿವಿ ಮೂಗು ಗಂಟಲು, ದಂತ ಮತ್ತು ಮನೋವೈದ್ಯಕೀಯ) ಜಿಲ್ಲಾ ಆಸ್ಪತ್ರೆಗಳು ಹಾಗೂ ದೊಡ್ಡ ನಗರಗಳಲ್ಲಿ ದೊಡ್ಡ ಆಸ್ಪತ್ರೆಗಳನ್ನು ಸ್ಥಾಪಿಸಿ, ಕರ್ನಾಟಕ ಸರ್ಕಾರ, ಆರೋಗ್ಯ ಸೌಲಭ್ಯಗಳನ್ನು ಕಲ್ಪಿಸಿದೆ.

ನಮ್ಮ ರಾಜ್ಯದಲ್ಲಿ ಈಗ,

೮೨೦೦ಕ್ಕೂ ಹೆಚ್ಚಿನ ಪ್ರಾಥಮಿಕ ಆರೋಗ್ಯ ಉಪಕೇಂದ್ರಗಳು

೨೩೦೦ಕ್ಕೂ ಹೆಚ್ಚಿನ ಪ್ರಾಥಮಿಕ ಆರೋಗ್ಯ ಕೇಂದ್ರಗಳು

೨೫೦ಕ್ಕೂ ಹೆಚ್ಚು ಸಮುದಾಯ ಆರೋಗ್ಯ ಕೇಂದ್ರಗಳು

೭೦ಕ್ಕೂ ಹೆಚ್ಚು ದೊಡ್ಡ ಅಥವಾ ಜಿಲ್ಲಾ ಆಸ್ಪತ್ರೆಗಳಿವೆ.

ಜೊತೆಗೆ ಆಯುರ್ವೇದ, ಯುನಾನಿ, ಹೋಮಿಯೋಪತಿ ಚಿಕಿತ್ಸಾ ಕೇಂದ್ರಗಳು, ಮತ್ತು ಆಸ್ಪತ್ರೆಗಳೂ ಇವೆ.

ಕೇಂದ್ರ ಸರ್ಕಾರದ ಹಣ ಮತ್ತು ಮಾರ್ಗದರ್ಶನದಲ್ಲಿ ೧೩ ರಾಷ್ಟ್ರೀಯ ಆರೋಗ್ಯ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರಲಾಗಿದೆ.

೧. ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ
೨. ರೋಗ ನಿರೋಧಕ (ಇಮ್ಯುನೈಸೇಶನ್)
೩. ಕ್ಷಯರೋಗ ನಿವಾರಣೆ
೪. ಕುಷ್ಠರೋಗ ನಿವಾರಣೆ
೫. ಏಡ್ಸ್ ನಿಯಂತ್ರಣ
೬. ಕುರುಡುತನ ನಿವಾರಣೆ
೭. ಮಲೇರಿಯಾ ನಿವಾರಣೆ
೮. ಫೈಲೇರಿಯಾ (ಆನೇಕಾಲು ರೋಗ) ರೋಗ ನಿವಾರಣೆ
(ಇದು ಗುಲ್ಬರ್ಗಾ, ಬಾಗಲಕೋಟೆ, ಕೊಪ್ಪಳ, ರಾಯಚೂರು, ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡದಲ್ಲಿ ವ್ಯಾಪಕವಾಗಿದೆ.)



೯. ಪೌಷ್ಟಿಕತೆ ಕಾರ್ಯಕ್ರಮ (ವಿಟಮಿನ್ ಎ, ಶಿಶು ಸಂರಕ್ಷಣೆ ಕಾರ್ಯಕ್ರಮ ಮತ್ತು ಅಯೋಡಿನ್ ಸಪ್ಲಿಮೆಂಟೇಶನ್)
೧೦. ಭೇದಿ ಮತ್ತು ಇತರ ಸಾಂಕ್ರಾಮಿಕ ರೋಗಗಳ ಹತೋಟಿ (ಕಾಲರಾ, ವೈರಲ್ ಹೆಪಟೈಟಿಸ್, ಕ್ಯಾಸನೂರು ಅರಣ್ಯರೋಗ ಇತ್ಯಾದಿ)
೧೧. ಗಿನಿವರ್ಮ್ ನಿರ್ಮೂಲನ (ಈಗ ಈ ಹುಳು ನಮ್ಮ ರಾಜ್ಯದಲ್ಲೇ ಇಲ್ಲ)
೧೨. ಮಾನಸಿಕ ಆರೋಗ್ಯ ಕಾರ್ಯಕ್ರಮ
೧೩. ಶಾಲಾ ಆರೋಗ್ಯ ಕಾರ್ಯಕ್ರಮ.

ಬಡರೋಗಿಗಳಿಗೆ ಉಚಿತ ತಜ್ಞವೈದ್ಯ ಸಲಹಾ ಕಾರ್ಯಕ್ರಮ, ಯಶಸ್ವಿನಿ ಸಾಮೂಹಿಕ ಆರೋಗ್ಯ ವಿಮೆ, ಇಎಸ್‌ಐ ಸೌಲಭ್ಯಗಳು, ಬಡತನ ರೇಖೆಯ ಕೆಳಗಿನ ಕುಟುಂಬಕ್ಕೆ ಎಲ್ಲಾ ಆಸ್ಪತ್ರೆಗಳಲ್ಲಿ ಉಚಿತ ಚಿಕಿತ್ಸೆ, ಅವಧಿಗೊಂದಾವರ್ತಿ ಅಲ್ಲಲ್ಲಿ ಆರೋಗ್ಯ ಶಿಬಿರಗಳು, ಸಂಚಾರಿ ಚಿಕಿತ್ಸಾ ಘಟಕಗಳು – ಹೀಗೆ ಮತ್ತಷ್ಟು ಸೌಲಭ್ಯಗಳನ್ನು ಸರ್ಕಾರ ಕಲ್ಪಿಸಿದೆ.

**ಖಾಸಗಿ ವೈದ್ಯ ಸೇವೆಗಳು**

ಪ್ರತಿಹಳ್ಳಿ, ಊರು-ಕೇರಿ-ನಗರ ಪ್ರದೇಶಗಳಲ್ಲಿ ಖಾಸಗಿ ವೈದ್ಯ ಸೇವೆಗಳು ಅತಿ ರಭಸದಿಂದ ವೃದ್ಧಿಯಾಗುತ್ತಿವೆ. ವೈಯಕ್ತಿಕ ಗಮನ, ಸ್ವಚ್ಛ ಪರಿಸರದಲ್ಲಿ ಒಳ್ಳೆಯ ಪರಿಣಾಮಕಾರಿ ಚಿಕಿತ್ಸೆ ಸಿಗುತ್ತದೆ ಎಂಬ ನಿರೀಕ್ಷೆಯನ್ನು ಇವು ಹುಟ್ಟುಹಾಕಿವೆ. ತಮ್ಮ ಕೈಯಲ್ಲಿ ಭರಿಸಲು ಆಗುತ್ತದೋ ಇಲ್ಲವೋ ಎಂಬುದನ್ನು ಲೆಕ್ಕಿಸದೆ ಜನ ಈ ಖಾಸಗಿ ವೈದ್ಯ ಕೇಂದ್ರ ಸಂಸ್ಥೆಗಳಿಗೆ ಧಾವಿಸುತ್ತಾರೆ. ಸಣ್ಣ ಜನರಲ್ ಪ್ರಾಕ್ಟೀಸ್ ಕ್ಲಿನಿಕ್‌ನಿಂದ ಹಿಡಿದು ಹೈಟೆಕ್-ಪಂಚತಾರಾಮಟ್ಟದ ಕಾರ್ಪೊರೇಟ್ ಆಸ್ಪತ್ರೆಗಳು ಪ್ರತಿಸ್ಥಳದಲ್ಲೂ ತಲೆಯೆತ್ತಿ ನಿಂತಿವೆ. ಅವುಗಳ ಬೆಡ್‌ಗಳು ಶೇಕಡ ೮೦ರಿಂದ ೯೦ರಷ್ಟು ಭರ್ತಿಯಾಗಿ ಇರುತ್ತವೆ. ಹೊರರೋಗಿ ವಿಭಾಗಗಳು ಗಿಜಿಗುಟ್ಟುತ್ತಿರುತ್ತವೆ. ಇವುಗಳಿಗೆ ಪೂರಕವಾಗಿ ಖಾಸಗಿ ಪ್ರಯೋಗಾಲಯಗಳೂ, ರಕ್ತನಿಧಿಗಳೂ, ತಪಾಸಣಾ ಕೇಂದ್ರಗಳೂ ಇವೆ. ಇವೆಲ್ಲವೂ ಸೇವಾಕ್ಷೇತ್ರ ಎನಿಸಿದ್ದ ಆರೋಗ್ಯ ಕ್ಷೇತ್ರವನ್ನು, ಸಂಪೂರ್ಣವಾಗಿ ವಾಣಿಜ್ಯೀಕರಣಗೊಳಿಸಿವೆ. ಇಲ್ಲಿ ಚಲಾವಣೆಯಲ್ಲಿರುವ ನಾಣ್ಯ ಒಂದೇ 'ಹಣ-ಲಾಭ'.

**ಆರೋಗ್ಯಕ್ಷೇತ್ರದ ದೊಡ್ಡ ವೈಫಲ್ಯ : ಸರ್ಕಾರಿ ಕ್ಷೇತ್ರ**

ಸರ್ಕಾರ ನಡೆಸುವ ಎಲ್ಲ ಸಂಸ್ಥೆಗಳು – ಪ್ರಾಥಮಿಕ ಆರೋಗ್ಯ ಕೇಂದ್ರಗಳಿಂದ ಹಿಡಿದು ರಾಜಧಾನಿಯಲ್ಲಿರುವ ದೊಡ್ಡ ಆಸ್ಪತ್ರೆಗಳವರೆಗೆ ಎಲ್ಲವೂ ಅತ್ಯಂತ ಹೀನಾಯ ಸ್ಥಿತಿಯಲ್ಲಿವೆ. ಸಂಪನ್ಮೂಲಗಳ ಕೊರತೆ, ಕೆಟ್ಟ ನಿರ್ವಹಣೆ ಹಾಗೂ ಭ್ರಷ್ಟಾಚಾರದಿಂದಾಗಿ ಅಧೋಗತಿಗಿಳಿದಿವೆ.

- ಬಹುತೇಕ ಆಸ್ಪತ್ರೆಗಳಿಗೆ ಒಳ್ಳೆಯ ಕಟ್ಟಡಗಳಿಲ್ಲ. ಇದ್ದರೂ ಅವುಗಳ ನಿರ್ವಹಣೆ ಸರಿ ಇಲ್ಲ.
- ಎಲ್ಲೆಡೆ ವೈದ್ಯರ, ವೈದ್ಯ ಸಿಬ್ಬಂದಿಯ ಕೊರತೆ ಇದೆ. ತಾತ್ಕಾಲಿಕವಾಗಿ ಕಾಂಟ್ರಾಕ್ಟ್ ವೈದ್ಯರುಗಳ ನೇಮಕವಿದೆ. ಬಹುತೇಕ ಗ್ರಾಮೀಣ ಮತ್ತು ಸಣ್ಣ ಊರುಗಳಲ್ಲಿ ವೈದ್ಯರು ಹಾಗೂ ಸಿಬ್ಬಂದಿ ಆಸ್ಪತ್ರೆಯ ಕ್ಯಾಂಪಸ್‌ನಲ್ಲಿ ವಾಸವಿರುವುದಿಲ್ಲ. ದೂರದ ದೊಡ್ಡ ಊರಿನಲ್ಲಿ ವಾಸವಾಗಿದ್ದು ತಮಗೆ ಅನುಕೂಲವಾದ ವೇಳೆಗೆ ಆಸ್ಪತ್ರೆಗೆ ಹೋಗುತ್ತಾರೆ.
- ತಜ್ಞವೈದ್ಯರು ತಮ್ಮ ಅನುಕೂಲಕ್ಕೆ ತಕ್ಕಂತೆ ಒಂದು ಆಸ್ಪತ್ರೆಯಲ್ಲಿ ಇರುತ್ತಾರೆಯೇ ಹೊರತು, ಆಸ್ಪತ್ರೆಯ ಅಗತ್ಯಕ್ಕೆ ಅನುಗುಣವಾಗಲ್ಲ. ಉದಾಹರಣೆಗೆ, ಒಂದು ತಾಲ್ಲೂಕು ಆಸ್ಪತ್ರೆಯಲ್ಲಿ ಮೂವರು ಮೂಳೆತಜ್ಞರು ಕೆಲಸ ಮಾಡಿದರೆ, ಇನ್ನೊಂದರಲ್ಲಿ ಒಬ್ಬರೂ ಇರುವುದಿಲ್ಲ.
- ಖಾಸಗಿ ಪ್ರಾಕ್ಟೀಸ್‌ಗೆ ಅವಕಾಶವಿರುವುದರಿಂದ ವೈದ್ಯರು ತಮ್ಮ ಖಾಸಗಿ ಪ್ರಾಕ್ಟೀಸ್‌ಗೆ ಹೆಚ್ಚು ಗಮನ ಕೊಡುತ್ತಾರೆ. ಆಸ್ಪತ್ರೆ ಅವಧಿಯಲ್ಲೇ ಅಥವಾ ಆಸ್ಪತ್ರೆಯಲ್ಲೇ ಪ್ರಾಕ್ಟೀಸ್ ಮಾಡಬಹುದು.
- ಒಂದು ಊರಿನಲ್ಲಿ ಹೆಚ್ಚುಕಾಲ ಇರಲು ಅಥವಾ ತಮಗೆ ಬೇಕಾದ ಕಡೆಗೆ ವರ್ಗ ಮಾಡಿಸಿಕೊಳ್ಳಲು ವೈದ್ಯರು ಸಂಬಂಧಪಟ್ಟವರಿಗೆ ಸಾವಿರಾರು ರೂಪಾಯಿ ಲಂಚ ಕೊಡಬೇಕು. ವೈದ್ಯಕೀಯ ಬಿಲ್ಲುಗಳು ಪಾಸಾಗಲು, ಇಂಕ್ರಿಮೆಂಟ್, ಪ್ರಮೋಶನ್ ಪಡೆಯಲೂ ಇದೇ ವಿಧಾನವನ್ನು ಅನುಸರಿಸಬೇಕು. ವಿಭಾಗದ ಹಿರಿಯ ಅಧಿಕಾರಿಗಳಿಂದ ಹಿಡಿದು ಎಲ್ಲರೂ ದುಡ್ಡು ಮಾಡಬೇಕು - ದುಡ್ಡು ಕೊಡಬೇಕು. ಆಡಳಿತದ ಹಿಡಿತ ಅಧಿಕಾರಿ ಬಾಬುಗಳು ಹಾಗೂ ರಾಜಕಾರಣಿಗಳ ಕೈಲಿರುತ್ತದೆ.
- ಆಸ್ಪತ್ರೆಯ ಸಲಕರಣೆ-ಉಪಕರಣ ಯಂತ್ರಗಳು ಸುಸ್ಥಿತಿಯಲ್ಲಿರುವುದಿಲ್ಲ.

- ಔಷಧ ಸರಬರಾಜು ಕ್ರಮವಾಗಿರುವುದಿಲ್ಲ, ಅಗತ್ಯವಿರುವ ಔಷಧಿಗಳ ಬದಲು ಅನಗತ್ಯ ಔಷಧಿಗಳು, ಕಳಪೆ-ನಕಲಿ ಔಷಧಿಗಳು.
- ಆಸ್ಪತ್ರೆಯ ಹೊರ ಮತ್ತು ಒಳರೋಗಿ ಘಟಕಗಳಲ್ಲಿ ಗಲೀಜು, ಕೊಳಕುತನ, ನೈರ್ಮಲ್ಯವನ್ನು ಕಾಪಾಡಬೇಕಾದ ಸಿಬ್ಬಂದಿಗೆ ಇದರಲ್ಲಿ ಸಂಪೂರ್ಣ ಅಲಕ್ಷ್ಯ.
- ಆರೋಗ್ಯ ಕಾರ್ಯಕರ್ತರು, ಆಸ್ಪತ್ರೆಯ ಸಿಬ್ಬಂದಿಯಲ್ಲಿ, ಸೇವಾ ಮನೋಭಾವಕ್ಕಿಂತ, ಹಣ ಮಾಡುವ, ತಮ್ಮ ಸ್ವಾರ್ಥ ಸಾಧನೆಗೇ ಗಮನಕೊಡುವ ಪ್ರವೃತ್ತಿ. ಕೆಲಸ ಮಾಡುವ ಬದ್ಧತೆ ಇಲ್ಲದಿರುವುದು. ಸ್ಥಳೀಯ ರಾಜಕೀಯ ವ್ಯಕ್ತಿಗಳೊಂದಿಗೆ ಸಖ್ಯ ಬೆಳೆಸಿಕೊಂಡು ಆರೋಗೆಂಟ್ ಆಗಿ ವರ್ತಿಸುತ್ತಾರೆ.

ಮಧ್ಯಮ ದರ್ಜೆಯ ಆಸ್ಪತ್ರೆಗಳ ಸುಧಾರಣೆಗೆ ವಿಶ್ವಬ್ಯಾಂಕ್‌ನಿಂದ ತಂದ ಸಾಲದ ಹಣವನ್ನು ಕಟ್ಟಡ ನಿರ್ಮಾಣ, ಯಂತ್ರ ಖರೀದಿಯ ಹೆಸರಿನಲ್ಲಿ ಮಧ್ಯವರ್ತಿಗಳು ನುಂಗಿಹಾಕಿದರು ಎಂಬುದು ಎಲ್ಲೆಡೆ ಕೇಳಿಬರುತ್ತದೆ. ಖರ್ಚಾದ ಹಣದ ಬೆಲೆಗೆ ಸರಿಯಾಗಿ, ಯಾವುದೂ ಸುಧಾರಿಸಲಿಲ್ಲ. ತೀವ್ರ ಭ್ರಷ್ಟಾಚಾರವೆಂಬ ಸೋಂಕಿನಿಂದ ಬಳಲುತ್ತಿರುವ ಆರೋಗ್ಯ ಇಲಾಖೆಗೆ ಯಾರು ಸರಿಯಾದ ಆಂಟಿಬಯಾಟಿಕ್ ನೀಡುತ್ತಾರೆ ಎಂಬುದು ಕರ್ನಾಟಕ ರಾಜ್ಯ ಸರ್ಕಾರ ನಿಯಮಿಸಿದ ಟಾಸ್ಕ್‌ಫೋರ್ಸ್‌ನ ಅಧ್ಯಕ್ಷ ಡಾ|| ಸುದರ್ಶನ್‌ಗೂ ಗೊತ್ತಿಲ್ಲ. ಈ ಸಮಿತಿ ಸಲ್ಲಿಸಿದ ಸುಧಾರಣಾ ವರದಿ ವಿಧಾನಸೌಧದಲ್ಲಿ ಧೂಳುತಿನ್ನುತ್ತಾ ಕುಳಿತಿದೆ.

ಸರ್ಕಾರಿ ಆಸ್ಪತ್ರೆ ಎಂದರೆ ನರಕ ಕೂಪಗಳು, ವೈದ್ಯರು-ದಾದಿಯರು ಹಾಗೂ ವೈದ್ಯ ಸಿಬ್ಬಂದಿ ಯಮರಾಜನ ಸೋದರ ಸೋದರಿಯರು ಎಂಬ ನಾಣ್ಣುಡಿ, ಸತ್ಯ ವಾಸ್ತವಿಕತೆಯ ಕನ್ನಡಿ ಎಂಬುದು ನಮ್ಮ ದುರ್ದೈವ. ಬಹುತೇಕ ಆರೋಗ್ಯ ಕಾರ್ಯಕ್ರಮಗಳು ಕೆಟ್ಟ ನಿರ್ವಹಣೆಯಿಂದ ತಲುಪಬೇಕಾದ ಜನರನ್ನು ತಲುಪಿಲ್ಲ. ಒಂದು ಉದಾಹರಣೆ ಕೊಡುವುದಾದರೆ ಕಳೆದ ೪೦ ವರ್ಷಗಳಿಂದ ಜಾರಿಯಲ್ಲಿದ್ದರೂ, ರಾಷ್ಟ್ರೀಯ ಕ್ಷಯರೋಗ ನಿವಾರಣೆಯ ಫಲ ಶೇಕಡ ೨೫ರಷ್ಟು ರೋಗಿಗಳನ್ನೂ ಮುಟ್ಟಿಲ್ಲ ಎಂದು ರಾಷ್ಟ್ರೀಯ ಕ್ಷಯರೋಗ ನಿವಾರಣಾ ಸಂಸ್ಥೆ ಅಭಿಪ್ರಾಯಪಟ್ಟಿದೆ. ಸರಿಯಾದ ಉಸ್ತುವಾರಿ ಮತ್ತು ಮೌಲ್ಯ ಮಾಪನವಿಲ್ಲದೆ ಎಲ್ಲ ಕಾರ್ಯಕ್ರಮಗಳೂ ಸೊರಗಿವೆ.

ಇಂತಹ ನಿರಾಶಾದಾಯಕ ಸನ್ನಿವೇಶದಲ್ಲೂ ಶೇಕಡ ೨೦ರಷ್ಟು ಸಿಬ್ಬಂದಿ ಮತ್ತು ಸಂಸ್ಥೆಗಳು ಚೆನ್ನಾಗಿ ಕೆಲಸ ನಿರ್ವಹಿಸುತ್ತಿರುವುದು ಕರಿಮೋಡದ ಬೆಳ್ಳಿಗೆರೆ ಎನ್ನಬಹುದು. ಇವರ ಸಂಖ್ಯೆ ಹೆಚ್ಚುವಂತೆ ನೋಡಿಕೊಳ್ಳಬೇಕು.

**ಖಾಸಗಿ ಕ್ಷೇತ್ರ**

ಸಣ್ಣ ಪುಟ್ಟ ಕ್ಲಿನಿಕ್‌ಗಳು, ಆಸ್ಪತ್ರೆಗಳು ಇಂದಿಗೂ ಜನರಿಗೆ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿವೆ. ಡಾಕ್ಟರ್ ಶಾಪು, ಜನರಲ್ ಪ್ರಾಕ್ಟಿಷನರ್ ಕ್ಲಿನಿಕ್ ಎಂದು ಕರೆಸಿಕೊಳ್ಳುವ ಈ ಕೇಂದ್ರಗಳ ವೈದ್ಯರು ತಮ್ಮ ಸುತ್ತಮುತ್ತಲಿನ ಜನರಿಗೆ ಕುಟುಂಬ ವೈದ್ಯರಾಗಿ, ಆಪ್ತಮಿತ್ರರಾಗಿ ಕೆಲಸ ಮಾಡುತ್ತಾರೆ. ಕಡಿಮೆ ಖರ್ಚಿನಲ್ಲಿ ವೈದ್ಯಕೀಯ ನೆರವನ್ನೀಯುತ್ತಾರೆ. ಕ್ಲಿಷ್ಟ ಮತ್ತು ಸಂಕೀರ್ಣ ಕೇಸುಗಳನ್ನು ಗುರುತಿಸಿ, ದೊಡ್ಡ ಆಸ್ಪತ್ರೆಗಳಿಗೆ ರೆಫರ್ ಮಾಡುತ್ತಾರೆ.

ಆದರೆ ನರ್ಸಿಂಗ್ ಹೋಂಗಳು, ಸ್ಪೆಶಾಲಿಟಿ-ಮಲ್ಟಿ ಸ್ಪೆಶಾಲಿಟಿ ಆಸ್ಪತ್ರೆಗಳು, ಹೈಟೆಕ್ ಕಾರ್ಪೊರೇಟ್ ಆಸ್ಪತ್ರೆಗಳು, ಲ್ಯಾಬ್‌ಗಳು, ತಪಾಸಣಾ ಕೇಂದ್ರಗಳು, ಕನ್ಸಲ್ಟೇಶನ್ ಸೆಂಟರ್‌ಗಳು ಬಹುತೇಕವಾಗಿ ವಾಣಿಜ್ಯೀಕರಣಗೊಂಡಿವೆ. ದೊಡ್ಡ ಬಂಡವಾಳ ಹಾಕಿ, ಆಧುನಿಕ ವಿನ್ಯಾಸಗಳ ಕಟ್ಟಡಗಳಲ್ಲಿ ಪಂಚತಾರಾ ಸಂಸ್ಕೃತಿಯೊಂದಿಗೆ, ಆಡಂಬರದ ಪ್ರಚಾರದೊಂದಿಗೆ, ಹೈಟೆಕ್ ಯಂತ್ರೋಪಕರಣಗಳೊಂದಿಗೆ, ಸುಪರ್ ಸ್ಪೆಶಾಲಿಟಿ ತಜ್ಞರೊಂದಿಗೆ ಅಲಂಕೃತಗೊಂಡು, ರೋಗಿಗಳನ್ನು ಮತ್ತು ಮನೆಯವರನ್ನು ಆಕರ್ಷಿಸಿ, ಲಾಭಗಳಿಸುವುದೇ ಇವುಗಳ ಗುರಿ. ಸೇವೆಯನ್ನು ಮಾರಾಟಮಾಡುತ್ತೇವೆ ಎಂದು ಬಹಿರಂಗವಾಗಿಯೇ ಹೇಳುವ ಇವು ಒಳ್ಳೆಯ ಗುಣಮಟ್ಟದ ಸೇವೆಯನ್ನು ಕೊಡುತ್ತವೆಯೇ ಎಂಬುದು ಅನುಮಾನಾಸ್ಪದ. ರೋಗಗಳು ಮತ್ತು ಚಿಕಿತ್ಸೆ ಬಗ್ಗೆ ಜನರಿಗಿರುವ ಅಜ್ಞಾನ, ಭಯ ಆತಂಕಗಳನ್ನೇ ಬಂಡವಾಳ ಮಾಡಿಕೊಂಡು, ಇವು ಕಡ್ಡಿಯನ್ನು ಗುಡ್ಡ ಮಾಡುತ್ತವೆ. ಅನಗತ್ಯ, ದುಬಾರಿ ತಪಾಸಣೆಗಳು, ಅನಗತ್ಯ ಔಷಧಿಗಳು, ಶಸ್ತ್ರ ಚಿಕಿತ್ಸೆಗಳು, ಬೇಕಿರಲಿ ಬೇಡದಿರಲಿ ಒಳರೋಗಿ ಚಿಕಿತ್ಸೆಗಾಗಿ ಅಡ್ಮಿಶನ್, ವಿವಿಧ ತಜ್ಞರಿಂದ ಬೇಡದ ಚೆಕ್‌ಅಪ್ ಮತ್ತು ಅಭಿಪ್ರಾಯಗಳು. ಕೊನೆಗೆ ಸಾವಿರಗಳು-ಲಕ್ಷಗಳ ಬಿಲ್. ಖಾಸಗಿ ಸಂಸ್ಥೆಗಳೊಂದಿಗೆ ಒಪ್ಪಂದ ಮಾಡಿಕೊಂಡು ಬಿಲ್ ನೀವು ಕೊಡಬೇಡಿ ನಿಮ್ಮ ಸಂಸ್ಥೆ ಕೊಡುತ್ತದೆ ಅಥವಾ ಇನ್ಶೂರೆನ್ಸ್ ಕಂಪನಿ ಕೊಡುತ್ತದೆ ಎಂದು ಜನರನ್ನು ಆಕರ್ಷಿಸುತ್ತವೆ. ಈ ಸೌಲಭ್ಯವಿಲ್ಲದ ಜನಸಾಮಾನ್ಯರು ತಮ್ಮ ಆಸ್ತಿಪಾಸ್ತಿ ಮಾರಿಕೊಂಡು ಅಥವಾ ಸಾಲ ಮಾಡಿ, ಬಿಲ್ ಕಟ್ಟಬೇಕಾಗುತ್ತದೆ. ಆದ್ದರಿಂದ ಈ

ನರ್ಸಿಂಗ್ ಹೋಂಗಳು ಹೈಟೆಕ್ ಆಸ್ಪತ್ರೆಗಳ ಬಗ್ಗೆ ಜನ ಎಚ್ಚರಿಕೆಯಿಂದಿರಬೇಕಾಗುತ್ತದೆ. ಕಣ್ಣುಮುಚ್ಚಿ ಅವುಗಳ ಬಲೆಗೆ ಬೀಳಬಾರದು.

ಈ ಖಾಸಗಿ ಸಂಸ್ಥೆಗಳನ್ನು ನಿಯಂತ್ರಿಸುವ, ಗುಣಮಟ್ಟದ ಮೌಲ್ಯಮಾಪನ ಮಾಡುವ ಯಾವ ವ್ಯವಸ್ಥೆಯೂ ನಮ್ಮಲ್ಲಿಲ್ಲ. ನರ್ಸಿಂಗ್ ಹೋಂ ಕಾನೂನು ಇನ್ನೂ ಜಾರಿಗೆ ಬಂದೇ ಇಲ್ಲ. ಸರ್ಕಾರ ಈ ಕೂಡಲೇ ಇತ್ತ ಗಮನ ಹರಿಸಬೇಕು. ಖಾಸಗಿ ಮಾನಸಿಕ ಆಸ್ಪತ್ರೆ-ಚಿಕಿತ್ಸಾ ಕೇಂದ್ರಗಳನ್ನೂ ನಿಯಂತ್ರಿಸುವ 'Mental Health Authority' ಇರುವಂತೆ, ಖಾಸಗಿ ಆಸ್ಪತ್ರೆಗಳನ್ನು ನಿಯಂತ್ರಿಸುವ ಪ್ರಾಧಿಕಾರವನ್ನು ರಚಿಸಬೇಕು. ಕಳಪೆ ಮತ್ತು ಮೋಸ ಮಾಡುವ ಆಸ್ಪತ್ರೆ-ಲ್ಯಾಬ್‌ಗಳನ್ನೂ ಶಿಕ್ಷೆಗೆ ಗುರಿಪಡಿಸಬೇಕು. ಗ್ರಾಹಕರ ವೇದಿಕೆಗೆ ಈ ಸಂಸ್ಥೆಗಳ ದೌರ್ಬಲ್ಯ ಮತ್ತು ವಂಚನೆಗಳನ್ನು ಒಯ್ಯುವಂತೆ ಜನರಿಗೂ ತಿಳಿಸಬೇಕು. ಆರೋಗ್ಯದ ಹೆಸರಿನಲ್ಲಿ ಖಾಸಗಿ ಸಂಸ್ಥೆಗಳು ಜನರ ಶೋಷಣೆ ಮಾಡುವುದಕ್ಕೆ ಲಗಾಮು ಹಾಕಬೇಕು.

**ಆಯುರ್ವೇದ, ಯುನಾನಿ, ಹೋಮಿಯೋಪತಿ ವೈದ್ಯವ್ಯವಸ್ಥೆಗಳು**

ಆಯುರ್ವೇದ ಭಾರತದ ಪುರಾತನ ವೈದ್ಯಪದ್ಧತಿ. ಅದರ ವಿಧಿವಿಧಾನಗಳು, ಚಿಕಿತ್ಸಾ ಕ್ರಮಗಳು ಇಂದಿಗೂ ಜನಪ್ರಿಯವಾಗಿವೆ. ಆದರೆ, ಆಯುರ್ವೇದ ಔಷಧಿಗಳು ಮತ್ತು ಉಪಯೋಗದ ಬಗ್ಗೆ ನಿಖರವಾದ ವೈಜ್ಞಾನಿಕ ಮಾಹಿತಿ ಇಲ್ಲ. ಔಷಧಗಳ ತಯಾರಿಕೆ ಮತ್ತು ಗುಣಮಟ್ಟದ ಬಗ್ಗೆ ಔಷಧ-ಮಂಡಲಿಯ ನಿಯಂತ್ರಣವಿಲ್ಲ. ಜೊತೆಗೆ ಒಳನಾಡಿನಲ್ಲಿ ಪ್ರಾಕ್ಟೀಸ್ ಮಾಡುವ ಅನೇಕ ಆಯುರ್ವೇದ ವೈದ್ಯರು ಆಲೋಪತಿ ಔಷಧಿಯನ್ನೇ ಬಳಸುತ್ತಾರೆ!

ಇದೇ ರೀತಿ ಯುನಾನಿ, ಹೋಮಿಯೋಪತಿ ವೈದ್ಯರೂ ಎಷ್ಟರಮಟ್ಟಿಗೆ ತಮ್ಮ ತಮ್ಮ ಪದ್ಧತಿಯನ್ನು ವೈಜ್ಞಾನಿಕವಾಗಿ ಅನುಸರಿಸುತ್ತಾರೆ ಅಥವಾ ಅಡ್ಡಾದಿಡ್ಡಿಯಾಗಿ ಪ್ರಾಕ್ಟೀಸ್ ಮಾಡುತ್ತಾರೆ ಗೊತ್ತಿಲ್ಲ.

ಜೊತೆಗೆ ನಕಲಿ ವೈದ್ಯರು ಈ ಕ್ಷೇತ್ರದಲ್ಲಿ ಝಾಂಡಾ ಹೂಡಿದ್ದಾರೆ. ಒಂದು ವಾರ, ಒಂದು ತಿಂಗಳು ಟ್ರೈನಿಂಗ್ ಅಥವಾ ಯಾವ ತರಪೇತಿಯೂ ಇಲ್ಲದೆ ಪ್ರಾಕ್ಟೀಸ್ ಮಾಡುವ ಡೋಂಗಿ ವೈದ್ಯರ ಹಿಂಡು ಎಲ್ಲೆಡೆ ಇದೆ. ಲೈಂಗಿಕ ತಜ್ಞರೆಂದುಕೊಂಡು ಅಮಾಯಕರನ್ನು ಇವರು ಶೋಷಿಸುತ್ತಾರೆ. ಅವರನ್ನು ಹಿಡಿದು ಶಿಕ್ಷಿಸುವ ಕೆಲಸ ನಡೆದೇ ಇಲ್ಲ.

**ಪರ್ಯಾಯ ಚಿಕಿತ್ಸಾ ವಿಧಾನಗಳು**

ಇತ್ತೀಚಿನ ವರ್ಷಗಳಲ್ಲಿ ಜನ ಆಲೋಪತಿ, ಆಯುರ್ವೇದ, ಹೋಮಿಯೋಪತಿಯಿಂದ ವಾಸಿಯಾಗದ ಕಾಯಿಲೆಗಳಿಗೆ, ಪರ್ಯಾಯ ಚಿಕಿತ್ಸಾ ವಿಧಾನಗಳನ್ನು ಅರಸತೊಡಗಿದ್ದಾರೆ : ಯೋಗಾಸನಗಳು, ಪ್ರಾಣಾಯಾಮ, ಧ್ಯಾನ, ಪ್ರಾಣಿಕ್ ಹೀಲಿಂಗ್, ರೇಖಿ, ಮ್ಯಾಗ್ನೆಟ್ ಥೆರಪಿ, ನಗೆಚಿಕಿತ್ಸೆ, ಚಪ್ಪಾಳೆತಟ್ಟುವ ಚಿಕಿತ್ಸೆ, ಕೂಗಿ ಕಿರಿಚುವ ಚಿಕಿತ್ಸೆ, ಪ್ರಾರ್ಥನೆ, ಸ್ವಾಮಿ-ಬಾಬಾಗಳ ಆಶೀರ್ವಾದ, ಪುಣ್ಯಕ್ಷೇತ್ರಗಳಿಗೆ ಯಾತ್ರೆ ಇತ್ಯಾದಿ. ಪ್ರತಿಯೊಂದು ಪರ್ಯಾಯ ಚಿಕಿತ್ಸೆ ಮಾಡುವಾತ ತನ್ನ ಪದ್ಧತಿ ಬಗ್ಗೆ ಹೊಗಳಿಕೊಳ್ಳುತ್ತಾನೆ. ಇವರಿಗೆ ವಾಸಿಯಾಯಿತು ಅವರಿಗೆ ವಾಸಿಯಾಯಿತು, ಬೇಕಾದರೆ ವಿಚಾರಿಸಿ ಎನ್ನುತ್ತಾನೆ. ನಿಮಗೂ ಖಂಡಿತ ಗುಣವಾಗುತ್ತದೆ ಎನ್ನುತ್ತಾನೆ. ಜನ ಮರುಳಾಗುತ್ತಾರೆ. ಸ್ವಲ್ಪ ದಿವಸ, ಹಣ ಖರ್ಚು ಮಾಡಿ, ಆ ಚಿಕಿತ್ಸೆಯನ್ನು ಬಳಸಿ, ಗುಣವಾಗದೆ ನಿರಾಶರಾಗುತ್ತಾರೆ. ಮತ್ತೊಂದು ಪರ್ಯಾಯ ಚಿಕಿತ್ಸೆಯತ್ತ ಆಸೆಗಣ್ಣಿನಿಂದ ನೋಡುತ್ತಾರೆ.

ಇದರ ಜೊತೆಗೆ ಅನಾರೋಗ್ಯ ನಿವಾರಣೆಗೆ, ವಾಸಿಯಾಗದ ಕಾಯಿಲೆಗಳಿಗೆ ಜ್ಯೋತಿಷಿಗಳು, ಮ್ಯಾಜಿಕ್ ಉಂಗುರ, ಬಳೆ, ತಾಯಿತ, ಪೂಜೆ-ಪುನಸ್ಕಾರ, ಮಾಟ-ಮಂತ್ರ, ದೈವೀಶಕ್ತಿ, ಪವಾಡ ಮಾಡುವವರು ಇತ್ಯಾದಿಗಳ ಬಳಕೆಯೂ ವಿದ್ಯಾವಂತರಲ್ಲೂ, ಅವಿದ್ಯಾವಂತರಲ್ಲೂ ಕಂಡುಬರುತ್ತದೆ. ಯಾವುದೇ ವೈಜ್ಞಾನಿಕ ಆಧಾರವಿಲ್ಲದೆ, ಕೇವಲ ನಂಬಿಕೆಯ ಮೇಲೆ ಇವುಗಳನ್ನು ಆಶ್ರಯಿಸುವುದು ಎಷ್ಟು ಸರಿ ಎಂದು ಜನರೇ ಯೋಚಿಸಬೇಕು. ತಮ್ಮ ಹಣ, ಸಮಯ, ಸಂಪನ್ಮೂಲಗಳನ್ನು ವ್ಯರ್ಥ ಮಾಡಬಾರದು.

**ಔಷಧಿಗಳು :** ಕಾಯಿಲೆ ಚಿಕಿತ್ಸೆಗೆ, ಅನಾರೋಗ್ಯ ನಿವಾರಣೆಗೆ, ಆರೋಗ್ಯವರ್ಧನೆಗೆ ಜನ ಔಷಧ ಸೇವನೆಗೆ ಹಾತೊರೆಯುತ್ತಾರೆ. ಪ್ರತಿಯೊಂದು ರೋಗ ಲಕ್ಷಣಕ್ಕೆ ಒಂದು ಮಾತ್ರೆ, ಕ್ಯಾಪ್ಸೂಲು, ಸಿರಪ್, ಇಂಜೆಕ್ಷನ್ ಅನ್ನೂ ಕೇಳುತ್ತಾರೆ. ಇದನ್ನು ಗಮನಿಸಿದ ಔಷಧಿ ತಯಾರಿಕೆ ಕಂಪನಿಗಳು, ಇಡೀ ಆರೋಗ್ಯಕ್ಷೇತ್ರವನ್ನು ತನ್ನ ಹತೋಟಿಗೆ ತೆಗೆದುಕೊಂಡಿದೆ ಎಂದರೆ ತಪ್ಪಾಗಲಾರದು. ಲೇಹ, ಪುಡಿ, ಭಸ್ಮವನ್ನು, ಕಷಾಯವನ್ನು ಕೊಡುತ್ತಿದ್ದ ಆಯುರ್ವೇದ ಪದ್ಧತಿಯಲ್ಲೂ ಈಗ ಮಾತ್ರೆ, ಕ್ಯಾಪ್ಸೂಲು, ಸಿಹಿಪಾನಕಗಳ ಪ್ರಿಪರೇಶನ್ ಎಲ್ಲೆಡೆ ಲಭ್ಯ. ರಂಗು ರಂಗಿನ ವಿವಿಧ ಆಕಾರದ, ತುಟ್ಟಿಬೆಲೆಯ ಔಷಧಿಗಳು, ಸಾವಿರಾರು ಔಷಧಿ ಅಂಗಡಿಗಳ ಮೂಲಕ ಮಾರಾಟವಾಗುತ್ತವೆ. ಒಂದು ಸರ್ವೇಕ್ಷಣೆಯ ಪ್ರಕಾರ ಶೇಕಡ ೨೫ರಷ್ಟು ಔಷಧಿಗಳು ನಕಲಿ! ಮಲ್ಟಿನ್ಯಾಶನಲ್ ಡ್ರಗ್ಸ್ ಕಂಪನಿಗಳ ವ್ಯೂಹಜಾಲದಲ್ಲಿ, ಔಷಧಿಗಳ ಬೆಲೆ ಏರುತ್ತಲೇ ಇದೆ. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಎಲ್ಲ ಅನಾರೋಗ್ಯಗಳ ಚಿಕಿತ್ಸೆಗೆ ಸುಮಾರು ೩೫೦ ಔಷಧಿಗಳು ಸಾಕು. ಆದರೆ ನಮ್ಮ ದೇಶದಲ್ಲಿ ೭೫೦೦೦ಕ್ಕೂ ಹೆಚ್ಚಿನ ಔಷಧಿಗಳು ಮಾರಾಟವಾಗುತ್ತಿವೆ ಎಂದರೆ ನಮ್ಮ ಔಷಧಿ ವ್ಯವಸ್ಥೆ ಎಷ್ಟು ಅಧ್ವಾನವಾಗಿದೆ ಎಂಬುದು ಯಾರಿಗಾದರೂ ಅರ್ಥವಾಗುತ್ತದೆ. ಅಗತ್ಯ ಔಷಧಗಳ ಸರಬರಾಜು ಕೂಡ ಕ್ರಮವಾಗಿಲ್ಲ.

**ಅನಾರೋಗ್ಯ ನಿವಾರಣೆ ಮತ್ತು ಆರೋಗ್ಯವರ್ಧನಾ ಕ್ರಮಗಳ ಉದಾಸೀನ**

ಶೇಕಡಾ ೮೦ರಷ್ಟು ಕಾಯಿಲೆ ಕಸಾಲೆಗಳು ಬರದಂತೆ ನಿವಾರಿಸಬಹುದು. ಆದರೆ ಇದರ ಬಗ್ಗೆ ಜನರಿಗೂ ಅಸಡ್ಡೆ, ವೈದ್ಯರಿಗೂ ಉದಾಸೀನ. ''ಕಾಯಿಲೆ ಬರಿಸಿಕೊಳ್ಳಿ. ಆಮೇಲೆ ನಮ್ಮಲ್ಲಿಗೆ ಚಿಕಿತ್ಸೆಗೆ ಬನ್ನಿ'' ಇದು ಖಾಸಗಿ ಕ್ಷೇತ್ರದ ಆಹ್ವಾನ. ಮುಂಜಾಗ್ರತಾ ಕ್ರಮವು ಚಿಕಿತ್ಸೆಗಿಂತಲೂ ಉತ್ತಮ ಹಾಗೂ ಮಿತವ್ಯಯಕಾರಿಯಾದದ್ದು ಎಂಬುದನ್ನು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ನಮ್ಮ ಆರೋಗ್ಯ ಸೌಧ, ನಾಲ್ಕು ಕಂಬಗಳ ಮೇಲೆ ನಿಂತಿದೆ. ಒಂದನೇ ಕಂಬ : ಹಿತಮಿತವಾದ ಪುಷ್ಟಿಕರ ಆಹಾರ ಸೇವನೆ. ಎರಡನೇ ಕಂಬ : ವೈಯಕ್ತಿಕ ಮತ್ತು ಪರಿಸರದ ಸ್ವಚ್ಛತೆ. ಮೂರನೇ ಕಂಬ : ಶಾರೀರಿಕ ವ್ಯಾಯಾಮ. ನಾಲ್ಕನೇ ಕಂಬ : ಪ್ರಶಾಂತ ಮನಸ್ಸು ಮತ್ತು ನೆಮ್ಮದಿ.

**ಆಹಾರ :** ನಾವು ತಿನ್ನುವ ಆಹಾರದಲ್ಲಿ ಹೆಚ್ಚು ಹಣ್ಣು, ತರಕಾರಿ, ಸೊಪ್ಪು, ಕಾಳುಗಳಿರಲಿ. ಹಬೆಯಲ್ಲಿ ಅಥವಾ ನೀರಿನಲ್ಲಿ ಬೆಂದ ಆಹಾರವಿರಲಿ. ಎಣ್ಣೆ- ಬೆಣ್ಣೆಯಲ್ಲಿ ಕರಿದ ಪದಾರ್ಥಗಳು ಹಾಗೂ ಸಿಹಿತಿಂಡಿಗಳು ಬಹಳ ಕಡಿಮೆ ಇರಲಿ. ದಿನಕ್ಕೆ ಮೂರುಸಲ ಮಾತ್ರ, ವೇಳೆಗೆ ಸರಿಯಾಗಿ, ಗಡಿಬಿಡಿ ಇಲ್ಲದೆ, ಸಾವಧಾನವಾಗಿ, ಬಂಧುಮಿತ್ರರೊಡನೆ ಕುಳಿತು ಆಹಾರ ಸೇವಿಸಿ. ಹಾದಿ ಬೀದಿಯಲ್ಲಿ ಮಾರಾಟವಾಗುವ ಪದಾರ್ಥಗಳನ್ನು ತಿನ್ನಬೇಡಿ. ಸ್ವಚ್ಛತೆ, ನಿತ್ಯ ಸ್ನಾನ, ಮಡಿಬಟ್ಟೆ ಜೊತೆಗೆ ನೀವು ವಾಸಿಸುವ ಮನೆ, ಕೆಲಸ ಮಾಡುವ ಸ್ಥಳ, ಸುತ್ತಮುತ್ತಲಿನ ಪರಿಸರವನ್ನು ಚೊಕ್ಕಟವಾಗಿಡಿ. ಗಿಡಮರಗಳನ್ನು ಬೆಳೆಸಿ. ಮನೆಯೊಳಗೆ ಹೊರಗೆ ಒಳ್ಳೆಯ ಗಾಳಿ ಬೆಳಕಿರಲಿ.

**ವ್ಯಾಯಾಮ :** ನಿತ್ಯ ನಡಿಗೆ ಅತ್ಯುತ್ತಮ ವ್ಯಾಯಾಮ. ವಾಹನಗಳನ್ನು ಬಿಟ್ಟು ಹೆಚ್ಚೆಚ್ಚು ನಡೆಯಿರಿ. ಲಿಫ್ಟ್ ಬಿಟ್ಟು ಮೆಟ್ಟಿಲು ಹತ್ತಿ. ಟೀವಿ ವೀಕ್ಷಣೆ ತಪ್ಪಿಸಿ. ಬಯಲಲ್ಲಿ ಹೋಗಿ ಆಟವಾಡಿ. ಸೈಕಲ್ ತುಳಿಯಿರಿ, ಈಜು ಹೊಡೆಯಿರಿ.

**ಪ್ರಶಾಂತ ಮನಸ್ಸು :** ನಿತ್ಯ ತೃಪ್ತಿ. ನಿಮಗೆ ಲಭ್ಯವಾದದ್ದರಲ್ಲಿ ನಿಮ್ಮ ಸಾಧನೆಯಲ್ಲಿ ಸಂತೋಷ ಕಾಣಿ. ಮಾಡುವ ಎಲ್ಲ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡಿ. ಸರಳ ಜೀವನ ಮಾಡಿ. ನಕಾರಾತ್ಮಕ ಯೋಚನೆಗಳನ್ನು ಬಿಟ್ಟು ಸಕಾರಾತ್ಮಕ ಆಲೋಚನೆಗಳನ್ನು ಮಾಡಿ. ನಿಧಾನಗತಿಯ ಆಶಾವಾದದ ಜೀವನಶೈಲಿಯನ್ನು ಅಳವಡಿಸಿಕೊಳ್ಳಿ.

ಆರೋಗ್ಯವಂತರಾಗಿ ಬದುಕಿ. ಆಸ್ಪತ್ರೆ-ವೈದ್ಯರುಗಳಿಂದ, ಔಷಧಿಗಳಿಂದ ದೂರವಿರಲು ಖಂಡಿತ ಸಾಧ್ಯವಿದೆ.

ಸಮೀಪದಲ್ಲಿರುವ ಒಬ್ಬ ವೈದ್ಯರ ಪರಿಚಯ ಮಾಡಿಕೊಳ್ಳಿ. ನಿಮ್ಮ ಮತ್ತು ನಿಮ್ಮ ಮನೆಯವರ ಕಾಯಿಲೆ-ಕಸಾಲೆಗಳಿಗೆ ಆ ವೈದ್ಯರನ್ನೇ ಸಂಪರ್ಕಿಸಿ. ನಿಮ್ಮ ಮತ್ತು ನಿಮ್ಮ ಮನೆಯವರ ಕಾಯಿಲೆಗಳ ಬಗ್ಗೆ ತಿಳಿದುಕೊಳ್ಳಿ. ಕಡಿಮೆ ಖರ್ಚಿನ ಚಿಕಿತ್ಸಾ ವಿಧಾನಗಳ ಬಗ್ಗೆ ವೈದ್ಯರೊಡನೆ ಚರ್ಚಿಸಿ. ಖಾಸಗಿ ಆಸ್ಪತ್ರೆಗಳಿಗೆ ಹೋದಾಗ, ಔಷಧಗಳನ್ನು ಖರೀದಿಸುವಾಗ, ತುಟ್ಟಿಯ ತಪಾಸಣೆಗಳನ್ನು ಮಾಡಿಸುವಾಗ, ಶಸ್ತ್ರಕ್ರಿಯೆ ಮಾಡಿಸಿಕೊಳ್ಳುವಾಗ ಎಚ್ಚರಿಕೆಯಿಂದಿರಿ. ನಿಮ್ಮ ಎಲ್ಲಾ ಕಾಯಿಲೆ, ಚಿಕಿತ್ಸೆಗಳ ವಿವರಗಳನ್ನು ಒಂದು ಫೈಲ್‌ನಲ್ಲಿ ಹಾಕಿ ಅಥವಾ ಡೈರಿಯಲ್ಲಿ ಬರೆಯಿರಿ. ನಿಮ್ಮ ಅನಾರೋಗ್ಯದ ಚರಿತ್ರೆ, ಮುಂದೆ ನಿಮ್ಮ ನೆರವಿಗೆ ಬರುತ್ತದೆ. ಬಳಕೆದಾರರಾಗಿ ನಿಮ್ಮ ಹಕ್ಕುಗಳನ್ನು ತಿಳಿದುಕೊಳ್ಳಿ. ಸರ್ಕಾರಿ ಮತ್ತು ಖಾಸಗಿ ಆರೋಗ್ಯ ಸೇವೆಗಳ ಸುಧಾರಣೆಯಲ್ಲಿ ನಿಮ್ಮ ಪಾತ್ರವೂ ಇದೆ ಎಂಬುದನ್ನು ಮರೆಯಬೇಡಿ.



ಡಾ|| ಸಿ. ಆರ್. ಚಂದ್ರಶೇಖರ್
ನಂ. ೩೮, ೨ನೇ ಕ್ರಾಸ್, ಸಿಂಡಿಕೇಟ್ ಬ್ಯಾಂಕ್ ಕಾಲೋನಿ, ಅರೆಕೆರೆ, ಬನ್ನೇರುಘಟ್ಟರಸ್ತೆ, ಬೆಂಗಳೂರು - [illegible]

# ರಾಮಾಯಣದಲ್ಲಿ ಜ್ಯೋತಿಷ್ಯ!



**ಈಗ ಮುಖ್ಯವಾಗಿ ಚರ್ಚಿಸಬೇಕಾದ ವಿಷಯವೆಂದರೆ ನಮಗೆ ಉಪಲಬ್ಧವಾಗಿರುವ ರಾಮಾಯಣ ಕಾವ್ಯದಲ್ಲಿ ಸಿಗುವ ಬಹಳಷ್ಟು ಗ್ರಹಗತಿಗಳ ಸ್ಥಿತಿಗಳು ಬಹಳ ಹಿಂದೆ ಸಂಭವಿಸಿರಬಹುದಾದ ಘಟನೆಗಳಿಗಾಗಲೀ ಅಥವಾ ಸಂಸ್ಕೃತ ಮಹಾಕಾವ್ಯದ ತಿರುಳಿನ ಭಾಗದ ರಚನೆಯಾದ ಸಂದರ್ಭದಲ್ಲಾಗಲೀ ಉಂಟಾಗಿರಲು ಸಾಧ್ಯವೇ ? ಈ ಚರ್ಚೆಗೆ ಮುಖ್ಯವಾದ ಅಡಿಪಾಯವೆಂದರೆ ಪ್ರಾಚೀನ ಭಾರತದಲ್ಲಿ ಗ್ರಹಗತಿಗಳ ಖಗೋಲಜ್ಞಾನದ ಬೆಳವಣಿಗೆ.**

**ಡಾ|| ಎಸ್. ಬಾಲಚಂದ್ರರಾವ್**




*ತತಶ್ಚ ದ್ವಾದಶೇ ಮಾಸೇ ಚೈತ್ರೇ ನಾವಮಿಕೇ ತಿಥೌ*
*ನಕ್ಷತ್ರೇ ಅದಿತಿ ದೈವತ್ಯೇ ಸ್ವೋಚ್ಚಸಂಸ್ಥೇಷು ಪಂಚಸು ।*
*ಗ್ರಹೇಷು ಕರ್ಕಟೇ ಲಗ್ನೇ ವಾಕ್ಪತಾವಿಂದುನಾ ಸಹ ॥*

– ಬಾಲಕಾಂಡ, ೧೮ನೇ ಸರ್ಗ, ೮-೯

''ಹನ್ನೆರಡನೆಯ ಮಾಸವಾದ ಚೈತ್ರದಲ್ಲಿ, ನವಮೀ ತಿಥಿಯಂದು ದೈವ (ಪುನರ್ವಸು) ನಕ್ಷತ್ರದಲ್ಲಿ, ಐದು ಗ್ರಹಗಳು ಉಚ್ಚವಾಗಿದ್ದು, ಕರ್ಕಟಕ ಲಗ್ನದಲ್ಲಿ ಗುರುವು ಚಂದ್ರನೊಂದಿಗಿದ್ದಾಗ (ಕೌಸಲ್ಯೆಯು ಜಗದೊಡೆಯ ಶ್ರೀರಾಮನಿಗೆ ಜನ್ಮವಿತ್ತಳು).''

ಪ್ರಾಚೀನ ಕಾಲದ ಶಿಲಾಶಾಸನಗಳಲ್ಲಿ ಮತ್ತು ತಾಮ್ರ ಶಾಸನಗಳಲ್ಲಿ ಅವುಗಳನ್ನು ಬರೆಸಲಾದ ಕಾಲದ ತಿಥಿ, ನಕ್ಷತ್ರ, ವಾರ ಮತ್ತು ವರ್ಷಗಳನ್ನು ಉಲ್ಲೇಖಿಸುವುದು ವಾಡಿಕೆ. ಇವುಗಳ ಆಧಾರದ ಮೇಲೆ ಆ ಶಾಸನಗಳ ಕಾಲವನ್ನು ನಿರ್ಣಯಮಾಡಲು ಸಾಧ್ಯವಾಗುತ್ತದೆ. ಇಷ್ಟೇ ಅಲ್ಲದೆ, ಶಾಸನಗಳಲ್ಲಿ ಉಲ್ಲಿಖಿತವಾದ ದಿನಗಳಲ್ಲಿ ಅಮಾವಾಸ್ಯೆ, ಪೌರ್ಣಮಿ, ಸಂಕ್ರಮಣ, ಸೂರ್ಯ ಅಥವಾ ಚಂದ್ರ ಗ್ರಹಣ ಮುಂತಾದ ವಿಶೇಷ ಘಟನೆಗಳು ಸಂಭವಿಸಿದ್ದಲ್ಲಿ ಅವುಗಳನ್ನು ಉಲ್ಲೇಖಿಸಿರುತ್ತಾರೆ. ಇಂತಹ ದತ್ತಾಂಶಗಳನ್ನು ಆಧರಿಸಿ ಖಗೋಲ ಗಣಿತದ ಸಹಾಯದಿಂದ ಕ್ರಿಶ್ಚಿಯನ್ ಕ್ಯಾಲೆಂಡರ್ ಪ್ರಕಾರ ದಿನಾಂಕಗಳನ್ನು ನಿರ್ಧರಿಸಲು ಸಾಧ್ಯ.

ಆದರೆ ಬಹಳ ಪ್ರಾಚೀನ ಕಾಲದಲ್ಲಿ ಸಂಭವಿಸಿರಬಹುದಾದ ಘಟನೆಗಳಿಗೆ – ಉದಾಹರಣೆಗೆ ರಾಮಾಯಣ ಮತ್ತು ಮಹಾಭಾರತ – ಸಂಬಂಧಿಸಿದಂತೆ ಶಿಲಾಶಾಸನಗಳಾಗಲೀ ತಾಮ್ರಶಾಸನಗಳಾಗಲೀ ಇರುವುದಿಲ್ಲ. ಆದ್ದರಿಂದ ಅಂತಹ ಬಹಳ ಪ್ರಾಚೀನ ಘಟನೆಗಳ ಕಾಲ ನಿರ್ಣಯ ಮಾಡಲು ಮುಖ್ಯವಾಗಿ ಎರಡು ವಿಧಾನಗಳು: (೧) ಪುರಾತತ್ತ್ವಶಾಸ್ತ್ರ (ಆರ್ಕಿಯಾಲಜಿ) ಮತ್ತು (೨) ಉಪಲಬ್ಧವಾಗಿರುವ ಗ್ರಂಥಗಳು. ಮುಖ್ಯವಾಗಿ ರಾಮಾಯಣ ಮತ್ತು ಮಹಾಭಾರತಗಳ ಬಗ್ಗೆ ಹೇಳುವುದಾದರೆ ಅವುಗಳಲ್ಲಿ ಬಹಳಷ್ಟು ಖಗೋಲಿಕ ಉಲ್ಲೇಖಗಳು ಸಿಗುತ್ತವೆ. ಇಂತಹ ಗ್ರಹಗಳ ಸ್ಥಾನಗಳ ಆಧಾರದ ಮೇಲೆ ರಾಮಾಯಣ ಮತ್ತು ಮಹಾಭಾರತಗಳ ಘಟನೆಗಳ ಕಾಲವನ್ನು ನಿರ್ಧರಿಸುವ ಪ್ರಯತ್ನಗಳು ಬಹಳಷ್ಟು ವರ್ಷಗಳಿಂದ ನಡೆಯುತ್ತಲೇ ಬಂದಿವೆ. ಈಚಿನ ದಿನಗಳಲ್ಲಿ ಗ್ರಹಗತಿಗಳನ್ನು ಕಂಡುಹಿಡಿಯುವ ಕಂಪ್ಯೂಟರ್ ತಂತ್ರಾಂಶ (ಸಾಫ್ಟ್‌ವೇರ್)ಗಳೂ ಲಭ್ಯವಿರುವುದರಿಂದ ವಿದ್ವಾಂಸರ ಮಟ್ಟದಲ್ಲಿ ರಾಮಾಯಣ, ಪುರಾಣಗಳು ಅಷ್ಟೇ ಅಲ್ಲದೆ ವೇದಗಳ ಕಾಲನಿರ್ಣಯದ ಪ್ರಯತ್ನಗಳು ಬಿರುಸಾಗಿಯೇ ನಡೆಯುತ್ತಿವೆ.

ಈ ಪ್ರಯತ್ನಗಳ ಸಾಧಕಬಾಧಕಗಳನ್ನು ವಿಮರ್ಶಿಸುವ ಮೊದಲು ಒಂದು ಮುಖ್ಯವಾದ ಅಂಶವನ್ನು ನಾವು ಮನದಟ್ಟು ಮಾಡಿಕೊಳ್ಳಬೇಕಾಗುತ್ತದೆ. ರಾಮಾಯಣದ ಉದಾಹರಣೆಯನ್ನು ತೆಗೆದುಕೊಂಡರೆ ಅಲ್ಲಿ ಹೇಳಿರುವ ಘಟನೆಗಳು ಬಹುಶಃ ಸಂಭವಿಸಿರುವುದಕ್ಕೂ 'ರಾಮಾಯಣ' ಸಂಸ್ಕೃತ ಕಾವ್ಯದ ರಚನೆಗೂ ಬಹಳ ದೀರ್ಘವಾದ ಕಾಲಾವಧಿಯು ಇರುತ್ತದೆ. ಈ ಕಾಲಾವಧಿಯು ಬಹಳ ಶತಮಾನಗಳಷ್ಟೋ ಸಹಸ್ರಮಾನಗಳಷ್ಟೋ ಇರಬಹುದು. ಐತಿಹಾಸಿಕವಾಗಿ ಅಥವಾ ಸಾಮಾಜಿಕವಾಗಿ ಬಹಳ

ಮುಖ್ಯವಾದ ಘಟನೆಗಳು ಸಂಭವಿಸಿದ ನಂತರ ಬಹಳ ದೀರ್ಘಕಾಲ ಅವುಗಳ ನೆನಪುಗಳು ಜಾನಪದ ಹಾಡುಗಳ ಅಥವಾ ಕಥೆಗಳ ಮೂಲಕ ಚಲಾವಣೆಯಲ್ಲಿರುತ್ತವೆ. ಈ ದೀರ್ಘ ಕಾಲಾವಧಿಯಲ್ಲಿ ನಿಜವಾಗಿ ನಡೆದಿರಬಹುದಾದ ಘಟನೆಗಳ ನಿರೂಪಣೆಗಳಲ್ಲಿ ಸಾಕಷ್ಟು ಬದಲಾವಣೆಗಳು ಉತ್ಪ್ರೇಕ್ಷೆಗಳ, ವೈಭವೀಕರಣಗಳ, ಹೊಸ ಸೇರ್ಪಡೆಗಳ ಹೀಗೆ ನಾನಾರೂಪಗಳಲ್ಲಿ ವ್ಯತ್ಯಾಸಗಳು ಆಗುತ್ತಲೇ ಇರುತ್ತವೆ. ಮುಂದೆ ಈ ಘಟನೆಗಳೇ 'ಶಿಷ್ಟ' ಸಾಹಿತ್ಯದ ಭಾಗವಾಗುತ್ತವೆ. ಹೀಗೆ ಬಹಳ ಕಾಲದ ನಂತರ ಸಾಹಿತ್ಯರೂಪದಲ್ಲಿ ಕಾಣಿಸಿಕೊಳ್ಳುವ ಘಟನೆಗಳ ಕಾಲನಿರ್ಣಯ ಎಷ್ಟು ವಿಶ್ವಾಸಾರ್ಹ ?

ಖಾಗೋಲಿಕ ಉಲ್ಲೇಖಗಳನ್ನು ಆಧರಿಸಿ ಕಾಲನಿರ್ಣಯವನ್ನು ಮಾಡುವ ವಿದ್ವಾಂಸರ ಸಮರ್ಥನೆ ಏನೆಂದರೆ, ''ಈ ಉಲ್ಲೇಖಗಳನ್ನು ಖಗೋಲಗಣಿತದ ವಿಧಾನಗಳಿಂದ ತಾಳೆ ನೋಡಲು ಸಾಧ್ಯ. ಕೇವಲ ಊಹಾಪೋಹಗಳಿಂದ ಅಂತಹ ಉಲ್ಲೇಖಗಳನ್ನು ನೀಡಲು ಸಾಧ್ಯವಿಲ್ಲ. ಅಷ್ಟಕ್ಕೂ ಗ್ರಹಗತಿಗಳು ಖಗೋಲ ವಿಜ್ಞಾನದ ನಿಯಮಗಳ ಪ್ರಕಾರ ಚಲಿಸುತ್ತವೆಯೇ ಹೊರತು ನಮ್ಮ ಇಷ್ಟಾನಿಷ್ಟಗಳ ಪ್ರಕಾರವಲ್ಲ!''

ಇನ್ನು ಸಂಪ್ರದಾಯಸ್ಥರು ಗಾಢವಾಗಿ ನಂಬುವ ವಿಷಯಗಳೆಂದರೆ (೧) ರಾಮಾಯಣವು ನಿಜವಾಗಿಯೂ ತ್ರೇತಾಯುಗದಲ್ಲಿ ಸಂಭವಿಸಿತು, (೨) ಸಮಗ್ರ ಸಂಸ್ಕೃತ ರಾಮಾಯಣವನ್ನೂ ವಾಲ್ಮೀಕಿ ಮಹರ್ಷಿಗಳೇ ರಚಿಸಿದರು ಮತ್ತು (೩) ವಾಲ್ಮೀಕಿಯೂ ರಾಮಾಯಣದ ಕಥೆಯಲ್ಲಿ ನೇರವಾಗಿ ಪಾಲ್ಗೊಳ್ಳುವ ಓರ್ವ ವ್ಯಕ್ತಿಯಾಗಿರುವುದರಿಂದ ರಾಮಾಯಣದ ಘಟನೆಗಳು ಐತಿಹಾಸಿಕವಾಗಿ ವಾಲ್ಮೀಕಿಯ ಕಾಲದಲ್ಲೇ ಜರುಗಿದವು.

ಮಹಾಭಾರತದಲ್ಲಿಯೂ ಅದರ ಕರ್ತೃಗಳಾದ ವ್ಯಾಸಮಹರ್ಷಿಗಳು ಅಲ್ಲಿ ಹೇಳಿರುವ ಬಹಳಷ್ಟು ಘಟನೆಗಳಲ್ಲಿ ನೇರವಾಗಿ ಪಾಲ್ಗೊಂಡಿರುವುದನ್ನು ಕಾಣುತ್ತೇವೆ. ಸಾಹಿತ್ಯಿಕ ದೃಷ್ಟಿಯಿಂದ ಒಂದು ಕಾವ್ಯ ಅಥವಾ ನಾಟಕದ ಕರ್ತೃವೂ ಕಥೆಯ ಒಂದು ಭಾಗವಾಗುವುದು ಆ ಸಾಹಿತ್ಯಪ್ರಕಾರದ ಒಂದು ವಿಶೇಷವಾದ ತಂತ್ರ. ಈ ಅಂಶವನ್ನು ಅರ್ಥಮಾಡಿಕೊಳ್ಳದೆ ಅಂತಹ ಉಲ್ಲೇಖಗಳನ್ನು ವಾಸ್ತವವಾಗಿ ಸಂಭವಿಸಿದ ಘಟನೆಗಳೆಂದು ನಂಬಿಕೊಂಡಿದ್ದರೆ ಮುಕ್ತ ಮನಸ್ಸಿನಿಂದ ಯಾವ ವಿಮರ್ಶೆಯನ್ನೂ ಮಾಡಲು ಸಾಧ್ಯವಿಲ್ಲ.

ಕೆಲವು ವಿದ್ವಾಂಸರ ಪ್ರಕಾರ ರಾಮಾಯಣ ಕಾವ್ಯದಲ್ಲಿ ಹೊಸಹೊಸ ಸೇರ್ಪಡೆಗಳು ಕ್ರಿ.ಶ. ಹತ್ತನೇ ಶತಮಾನದವರೆಗೂ ಆಗಿವೆ. ರಾಮಾಯಣದ 'ಅಧಿಕೃತ ಆವೃತ್ತಿ'ಯ ಸಂಪಾದಕರಲ್ಲಿ ಒಬ್ಬರಾದ ವಿದ್ವಾನ್ ಪ್ರೊ॥ ಭಟ್ ಅವರು ನಿರ್ದಿಷ್ಟವಾದ ದಾಖಲೆಗಳ ಮೂಲಕ ಸ್ಪಷ್ಟಪಡಿಸಿರುವುದೇನೆಂದರೆ ರಾಮಾಯಣದ ಗಾತ್ರವನ್ನು ಹೆಚ್ಚಿಸುವಲ್ಲಿ ಕ್ರಿ.ಶ. ೬ನೇ ಶತಮಾನದಿಂದಲೂ ಪ್ರಯತ್ನಗಳು ನಡೆದೇ ಇವೆ. ವಿಶೇಷವಾಗಿ ಕ್ರಿ.ಶ. ೧೦೨೦ರಿಂದ ಕ್ರಿ.ಶ. ೧೪೦೦ರ ಅವಧಿಯಲ್ಲಿ ಬಹಳ ಹೆಚ್ಚಿನ ಸೇರ್ಪಡೆಗಳಾಗಿವೆ. ಪ್ರೊ॥ ಪಿ. ವಿ. ಕಾಣೆಯವರ ಪ್ರಕಾರ ಬಹಳಷ್ಟು ವಿಸ್ತೃತವಾದ ಧಾರ್ಮಿಕ ವ್ರತಗಳ ಸೇರ್ಪಡೆ ಕ್ರಿ.ಶ. ೧೦ನೇ ಶತಮಾನದ ನಂತರವೇ ಆಯಿತು. ಸಾಮಾನ್ಯವಾಗಿ ಬರೋಡೆಯ ಅಧಿಕೃತ ಆವೃತ್ತಿಯ ಸಂಪಾದಕ ವಿದ್ವಾಂಸರ ಪ್ರಕಾರ ರಾಮಾಯಣದಲ್ಲಿ ಬಾಲಕಾಂಡದ ಬಹುಭಾಗದ ಸೇರ್ಪಡೆಯು ಮಹಾಕಾವ್ಯದ ಗಾತ್ರದ ಬೆಳವಣಿಗೆಯ ಎರಡನೇ ಮತ್ತು ಮೂರನೇ ಹಂತಗಳಲ್ಲಿಯೂ ಮತ್ತು ಉತ್ತರಕಾಂಡದ ಸೇರ್ಪಡೆಯು ನಾಲ್ಕನೇ ಹಂತದಲ್ಲಿಯೂ ಆಗಿವೆ. ಪ್ರಕ್ಷಿಪ್ತ ಭಾಗಗಳಲ್ಲಿ ಬುದ್ಧ, ತಥಾಗತ, ಶ್ರಮಣ ಮುಂತಾದವುಗಳ ಉಲ್ಲೇಖಗಳಿವೆ. 'ತ್ರೇತಾಯುಗ'ದ ವಾಲ್ಮೀಕಿ ಮಹರ್ಷಿ ಮುಂಬರುವ ಬೌದ್ಧಾವತಾರದ ಮತ್ತು ಬೌದ್ಧಮತದ ಬಗ್ಗೆ ತಮ್ಮ ದಿವ್ಯಚಕ್ಷುಸ್ಸಿನಿಂದ ಭವಿಷ್ಯವನ್ನು ಕಂಡಿದ್ದರು ಎಂದು ಬಾಲಿಶವಾಗಿ ನಮ್ಮ ಸಂಪ್ರದಾಯವಾದಿಗಳು ವಾದಿಸಲಾರರು ಎಂದು ನಂಬೋಣ !

ಬಾಲಕಾಂಡದಲ್ಲಿ ಉಲ್ಲೇಖಿಸಿರುವ ಶ್ರೀರಾಮನ ಕುಂಡಲಿಯಲ್ಲಿ ಉಚ್ಚವಾಗಿರುವ ಐದು ಗ್ರಹಗಳನ್ನು ಶ್ಲೋಕದಲ್ಲಿ ಹೆಸರಿಸಿಲ್ಲ. ಆದರೆ ಗುರುಗ್ರಹವು ಚಂದ್ರನೊಂದಿಗೆ ಕರ್ಕಟಕ ಲಗ್ನದಲ್ಲಿ ಇರುವುದರಿಂದ ಉಚ್ಚವಾಗಿರುವ ಈ ಐದು ಗ್ರಹಗಳೆಂದರೆ ರವಿ, ಶುಕ್ರ, ಗುರು, ಶನಿ ಹಾಗೂ ಕುಜರೆಂದು ಸ್ಪಷ್ಟ. ಫಲಜ್ಯೋತಿಷಿಗಳ ಪ್ರಕಾರ ರಾಹು ಮತ್ತು ಕೇತುಗಳು ಮುಖ್ಯವಾದ 'ದುಷ್ಟಗ್ರಹಗಳು' ಆಗಿದ್ದರೂ ಶ್ರೀರಾಮನ ಜಾತಕದಲ್ಲಿ ಅವುಗಳನ್ನು ಉಲ್ಲೇಖಿಸಿಲ್ಲ ಎಂಬುವುದು ಗಮನಾರ್ಹ. ಜನ್ಮವು ಚೈತ್ರಮಾಸದಲ್ಲಿ ಉಂಟಾಗಿದ್ದು ರವಿಯು ಮೇಷರಾಶಿಯಲ್ಲಿ ಉಚ್ಚನಾಗಿದ್ದಾನೆ. ಬುಧನ ಉಚ್ಚಸ್ಥಾನ ಕನ್ಯಾರಾಶಿಯಾಗಿದೆ. ಆದರೆ ಖಗೋಲಶಾಸ್ತ್ರದ ಪ್ರಕಾರ ಬುಧನು ರವಿಯಿಂದ ಸುಮಾರು ೨೮° ಕೋನಕ್ಕಿಂತ ಹೆಚ್ಚು ದೂರದಲ್ಲಿರಲು ಸಾಧ್ಯವಿಲ್ಲ. ಆದ್ದರಿಂದ ಬುಧನು ರವಿಗೆ ಸಮೀಪವಾಗಿ ಮೀನ, ಮೇಷ ಮತ್ತು ವೃಷಭರಾಶಿಗಳ ಪೈಕಿ ಒಂದರಲ್ಲಿ ಮಾತ್ರ ಇರಲು ಸಾಧ್ಯ. ಇದರಿಂದಾಗಿ 'ಬುಧಾದಿತ್ಯ ಯೋಗ' ಇರಲು ಅವಕಾಶವಾಗುತ್ತದೆ! ಶ್ರೀಮದ್ ರಾಮಾಯಣದ ವ್ಯಾಖ್ಯಾನಕಾರರ ಪ್ರಕಾರ ಬುಧನು ರವಿಯೊಂದಿಗೆ ಮೇಷದಲ್ಲಿರಬೇಕು. ಫಲಜ್ಯೋತಿಷಿಗಳ ಪ್ರಕಾರ ಶ್ರೀರಾಮನ ಜಾತಕದಲ್ಲಿ 'ಕೇಮದ್ರುಮ ಯೋಗ' ಇರುವುದರಿಂದ ಆತ ರಾಜನಾದರೂ ಕೂಡ ದಾರಿದ್ರ್ಯವನ್ನೇ ಅನುಭವಿಸಬೇಕಾಯಿತು. ಐದು ಗ್ರಹಗಳು ಉಚ್ಚವಾಗಿರುವುದರಿಂದ ಶ್ರೀರಾಮ ರಾಜಾಧಿರಾಜನಾದನು. ಹತ್ತನೇ ಮನೆಯ ಅಧಿಪತಿ (ಕುಜ) ಹತ್ತನೇ ರಾಶಿಯಲ್ಲಿ (ಮಕರದಲ್ಲಿ) ಉಚ್ಚನಾಗಿರುವುದರಿಂದ ಈ ಯೋಗವನ್ನುಳ್ಳ ವ್ಯಕ್ತಿಯು ರಾಜರ ರಾಜನಾದ ಎಂಬುದು ನಮ್ಮ ಫಲಜ್ಯೋತಿಷಿಗಳ ಅಂಬೋಣ. ಹಾಗೆಯೇ ಕಾಡಿಗೆ ಹೋದರೂ ಅಲ್ಲಿಯೂ ಕೂಡ 'ವನರಾಜ' ಎಂದೇ ಗೌರವಿಸಲ್ಪಟ್ಟನಂತೆ !

**ಶ್ರೀರಾಮನ ಜಾತಕ ನೈಜವೇ ?**

ಜನ್ಮನಕ್ಷತ್ರವು ಪುನರ್ವಸುವಾದ್ದರಿಂದ ಚಂದ್ರನ ಸ್ಥಾನವು ಮೇಷಾದಿಯಿಂದ ೮೦°ಯಿಂದ ೯೩° ೨೦' ಕೋನಾವಧಿಯೊಳಗಿರಬೇಕು. ಅಷ್ಟೇ ಅಲ್ಲದೆ, ಚಂದ್ರನು ಕರ್ಕಟರಾಶಿಯಲ್ಲಿ ಇರುವುದರಿಂದ ೯೦°ಯಿಂದ ೧೨೦° ಅಂತರದಲ್ಲಿರಬೇಕು. ಈ ಎರಡು ಅಂಶಗಳನ್ನು ಒಟ್ಟಿಗೆ ಪರಿಗಣಿಸಿದಾಗ ಶ್ರೀರಾಮನ ಜಾತಕದಲ್ಲಿ ಚಂದ್ರನು ಪುನರ್ವಸು ನಕ್ಷತ್ರದ ನಾಲ್ಕನೇ ಪಾದದಲ್ಲಿ (೯೦°–೯೩° ೨೦' ಅವಧಿಯಲ್ಲಿ) ಮಾತ್ರ ಇರಲು ಸಾಧ್ಯ. ಜನ್ಮತಿಥಿಯು ಶುಕ್ಲ ಪಕ್ಷದ ನವಮಿಯಾದ್ದರಿಂದ ಸೂರ್ಯನಿಂದ ಚಂದ್ರನ ಕನಿಷ್ಠ ಕೋಣಾಂತರ ೯೬°(= ೮ x ೧೨°) ಇರಬೇಕು. ಆದ್ದರಿಂದ, ಚಂದ್ರನ ಸ್ಥಾನವು ನಿರ್ಧಾರಿತ ಎಂದಿಟ್ಟುಕೊಂಡರೆ ರವಿಯು ಮೀನರಾಶಿಯಲ್ಲಿ ಇರಬೇಕಾಗುತ್ತದೆಯೇ ಹೊರತು ಮೇಷದಲ್ಲಿ ಉಚ್ಚಸ್ಥಾನದಲ್ಲಲ್ಲ! ಇನ್ನು ಮೋಕ್ಷಕಾರಕನಾದ ಕೇತುವನ್ನು ಕೈಬಿಡಲು ಕಾರಣವೇನು ? ಶ್ರೀರಾಮಚಂದ್ರನು ಮಹಾವಿಷ್ಣುವಿನ ಅವತಾರವಾಗಿದ್ದು ''ಸ್ವರ್ಗಾಪವರ್ಗಾಸ್ಪದ ಭೂಮಿ ಭಾಗ''ವಾದ ನಮ್ಮ ಪವಿತ್ರವಾದ ಭಾರತದಲ್ಲೇ

| | | | |
|---|---|---|---|
| ಶುಕ್ರ | ರವಿ (ಬುಧ) | | |
| | ಶ್ರೀರಾಮಚಂದ್ರನ ಜನ್ಮಕುಂಡಲಿ | | ಲಗ್ನ ಗುರು ಚಂದ್ರ |
| ಕುಜ | | | |
| | | ಶನಿ | |

(ಅದೂ ಉತ್ತರಭಾಗದಲ್ಲೇ) ಅತಿ ಹೆಚ್ಚು ಅಧರ್ಮವು ತಾಂಡವವಾಡುತ್ತಿದ್ದುದರಿಂದ ಧರ್ಮ ಸಂಸ್ಥಾಪನಾರ್ಥವಾಗಿ 'ಜನ್ಮವನ್ನು' ತಾಳಿದನು. ಆತನ ಲಕ್ಷೋಪಲಕ್ಷ ಭಕ್ತಾದಿಗಳಿಗೆ ಮೋಕ್ಷವನ್ನು ನೀಡಲಿರುವ ಪರಮಾತ್ಮನ ಜಾತಕದಲ್ಲಿ ಮೋಕ್ಷಕಾರಕನಾದ ಕೇತುವಿಗೆ ಕೆಲಸವಾದರೂ ಏನು ?

ಬಾಲಕಾಂಡದಲ್ಲಿ ನೀಡಿರುವ ಗ್ರಹಗಳ ಸ್ಥಾನಗಳು ಖಗೋಲ ವಿಜ್ಞಾನ ರೀತ್ಯಾ ಅಸಂಭವನೀಯ ! ಹೀಗಿದ್ದರೂ – ಜಟ್ಟಿ ಬಿದ್ದರೂ ಮೀಸೆ ಮಣ್ಣಾಗಲಿಲ್ಲ ಎಂಬಂತೆ – ನಮ್ಮ ಸರ್ವಜ್ಞರಾದ ಫಲಜ್ಯೋತಿಷ ಕೋವಿದರು ನೀಡಬಹುದಾದ ವಿವರಣೆ – ''ಇಂದು ಅಸಂಭವನೀಯವೆಂದು ತೋರುವ ಗ್ರಹಗತಿಗಳು ಹಲವಾರು ದಶಲಕ್ಷ ವರ್ಷಗಳ ಹಿಂದೆ ತ್ರೇತಾಯುಗದಲ್ಲಿ ಸಾಧ್ಯವಿದ್ದಿರಬೇಕು. ಮಹರ್ಷಿ ವಾಲ್ಮೀಕಿಯ ರಾಮಾಯಣದ ನುಡಿಯಾಗಲೀ, ಮಹರ್ಷಿ ಪರಾಶರ ಪ್ರಣೀತ ಫಲ-ಜ್ಯೋತಿಷವಾಗಲೀ ಹೇಗೆ ತಾನೆ ಸುಳ್ಳಾಗಿರಲು ಸಾಧ್ಯ ?''

ಇಲ್ಲಿ ನಾವು ಜ್ಞಾಪಿಸಿಕೊಳ್ಳಬಹುದಾದ ಒಂದು ಸಂದರ್ಭವೆಂದರೆ ವರಾಹಮಿಹಿರನು ತನ್ನ **ಬೃಹಜ್ಜಾತಕ**ದಲ್ಲಿ ನೀಡಿರುವ ಒಂದು 'ರಾಜಯೋಗ' :

*ಮೃಗಮುಖೇ ಅರ್ಕತನಯಃ ತನುಸಂಸ್ಥಃ*
*ಕ್ರಿಯಕುಲೀರಹರಯೋ ಅಧಿಪಯುಕ್ತಾಃ ।*
*ಮಿಥುನತೌಲಿಸಹಿತೌ ಬುಧಶುಕ್ರೌ*
*ಯದಿ ತದಾ ಪೃಥುಯಶಾಃ ಪೃಥಿವೀಶಃ ॥*

– ಬೃಹಜ್ಜಾತಕ, ೧೧.೧೦

– ''ಶನಿಯು ಮಕರಲಗ್ನದಲ್ಲಿದ್ದು, ಮೇಷ, ಕಟಕ ಮತ್ತು ಸಿಂಹ (ರಾಶಿ)ಗಳು ಅವುಗಳ ಅಧಿಪತಿಗಳನ್ನು ಹೊಂದಿದ್ದು ಹಾಗೂ ಮಿಥುನ ಮತ್ತು ತುಲಾರಾಶಿಗಳು ಬುಧ ಮತ್ತು ಶುಕ್ರರನ್ನು (ಕ್ರಮವಾಗಿ) ಹೊಂದಿದ್ದರೆ, ಈ ಯೋಗದಲ್ಲಿ ಜನಿಸಿದ ವ್ಯಕ್ತಿಯು ಪ್ರಸಿದ್ಧ ರಾಜನಾಗುತ್ತಾನೆ'' (ಚಿತ್ರದಲ್ಲಿರುವ ಕುಂಡಲಿಯನ್ನು ನೋಡಿ).

ಈ ಮೇಲೆ ಹೇಳಿರುವ ಗ್ರಹಗಳ ಕೂಟದಲ್ಲಿ ಬುಧನು ರವಿಯಿಂದ ಇರಬಹುದಾದ ಗರಿಷ್ಠ ಮಿತಿಯಾದ ೨೮° ಕೋಣಾಂತರವನ್ನೂ

| | | | |
|---|---|---|---|
| | ಕುಜ | | ಬುಧ |
| | ರಾಜಯೋಗದ ಉದಾಹರಣೆ | | ಚಂದ್ರ |
| ಲಗ್ನ ಶನಿ | | | ರವಿ |
| | | ಶುಕ್ರ | |

ಮೀರಿದ್ದಾನೆ. ಹಾಗೆಯೇ ಬುಧ ಮತ್ತು ಶುಕ್ರರು ತಮ್ಮ ಮಧ್ಯೆ ಅಂತರವನ್ನು ೬೦ ಡಿಗ್ರಿಗಳಿಗಿಂತ ಹೆಚ್ಚಾಗಿ ಇರಿಸಿಕೊಂಡು ಖಗೋಲ ವಿಜ್ಞಾನದ ಪ್ರಕಾರ ಇರಬಹುದಾದ ೭೫ ಡಿಗ್ರಿ ಗರಿಷ್ಠ ಮಿತಿಯನ್ನು ನಿರ್ದಾಕ್ಷಿಣ್ಯವಾಗಿ ಉಲ್ಲಂಘಿಸಿದ್ದಾರೆ! ಆದ್ದರಿಂದ ವರಾಹಮಿಹಿರನು (ಅಥವಾ ಕಾಲಾಂತರದಲ್ಲಿ ಹಸ್ತಪ್ರತಿಗಳಲ್ಲಿ ದೋಷಗಳನ್ನು ಉಂಟಾಗಿಸಿರುವ ಲಿಪಿಕಾರರು) ಕೊಟ್ಟಿರುವ ಈ ಗ್ರಹಕೂಟವು ಖಗೋಲಶಾಸ್ತ್ರದ ಪ್ರಕಾರ ಅಸಾಧ್ಯ.

ಹೀಗಿದ್ದೂ ವರಾಹಮಿಹಿರನ **ಬೃಹಜ್ಜಾತಕ** ಸಂಸ್ಕೃತ ಕೃತಿಯನ್ನು ಆಂಗ್ಲಭಾಷೆಗೆ ಅನುವಾದ ಮಾಡಿದ ಪ್ರಸಿದ್ಧ ಜ್ಯೋತಿರ್ವಿದರೂ ಮತ್ತು ಇತಿಹಾಸಕಾರರೂ ಆದ ಬಿ. ಸೂರ್ಯನಾರಾಯಣ ರಾವ್ ಅವರು (ಬಿ. ವಿ. ರಾಮನ್ ಅವರ ತಾತಂದಿರು) ತಮ್ಮ 'ನೋಟ್ಸ್'ನಲ್ಲಿ ನೀಡಿರುವ ವಿವರಣೆಯು ಬಹಳ ಮೋಜಿನದಾಗಿದೆ – ''... ಬಹುಶಃ ಬೇರೆ ಗ್ರಹಗಳ ಗುಂಪೊಂದು, ಈಗಿರುವ ಗ್ರಹಗಳ ಚಲನೆಯ ವೇಗಕ್ಕಿಂತ ಸಾಕಷ್ಟು ಬೇರೆಯ ವೇಗದಲ್ಲಿ ಚಲಿಸಿದಾಗ ಇದು ಸಾಧ್ಯವಿದ್ದಿರಬಹುದು... ಗ್ರಹಗಳ ಸ್ಥಾನಗಳನ್ನು ಲೆಕ್ಕಾಚಾರ ಮಾಡುವುದರಲ್ಲಿ ಈಗಿರುವ ಗೊಂದಲಕ್ಕೆ ಕಾರಣವಾಗಿರುವ ಅಂಶವೆಂದರೆ, ಸರಿಯಾಗಿ ಲೆಕ್ಕಾಚಾರ ಮಾಡಿದ ಅಯನಾಂಶವಿಲ್ಲದಿರುವುದು.''

ಈ ಗೊಂದಲದಲ್ಲಿ ಅಯನಾಂಶವಂತೂ ಅಪರಾಧಿಯಲ್ಲ ಎಂಬುದು ಸುಸ್ಪಷ್ಟ. ಗ್ರಹಗಳ ಸಾಪೇಕ್ಷ (ರಿಲೆಟಿವ್) ಕೋಣಾಂತರಗಳನ್ನು ಪರಿಗಣಿಸಿದಾಗ 'ಅಯನಾಂಶ' – ಎಷ್ಟೇ ಇದ್ದರೂ – ಪರಸ್ಪರ ರದ್ದಾಗುವುದು !

ಇನ್ನು ಈಗಿರುವ ಗ್ರಹಗಳಿಗಿಂತ ಬೇರೆ ವೇಗಗಳಲ್ಲಿ ಚಲಿಸುವ ''ಬೇರೆ ಗ್ರಹಗಳ ಗುಂಪೊಂದು'' ನಮ್ಮ ಸೌರವ್ಯೂಹದಲ್ಲೇ ಇರುವುದು ಬಹುಶಃ 'ಚಂದಮಾಮಾ' ಕಥೆಗಳಲ್ಲಿ ಮಾತ್ರ ಬರಲು ಸಾಧ್ಯ ಅಥವಾ ಯುಗಾಂತರಗಳಲ್ಲಿ ''ಹಿಂದಿನ ಗ್ರಹಗಳು'' ಸರ್ವನಾಶವಾಗಿ ನಮ್ಮಂಥ ಪಾಪಿಗಳ ''ಈ ಕಾಲದಲ್ಲಿ'' ಬೇರೆಯೇ ಗ್ರಹಗಳ ಗುಂಪೊಂದು ಸೃಷ್ಟಿಯಾಗಿದೆ ಎಂಬುದು ಮಹಾತ್ಮರಾದ ಸೂರ್ಯನಾರಾಯಣ ರಾಯರ ದಿವ್ಯದೃಷ್ಟಿಗೆ ಗೋಚರವಾದ ಸತ್ಯವಿರಬಹುದು !

ರಾಮಾಯಣದಲ್ಲಿ ದಶರಥ ಮಹಾರಾಜನು ದೈವಜ್ಞರ (ಫಲಜ್ಯೋತಿಷಿಗಳ) ಬಗ್ಗೆ ಹೀಗೆ ಹೇಳುತ್ತಾನೆ – ''ದೈವಜ್ಞರು ಮುಂದೆ ಒದಗಬಹುದಾದ ಘೋರ ಘಟನೆಗಳ ಬಗ್ಗೆ ಭವಿಷ್ಯ ನುಡಿಯುವರು. ಏಕೆಂದರೆ, ನನ್ನ ಜನ್ಮನಕ್ಷತ್ರವು ಭಯಂಕರವಾದ ಗ್ರಹಗಳಿಂದ ಅಂದರೆ ರಾಹು, ಕುಜ, ರವಿಗಳಿಂದ ಕ್ಲೇಶಗೊಂಡಿದೆ'' (ರಾಮಾಯಣ, II, ೪, ೧೮). ಬಾಲಕಾಂಡದ ಶ್ರೀರಾಮನ ಜಾತಕದಲ್ಲಿ ಕಾಣೆಯಾಗಿದ್ದ ರಾಹುವು ದಶರಥನ ಹೇಳಿಕೆಯಲ್ಲಿ ದಿಢೀರನೆ ಪ್ರತ್ಯಕ್ಷವಾಗಿದ್ದು ಆಶ್ಚರ್ಯವೇ ಸರಿ !

**ಶ್ರೀಮದ್‌ರಾಮಾಯಣದ ಪ್ರಾಚೀನತೆ**

ಪ್ರಸಿದ್ಧ ನ್ಯಾಯವಾದಿಗಳೂ, ಪ್ರಾಚೀನ ಶಾಸ್ತ್ರಗಳ ಆಳ ಹಾಗೂ ವಿಸ್ತಾರಗಳ ಪ್ರಕಾಂಡ ಜ್ಞಾನಿಗಳೂ ಆಗಿದ್ದ ಮಹಾಮಹೋಪಾಧ್ಯಾಯ ಭಾರತರತ್ನ ಪಿ. ವಿ. ಕಾಣೆಯವರ ಸಮರ್ಥನೆಯಂತೆ ಮೂಲ ರಾಮಾಯಣದ ಹೃದ್ಭಾಗವು ಕ್ರಿ.ಪೂ. ೩೦೦ರಷ್ಟು ಪ್ರಾಚೀನವಾದರೂ ಪ್ರಸ್ತುತರೂಪದ ರಾಮಾಯಣವು ಕ್ರಿ.ಶ. ೨೦೦ಕ್ಕಿಂತ ಅನಂತರದ್ದಾಗಿರಲು ಸಾಧ್ಯವಿಲ್ಲ. – ಹಿಸ್ಟರಿ ಆಫ್ ಧರ್ಮಶಾಸ್ತ್ರ (೧ನೇ ಸಂಪುಟ, ಪುಟ ೩೯೬). ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಐತಿಹಾಸಿಕವಾಗಿ ರಾಮಾಯಣ ಕಾವ್ಯದ ಕೆಳಮಿತಿ ಕ್ರಿ.ಪೂ. ೩೦೦ !

ಒಂದು ಮುಖ್ಯವಾದ ವಿಷಯವೆಂದರೆ, ಸಾಮಾನ್ಯವಾಗಿ ಪ್ರಸಿದ್ಧವಾದ ವ್ಯಕ್ತಿಗಳನ್ನು ಮತ್ತು ಸ್ಥಳಗಳನ್ನು ಉಲ್ಲೇಖಿಸಿದ ವ್ಯಾಕರಣಶಾಸ್ತ್ರದ ಪ್ರಖ್ಯಾತ ಪ್ರವರ್ತಕನಾದ ಪಾಣಿನಿಯು (ಸುಮಾರು ಕ್ರಿ.ಪೂ. ೫೦೦) ರಾಮಾಯಣದಲ್ಲಿಯ ಹೆಸರುಗಳನ್ನು ಉಲ್ಲೇಖಿಸಿಲ್ಲ (ವಿ. ಎಸ್. ಅಗರವಾಲ್ ಅವರ ಇಂಡಿಯಾ ಆ್ಯಸ್ ನೋನ್ ಟು ಪಾಣಿನಿ).

ರಾಮಾಯಣದ ಆದಿರೂಪವು ಬಹುಶಃ ಮೌಖಿಕವಾದ ಜಾನಪದ ಶೈಲಿಯಲ್ಲಿ ಬಹಳ ಶತಮಾನಗಳ ಕಾಲ ಪ್ರಚಲಿತವಾಗಿದ್ದು, ಸುಮಾರು ಕ್ರಿ.ಪೂ. ೫೦೦ರಿಂದ ಕ್ರಿ.ಪೂ ೩೦೦ರ ಅವಧಿಯಲ್ಲಿ ವಾಲ್ಮೀಕಿಯು ಸಂಸ್ಕೃತದಲ್ಲಿ ರಾಮಾಯಣದ ಮೂಲರೂಪವನ್ನು ರಚಿಸಿರಬೇಕು.

ಈಗ ಚಲಾವಣೆಯಲ್ಲಿರುವ ಸಂಸ್ಕೃತ ರಾಮಾಯಣದ ರಚನೆಯ ಕಾಲವ್ಯಾಪ್ತಿ ಕ್ರಿ.ಪೂ. ನಾಲ್ಕನೇ ಶತಮಾನದಿಂದ ಕ್ರಿ.ಶ. ಎರಡನೇ ಶತಮಾನದವರೆಗೆ ಹರಡಿದೆ. ಆದ್ದರಿಂದ ಈ 'ಆದಿಕಾವ್ಯ'ದ ಪ್ರತಿಯೊಂದು ಹೇಳಿಕೆಯನ್ನೂ ಆ ಭಾಗವನ್ನು ರಚಿಸಿದ ಕಾಲದ ಸಾಮಾಜಿಕ, ಬೌದ್ಧಿಕ ಮತ್ತು ಆರ್ಥಿಕ ಬೆಳವಣಿಗೆಯ ಮಟ್ಟವನ್ನು ಪ್ರತಿಫಲಿಸುತ್ತದೆಂದು ತಿಳಿಯಬೇಕಾಗುತ್ತದೆ.

ಸಂಸ್ಕೃತ ರಾಮಾಯಣವು ಮೂಲತಃ ವಾಲ್ಮೀಕಿ ಎಂಬ ಒಬ್ಬನದೇ ಕೃತಿಯಾಗಿದ್ದರೂ ಕಾಲಕ್ರಮೇಣ ಒಂದು ಆಲದ ಮರದಂತೆ ಬೆಳೆದು ಅನೇಕ ಮುಂದಿನ ಕವಿಗಳ ಕೊಡುಗೆಯಾಗಿದೆ. ರಾಮಾಯಣದ ಹಸ್ತಪ್ರತಿಗಳನ್ನು ಆಮೂಲಾಗ್ರವಾಗಿ ಅಧ್ಯಯನ ಮಾಡಿದ ಹಾಗೂ ಈ ಮಹಾಕಾವ್ಯದ 'ಅಧಿಕೃತ ಆವೃತ್ತಿ'ಯನ್ನು ಪ್ರಕಟಿಸಿದ ವಿದ್ವಾಂಸರ ಪ್ರಕಾರ ಹಸ್ತಪ್ರತಿಗಳು ಮುಖ್ಯವಾಗಿ ಉತ್ತರ ಭಾರತದ ಹಾಗೂ ದಕ್ಷಿಣ ಭಾರತದ ಹೀಗೆ ಎರಡು ಮುಖ್ಯ ಶಾಖೆಗಳದ್ದಾಗಿವೆ. ಇವುಗಳ ರಚನೆಯ ಕಾಲ ಕ್ರಿ.ಪೂ. ೪೦೦ರಿಂದ ಕ್ರಿ.ಶ. ೨೦೦ರವರೆಗಿನ ಕಾಲಾವಧಿಯದ್ದಾಗಿದೆ. ಸುಮಾರಾಗಿ ಅಯೋಧ್ಯ, ಕಿಷ್ಕಿಂಧೆ ಮತ್ತು ಲಂಕಾ ಈ ಸ್ಥಳಗಳ ಸುತ್ತಲೂ ಪ್ರಚಲಿತವಾಗಿದ್ದ ಜಾನಪದ ಪ್ರಕಾರದ ರಾಮಾಯಣದ ಕಥೆಯನ್ನು ವಾಲ್ಮೀಕಿಯು ೧೨,೦೦೦ ಶ್ಲೋಕಗಳಲ್ಲಿ ರಚಿಸಿದ. ''ಅಧ್ಯಾಯಗಳಾಗಿ ವಿಂಗಡಿಸಲ್ಪಟ್ಟ ಕೃತಿಯನ್ನು ಮುಂದೆ ಒಟ್ಟು ಆರು 'ಕಾಂಡ'ಗಳಲ್ಲಿ ಜೋಡಿಸಿ ಬೇರೆ ಬೇರೆ ಛಂದಸ್ಸುಗಳಲ್ಲಿ ರಚಿಸಿದ ಭಾಗಗಳನ್ನು ಸೇರಿಸಲಾಗಿದೆ. ಇನ್ನೂ ಕಾಲಕ್ರಮದಲ್ಲಿ ರಾಮಾಯಣ ಕೃತಿಯನ್ನು ಪರಿಷ್ಕರಿಸಿ ಬಹಳಷ್ಟು ಭೌಗೋಳಿಕ ಹಾಗೂ ದೈವಿಕ ಅಂಶಗಳನ್ನು ಸೇರಿಸಲಾಗಿದೆ.''

ಇನ್ನೂ ಕುತೂಹಲಕಾರಿಯಾದ ಜಿಜ್ಞಾಸೆಯೆಂದರೆ ರಾಮಾಯಣದಲ್ಲಿ ಹೇಳಿರುವ 'ಲಂಕಾ' ಪಟ್ಟಣವು ಸಿಲೋನ್ ಅಥವಾ ಇಂದಿನ ''ಶ್ರೀಲಂಕಾ'' ಪ್ರದೇಶದಲ್ಲೇ ಇತ್ತೇ? ಈ ಬಗ್ಗೆ ಬಹಳ ಸ್ವಾರಸ್ಯವಾದ ವಿಷಯಗಳನ್ನು ಬಹಳ ಪ್ರಖ್ಯಾತ ಪುರಾತತ್ತ್ವಶಾಸ್ತ್ರಜ್ಞರಾಗಿದ್ದ ಹೆಚ್. ಡಿ. ಸಂಕಾಲಿಯಾ ಅವರ ರಾಮಾಯಣ ಇನ್ ಹಿಸ್ಟಾರಿಕಲ್ ಪರ್ಸ್ಪೆಕ್ಟಿವ್ ಎಂಬ ಕೃತಿಯಲ್ಲಿ ಕಾಣಬಹುದು.

---

ವ್ಯಕ್ತಿಯೊಬ್ಬನು ಹುಟ್ಟಿದ ವೇಳೆಯನ್ನು ಆಧರಿಸಿ ಗ್ರಹಗಳ ಸ್ಥಾನಗಳನ್ನು ಸೂಚಿಸುವ 'ಜಾತಕ'ದಿಂದ ಆ ವ್ಯಕ್ತಿಯ ಜೀವನದ ಘಟನೆಗಳ ಬಗ್ಗೆ ಭವಿಷ್ಯ ನುಡಿಯುವ ಫಲಜ್ಯೋತಿಷ 'ವಿಜ್ಞಾನ'ವು ಪ್ರಾಚೀನ ಬ್ಯಾಬಿಲೋನಿಯಾ ಮತ್ತು ಈಜಿಪ್ಟ್ ನಾಗರಿಕತೆಗಳಲ್ಲಿ ಸುಮಾರು ಕ್ರಿ.ಪೂ. ಎರಡನೇ ಶತಮಾನದಷ್ಟು ಹೊತ್ತಿಗೇ ಬೆಳೆದುಬಂದಿದ್ದು ಭಾರತಕ್ಕೆ ಸುಮಾರು ಕ್ರಿ.ಶ. ಎರಡನೇ ಶತಮಾನದ ಹೊತ್ತಿಗೆ ಆಗಮಿಸಿತು. ಈಗಾಗಲೇ ಕರ್ಮಸಿದ್ಧಾಂತ, ಪುನರ್ಜನ್ಮ ಮತ್ತು 'ವಿಧಿ'ಯ ಬಗ್ಗೆ ಗಾಢವಾದ ನಂಬಿಕೆಯನ್ನು ಬೆಳೆಸಿಕೊಂಡಿದ್ದ ನಮ್ಮ ಪ್ರಾಚೀನ ಸಂಸ್ಕೃತಿಯು ಆಮದುಗೊಂಡ ಫಲಜ್ಯೋತಿಷವೆಂಬ 'ಹುಸಿ ವಿಜ್ಞಾನ' ಬೇರೂರಿ ಸೊಂಪಾಗಿ ಬೆಳೆಯಲು ಫಲವತ್ತಾದ ಕ್ಷೇತ್ರವಾಗಿತ್ತು. ಸುಮಾರು ಅದೇ ಕಾಲದಲ್ಲಿ ಲಭ್ಯವಾಗಿದ್ದ ಪ್ರಾಚೀನ ಗ್ರೀಕರ ತರ್ಕಬದ್ಧವಾದ ಯುಕ್ಲಿಡೀಯ ಜ್ಯಾಮಿತಿಯನ್ನು ನಮ್ಮ ಪ್ರಾಚೀನ ಭಾರತೀಯರು ತಿರಸ್ಕರಿಸಿದ್ದು ಒಂದು ಐತಿಹಾಸಿಕ ವಿಪರ್ಯಾಸವೇ ಸರಿ !

ರಾಮಾಯಣ ಕಾವ್ಯದ ಬೆಳವಣಿಗೆಯ ಮುಂದಿನ ಹಂತದಲ್ಲಿ ರಾಮಾಯಣ ಕಾವ್ಯವು ನಮ್ಮ ದೇಶದ ಬೇರೆ ಬೇರೆ ಭಾಗಗಳಲ್ಲಿ ಬಹಳಷ್ಟು ಬದಲಾವಣೆಗಳನ್ನು ಹೊಂದಿರುವ ಸ್ವರೂಪವನ್ನು ಪಡೆಯಿತು. ಮುಖ್ಯವಾಗಿ ದಕ್ಷಿಣ ಭಾರತದಲ್ಲಿ ಲಭ್ಯವಾದ ಹಸ್ತಪ್ರತಿಗಳಿಗೂ ಮತ್ತು ಉತ್ತರ ಭಾರತದಲ್ಲಿ ದೊರೆತ ಹಸ್ತಪ್ರತಿಗಳಿಗೂ ಬಹಳ ವ್ಯತ್ಯಾಸವಿದೆ. ಸಾಮಾನ್ಯವಾಗಿ ದಕ್ಷಿಣ ಭಾರತದಲ್ಲಿ ದೊರೆತ ಹಸ್ತಪ್ರತಿಗಳು ಹೆಚ್ಚು ಕಡಿಮೆ ಒಂದೇ ಮಾದರಿಯವು. ಆದರೆ ಉತ್ತರ ಭಾರತದ ಬೇರೆ ಬೇರೆ ಭಾಗಗಳಲ್ಲಿ ದೊರೆತ ರಾಮಾಯಣದ ಹಸ್ತಪ್ರತಿ ಗಳಲ್ಲಿರುವ ವಿವರಗಳು ಬಹಳಷ್ಟು ಮಟ್ಟಿಗೆ ವಿಭಿನ್ನವಾಗಿವೆ.



ಹೀಗೆ ಸಿಕ್ಕಿರುವ ಅನೇಕ ಹಸ್ತಪ್ರತಿಗಳನ್ನು ಆಳವಾಗಿ ವಿಮರ್ಶಿಸಿ, ಬಹಳಷ್ಟು ನಿರೂಪಣೆಗಳಲ್ಲಿ ಸಾಮ್ಯವಿರುವ ಮತ್ತು ವೈರುದ್ಧ್ಯಗಳಿಲ್ಲದ ಭಾಗಗಳನ್ನು ಮಾತ್ರ ಗ್ರಾಹ್ಯ ಎಂದು ಪರಿಗಣಿಸಿ ಬರೋಡೆಯ ಪ್ರಾಚ್ಯ ಸಂಶೋಧನ ಕೇಂದ್ರದಿಂದ ಶ್ರೀಮದ್ ವಾಲ್ಮೀಕಿ ರಾಮಾಯಣದ 'ಅಧಿಕೃತ ಸಂಚಿಕೆ'ಯನ್ನು ಬೇರೆ ಬೇರೆ ಭಾಗಗಳಾಗಿ ಪ್ರಕಟಿಸಲಾಯಿತು. ಇವುಗಳನ್ನು ಸಂಪಾದಿಸಿದ ಪ್ರಕಾಂಡ ಪಾಂಡಿತ್ಯವನ್ನು ಪಡೆದ ವಿದ್ವಾಂಸರ ಪ್ರಕಾರ ಈಗ ಜನಪ್ರಿಯವಾಗಿರುವ ರಾಮಾಯಣದಲ್ಲಿ ಬಹಳಷ್ಟು ಭಾಗಗಳು ಪ್ರಕ್ಷಿಪ್ತವಾಗಿವೆ. ಅಂದರೆ ಆ ಭಾಗಗಳು ಮೂಲ ರಾಮಾಯಣ ಕೃತಿಯಲ್ಲಿಲ್ಲದೆ ಅನಂತರ ಬೇರೆ ಬೇರೆ ಕಾಲಘಟ್ಟಗಳಲ್ಲಿ ಸೇರ್ಪಡಿಸಲಾಗಿವೆ. ಬಾಲಕಾಂಡವು ರಾಮಾಯಣದ ಬೆಳವಣಿಗೆಯ ಎರಡನೇ ಮತ್ತು ಮೂರನೇ ಘಟ್ಟಗಳಲ್ಲಿ ಸೇರ್ಪಡಿಸಿದ ಭಾಗ. ಹಾಗೆಯೇ ರಾಮಾಯಣದ ಉತ್ತರಕಾಂಡವನ್ನು ಅದರ ಮುಂದಿನ, ಅಂದರೆ ನಾಲ್ಕನೆಯ ಘಟ್ಟದಲ್ಲಿ ಸೇರಿಸಲಾಗಿದೆ.

ಖಗೋಲಶಾಸ್ತ್ರದ ಪ್ರಖ್ಯಾತ ವಿದ್ವಾಂಸರಾಗಿದ್ದ ಪಿ. ಸಿ. ಸೇನ್‌ಗುಪ್ತ ಅವರ ಪ್ರಕಾರ ರಾಮಾಯಣ ಕಾವ್ಯದ ಮುಖ್ಯಭಾಗಗಳ ಕೊನೆಯ ಹಂತದ ಸೇರ್ಪಡೆಯ ಕರ್ತೃವಿನ ಕಾಲ ಸುಮಾರು ಕ್ರಿ.ಶ. ೪೩೮.

**ಭಾರತದಲ್ಲಿ ಗ್ರಹಗಣಿತದ ಪ್ರಾಚೀನತೆ**

ಈ ಹಿಂದೆ ಚರ್ಚಿಸಿದ ಅಂಶಗಳಿಂದ ನಮಗೆ ಗೋಚರವಾಗುವುದೆಂದರೆ (1) ರಾಮಾಯಣ ಮಹಾಕಾವ್ಯದ ತಿರುಳಿನ ಭಾಗವು ಸಂಸ್ಕೃತದಲ್ಲಿ ಮೊಟ್ಟಮೊದಲಿಗೆ ರಚನೆಯಾಗಿದ್ದು ಸುಮಾರು ಕ್ರಿ.ಪೂ. ನಾಲ್ಕನೇ ಶತಮಾನದ ನಂತರ. ರಾಮಾಯಣದ ಮುಖ್ಯವಾದ ಘಟನೆಗಳು ಇನ್ನಷ್ಟು ಶತಮಾನಗಳ ಹಿಂದೆಯೇ ಜರುಗಿದ್ದು ಜಾನಪದ ಕೀರ್ತನೆಯ ರೂಪದಲ್ಲಿ ಸ್ಥಳೀಯ ಪ್ರಾಕೃತ ಆಡುಭಾಷೆಗಳಲ್ಲಿ ಚಲಾವಣೆಯಲ್ಲಿ ಇದ್ದಿರಬೇಕು; (2) ಮಹಾಕಾವ್ಯದಲ್ಲಿ ಬಹಳಷ್ಟು ಸೇರ್ಪಡೆಗಳನ್ನು – ಮುಖ್ಯವಾಗಿ ಬಾಲಕಾಂಡ ಮತ್ತು ಉತ್ತರ ಕಾಂಡಗಳನ್ನು – ಮುಂದೆ ಮೂರು-ನಾಲ್ಕು ಹಂತಗಳಲ್ಲಿ ಮಾಡಲಾಗಿದೆ; (3) ಶ್ರೀರಾಮಚಂದ್ರನ ಜನ್ಮಕುಂಡಲಿಯಲ್ಲಿ ಖಗೋಲಿಕವಾಗಿ ದೋಷಗಳಿವೆ.

ಈಗ ಮುಖ್ಯವಾಗಿ ಚರ್ಚಿಸಬೇಕಾದ ವಿಷಯವೆಂದರೆ ನಮಗೆ ಉಪಲಬ್ಧವಾಗಿರುವ ರಾಮಾಯಣ ಕಾವ್ಯದಲ್ಲಿ ಸಿಗುವ ಬಹಳಷ್ಟು ಗ್ರಹಗತಿಗಳ ಸ್ಥಿತಿಗಳು ಬಹಳ ಹಿಂದೆ ಸಂಭವಿಸಿರಬಹುದಾದ ಘಟನೆಗಳಿಗಾಗಲೀ ಅಥವಾ ಸಂಸ್ಕೃತ ಮಹಾಕಾವ್ಯದ ತಿರುಳಿನ ಭಾಗದ ರಚನೆಯಾದ ಸಂದರ್ಭದಲ್ಲಾಗಲೀ ಉಂಟಾಗಿರಲು ಸಾಧ್ಯವೇ? ಈ ಚರ್ಚೆಗೆ ಮುಖ್ಯವಾದ ಅಡಿಪಾಯವೆಂದರೆ ಪ್ರಾಚೀನ ಭಾರತದಲ್ಲಿ ಗ್ರಹಗತಿಗಳ ಖಗೋಲಜ್ಞಾನದ ಬೆಳವಣಿಗೆ.

ವೇದಗಳ ಕಾಲದಿಂದಲೂ 'ಶಕುನ'ಗಳು (ಅದ್ಭುತ, ಉತ್ಪಾತ, ನಿಮಿತ್ತ) ಮುಂದೊದಗಬಹುದಾದ ಒಳ್ಳೆಯ ಮತ್ತು ಕೆಟ್ಟ ಘಟನೆಗಳ ಬಗ್ಗೆ ಮುನ್ಸೂಚನೆ ನೀಡುವುವು ಎಂಬ ಬಲವಾದ ನಂಬಿಕೆ ಇತ್ತು. ಋಗ್ವೇದ ಮತ್ತು ಅಥರ್ವ ವೇದಗಳಲ್ಲಿ ಭವಿಷ್ಯ ನುಡಿಯುವ 'ಶಕುನ' ಎಂಬ ಹಕ್ಕಿಯ ಬಗ್ಗೆ ಬಹಳಷ್ಟು ಉಲ್ಲೇಖಗಳಿವೆ. ಒಳ್ಳೆಯ ಮತ್ತು ಕೆಟ್ಟದಿನಗಳ ಬಗ್ಗೆ ನಂಬಿಕೆಗಳು ಋಗ್ವೇದ ಸಂಹಿತೆ ಮತ್ತು ತೈತ್ತಿರೀಯ ಬ್ರಾಹ್ಮಣಗಳಷ್ಟು ಹಿಂದೆಯೇ ದಾಖಲಾಗಿವೆ. ಆ ಕಾಲದಲ್ಲಿ ಇಂತಹ ನಂಬಿಕೆಗಳು ಮುಖ್ಯವಾಗಿ ಚಂದ್ರನು ತನ್ನ ಚಲನೆಯ ಸಂದರ್ಭದಲ್ಲಿ ೨೭ (ಅಥವಾ ಅಭಿಜಿತ್ ಸೇರಿಸಿ ೨೮) ನಕ್ಷತ್ರಗಳ ಪೈಕಿ ಯಾವ ನಕ್ಷತ್ರದಲ್ಲಿದ್ದಾನೆ ಎಂಬುದನ್ನು ಅವಲಂಬಿಸಿದ್ದರಿಂದ ಹಾಗೂ ರಾತ್ರಿವೇಳೆ ದೇಶ, ದಿಕ್ಕು ಮತ್ತು ಕಾಲಗಳನ್ನು ನಕ್ಷತ್ರಪುಂಜಗಳ ಮೂಲಕ ಮಾಡುತ್ತಿದ್ದುದರಿಂದ ಆ ಜ್ಞಾನವನ್ನು 'ನಕ್ಷತ್ರ ವಿದ್ಯಾ' ಎಂದು ಕರೆಯುತ್ತಿದ್ದರು.

ವ್ಯಕ್ತಿಯೊಬ್ಬನು ಹುಟ್ಟಿದ ವೇಳೆಯನ್ನು ಆಧರಿಸಿ ಗ್ರಹಗಳ ಸ್ಥಾನಗಳನ್ನು ಸೂಚಿಸುವ 'ಜಾತಕ'ದಿಂದ ಆ ವ್ಯಕ್ತಿಯ ಜೀವನದ ಘಟನೆಗಳ ಬಗ್ಗೆ ಭವಿಷ್ಯ ನುಡಿಯುವ ಫಲಜ್ಯೋತಿಷ 'ವಿಜ್ಞಾನ'ವು ಪ್ರಾಚೀನ ಬ್ಯಾಬಿಲೋನಿಯಾ ಮತ್ತು ಈಜಿಪ್ಟ್ ನಾಗರಿಕತೆಗಳಲ್ಲಿ ಸುಮಾರು ಕ್ರಿ.ಪೂ. ಎರಡನೇ ಶತಮಾನದಷ್ಟು ಹೊತ್ತಿಗೇ ಬೆಳೆದುಬಂದಿದ್ದು ಭಾರತಕ್ಕೆ ಸುಮಾರು ಕ್ರಿ.ಶ. ಎರಡನೇ ಶತಮಾನದ ಹೊತ್ತಿಗೆ ಆಗಮಿಸಿತು. ಈಗಾಗಲೇ ಕರ್ಮಸಿದ್ಧಾಂತ, ಪುನರ್ಜನ್ಮ ಮತ್ತು 'ವಿಧಿ'ಯ ಬಗ್ಗೆ ಗಾಢವಾದ ನಂಬಿಕೆಯನ್ನು ಬೆಳೆಸಿಕೊಂಡಿದ್ದ ನಮ್ಮ ಪ್ರಾಚೀನ ಸಂಸ್ಕೃತಿಯು ಆಮದುಗೊಂಡ ಫಲಜ್ಯೋತಿಷವೆಂಬ 'ಹುಸಿ ವಿಜ್ಞಾನ' ಬೇರೂರಿ ಸೊಂಪಾಗಿ ಬೆಳೆಯಲು ಫಲವತ್ತಾದ ಕ್ಷೇತ್ರವಾಗಿತ್ತು. ಸುಮಾರು ಅದೇ ಕಾಲದಲ್ಲಿ ಲಭ್ಯವಾಗಿದ್ದ ಪ್ರಾಚೀನ ಗ್ರೀಕರ ತರ್ಕಬದ್ಧವಾದ ಯುಕ್ಲಿಡೀಯ ಜ್ಯಾಮಿತಿಯನ್ನು ನಮ್ಮ ಪ್ರಾಚೀನ ಭಾರತೀಯರು ತಿರಸ್ಕರಿಸಿದ್ದು ಒಂದು ಐತಿಹಾಸಿಕ ವಿಪರ್ಯಾಸವೇ ಸರಿ! ಗ್ರೀಕರ ಜ್ಯಾಮಿತಿಯ ಆವಶ್ಯಕತೆ ಪ್ರಾಚೀನ ಭಾರತೀಯರಿಗೆ ಇರಲಿಲ್ಲ ಎಂಬುದು ಕೆಲವು ವಿದ್ವಾಂಸರು ನೀಡುವ ಸಮಾಧಾನ.

ಸುಮಾರು ಕ್ರಿ.ಶ. ೧೫೦ರ ವೇಳೆಗೆ ಉಜ್ಜಯಿನಿಯಲ್ಲಿ ಪಶ್ಚಿಮ ಕ್ಷಾತ್ರಪ ರುದ್ರದಾಮನನ ಆಸ್ಥಾನದಲ್ಲಿ ಫಲ ಜ್ಯೋತಿಷದ ಗ್ರೀಕ್ ಗ್ರಂಥವೊಂದರ ಸಂಸ್ಕೃತ ಭಾಷಾಂತರವು ಯವನಜಾತಕಂ ಎಂಬ ಹೆಸರಿನಿಂದ ಬೆಳಕಿಗೆ ಬಂತು. ಯವನೇಶ್ವರ ಎಂಬುವವನ ಗದ್ಯ ರೂಪದ ಈ ಕೃತಿಯು ಈಗ ಅಲಭ್ಯವಾಗಿದ್ದರೂ ಸ್ಫುಜಿಧ್ವಜನಿಂದ ಭಾಷಾಂತರಿಸಲ್ಪಟ್ಟ ಪದ್ಯ ಭಾಗದ ಸಾಕಷ್ಟು ತುಣುಕುಗಳು ಈಗ ಲಭ್ಯವಾಗಿವೆ. ಈ ಗ್ರಂಥವು ಕ್ರಿ.ಶ. ೨೭೦ರಲ್ಲಿ ಎರಡನೇ ಕ್ಷಾತ್ರಪ ರುದ್ರಸೇನನ ಕಾಲದಲ್ಲಿ ರಚಿತವಾಯಿತು. ಹಾಗೆಯೇ ಪಶ್ಚಿಮ ಕ್ಷಾತ್ರಪರಾದ ಎರಡನೇ ರುದ್ರಸಿಂಹ ಮತ್ತು ಎರಡನೇ ಯಶೋಧಾಮನ್ ಅವರ – ಅಂದರೆ ಕ್ರಿ.ಶ. ನಾಲ್ಕನೇ ಶತಮಾನದ – ಕಾಲದಲ್ಲಿ ಮೀನರಾಜನಿಂದ ರಚಿತವಾದ ವೃದ್ಧಯವನ ಜಾತಕ ಗ್ರಂಥವೂ ಪ್ರಾಚೀನ ಗ್ರೀಕ್ ಮೂಲದ್ದಾಗಿದೆ.

ಸ್ಫುಜಿಧ್ವಜನು ಚಂದ್ರನ ಸಂಪಾತಬಿಂದು (ನೋಡ್ಸ್)ಗಳಾದ ರಾಹು ಮತ್ತು ಕೇತುಗಳನ್ನು ಎಲ್ಲಿಯೂ ಪ್ರಸ್ತಾಪಿಸಿಲ್ಲ. ಹಾಗಿರುವಾಗ ಶ್ರೀರಾಮನ ಜಾತಕದಲ್ಲಿ

ರಾಹು-ಕೇತುಗಳ ದರ್ಶನ ಹೇಗೆ ಸಾಧ್ಯ? ಆದರೆ ಅನಂತರ ಬಂದ ಮೀನರಾಜನು ರಾಹುವನ್ನು ಒಂದು ಗ್ರಹವೆಂದು ಪ್ರಸ್ತಾಪಿಸಿದ್ದಾನೆ. ಕ್ರಿ.ಶ. ಆರನೇ ಶತಮಾನದ ಆದಿಭಾಗದಲ್ಲಿದ್ದ (ಅಂದರೆ ಆರ್ಯಭಟನ ಕಿರಿಯ ಸಮಕಾಲೀನನಾಗಿದ್ದ) ವರಾಹಮಿಹಿರನು ತನ್ನ ಬೃಹಜ್ಜಾತಕಂ ಎಂಬ ಫಲಜ್ಯೋತಿಷ ಕೃತಿಯಲ್ಲಿ ಉಲ್ಲೇಖಿಸಿರುವ ಫಲಜ್ಯೋತಿಷಾಚಾರ್ಯರು ಸುಮಾರು ಕ್ರಿ.ಶ. ಮೂರನೇ ಶತಮಾನದಿಂದ ಐದನೇ ಶತಮಾನದ ಅವಧಿಯಲ್ಲಿದ್ದವರು.

ಹೀಗಾಗಿ ಶ್ರೀಮದ್ ರಾಮಾಯಣದ ಬಾಲಕಾಂಡದಲ್ಲಿ ಕೊಟ್ಟಿರುವ ಶ್ರೀರಾಮನ ಜಾತಕ ಹಾಗೂ ಇತರೆಡೆಯಲ್ಲಿ ಕಾಣಿಸಿಕೊಳ್ಳುವ ಗ್ರಹಗತಿಗಳ ಉಲ್ಲೇಖಗಳು ಸುಮಾರು ಕ್ರಿ.ಶ. ಮೂರನೇ ಶತಮಾನದ ನಂತರ ಜ್ಯೋತಿಷಿಗಳಿಂದ ಇಲ್ಲವೇ ಅವರ ಸಲಹೆಗಳಿಂದ ಸೇರಿಸಲಾದ ಭಾಗಗಳು.

ಹೀಗಿದ್ದರೂ ಕೂಡ ಒಬ್ಬ ಖಗೋಲ ಗಣಿತದ ವಿದ್ಯಾರ್ಥಿಗೆ ಉಂಟಾಗುವ ಒಂದು ಸಣ್ಣ ಕುತೂಹಲದ ಪ್ರಶ್ನೆ ಎಂದರೆ ಶ್ರೀರಾಮನದೆಂದು ಕೊಡಲಾದ ಜಾತಕದಲ್ಲಿಯ ಗ್ರಹ ಸ್ಥಾನಗಳ ಮಾದರಿ ಹಿಂದೆಂದಾದರೂ ಸಂಭವಿಸಿತ್ತೇ? ಹಾಗಿದ್ದರೆ ಯಾವಾಗ ಸಂಭವಿಸಿರಬಹುದು? ಪ್ರಖ್ಯಾತ ಖಗೋಲಗಣಿತಜ್ಞರೂ ಇಂಡಿಯನ್ ಎಫೆಮರಿಸ್ ಮತ್ತು ಇಂಡಿಯನ್ ಕ್ರೊನಾಲಜಿ ಮುಂತಾದ ಅಧಿಕೃತ ಗ್ರಂಥಗಳ ಕರ್ತೃವೂ ಆಗಿದ್ದ ಸ್ವಾಮಿ ಕಣ್ಣುಪಿಳ್ಳೈ ಅವರ ಲೆಕ್ಕಾಚಾರಗಳ ಪ್ರಕಾರ ಕ್ರಿ.ಪೂ. ೩೧೦೨ (ಕಲಿಯುಗದ ಆದಿ!) ಇಸವಿಯ ನಂತರ ಮತ್ತು ಕ್ರಿ.ಶ. ೯ನೇ ಶತಮಾನದ ಪೂರ್ವ ಅವಧಿಯಲ್ಲಿ ಐದು ಗ್ರಹಗಳಾದ ರವಿ, ಕುಜ, ಗುರು, ಶುಕ್ರ ಮತ್ತು ಶನಿ ಇವುಗಳು ಮೇಷ ಮಾಸದಲ್ಲಿ ತಮ್ಮ ತಮ್ಮ ಉಚ್ಚಸ್ಥಾನಗಳ ಸಮೀಪ ಬಂದಿರಬಹುದಾದ ಸಂದರ್ಭಗಳೆಂದರೆ ಕೇವಲ ಹದಿನೈದು: ಕ್ರಿ.ಪೂ. ೨೯೦೯, ೨೭೩೨, ೨೪೩೫, ೨೦೫೫, ೧೮೧೮, ೧೨೦೧, ೧೧೪೧, ೯೬೪, ೭೨೭, ೨೮೭, ೧೧೦, ೫೦ ಹಾಗೂ ಕ್ರಿ.ಶ. ೧೮೮, ೫೬೮ ಮತ್ತು ೮೦೫. ಸ್ವಾಮಿ ಕಣ್ಣುಪಿಳ್ಳೈ ಅವರ ಪ್ರಕಾರ ಈ ಮೇಲಿನ ಸಂದರ್ಭಗಳ ಪೈಕಿ ಶ್ರೀರಾಮನ ಕುಂಡಲಿಯನ್ನು ಹೋಲುವ ಸಂದರ್ಭಗಳು ಕ್ರಿ.ಪೂ. ೨೦೫೫ ಮತ್ತು ಕ್ರಿ.ಪೂ. ೨೮೭.

ಇನ್ನು ರಾಮಾಯಣ, ಮಹಾಭಾರತ ಮತ್ತು ಪುರಾಣಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಿರುವ ಗ್ರಹಗತಿಗಳನ್ನಲ್ಲದೆ ಅಂತಹ ಕೃತಿಗಳಲ್ಲಿ ಕಂಡುಬರುವ ಅಸ್ಪಷ್ಟವಾದ ಹೇಳಿಕೆಗಳನ್ನು ಆಧರಿಸಿ ಚಿತ್ರವಿಚಿತ್ರವಾದ ನಿರ್ಧಾರಗಳಿಗೆ ಬರುವ ಮೂಲತತ್ತ್ವವಾದಿಗಳ ಹೇಳಿಕೆಗಳು ಬಹಳ ಮೋಜಿನವಾಗಿರುತ್ತವೆ. ಉದಾಹರಣೆಗಳು :–

(೧) ''ಒಬ್ಬ ವೇದಕಾಲದ ಜ್ಯೋತಿಷಿ (ಋಷಿ)ಯು ಯುರೇನಸ್ (ಇಂದ್ರ) ಗ್ರಹವನ್ನು ಕಂಡುಹಿಡಿದ ಮತ್ತು ಅದು ಸೌರವ್ಯೂಹಕ್ಕೆ ಸೇರಿದ್ದು ಎಂಬುದನ್ನು ಗೊತ್ತುಪಡಿಸಿದ. ಅದು ಅದ್ಭುತವಾದ ವಿಕಿರಣಶೀಲತೆಯಿಂದ ಕೂಡಿದ್ದು, ನೋಟಕ್ಕೆ ಮೀರಿದ ನಭದಲ್ಲಿ ಶ್ವೇತವಸ್ತುವೂ ಆಗಿದ್ದು ಅದರ ಸುತ್ತ ಮೋಡಗಳು ಸುತ್ತುವರಿದಿರುವುದರಿಂದ ಅದರ ಆಕೃತಿಯನ್ನು ತಿಳಿಯಲಾಗುವುದಿಲ್ಲ.'' ಈ ಹೇಳಿಕೆಯನ್ನು ನೀಡಿದ ಅಭಿನವ ಜ್ಯೋತಿಷರ್ಷಿಗಳ ಹೆಸರು ಅಬಯಕೂನ್. ಇದೇ ಮಹಾತ್ಮರ ಇನ್ನೊಂದು ನುಡಿಮುತ್ತು :

(೨) ''ಕಾಪರ್ನಿಕಸ್‌ನ ಸೂರ್ಯಕೇಂದ್ರ ಸಿದ್ಧಾಂತಕ್ಕಿಂತಲೂ ಪ್ರಾಚೀನ ಭಾರತದ ಭೂಕೇಂದ್ರ ಸಿದ್ಧಾಂತ ಹೆಚ್ಚು ವೈಜ್ಞಾನಿಕವಾದುದು.''

(೩) ''ಇತ್ತೀಚೆಗೆ ಕಂಡುಹಿಡಿಯಲ್ಪಟ್ಟವು ಎನ್ನಲಾದ ಯುರೇನಸ್, ನೆಪ್ಚೂನ್ ಮತ್ತು ಪ್ಲೂಟೊ ಗ್ರಹಗಳನ್ನು ಮಹಾಭಾರತದ ವ್ಯಾಸರು ಹಿಂದೆಯೇ 'ಶ್ವೇತ', 'ಶ್ಯಾಮ' ಹಾಗೂ 'ತೀವ್ರ' ಎಂದು ಉಲ್ಲೇಖಿಸಿದ್ದಾರೆ ಎಂಬುದನ್ನು ನಿಸ್ಸಂಶಯವಾಗಿ ನಾನು ಸಾಧಿಸಿದ್ದೇನೆ.''

*– ಡಾ|| ಪದ್ಮಾಕರ ವಿಷ್ಣು ವರ್ತಕ್.*

ಹೀಗೆಯೇ, ಮಹಾಭಾರತವು ಗಾತ್ರದಲ್ಲೂ ಬಹಳ ಮಹತ್ತಾಗಿಯೇ ಇದ್ದು ಅದಕ್ಕೆ ಸರಿಯಾಗಿ ಗ್ರಹಗತಿಗಳ ಉಲ್ಲೇಖಗಳೂ ವಿಪುಲವಾಗಿ ಸಿಗುತ್ತವೆ. ಅವುಗಳನ್ನು ಆಧರಿಸಿ ಇಂದಿನ ಕಂಪ್ಯೂಟರ್ ಸಾಫ್ಟ್‌ವೇರ್‌ಗಳ ಸಹಾಯದಿಂದ ಮಹಾಭಾರತದಲ್ಲಿ ಹೇಳಲಾದ ಘಟನೆಗಳ ಕಾಲ ನಿರ್ಣಯವನ್ನು ಮಾಡುವ ವಿದ್ವತ್ಪ್ರಯತ್ನಗಳು ಬಹಳ ಬಿರುಸಾಗಿಯೇ ಸಾಗುತ್ತಿವೆ. ಇಂತಹ ಸಾಹಸಗಳಿಗಾಗಿ ಲಕ್ಷಗಟ್ಟಲೆ ರೂಪಾಯಿಗಳ ಧನ ಸಹಾಯವನ್ನು ಕೊಡಮಾಡುವ ಸಂಘ ಸಂಸ್ಥೆಗಳ ಧ್ಯೇಯ ಧೋರಣೆಗಳು ಏನಿರುತ್ತವೆ ಎಂಬುವುದು ಬೇರೆ ಹೇಳಬೇಕಾಗಿಲ್ಲ. ಸುಮಾರು ೧೯೫೫ರ ವೇಳೆಗೆ ಭಾರತ ಸರಕಾರವು ನೇಮಿಸಿದ್ದ ಕ್ಯಾಲೆಂಡರ್ ರಿಫಾರ್ಮ್ ಕಮಿಟಿಯ ವರದಿಯಲ್ಲಿ ಸ್ಪಷ್ಟವಾಗಿ ಹೇಳಿದ ಮಾತು : 'ಮಹಾಭಾರತದಲ್ಲಿರುವ ಗ್ರಹಸ್ಥಿತಿಗಳನ್ನು ಆಧರಿಸಿ ಕಾಲನಿರ್ಣಯ ಮಾಡುವುದು ನಿರರ್ಥಕ ಮತ್ತು ನಿಷ್ಫಲವಾದ ಪ್ರಯತ್ನವೇ ಸರಿ.' ಇಪ್ಪತ್ತನೇ ಶತಮಾನದ ಅಂತ್ಯ ಭಾಗದಲ್ಲಿ ಮತ್ತು ಇಪ್ಪತ್ತೊಂದನೇ ಶತಮಾನದಲ್ಲಿ ಇನ್ಫರ್ಮೇಷನ್ ಟೆಕ್ನಾಲಜಿಯ ('ಐಟಿ') ದುಷ್ಫಲಶ್ರುತಿಯಾಗಿ ಸ್ವಮಸ್ತಿಷ್ಕದ ಸಹಾಯವಿಲ್ಲದೆಯೇ ಕೇವಲ 'ತಂತ್ರಾಂಶ'ಗಳ ಸಹಾಯ ದಿಂದಲೇ 'ವಿದ್ವಾಂಸ'ರು ಜ್ಯೋತಿಷ ಸಂಬಂಧವಾದ ನಿರರ್ಥಕ ಮತ್ತು ನಿಷ್ಫಲವಾದ ದುಸ್ಸಾಹಸಗಳನ್ನು ಕೈಗೊಳ್ಳುವುದನ್ನು ವಿಜ್ಞಾನಿ ಮೇಘನಾದ ಸಹಾ ನೇತೃತ್ವದ ಕ್ಯಾಲೆಂಡರ್ ರಿಫಾರ್ಮ ಕಮಿಟಿಯವರು ೧೯೫೫ರಲ್ಲೇ ಯಶಸ್ವಿ ಯಾಗಿಯೇ ಭವಿಷ್ಯವನ್ನು ನುಡಿದಿದ್ದರು!

**ಡಾ|| ಎಸ್. ಬಾಲಚಂದ್ರರಾವ್**
ಗೌ|| ನಿರ್ದೇಶಕರು, ವಿಜ್ಞಾನ ಮತ್ತು ಮಾನವೀಯ ಮೌಲ್ಯಗಳ ಗಾಂಧೀ ಕೇಂದ್ರ
ಭಾರತೀಯ ವಿದ್ಯಾಭವನ, ಬೆಂಗಳೂರು - ೫೬೦ ೦೦೧

# ಐಹೊಳೆ - ಇಳಕಲ್

## ಭಾರತೀಯ ಸಂಸ್ಕೃತಿಯ ಅವಳಿ ಅಣುರೂಪಗಳು

ಡಾ|| ಸಂಜಯ್ ಬಿಸ್ವಾಸ್

ಐಹೊಳೆ ಮತ್ತು ಇಳಕಲ್ ಎರಡೂ ಸ್ಥಳಗಳನ್ನು ನೋಡಲಿಚ್ಛಿಸುವ ಪ್ರವಾಸಿಗರಲ್ಲಿ ಬಾದಾಮಿಯ ಮೂಲಕ ಹೋಗುವವರೇ ಹೆಚ್ಚು, ಏಕೆಂದರೆ ಬಾದಾಮಿಯಲ್ಲಿ ಹಲವಾರು ಸೌಕರ್ಯಗಳು ಲಭ್ಯವಿವೆ. ಆದರೆ ಬಾಗಲಕೋಟೆಯ ಮೂಲಕ ಐಹೊಳೆ ಮತ್ತು ಇಳಕಲ್ ಪ್ರವಾಸವನ್ನು ಆರಂಭಿಸಿದರೆ ಅದರ ಅನುಭವವೇ ಬೇರೆ. ಬಾಗಲಕೋಟೆಯಿಂದ ಹೊರಡುವ ಬಸ್ಸು ಮಲಪ್ರಭಾ ದಾಟಿ ಅಮೀನ್‌ಗಢ್ ತಲುಪುತ್ತದೆ. ಅಲ್ಲಿಂದ ಮುಂದೆ ಸಲೀಂ ಭಾಯ್, ರುಸ್ತುಂ ಭಾಯ್ ಅಥವಾ ಹನೀಫ್‌ನಂತಹ ಹೆಸರಿಗೆ ಒಗ್ಗೂಡುವ ಆ ಸೀಮೆಯ ಆಟೋ ಚಾಲಕನೊಬ್ಬ ನಿಮ್ಮನ್ನ ರಿಕ್ಷಾದಲ್ಲಿ ಕೂಡಿಸಿಕೊಂಡು ಅದು ಇದು ಹರಟೆ ಹೊಡೆಯುತ್ತ ಮೈಲಿಗಟ್ಟಲೆ ಸಾಗುತ್ತಾನೆ. ದಾರಿಯುದ್ದಕ್ಕೂ ಇಕ್ಕೆಡೆಗಳಲ್ಲಿ ಹೊಂಬಣ್ಣದ ದಳಗಳುಳ್ಳ ಸೂರ್ಯಕಾಂತಿ ಹೂಗಳು ಗಾಳಿಬೀಸಿದಂತೆ ಅತ್ತಿಂದಿತ್ತ ತೂಗಾಡುತ್ತ ಲಾಸ್ಯವಾಡುತ್ತ ನಿಮ್ಮನ್ನು ಸ್ವಾಗತಿಸುತ್ತವೆ. ನಿಜಕ್ಕೂ ಆ ದೃಶ್ಯ ನಯನ ಮನೋಹರ! ಇಷ್ಟು ಸಾಲದೆಂಬಂತೆ ಮರದಡಿ ಕುಳಿತು ಬೀಡಿ ಸಿಗರೇಟು ಸೇದುತ್ತ ಮಾತಿನಲ್ಲಿ ಮಗ್ನರಾಗಿರುವ ರೈತರು, ಅವರ ಹೊಳಪಿನ ಹಚ್ಚ ಹಳದಿ ಬಣ್ಣದ ರೇಶ್ಮೆ ರುಮಾಲುಗಳು ಸುತ್ತ ಮುತ್ತಲಿನ ಸಹಜ ಸೌಂದರ್ಯಕ್ಕೆ ಮೆರುಗು ನೀಡುತ್ತವೆ.

ರಸ್ತೆಗಳಾಚೆಗಿನ ಬದಿಯಲ್ಲಿ ಮರಗಳ ನಡುವೆ ಹುದುಗಿಸಿಕೊಂಡಿರುವ ಕೆಂಪುಮಿಶ್ರಿತ ಹಳದಿ ಕಟ್ಟಡಗಳನ್ನು ಹಾದುಹೋಗುತ್ತ ಐಹೊಳೆ ತಲುಪುತ್ತಿರುವಂತೆಯೇ ಮೊದಲು ಕಾಣಸಿಗುವುದು ಚೊಕ್ಕ ಸುಂದರ ಮತ್ತು ವಿಶಾಲವಾಗಿರುವ ಹುಲ್ಲುಹಾಸು.

ಬೆಂಬಿಡದ ಗೈಡುಗಳ ಕಿರಿಕಿರಿಯನ್ನು ತಪ್ಪಿಸಿಕೊಂಡು ಆ ಕಟ್ಟಡಗಳ ಒಳಗೆ ಪ್ರವೇಶಿಸಿದರೆ ಅಲ್ಲೊಂದು ಮನಮೋಹಕ ಕಟ್ಟಡದೆದುರು ನಿಲ್ಲುತ್ತೀರಿ. ಕೇಂಬ್ರಿಜ್ ಕಾಲೇಜೊಂದರ ಸಂನ್ಯಾಸಿ ಗೃಹಗಳನ್ನು ನೆನಪಿಸುವ ಮತ್ತು ದುರ್ಗಾದೇವಿಯ ವಿಗ್ರಹವಿರುವ ಬೌದ್ಧ ಚೈತ್ಯ ನಿಮ್ಮ ಕುತೂಹಲವನ್ನು ಮತ್ತಷ್ಟು ಕೆರಳಿಸುತ್ತದೆ. ಗೋಡೆಯ ಮೇಲೆ ಮಹಿಷಾಸುರ ಮರ್ದಿನಿಯ ಭವ್ಯ ಚಿತ್ರವಿದೆ. ಬಹುಶಃ ದುರ್ಗೆಯನ್ನು ತಮ್ಮ ಕುಟುಂಬ ದೈವವನ್ನಾಗಿ ಪೂಜಿಸುತ್ತಿದ್ದ ಮೈಸೂರಿನ ಗಂಗರ ಕಾಲದಲ್ಲಿ, ಎಂದರೆ ಕ್ರಿ.ಶ. ಸುಮಾರು ೮ನೇ ಶತಮಾನದಲ್ಲಿ ಈ ಶಿಲ್ಪಕೃತಿಯನ್ನು ರಚಿಸಿರಬೇಕು.

ಇಲ್ಲಿಂದ ಅಡ್ಡಾಡುತ್ತ ಹೊರಟು ಆ ಅರ್ಧ ಚಂದ್ರಾಕಾರದ ಬೌದ್ಧ ಚೈತ್ಯವನ್ನು ಬಳಸಿ ಆಚೆಗಿನ ಬದಿಗೆ ಬಂದರೆ ಕಾಮ ಪ್ರಚೋದನೆಯ ಯಾವ ಸೋಂಕೂ ಇಲ್ಲದ, ಕಾಮನೆ ಮತ್ತು ಗಾಢ ಪ್ರೀತಿಯಲ್ಲಿ ತಲ್ಲೀನರಾಗಿರುವ ಸ್ತ್ರೀ ಪುರುಷ ಜೋಡಿಯ ವಿವಿಧ ಭಾವಭಂಗಿಗಳು ನಿಮ್ಮನ್ನು ಆಕರ್ಷಿಸುತ್ತವೆ. ಬೇಲೂರಿನ ಶಿಲ್ಪಗಳ ಪರಿಪೂರ್ಣತೆ ಮತ್ತು ಕಲಾ ಕೌಶಲ್ಯತೆ ಈ ಶಿಲ್ಪಗಳಲ್ಲಿ ಇಲ್ಲವಾದರೂ ಇವು ತಮ್ಮದೇ ಆದ ವಿಶಿಷ್ಟತೆಯಿಂದ ಪ್ರವಾಸಿಗರ ಮನ ತಣಿಸುತ್ತವೆ; ಐತಿಹಾಸಿಕವಾಗಿಯೂ ಮೌಲಿಕವಾಗಿವೆ. ಇಲ್ಲಿ, ಸಭಿಕರನ್ನು ನಗೆಗಡಲಿನಲ್ಲಿ ಮುಳುಗಿಸುತ್ತಿರುವ ವಿದೂಷಕರು, ಲಾಗಹಾಕುತ್ತಿರುವ ಒಂದು ಪುಟ್ಟ ಮಗು, ಬಗೆಬಗೆಯ ಪ್ರಾಣಿಗಳು, ಎಲ್ಲವನ್ನು ಶಿಲ್ಪರೂಪದಲ್ಲಿ ಕಾಣಬಹುದು. ಅವುಗಳು ಪ್ರತಿಬಿಂಬಿಸುವ ಅನ್ಯೋನ್ಯತೆ, ಜೀವನೋತ್ಸಾಹಗಳು ವೀಕ್ಷಕರ ಮನದಲ್ಲಿ ಅಚ್ಚಳಿಯದೆ ಉಳಿದುಬಿಡುತ್ತವೆ. ಈ ಅದ್ಭುತ ಕಲಾಕೃತಿಗಳು ತಮ್ಮನ್ನು ರೂಪಿಸಿದ ಶಿಲ್ಪಿಗಳು, ಕಲ್ಲುಕುಟಿಗರು ಹಾಗೂ ಕಲಾವಿದರ ಕಲ್ಪನಾಶಕ್ತಿ ಮತ್ತು ಪ್ರತಿಭೆಗಳಿಗೆ ಸಾಕ್ಷಿಯಾಗಿ ಇಂದಿಗೂ ಉಳಿದುಕೊಂಡಿವೆ.



ಸರಿಸುಮಾರು ೧೫೦೦ ವರ್ಷಗಳ ಕಾಲಾವಧಿಯಲ್ಲಿ ಸಂಭವಿಸಿರುವ ದಾಳಿಗಳು, ವಿಧ್ವಂಸಕ ಕೃತ್ಯಗಳನ್ನು ಮೆಟ್ಟಿ ಈಗಲೂ ಉಳಿದುಕೊಂಡಿರುವ ಇಲ್ಲಿನ ಅಪರೂಪದ ಪುಟ್ಟ ಪ್ರತಿಮೆಗಳು ಆ ಪ್ರದೇಶದಲ್ಲಿದ್ದ ಜನಸಾಮಾನ್ಯರ ಬದುಕು ಮತ್ತು ಚಿಂತನೆಗಳನ್ನು ಕಾವ್ಯಮಯವಾಗಿಸುವುದರ ಜೊತೆಗೆ ಅವರ ಜೀವನಶೈಲಿಯನ್ನು ಪರಿಚಯಿಸುತ್ತವೆ.

ಒರಟು ಕಲ್ಲಿನಿಂದ ನಿರ್ಮಿತವಾಗಿರುವ ಇನ್ನೊಂದು ದೇವಾಲಯ ಯಾವ ಪ್ರತಿಮೆಗಳೂ ಇಲ್ಲದೆ ಬಣಗುಟ್ಟುತ್ತಿದೆ. ಅದರ ಹೊರಭಾಗದಲ್ಲಿ ಕಾಲ-ದೇಶಗಳುದ್ದಕ್ಕೂ ಹರಡಿಕೊಂಡಿರುವ ದ್ರಾವಿಡ, ನಾಗರ ಮತ್ತು ಕದಂಬರ ಕಾಲದ ವಿಭಿನ್ನ ಶೈಲಿಗಳನ್ನು ಬಿಂಬಿಸುವ ಹಲವಾರು ಶಿಲಾರಚನೆಗಳಿವೆ. ಬಹುಶಃ ಅವುಗಳನ್ನು ಸೃಷ್ಟಿಸಿದ ಶಿಲ್ಪಿಯಾಗಿ ಶಿಲ್ಪಶಾಸ್ತ್ರಜ್ಞನೇ ತಾಳ್ಮೆ ಕಳೆದುಕೊಂಡಿದ್ದರಿಂದ ಇಲ್ಲವೇ ಅದಕ್ಕಿಂತಲೂ ಮಿಗಿಲಾದ ಕಲಾಕೃತಿಯನ್ನು ರಚಿಸುವ ತವಕದಿಂದ ಭಾಗಶಃ ಕೆತ್ತು ಅಷ್ಟಕ್ಕೆ ನಿಲ್ಲಿಸಿರುವ ರಚನೆಗಳೂ ಇವೆ. ಆದರೆ ಇಲ್ಲಿನ ಶಿಲ್ಪಗಳ ಮಿಶ್ರಿತ ಶೈಲಿ ಮಡಿವಂತರಿಗೆ ರುಚಿಸಲಾರದು.

ಐಹೊಳೆ ಆರನೇ ಶತಮಾನದಿಂದ ಹನ್ನೊಂದನೇ ಶತಮಾನದವರೆಗೂ, ಎಂದರೆ ಸುಮಾರು ಆರು ಶತಮಾನಗಳಷ್ಟು ದೀರ್ಘ ಕಾಲಾವಧಿಯನ್ನು ವ್ಯಾಪಿಸಿಕೊಂಡಿದ್ದ ಒಂದು ಬೃಹತ್ ಪ್ರಯೋಗಶಾಲೆಯಾಗಿದ್ದಿತು ಎನ್ನಬಹುದು. ಜನರು ಹೊಸದನ್ನು ಅರಸುತ್ತಿದ್ದ, ಪ್ರಯೋಗಾತ್ಮಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದ ಕಾಲವದು. ರಾವಲಫಾಡಿ ಗುಹಾಂತರ ದೇವಾಲಯ ಈ ಅಂಶವನ್ನು ಸಾರಿ ಹೇಳುತ್ತದೆ. ಕೆತ್ತನೆ ಕೆಲಸದಿಂದ ಮೂಡಿಬಂದಿರುವ ಅಲ್ಲಿನ ಗೋಡೆಯ ಮೇಲಿನ ಗುರುತುಗಳು ಆ ಕಾಲಮಾನದ ಜನಸಾಮಾನ್ಯರ ಪ್ರಯೋಗಶೀಲತೆಯನ್ನು ಮತ್ತಷ್ಟು ಪುಷ್ಟೀಕರಿಸುತ್ತವೆ. ನೂರಾರು ಸಮಾನಾಂತರ ಮತ್ತು ಒಂದರಲ್ಲೊಂದು ಹಾಸುಹೊಕ್ಕಾಗಿರುವ ರೇಖೆಗಳಿಂದ ನಾಟ್ಯಭಂಗಿಯಲ್ಲಿರುವ ಶಿವನ ಪ್ರತಿಮೆಯನ್ನು ಕೆತ್ತಲಾಗಿದೆ. ಇಡೀ ದಕ್ಷಿಣದಲ್ಲೇ ಅತ್ಯಂತ ವ್ಯವಸ್ಥಿತವಾಗಿ ಮತ್ತು ಯೋಜನಾಬದ್ಧವಾಗಿ ರಚಿಸಲಾಗಿರುವ ಹಾಗೂ ಅತಿ ಪ್ರಾಚೀನ ಎಂದು ಖ್ಯಾತಿಗಳಿಸಿರುವ ಮೇಗುತಿ ದೇವಾಲಯ ಗುಹೆಯ ಮೇಲಿದೆ. ಪ್ರಾಯಶಃ, ಅಂದು ಬದುಕಿದ್ದ ಕವಿ ಕಾಳಿದಾಸನ ಹೆಸರನ್ನೂ ದಾಖಲಿಸಲಾಗಿದೆ, ಇದೊಂದು ಅಸಾಮಾನ್ಯ ಐತಿಹಾಸಿಕ ದಾಖಲೆ.

ಅಂದಿನ ದಿನಗಳಲ್ಲಿ ಇಡೀ ದಕ್ಷಿಣ ಭಾರತವು ಸಂಕ್ಷೋಭೆಯಲ್ಲಿ ಮುಳುಗಿ ಹೋಗಿತ್ತು. ಬೃಹತ್ ಸೈನ್ಯ ಬಲ, ತಳವಾರಿಕೆ, ಯುದ್ಧಕಾಲದಲ್ಲಿ ಬಲಾತ್ಕಾರದಿಂದ ಮಾಡುತ್ತಿದ್ದ ಹಣವಸೂಲಿ ಮತ್ತು ಒತ್ತಾಯದ ದುಡಿಮೆ, ಇವೇ ಪ್ರಾಮುಖ್ಯವಾಗಿದ್ದ ಮೌರ್ಯರ, ಶಾತವಾಹನರ ಕಾಲದಲ್ಲಿದ್ದ ಮತ್ತು ಅದಕ್ಕೂ ಮುಂಚಿನ ಪಲ್ಲವರ ಕಾಲದಲ್ಲಿದ್ದ ಏಕೀಕೃತ ರಾಜ್ಯಪ್ರಭುತ್ವಗಳ ಬದಲು ಹೆಚ್ಚು ಮುಕ್ತವಾದ ಹಾಗೂ ಬದಲಾವಣೆಗಳಿಗೆ ತೆರೆದುಕೊಂಡ ಆರ್ಥಿಕ ಮತ್ತು ರಾಜಕೀಯ ವ್ಯವಸ್ಥೆಗಳು ಕ್ರಮೇಣ ಅಸ್ತಿತ್ವಕ್ಕೆ ಬರತೊಡಗಿದವು. ಚಾಲುಕ್ಯರು, ಗಂಗರು, ಕಂಚಿಯ

## ಸುದ್ದಿಚಿತ್ರ

ನವಕರ್ನಾಟಕ ಪ್ರಕಟಿಸಿರುವ ಪ್ರೊ|| ಚಿ. ಶ್ರೀನಿವಾಸರಾಜು ಅವರ ಮೂಕ ನಾಟಕಗಳ ಇಂಗ್ಲಿಷ್ ಅನುವಾದ 'ಫೀನಿಕ್ಸ್' ಅನ್ನು ದಿನಾಂಕ ೩.೧೨.೨೦೦೫ರ ಸಂಜೆ 'ಹೊಸತು' ಕಚೇರಿಯಲ್ಲಿ ನಿವೃತ್ತ ಐಎಎಸ್ ಅಧಿಕಾರಿ ಶ್ರೀ ಚಿರಂಜೀವ್ ಸಿಂಗ್ ಅನಾವರಣಗೊಳಿಸಿದರು. 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ರಂಗತಜ್ಞ ಶ್ರೀ ವಿ. ರಾಮಮೂರ್ತಿ ಅವರು ಪುಸ್ತಕ ಪರಿಚಯ ಮಾಡಿಕೊಟ್ಟರು. ಹಲವು ಸಾಹಿತ್ಯಾಸಕ್ತ ಗಣ್ಯರು ಭಾಗವಹಿಸಿದ್ದರು.

*ಚಿತ್ರದಲ್ಲಿ*: (ಎಡದಿಂದ ಬಲಕ್ಕೆ) ಶ್ರೀ ಚಿರಂಜೀವ್ ಸಿಂಗ್ ಶ್ರೀ ವಿ. ರಾಮಮೂರ್ತಿ, ಡಾ|| ಜಿ. ರಾಮಕೃಷ್ಣ ಮತ್ತು ಪ್ರೊ|| ಚಿ. ಶ್ರೀನಿವಾಸರಾಜು

ಪಲ್ಲವರು, ರಾಷ್ಟ್ರಕೂಟರು, ಪಾಂಡ್ಯರು, ಎಲ್ಲರೂ ಯುದ್ಧಹೂಡಿಯೇ ದಕ್ಷಿಣ ಭಾರತದಲ್ಲಿ ತಮ್ಮ ನೆಲೆಗಳನ್ನು ಕಂಡುಕೊಳ್ಳುತ್ತಿದ್ದರೂ, ತಮ್ಮದೇ ರಾಜ್ಯಗಳಲ್ಲಿ, ತಮ್ಮದೇ ಪ್ರಭುತ್ವಗಳಲ್ಲಿ ವಿಕೇಂದ್ರೀಕೃತ ಪ್ರಜಾಪ್ರಭುತ್ವದ ಲಕ್ಷಣಗಳುಳ್ಳ ವಿವಿಧ ಆಡಳಿತಾತ್ಮಕ ಪ್ರಯೋಗಗಳನ್ನು ಪೋಷಿಸುತ್ತಿದ್ದರು. ಇದೊಂದು ಗಮನಾರ್ಹ ಅಂಶ. ದಿನನಿತ್ಯದ ಸಾಮಾಜಿಕ, ಆರ್ಥಿಕ ಮತ್ತು ಮತಧಾರ್ಮಿಕ ಆಗುಹೋಗುಗಳ ಮೇಲೆ ರಾಜ ಮನೆತನದ ಹತೋಟಿ ಇದ್ದದ್ದು ಬಹಳ ಕಡಿಮೆ. ಚುನಾವಣೆಗಳು, ಒಮ್ಮತದ ರಾಜಕಾರಣ, ಸ್ಥಳೀಯ ಸಂವಿಧಾನಗಳನ್ನಾಧರಿಸಿದ ಸಭಾಗಳು ಅಂದಿನ ಆಡಳಿತ ಕ್ರಮಕ್ಕೆ ಒಂದು ನಿರ್ದಿಷ್ಟ ಆಯಾಮವನ್ನು ಒದಗಿಸಿಕೊಟ್ಟಿದ್ದುವು, ಸಹಕಾರಿ ಸಂಘಟನೆಗಳು ಮತ್ತು ವರ್ತಕರು, ಕುಶಲಕರ್ಮಿಗಳು, ಕಲಾಕಾರರು, ನೇಕಾರರು, ಕಂಚು ಹಿತ್ತಾಳೆ ಕೆಲಸಗಾರರು, ಎಣ್ಣೆ ವ್ಯಾಪಾರಿಗಳು, ದೇವಾಲಯಗಳಲ್ಲಿ ದುಡಿಯುವವರೇ ಅಲ್ಲದೆ ಪ್ರಾದೇಶಿಕ ಸಭಾಗಳು, ಮಹಾಸಭಾಗಳು, ಜನತೆಯ ಆಶೋತ್ತರಗಳಿಗೆ ಸ್ಪಂದಿಸುವ ಮುಖ್ಯವಾಹಿನಿಗಳಾಗಿದ್ದವು. ಬಹುಶಃ ಈ ಬಗೆಯ ಪ್ರಾದೇಶಿಕ ಮತ್ತು ವಿಕೇಂದ್ರೀಕರಣಗೊಂಡ ಆಡಳಿತಕ್ರಮಗಳಿಂದಾಗಿಯೇ ಅಂದು ಬಹುಮುಖೀ ಸಾಂಸ್ಕೃತಿಕ ಅಭಿವ್ಯಕ್ತಿಯನ್ನು ಹೊಂದಿದ್ದ ಜನರ ಕಲ್ಪನಾಶಕ್ತಿಯು ಬೆಳೆದುಬಂದಿರಬೇಕು. ಕುತೂಹಲಕಾರಿ ಅಂಶವೆಂದರೆ ಹಣ ಮತ್ತು ಭೂಮಿಯನ್ನು ಅನುದಾನದ ರೂಪದಲ್ಲಿ ನೀಡುವುದರ ಮೂಲಕ ಜನರಲ್ಲಿ ವಿಕಸನಗೊಳ್ಳುತ್ತಿದ್ದ ಸಾಂಸ್ಕೃತಿಕ ವೈವಿಧ್ಯತೆ ಮತ್ತು ನಾವೀನ್ಯತೆಯ ತುಡಿತಗಳನ್ನು ಅಧಿಕಾರಶಾಹಿ ಮನಸಾರೆ ಬೆಂಬಲಿಸುತ್ತಿತ್ತು. ಇದರ ಹಿಂದೆ ಪ್ರಜೆಗಳನ್ನು ಒಲಿಸಿಕೊಳ್ಳುವ ಉದ್ದೇಶವೂ ಇತ್ತೆನ್ನಿ. ಗುಪ್ತರ ಆಗಮನದಿಂದಾಗಿ ಇದೇ ಕಾಲಾವಧಿಯಲ್ಲಿ ಭೂ ಒಡೆತನವು ರಾಜ್ಯ ಪ್ರಭುತ್ವದಿಂದ ರೈತರಿಗೆ ಹಸ್ತಾಂತರಗೊಂಡ ಪ್ರಕ್ರಿಯೆಗೂ ಮೇಲೆ ವಿವರಿಸಿದ ಬದಲಾವಣೆಗಳಿಗೂ ಹೋಲಿಸಿ ನೋಡಿದರೆ ಕೆಲವು ಪ್ರಮುಖ ಅಂಶಗಳು ತಿಳಿದುಬರುತ್ತವೆ. ಇಂತಹ ಬದಲಾವಣೆಗಳಿಂದಾಗಿ ದಕ್ಷಿಣದಲ್ಲಾದ ಹಾಗೆಯೇ ಉತ್ತರ ಭಾರತದಲ್ಲೂ ಸಂಸ್ಕೃತಿಯು ಹುಲುಸಾಗಿ ಬೆಳೆಯಲು ಅವಕಾಶವಾಯಿತು.

ರಾಜಕೀಯ ಕ್ಷೇತ್ರದಲ್ಲಿ ಸಂಭವಿಸಿದ ಈ ಪ್ರಮುಖ ಪರಿವರ್ತನೆಯು ಸಿದ್ಧಾಂತದ ವೈವಿಧ್ಯೀಕರಣದೊಂದಿಗೆ ಪ್ರತಿಧ್ವನಿಸುತ್ತದೆ. ರಾಜಮನೆತನಗಳ ಮತ್ತು ವರ್ತಕರ ಬೆಂಬಲ ಪಡೆಯುತ್ತಿದ್ದ ಬೌದ್ಧ ಸಿದ್ಧಾಂತದ ಆಧಿಪತ್ಯವು ಕ್ರಮೇಣ ರೈತರು ಕುಶಲಕರ್ಮಿಗಳನ್ನು ಹೆಚ್ಚು ಪ್ರತಿನಿಧಿಸುತ್ತಿದ್ದ ಹಿಂದೂಗಳ ಹಿತಾಸಕ್ತಿಗಳಿಗೆ ಹಸ್ತಾಂತರಗೊಳ್ಳಲಾರಂಭಿಸಿತು. ಇದೇ ಸಂದರ್ಭದಲ್ಲಿ ವಿರಕ್ತ ಮತ್ತು ಬೌದ್ಧಿಕ ತತ್ವಗಳನ್ನು ಪ್ರತಿಪಾದಿಸುತ್ತಿದ್ದ ಜೈನ ಸಿದ್ಧಾಂತವು ಪ್ರಾಬಲ್ಯಮಾನಕ್ಕೆ ಬರಲಾರಂಭಿಸಿತು. ರಾಜವಂಶದವರು ಹಿಂದೂ ಅಥವಾ ಜೈನ ಮತಕ್ಕೆ ಸೇರಿದವರಾಗಿದ್ದರೂ ಅವರ ಪ್ರಜಾ ಸಮುದಾಯಗಳಲ್ಲಿ ಬೌದ್ಧರು, ಜೈನರು, ಆಜೀವಿಕರು, ಹಿಂದೂಗಳು ಮುಂತಾದವರು ಇರುತ್ತಿದ್ದರು. ಯಾವ ಒಂದು ಸಿದ್ಧಾಂತವೂ ಇಡೀ ಸಮುದಾಯದ ಸಿದ್ಧಾಂತವಾಗಿರಲಿಲ್ಲ. ಹೊಸ ಪದಾರ್ಥಗಳನ್ನು ಹೊಸ ಆಕೃತಿಗಳನ್ನು ಪ್ರಾಯೋಗಿಕವಾಗಿ ರೂಪಿಸಲಾಗುತ್ತಿತ್ತು ಎಂಬುದನ್ನು ಅಂದಿನ ಶಿಲ್ಪಿಗಳು ಮತ್ತು ತಂತ್ರಜ್ಞರು ತಯಾರಿಸುತ್ತಿದ್ದ ವಸ್ತುಗಳಿಂದ ತಿಳಿಯಬಹುದಾಗಿದೆ. ಆ ಪುಟ್ಟ ಐಹೊಳೆಯ ಜನರು ಹೊಸ ಶೈಲಿಯ ಬದುಕಿಗಾಗಿ, ಹೊಸ ಸಂಸ್ಕೃತಿಯ ನಿರ್ಮಾಣಕ್ಕಾಗಿ ಹಾತೊರೆಯುತ್ತಿದ್ದರು. ಇದು ಅಂದು ಸಮಾಜವು ಕ್ರಮಿಸುತ್ತಿದ್ದ ಸಂಕ್ರಮಣದ ಹಾದಿ ಮತ್ತು ನಂತರದಲ್ಲಿ ಬರಲಿದ್ದ ಮಹತ್ತರ ಬದಲಾವಣೆಗಳಿಗೆ ಸೂಚಕವಾಗಿದೆ.

ವಿಶಾಲವಾದ ಹಸಿರು ಹುಲ್ಲುಹಾಸು, ಮರ ಗಿಡಗಳು ಮತ್ತು ಕಲ್ಲುಬಂಡೆಗಳಿಂದ ಆವೃತವಾಗಿರುವ ಇಳಕಲ್‌ನಲ್ಲಿ ನೂರಕ್ಕೂ ಹೆಚ್ಚು ಕಟ್ಟಡಗಳಿವೆ. ಮರಳುಗಲ್ಲು, ಬೆಣಚು ಕಲ್ಲುಗಳಿಂದ ನಿರ್ಮಿಸಲಾಗಿರುವ ಗುಹೆಗಳು ಮತ್ತು ಏಕಶಿಲಾ ಕಟ್ಟಡಗಳಲ್ಲಿ ಜೈನ ದೇವಾಲಯಗಳು, ಹಿಂದೂ ದೇವತೆಗಳ ಪ್ರತಿಮೆಗಳುಳ್ಳ ಬೌದ್ಧ ಚೈತ್ಯಗಳು ನಮ್ಮ ಪೂರ್ವಿಕರು ಆ ಹೊತ್ತಿನ ರಾಜಕೀಯ ಮತ್ತು ಆರ್ಥಿಕ ಸಂಕ್ರಮಣಗಳಿಂದಾಗಿ ಉದ್ಭವಿಸಿದ ಸಾಂಸ್ಕೃತಿಕ ನಿರ್ವಾತಗಳು ಮತ್ತು ಹೊನಲುಗಳ ಸದುಪಯೋಗ ಪಡೆದು ಪರಿವರ್ತನೆಯ ಹಾಗೂ ನವ್ಯತೆಯ ರೂವಾರಿಗಳಾಗಿದ್ದವೆಂಬುದಕ್ಕೆ ಕುರುಹುಗಳಾಗಿವೆ. ಕರ್ನಾಟಕದ ಆ ಭಾಗದಲ್ಲಿ ಪ್ರಚಲಿತವಾಗಿರದ ಮತ್ತು ನಂತರದಲ್ಲಿ ಆಂಧ್ರ ಮತ್ತು ತಮಿಳುನಾಡಲ್ಲಿ ಕಟ್ಟಲಾಗುತ್ತಿದ್ದ ಇಳಿಜಾರಿನ ಚಾವಣಿಗಳುಳ್ಳ ಕಟ್ಟಡಗಳನ್ನು ಕಟ್ಟಲು ಆರಂಭಿಸಿದ್ದರು ಎಂಬುದು ಸ್ಪಷ್ಟವಾಗಿಯೂ ಚಾರಿತ್ರಿಕವಾಗಿಯೂ ಗಮನಾರ್ಹವಾದುದು. ನೋಡುಗರ ಮನಸ್ಸನ್ನು ಸೂರೆಗೊಳ್ಳುವ ಹಾಗೂ ವಿಚಿತ್ರ ಹೆಸರಿನ ಲಡಖನ್ ಮಂಟಪದಲ್ಲಿ ಒರಗಿಕೊಂಡು ಕೂರಬಹುದಾದ ಕಲ್ಲಿನ ಆಸನಗಳಿವೆ. ಇದೇ ಮಾದರಿಯ ಮಂಟಪಗಳಲ್ಲಿ ಸ್ಥಳೀಯರು ಸಭೆ ಸೇರಿ ಐಹಿಕ ಮತ್ತು ಆಡಳಿತಕ್ಕೆ ಸಂಬಂಧಿಸಿದ ವಿಷಯಗಳನ್ನು ಚರ್ಚಿಸುತ್ತಿದ್ದರಂತೆ. ಈ ಮಂಟಪಗಳನ್ನು ಹೋಲುವ ಆದರೆ ವಿಭಿನ್ನ ಶೈಲಿಯ ಮಂಟಪಗಳೂ ಅಲ್ಲಿವೆ. ಚರ್ಚೆಗಳಲ್ಲಿ ಭಾಗವಹಿಸುತ್ತಿದ್ದ ಜನರ ಸೌಕರ್ಯಕ್ಕಾಗಿ ನಿರ್ಮಿಸಲಾಗಿರುವ ಬಾವಿಗಳು, ಕೊಳಗಳು, ತಂಗುದಾಣಗಳು ನೋಡುಗರಲ್ಲಿ ಅಚ್ಚರಿ ಮೂಡಿಸುತ್ತವೆ. ಕೆಲವು ಸಾರ್ವಜನಿಕ ಮತ್ತು ಖಾಸಗಿ ನಿವೇಶನಗಳಲ್ಲಿ ಎಲ್ಲ ವಿಭಾಗದ ಜನರೂ, ವಿವಿಧ ಮತಧರ್ಮೀಯರೂ ಪೂಜಾವಿಧಿಗಳನ್ನು ಆಚರಿಸುತ್ತಿದ್ದರು ಎಂಬ ಚಾರಿತ್ರಿಕ ಸಂಗತಿ ಅಂದಿದ್ದ ಜಡ್ಡುತನವಿಲ್ಲದ ಹಾಗೂ ಮುಕ್ತ ಧಾರ್ಮಿಕ ವಾತಾವರಣ ನಮ್ಮ ದಿವ್ಯ ಪರಂಪರೆಯನ್ನು ನೆನಪಿಸುತ್ತದೆ.

ಐಹೊಳೆಯಿಂದ ಅಮೀನ್‌ಗಢ್ ಮತ್ತು ಬಾಗಲಕೋಟೆಯ ಮೂಲಕ ಸೀರೆಗಳಿಗೆ ಹೆಸರುವಾಸಿಯಾದ ಇಳಕಲ್‌ನತ್ತ ಪಯಣಿಸುವುದು ಒಂದು ಸಂಭ್ರಮವೇ ಸರಿ. ಇಳಕಲ್ ಎರಡು ಪ್ರಬಲ ಆಧ್ಯಾತ್ಮಿಕ ಪರಂಪರೆಗಳು ಒಂದರಲ್ಲೊಂದು ಬೆಸೆದುಕೊಂಡು ಹೊಚ್ಚ ಹೊಸ ಸಂಸ್ಕೃತಿಯೊಂದು ಹುಟ್ಟಿಕೊಂಡ ಅಪೂರ್ವ ಸಂಗಮಸ್ಥಾನ.

ನಮ್ಮ ಪುರಾಣಗಳಲ್ಲಿ ಬರುವ ಅರ್ಧಭಾಗದಷ್ಟು ದೇವದೇವತೆಯರ ವಿಗ್ರಹಗಳು ಇಳಕಲ್‌ನ ಗೋಡೆಯ ಮೇಲೆ ರಾರಾಜಿಸುತ್ತವೆ. ಆದರೆ, ಕೇಂದ್ರಬಿಂದುವಿನಂತೆ ಎಲ್ಲರನ್ನೂ ಆಕರ್ಷಿಸುವುದು ಶ್ವೇತಧಾರಿ ಮಹಂತ ಸ್ವಾಮಿಯ ಭಾವಚಿತ್ರ. ಎಲ್ಲೆಲ್ಲೂ ಧೂಳು ತುಂಬಿಕೊಂಡಿರುವ ಇಳಕಲ್‌ನ ನೇಕಾರರು ಇಂದು ನಿರಾತಂಕ ಬದುಕು ಸಾಗಿಸುತ್ತಿರುವುದು. ಮಹಂತಸ್ವಾಮಿ ಮತ್ತು ಆತನ ಆಪ್ತಮಿತ್ರ ಹಝ್ರತ್ ಸಯ್ಯದ್ ಶಾ ಮುರ್ತುಜಾ ಕ್ವಾದ್ರಿ – ಇಬ್ಬರ ಶ್ರಮ ಮತ್ತು ಮುನ್ನೋಟಗಳಿಂದ. ಇಂದಿಗೂ ಈ ಊರು ಶಾಂತಿ ಮತ್ತು ಕೋಮು ಸೌಹಾರ್ದತೆಯ ತೌರೂರಾಗಿ ಉಳಿದುಕೊಂಡಿರುವುದು ಇವರಿಬ್ಬರ ಕೊಡುಗೆಯಿಂದಲೇ. ತಮ್ಮ ಎಲ್ಲ ಜಂಜಾಟಗಳನ್ನು ಮರೆತು ಸ್ವಲ್ಪ ಕಾಲ ದೂರವಿರಲಿಚ್ಛಿಸುವ ಸಾವಿರಾರು ಜನರು

ಪ್ರತಿವರ್ಷವೂ ಇಳಕಲ್‌ಗೆ ಬರುತ್ತಾರೆ. ಅವರಿಗೆ ಅದೊಂದು ಯಾತ್ರೆಯಿದ್ದಂತೆ. ಕೋಮುವಾದದ ಅಟ್ಟಹಾಸ ಘರ್ಜನೆ ಎಲ್ಲೆಲ್ಲೂ ತಾಂಡವವಾಡುತ್ತಿರುವ ಇಂದಿನ ಸಂದರ್ಭದಲ್ಲಿ ಇಳಕಲ್‌ನ ಮುಸ್ಲಿಮರು ಹಿಂದೂಗಳು ಮಠಗಳಲ್ಲಿ ದರ್ಗಾಗಳಲ್ಲಿ ಭೇದಭಾವಗಳಿಲ್ಲದೆ ಪೂಜಿಸುತ್ತಾರೆ.

ಸುಮಾರು ೧೯ನೇ ಶತಮಾನದ ಮಧ್ಯಭಾಗದಲ್ಲಿ ಬಸವಣ್ಣನ ಪಂಥಕ್ಕೆ ಸೇರಿದ ಇಳಕಲ್ ಮಠದ ಮುಖ್ಯಸ್ಥನಾಗಿ ಮಹಂತಸ್ವಾಮಿ ಜವಾಬ್ದಾರಿ ಹೊತ್ತು ಸ್ಥಳೀಯರಿಗೆ ಆಪ್ತನಾಗುತ್ತಾನೆ. ಶಾಂತಿ, ಸೌಹಾರ್ದತೆ ಮತ್ತು ಜಾತ್ಯತೀತ ಸಮಾಜದಲ್ಲಿ ನಂಬುಗೆ ಇರುವವರೆಲ್ಲರೂ ಆತನಿಗೆ ಬಂಧುಗಳು. ಇದೇ ಕಾಲಾವಧಿಯಲ್ಲಿ ಸಮಾನಮನಸ್ಕರಾದ ಮಹಂತಸ್ವಾಮಿ ಮತ್ತು ಸೂಫಿ ಸಂತ ಹರ್ಝ್ರತ ಮುರ್ತುಜ, ಇಬ್ಬರೂ ಗಾಢ ಸ್ನೇಹಿತರಾಗಿ ಅಲ್ಲಿನ ಸುತ್ತಮುತ್ತಲಿನ ಗುಡ್ಡಗಾಡು ಪ್ರದೇಶಗಳಲ್ಲಿ ಅಡ್ಡಾಡುತ್ತ ದೂರದಲ್ಲಿ ಮರೆಯಾಗಿಹೋಗುತ್ತಿದ್ದರ ಬಗ್ಗೆ ಹಲವಾರು ದಂತಕತೆಗಳು ಐತಿಹ್ಯಗಳನ್ನು ಸ್ಥಳೀಯರು ಹೆಮ್ಮೆಯಿಂದ ಹೇಳುತ್ತಾರೆ.

ಅಲ್ಲಿನ ಕೆಲವು ಮಠಗಳಲ್ಲಿ ಇಂದಿಗೂ ಚಾಲನೆಯಲ್ಲಿರುವ ಕಟ್ಟುಪಾಡುಗಳನ್ನು ನೋಡಿದರೆ ಮುಖ್ಯವಾಹಿನಿಯ ಕೆಲವು ನೇತ್ಯಾತ್ಮಕ ಪ್ರಭಾವಗಳ ಬಿಸಿ ಇಳಕಲ್‌ನಂತಹ ಊರಿಗೂ ತಟ್ಟುತ್ತಿದೆಯೇನೋ ಎಂಬ ಸಂಶಯ ಪ್ರವಾಸಿಗರನ್ನು ಕಾಡುವುದು ಸಹಜ.

ಪ್ರತಿಯೊಂದು ಹಬ್ಬದ ಸಂದರ್ಭದಲ್ಲಿಯೂ ಒಂದು ಕೋಮಿನವರು ಇನ್ನೊಂದು ಕೋಮಿನವರ ಹಬ್ಬದಲ್ಲಿ ಪಾಲ್ಗೊಳ್ಳುತ್ತಾರೆ. ಮಠಗಳು ದರ್ಗಾಗಳಲ್ಲಿ ಹಬ್ಬದ ವಾತಾವರಣವಿರುತ್ತದೆ. ಇಳಕಲ್‌ನ ಈ ಅಪರೂಪದ ಭ್ರಾತೃಭಾವ ಏಕೋ ಏನೋ ಸಂಕುಚಿತ ಮನೋಭಾವವುಳ್ಳ ತೀವ್ರಗಾಮಿ ವಿಶ್ವಹಿಂದೂ ಪರಿಷತ್ ಮತ್ತು ಆರೆಸ್ಸೆಸ್ ಮತಾಂಧರ ಕೆಂಗಣ್ಣಿಗೆ ಇನ್ನೂ ಗುರಿಯಾಗಿಲ್ಲ. ಈ ಅದ್ಭುತ ಪರಂಪರೆ, ಈ ಸಮನ್ವಯ ಒಂದು ದಿನದಲ್ಲಿ ರೂಪುಗೊಂಡಿದ್ದಲ್ಲ. ಸೂಫಿಗಳು ಮತ್ತು ಬಸವ ಹಾಗೂ ಅವನ ಅನುಯಾಯಿಗಳು ಕಂಡ ಕನಸುಗಳನ್ನು ಭಗ್ನಗೊಳಿಸಲು ಅನೇಕ ಆಂತರಿಕ ಸಂಘರ್ಷಗಳು ಮತ್ತು ಹೋರಾಟಗಳು ಜರುಗಿಹೋಗಿವೆ. ಆದರೂ ಇವೆಲ್ಲವನ್ನೂ ಮೆಟ್ಟಿನಿಂತು ಇಂದಿಗೂ ಆ ಸೌಹಾರ್ದ ಪರಂಪರೆ ಜೀವಂತವಾಗಿದೆ.

ಇನ್ನು, ಇಲ್ಲಿನ ಪ್ರಖ್ಯಾತ ರೇಶ್ಮೆ ಸೀರೆಗಳನ್ನು ತಯಾರಿಸುವ ಕೇಂದ್ರಕ್ಕೆ ಭೇಟಿ ನೀಡದೆ ಇಳಕಲ್ ಪ್ರವಾಸ ಪೂರ್ಣವಾಗುವುದಿಲ್ಲ. ಕೋಮು ಸೌಹಾರ್ದತೆಯ ನೆನಪುಗಳನ್ನು ಮೆಲುಕುಹಾಕುತ್ತಲೇ ಸಮೀಪದ ದರ್ಗಾದ ಪಕ್ಕದಲ್ಲಿರುವ ನಾಲೆಯನ್ನು ದಾಟಿದರೆ ದಾರಿಯುದ್ದಕ್ಕೂ ಸಾಲುಮರಗಳಿವೆ. ಸಾಲುಮರಗಳಿಗೆ ತಾಗಿದಂತೆಯೇ ನೇಕಾರರ ಪುಟ್ಟ ಕುಟೀರಗಳು. ಆ ನೇಕಾರರ ಕುಶಲತೆಯನ್ನು ನೋಡಿ ಮೆಚ್ಚದವರು ವಿರಳ. ವೈಶಿಷ್ಟ್ಯವೆಂದರೆ, ಈಗೀಗ ಮಗ್ಗಗಳನ್ನು, ಅದಕ್ಕೆ ಬೇಕಾಗುವ ಸಣ್ಣಪುಟ್ಟ ಪರಿಕರಗಳನ್ನು ಸ್ಥಳೀಯರೇ ತಯಾರಿಸುವುದರ ಜೊತೆಗೆ ಅವುಗಳ ರಿಪೇರಿ ಕೆಲಸವನ್ನು ಮಾಡಿಕೊಳ್ಳುತ್ತಾರೆ. ಇದಕ್ಕಾಗಿ ತಮ್ಮದೇ ಆದ ತಾಂತ್ರಿಕತೆಯನ್ನು ರೂಪಿಸಿಕೊಂಡಿದ್ದಾರೆ.

ಪ್ರವಾಸದ ಕಡೆಯ ಹಂತದಲ್ಲಿ ಅಲ್ಲೊಂದು ಮಠ ಪ್ರವಾಸಿಗರ ಗಮನ ಸೆಳೆಯುತ್ತದೆ. ಅದರ ಗೋಡೆಗಳು ಅನೇಕ ಛಾಯಾಚಿತ್ರ ಮತ್ತು ಪ್ರತಿಮೆಗಳಿಂದ ತುಂಬಿಹೋಗಿವೆ. ಅವುಗಳಲ್ಲಿ ಮಹಂತರು, ಬಸವಣ್ಣನ ಶಿಷ್ಯರು, ಅಂಬೇಡ್ಕರ್ ಮತ್ತು ಹಲವು ಸ್ವಾತಂತ್ರ್ಯ ಹೋರಾಟಗಾರರ ಭಾವಚಿತ್ರಗಳೂ ಇವೆ. ಜೊತೆಗೆ, ಅಕ್ಕ ನಾಗಮ್ಮ, ಬಸವಣ್ಣನ ಹೆಂಡತಿಯರಾದ ಗಂಗಮ್ಮ ಮತ್ತು ನೀಲಮ್ಮ, ಕವಯಿತ್ರಿ ಅಕ್ಕಮಹಾದೇವಿ, ಕ್ಷೌರಿಕನೊಬ್ಬನ ಹೆಂಡತಿ ಲಿಂಗಮ್ಮ, ಕಾಶ್ಮೀರದ ರಾಣಿ ಮಹಾದೇವಿ, ಚಮ್ಮಾರನೊಬ್ಬನ ಹೆಂಡತಿ ಕಲ್ಯಾಣಿ – ಇವರೆಲ್ಲರ ಚಿತ್ರಗಳು ಗೋಡೆಗಳನ್ನು ಅಲಂಕರಿಸಿವೆ. ಇವರೆಲ್ಲರೂ ಸ್ತ್ರೀ ವಿಮೋಚನೆಗಾಗಿ ಹೋರಾಡಿದ ದಿಟ್ಟ ಮಹಿಳೆಯರು ಎಂದು ಇಲ್ಲಿ ಪ್ರತ್ಯೇಕವಾಗಿ ಹೇಳುವ ಅಗತ್ಯವಿಲ್ಲ.

ಇಳಕಲ್ ಪ್ರವಾಸಕ್ಕೆ ಒಂದೆರಡು ದಿವಸಗಳು ಏನೇನೂ ಸಾಲದು. ಐಹೊಳೆ-ಇಳಕಲ್ ಭೇಟಿಯಿಂದ ಮೂಡಿ ಬರುವ ಅರಿವು, ಹೊಸ ಅನುಭವ ಪ್ರವಾಸಿಗರನ್ನು ಆಳವಾದ ಚಿಂತನೆಗೆ ಹಚ್ಚುತ್ತವೆ. ಉದಾತ್ತ ಭಾರತೀಯ ಪರಂಪರೆಯನ್ನು ನೆನಪಿಸುತ್ತಲೇ ಈ ಎರಡೂ ಪ್ರವಾಸ ತಾಣಗಳು ಇಂದು ಸಮಾಜವನ್ನು ಪೀಡಿಸುತ್ತಿರುವ ಮತಾಂಧತೆಯ ವಿರುದ್ಧ ಹೋರಾಡಲು ನಮಗೆ ಸ್ಫೂರ್ತಿ ನೀಡುತ್ತವೆ.


ಡಾ|| ಸಂಜಯ್ ಬಿಸ್ವಾಸ್

ಮೆಕ್ಯಾನಿಕಲ್ ಇಂಜಿನಿಯರಿಂಗ್ ಪ್ರಾಧ್ಯಾಪಕರು, ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು - ೫೬೦ ೦೧೨


ಕನ್ನಡಕ್ಕೆ : ಎಸ್. ಸುರೇಂದ್ರ

# ನನ್ನ ಯಂತ್ರಾಲರ್ಜಿ

ಭುವನೇಶ್ವರಿ ಹೆಗಡೆ



**ಪ್ರಾ**ಣಿಗಳು ಮನುಷ್ಯರ ಹಾಗೆ ಬುದ್ಧಿ ಭಾವನೆ ಎಲ್ಲವನ್ನೂ ಹೊಂದಿವೆ ಎಂದು ಆಗಾಗ ತಜ್ಞರು ಹೇಳುತ್ತಾರೆ. ಯಂತ್ರಗಳಿಗೂ ಬುದ್ಧಿ ಇದೆ (ದುರ್ಬುದ್ಧಿ ಸಹ ಇದೆ). ಕಿಡಿಗೇಡಿತನ, ವಿಘ್ನ ಸಂತೋಷಿತ್ವ, ಅಹಂಕಾರ ಮುಂತಾದ ಮನುಷ್ಯ ಸಹಜ ಗುಣ ದುರ್ಗುಣಗಳೂ ಯಂತ್ರಕ್ಕಿವೆ ಎಂಬುದು ನನ್ನ ವಿನೀತ ಅಭಿಪ್ರಾಯವಾಗಿರುತ್ತದೆ.

ನನ್ನ ಈ ಅಭಿಪ್ರಾಯದ ಹಿಂದೆ ನೂರಾರು ಅನುಭವಗಳ ಆಧಾರವಿದೆ. ನಮ್ಮದು ಐದು ಅಂತಸ್ತುಗಳ ಒಂದು ಬಹುಮಹಡಿ ವಸತಿ ಸಮುಚ್ಚಯ. ನನ್ನ ಮನೆ ಮೊದಲನೇ ಅಂತಸ್ತಿನಲ್ಲಿಯೇ ಇರುವುದರಿಂದ ನಮ್ಮ ಲಿಫ್ಟಿನ ಒಲ್ಮೆಕೆ ನನಗಷ್ಟು ಬೇಕಿಲ್ಲ, ಆದರೂ ರೇಷನ್ನು ತಂದಾಗ ಗ್ಯಾಸು ಬಂದಾಗ ಲಿಫ್ಟಿನ ಬಟನ್ ಒತ್ತಿ 'ಹಾಯ್' ಎನ್ನಬೇಕಾಗುತ್ತದೆ.

ಹಾಗೆ ನಾನು ಹಾಯ್ ಎಂದಾಗಲೆಲ್ಲ ಅದು ಪ್ರತಿಯಾಗಿ ಹಲೋ ಎನ್ನುತ್ತದೆಯೆಂದು ಹೇಳಲಾಗುವುದಿಲ್ಲ. ಕೆಲ ಬಾರಿ ಗುಮ್ಮೆಂದು ಕೋಪಿಸಿಕೊಂಡಿದ್ದು ಮಿಸುಕಾಡುವುದೇ ಇಲ್ಲ. ಅಷ್ಟೇ ಹೋಯ್ತು ಎರಡು ಕಾಲಿನ್ನಿ ಮೆಟ್ಟಿಲೇರುತ್ತೇನೆ. ಆದರೆ ಸಾಮಾನು! ಮೂಟೆ! ಲಿಫ್ಟಿನೆದುರು ಪ್ರಾರ್ಥನೆ ಮುಂದುವರೆಯುತ್ತದೆ.

''ಒಂದೇ ಒಂದು ಬಾರಿ ಮಿಸುಕಾಡು ಯಂತ್ರವೇ, ಇದೊಂದು ಗ್ಯಾಸ್ ಸಿಲಿಂಡರ್ ಮನೆಗೆ ಸೇರಿಸಿ ಕೈ ಮುಗಿದುಬಿಡುತ್ತೇನೆ. ಆಮೇಲೆ ನಿನ್ನ ಸಹವಾಸ ಬೇಡ.''

ಯಂತ್ರಕ್ಕೇನು ಅಂತಃಕರಣವೇ ? ಕ್ಯಾರೇ ಅನ್ನುವುದಿಲ್ಲ. ಅನಿವಾರ್ಯವಾಗಿ ಫೋನೆತ್ತಿ 'ಹಲೋ ಲಿಫ್ಟ್ ಸರ್ವಿಸ್' ಎನ್ನಬೇಕಾಗುತ್ತದೆ. ಪ್ರತಿಬಾರಿಯೂ ಲಿಫ್ಟ್ ಕೆಟ್ಟಿದೆ ಎಂದೇ ಹೇಳಿ ಸಾಕಾಗಿ ಒಂದು ದಿನ ನಮ್ಮ ಲಿಫ್ಟ್ ಯಾರಿಗೂ ಲಿಫ್ಟ್ ಕೊಡುತ್ತಿಲ್ಲ ಎಂದು ಹೇಳಿದೆ. ಏನು ಏನಂದ್ರಿ ? ಎಂದು ಕೇಳಿದಾಕೆಗೆ ಪುನಃ ಮಾಮೂಲು ಭಾಷೆಯಲ್ಲಿಯೇ ಅಲವತ್ತುಕೊಂಡ ಮೇಲೇ ಈಗ ರಿಪೇರಿಯಾತನನ್ನು ಕಳಿಸುತ್ತೇನೆ ಎಂದಳು.

ನಾವು ತನ್ನನ್ನು ತಮಾಷೆ ಮಾಡುತ್ತೇವೆಂಬ ವಿಷಯ ಅದಕ್ಕೆ ಹೇಗೆ ತಿಳಿಯಿತೋ ಒಂದಿಡೀ ದಿನ ನಮ್ಮನ್ನು ಗೋಳು ಹುಯ್ದುಕೊಂಡು ತೃಪ್ತಿ ಪಟ್ಟುಕೊಂಡಿತು. ಬೆಳಿಗ್ಗೆ ವಾಕ್ ಮಾಡಿ ಸುಸ್ತಾಗಿ ಬಂದ ಒಬ್ಬ ಮಹಿಳೆಗೂ ಲಿಫ್ಟ್ ಕೊಡದೆ ಸೀದಾ ಮೇಲಿನ ಮಹಡಿಗೆ ಹೋಗಿ ನಿಲ್ಲ ತೊಡಗಿತು. ಯಾರೂ ಕರೆಯದಿದ್ದರೂ ನೆಲ ಅಂತಸ್ತಿಗೆ ಬಂದುಬಿಡುವುದು. ಅಲ್ಲಿ ಯಾರಾದರೂ ಕಾಯುತ್ತಿದ್ದುದು ಕಣ್ಣಿಗೆ (!) ಬಿದ್ದರೆ ಅವರನ್ನು ಅಣಕಿಸಿ ಮೇಲೆ ಹೋಗಿ ಮನಸ್ಸಿಗೆ ಬಂದ ಮಹಡಿಯಲ್ಲಿ ನಿಂತುಬಿಡುವುದು.

ಥೇಟ್ ಕೋತಿಯ ಹಾಗೆ ಮೇಲೆ ಕೆಳಗೆ ಜಿಗಿದಾಟ. ಈ ಕಪಿಚೇಷ್ಟೆ ನೋಡಿ ಬೊಬ್ಬೆ ಮಾಡಿ ನಗುವ ಮಕ್ಕಳ ಸೈನ್ಯದ ಅಬ್ಬರ. ತಲೆ ಕೆಟ್ಟು ಹೋಯ್ತು. ಲಿಫ್ಟ್ ಸರ್ವೀಸ್‌ಗೆ ಫೋನು ಮಾಡಿ, ''ನೀವು ಮೊನ್ನೆ ರಿಪೇರಿ ಮಾಡಿ ಹೋದ ಲಿಫ್ಟಿಗೆ ಪುನಃ ಹುಚ್ಚು ತಲೆಗೇರಿದೆ. ಬಟನ್ ಪ್ರೆಸ್ ಮಾಡದಿದ್ರೂ ಕಂಡ ಕಂಡ ಮಹಡಿಗೆ ಹೋಗಿ ನಿಲ್ಲುವುದು, ಕರೆದಾಗ ಬಾರದಿರುವುದು... ನಮ್ಮ ತಾಳ್ಮೆ ಪರೀಕ್ಷಿಸ್ತಾ ಇದೆ'' ಎಂದು ಪ್ರೆಸ್ ಮಾಡಿ ಹೇಳಿದೆ.

ರಿಪೇರಿಯಾತ ಬಂದು ಸುಮಾರು ಹೊತ್ತು Lift under repair, kindly use the staircase ಎಂಬ ಬೋರ್ಡು ತಗಲಿಸಿಕೊಂಡು ಒಳಗಿದ್ದು ಸರಿಯಾಯ್ತು ಎಂದು ಹೇಳಿ ಹೋದ. ಅಷ್ಟರ ನಂತರವೂ ನಾನು ಒಳಸೇರಿ ಬಾಗಿಲೆಳೆದು ಒಂದನೇ ಅಂತಸ್ತಿನ ಬಟನ್ ಒತ್ತಿದಾಗ ಸೀದಾ ನಾಲ್ಕಕ್ಕೆ ಹೋಗುವುದು, ನಿಲ್ಲು ಎಂದು ಬಟನ್ ಒತ್ತಿದರೆ ಕೆಳಗೆ ತಂದು ಬಿಡುವುದು ಮಾಡಿಕೊಂಡೇ ಇದೆ. ಅಂಕೆ ಇಲ್ಲದ, ಭಾಷೆ ತಿಳಿಯದ 'ಕರೆಂಟ್ ಕಪಿ' ಯೊಂದನ್ನು ಸಾಕಿಕೊಂಡಿದ್ದೇನೆ ಎಂದು ಭಾವಿಸಿಕೊಂಡ ಮೇಲೆ ನನ್ನ ತಲೆ ಬಿಸಿ ಕಡಿಮೆಯಾಯ್ತು.

ಇನ್ನೊಂದು ದಿನ ಭಾನುವಾರ ಮಂಗಳೂರಲ್ಲಿ ಜಿಟಿ ಜಿಟಿ ಮಳೆ. ''ಅಷ್ಟೂ ಹೋಂ ವರ್ಕ್ ಕ್ಷಣಾರ್ಧದಲ್ಲಿ ಮುಗಿಸಿಬಿಟ್ಟರೆ ಏನ್ ಕೊಡಿಸ್ತೀಯ ?'' ಮಗಳ ಮಾಮೂಲು ಪ್ರಶ್ನೆ. ''ನೀನಿಷ್ಟಪಟ್ಟ ಹೋಟೆಲಲ್ಲಿ ಜಾಮೂನು, ಮಸಾಲೆ ದೋಸೆ...'' ಆಶ್ವಾಸನೆ ನೀಡಿಬಿಟ್ಟೆ. ಹೋಂ ವರ್ಕಿಗೂ ಲಂಚ ಬಂದರೆ ತಂದೆ ತಾಯಿಗಳ ಗತಿ ? ಎಂದು ಆಲೋಚಿಸದೆ ಆಶ್ವಾಸನೆ ನೀಡಿಯಾಗಿತ್ತು. ಚಕಾ ಚಕ್ ಹೋಂ ವರ್ಕ್ ಮುಗಿಸಿ ಮಗಳು ಹೊರಟು ನಿಂತಾಗಿತ್ತು.

ಹೊರಟು ನಿಂತು ಪರ್ಸ್ ತೆರೆಯುತ್ತೇನೆ ಸರಿಯಾಗಿ ಐವತ್ತು ರೂಪಾಯಿಯೂ ಇಲ್ಲ. ''ಹೋಟೆಲ್ ಒಳಗೆ ಹೋಗಿ ನೀರು ಕುಡಿಯಲೂ ಸಾಕಾಗುವಷ್ಟಿಲ್ಲ ಮಗಳೇ. ಇನ್ನೊಂದಿನ ಹೋಗೋಣ್ವಾ ?'' ಎಂದೆ. ''ಕೆಲಸ ಮಾಡಿಸ್ಕೊಂಡು ಕೈ ಕೊಡೋರ ಥರ ಆಡ್ಬೇಡ. ಎಟಿಎಂ ಕಾರ್ಡು ತಗೋ ಹೋಟೆಲ್ ಪಕ್ಕಾನೆ ನಿಮ್ಮ ಬ್ಯಾಂಕಿನ ಎಟಿಎಂ ಇದೆ ತಾನೆ ? ಹಣ ಜಣ ಜಣ...'' ಎಂದಳು.

ಸರಿ ಹೋಗಿಳಿದು ಬಾಗಿಲಿಗೆ ಕಾರ್ಡು ಸ್ಪರ್ಶಿಸಿ 'ಖುಲ್ ಜಾ ಎಟಿಎಮ್' ಎಂದದ್ದೇ ಬಾಗಿಲು ತೆಗೆಯಿತು. ತಾಯಿ ಮಗಳು ಇಬ್ಬರೂ ಒಳಹೊಕ್ಕು ಮಿಶನ್ನಿನ ಸ್ಕ್ರೀನಿನೆದುರು ನಿಂತು ಹಲ್ಕಿರಿದೆವು. ಆ ಯಂತ್ರ ಹಾಗೂ ನಮ್ಮ ನಡುವೆ ನಡೆದ ಸಂಭಾಷಣೆಯ ಭಾವಾನುವಾದ ಸುಮಾರಾಗಿ ಹೀಗಿತ್ತು :

''ಹಿಂದಿ ಕಲ್ತಿದೀರಾ ಇಂಗ್ಲಿಷಾ ?''

''ಯಾವದಾದ್ರೂ ಸರಿ ಇಂಗ್ಲಿಷೇ ಇರ್ಲಿ.''

''ಏನು ಬೇಕು ?''

''ಕ್ಯಾಷು ಕಡವು (ಪ್ಪು).''

''ಗುಟ್ಟಿನ ನಂಬರ್ ಏನು ?''

''ರಟ್ಟು ಮಾಡದಿದ್ರೆ ಹೇಳ್ತೀನಿ.''

''ಹಣ ಮಾತ್ರ ಸಾಕಾ ರಶೀದಿನೂ ಬೇಕಾ ?''

''ರಶೀದಿ ಬೇಕಪ್ಪ.''

''ನಿಧಾನ ಕೊಡಬಹುದಾ ನಿಂತ ಮೆಟ್ಲಲ್ಲಿ ಬೇಕಾ ?''

''ಬೇಗ ಬೇಗ ಬೇಕು. ಮಸಾಲೆ ದೋಸೆ ತಿನ್ಬೇಕು''

...ಈ ಥರದ ಪ್ರಶ್ನೋತ್ತರ ಮಾಲಿಕೆ ಸ್ಕ್ರೀನ್ ಬಟನ್ ಮೂಲಕ ನಡೆದು ಕೊನೆಗೂ ನಮ್ಮ ಹಣ ಇನ್ನೇನು ಉದುರುತ್ತದೆ ಎಂಬ ಕ್ಷಣದಲ್ಲಿ ಯಂತ್ರಕ್ಕೆ ಅದೇನು ಕೋಪ ಬಂತೋ ರಾಂಗ್ ಆಗಿ ನಿಂತುಬಿಟ್ಟಿತು. ನಮ್ಮ ಇಡೀ ಕಾರ್ಡನ್ನೇ 'ಗುಳುಂ' ಎಂದು ನುಂಗಿಬಿಟ್ಟಿತು.

''ಕ್ಷಮಿಸಿ, ನಿಮ್ಮ ಕಾರ್ಡು ನನ್ನ ಹೊಟ್ಟೆಯೊಳಗೆ ಹೋಗಿ ಕುಳಿತಿದೆ. ಮುಂದಿನ ವಿವರಕ್ಕಾಗಿ ನನ್ನ ಒಡೆಯನನ್ನು ಸಂಪರ್ಕಿಸಿ'' ಎಂದು ಹೇಳಿತು. ಅವತ್ತು ಭಾನುವಾರ ಯಾವ ಒಡೆಯ ಧಣಿಯೂ ಬ್ಯಾಂಕಿನಲ್ಲಿಲ್ಲ. ಅಲ್ಲದೆ ಕಾರ್ಡು ತಾಗಿಸಿ ''ಅಂದರ್ ಸೇ ಖುಲ್ ಜಾ ಎಟಿಎಮ್'' ಎನ್ನದಿದ್ದರೆ ಹೊರ ಬರುವ ಚಿಂತೆಯೂ ಇಲ್ಲ. ಗಾಬರಿಯಾದ ಮಗಳು ಇನ್ಮೇಲೆ ಹೋಂವರ್ಕಿಗೆ ಲಂಚ ಕೇಳಲ್ಲ ಅಮ್ಮ... ಎನ್ನತೊಡಗಿದಳು.

ದಿಕ್ಕು ತೋಚದ ಸ್ತಬ್ಧತೆಯಿಂದ ಸುಮ್ಮನೆ ನಿಂತೆವು. ಕೊಡೆ ಇಲ್ಲದ ಯುವ ಜೋಡಿಯೊಂದು ಮಳೆಯಿಂದ ರಕ್ಷಣೆ ಪಡೆಯಲು ಎಟಿಎಮ್ ಮೆಶೀನಿನ ಮುಂಭಾಗದ ಮೆಟ್ಟಿಲ ಮೇಲೆ ಬಂದು ನಿಂತಿತು. ಅವೇನು ಮಾತಾಡಿಕೊಳ್ಳುತ್ತಿದ್ದರೋ ನಮಗೆ ಕೇಳುತ್ತಿರಲಿಲ್ಲ. ನಾವು ಹೇಳಿದ್ದು ಸಹ ಅವರಿಗೆ ಕೇಳ್ತಿಲ್ಲ. ಸಿಕ್ಕ ಕಾಗದದಲ್ಲಿ ಒಂದು ಚೀಟಿ ಬರೆದು ಬಾಗಿಲಡಿ ತೂರಿಸಿದೆ.

''ಯುವ ಮಿತ್ರರೇ ನೀವ್ಯಾರೇ ಆಗಿದ್ದರೂ ನಿಮ್ಮ ಮನದಿಚ್ಛೆ ನೆರವೇರಲಿ. ನನ್ನ ಆಶೀರ್ವಾದ ನಿಮಗೆ ಮೀಸಲು. ಆಪತ್ತಿನಲ್ಲಿ ಸಿಲುಕಿಕೊಂಡ ನಮಗೆ ಸಹಾಯ ಮಾಡುವಿರಾ ? ಪಕ್ಕದ ಮೋಹಿನಿ ವಿಲಾಸದ ಭಟ್ಟರಿಗೆ ನಿಮ್ಮ ಮಸಾಲೆ ದೋಸೆ ಗಿರಾಕಿಗಳಿಬ್ಬರು ಕ್ಯಾಶ್ ಬಾಕ್ಸಿನಲ್ಲಿ ಬಂಧಿತರಾಗಿದ್ದಾರೆ. ನಿಮ್ಮ ಎಟಿಎಂ ಕಾರ್ಡು ಹಿಡಿದು ತಕ್ಷಣ ಬನ್ನಿ ಎಂದು ಹೋಗಿ ಹೇಳಿ. ಇಂತು ಬಂಧಿತ ಬಾಧಿತೆ'' ಎಂದು ಬರೆದಿದ್ದೆ.

ಯುವ ಜೋಡಿ ಕೈಸನ್ನೆ ಮಾಡಿ ಹೆದರಬೇಡಿರೆಂದು ಹೇಳಿ ಹೋಟೆಲ್ಲು ಹೊಕ್ಕಿತು. ಎರಡು ನಿಮಿಷದಲ್ಲಿ ಭಟ್ಟರು ಪ್ರತ್ಯಕ್ಷರಾಗಿ ತನ್ನ ಕಾರ್ಡು ತೋರಿಸಿ ಒಂದ್ ಮಸಾಲ್ ದೋಸೆ ಎಂಬಷ್ಟೇ ಜೋರಾಗಿ ''ಖುಲ್ ಜಾರೇ ಸೈತಾನ್'' ಎಂದುಸುರಿದರು. ಬಾಗಿಲು ತೆರೆದು ನಮ್ಮನ್ನು ನೋಡಿ,

''ಓ ನೀವಾ ? ಎಂಥದು ಮಾರಾಯ್ರೆ ?'' ಎಂದರು. ನಾನು ಹೀಗ್ಹೀಗೆ ಎಂದು ಕತೆ ಬಿಚ್ಚುವಷ್ಟರಲ್ಲಿ ತಾಳ್ಮೆಗೆಟ್ಟ ಮಗಳು ಏನೇನೂ ಬೇಡ ಮನೆಗೆ ಹೋಗೋಣ ಎಂದು ಪ್ರಾರಂಭಿಸಿದಳು.

''ಛೇ ಛೇ ಹದಿನೈದು ವರ್ಷದಿಂದ ಪರಿಚಿತರಾದ ನಾವಿಲ್ಲವೋ ? ದೋಸೆ, ಜಾಮೂನು ಎಲ್ಲಾ ತಿಂದು ಹೋಗಿ. ಹಣ ಮತ್ತೆ ಬಂದಾಗ ಕೊಡಿ ಕಾಂಬ'' ಎಂದು ಉಪಚರಿಸಿದರು ಭಟ್ಟರು. ಅವರು ಭಟ್ಟರು, ಎಟಿಎಮ್ ಮಶೀನ್ ಅಲ್ಲ ಎಂಬ ಭಾವನೆಯೇ ನನಗೆಷ್ಟೋ ನೆಮ್ಮದಿ ನೀಡಿತು.

ತಿನ್ನಬೇಕಾದ್ದೆಲ್ಲ ತಿಂದು, ''ಭಟ್ರೇ ನೂರು ರೂಪಾಯಿ ಕೊಡಿ ನಾಳೆ ಬ್ಯಾಂಕು ತೆಗೆಯುತ್ತಲೇ ಬಂದು ಕೊಡ್ತೇನೆ'' ಎಂದು ತೀರಾ 'ಮನುಷ್ಯ ಸಹಜ' ಕೈಗಡ ಮಾಡಿ ಮನೆ ಸೇರಿದೆ.

ನನ್ನ ಜನ್ಮ ನಕ್ಷತ್ರಕ್ಕೂ ಯಂತ್ರಗಳಿಗೂ ಅದೇನು ಹೊಂದಿಬರುವುದಿಲ್ಲವೋ ತಿಳಿಯದು. ''ಯಂತ್ರಗಳಿಗಿಂತ ಮಾನವರನ್ನೇ ಹೆಚ್ಚು ನಂಬಬಹುದು'' ಎಂದು ಯಾವುದೇ ಯಂತ್ರದ ಮುಂದೆ ನಿಂತು ನಾನು ಘೋಷಿಸಬಲ್ಲೆ. ನಿಮ್ಮ ಅನುಭವ ? ಬೇರೆ ಇದ್ದರೆ ನನ್ನ ಅಭ್ಯಂತರವಿಲ್ಲ.



**ಭುವನೇಶ್ವರಿ ಹೆಗಡೆ**
೧೦೧, ರತ್ನಾ ಅಪಾರ್ಟ್‌ಮೆಂಟ್ಸ್, ಕದ್ರಿ ಮಾರ್ಕೆಟ್
ಮಂಗಳೂರು - ೨

# ಗೊಂದಲಪುರದಲ್ಲಿ ಜಾಗ್ತೀಕರ್ಣ

ಪ್ರತಿದಿನ ಗೊಂದಲಪುರದ ಜನರು ಗುಂಡಯ್ಯನ ಬಂಡೆಯ ದಾರಿಯಲ್ಲಿ ಈರಾಂಜಣಿ ಕಟ್ಟಿಸುತ್ತಿರುವ ಅರಮನೆಯಂಥ ದೊಡ್ಡಮನೆಯ ಕಡೆ ಸುಳಿದು ಬಂದು ಆ ವಿಷಯ ತಮ್ಮಲ್ಲೇ ಮಾತಾಡಿಕೊಳ್ಳುತ್ತಿದ್ದರು. ಈ ಕಾರಣದಿಂದ ಊರಿನಲ್ಲಿ ನಡೆಯುತ್ತಿದ್ದ ಸಣ್ಣಪುಟ್ಟ ಜಗಳಗಳಲ್ಲಿ ಭಾಗವಹಿಸಲೂ ಅವರಿಗೆ ಪುರುಸತ್ತಿಲ್ಲವಾಗಿತ್ತು!

ಅವರು ಹೇಳುತ್ತಿದ್ದ ವಿಷಯಗಳಿಂದ ಗುರುವಜ್ಜನಿಗೆ ತಲೆ-ಬುಡ ತಿಳಿಯುತ್ತಿರಲಿಲ್ಲ. ಆದರೂ ಜನರು ತಮ್ಮಷ್ಟಕ್ಕೆ ಈರಾಂಜಣಿಯನ್ನೂ, ಆತ ಊರಿಗಾಗಿ ಮಾಡ ಹೊರಟಿರುವ ಉಪಕಾರವನ್ನೂ ಉಪ್ಪುಖಾರ ಹಚ್ಚಿ ಮಾತಾಡುತ್ತಿದ್ದರು. ಕುತೂಹಲ ತಾಳಲಾರದೆ ಕುಳಿತಲ್ಲೇ ಮಿಸುಕಾಡುವುದಷ್ಟೇ ಸದ್ಯ ಅವನಿಂದ ಸಾಧ್ಯವಾದದ್ದು.

ಅಂದು ಸ್ವತಃ ಈರಾಂಜಣಿಯೇ ಬೇವಿನಕಟ್ಟೆಯ ಮುಂದೆ ಸುಳಿದ. ಗುರುವಜ್ಜ ಅರಮನೆ ವಿಷಯ ಕೇಳಿದ್ದಕ್ಕೆ ಆತ ''ತಾತಾ ನಾನು ಅರಿಬರೀಲಿದ್ದೀನಿ. ಮಾತೂಡುಕೆ ಟೇಮಿಲ್ಲ. ಏನಿಲ್ಲ ಅಲ್ಲೊಂದ್ ಕಾಂಪ್ಲೆಕ್ಸ್ ಸುರು ಮಾಡ್ಕೊಂಡಿದ್ದೀನಿ. ಅದ್ಕೇ ಸ್ವಲ್ಪ ಬಿಸಿ. ದೇವ್ರು ನಂಗೆ ಯಾವುದ್ಕೂ ಕಡ್ಮೆ ಮಾಡ್ಲಿಲ್ಲ. ಅದ್ಕೇನೇ ಉಟ್ದೂರಲ್ಲಿ ಏನಾದ್ರೂ ಸಾದ್ನೆ ಮಾಡ್ಬೇಕು. ಅದ್ರಿಂದ ಊರ್ಗೂ ಒಳ್ಳೇದಾಗ್ಬೇಕು... ಅನ್ನೋದೇ ಉದ್ದೇಸ. ಇವತ್ ಸೀಯೆಮ್ ನೋಡ್ಬೇಕು. ನಾಳೆ ಇನ್‌ಪೋಸಿಸ್, ಇಪ್ರೊ ಸಾವ್ಕಾರ್ನ ಮೀಟ್ ಮಾಡ್ಬೇಕು. ಒಂದ್ ಸೆಕೆಂಡೂ ಬಿಡುವಿಲ್ಲ. ಬತ್ತೀನಿ ತಾತಾ ಬೈ...'' – ಎಂದು ಗುರುವಜ್ಜನ ತಲೆಯನ್ನು ಮತ್ತಷ್ಟು ಗೊಂದಲಕ್ಕೆ ಬೀಳಿಸಿ ಅಲ್ಲಿಂದ ಸರಿದುಹೋದ.



ಎದುರಿನಿಂದ ತರಲೆ ತಿಪ್ಪ ಕುಣಿತದ ಹೆಜ್ಜೆ ಹಾಕುತ್ತ ನಡೆದುಬಂದಾಗ ಗುರುವಜ್ಜನ ಮುಖ ಅರಳಿತು.

''ಬಾರ್ಲಾ ತರ್ಲೆ ಕುತ್ಕೋ. ಲೋಕಾ ನಡೀತಾ ಇರೂ ರೀತಿ ನೋಡಿದ್ರೆ ಕಾಲಾ ಬದಲಾಯ್ತಿರುವಂಗ್ ಕಾಣ್ತದೆ...'' – ಎಂದ.

''ಅಲ್ಲಕಣ್ ತಾತಾ. ನಿಂಗೆ ನಾಕ್ಕೈದಡಿ ದೂರ್ದಲ್ಲಿರುದೋ ಕಾಣ್ಸುದಿಲ್ಲ. ಅಂತಾದ್ರಲ್ಲಿ ಲೋಕಾ ನಡೀತಿರುದು ಎಂಗ್ ಕಾಣಿಸ್ತು ?'' – ಎಂದು ತರಲೆ ತಿಪ್ಪ ತಿರುಗೇಟು ನೀಡಿದ.

''ಮಡಗ್ತೀನಿ ನಿಂಗೆ !'' ಎಂದು ಗುರುವಜ್ಜ ದೊಣ್ಣೆ ಎತ್ತಿದ.

ದೊಣ್ಣೆ ಏಟಿನಿಂದ ತಪ್ಪಿಸಿಕೊಳ್ಳುವಂತೆ ನಟಿಸುತ್ತ ''ಏ ಯಜ್ಮಾನ ! ಊರು ಓಡು ಅಂತದೆ, ಕಾಡು ಬಾ ಅಂತದೆ. ಅಂತಾದ್ರಲ್ಲಿ ಲೋಕದ್ ಯವಾರ ಕಟ್ಗಂಡು ಏನಾಗ್ಬೇಕು ನಿಂಗೆ ?'' ಎಂದ.

ಗುರುವಜ್ಜ ಪೂಸಿ ಮಾಡುವ ದನಿಯಲ್ಲಿ ''ಅಂಗಲ್ಲ ಕಣ್ಲೇ ತರ್ಲೇ, ನಮ್ಮ ಈರಾಂಜಣೀನೂ ಈ ಬಂಗಾರೀನೂ ಅಕ್ಕ ತಮ್ಮ ಅನ್ಕಂಡು ಮೆರೀತಿದ್ರು ! ನಿಮ್ ಓಟ್ನೆಲ್ಲ ನಮ್ ಬಂಗಾರಕ್ಕನ್ಗೇ ಕೊಡೀ ಊರ್ನಾ ಉದ್ದಾರಾ ಮಾಡ್ತಾಳೆ ಅಂತ ಗ್ವಾಗರಿತಿದ್ದ. ಈಗೇನಾಯ್ತು? ಅವ್ರಿಬ್ಬುರ್ಗು ಅಸ್ಟಕ್ಕಷ್ಟೆ ಅಂತಲ್ಲ ಈಗ ?''

''ಅದ್ರಿಂದ ಒಳ್ಳೇದೇ ಆಯ್ತಲ್ವ ತಾತಾ. ಪೂಜಾರಿ ಮಾಂತಪ್ಪ ಒಟ್ಟೆತಣ್ಗಿರ್ತದೆ !''

''ಅದೆಲ್ಲಾ ಆಳಾಗೋಗ್ಲಿ. ಇದಕ್ಕೇನ್ಲಾ ಕಾರ್ಣ ?''

''ಅದೊಂಥರ ಗ್ಲೋಬಲೈಜೇಸನ್ನು !'' – ಎಂದು ಕಣ್ಣು ಮಿಟುಕಿಸಿದ ತಿಪ್ಪ.

''ಅದೇನ್ಲಾ ಅಂಗಂದ್ರೆ ?''

''ಈ ಊರ್ನಲ್ಲಿ ನಾನೊಬ್ನೇ ಧನಂದಾರಿ ಯಜ್ಮಾನ ಅಂತ ಮೆರೀತಿದ್ದೀಯೆ ! ಗ್ಲೋಬಲೈಜೇಷನ್ ಅಂದ್ರೆ ಗೊತ್ತಾಗ್ಲಿಲ್ವ ? ಸೇಮ್ ಯಜ್ಮಾನ ಸೇಮ್ !'' – ಎಂದು ಛೇಡಿಸಿದ ತಿಪ್ಪ.

''ನನ್ಕೈಲಿ ಕಾಲ್ನೋ ಕೈನೋ ಮುರಿಸ್ಕತೀಯ ಆಸ್ಟೇಯ ! ಅದೇನು ಅಂತ ನನಿಗೆ ಅರ್ತಾಗುವಂಗೇಳ್ಲ !'' – ಎಂದ ಗುರುವಜ್ಜ ದೈನ್ಯದಿಂದ.

''ನೋಡಪ್ಪ, ಇಂತಾ ವಿಚಾರಗೊಳ್ನ ಏನೂ ತಿಳೀದ ಮುಕ್ಕರತ್ರ ಮಾತಾಡಿದ್ರೆ ಇಂಗ್ಯೇನೆ !'' – ಎಂದು ಮತ್ತೆ ಚೇಷ್ಟೆ ಮಾಡಿದ.

''ಆಯ್ತು ಕಣ್ಲಾ, ನಾನು ಅಳ್ಳೀ ಮುಕ್ಕ ಒಪ್ಕತೀನಿ. ನೀನು ಬೋ ಬುದ್ವಂತ. ಅಂಗಂದ್ರೇನು ಅಂತ ಏಳ್ಬುಡು ನೋಡ್ತಿನಿ.''

''ಅಂಗ್ ಬಾ ದಾರಿಗೆ ! ಅಂಗಂದ್ರೇ ಜಾಗ್ತೀಕರ್ಣ ! ಅಂತ !''

''ಏನಂದೆ ಏನಂದೆ ? ಸರಿಯಾಗೇಳೋ ತರ್ಲೆ...''

''ಜಾಗ್ತೀಕರ್ಣ !'' – ಎಂದ ತಿಪ್ಪ ಜೋರಿನ ದನಿಯಲ್ಲಿ.

ಗುರುವಜ್ಜನ ತಲೆಗೆ ಕೀಟಗಳು ಹೊಕ್ಕಂತಾಯಿತು. ಆತ ಮಹಾಭಾರತದ ದಾನಶೂರಕರ್ಣನ ವಿಷಯ ಕೇಳಿದ್ದ. ಇಂವ ಯಾರು ಈ ಹೊಸಕರ್ಣ ?

ಆತನ ಪರಿಸ್ಥಿತಿ ನೋಡಿ ತಿಪ್ಪನಿಗೇ 'ಅಯ್ಯೋ ಪಾಪ' ಎನ್ನಿಸಿತು.

''ಲೋ ತಿಪ್ಪಣ್ಣ... ನಿನ್ ದಮ್ಮಯ್ಯ ಕಣ್ಲ. ನನ್ನ ಇಂಗೆ ಕಾಡಿಸ್ಬ್ಯಾಡ. ಅದೇನು ಕರ್ಣ ಅಂತೀಯಲ್ಲ, ಈರಾಂಜ್ಣಿ ಕರ್ಣನ್ ಪಾರ್ಟ್ ಮಾಡಿದ್ದಾನೋ ಎಂಗ್ಲಾ ?''

ತರಲೆ ತಿಪ್ಪ ಬೇವಿನ ಕಟ್ಟೆಯ ಸುತ್ತಲೂ ನೂರು ಮಾರು ದೂರಕ್ಕೆ ಕೇಳಿಸುವಂತೆ ಗಹಗಹಿಸಿ ನಕ್ಕ. ಕೊನೆಗೆ ಸಾಕಪ್ಪ ಈ ಮುದುಕನ ಕಾಟ ಎಂದುಕೊಂಡು,

''ತಾತಾ... ನನ್ನ ತಿರ್ಗಿ ತಿರ್ಗಿ ಅಂಗಂದ್ರೇನು ಅಂಗಂದ್ರೇನು ಅಂತ ಕೇಳಿದ್ರೆ ನಿಂಗೆ ಸಾಪಾ ಕೊಟ್ಬುಡ್ತೀನಿ ! ಜಾಗ್ತೀಕರ್ಣ ಅಂದ್ರೆ, ಅದೊಂದ್ ತರ ದೊಡ್ ಮೀನು ಸಣ್ ಮೀನ್ನ ನುಂಗ್ತು ಅಂತಾರಲ್ಲ ಅಂಗೆ !''

''ಥೂ ಬೆಳಿಗ್ಗೆ ಎದ್ದು ಯಾರ್ ಮೊಕಾ ನೋಡಿದ್ನೋ...'' ಎಂದು ಗುರುವಜ್ಜ ತನ್ನನ್ನೇ ಶಪಿಸಿಕೊಂಡ.

''ಇನ್ನೂ ತಿಳೀಲಿಲ್ವ ಸೇಮ್ ! ನೀನು ನಮ್ಮೂರ್ಗೆ ಯಜ್ಮಾನ ಆಗೊಕೆ ಲಾಯಕ್ಕಿಲ್ಲ, ಸೇಮ್ !''

''ಓಗ್ಲಿ... ಈರಾಂಜಣಿ ಕಟ್ಟಿಸ್ತಾ ಇರೂ ಅರ್ಮನೆಯಿಂದ ನಮ್ಮೂರ್ಗೆ ಉಪ್ಕಾರ ಆಗುತ್ತ ಅಂತ ಅದ್ನಾರ ಏಳ್ಲಾ !'' ಎಂದು ಗ್ವಾಗರೆದ.

''ಈರಾಂಜ್ಣಿ ಕಾಂಪ್ಲೆಕ್ಸು ಅಂದ್ರೆ ಏನ್ ತಿಳ್ಕಂಡಿದ್ದಿ ?



ಬೀರಣ್ಣ

ಒಂದ್ಕಡೆ 'ಈರಾಂಜ್ಣಿ ಮಾಲ್', ಅಂದ್ರೆ ದೊಡ್ ಅಂಗ್ಡಿ. ಅದೇನು ಮಾಸ್ತಿಯು ಪೆಟ್ಟಿ ಅಂಗ್ಡಿಯಲ್ಲ ತಿಳ್ಕೋ. ನಿನ್ ಉಪ್ಪು ಮೆಣಸಿಕಾಯಿ ಬೆಲ್ಲ ಬೆಂಕಿಪೆಟ್ಗೆಯಿಂದ ಇಡ್ದು ಸಕ್ಲೆಂಟ್ ಸಾಮಾನೂ ಸಿಕ್ತದೆ ಅಲ್ಲಿ. ಗೊತ್ತಾಯ್ತಾ ? ಇನ್ನೊಂದು ಎಂಥದೋ 'ಕೆಪೆ ಈರಾಂಜ್ಣಿ'ಯಂತೆ. ಅದೂ ಅಸ್ಟೆ. ಬಂಗಾರಿ ಓಟ್ಲಂಗೆ ಯಾವಾಗ್ ನೋಡಿದ್ರೂ ದ್ವಾಸೆ, ಒಡೆ, ಬೋಂಡಾ ಅನ್ಕಬ್ಯಾಡ. ಮಸಾಲ್ ದೋಸೆ, ಮದ್ದೂರ್ ವಡೆ ಎಲ್ಲಾನೂ ಮಾಡಿಸ್ತಾನಂತೆ. ಇನ್ನೂ ಒಂದದೆ ಕಣಪ್ಪೊ 'ತೇಟರ್ ಈರಾಂಜ್ಣಿ!' ಅದ್ರಲ್ಲಿ ವಾರಕ್ಕೊಂದ್ ಒಸಾ ಪಿಚ್ಚರ್ ತೋರಿಸ್ತಾರಂತೆ. ಅದೂ ಅಷ್ಟೇ ತಾತಾ... ಕದಿರೇನಳ್ಳಿ ಸಂತೇಲಿ ಟೆಂಟಾಕಿದ್ರಲ್ಲ ಅಂಗಲ್ಲ. ಆರಾಮಾಗಿ ಮಲಿಕಂಡೇ ಪಿಚ್ಚರ್ ನೋಡ್ಬೋದಂತೆ. ಇಲ್ಲಿಗೇ ಮುಗಿದೋಯ್ತು ಅನ್‌ಕಂಡ್ಯಾ ? ನಾವು ಗುಂಡಯ್ಯನ್ ಜಾತ್ರೆ ಮಾಡ್ತೀವಲ್ಲ. ಜಾತ್ರೆಗ್ ಬರೂ ಬಕ್ತರಿಗೆಲ್ಲ 'ಈರಾಂಜ್ಣಿ ಲಿಕರ್ಸ್' – ನಿಂದ್ಲೇ ಸರಬ್ರಾಜಾಯ್ತದಂತೆ ತೀರ್ತಾ !''




''ಎಲಾ ನಿನ್ ಮನೆ ಆಳಾಗೋನೆ. ಎನ್ಲಾ ನೀನು ಏಳ್ತಾ ಇರೂದು ?''

''ಅದ್ಕೇನೇ ನಿಂಗೆ ಸೇಮ್ ಸೇಮ್ ಅಂದದ್ದು. ಯಾವಾಗ್ಲೂ ಒಗೆಸೊಪ್ ತಿಂದು ನಿನ್ ಬುದ್ದಿ ಮಂಕಾಗಿರ್ಬೇಕು. ಅದನ್ನ ಇಲಾಜ್ ಮಾಡ್ಲೂಕು ಈರಾಂಜ್ಣಿ ಕಾಂಪ್ಲೆಕ್ಸ್‌ನಲ್ಲೇ 'ಕ್ಲಿನಿಕ್ ತ್ರೀಸ್ಟಾರ್ ಈರಾಂಜ್ಣಿ' ಕಟ್ಟಿಸ್ತಾನಂತೆ. ಗೊತ್ತಾಯ್ತ. ಇನ್ನು ನಮ್ಮೂರ್ನೋರ್ಗೆ ಕಾಯ್ಲೆ ಕಸಾಲೆ ಏನ್ ಬಂದ್ರೂ ಇಲ್ಲೇ ಆಪ್ರೇಸನ್ ಮಾಡಿಸ್ಬೋದು...!''

ಗುರುವಜ್ಜನಿಗೆ ನಿಜವಾಗಿ ತಲೆ ತಿರುಗತೊಡಗಿತು. ಅಂಗಾದ್ರೆ ಈರಾಂಜ್ಣಿನೇ ಜಾಗ್ತೀಕರ್ಣ ಎಂಬ ಈ ಹೊಸ ಕರ್ಣ ಎನ್ನಿಸಿತು.

''ಆದೇನೋ ಸರಿಕಣೋ ತಿಪ್ಪಾ. ಈ ಮಾಸ್ತಿ ಪೆಟ್ಟಿ ಅಂಗ್ಡಿ, ಬಂಗಾರಿ ಓಟ್ಲು ಇವೆಲ್ಲ ಏನಾಗ್ಬೇಕು. ಎಲ್ರೂ ಸಾಮಾನು-ಗೀಮಾನು ಓಟ್ಲುಪಾಟ್ಲು ಅಂತ ಅಲ್ಲೋಗ್ದ್ರೆ ಇವ್ರೇನ್ ಮಾಡ್ಬೇಕು ?'' ಎಂದ.

''ಜಾಗ್ತೀಕರ್ಣ ಅಂದ್ರೆ ಅಂಗ್ಯೆ ತಾತ... ಯಾರ್ಗೆ ಏನಾದ್ರೂ ಡೋಂಟ್ ಕೇರ್. ಮಾಸ್ತಿ ಕೈಲಿ ಆಗುವಂಗಿದ್ರೆ ಊರೋರ್ಗೆ ಬೇಕಾದ್ದನ್ನೆಲ್ಲ ತಂದು ಸಂತೆ ಆಕ್ದಂಗ್ ಆಕಿರ್ಬೇಕಪ್ಪ. ಅವನ್ ಕೈಲಿ ಆಗೂ ಮಾತಾ ಇದು ! ಅವನ್ ಅಣೇ ಬರ ಎಂಗಿರುತ್ತೋ ಅಂಗಾಗತಪ್ಪ...'' ಮತ್ತೆ ಏನೋ ನೆನಪು ಮಾಡಿಕೊಂಡಂತೆ ''ಯಜ್ಮಾನಾ ನಿನ್‌ತಾವ ಮಾತಾಡ್ತಾ ಕೂತ್ರೆ ಒಟ್ಟೇಗೆ ಇಟ್ ಸಿಕ್ಸಲ್ದು... ಕುರಿಗಳು ಆಗ್ಲೆ ಅರ್ಚಾಡ್ತಾ ಅವೆ...'' ಎನ್ನುತ್ತ ಅಲ್ಲಿಂದ ಕಂಬಿಕಿತ್ತ.

ಅಷ್ಟು ದೂರ ನಡೆದುಹೋಗುವಂತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎನ್ನಿಸಿತು ಗುರುವಜ್ಜನಿಗೆ. ಯಾರದಾದರೂ ಗಾಡಿ ಕಟ್ಟಿಸಿಕೊಂಡಾದರೂ ಒಮ್ಮೆ ಹೋಗಿ ಈರಾಂಜ್ಣಿ ವೈಭವ ನೋಡಿ ಬರಬೇಕೆಂಬ ಕುತೂಹಲ ಉಂಟಾಯಿತು. ತನ್ನ ಪಾಡು ನಿಜಕ್ಕೂ ಸಂಜಯನಿಂದ ಮಹಾಭಾರತದ ಯುದ್ಧದ ವರದಿ ಕೇಳಿ ತಿಳಿದುಕೊಂಡ ಕುರುಡ ಧೃತರಾಷ್ಟ್ರನಂತಾಯಿತಲ್ಲ ಎಂದು ನಿಟ್ಟುಸಿರುಬಿಟ್ಟ.

ಗುರುವಜ್ಜನ ಪುಣ್ಯಕ್ಕ ಸಿದ್ದೇಶ್ವರಾನಂದಜಿ ಎಂಬ ಯಡವಟ್ಟು ಸಿದ್ದಣ್ಣ ಬೀಡಿ ಎಳೆಯುತ್ತ ಅಲ್ಲಿಗೆ ಬಂದ.

ಗುರುವಜ್ಜನಿಗೆ ಸಂತೋಷ ತಾಳಲಾಗಲಿಲ್ಲ. ''ಬಾರ್ಲಾ ಯಡವಟ್ಟ ಕೂತ್ಗ'' ಎಂದು ದೊಣ್ಣೆ ತೆಗೆದು ಪಕ್ಕಕ್ಕಿಟ್ಟ

'ಜೈ ಶ್ರೀರಾಮ್ !' ಎನ್ನುತ್ತ ಸಿದ್ದೇಶ್ವರಾನಂದಜೀ ಕುಳಿತ.

''ಅದೇನೋ ಈರಾಂಜ್ಣಿ ಬೋ ಬರ್ಜರಿಯಾಗಿ ಅರ್ಮನೆ ಕಟ್ಟಿಸ್ತಾ ಅವ್ನಂತಲ್ಲ. ಅದೇನ್ಲ ಅವನ್ ಕರಾಮತ್ತು ?'' – ಎಂದ.

ಸಿದ್ದಣ್ಣ ಒಪ್ಪಿಸಿದ ವರದಿಯಿಂದ ಗುರುವಜ್ಜ ನಿಜವಾಗಿ ಹೌಹಾರಿದ. ಈರಾಂಜ್ಣಿ ಕಾಂಪ್ಲೆಕ್ಸಿನೊಳಗಡೆ ದೊಡ್ಡದಾಗಿ ಗುಂಡಯ್ಯನ ವಿಗ್ರಹ ಕೆತ್ತಿಸಿ, ಅಲ್ಲಿಗೆ ಬಂದು ಸಾಮಾನು ಖರೀದಿಸಿ, ಊಟ ತಿಂಡಿ ತಿಂದು, ಸಿನಿಮಾ ನೋಡಿ, ಸ್ವಲ್ಪ ತೀರ್ಥ ಗೀರ್ಥ ತೆಗೆದುಕೊಂಡು ಮನೆಗೆ ಹಿಂದಿರುಗುವ ಮುಂಚೆ ಗುಂಡೇಶ್ವರನ ದರ್ಶನ ಸಹ ಮಾಡಬಹುದಂತೆ ! ಅಲ್ಲಿಯೇ ಈ ಸಿದ್ದೇಶ್ವರಾನಂದಜಿಗೆ ಒಂದು ಸಣ್ಣ ಆಶ್ರಮ ಸಹ ಕಟ್ಟಿಸಿಕೊಡುವುದಾಗಿ ಈರಾಂಜಣಿ ಭರವಸೆ ಕೊಟ್ಟಿದ್ದಾನಂತೆ !

'ಓ ! ತೂಗಡಿಸೋನ್ಗೆ ತಲೆದಿಂಬ್ ಕೊಟ್ರು ಅಂತಾರಲ್ಲ ಅಂಗೆ ! ಈ ಪೆಪಂಚ ಬೋ ಕೆಟ್ಟೋಯ್ತು ಕಣಪ್ಪೊ !' – ಎಂದುಕೊಂಡ ಗುರುವಜ್ಜ.

* * *

ಕೆಲವು ದಿನಗಳವರೆಗೆ ತರಲೆತಿಪ್ಪನ ಪತ್ತೆಯೇ ಇರಲಿಲ್ಲ. ಊರಿನ ಇತರರು ಸಹ ಆಗಾಗ ನಾಪತ್ತೆಯಾಗುತ್ತಿದ್ದರು. ಅವರೆಲ್ಲರೂ ಈರಾಂಜಣಿಯ ಅರಮನೆ ಕೆಲಸಕ್ಕೇ ಹೋಗುತ್ತಿರ ಬೇಕೆಂಬುದು ಗುರುವಜ್ಜನ ಗುಮಾನಿ.

ಪ್ರತಿದಿನ ಸಿಕ್ಕಿದವರನ್ನೆಲ್ಲ ಈರಾಂಜಣಿ ಕಾಂಪ್ಲೆಕ್ಸ್ ಕುರಿತು ವಿಚಾರಿಸುವುದನ್ನೇ ಒಂದು ಕಾಯಕವನ್ನಾಗಿ ಮಾಡಿಕೊಂಡ ಗುರುವಜ್ಜ. ಅವರ ವರದಿಯ ಮೇರೆಗೆ ಆ ಕುರಿತು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಕಲ್ಪನೆ ಮಾಡಿಕೊಂಡ. ಅದು ಹಾಗಿರಬಹುದು, ಹೀಗಿರಬಹುದು, ಜಾಗ್ತೀಕರ್ಣ ಎಂಥ ಮಹಾನುಭಾವನಾಗಿದ್ದಿರಬಹುದು ಎಂದು ಊಹನೆ ಮಾಡಿಕೊಳ್ಳತೊಡಗಿದ. ಈ ಜಾಗ್ತೀಕರ್ಣ ಎಷ್ಟು ದೊಡ್ಡ ಕುಳ ಆಗಿರಬಹುದು ಎಂದು ತನ್ನಷ್ಟಕ್ಕೆ ಅಚ್ಚರಿಯಲ್ಲಿ ಮುಳುಗಿಹೋಗುತ್ತಿದ್ದ !

ಮತ್ತೊಂದು ದಿನ ಆ ಹಾಳಾದ ತರ್ಲೆ ತಿಪ್ಪ ಮತ್ತೊಂದು ಕೆಟ್ಟ ಸುದ್ದಿ ತಂದ. ಈರಾಂಜಣಿ ಕಟ್ಟಿಸುತ್ತಿದ್ದ ಕಾಂಪ್ಲೆಕ್ಸ್ ಅರಮನೆಯನ್ನೂ ಬೇರೆ ಯಾರೋ 'ಅಕವ ಅಂಡ್ ಬೋರ್ಲಿ' – ಎನ್ನುವ ಹೊಸ ಕಂಪೆನಿಯವರು ಖರೀದಿಸಿ, ಈರಾಂಜಣಿಯ ಮಾಲ್ ಇತ್ಯಾದಿಗೆಲ್ಲ ಹೊಸ ಹೆಸರು ನೀಡುತ್ತಾರಂತೆ – ಎಂಬ ಸುದ್ದಿ ಅದು.

''ಅದ್ಯಾರ್ಲ ಅಕವ ಬೋರ್ಲಿ ಅಂದ್ರೆ ?''

''ಅದೊಂತರ ತಿಮಿಂಗ್ಲ ತಾತಾ ! ನಿನ್ ಈರಾಂಜ್ಣಿ ಅಂತಾ ನೂರ್‌ಜನಾ ನುಂಗೂ ತಿಮಿಂಗ್ಲ. ಇಲ್ಲಿಂದ ನೂಸ್ ಪೇಪರ್ನೇ ಪ್ರಿಂಟ್ ಮಾಡ್ತಾರಂತೆ...''

''ಏನಂದೆ, ಲೂಸ್ ಪೇಪರಾ ?''

''ಅಯ್ಯೋ ನಿಂಗೆ ಇನ್ನೊಂದ್ಸಲ ಸೇಮ್ ಸೇಮ್ ! ದಿನಾ ಅಲ್ಲಂಗಾಯ್ತಂತೆ, ಇಲ್ಲಿ ನಾಕ್‌ಜನ ಸತ್ರಂತೆ, ಮಳೆ ಸುರೀತಂತೆ, ಗಾಳಿ ಬೀಸ್ತಂತೆ, ಮಸೀ ಬಳಿದ್ರಂತೆ ಅಂತ ನೂಸ್ ಓದಾರಲ್ವ... ಪೇಪರು ಪೇಪರು ಅಂತ.''

''ಓ... ಗೊತ್ತಾಯ್ತು ತಗಿಲಾ'' ಎಂದು ತಲೆದೂಗಿದ ಗುರುವಜ್ಜ.

ಗುರುವಜ್ಜನಿಗೆ ಈರಾಂಜಣಿಯ ಬಗ್ಗೆ 'ಅಯ್ಯೋ ಪಾಪ !' ಎನ್ನಿಸಿತು. ಪಾಪ ತಮ್ಮ ಊರಿಗೆ ಉಪಕಾರವಾಗಬೇಕೆಂದು ಎಷ್ಟೆಲ್ಲ ದೊಡ್ಡ ಕೆಲಸಕ್ಕೆ ಕೈಹಾಕಿದ್ದ. ಈಗ ಹೀಗಾಯಿತಲ್ಲ ಎಂದು ಪಿಚ್ಚೆನ್ನಿಸಿತು.

ಆದರೆ ಆ ಹೊಸದಾಗಿ ಬರಲಿರುವ ಕುಳ ಇನ್ನೆಂಥ ಗಟ್ಟಿ ಕುಳ ಆಗಿರಬೇಕು ಎಂಬ ಬೆರಗಿನಿಂದ ಒಂದು ಕ್ಷಣ ಮಾತಾಡುವುದನ್ನೇ ಮರೆತ.

''ಅದ್ಯಾಕ್ಲ ಅಂಗಾಯ್ತು. ಎಲ್ಲ ನಾನೇ ಮಾಡ್ತೀನಿ ಅಂತ ಒಂಟದ್ದೆಂಗೆ ? ಈಗ ಬೇರೆಯೋರ್ಗೆ ಕೊಟ್ಟುಕೈ ತೊಳ್ಕೊಳ್ಳುದೆಂಗೆ ?''

ತರಲೆ ತಿಪ್ಪ ಮಹಾ ತಿಳಿದವನಂತೆ ಹೇಳಿದ ''ಅದ್ಕೇ ಸ್ವಲ್ಪ ಎಕ್‌ನಾಮಿಕ್ಸ್ ತಿಳ್ಕಬೇಕು ಅನ್ನೂದು. ಗ್ಲೋಬಲ್ಯೆಜೇಸನ್ ಅಂದ್ರೆ ಪುಗಸಟ್ಟೆ ಅಂತ ತಿಳ್ಕಂಡ್ಯಾ ? ಲೋಕಾ ತಿರುಗ್ಬೇಕು. ನಾಕ್ ಜನ ಕಾಣ್ಬೇಕು. ನಾಕೂರ್ ನೀರ್ ಕುಡೀಬೇಕು. ನಿನ್ ತಲೆ ತುಂಬಾ ಒಗೆಸೊಪ್ ತುಂಬ್ಕಂಡದೆ...'' ಎಂದು ಹೀಯಾಳಿಸಿದ.

''ಅಂದ್ರೆ ನಮ್ ಈರಾಂಜ್ಣಿ ದುಡ್ಡೆಲ್ಲ ಏನಾಯ್ತು ?'' ಎಂದ. ಈರಾಂಜಣಿ ಮೋಸ ಹೋಗಿ ತನ್ನಲ್ಲಿದ್ದುದನ್ನೆಲ್ಲ ಕಳೆದುಕೊಂಡಿರಬೇಕು ಎಂಬ ಅನುಮಾನ ಗುರುವಜ್ಜನದು.

''ಜಾಗ್ತೀಕರ್ಣ ಅಂದ್ರೆ ಅಂಗ್ಯೇನೆ. ಇದೂ ಗೊತ್ತಿಲ್ಲ ನಿಂಗೆ ಸೇಮ್ !''

''ಓಹೋ ಗೊತ್ತಾಯ್ತು ತಗೀಲಾ. ನಿನ್ನೊಂದ್ಗೆ ಇಸ್ಟ್ ದಿನ ಸುಕದುಕ್ಕ ಸುರ್ಕಂಡು ಅಸ್ಟೂ ಗೊತ್ತಾಗ್ದೆ ಇದ್ರೆ ಎಂಗೆ ? ಅದೇ ದೊಡ್ ಮೀನು ಸಣ್ ಮೀನ್ನ ನುಂಗ್ತು ಅಂದಂಗೆ ! ಈ ಜಾಗ್ತೀಕರ್ಣನ ನುಂಗುವಂಥ ಇನ್ನೊಬ್ಬ ಜಾಗ್ತೀಕರ್ಣ ಉಟ್ಟಿರ್‍ತಾನೆ ಅಂತ...''

''ಗುಡ್ ಗುಡ್ ತಾತಾ... ಇದ್ದೇ ನೋಡು ಜಾಡ್ನ ! ಅಂಗಿರ್ಬೇಕಪ್ಪ ! ಸುಮ್ನೆ ಅದೆಂಗೆ, ಇದೆಂಗೆ ಅಂತ ಬರೋರ್ನೆಲ್ಲ ಅಡ್ಡಾಕ್ಬಾರ್ದು... ಬತ್ತೀನಿ. ಕುರಿ ಅರ್ಚಾಡ್ತವೆ'' ಎನ್ನುತ್ತ ತರಲೆ ತಿಪ್ಪ ಅಲ್ಲಿಂದ ಕದಲಿದ.

---

ಬೀರಣ್ಣ ಗೊಂದಲಪುರ

# ಅಲ್ಲಮನ ಅನುಸಂಧಾನಗಳು ಯಾಕೆ ಆಗುತ್ತಿವೆ ?

ಡಾ|| ರಹಮತ್ ತರೀಕೆರೆ

ಕನ್ನಡದಲ್ಲಿ ಕಳೆದ ೧೦-೧೫ ವರ್ಷಗಳಿಂದ ಅಲ್ಲಮಪ್ರಭುವಿನ ಅನುಸಂಧಾನಗಳು ಕಂಡುಬರುತ್ತಿವೆ. ಅಲ್ಲಮನ ಅನುಸಂಧಾನಗಳು ೨೦ನೇ ಶತಮಾನದಲ್ಲಿ ಆಗಿರುವುದೇ ಕಡಿಮೆ. ಆಧುನಿಕ ಕಾಲದಲ್ಲಿ ರಾಜಕೀಯವಾಗಿ ಸಾಮಾಜಿಕವಾಗಿ ಸಂಘಟಿಸಿಕೊಂಡು ಬೆಳೆಯುವ ಕಾರಣದಿಂದ ಲಿಂಗಾಯತ ಸಮುದಾಯವು ಬಸವಣ್ಣನನ್ನು ಒದಗಿಸಿಕೊಂಡಿತು; ಆಧುನಿಕ ವಿಚಾರವಾದಗಳೂ ತಮ್ಮ ವೈದಿಕವಿರೋಧಿ ಮತ್ತು ಕೆಳಸ್ತರದ ಸಮುದಾಯಗಳ ಪರವಾದ ಗುಣಗಳಿಂದಾಗಿ ಬಸವಣ್ಣನತ್ತ ನೋಡಿದವು. ಆದರೆ ಕನ್ನಡದ ದಾರ್ಶನಿಕ ಕವಿಗಳಲ್ಲಿ ಒಬ್ಬನಾದ, ಕರ್ನಾಟಕದ ಆರೂಢಪಂಥದ ಧಾರೆಗಳಿಗೆ ಪರಮಗುರುವಿನಂತೆ ಇರುವ ಅಲ್ಲಮನು ಹೆಚ್ಚು ಚರ್ಚೆಗೆ ಒಳಗಾಗಲಿಲ್ಲ. ಎಲ್ಲವನ್ನೂ ಪ್ರಶ್ನಿಸುವ ನಿಷ್ಠುರವಾದಿ ಅಲ್ಲಮ, ಯಾವುದೆ ಸಾಮಾಜಿಕ ಧಾರ್ಮಿಕ ಕಟ್ಟುವಿಕೆಗಳಿಗೆ ಸಲೀಸಾಗಿ ಒದಗುವುದಿಲ್ಲವೆಂದೆ ಅಮುಖ್ಯನಾದನೊ ಏನೊ ? ಈ ಹಿನ್ನೆಲೆಯಲ್ಲಿ ಡಿ. ಆರ್. ನಾಗರಾಜ ತಮ್ಮ ಕೊನೆಯ ದಿನಗಳಲ್ಲಿ ರಚಿಸಿದ 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಕೃತಿ ಮಹತ್ವದ್ದಾಗಿದೆ.

ಅಲ್ಲಮನ ಕಾವ್ಯಗುಣವುಳ್ಳ ಬಿಡಿವಚನಗಳನ್ನು ತಮಗೆ ಬೇಕಾದ ಅರ್ಥಕ್ಕಾಗಿ ಬಳಸಿಕೊಳ್ಳುವ ಪದ್ಧತಿಯು ಕನ್ನಡದಲ್ಲಿದೆ. ಆದರೆ ಅವನ ಸಮಸ್ತ ವಚನಗಳನ್ನು ನಿರ್ದಿಷ್ಟ ತಾತ್ವಿಕ ಚೌಕಟ್ಟಿನಲ್ಲಿಟ್ಟು ವಿಶ್ಲೇಷಿಸಿದ ಯತ್ನಗಳು ಕಡಿಮೆ. ಅಲ್ಲಮನ ಜತೆ ಗುದ್ದಾಟ ಮಾಡುವುದು ಗಾಳಿಯನ್ನು ಹಿಡಿದಂತೆ. ಒಂದೆಡೆ ಅನುಮೋದಿಸಿದ್ದನ್ನು ಇನ್ನೊಂದೆಡೆ ನಿರಾಕರಿಸುವ, ಅಮೂರ್ತತೆಗೆ ಹೋಗುವ, ದ್ವಂದ್ವಾತ್ಮಕ ರೂಪಕಗಳಲ್ಲಿ ತತ್ವವನ್ನು ಹಿಡಿಯುವ, ಬೆಡಗಿನ ಭಾಷೆ ಬಳಸುವ ಅವನ ಮುಖಾಮುಖಿಯೆ, ಒಂದು ತಾತ್ವಿಕ ಮತ್ತು ಬೌದ್ಧಿಕ ಸವಾಲು. ಈ ಸವಾಲನ್ನು ಎತ್ತಿಕೊಂಡು ಡಿ. ಆರ್. ಅವನನ್ನು ಒಂದು ತಾತ್ವಿಕ ಚೌಕಟ್ಟಲ್ಲಿಟ್ಟು ಸೈದ್ಧಾಂತೀಕರಿಸಲು ಯತ್ನಿಸಿದ್ದಾರೆ. ಇದೊಂದು ಅಪೂರ್ವ ಬೌದ್ಧಿಕ ಸಾಹಸವಾಗಿದೆ.

ಆದರೆ ಒಟ್ಟಾರೆಯಾಗಿ ಅಲ್ಲಮನ ಅನುಸಂಧಾನಗಳು ನಮ್ಮ ಆಸುಪಾಸಿನ ಪರಿಸರದ ಆಗುಹೋಗುಗಳ ಜತೆ ಯಾವ ಬಗೆಯಲ್ಲಿ ಸಂವಾದ ಮಾಡಲು ಪ್ರೇರಿಸುತ್ತವೆ ? ನಾಡು ಬಿಕ್ಕಟ್ಟುಗಳಲ್ಲಿ ಹಾಯುವಾಗ, ರಾಜಕೀಯ ಸಾಮಾಜಿಕ ಕ್ರಿಯಾಶೀಲತೆಯನ್ನು ಪ್ರಚೋದಿಸುವ ದರ್ಶನ ಮತ್ತು ಚಿಂತಕರ ಆವಾಹನೆಯಾಗುವುದು ಸಹಜ. ಜಾಗತೀಕರಣವು ಅಸ್ಪಷ್ಟವಾದ ಆತಂಕಗಳನ್ನು ಹುಟ್ಟಿಸಿರುವ ಈ ಚಾರಿತ್ರಿಕ ಸನ್ನಿವೇಶದಲ್ಲಿ, ಅಲ್ಲಮನ ಆವಾಹನೆ ಯಾಕಾಗಿ ಆಗುತ್ತಿದೆ ? ಅಲ್ಲಮನನ್ನು ಒಂದು ಬಗೆಯ ಅ-ರಾಜಕೀಯ ಪ್ರಜ್ಞೆಯಲ್ಲಿ, ಭಾವುಕವಾದ ಆನುಭಾವಿಕ ಸೆಳೆತದಲ್ಲಿ, ಶುದ್ಧಜ್ಞಾನದ ಹುಡುಕಾಟದಲ್ಲಿ, ವ್ಯಕ್ತಿವಾದಿ ನೆಲೆಯಲ್ಲಿ ಮುಖಾಮುಖಿ ಮಾಡುವ ಯತ್ನಗಳು ಕಾಣುತ್ತಿವೆ. ಇದು ಅಲ್ಲಮನ ವಚನಗಳಲ್ಲೇ ಇರುವ ಗುಣವೊ ಅಥವಾ ಅವನನ್ನು ಅನುಸಂಧಾನ ಮಾಡುವವರಲ್ಲಿ ಇರುವ ಸಮಸ್ಯೆಯೊ ? ಈ ಅ-ರಾಜಕೀಯ ವಿಧಾನಗಳಿಗೂ ವಿಧಾನಕ್ಕೂ ಕನ್ನಡಕ್ಕೆ ಪ್ರವೇಶಿಸುತ್ತಿರುವ ಪೋಸ್ಟ್‌ಮಾಡರ್ನಿಸ್ಟ್ ಎಂಬ ಸಂಬಂಧವಿದೆಯೆ ? ಸ್ಥಳೀಯತೆಯನ್ನು ನಿರಾಕರಿಸುವ ಅಲ್ಲಮನಂತಹ ಒಬ್ಬ ಬಯಲಿನ ಚಿಂತಕನನ್ನು ಅನುಸಂಧಾನ ಮಾಡುವುದು, ಕನ್ನಡ ಚಿಂತನೆಯ ವಿಶ್ವಾತ್ಮಕ ವಿಸ್ತರಣೆಯೊ ಅಥವಾ ಕನ್ನಡವು ಜಾಗತೀಕರಣವನ್ನು ಮುಖಾಮುಖಿ ಮಾಡುವ ಬೌದ್ಧಿಕ ಯತ್ನದ ಭಾಗವೊ ? ಇಂತಹ ಪ್ರಶ್ನೆಗಳು ಎದುರಾಗುತ್ತಿವೆ. ಇವನ್ನು 'ಶೈವಪ್ರತಿಭೆ' ಕೃತಿಯ ನೆಪದಲ್ಲಿ ಚರ್ಚಿಸಬಹುದು.

'ಶೈವಪ್ರತಿಭೆ'ಯ ಹಿಂದೆ ಮೂರು ಉದ್ದೇಶಗಳು ಇದ್ದಂತಿವೆ. (೧) ಭಾರತದ ದೇಸೀ ಭಾಷೆಗಳಲ್ಲಿರುವ ದಾರ್ಶನಿಕ ಕವಿಗಳನ್ನೂ ಅವರ ಕಾವ್ಯರೂಪದಲ್ಲಿ ವ್ಯಕ್ತವಾಗಿರುವ ತತ್ವಚಿಂತನೆಯನ್ನೂ ಕಡೆಗಣಿಸಿರುವ ಅಖಿಲ ಭಾರತ ಆಧುನಿಕ ತತ್ವಶಾಸ್ತ್ರದ ವಿದ್ವಾಂಸರ ನಿಲುವನ್ನು ವಿರೋಧಿಸುವುದು; ಅವರ ಚರ್ಚೆಗಳಲ್ಲಿ ಗೈರುಹಾಜರಾಗಿರುವ ಅಲ್ಲಮನನ್ನು ಕನ್ನಡದ ದಾರ್ಶನಿಕ ಸಾಧನೆಯ ಪ್ರತಿಮೆಯಾಗಿ ಪ್ರತಿಷ್ಠಾಪಿಸುವುದು. ಆ ಮೂಲಕ ಕನ್ನಡ ಬೌದ್ಧಿಕತೆಗೆ ಒಂದು ವಿಶ್ವಾತ್ಮಕತೆಯನ್ನು ತಂದುಕೊಡುವುದು. (೨) ಸ್ಥಳೀಯ/ದೇಸೀ ಎನ್ನಲಾಗುವ ಈ ದಾರ್ಶನಿಕ ಕವಿಗಳು ಮಾಡಿರುವ ಅಖಿಲ ಭಾರತೀಯ ಸ್ತರದ ದಾರ್ಶನಿಕ ವಾಗ್ವಾದಗಳನ್ನು ಶೋಧಿಸುವುದು. (೩) ಸಾಹಿತ್ಯದ ಮೂಲಕವೆ ಇತರೆ ಜ್ಞಾನಶಾಸ್ತ್ರಗಳನ್ನು ನೋಡುವುದು. ಅವುಗಳ ಜತೆ ಸಂವಾದ ಮಾಡುವುದು ಮತ್ತು ಸಾಹಿತ್ಯದ ಅನನ್ಯತೆಯನ್ನು ಸ್ಥಾಪಿಸುವುದು. ಈ ಮೂರೂ ಉದ್ದೇಶಗಳ ಆಳದಲ್ಲಿ ಇರುವುದು ಅಧಿಕಾರಸ್ಥ ನೆಲೆಗಳಿಂದ ನಿರಾಕರಣೆಗೊಂಡ ಅಪಮಾನ, ಅದಕ್ಕೆ ಪ್ರತಿರೋಧ ಮತ್ತು ತಕ್ಕ ಸ್ಥಾನ ದೊರಕಿಸಿಕೊಡುವ ಛಲ.

ಅಲ್ಲಮನ ಕಾವ್ಯಗುಣವುಳ್ಳ ಬಿಡಿವಚನಗಳನ್ನು ತಮಗೆ ಬೇಕಾದ ಅರ್ಥಕ್ಕಾಗಿ ಬಳಸಿಕೊಳ್ಳುವ ಪದ್ಧತಿಯು ಕನ್ನಡದಲ್ಲಿದೆ. ಆದರೆ ಅವನ ಸಮಸ್ತ ವಚನಗಳನ್ನು ನಿರ್ದಿಷ್ಟ ತಾತ್ವಿಕ ಚೌಕಟ್ಟಿನಲ್ಲಿಟ್ಟು ವಿಶ್ಲೇಷಿಸಿದ ಯತ್ನಗಳು ಕಡಿಮೆ. ಅಲ್ಲಮನ ಜತೆ ಗುದ್ದಾಟ ಮಾಡುವುದು ಗಾಳಿಯನ್ನು ಹಿಡಿದಂತೆ. ಒಂದೆಡೆ ಅನುಮೋದಿಸಿದ್ದನ್ನು ಇನ್ನೊಂದೆಡೆ ನಿರಾಕರಿಸುವ, ಅಮೂರ್ತತೆಗೆ ಹೋಗುವ, ದ್ವಂದ್ವಾತ್ಮಕ ರೂಪಗಳಲ್ಲಿ ತತ್ವವನ್ನು ಹಿಡಿಯುವ, ಬೆಡಗಿನ ಭಾಷೆ ಬಳಸುವ ಅವನ ಮುಖಾಮುಖಿಯೆ, ಒಂದು ತಾತ್ವಿಕ ಮತ್ತು ಬೌದ್ಧಿಕ ಸವಾಲು. ಈ ಸವಾಲನ್ನು ಎತ್ತಿಕೊಂಡು ಡಿ. ಆರ್. ಅವನನ್ನು ಒಂದು ತಾತ್ವಿಕ ಚೌಕಟ್ಟಲ್ಲಿಟ್ಟು ಸೈದ್ಧಾಂತೀಕರಿಸಲು ಯತ್ನಿಸಿದ್ದಾರೆ. ಇದೊಂದು ಅಪೂರ್ವ ಬೌದ್ಧಿಕ ಸಾಹಸವಾಗಿದೆ.



ದೇಸೀ ದಾರ್ಶನಿಕ ಧಾರೆಗಳ ಬಗ್ಗೆ ಆಧುನಿಕ ತತ್ವಶಾಸ್ತ್ರದವರು ತೋರುವ ತಿರಸ್ಕಾರದ ಸಮಸ್ಯೆಯು, ಸಂಸ್ಕೃತ ಪಠ್ಯಗಳನ್ನು ಆಧರಿಸಿ ಇಂಗ್ಲಿಷಿನಲ್ಲಿ ಅಖಿಲ ಭಾರತೀಯ ತತ್ವಶಾಸ್ತ್ರದ ಚರಿತ್ರೆ ಕಟ್ಟುವವರಲ್ಲಿ ಮಾತ್ರ ಇಲ್ಲ; ದೇಶ ಭಾಷೆಗಳಲ್ಲಿ ಬರೆಯುವ ತತ್ವಶಾಸ್ತ್ರದವರಲ್ಲೂ ಇದೆ. ಕುವೆಂಪು ಜನ್ಮಶತಮಾನೋತ್ಸವದ ವರ್ಷದಲ್ಲಿ ನಡೆದ ಚರ್ಚೆಗಳನ್ನು ಗಮನಿಸಬೇಕು. ಅದ್ವೈತ ದರ್ಶನವನ್ನು ತನ್ನ ಸೃಜನಶೀಲ ಮತ್ತು ವೈಚಾರಿಕ ಆಕೃತಿಗಳಿಗಾಗಿ ರೂಪಾಂತರಗೊಳಿಸಿ ಬಳಸಿದ ಒಬ್ಬ ದೊಡ್ಡ ಲೇಖಕನ ಬಗ್ಗೆ ತತ್ವಶಾಸ್ತ್ರದವರು ತಿರುಗಿಕೂಡ ನೋಡಲಿಲ್ಲ. ದಾರ್ಶನಿಕ ಬರೆಹಗಾರರಾದ ಬೇಂದ್ರೆ, ಡಿವಿಜಿ, ಶಂಬಾ ಅವರ ಮಟ್ಟಿಗೂ ಅವರದು ದಿವ್ಯ ಮೌನವೆ. ಕನ್ನಡದಲ್ಲಿರುವ ಇಂತಹದೊಂದು ದಿವ್ಯಮೌನ, ನಿರ್ಲಕ್ಷ್ಯ ಮತ್ತು ಶೈಕ್ಷಣಿಕ ಶೂನ್ಯದಲ್ಲಿ ಸಾಹಿತ್ಯದ ಚಿಂತಕರೊಬ್ಬರು ರಚಿಸಿರುವ 'ಶೈವಪ್ರತಿಭೆ' ಕೃತಿಗೆ ಸಾಂಸ್ಕೃತಿಕವಾದ ಮಹತ್ವವಿದೆ.

ಹೀಗಾಗಿ 'ಶೈವಪ್ರತಿಭೆ' ಶೈವದರ್ಶನದ ಬಗ್ಗೆ ತತ್ವಶಾಸ್ತ್ರಜ್ಞರೊ, ದರ್ಶನ ಶಾಸ್ತ್ರದ ಚರಿತ್ರಕಾರರೊ ರಚಿಸಿದ ಕೃತಿಯಲ್ಲ; ಸಾಹಿತ್ಯ ಚಿಂತಕನೊಬ್ಬ ಸಾಹಿತ್ಯ ಮತ್ತು ತತ್ವಶಾಸ್ತ್ರಗಳ ಸಂಬಂಧವನ್ನು ವಿವೇಚಿಸುವ ಕೃತಿ. ಇಲ್ಲಿನ ನಂಬಿಕೆ ಎಂದರೆ, ಸಾಹಿತ್ಯದ ಮುಖೇನ ತತ್ವಶಾಸ್ತ್ರವನ್ನು ನೋಡುವುದು. ಸಾಹಿತ್ಯದ ಮೂಲಕವೇ ಲೋಕ ಗ್ರಹಿಸುವ ಹಾಗೂ 'ಅನ್ಯ' ಜ್ಞಾನ ಶಾಸ್ತ್ರಗಳ ಜತೆ ಸಂವಾದ ಮಾಡುವ ಕೆಲಸವನ್ನು ಡಿಆರ್ ತಮ್ಮೆಲ್ಲ ಕೃತಿಗಳಲ್ಲಿ ಮಾಡುತ್ತಾರೆ. ಸಾಹಿತ್ಯವನ್ನು ಕೇಂದ್ರದಲ್ಲಿಟ್ಟುಕೊಂಡು ಸಾಮಾಜಿಕ ಪ್ರಜ್ಞೆ, ರಾಜಕೀಯ ಚಿಂತನೆ, ಸಂಸ್ಕೃತಿ ಚರ್ಚೆ ಹಾಗೂ ದಾರ್ಶನಿಕ ಆಯಾಮಗಳು ಜೋಡಣೆಗೊಳ್ಳುವ ಹಾಗೆ ಅವರ ಐದು ಕೃತಿಗಳಿವೆ. ಇದು ಎರಡು ದಶಕಗಳ ಕಾಲಮಾನದಲ್ಲಿ ಅವರ ಚಿಂತನೆ ರೂಪಾಂತರ ಪಡೆಯುತ್ತ ಬಂದ ಪರಿ ಕೂಡ. ಸಾಹಿತ್ಯ ವಿಮರ್ಶೆಯಿಂದ ಶುರುವಾದ ಅವರ ಬೌದ್ಧಿಕ ಯಾನವು, ಕಂಬಳಿಹುಳು ರೂಪಾಂತರಗೊಂಡು ಚಿಟ್ಟೆಯಾದಂತೆ, 'ಶೈವಪ್ರತಿಭೆ'ಯಲ್ಲಿ ದರ್ಶನಶಾಸ್ತ್ರದ ಮೂಲಕ ಕೊನೆಗಂಡಂತಿದೆ.

ಸಾಹಿತ್ಯ ವಿಮರ್ಶಕ ಲಿವೀಸನಿಗೆ 'ವರ್ಡ್ಸ್‌ವರ್ತ್ ಮೇಲೆ ನೀನು ಮಾಡುವ ವಿಮರ್ಶೆಯಲ್ಲಿ ಅವನ ದಾರ್ಶನಿಕತೆಯ ಚರ್ಚೆಯೆ ಇಲ್ಲವಲ್ಲ' ಎಂದು ಯಾರೊ ಟೀಕಿಸಿದಾಗ, ಆತ 'ಸಾಹಿತ್ಯ ವಿಮರ್ಶಕನಾಗಿ ನನ್ನ ಕೆಲಸ ಇರುವುದು ವರ್ಡ್ಸ್‌ವರ್ತನ ಕಾವ್ಯದ ಜತೆಗೆ ಮಾತ್ರ, ಅವನ ದರ್ಶನದ ಜತೆಗಲ್ಲ' ಎಂದು ನಿಷ್ಠುರವಾಗಿ ಉತ್ತರಿಸಿದ್ದನು. ಡಿಆರ್ ತಮ್ಮ ಮೊಟ್ಟಮೊದಲ ಲೇಖನ 'ಸಾಹಿತ್ಯ ಮತ್ತು ತತ್ವಜ್ಞಾನ' (೧೯೭೮)ದಲ್ಲಿ ಕಾವ್ಯದಲ್ಲಿ ದಾರ್ಶನಿಕ ಹುಡುಕಾಟ ಮಾಡುವುದನ್ನು ವಿರೋಧಿಸುವ ಈ ಹೇಳಿಕೆಯನ್ನು ಮಾರ್ಗದರ್ಶಕ ಸೂತ್ರದಂತೆ ಉಲ್ಲೇಖಿಸಿಕೊಂಡಿದ್ದರು. ಆದರೆ 'ಶೈವಪ್ರತಿಭೆ'ಯಲ್ಲಿ ಈ ನಿಲುವು ಬದಲಾದಂತಿದೆ. ಇಲ್ಲಿ ಕಾವ್ಯದಲ್ಲಿ ದರ್ಶನದ ಹುಡುಕಾಟ ನಡೆಯುತ್ತದೆ. ಮಾತ್ರವಲ್ಲ ಅದು ಕಾವ್ಯದ ರೂಪದಲ್ಲಿರುವ ಕಾರಣದಿಂದಲೇ ವಿಶಿಷ್ಟವಾಗಿದೆ ಎಂಬ ನಂಬಿಕೆ ಇಲ್ಲಿ ಕೆಲಸ ಮಾಡಿದೆ. ಅಲ್ಲಮನನ್ನು ಆರಿಸಿಕೊಳ್ಳಲು, ಅಲ್ಲಮನ ದಾರ್ಶನಿಕ ಪ್ರಖರತೆಯಷ್ಟೇ, ರೂಪಕ ಪ್ರತಿಭೆಯೂ ಪ್ರೇರಕವಾಗಿರಬೇಕು. ಕನ್ನಡದಲ್ಲಿ ತತ್ವಚಿಂತನೆಯನ್ನು ರೂಪಕ ಭಾಷೆಯಲ್ಲಿ ಮಾಡಿದವರಲ್ಲಿ ಸ್ವತಃ ಡಿಆರ್ ಕೂಡ ಒಬ್ಬರು. ಹೀಗಾಗಿ ಸಾಹಿತ್ಯದ ಮೂಲಕ ತತ್ವಶಾಸ್ತ್ರವನ್ನು ಅರಿಯುವ, ತತ್ವಶಾಸ್ತ್ರವನ್ನು ಅರಿಯುತ್ತಲೆ ಸಾಹಿತ್ಯದ ಅನನ್ಯತೆಯನ್ನು ಸ್ಥಾಪಿಸುವ ದ್ವಂದ್ವ ಪಾತ್ರದ ಅಭಿನಯ ಇಲ್ಲಿದೆ.

ಈ ದೃಷ್ಟಿಯಿಂದ 'ಅಮೃತ ಮತ್ತು ಗರುಡ' (೧೯೮೧) ಹಾಗೂ 'ಶೈವಪ್ರತಿಭೆ' (೧೯೯೯) ಎರಡೂ ಕೃತಿಗಳು ಆರಂಭವಾಗುವ ವಿಧಾನವು ಕುತೂಹಲಕರ. ಒಂದು ಗ್ರೀಕ್ ತತ್ವಜ್ಞಾನಿ ಪ್ಲೇಟೋನ ಹೇಳಿಕೆಯಿಂದ ಶುರುವಾಗುತ್ತದೆ. ಇನ್ನೊಂದು ಭಾರತದ ತತ್ವಶಾಸ್ತ್ರಗಳ ಮೇಲೆ ಖ್ಯಾತ ವಿದ್ವಾಂಸ ಸುರೇಂದ್ರನಾಥ ದಾಸಗುಪ್ತರ ಪ್ರಸ್ತಾಪದ ಮೂಲಕ ಆರಂಭವಾಗುತ್ತದೆ. ಪ್ಲೇಟೋನ ಹೇಳಿಕೆಯು ಆದರ್ಶರಾಜ್ಯದಲ್ಲಿ ಕವಿಯ ಸಾಮಾಜಿಕ ಮಹತ್ವವನ್ನು ನಿರಾಕರಿಸಿದರೆ, ದಾಸಗುಪ್ತರ ಹೇಳಿಕೆ ಭಾರತದ ತತ್ವಶಾಸ್ತ್ರಗಳ ಚರಿತ್ರೆಯಲ್ಲಿ ಕನ್ನಡದ ವಚನಕಾರರ ಪಾತ್ರವನ್ನು ನಿರಾಕರಿಸುತ್ತದೆ. ಡಿಆರ್ ಕೃತಿಗಳ ಈ ವಿನ್ಯಾಸವು ಎರಡು ಸಂಗತಿಗಳನ್ನು ಸೂಚಿಸುತ್ತಿದೆ. ಮೊದಲನೆಯದು – ಅವರ ಮೂಲಭೂತ ಜಗಳ ಇರುವುದು ಸಾಂಪ್ರದಾಯಿಕ ತತ್ವಶಾಸ್ತ್ರದವರ ಜತೆ ಎಂಬುದನ್ನು ; ಎರಡನೆಯದು – ಅಧಿಕಾರಸ್ಥವಾದ ಜ್ಞಾನಶಾಖೆಗಳು ಇನ್ನೊಂದರ ಅಸ್ತಿತ್ವವನ್ನು ಮನ್ನಿಸದಿರುವಿಕೆಯನ್ನು ಪ್ರತಿರೋಧಿಸುವುದು. ಇದಕ್ಕೆ ತಕ್ಕಂತೆ, ಅವರ ಕೃತಿಗಳು ಸಮಾಜದಲ್ಲಿ ಕವಿಗಳ ಮಹತ್ವವನ್ನು ಮತ್ತು ಭಾರತೀಯ ತತ್ವಶಾಸ್ತ್ರದ ಚರಿತ್ರೆಯಲ್ಲಿ ವಚನಕಾರರ ಸ್ಥಾನವನ್ನು ಪ್ರತಿಷ್ಠಾಪಿಸಲು ಯತ್ನಿಸುತ್ತವೆ. ಇದು ಒಂದು ಬಗೆಯಲ್ಲಿ 'ಡಿಫೆನ್ಸ್ ಆಫ್ ಲಿಟರೇಚರ್' ಇದ್ದಂತೆ.

ಸಾಹಿತ್ಯರೂಪಿಯಾಗಿ ದರ್ಶನವನ್ನು ವ್ಯಕ್ತಮಾಡುವುದು ನಮ್ಮ ಸಂಸ್ಕೃತಿಗಳು ಉದ್ದಕ್ಕೂ ಮಾಡಿಕೊಂಡುಬಂದಿವೆ. ಆಧುನಿಕ ತತ್ವಶಾಸ್ತ್ರದವರು ನಿರ್ದಿಷ್ಟ ಮಾದರಿಯಲ್ಲಿ ಮತ್ತು ಭಾಷೆಯಲ್ಲಿ ಪ್ರಕಟವಾಗುವ ತತ್ವದರ್ಶನವನ್ನು ಮಾತ್ರ ಪರಿಗಣಿಸುವುದು ನಿಜಕ್ಕೂ ಪ್ರಶ್ನಾರ್ಹವಾಗಿದೆ. ಕನ್ನಡದ ದೊಡ್ಡ ಲೇಖಕರೆಲ್ಲರೂ – ಅಲ್ಲಮನಿಂದ ಹಿಡಿದು ಬಸವಣ್ಣ, ಕುವೆಂಪು, ಬೇಂದ್ರೆ, ಮಧುರಚೆನ್ನ, ಪುತಿನ, ಅನಂತಮೂರ್ತಿ, ತೇಜಸ್ವಿ, ಲಂಕೇಶ್, ದೇವನೂರರ ತನಕ ದಾರ್ಶನಿಕರೂ ಆಗಿದ್ದಾರೆ. ಆದಕಾರಣ, ಕಲಾಕೃತಿಗಳ ದಾರ್ಶನಿಕ ಚರ್ಚೆ ಮಾಡುವುದು ದೋಷವಲ್ಲ. ಆದರೆ, ಸಾಹಿತ್ಯದಲ್ಲಿ ದಾರ್ಶನಿಕತೆ ಪ್ರಕಟವಾಗುವ ಬಗೆಯನ್ನು ನೋಡಲು ಕನ್ನಡ ವಿಮರ್ಶೆಯಲ್ಲಿ ಸಮರ್ಥ ವಿಧಾನಗಳು ಹುಟ್ಟಬೇಕಿದೆ. ಅಲ್ಲಮನ ಮಟ್ಟಿಗೆ ಹೇಳುವುದಾದರೆ, ಅವನನ್ನು ವೀರಶೈವ ಧಾರ್ಮಿಕತೆಗೆ ಮಣಿಸುವ ಯತ್ನಗಳೇ ಹೆಚ್ಚು. ಈ ಹಿನ್ನೆಲೆಯಲ್ಲಿ ಡಿಆರ್ ಸಾಹಿತ್ಯದ ವ್ಯಕ್ತಿಯಾಗಿ, ಆಧುನಿಕ ತತ್ವಶಾಸ್ತ್ರದ ಹಿನ್ನೆಲೆಯಲ್ಲಿ ಕಾವ್ಯದಲ್ಲಿ ಅಭಿವ್ಯಕ್ತವಾದ ದರ್ಶನದ ಸ್ವರೂಪವನ್ನು ಶೋಧಿಸುವುದಕ್ಕೆ ಚಾರಿತ್ರಿಕ ಮಹತ್ವವಿದೆ. ಇಲ್ಲಿ ತಲುಪುವ ತೀರ್ಮಾನಗಳಿಗಿಂತ ಅಧ್ಯಯನಕ್ಕೆ ಹುಟ್ಟಿಸಿಕೊಂಡಿರುವ ವಿಧಾನಗಳು ಮುಖ್ಯ. ಇದನ್ನು ಇಲ್ಲಿನ ವಿಶ್ಲೇಷಣೆಯ ಭಾಷೆ ಮತ್ತು ಪರಿಕಲ್ಪನೆಗಳಲ್ಲಿ ಕಾಣಬಹುದು. ಇದು ಕನ್ನಡ ವಿಮರ್ಶೆಯು ರೂಪಾಂತರಗೊಂಡು, ಸಂಸ್ಕೃತಿ ಚಿಂತನೆಯ ಆಯಾಮ ಪಡೆಯುವ ಕ್ರಿಯೆಯ ಭಾಗವಾಗಿದೆ.




ಹಿಂದೆ ಉಲ್ಲೇಖಿಸಿದ 'ಸಾಹಿತ್ಯ ಮತ್ತು ತತ್ವಶಾಸ್ತ್ರ' ಲೇಖನದ ತಲೆಬರಹ ಗಮನಿಸಿ. ಸಾಹಿತ್ಯವು ಮೊದಲಿಗಿದ್ದು ತತ್ವಜ್ಞಾನವು ಎರಡನೆಯ ಜಾಗದಲ್ಲಿದೆ. 'ಅಲ್ಲಮಪ್ರಭು ಮತ್ತು ಶೈವಪ್ರತಿಭೆ' ಹೆಸರಲ್ಲೂ ಅಲ್ಲಮನ ಹೆಸರು ಮೊದಲಿಗಿದೆ. 'ಶೈವ' ಎಂಬ ದರ್ಶನ ಸಂಬಂಧಿ ಹೆಸರು ನಂತರವಿದೆ. ಅದನ್ನು 'ಪ್ರತಿಭೆ' ಎಂಬ ಸಾಹಿತ್ಯ ಸಂಸ್ಕೃತಿಯ ಶಬ್ದವು ಮತ್ತೆ ಬಂದು ಮುಚ್ಚುತ್ತದೆ. 'ಪ್ರತಿಭೆ'ಯು ವ್ಯಕ್ತಿವಿಶಿಷ್ಟತೆಗೆ ಸಂಬಂಧಪಟ್ಟದ್ದು. ಆದ್ದರಿಂದ ಆಶಯದ ಕಾರಣದಿಂದ ತತ್ವಶಾಸ್ತ್ರ ಹುಡುಕುತ್ತಿದ್ದರೂ, ಡಿಆರ್ ರೂಪ, ವ್ಯಕ್ತಿ ವಿಶಿಷ್ಟತೆಯ ಮತ್ತು ಪ್ರಕಾರ ವಿಶಿಷ್ಟತೆಯ ಪ್ರಶ್ನೆಯನ್ನು ಕೈಬಿಡುವುದಿಲ್ಲ. ಇದು ನವ್ಯ ಸಾಹಿತ್ಯದ ತರಬೇತಿಯ ಫಲ. ಅವರೆಲ್ಲ ಕೃತಿಗಳು ಸಾಹಿತ್ಯದ ಹೆಸರಿನಲ್ಲಿ ಪ್ರಚ್ಛನ್ನವಾದ ರಾಜಕೀಯ ಚರ್ಚೆಯನ್ನು ಮಾಡುತ್ತವೆಯಾದರೂ, ನವ್ಯ ವಿಮರ್ಶೆಯ ವಿಧಾನಗಳನ್ನು ಕೈಬಿಡುವುದಿಲ್ಲ. ಎಂತಲೇ ಕವನಗಳ ಪ್ರಾಯೋಗಿಕ ವಿಮರ್ಶೆಗಳು ಅವರಲ್ಲಿ ಕಡ್ಡಾಯವಾಗಿ ಇವೆ. 'ಶೈವಪ್ರತಿಭೆ'ಯಲ್ಲಿ ಅಲ್ಲಮನ ವಚನಗಳ ಪ್ರಾಯೋಗಿಕ ವಿಮರ್ಶೆ ಎಂಬ ಅಧ್ಯಾಯವೆ ಇದೆ. ಇಡೀ ಕೃತಿಯಲ್ಲಿ ಪ್ರತಿಭೆ, ರೂಪಕ, ಪ್ರತಿಮೆ, ನಾಟಕೀಯತೆ, ಸಂಕೇತ ಮುಂತಾದ ಸಾಹಿತ್ಯ ಸಂಸ್ಕೃತಿಗೆ ಸೇರಿದ ಶಬ್ದಗಳು ಬಳಕೆಯಾಗುತ್ತವೆ. ಇಲ್ಲಿ ಅಲ್ಲಮನನ್ನು ಶೂನ್ಯಸಂಪಾದನೆ, ಮಂಟೇಸ್ವಾಮಿ ಕಾವ್ಯ, ಕವಿರಾಜಮಾರ್ಗ – ಇಟ್ಟು ಮುಖಾಮುಖಿ ಮಾಡಲಾಗಿದೆ. ಇವು ಸಾಹಿತ್ಯಕ ರೂಪದಲ್ಲಿರುವ ಸಾಂಸ್ಕೃತಿಕ ಪಠ್ಯಗಳು. ಇವೆಲ್ಲ ಸಾಕ್ಷ್ಯಗಳು ಇದು ಸಾಹಿತ್ಯವನ್ನು ಅದರ ವಸ್ತು ಮತ್ತು ಆಶಯಕ್ಕಿಂತಲೂ, ಅದು ಹೇಗೆ ಅಭಿವ್ಯಕ್ತವಾಗಿದೆ ಎಂಬ ಆಕೃತಿಯ ಮೂಲಕ ನೋಡುವ ಒತ್ತಾಸೆಯನ್ನು ಸೂಚಿಸುತ್ತವೆ; ಸಾಹಿತ್ಯದ ಮೂಲಕವೆ ಜಗತ್ತನ್ನು ನೋಡ ಬಯಸುವ ಹಠವನ್ನು ಸೂಚಿಸುತ್ತವೆ. ಈ ಕಾರಣಕ್ಕಾಗಿ ಇಲ್ಲಿ ವಿಚಿತ್ರ ಬಗೆಯ ಸಾಹಿತ್ಯವಾದಿ ನಿಲುವು ಒಂದು ದೃಷ್ಟಿಕೋನವಾಗಿ ಕೆಲಸಮಾಡಿದೆ.

ಸಾಹಿತ್ಯದ ಕಣದಲ್ಲೆ ನಿಂತು ಸಮಸ್ತ ಜ್ಞಾನಶಾಸ್ತ್ರಗಳ ಜತೆ ವಾಗ್ವಾದ ಮಾಡಬಯಸುವ ಡಿಆರ್, ತತ್ವಶಾಸ್ತ್ರದ ಹಕ್ಕಿಯಾಗಿ ರೂಪಾಂತರಗೊಂಡು, ದೂರಗಗನಕ್ಕೆ ಹಾರ ಬಯಸುತ್ತಾರೆ ಎನ್ನುವುದೆ ಸ್ವಾರಸ್ಯಕರ ಸಂಗತಿ. ಹಕ್ಕಿಯ ರೂಪಕವನ್ನು ಅವರ ಚಿಂತನೆಗೆ ಉದ್ದೇಶಪೂರ್ವಕ ಕೊಟ್ಟಿದೆ. ಅಮೃತಕ್ಕೆ ಗರುಡವು ಹಾರುವ ಬೇಂದ್ರೆ ಕಾವ್ಯದ ರೂಪಕದ ಮೇಲೆ ಅವರ ಮೊದಲನೆಯ ಕೃತಿಯ ಹೆಸರು ರೂಪುಗೊಂಡಿದೆ; ಬೌದ್ಧಿಕ ಯಾನ ಮಾಡುವಲ್ಲಿ, ತತ್ವಶಾಸ್ತ್ರದವರೊಂದಿಗೆ ಜಗಳ ಮಾಡುವುದರಲ್ಲಿ ಇರುವ ಆಸಕ್ತಿಯನ್ನು ಸೂಚಿಸುತ್ತದೆ. 'ಅಮೃತ ಮತ್ತು ಗರುಡ'ದ ಮೊದಲ ವಾಕ್ಯ ಹೀಗಿದೆ : ''ಸತ್ಯಕ್ಕೆ ವಾರಸುದಾರರು ಯಾರು ಎಂಬ ಬಗ್ಗೆ ಸಾಹಿತ್ಯ-ತತ್ವಜ್ಞಾನದ ಹೊಡೆದಾಟ ಯಾವಾಗಲೂ ಇದ್ದದ್ದೆ''; ಇಲ್ಲಿರುವ 'ಹೊಡೆದಾಟ' ಎಂಬ ಪದ ಮಾರ್ಮಿಕವಾಗಿದೆ. ಬೀದಿ ಜಗಳದಲ್ಲಿ ಪ್ರಯೋಗಿಸುವ ಪದವನ್ನು ಗಂಭೀರವಾದ ಸೈದ್ಧಾಂತಿಕ ವಾಗ್ವಾದಗಳಿಗೆ ಯಾಕೆ ಬಳಸುತ್ತಿದ್ದಾರೆ ? ಒಂದು – ಇದು ತತ್ವಶಾಸ್ತ್ರೀಯ ಚರ್ಚೆಗಳಲ್ಲಿ ಇರುವ ಸಹಜ ಸಂಘರ್ಷಗಳನ್ನು ಸೂಚಿಸುತ್ತದೆ. ಪೂರ್ವಪಕ್ಷಗಳ ಮಂಡನೆ, ಅವುಗಳ ತರ್ಕಬದ್ಧವಾದ ವಿರೋಧ, ಸಂಘರ್ಷದಲ್ಲಿ ಎದುರಾಳಿಗಳನ್ನು ಸೋಲಿಸುವಿಕೆ ಇವು ತತ್ವಶಾಸ್ತ್ರದಲ್ಲಿ ಸಾಮಾನ್ಯವಷ್ಟೆ. ಎರಡನೆಯದಾಗಿ ಇದು ತಾತ್ವಿಕ ಕದನಗಳಲ್ಲಿ ಲೇಖಕರ ವೈಯಕ್ತಿಕ ಸೆಳೆತವನ್ನು ಸೂಚಿಸುತ್ತಿದೆ. ಶೈವಪ್ರತಿಭೆಯಲ್ಲಿ ಯುದ್ಧ ಪರಿಭಾಷೆಯು ತುಂಬಿಕೊಂಡಿರುವುದು ಆಕಸ್ಮಿಕವಲ್ಲ.

ಡಿಆರ್ ವಿದ್ವತ್ತು ಪ್ರಖರವಾಗಿ ಕೆಲಸ ಮಾಡುವುದೆ ತಾತ್ವಿಕ ಎದುರಾಳಿಗಳನ್ನು ಹುಟ್ಟಿಸಿಕೊಂಡು, ಅವರನ್ನು ಮುಖಾಮುಖಿ ಮಾಡಿ ಸೋಲಿಸುವಲ್ಲಿ; ಅವರು ತಮ್ಮ ಭಾಷಣಗಳಲ್ಲಿ ಇದನ್ನು ಪ್ರಜ್ಞಾಪೂರ್ವಕವಾಗಿ, ಕೆಲವೊಮ್ಮೆ ಗೆಲ್ಲಬೇಕೆಂಬ ಹಠಕ್ಕಾಗಿ ಮಾಡುತ್ತಿದ್ದರು. ಜೀವವಿರುವ ತನಕ ಅವರು ಬೌದ್ಧಿಕ ಹೊಡೆದಾಟಗಳ ಮೂಲಕ ಕನ್ನಡ ಚಿಂತನೆಯ ಪರಿಸರವನ್ನು ಕಲಕುತ್ತ ಇದ್ದರು. ಆದ್ದರಿಂದ ಅವರ ಕೃತಿಗಳ ಆರಂಭವು ಭಿನ್ನಮತ ದಾಖಲಿಸುವ ಜಗಳಗಂಟ ವಿನ್ಯಾಸದಲ್ಲಿರುವುದು ಸೋಜಿಗವಲ್ಲ; ಬೌದ್ಧಿಕ ''ಹೊಡೆದಾಟ'' ಮಾಡುತ್ತ ಬೌದ್ಧಿಕತೆಯ ಕಡಲಲ್ಲಿ ಈಸಬಯಸಿದ್ದ ಅವರಿಗೆ ಮಹಾ ಬೌದ್ಧಿಕನೂ ವಾಗ್ವಾದ ಪ್ರಿಯನೂ ಆದ ಅಲ್ಲಮ ವಸ್ತುವಾಗಿದ್ದು ಸಹಜವಾಗಿದೆ. ಆದರೆ ಎಲ್ಲ ಕಟ್ಟುವ ಕ್ರಿಯೆಗಳನ್ನು ಅನುಮಾನಿಸುವ, ಅರಿವಿನ ಯುದ್ಧದಲ್ಲಿ ಎದುರಾಳಿಗಳನ್ನು ಕಟುವಾಗಿ ಎದುರಾಗುವ, ಹೊಡೆದಾಟಗಳನ್ನು ಮಾಡುವ ಅಲ್ಲಮನನ್ನು ಆರಿಸಿಕೊಂಡಿರುವುದು, ತಮ್ಮ ವಿದ್ವತ್ ವಿಜೃಂಭಣೆಗೆ ನೆಪವಾಗಿದೆಯೆ ಎಂಬ ಸಂಶಯವೂ ಬರುತ್ತದೆ. ತಮ್ಮ ಈ ವಿದ್ವತ್ ಕದನದ ಗುಣದಿಂದ ಡಿಆರ್ ಅವರಿವರನ್ನು ಗೆದ್ದುಕೊಂಡು ದೇಶಸಂಚಾರ ಮಾಡುತ್ತಿದ್ದ ಪ್ರತಿವಾದಿ ಭಯಂಕರರಂತೆ ಕಾಣುತ್ತಾರೆ.

ಆದರೆ ಹೊಡೆದಾಟದ ಸೆಳೆತಗಳಿಂದ ಅವರ ಚಿಂತನೆಯನ್ನು ಪಾರುಮಾಡುವ ಸಂಗತಿಯೆಂದರೆ, ಮರೆತುಹೋಗದ ರಾಜಕೀಯ ಪ್ರಜ್ಞೆ; ಅಲ್ಲಮನನ್ನು ಚರ್ಚೆಗೆತ್ತಿಕೊಳ್ಳುವಲ್ಲಿ ತತ್ವಶಾಸ್ತ್ರದ ದಿಗ್ಗಜಗಳ ಜತೆ ವಾಗ್ವಾದಕ್ಕಿಳಿಯುವಲ್ಲಿ ವಚನ ಚಳುವಳಿಗೆ ಅಖಿಲ ಭಾರತೀಯ ಚರ್ಚೆಗಳಲ್ಲಿ ಸೂಕ್ತ ಸ್ಥಾನಮಾನ ದೊರಕಿಸುವ ಉದ್ದೇಶವೂ ಇದೆ. ಇದು ಕೆಳಜಾತಿ ವರ್ಗಗಳ ಪರವಾದ ಸಾಮಾಜಿಕ ರಾಜಕೀಯ ಚಲನಶೀಲತೆಯ ಭಾಗವಾಗಿದೆ. ಸ್ವತಃ ನಾಗರಾಜ ಒಬ್ಬ ನೇಕಾರ ಜಾತಿಯಿಂದ ಬಂದವರಾಗಿದ್ದರು. ಅಲ್ಲಮನು ಕೆಳಜಾತಿಯಿಂದ ಬಂದ ಭಾರತದ ದೊಡ್ಡ ದಾರ್ಶನಿಕನಾಗಿದ್ದನು. ಇಲ್ಲಿ ಚರ್ಚೆಗೊಳಗಾಗುವ ಮಂಟೆಸ್ವಾಮಿ, ಭೀಮಾಬೋಯಿ, ಕಬೀರದಾಸ ಅವರೂ ಇಂತಹವರೆ. ಹಿಂದೆ ಪುಣೇಕರ್ ಅವರು ಭಾರತದ ತತ್ವಶಾಸ್ತ್ರಕ್ಕೆ ದಲಿತರ ಕೊಡುಗೆ ಎಂಬ ಗ್ರಂಥವನ್ನು ಇಂಗ್ಲಿಷಿನಲ್ಲಿ ಬರೆದಿದ್ದರು. ಅಲ್ಲಿಂದ 'ಶೈವಪ್ರತಿಭೆ' ಪ್ರೇರಣೆ ಪಡೆದಿರಲೂಬಹುದು. ಆದರೆ ಇಲ್ಲಿನ ಈ ರಾಜಕೀಯ ಆಶಯಗಳು ಸಾಮರ್ಥ್ಯವಿದ್ದೂ ಬದಿಗೆ ತಳ್ಳಲ್ಪಡುವ ಸಂಗತಿಯ ಪರವಾಗಿ ಹೊಡೆದಾಟಮಾಡಲು ನಿಲ್ಲಿಸಿವೆ. ಇದೊಂದು ತರಹ ಕುವೆಂಪು ಅವರ 'ಶೂದ್ರತಪಸ್ವಿ'ಯವಾದ. ಹೀಗಾಗಿ ಇಲ್ಲಿನ ಸಾಹಿತ್ಯಕ ಮತ್ತು ತಾತ್ವಿಕ ಚಿಂತನೆಯು ರಾಜಕೀಯ-ಸಾಮಾಜಿಕ ಚಿಂತನೆಯಾಗಿ ಹೊರಳಿಕೊಳ್ಳಲು ಹವಣಿಸುತ್ತದೆ. ಇದು ಎಲ್ಲ ಡಿಆರ್ ಅವರ ಸಾಂಸ್ಕೃತಿಕ ಚಿಂತನೆಯಲ್ಲಿರುವ ಸಮಾಜಶಾಸ್ತ್ರ ಇದಕ್ಕೆ ಸಾಕ್ಷಿ, 'ಶೈವಪ್ರತಿಭೆ' ಯಲ್ಲಿ ನೆಲನಾಳ್ದನ ಹೆಣದ ಪ್ರತಿಮೆಯುಳ್ಳ ವಚನವನ್ನೂ 'ಹಿರಿಯರು ಲಕ್ಷ್ಮಿಯ ದ್ವಾರಪಾಲಕರು' ಎಂಬ ವಚನವನ್ನೂ ಇಟ್ಟುಕೊಂಡು ಮಾಡುವ ಪ್ರಭುತ್ವದ ಬಗೆಗಿನ ರಾಜಕೀಯ ಚರ್ಚೆ. ಆದರೆ ಈ ಬಗೆಯ ರಾಜಕೀಯ ಆಯಾಮವು ಅವರ ಹಿಂದಿನ ಕೃತಿಗಳಿಗೆ ಹೋಲಿಸಿದರೆ ಈ ಕೃತಿಯಲ್ಲಿ ಕ್ಷೀಣವಾಗುತ್ತಾಹೋಗಿರುವುದು ಯಾಕೆ ಎನ್ನುವುದು ಪ್ರಶ್ನೆ.

ಶೈವಪ್ರತಿಭೆಯು ಸಾಹಿತ್ಯದ ಪರ ವಹಿಸಿ ತತ್ವಶಾಸ್ತ್ರದವರ ಜತೆ 'ಹೊಡೆದಾಟ' ಮಾಡುತ್ತದೆ ಎನ್ನುವುದು ಪೂರಾ ಸತ್ಯವಲ್ಲ. ಎಷ್ಟೇ ಸಂಘರ್ಷವಿದ್ದರೂ, ಕೊನೆಗೆ ಕಲೆ ಮತ್ತು ದರ್ಶನಗಳು ಏಕೀಭವಿಸುವ ಬಗೆಯನ್ನು ಅದು ತುಡುಕುತ್ತದೆ. ಹೀಗಾಗಿ ಪ್ರತಿರೋಧ, ಪ್ರತಿಭಟನೆ, ನಿರಾಕೃತವಾಗಿದ್ದಕ್ಕೆ ನ್ಯಾಯ ದೊರಕಿಸುವ ಸಂಘರ್ಷಶೀಲತೆಯ ಗುಣಗಳು ಮೊದಲ ಘಟ್ಟಗಳಲ್ಲಿ ಅನಿವಾರ್ಯವಾಗಿ ಕಾಣಿಸುವ ಕೋಶರೂಪಿ ಹಂತಗಳು. ನಂತರ ಗಮನವೆಲ್ಲ 'ಆತ್ಮೀಯಶತ್ರು'ಗಳ ನಡುವೆ ನಡೆದಿರುವ ಕೊಡುಕೊಳೆಗಳ ಹುಡುಕಾಟದತ್ತ ಹರಿಯುತ್ತದೆ. ಕದನದ ತುದಿಗೆ ತಣ್ಣಗಿನ ತಾಳ್ಮೆಯಲ್ಲಿ ಅನುಸಂಧಾನ ಮಾಡುವ ಈ ಗುಣವು ಥೇಟು ಅಡಿಗರ 'ವರ್ಧಮಾನ' ಕವಿತೆಯ ನಾಯಕನದಾಗಿದೆ; 'ಸಾಹಿತ್ಯ ಮತ್ತು ತತ್ವಶಾಸ್ತ್ರ' ಲೇಖನದಲ್ಲಿ ಡಿಆರ್ ''ವಚನಕಾರರು ಕಲೆ ಮತ್ತು ದರ್ಶನವನ್ನು

ಏಕೀಭವಿಸಿದವರು'' ಎಂಬ ಮೆಚ್ಚುಗೆಯ ಮಾತನ್ನು ನೆನೆಯಬಹುದು. ಈ ಮಾತು ಹಾಗೂ ಈ ಮಾತುಳ್ಳ ಲೇಖನವು ಅವರು ೧೮ ವರ್ಷಗಳ ಬಳಿಕ ಬರೆಯುವ ಪುಸ್ತಕಕ್ಕೆ ಹಾಕಿಕೊಂಡ ಮುನ್ನುಡಿಯಾಗಿದೆ. ಹೊಡೆದಾಡುವ ವ್ಯಗ್ರತೆಯಲ್ಲಿ ಯುದ್ಧಕ್ಕೆ ಹೊರಡುವ ಡಿಆರ್, ಕಡೆಕಡೆಗೆ ತತ್ವಶಾಸ್ತ್ರ ಮತ್ತು ಕಲೆ ಎರಡೂ ಮಿಲನಗೊಳ್ಳುವ ಚರ್ಚೆ ಬಂದಾಗ ಮಾತ್ರ, ಪಾತ್ರ ಬದಲಾವಣೆ ಮಾಡಿಕೊಂಡು ತತ್ವಶಾಸ್ತ್ರದ ವ್ಯಕ್ತಿಯಾಗಿ ಬದಲಾಗಿಬಿಡುತ್ತಾರೆ. ಇಲ್ಲಿ ಕಂಬಳಿ ಹುಳು ಚಿಟ್ಟೆಯಲ್ಲ, ಹಕ್ಕಿಯಾಗಿ ಗಗನ ವಿಹಾರಕ್ಕೆ ಹಾರಿ ಬಿಡುತ್ತದೆ. ಈ ರೂಪಾಂತರವು ಅವರ ವೈಯಕ್ತಿಕ ಬದಲಾವಣೆಯೇನಲ್ಲ, ಒಟ್ಟು ಕನ್ನಡ ವಿಮರ್ಶೆಯು ತನ್ನನ್ನು ಅತಿ ಸಾಹಿತ್ಯಕತೆಯಿಂದ ಬಿಡಿಸಿಕೊಂಡ ಬಗೆಯನ್ನು ಕೂಡ ಸಂಕೇತಿಸುತ್ತಿರಬಹುದು.

ಹೀಗೆ 'ಶೈವಪ್ರತಿಭೆ' ಕನ್ನಡ ಚಿಂತನೆಯ ದೃಷ್ಟಿಯಿಂದ ಎರಡು ಕಾರಣಕ್ಕಾಗಿ ಮುಖ್ಯವಾಗಿದೆ. (೧) ಕನ್ನಡದ ಪಠ್ಯಗಳಿಗೆ ಇರುವ ಅಪಾರ ಸಾಧ್ಯತೆಗಳನ್ನು ಶೋಧಿಸುವ ಕಾರಣಕ್ಕಾಗಿ ಮತ್ತು ನಮ್ಮ ಸಂಸ್ಕೃತಿಯಲ್ಲಿ ದರ್ಶನವನ್ನು ಕಾವ್ಯಮುಖೇನ ವ್ಯಕ್ತಮಾಡುವ ಪದ್ಧತಿಯನ್ನು ಅರಿಯುವ ಕಾರಣಕ್ಕಾಗಿ. ಅಲ್ಲಮನನ್ನು ಕುರಿತ ೨೦ನೇ ಶತಮಾನದ ಯಾವ ಅಧ್ಯಯನಗಳೂ ಅಲ್ಲಮನಲ್ಲಿ ಇಷ್ಟೊಂದು ಸಾಧ್ಯತೆಗಳನ್ನು ಹೊರತೆಗೆದಿಲ್ಲ ಎನ್ನಬಹುದು. (೨) ಭಾರತೀಯ ತತ್ವಶಾಸ್ತ್ರ ಅಧ್ಯಯನಗಳು ಭಾರತದ ದೇಸೀ ಕವಿಗಳನ್ನು ದಾರ್ಶನಿಕ ಪಂಥಗಳನ್ನು ಹೊರಗಿಡುವ ರಾಜಕಾರಣವನ್ನು ಪ್ರತಿರೋಧಿಸುವ ಕಾರಣಕ್ಕಾಗಿ. ಈ ಪ್ರತಿರೋಧ ಯಾವ ಮಟ್ಟಕ್ಕೆ ಹೋಗುತ್ತದೆ ಎಂದರೆ, ಅಲ್ಲಮನನ್ನೆ ಕೇಂದ್ರವಾಗಿರಿಸಿ, ಅಖಿಲ ಭಾರತೀಯ ಪಠ್ಯಗಳನ್ನು ಮತ್ತು ದರ್ಶನಗಳನ್ನು ನೋಡಲು ಯತ್ನಿಸುತ್ತದೆ. ಕಾಶ್ಮೀರಶೈವಕ್ಕೆ ಸೇರಿದ ಅಭಿನವಗುಪ್ತನನ್ನೂ ಅವನ ಪಠ್ಯಗಳನ್ನೂ ತಂದು ಚರ್ಚಿಸುವುದು ಮಾತ್ರವಲ್ಲ, ಅಲ್ಲಮ ಅಭಿನವಗುಪ್ತರಿಗಿಂತ ಹೇಗೆ ಪ್ರಬುದ್ಧ ದಾರ್ಶನಿಕ ಎಂದು ಸಾಧಿಸುವುದನ್ನು ಮಾಡುತ್ತದೆ. ಇದೊಂದು ಗೆಲ್ಲಬೇಕೆಂದು ಮಾಡುವ ವಿದ್ವತ್ ಹಠವಾಗಿದೆ. ಆದರೆ ಈ ತಾತ್ವಿಕ ಚೌಕಟ್ಟುಗಳು ಕಾಣಿಸುವ ದೇಶೀ ಅಭಿಮಾನವು ಉಪಯುಕ್ತವಾಗಿರುವಷ್ಟೆ ಸಮಸ್ಯಾತ್ಮಕವೂ ಆಗಿದೆ. ಅಂದರೆ ಹೊರಗಿಡುವ ರಾಜಕಾರಣವನ್ನು ವಿರೋಧಿಸುವ ಈ ಕೃತಿ, ಮತ್ತದೇ ಅಖಿಲ ಭಾರತೀಯ ಚೌಕಟ್ಟುಗಳಿಗೆ ಮಾರುಹೋಗುತ್ತದೆ.

'ಶೈವಪ್ರತಿಭೆ'ಯಲ್ಲಿ ಅಲ್ಲಮನ ವಿಶ್ಲೇಷಣೆಗೆ ನಾಲ್ಕು ಬಗೆಯ ತಾತ್ವಿಕ ಚೌಕಟ್ಟುಗಳನ್ನು ನಿರ್ಮಿಸಿಕೊಳ್ಳಲಾಗಿದೆ. (೧) ಅಖಿಲ ಜಾಗತಿಕ ಚೌಕಟ್ಟು ಇದು ಶೆಲ್ಡನ್ ಪೊಲಾಕ್, ಕಿರ್ಕೆಗಾರ್ಡ್, ಗಯಟೆ, ಸಂತ ಫ್ರಾನ್ಸಿಸ್ ಮುಂತಾದವರ ಚರ್ಚೆಗಳ ಮೂಲಕ ಹುಟ್ಟಿದೆ. (೨) ಅಖಿಲ ಭಾರತೀಯ ಸಂಸ್ಕೃತದ ಶೈವ ದಾರ್ಶನಿಕ ಚೌಕಟ್ಟು. ಇಲ್ಲಿ ಅಭಿನವಗುಪ್ತ ಶಂಕರಾಚಾರ್ಯ, ಕಾಳಿದಾಸ, ಗೋರಖನಾಥ, ಮೊದಲಾದವರ ಜತೆ ಅಲ್ಲಮನ ಚರ್ಚೆಯಾಗುತ್ತದೆ. (೩) ಅಖಿಲ ಭಾರತದ ದೇಶೀಯ ಶೂದ್ರ ದಲಿತ ಚಿಂತಕರ ಚೌಕಟ್ಟು. ಇಲ್ಲಿ ಅಲ್ಲಮನ ಜತೆ ಕಬೀರ್‌ದಾಸ, ನಾರಾಯಣಗುರು, ಭೀಮಾಬೋಯಿ ಅವರನ್ನು ಇಡಲಾಗಿದೆ. (೪) ಅಖಿಲ ಕನ್ನಡ ಚೌಕಟ್ಟು. ಇದರಲ್ಲಿ ಮಂಟೇಸ್ವಾಮಿ, ಕವಿರಾಜಮಾರ್ಗ, ಶೂನ್ಯಸಂಪಾದನೆ ಹಾಗೂ ಹರಿಹರನ ರಗಳೆಗಳ ಚರ್ಚೆಯಿದೆ. ಈ ನಾಲ್ಕರಲ್ಲಿ ಮೊದಲೆರಡು 'ಅಖಿಲ' (ಪ್ಯಾನ್) ಚೌಕಟ್ಟುಗಳು, ಅಷ್ಟು ಉಪಯುಕ್ತ ಎನಿಸುವುದಿಲ್ಲ. ಇವು ಲೇಖಕರ ಬೌದ್ಧಿಕ ಆಸಕ್ತಿ ಮತ್ತು ಹೊಡೆದಾಟದ ಕಾರಣದಿಂದ ಬಂದಂತಿವೆ. ಬೌದ್ಧಿಕ ಆಸಕ್ತಿಗಳಿಗೆ ಅನೇಕ ಸಲ, ತನ್ನನ್ನು ಪ್ರದರ್ಶಿಸಿಕೊಳ್ಳುವ ಮತ್ತು ವಿಸ್ತರಿಸಿಕೊಳ್ಳುವ ಗುಣ ಮುಖ್ಯವಾಗಿಬಿಡುತ್ತದೆ. ಆದರೆ ಕೊನೆಯ ಎರಡು ಚೌಕಟ್ಟುಗಳು ಅರ್ಥಪೂರ್ಣವಾಗಿ ತೋರುತ್ತವೆ. ಕಾರಣ, ಇವು ಕನ್ನಡದ ಪಠ್ಯಗಳನ್ನು ನಮ್ಮದೆ ಸಾಂಸ್ಕೃತಿಕ ಹಿನ್ನೆಲೆಗಳಲ್ಲಿ ಇಟ್ಟು ನೋಡುತ್ತವೆ; ನಮ್ಮ 'ಸ್ಥಳೀಯ' ಎನಿಸುವ ಕವಿಗಳು ತಮ್ಮ ತತ್ವ ಮತ್ತು ಕಾವ್ಯ ಸೃಷ್ಟಿಯಲ್ಲಿ ಹೇಗೆ ಬಹುದೂರದ ತಾತ್ವಿಕ ಧಾರೆಗಳ ಜತೆ ಸಂಬಂಧ ಪಡೆದಿದ್ದರೆಂಬುದನ್ನು ಶೋಧಿಸುತ್ತವೆ. ಇವು ಸ್ಥಳೀಯ ಸಮುದಾಯಗಳ ಪರವಾದ ಸಾಂಸ್ಕೃತಿಕ ರಾಜಕಾರಣದ ತುರ್ತಿನಿಂದ ಹುಟ್ಟಿದವು.

ಈ ಕೃತಿಯ ಮಹತ್ವ ಇರುವುದೆ ಅಲ್ಲಮನನ್ನು ಕನ್ನಡ ಸಂಸ್ಕೃತಿಯ ಅನನ್ಯತೆಯ ನೆಲೆಯಲ್ಲಿ ವಿಶ್ಲೇಷಿಸುವಲ್ಲಿ. ''ಕನ್ನಡ ಭಾಷೆ ಕಂಡ ಅತ್ಯಂತ ವಿಶಿಷ್ಟ ಅನುಭಾವಿ ಕವಿ ಅಲ್ಲಮ ಎಂದು ಅವನ ಕಾವ್ಯವನ್ನು ಪ್ರವೇಶಿಸುವುದು ಒಂದು ಬಗೆ. ಈ ಬಗೆಯ ಸ್ವಯಂ ಪೂರ್ಣ ದೃಷ್ಟಿಕೋನವೇ ಅಂತಿಮವಾಗಿ ಒಂದು ಭಾಷಿಕ ಜನಾಂಗದ ಸಾಹಿತ್ಯಾನುಭವಕ್ಕೆ ಮುಖ್ಯ'' ಎಂಬ ಅದರ ನಂಬಿಕೆಯಲ್ಲಿ; ಡಿಆರ್ ಇದನ್ನು ''ಅಂತರ್ಮುಖೀ ದೇಸೀ ನಿಲುವು'' ಎನ್ನುತ್ತಾರೆ. ಇಲ್ಲಿನ ಪ್ರಬುದ್ಧತೆಯೆಂದರೆ ದೇಸೀ ಹುಡುಕಾಟವು ತಂದಿಕ್ಕುವ ಅಪಾಯಗಳ ಬಗ್ಗೆ ಎಚ್ಚರವಹಿಸಿರುವುದು. ಕಾರಣ, ಹೆಚ್ಚಿನ ದೇಸೀ ಹುಡುಕಾಟಗಳು ಸ್ವವಿಮರ್ಶೆ

ರಹಿತವೂ ಎದುರಾಳಿ ವಿರೋಧದ ಕಲ್ಪನೆಯುಳ್ಳವೂ ಆಗಿವೆ. ಕನ್ನಡದ ಹೆಚ್ಚಿನ ದೇಸೀವಾದಿಗಳು ಜಾನಪದ ನೆಲೆಯವರು ಇಲ್ಲವೆ ರಾಷ್ಟ್ರೀಯವಾದಿಗಳು. ಪಶ್ಚಿಮವನ್ನೂ, ಆಧುನಿಕತೆಯನ್ನೂ ಕಟುವಾಗಿ ವಿಮರ್ಶಿಸುವ ಈ ದೇಸಿ ಚಿಂತನೆ, ಜಾಗತೀಕರಣದ ಸಂದರ್ಭದಲ್ಲಿ ಮತ್ತಷ್ಟು ತೀವ್ರತೆ ಪಡೆದುಕೊಂಡಿದೆ ಮತ್ತು ಸ್ವವಿಮರ್ಶಾತ್ಮಕತೆ ಕಳೆದುಕೊಳ್ಳುತ್ತಿದೆ. ಆದರೆ ಇಲ್ಲಿ ದೇಸಿಯನ್ನು ಸ್ವವಿಮರ್ಶೆಯುಳ್ಳ ಸೆಕ್ಯುಲರ್ ಆದ, ಬಹುರೂಪಿಯಾದ ಒಂದು ಸಂಸ್ಕೃತಿ ಪರಿಕಲ್ಪನೆ ಯನ್ನಾಗಿ 'ಶೈವಪ್ರತಿಭೆ' ರೂಪಿಸುತ್ತದೆ. ''ಕನ್ನಡ ಸಂಸ್ಕೃತಿಯ ಆಂತರಿಕ ಚೌಕಟ್ಟಿನೊಳಗೇ ಅಲ್ಲಮನನ್ನು ಚರ್ಚಿಸುವ ಸಾಧ್ಯತೆಯಿದೆ. ಆದರೆ ಕನ್ನಡ ಸಂಸ್ಕೃತಿ ರೂಪುಗೊಂಡಿರುವ ಪ್ರಕ್ರಿಯೆಯಲ್ಲಿಯೇ ಚಾರಿತ್ರಿಕ ವಾಗಿ ಹಲವು ಬಗೆಯ ಶಕ್ತಿಗಳು, ಕ್ಷೇತ್ರಗಳು ಸನ್ನಿವೇಶಗಳ ಮುಖಾಮುಖಿಯಿದೆ'' (ಪು. ೪೭) ಎಂದು ಅದು ಭಾವಿಸುತ್ತದೆ; ಚಿದಾನಂದಮೂರ್ತಿ ಅವರ ಊಳಿಗಮಾನ್ಯ ಮೌಲ್ಯಗಳನ್ನುಳ್ಳ, ಭಾವನಾತ್ಮಕವಾದ, ಸ್ವವಿಮರ್ಶೆಯಿಲ್ಲದ ಸಂಸ್ಕೃತಿಯ ಪರಿಕಲ್ಪನೆಗಿಂತ ಇದು ಭಿನ್ನವಾಗುವುದು ಅಥವಾ ಪುಣೇಕರ್, ಕಂಬಾರ, ಅನಂತಮೂರ್ತಿಯವರ ದೇಸೀಸಂಸ್ಕೃತಿಯ ಕಲ್ಪನೆಗೂ ಇದು ಭಿನ್ನವಾದುದು.




ಈ ಕೃತಿಯ ಸಾಧನೆಯೆಂದರೆ ಪರಂಪರೆಯ ನಿರ್ಮಾಣ ಮಾಡಿಕೊಳ್ಳುವುದು. ಪರಂಪರೆಯೆಂಬುದು ಒಂದು ಖಚಿತಪಡಿಸಿದ ಆಕಾರದಲ್ಲಿ ಸಿದ್ಧರೂಪದಲ್ಲಿ ಇರುವುದಿಲ್ಲ; ಅದನ್ನು ನಮ್ಮ ವರ್ತಮಾನದ ಅಗತ್ಯಕ್ಕೆ ತಕ್ಕಂತೆ ಕಟ್ಟಿಕೊಳ್ಳುತ್ತ ಇರಬೇಕಾಗುತ್ತದೆ. ಅಲ್ಲಮನ ಎಲ್ಲಿಯೂ ನಿಲ್ಲದ ಚಾರಣಗುಣ, ಅಮೂರ್ತ ದಾರ್ಶನಿಕತೆ, ಅ-ರಾಜಕ ಅ-ಸಾಮಾಜಿಕ ಎನಿಸುವ ನಿಲುವು – ಇವೆಲ್ಲವು ಅವನ ಅನುಸಂಧಾನಗಾರರನ್ನೂ ಪ್ರಭಾವಿಸಿಬಿಡುತ್ತವೆ. ಇಂತಹ ಕವಿದಾರ್ಶನಿಕನನ್ನು ಒಂದು ಮೂರ್ತವಾದ ತಾತ್ವಿಕತೆಯಲ್ಲಿ ಹಿಡಿಯಲು ಶೈವ ಪ್ರತಿಭೆಯು ಅನೇಕ ಪಟ್ಟುಗಳನ್ನು ಹಾಕುತ್ತದೆ. ಇದಕ್ಕಾಗಿ 'ಪ್ರತಿಮಾ ಪರ್ವ', 'ಪ್ರಾದೇಶಿಕ ದೇಸಿ', 'ವಿಶ್ವದೇಸಿ', 'ಸಂಸ್ಕೃತ ವಿಶ್ವಮಾಚೆಳೆ', 'ಸಾಂಸ್ಥಿಕಕಥನ', 'ಸಂಕಲಾನುಸಂಧಾನ' ಮುಂತಾದ ಪರಿಕಲ್ಪನೆಗಳನ್ನು ಕಟ್ಟಿಕೊಳ್ಳುತ್ತದೆ. ಚರಿತ್ರಾತೀತ ದಾರ್ಶನಿಕನನ್ನು ಚಾರಿತ್ರಿಕ ಚೌಕಟ್ಟುಗಳನ್ನು ಕಟ್ಟಿ ಅದರಲ್ಲಿ ಇಟ್ಟು ನೋಡುತ್ತದೆ; ಚೆಲ್ಲಿಬಿದ್ದಿರುವ ಸಂಗತಿಗಳನ್ನು ಒಂದು ಅರ್ಥಕೇಂದ್ರಕ್ಕೆ ಜೋಡಿಸಿ ವಿಶ್ಲೇಷಿಸುತ್ತದೆ. ಇದು 'ಪರಂಪರೆ ನಿರ್ಮಾಣ ಕ್ರಿಯೆ'ಯ ಕೆಲಸವಾಗಿದೆ. ಸಂಸ್ಕೃತಿ ಚಿಂತನೆಯಲ್ಲಿ ಪಳಗಿದ ವಿದ್ವಾಂಸರಾದ ಡಿಆರ್, ತಮ್ಮ ಮೊದಲನೇ ಕೃತಿಯಿಂದಲೂ ಸರಳೀಕೃತ ಪರಿಕಲ್ಪನೆಗಳನ್ನು ವಿಸರ್ಜಿಸುತ್ತ, ಮತ್ತು ಹೊಸ ಹೊಸ ಪರಿಕಲ್ಪನೆಗಳನ್ನು ನಿರ್ಮಿಸಿಕೊಳ್ಳುತ್ತ ಬಂದವರು. ಅದರಲ್ಲೂ ಎದುರಾಳಿ ಕಲ್ಪನೆಗಳ ಮೂಲಕ ಸಂಸ್ಕೃತಿ ವಿಶ್ಲೇಷಣೆ ಮಾಡುವುದರ ದೋಷಗಳ ಬಗ್ಗೆ ಎಚ್ಚರವುಳ್ಳವರು. ಸರಳ ನೆಲೆಯ ಬಂಡಾಯ ಚಿಂತನೆ ಮಾಡುವವರಿಗೆ ಪ್ರಿಯವಾಗುವ ಇವು, ಆಳವಾದ ಸಂಕೀರ್ಣವಾದ ಶೋಧನೆಗೆ ಪ್ರಯೋಜನಕರವಲ್ಲ ಎಂದು ಬಲ್ಲವರು. ಎಂತಲೇ ಅವರು ಸಂಘರ್ಷರೂಪಿ ಚಿಂತನೆಯ ಜತೆಗೆ, ಸಂಸ್ಕೃತಿಗಳು ಮಾಡಿಕೊಂಡಿರುವ ಪರಸ್ಪರ ಅನುಸಂಧಾನದ ಬಗ್ಗೆ ಗಮನಹರಿಸಿದರು. ಅನುಸಂಧಾನ ಎಂದರೆ ಮಿಲನ, ರಾಜಿ, ಸಂಘರ್ಷ ಹಾಗೂ ಹೊಸಹುಟ್ಟು ಎಲ್ಲವೂ ಸೇರಿವೆ. ಈ ಚಿಂತನೆಗೆ ವೈರುಧ್ಯಮಯ ರೂಪಕಗಳ ಮೂಲಕ ಅರ್ಥ ಶೋಧಿಸುವ ಅಲ್ಲಮನೂ ಪ್ರೇರಕವಾದಂತಿದೆ; ಅಲ್ಲಮನು ಕತ್ತಲು-ಬೆಳಕು, ಅರಿವು-ಕುರುಹು, ಅಂತರಂಗ-ಬಹಿರಂಗಗಳ ನಡುವಣ ದ್ವಂದ್ವಾತ್ಮಕ ಸಂಬಂಧವನ್ನು ಶೋಧಿಸುವವನು; ಮಂಟೇಸ್ವಾಮಿ ಕಾವ್ಯದ ಜಾನಪದವಾದರೂ ಅದು ಶಿಷ್ಟ ಎನಿಸಿದ ತತ್ವಧಾರೆಗಳ ಜತೆ ಬೆಳೆಸಿರುವ ಸಂಬಂಧವನ್ನು ಅವರು ಕಾಣುತ್ತಾರೆ. ಕನ್ನಡದ ಅಲ್ಲಮನಲ್ಲಿ ಅಖಿಲ ಭಾರತದ ಕೊಡುಕೊಳೆಯನ್ನು ಪರಿಶೀಲಿಸುತ್ತಾರೆ. ಕನ್ನಡದಲ್ಲಿ ಶಂಬಾ ಬಿಟ್ಟರೆ ಸಾಂಸ್ಕೃತಿಕ ಅನುಸಂಧಾನದ ಬಗ್ಗೆ ಇಷ್ಟು ಸೂಕ್ಷ್ಮವಾಗಿ ಚಿಂತಿಸಿ, ಒಳ ನೋಟಗಳನ್ನು ಕೊಟ್ಟವರು ಡಿ.ಆರ್. ಭಾರತದ ಬೇರೆಬೇರೆ ಧರ್ಮಗಳಲ್ಲಿ ಸಮುದಾಯಗಳ ಜೀವನಕ್ರಮಗಳಲ್ಲಿ ಧರ್ಮಗಳಲ್ಲಿ ಚರಿತ್ರೆಯುದ್ದಕ್ಕೂ ನಡೆದುಬಂದಿರುವ ಅನುಸಂಧಾನದ ಮೇಲೆ ಇಲ್ಲಿ ಅವರ ಕೊನೆಯ ಹಂತದ ಬರವಣಿಗೆಯಲ್ಲಿ ಅಪೂರ್ವ ಒಳನೋಟಗಳಿವೆ. ಎಲ್ಲವನ್ನು ವಿಭಜಕವಾಗಿ ನೋಡುವ ಕೋಮುವಾದೀಕರಣಗೊಳ್ಳುತ್ತಿರುವ ಭಾರತದ ರಾಜಕೀಯ ಸನ್ನಿವೇಶದ ಸಂದರ್ಭದಲ್ಲಿ ಈ ಬಗೆಯ ಅನುಸಂಧಾನ ಚಿಂತಿಸುವ ಬರಹಕ್ಕೆ ಸಾಂಸ್ಕೃತಿಕ ಮಹತ್ವವಿದೆ. ಇದೊಂದು ಸಾಂಸ್ಕೃತಿಕ ರಾಜಕಾರಣದ ಕೆಲಸವೂ ಆಗಿದೆ.

ಸಮಸ್ಯೆಯೆಂದರೆ ಇಲ್ಲಿನ ಚಿಂತನೆಯ ಅತಿಬೌದ್ಧಿಕತೆ ಮತ್ತು ಸುಪ್ತವಾಗಿರುವ ಪಾಂಡಿತ್ಯ ಪ್ರದರ್ಶನದ ಗುಣಗಳು ಕೃತಿಯನ್ನು ಭಾರವಾಗಿಸುವುದು. ಬೌದ್ಧಿಕತೆಯು ಸಂಸ್ಕೃತಿಯ ರಹಸ್ಯಗಳನ್ನು ಭೇದಿಸುವ ಅಸ್ತ್ರವಾಗಿರುವ ಹಾಗೆಯೇ, ಏನು ಕೊಟ್ಟರೂ ಅದನ್ನು ವಿಶ್ಲೇಷಿಸಿ ತತ್ವೀಕರಿಸಬಲ್ಲ ಬೌದ್ಧಿಕ ದರ್ಪವಾಗಿಯೂ ಬಳಕೆಯಾಗಿದೆ. ಇದು ಚಿಂತನೆಯನ್ನು ಬೌದ್ಧಿಕ ವಿಲಾಸದತ್ತ ಒಯ್ಯುತ್ತದೆ. ವಿಂಗಡೀಕರಣ ಮಾಡುವುದು, ಅವನ್ನು ಪರಿಕಲ್ಪನೆಯನ್ನಾಗಿ ರೂಪಿಸುವುದು, ಅವಕ್ಕೆ ಒಂದು ನಾಮಕರಣ ಕೊಡುವುದರ ಬಗೆಗೆ ಇಲ್ಲಿರುವ ಅತಿ ಎನಿಸುವಂತಹ ಟೆಂಪ್ಟೇಶನನ್ನು ಗಮನಿಸಬಹುದು. ಇದು ಕೆಲವೊಮ್ಮೆ ಅವರ ಸೃಜನಶೀಲ ಕಥನಕ್ರಮವನ್ನು ಕಳೆದು, ಪರಿಭಾಷಾಜಡತೆಯನ್ನು ಉಂಟುಮಾಡಿದೆ. ಅಂತಹ ಕಡೆ ಅಲ್ಲಮನ ಹೆಸರಲ್ಲಿ ಲೇಖಕ ವಿಜೃಂಭಿಸುತ್ತಾರೆಯೆ ಎಂದೂ ಅನುಮಾನ ಬರುತ್ತದೆ. ಎಂತಲೇ, ಈ ಕೃತಿ 'ಅಮೃತ ಮತ್ತು ಗರುಡ'ದಂತೆ ಬಳಕೆಯಾದಂತಿಲ್ಲ. ಒಂದು ಬಗೆಯಲ್ಲಿ ಜನರಿಂದ ದೂರವಾಗಿ ನಿಂತು ಜ್ಞಾನವನ್ನು ಹಡೆಯಲು ಮಾಡಿದ ಯತ್ನದಂತೆಯೂ ಇದು ತೋರುತ್ತದೆ. ಅಥವಾ ಇದನ್ನು ಅರಿಯಲು ಕನ್ನಡಕ್ಕೆಯೇ ಇನ್ನೂ ಬೌದ್ಧಿಕ ಸಿದ್ಧತೆ ಇಲ್ಲವೊ ? ಇದು ಮುಂದಿನ ದಿನಗಳಲ್ಲಿ ಸಾಬೀತಾಗಬೇಕಿದೆ.

ಅಲ್ಲಮನನ್ನು ಭಾರತದ ತತ್ವಶಾಸ್ತ್ರದ ಚರ್ಚೆಯಲ್ಲಿ ಸ್ಥಾಪಿಸುವುದು, ಆ ಮೂಲಕ ಕನ್ನಡ ಸಾಹಿತ್ಯಕ್ಕೆ ಜಾಗತಿಕ ಹಾಗೂ ಭಾರತೀಯ ಶೈಕ್ಷಣಿಕ ಅಧ್ಯಯನಗಳಲ್ಲಿ ಅವಕಾಶ ಸೃಷ್ಟಿಸುವುದು ಇದರ ಉದ್ದೇಶವಾಗಿದೆ. ಇದನ್ನು ಹಿಂದೆ ಎ. ಕೆ. ರಾಮಾನುಜನ್ ತಮ್ಮ 'ಸ್ಪೀಕಿಂಗ್ ಆಫ್ ಶಿವ' ಕೃತಿಯ ಮೂಲಕ ಆರಂಭಿಸಿದ್ದರು. ರಾಮಾನುಜರಿಗೆ ವಚನಗಳನ್ನು ಅನುವಾದಿಸಿ ಇಂಗ್ಲಿಷ್ ಭಾಷಿಕ ಜಗತ್ತಿನಲ್ಲಿ ಅದರಲ್ಲೂ ಮಿಲಿಟರಿ ಆರ್ಥಿಕವಾಗಿ ಬಲಿಷ್ಠವಾದ ಅಮೇರಿಕೆಯಂತಹ ದೇಶದಲ್ಲಿ ದೇಶೀಯ ಪಠ್ಯಗಳಿಗೆ ಒಂದು ಜಾಗವನ್ನು ಸೃಷ್ಟಿಸುವುದು, ಅದು ಶಿಕಾಗೊ ವಿಶ್ವವಿದ್ಯಾಲಯದ ಸೌತ್ ಏಶಿಯನ್ ಸ್ಟಡೀಸ್ ವಿಭಾಗದ ಶೈಕ್ಷಣಿಕ ಅಗತ್ಯವೂ ಆಗಿತ್ತು; ವೈಯಕ್ತಿಕವಾಗಿ ತಮಗೆ ಅವಕಾಶ ಸೃಷ್ಟಿಸಿಕೊಳ್ಳುವಿಕೆಯೂ ಆಗಿತ್ತು. ಇದೇ ತರಹ, ಅಲ್ಲಮನ ಮೇಲಿನ ಈ ಕೃತಿಯು – ಕನ್ನಡದಲ್ಲಿದ್ದರೂ, ಕನ್ನಡಿಗರ ಜತೆ ಸಂವಾದ ಮಾಡುವುದಕ್ಕಿಂತ, ಜಾಗತಿಕ ಅಥವಾ ಅಖಿಲ ಭಾರತೀಯ ನೆಲೆಗಳಲ್ಲಿ ಮುಖಾಮುಖಿ ಮಾಡುವ ಉದ್ದೇಶವನ್ನೇ ಇರಿಸಿಕೊಂಡಂತಿದೆ. ಅಖಿಲ ಭಾರತೀಯ ವಿದ್ವತ್ತು, ಅಲ್ಲಮನಂತಹ ದೇಸೀ ದಾರ್ಶನಿಕ ಕವಿಯನ್ನು ಒಳಗೊಳ್ಳಲಿಲ್ಲವೆಂಬ ವ್ಯಗ್ರತೆಯು ಈ ಕೃತಿಗೆ ಪ್ರೇರಕವಾಗಿರುವುದು ಇದಕ್ಕೆ ಪೂರಕವಾಗಿದೆ. ವ್ಯಂಗ್ಯವೆಂದರೆ, ಈ ಕೃತಿ, ಕೊನೆಗೆ ಅಖಿಲ ಭಾರತೀಯ ಚೌಕಟ್ಟುಗಳಲ್ಲಿಯೇ ಅಲ್ಲಮನನ್ನು ಪ್ರತಿಷ್ಠಾಪಿಸುತ್ತದೆ. ಅಖಿಲ ಭಾರತೀಯ ಚೌಕಟ್ಟುಗಳ ಮಿತಿ ಎಂದರೆ ಸಾಮಾನ್ಯೀಕರಣ. ತಾನು ಅಧ್ಯಯನ ಮಾಡುವ ಸಂಗತಿಯಂತಹ ಇನ್ನೊಂದನ್ನು ಹೋಲಿಕೆ ಅಥವಾ ವ್ಯತ್ಯಾಸಕ್ಕಾಗಿ ಹುಡುಕಿ, ಲಗತ್ತಿಸಿ, ವಿಶ್ಲೇಷಿಸುವುದು. ಆಗೆಲ್ಲ ಸ್ಥಳೀಯವಾದ ಅಗತ್ಯ ಪ್ರೇರಣೆ ಪ್ರಭಾವಗಳು ಪಕ್ಕಕ್ಕೆ ಸರಿದು ಬಿಡುತ್ತವೆ. ಡಿಆರ್ ಅಖಿಲ ಭಾರತೀಯ ವೇದಿಕೆಗಳಲ್ಲಿ ಕನ್ನಡವನ್ನು ಪ್ರತಿನಿಧಿಸುತ್ತ, ಗರುಡನಂತೆ ಹಾರಾಡುತ್ತ ಇದ್ದ ಹೊತ್ತಲ್ಲಿ ಹುಟ್ಟಿದ ಕೃತಿಯಿದು ಎಂಬುದನ್ನು ನೆನೆದರೆ ಇಲ್ಲಿನ ಪರಿಕಲ್ಪನೆಗಳ ಇರುವಿಕೆ ಗೊತ್ತಾಗುತ್ತದೆ. ಅಲ್ಲಮನನ್ನು ನೋಡಲು ನಿಜವಾಗಿಯೂ ಇಲ್ಲಿನ ಅಖಿಲ ಭಾರತೀಯ ಮತ್ತು ಜಾಗತಿಕ ಚೌಕಟ್ಟು ಪರಿಕಲ್ಪನೆಗಳ ಅಗತ್ಯ ಇದೆಯೇ ? ಎಂಬ ಪ್ರಶ್ನೆ ಎದುರಾಗುತ್ತದೆ, ಹುಟ್ಟುತ್ತದೆ. ಭಾರತದ ಸಂಸ್ಕೃತ ದಾರ್ಶನಿಕರ ಜತೆ ಇಟ್ಟು ಕನ್ನಡದ ಕವಿಯನ್ನು ಚರ್ಚಿಸುವ ಇಲ್ಲಿನ ಹಠದ ಪರಿಣಾಮವು, ಕನ್ನಡದ ಮೇಲೆ ಅಭಿನವ ಗುಪ್ತನನ್ನು ಎಳೆದುತಂದು ಹೇರಿದಂತಾಗಿದೆ. ಶೆಲ್ಡನ್ ಪೊಲಾಕನ ಚಿಂತನೆಯನ್ನು ಹೇರಿ ದಂತಾಗಿದೆ. ಇಲ್ಲಿ ಬಳಕೆಯಾಗಿರುವ ಸೆಂಟ್ರಲ್ ಏಶಿಯಾ, ಸೌತ್ ಏಶಿಯಾ, ಮಧ್ಯಕಾಲೀನ ಮುಂತಾದ ಪರಿಕಲ್ಪನೆಗಳು ಅಮೆರಿಕಾ ಮತ್ತು ಯೂರೋಪಿಯನ್ ದೇಶಗಳ ರಾಜಕಾರಣವು ಏಶಿಯಾ ಮತ್ತು ಆಫ್ರಿಕಾವನ್ನು ಗುರುತಿಸಲು ಬಳಸಿಕೊಂಡ ಆಡಳಿತಾತ್ಮಕ ಪರಿಭಾಷೆಗಳು; ಈ ಖಂಡಗಳ ಸಂಸ್ಕೃತಿಗಳು ತಮ್ಮನ್ನು ತಾವು ಗುರುತಿಸಿಕೊಳ್ಳಲು ಹುಟ್ಟಿಸಿ ಕೊಂಡವಲ್ಲ. ಇಂತಹ ಪರಿಭಾಷೆಗಳನ್ನು ವಿಮರ್ಶೆಯಿಲ್ಲದೆ ಡಿಆರ್ ಯಾಕೆ ಬಳಸುತ್ತಾರೆ ? ಇವು ಕನ್ನಡದ ಜಾಗತಿಕ ವಿಸ್ತರಣೆ ಮಾಡುವ ವಿಧಾನವಾದರೆ, ಅದೀಗ ನಿಜಕ್ಕೂ




ರೂ. 20




ರೂ. 20




ರೂ. 15




ರೂ. 12



ರೂ. 20



ರೂ. 25




ರೂ. 20




ರೂ. 20




ರೂ. 35



# ಜನಪದ ಪ್ರಕಾಶನ

ನಂ. 57, ಮೊದಲನೆಯ ಮುಖ್ಯರಸ್ತೆ
ಯಶವಂತಪುರ, ಬೆಂಗಳೂರು – 560 022




ರೂ. 20




ರೂ. 15




ರೂ. 15



ರೂ. 20



ರೂ. 25




ರೂ. 15

ಪ್ರಶ್ನಾರ್ಹ. ಆದರೆ ಈ ಅನುಮಾನಗಳು ಅಲ್ಲಮನ ಜತೆ ಮಂಟೇಸ್ವಾಮಿಕಾವ್ಯ ಅಥವಾ ಶೂನ್ಯ ಸಂಪಾದನೆಯ ಮುಖಾಮುಖಿಯಲ್ಲಿ ಅನಿಸುವುದಿಲ್ಲ; ಭೀಮಾಬೋಯಿ ಅಥವಾ ಕಬೀರನ ಜತೆ ಹೋಲಿಸುವಾಗ ಅನಿಸುವುದಿಲ್ಲ.

ಜಾಗತಿಕ ಮತ್ತು ಭಾರತೀಯ ಮಟ್ಟದ ಚರ್ಚಾಕಣದಲ್ಲಿ ಅಲ್ಲಮನನ್ನು ಇಟ್ಟುನೋಡುವ ಇಲ್ಲಿನ ಧಾವಂತಕ್ಕೂ, ಅಲ್ಲಮನನ್ನು ಮುಖಾಮುಖಿ ಮಾಡಿರುವ ಯತ್ನಗಳನ್ನು ಪರಿಗಣಿಸದೆ ಹೋಗುವುದಕ್ಕೂ ಸಂಬಂಧ ವಿದ್ದಂತಿದೆ. ಬೇಂದ್ರೆ, ಪುಣೇಕರ, ಕಪಟರಾಳ ಕೃಷ್ಣರಾಯ, ಭೂಸನೂರಮಠ, ಕಿರಂ ನಾಗರಾಜ, ಎಲ್. ಬಸವರಾಜು – ಮುಂತಾದವರು ಅಲ್ಲಮನ ವಚನಗಳ ಬಗ್ಗೆ ಮಾಡಿರುವ ಚಿಂತನೆಯನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ; ಕಳೆದ ಎಂಟು ಶತಮಾನಗಳ ಕಾಲ ಕರ್ನಾಟಕದ ಆರೂಢರು ಅವಧೂತರು ಅಲ್ಲಮನನ್ನು ಗುರುವಾಗಿ ಭಾವಿಸಿ ಮಾಡಿರುವ ಅನುಸಂಧಾನಗಳನ್ನು ನಿರ್ಲಕ್ಷಿಸಲಾಗಿದೆ. ಆರೂಢರಿಗೆ ಅಲ್ಲಮ ವ್ಯಕ್ತಿಯ ಅಥವಾ ಕವಿಯ ಹೆಸರಲ್ಲ; ಒಂದು ತಾತ್ವಿಕ ಸಂಕೇತ. ಕರ್ನಾಟಕದ ಸೂಫಿಗಳು ಕೂಡ ಅಲ್ಲಮನನ್ನು ತಮ್ಮ ಪರಂಪರೆಯ ಒಳಗೆ ಸ್ವೀಕಾರ ಮಾಡಿದ್ದಾರೆ. ಮಹಾನುಭಾವ ಮತ್ತು ಚಿಸ್ತಿಸೂಫಿ ಪಂಥಗಳು ಕೂಡಿರುವ ಸಂತ ಪರಂಪರೆಯಲ್ಲಿ ಅಲ್ಲಮ, ನಾಸಿರುದ್ದೀನ್ ಚಿಸ್ತಿಯ ಶಿಷ್ಯರಲ್ಲಿ ಒಬ್ಬನಂತೆ ಚಿತ್ರಣಗೊಂಡಿದ್ದಾನೆ. ಬಹಮನಿಯ ಒಬ್ಬ ದೊರೆ ತನ್ನನ್ನು ಸೂಫಿದೀಕ್ಷೆ ಪಡೆದ ಬಳಿಕ, ಆಲಂಪ್ರಭು ಎಂದು ಕರೆದುಕೊಳ್ಳುತ್ತಾನೆ. ಈಗಲೂ ಬೀದರದಲ್ಲಿ ಅವನ ಸಮಾಧಿಯು 'ಹಿಂದೂ' 'ಮುಸ್ಲಿಮ'ರಿಬ್ಬರಿಗೂ ಪವಿತ್ರವಾಗಿದೆ. ಇಡೀ ಕೃಷ್ಣಾ ನದಿಯ ಆಸುಪಾಸಿನಲ್ಲಿ ಅಲ್ಲಮ ಪ್ರಭುವಿನ ಪರಂಪರೆಯೊಂದು ಇದ್ದು, ಹಲವಾರು ಊರುಗಳಲ್ಲಿ ಅಲ್ಲಮನ ಸಮಾಧಿಗಳಿವೆ. ಅಲ್ಲಮನನ್ನು ಅವನ ಸಂಗಾತಿಗಳಾಗಿದ್ದ ಮುಕ್ತಾಯಕ್ಕ ಮೊದಲಾದವರು ಮುಖಾಮುಖಿ ಮಾಡಿ ಸೋಲಿಸುವ ಪ್ರಸಂಗವಂತೂ ಪ್ರಸಿದ್ಧವಾದುದು. ಅಲ್ಲಮನನ್ನು ಆಧುನಿಕ ಲೇಖಕರು – ಚಂದ್ರಶೇಖರ ಕಂಬಾರ, ಮಧುರಚೆನ್ನ, ಬೇಂದ್ರೆ – ಬಗೆ ಬಗೆಯಾಗಿ ಅನುಸಂಧಾನ ಮಾಡಿದ್ದಾರೆ. ದೇವನೂರರ 'ಕುಸುಮಬಾಲೆ' ಕಾದಂಬರಿಯು ಅಲ್ಲಮನ ಒಂದು ವಚನದ ವಿಸ್ತರಣೆಯೋಪಾದಿಯಲ್ಲಿ ಹುಟ್ಟಿದೆ. ಅದರ ಪ್ರತಿಸಾಲು ಅಥವಾ ಅಧ್ಯಾಯದ ಬಳಿಕ, ಅಲ್ಲಮನ ಎತ್ತಣಿಂದೆತ್ತ ಸಂಬಂಧವಯ್ಯ ಎಂಬುದನ್ನು ಪಲ್ಲವಿಯಾಗಿ ಜೋಡಿಸಿಕೊಂಡು ಓದಬಹುದು. ಅಲ್ಲಮನು ಭಾರತದ ಚೌರಾಸಿ ಸಿದ್ಧ ಪರಂಪರೆಯೊಳಗೆ ಸೇರಿಹೋದವನು. ನಾಥಪರಂಪರೆಯಲ್ಲಿ ಅವನ ಉಲ್ಲೇಖವಿದೆ. ನೂರಾರು ವಚನಕಾರರಲ್ಲಿ ಅಲ್ಲಮನೇ ಯಾಕೆ ಸೂಫಿ, ಸಿದ್ಧ, ಆರೂಢ ಪರಂಪರೆಯಲ್ಲಿ ಸ್ವೀಕಾರಗೊಳ್ಳುತ್ತಾನೆ? ಈ ಎಲ್ಲ ಸಾಂಸ್ಕೃತಿಕವಾಗಿ ಮುಖ್ಯವಾದ ಸಂಗತಿಗಳನ್ನು ಎತ್ತಿ ಕೊಳ್ಳಲು ಈ ಕೃತಿಗೆ ಸಾಧ್ಯವಾಗಿಲ್ಲ. ಇದಕ್ಕೆ ಕಾರಣ ಅದು ಅಖಿಲ ಭಾರತೀಯ ತತ್ವಶಾಸ್ತ್ರದ ದಿಗ್ಗಜರೊಂದಿಗೆ ಹೊಡೆದಾಟ ಮಾಡಲು ಅಲ್ಲಮನನ್ನು ಒಂದು ಗುರಾಣಿಯಂತೆ ಇಟ್ಟುಕೊಂಡು ಹೊರಟಿರುವುದು.

ಹೀಗಾಗಿ, 'ಶೈವಪ್ರತಿಭೆ'ಯನ್ನು ಓದುವಾಗ ಅದರ ವಿದ್ವತ್ ಪ್ರಖರತೆಗೆ ಸಂತೋಷವೂ ಸೋಜಿಗವೂ ಆದರೂ, ನಮ್ಮ ಸಮಕಾಲೀನ ಬದುಕಿನ ಯಾವ ತಲ್ಲಣಗಳಿಗೆ ಇದರಲ್ಲಿ ಸ್ಪಂದನೆಯಿದೆ ? ಎಂಬ ಪ್ರಶ್ನೆ ಎದುರಾಗುತ್ತದೆ. ಇಲ್ಲಿ ಎತ್ತಿರುವ ತಾತ್ವಿಕ ಪ್ರಶ್ನೆಗಳು ನಮ್ಮ ಸಮಾಜದ ರಾಜಕಾರಣದ ಜತೆ ಸಂಬಂಧವುಳ್ಳವಾಗಿವೆ ನಿಜ. ಆದರೆ, ಅವು ಜ್ಞಾನದ ಹೊಡೆದಾಟದಲ್ಲಿ ಅಮುಖ್ಯವಾಗಿವೆ ಅಥವಾ ತೀವ್ರತೆ ಕಳೆದುಕೊಂಡಿವೆ. 'ಅಮೃತ ಮತ್ತು ಗರುಡ'ಕ್ಕೆ ಹೋಲಿಸಿದರೆ ಈ ಕೃತಿಯು ವಿದ್ವತ್ ಸೂಕ್ಷ್ಮತೆಯಲ್ಲಿ ಎತ್ತರಕ್ಕೇರಿದೆ. ಆದರೆ ಸುತ್ತಲ ಪರಿಸರದ ಜತೆಗೆ ಸಂವಾದದ ಮುಖ ಮತ್ತು ರಾಜಕೀಯ ಪ್ರಜ್ಞೆಗೆ ಹೋಲಿಸಿದರೆ ಅಮೃತ ಮತ್ತು ಗರುಡದ ಒರಟುತನ, ಅದರೊಳಗಿನ ಬದ್ಧತೆ ಮತ್ತು ಪ್ರಾಮಾಣಿಕತೆಯೆ ಆಪ್ತ ವಾಗುತ್ತದೆ. ತಾವು ಹಿಂದೆ ಒರಟು ಸಮಾಜವಾದಿ ಯಾಗಿದ್ದ ಬಗ್ಗೆ ಒಂದು ಬಗೆಯ ಪರಿತಾಪದ ದನಿಯಲ್ಲಿ ಡಿಆರ್ ಹಲವು ಕಡೆ ಹೇಳಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಶೈವ ಪ್ರತಿಭೆಯು ಅವರ ಸಮಾಜವಾದಿ ಪ್ರಜ್ಞೆ ಒರಟುತನದಿಂದ ಸೂಕ್ಷ್ಮಗೊಂಡದ್ದರ ಫಲವಾಗಿರಬೇಕಿತ್ತು. ಆದರೆ ಅದು ಸಮಾಜವಾದಿ ನಿಲುವನ್ನು ಬಿಟ್ಟುಕೊಡುತ್ತಿರುವುದರ ಫಲವಾಗಿ ತೋರುತ್ತಿದೆ. ಇದು ವಸಾಹತೋತ್ತರ ಚಿಂತನೆಯ ಹಂತವನ್ನು ದಾಟಿ, ಈಚೆಗೆ ಕನ್ನಡದ ಚಿಂತನೆಯ ಮೇಲೆ ಬೀಸುತ್ತಿರುವ ಆಧುನಿಕೋತ್ತರವಾದ ಚಿಂತನೆಗಳ ಪರಿಸರದಲ್ಲಿ ಹುಟ್ಟಿದ ಕೃತಿ. ಎಂತಲೆ ಇಲ್ಲಿ ಸಮುದಾಯ ರಾಜಕಾರಣಕ್ಕಿಂತಲೂ ಏಪೊಲಿಟಿಕಲ್ಲಾದ ಸಾಂಸ್ಕೃತಿಕ ವಿಶ್ಲೇಷಣೆಗಳು ಮತ್ತು ಶುದ್ಧಜ್ಞಾನಮುಖಿ ಶೋಧಗಳು ಮೇಲುಗೈ ಸಾಧಿಸಿವೆ. ಇದು ಅಧ್ಯಯನಕ್ಕೆ ಅಲ್ಲಮನನ್ನು ಆರಿಸಿಕೊಂಡ ಕಾರಣಕ್ಕಾಗಿ ಹೀಗಾಗಿದೆಯೋ, ಡಿಆರ್‌ರಲ್ಲಿ ಉಂಟಾದ ಬದಲಾವಣೆಯ ಕಾರಣಕ್ಕಾಗಿ ಹೀಗಾಗಿದೆಯೊ ಗೊತ್ತಾಗುತ್ತಿಲ್ಲ. ಕನ್ನಡದಲ್ಲಿ ಅಲ್ಲಮನ ಅನುಸಂಧಾನ ಮಾಡುತ್ತಿರುವ ಹೆಚ್ಚಿನವರು ಒಂದು ಬಗೆಯ ಅತಾರ್ಕಿಕ ಅಮೂರ್ತ ಅ-ಸಾಮಾಜಿಕ ಅ-ರಾಜಕೀಯ ಚಿಂತನೆಯತ್ತ ಚಲಿಸುತ್ತಿರುವುದು ಮಾತ್ರ ಕಾಣುತ್ತದೆ. ಮತ್ತದೆ ಪ್ರಶ್ನೆ. ನಾಡು ಬಿಕ್ಕಟ್ಟುಗಳಲ್ಲಿ ಹಾಯುವಾಗ, ತಲ್ಲಣಿಯಾದ ಕ್ರಿಯಾಶೀಲ ಬಸವಣ್ಣನ ಬದಲಾಗಿ ಅ-ರಾಜಕೀಯನಾದ ಯಾವ ಕಟ್ಟುವಿಕೆಯನ್ನೂ ಅನುಮಾನಿಸುವ ಅಲ್ಲಮನು ಕನ್ನಡ ಚಿಂತಕರಿಗೆ ಯಾಕೆ ಮುಖ್ಯವಾಗುತ್ತಿದ್ದಾನೆ ?

ಈ ಪ್ರಶ್ನೆ ಎತ್ತುವಾಗ, ನಾಗರಾಜ ಅವರು ಕನ್ನಡ ಸಾಹಿತ್ಯ ವಿಮರ್ಶೆಗೆ ಒಂದು ಸ್ವಾಯತ್ತತೆಯನ್ನೂ ಘನತೆಯನ್ನೂ ತಂದಿತ್ತವರು; ಕನ್ನಡ ವಿಮರ್ಶೆಯನ್ನು ಸಂಸ್ಕೃತಿಯ ಚಿಂತನೆಯನ್ನಾಗಿ ರೂಪಾಂತರಿಸಿದವರಲ್ಲಿ, ಕನ್ನಡ ಚಿಂತನ ಭಾಷೆಗೆ ಸಂಕೀರ್ಣವಾದದ್ದನ್ನು ಧಾರಣ ಮಾಡುವ ಶಕ್ತಿ ಸಂಚಯ ಮಾಡಿದವರಲ್ಲಿ ಮುಖ್ಯರು ಎಂಬುದನ್ನು ಮರೆಯುವಂತಿಲ್ಲ. 'ಶೈವಪ್ರತಿಭೆ'ಯಲ್ಲಿರುವ "ಹೊಸ ಕಾವ್ಯ ಮೀಮಾಂಸೆಯ ಕಡೆಗೆ" ಎಂಬುದು ಕನ್ನಡದ ಶ್ರೇಷ್ಠ ಚಿಂತನ ಬರೆಹವಾಗಿದೆ. ಡಿಆರ್ ಸಾಹಿತ್ಯಕ ಪರಿಸರವನ್ನು ತಮ್ಮ ವಾಗ್ವಾದಗಳಿಂದ ಕಲಕುತ್ತಿದ್ದವರು. ಇದಕ್ಕೆ ಕಾರಣ, ಅವರ ನಿಶಿತಮತಿ ಮಾತ್ರವಲ್ಲ, ಹೊಡೆದಾಟದಲ್ಲಿ ಅವರಿಗಿದ್ದ ಆಸಕ್ತಿಯೂ ಆಗಿತ್ತು. ಆದರೆ ವಿದ್ವತ್ತು, ವಿಶ್ಲೇಷಣೆ ಮಾಡುವ ಹರಿತತೆ, ಎಲ್ಲವನ್ನೂ ವಿಶ್ಲೇಷಿಸಿಬಿಡಬಲ್ಲ ಜಾಣ್ಮೆ, ಕೀರ್ತಿಗಳ ಜತೆಜತೆಗೆ, ಮೊದಲ ಹಂತದಲ್ಲಿದ್ದ ತಳಮಳ, ಕನಸುಗಾರಿಕೆ, ಸಾಮುದಾಯಿಕ ಪ್ರಜ್ಞೆ ಕಡಿಮೆಯಾಗುತ್ತ ಹೋದವು. ಇದಕ್ಕೆ ಸಾಕ್ಷಿ ಅವರು ವ್ಯಕ್ತಿಪ್ರಜ್ಞೆ ಮುಖ್ಯವಾದ ಅಲ್ಲಮನನ್ನು ಆರಿಸಿಕೊಂಡಿರುವುದು. ಅವನನ್ನು ೧೨ನೇ ಶತಮಾನದ ಶರಣ ಚಳುವಳಿಯ ಸಂಬಂಧ ಗಳಿಂದ ಕಿತ್ತು, ಅವನ ಸಂಗಾತಿಗಳಿಂದ ಪ್ರತ್ಯೇಕಗೊಳಿಸಿ, ಒಂದು ಪ್ರತಿಭೆಯಾಗಿ ಚರ್ಚಿಸುವುದು ಏನನ್ನು ಸೂಚಿಸುತ್ತದೆ ? 'ಪ್ರತಿಭೆ' ಎಂಬ ಶಬ್ದವು ಕೂಡಲೆ ಎಲಿಯಟನ ಇಂಡಿವಿಜ್ಯುಯಲ್ ಟೇಲೆಂಟ್ ಎಂಬ ನುಡಿಗಟ್ಟು ನೆನಪಾಗುತ್ತದೆ. ಇದು ಚರಿತ್ರೆಯನ್ನು ಸಮುದಾಯಗಳಿಂದ ಬೇರೆಮಾಡಿ, ವ್ಯಕ್ತಿಗಳ ಮೂಲಕ ನೋಡುವ ದೃಷ್ಟಿಕೋನ ಮತ್ತು ಇದು ನವ್ಯದ ವ್ಯಕ್ತಿವಿಶಿಷ್ಟ ವಿಧಾನದ ಪಳೆಯುಳಿಕೆ; ಇಲ್ಲಿ ಅಲ್ಲಮನ ಜತೆ ಬಸವಣ್ಣನಿಲ್ಲ. ಅವನನ್ನು ವಾಗ್ವಾದದಲ್ಲಿ ಸೋಲಿಸುವ ಮುಕ್ತಾಯಕ್ಕನಿಲ್ಲ. ಇಡೀ ಶರಣಸಮುದಾಯವೇ ಗೈರುಹಾಜರಾಗಿದೆ. ವ್ಯಕ್ತಿಯನ್ನು ಸಮುದಾಯದಿಂದ ಕಿತ್ತು ನೋಡುವ ಈ ಗುಣವು ಆಧುನಿಕೋತ್ತರ ಚಿಂತನೆಗಳ ಫಲವಾಗಿದೆ. ದಾರಾಶಿಕೊ ಬಗ್ಗೆ ಅವರು ವಿಶ್ಲೇಷಿಸುತ್ತ, "ಅವನು ಸಾಮುದಾಯಿಕ ಪ್ರಜ್ಞೆಯನ್ನು ಬಿಟ್ಟು ಜ್ಞಾನವನ್ನು ಶುದ್ಧಾರ್ಥದಲ್ಲಿ ಹುಡುಕಲು ಹೊರಟ. ಅಲ್ಲಿ ಸಮುದಾಯದ ಮೂರ್ತ ಬದುಕಿನ ವಿವರಗಳಿರಲಿಲ್ಲ. ಒಂದು ಬಗೆಯ ಅಮೂರ್ತತೆ ಕಾಣುತ್ತದೆ" ಎಂದಿದ್ದರು; "ದಾರಾನಿಗೆ ಬೌದ್ಧಿಕವಾಗಿ ವಿಶ್ಲೇಷಿಸುವುದೇ ಕೇಂದ್ರ, ಎಲ್ಲವನ್ನು ಮಾತಿನಲ್ಲೇ ಕಟ್ಟುವ ಹಠ. ಮಾತೆಂಬುದು ಅವನನ್ನೇ ಇರಿದ ಸ್ಪಟಿಕದ ಶಲಾಕೆಯಾಯಿತೆ ?" ಎಂದು ವಿಮರ್ಶಿಸಿದ್ದರು. ಈ ದೂರುಗಳಿಗೆ ಸ್ವತಃ ಅವರೇ ನಿದರ್ಶನವಾದರೇ ? ಇದು ಒಬ್ಬ ದೇಶೀಚಿಂತಕನ ವೈಯಕ್ತಿಕ ರೂಪಾಂತರವೊ ಅಥವಾ ಕನ್ನಡದ ಬೌದ್ಧಿಕ ಚಟುವಟಿಕೆ ಗಳನ್ನು ಅದರ ಕನಸುಗಾರ ಚಿಂತಕರನ್ನು ಪ್ರಭಾವಿಸು ತ್ತಿರುವ ಅಗೋಚರವಾದ ಜಾಗತಿಕ ಪರಿಣಾಮಗಳ ಫಲವೊ ಎಂಬುದನ್ನು ಯೋಚಿಸಬೇಕಿದೆ.

ಡಾ|| ರಹಮತ್ ತರೀಕೆರೆ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಸ್ವಾತಂತ್ರ್ಯ

'ಕಂಡಲ್ಲಿ ಗುಂಡು' ಜಾರಿಯಲ್ಲಿತ್ತು
ಒಂದು ತಿಂಗಳ ಕರ್ಫ್ಯೂ.
ಇನ್ನು ಈ ಊರಲ್ಲಿ ಭಿಕ್ಷೆ
ಹುಟ್ಟುವುದಿಲ್ಲ ಎಂದು
ಭಿಕ್ಷುಕರು ಗಂಟುಮೂಟೆ
ಕಟ್ಟತೊಡಗಿದರು, ದೋಚಲು
ಅವರ ಬಳಿ ಏನೂ ಇಲ್ಲವಾದ್ದರಿಂದ
ಅವರಿಗೆ ಆ ಭಯವಿರಲಿಲ್ಲ.
ಒಬ್ಬ ಹಿರಿಯ ಭಿಕ್ಷುಕ ಎಚ್ಚರಿಸಿದ
"ಎಂಗಾರ ಆಗ್ಲಿ, ವಸಿ ಎಚ್ರ ಇರ್ಲಿ,
ಪೋಲಿಸ್‌ನೋರು ಲೆಕ್ಕ ತೋರ್ಸೋಕೆ
ಸುಮ್‌ಸುಮ್ನೆ ಒಳೀಕ್ ಹಾಕುದ್ರೆ
ಏನ್ ಮಾಡಾನ ?"

ರಘುನಾಥ್ ಚ. ಎಸ್. ಹಾಸನ

# ಕಂಬಾರರ
# ಸಿಂಗಾರೆವ್ವ ಮತ್ತು ಅರಮನೆ
## ಕಾದಂಬರಿಯಲ್ಲಿ ಹೊರರಚನೆ ಮತ್ತು ಒಳರಚನೆಯ ವಿನ್ಯಾಸಗಳು



ಡಾ॥ ಸಬಿಹಾ ಭೂಮೀಗೌಡ

**ಚಂ**ದ್ರಶೇಖರ ಕಂಬಾರರ 'ಸಿಂಗಾರೆವ್ವ ಮತ್ತು ಅರಮನೆ' ಕಾದಂಬರಿ ಹಲವು ಕಾರಣಗಳಿಗಾಗಿ ಗಮನ ಸೆಳೆಯುತ್ತದೆ. ೧೯೮೨ರಲ್ಲಿ ಪ್ರಕಟವಾದ ಈ ಕಾದಂಬರಿಯು, ಒಂದೇ ತಿಂಗಳಲ್ಲಿ ಎರಡನೆಯ ಮುದ್ರಣವನ್ನೂ, ಎರಡನೆಯ ತಿಂಗಳಲ್ಲಿ ಮೂರನೆಯ ಮುದ್ರಣವನ್ನೂ ಕಂಡ ಹೆಚ್ಚುಗಾರಿಕೆಯನ್ನು ಹೊಂದಿದೆ. ಇದು ಆ ಕಾದಂಬರಿಯ ವೈಶಿಷ್ಟ್ಯಗಳಲ್ಲಿ ಒಂದು. ಎರಡು ದಶಕಗಳ ಹಿಂದೆ ಈ ಕಾದಂಬರಿಯನ್ನು ಓದಿದ್ದರೂ, ಇಂದು ಮತ್ತೆ ಓದಿದಾಗ ಅದು ಹೊಳೆಯಿಸಿದ ಅರ್ಥವಲಯ ತುಂಬ ಕುತೂಹಲಕರವೂ ವಿಶಿಷ್ಟವೂ ಎನಿಸಿದೆ. ಎಂದರೆ ಕಾದಂಬರಿಯಲ್ಲಿ ಎರಡು ರಚನೆಗಳು – ಹೊರರಚನೆ ಮತ್ತು ಒಳರಚನೆ – ಕಂಡುಬರುತ್ತವೆ. ಇವು ಪರಸ್ಪರ ಭಿನ್ನವಾಗಿವೆ. ಸಿಂಗಾರೆವ್ವನನ್ನು ಕೇಂದ್ರವಾಗಿಟ್ಟುಕೊಂಡು ನೋಡಿದಾಗ, ಕಾದಂಬರಿಯು ಊಳಿಗಮಾನ್ಯ ಮತ್ತು ಲಿಂಗಾಧಾರಿತ ಯಾಜಮಾನ್ಯಗಳ ನಿಷ್ಕರುಣೆ, ದೌರ್ಜನ್ಯ, ನಿರ್ವೀರ್ಯತೆ ಮತ್ತು ಅಮಾನವೀಯ ಜೀವನ ಕ್ರಮಗಳನ್ನು ದಾಖಲಿಸುತ್ತದೆ. ಈ ಅರ್ಥದಲ್ಲಿ ಕೃತಿಯು ಪುರುಷ ಯಾಜಮಾನ್ಯವನ್ನು ಅದರ ಎಲ್ಲ ಸಂಕೀರ್ಣ ನೆಲೆಗಳಲ್ಲಿ ಅನಾವರಣ ಮಾಡುತ್ತ, ಪುರುಷ ಯಾಜಮಾನ್ಯದ ವಿರುದ್ಧ ತನ್ನ ಧ್ವನಿಯನ್ನು ಎತ್ತಿಹಿಡಿದಿದೆ. ತಂದೆ, ಗಂಡ, ಆಳು ಮಾರೆಪ್ಪ, ಜಂಗಮ ಹುಚ್ಚಯ್ಯ ಮುಂತಾದ ವಿವಿಧ ವ್ಯಕ್ತಿಗಳಿಂದ ಸಿಂಗಾರೆವ್ವನ ಬದುಕು ಛಿದ್ರವಾಗುವ, ಅರ್ಥಹೀನವಾಗುವ, ಲೈಂಗಿಕ ದಮನ ಮತ್ತು ಹಲ್ಲೆಗೆ ಒಳಗಾಗುವ ನೆಲೆಗಳನ್ನು ಮುಂದಿಡುವ ಮೂಲಕ ಕೃತಿಯು ಸ್ತ್ರೀಪರ ಬದುಕಿಗೆ ಒತ್ತಾಸೆಯನ್ನು ನೀಡಿದಂತೆ ಕಂಡುಬರುತ್ತದೆ. ಇಲ್ಲಿಯ ಸ್ತ್ರೀ ಜಗತ್ತು ಫಲವಂತಿಕೆಯ, ಜೀವಪರವಾದ ಕ್ರಿಯಾಶೀಲತೆಯ ಜೀವನಕ್ರಮವನ್ನು ಹೊಂದಿದೆ. ಆದರೆ ತನ್ನೊಳಗೆ ಅಗಾಧ ಶಕ್ತಿಯನ್ನು ಹೊಂದಿದ್ದರೂ, ಸ್ತ್ರೀ ಸಮುದಾಯವು ಅದನ್ನು ಸ್ವತಃ ಕಂಡುಕೊಳ್ಳಲಾರದೆ, ಆರ್ಥಿಕ, ಧಾರ್ಮಿಕ ಮತ್ತು ಅಧಿಕಾರದ ಯಾಜಮಾನ್ಯಕ್ಕೆ ತಲೆಬಾಗಿ, ತನ್ನನ್ನು ಒಪ್ಪಿಸಿಕೊಳ್ಳುವುದು ಕಂಡುಬರುತ್ತದೆ. ಇದೇ ವೇಳೆಗೆ ಇಲ್ಲಿನ ಪುರುಷ ಪಾತ್ರಗಳು ನಿರ್ವೀರ್ಯತೆ, ಹೃದಯಹೀನತೆ ಹಾಗೂ ಸಂಸ್ಕಾರ ಹೀನತೆಗಳನ್ನು ಅಭಿವ್ಯಕ್ತಿಸುತ್ತವೆ. ಇದು ಕಾದಂಬರಿಯ ಹೊರ ರಚನೆಯಾಗಿದೆ. ಹೀಗೆ ಕಾದಂಬರಿಯ ಹೊರ ರಚನೆಯು ಸ್ತ್ರೀಪರ ಕಾಳಜಿಯನ್ನು ನಿಸ್ಸಂಶಯವಾಗಿ ಪ್ರಕಟಿಸುತ್ತದೆ. ಆದರೆ ಕಾದಂಬರಿಯಲ್ಲಿ ಇನ್ನೊಂದು ಒಳರಚನೆಯಿದೆ. ಇದು ಹೊರರಚನೆಯ ವಿನ್ಯಾಸಕ್ಕಿಂತ ಭಿನ್ನವಾಗಿದೆ ಮತ್ತು ವಿರುದ್ಧವೂ ಆಗಿದೆ. ಎಂದರೆ ಕಾದಂಬರಿಯ ಒಳರಚನೆಯು ಪಿತೃಪ್ರಧಾನ ಸಂಸ್ಕೃತಿಯ ಮೌಲ್ಯಗಳನ್ನೇ ಸ್ಥಿರೀಕರಿಸುವ ಪ್ರಯತ್ನದಲ್ಲಿ ಆಸಕ್ತವಾಗಿದೆ. ಇದರ ಅನಾವರಣವೇ ಪ್ರಸ್ತುತ ಪ್ರಬಂಧದ ಪ್ರಧಾನ ಕಾಳಜಿಯಾಗಿದೆ.

ಈ ಕಾದಂಬರಿಯಲ್ಲಿ ಪ್ರಧಾನವಾಗಿ ಕಂಡುಬರುವ ಸ್ತ್ರೀಪಾತ್ರಗಳೆಂದರೆ,

೧. ಸಿಂಗಾರೆವ್ವ
೨. ಕುಮುದವ್ವ
೩. ಶ್ರೀನಿಂಗಿ.

ಕುಮುದವ್ವ ವ್ಯಕ್ತಿಯಲ್ಲ; ದೇವಿ. ಇಡೀ ಊರವರ ಭಕ್ತಿ, ವಿಶ್ವಾಸ, ಶ್ರದ್ಧೆಯನ್ನು ಸ್ವೀಕರಿಸುವಾಕೆ. ಆಕೆಯ ವಾಸಸ್ಥಾನ ಊರಹೊರಗಿನ ಹುಣಿಸೇಮೆಳೆ. ''ಮಡಿಕೆಯಾಕಾರದ ಎರಡಾಳೆತ್ತರದ ಗುಡಿ. (ಅದಕ್ಕೆ) ಚಿಕ್ಕ ಬಾಗಿಲಿದೆ. ತೆರೆದರೆ ಎದುರಿಗೆ ಅಡ್ಡಬಿಟ್ಟ ಬಿಳಿಪರದೆ ಬಿಟ್ಟು ಬೇರೇನೂ ಕಾಣಿಸುವುದಿಲ್ಲ.'' ಪರದೆ ತೆರೆದು ನೋಡಿದರೆ ''ತೊಡೆ ಗೀಸಿ ಕುಳಿತ ಬತ್ತಲೆ ಹೆಣ್ಣಿನ ಶಿಲ್ಪವಿದ್ದು ಅದರ ಎರಡೂ ಕೈಗಳಲ್ಲಿ ಒಂದೊಂದು ಕಮಲಗಳಿವೆ. ಆ ಮೂರ್ತಿಗೆ ತಲೆ ಇಲ್ಲ. ಬದಲು ಅದರ ಸ್ಥಳದಲ್ಲೊಂದು ಕಮಲವಿದೆ'' (ಪುಟ ೬-೭).

ಕೈಗಳಲ್ಲಿ ಮತ್ತು ತಲೆಯ ಭಾಗದಲ್ಲಿ ಕಮಲವನ್ನು ಧರಿಸಿದವಳು ಎಂಬುದಕ್ಕೆ ಕುಮುದವ್ವನಿಗೆ ಆ ಹೆಸರು ಅನ್ವರ್ಥಕವಾಗಿದೆ. ವಿಶೇಷವೆಂದರೆ, ಈ ಸ್ತ್ರೀ ದೇವತೆಯ ಆರಾಧನೆಯನ್ನು ಮಾಡುವವರು ಮಾತ್ರ ಪುರುಷರು! ಹೆಂಗಸರು ಯಾರೂ ಹುಣಿಸೇಮೆಳೆಗೆ ಹೋಗುವಂತಿಲ್ಲ; ಗುಡಿಯನ್ನೂ ಪ್ರವೇಶಿಸುವಂತಿಲ್ಲ. ವರ್ಷಕ್ಕೊಮ್ಮೆ ಜಾತ್ರೆ ನಡೆಯುವಾಗಲೂ ಗಂಡಸರು ಮತ್ತು ಗಂಡುಮಕ್ಕಳು ಮಾತ್ರ ಗುಡಿಯನ್ನು ಸಜ್ಜುಗೊಳಿಸುತ್ತಾರೆ; ಹೆಂಗಸರು ಮನೆಯೊಳಗೆ ಬಂಧಿಗಳಾಗಿರುತ್ತಾರೆ. ಹೆಂಗಸರು ಕುಮುದವ್ವನಿಗೆ ಹರಕೆ ಹೊತ್ತರೂ ಸೇವೆಯನ್ನು ಮಾತ್ರ ಗಂಡಸರಿಂದಲೇ ಸಲ್ಲಿಸಬೇಕು. ಅಷ್ಟೇ ಅಲ್ಲ ಕುಮುದವ್ವನ ಜಾತ್ರೆಯ ಸಕಲ ಸಿದ್ಧತೆಗೆ ತರುವ ಪ್ರತಿವಸ್ತುಗಳೂ ಕದ್ದು ತಂದದ್ದು ಆಗಿರಬೇಕು. ಈ ಎಲ್ಲ ವಿವರಗಳೇ ತುಂಬ ವಿಶಿಷ್ಟ ಮತ್ತು ವಿಭಿನ್ನ ಆಯಾಮವನ್ನು ಕತೆಗೆ ನೀಡುತ್ತವೆ.

ಕುಮುದವ್ವನ ಗುಡಿ ಮೂಲದಲ್ಲಿ ತಾಂತ್ರಿಕರ ಸ್ಥಳವಾಗಿತ್ತು ಎಂಬ ಸೂಚನೆ ಕಾದಂಬರಿಯಲ್ಲಿ ಸಿಗುತ್ತದೆ. ತಾಂತ್ರಿಕರು ತಮ್ಮ ಸಾಧನೆಗಾಗಿ ಹೆಣ್ಣನ್ನು ಬಳಸಿಕೊಳ್ಳುತ್ತಿದ್ದರು. ಅಂತೆಯೇ ಕಾದಂಬರಿಯಲ್ಲೂ ಕುಮುದವ್ವ ಲೈಂಗಿಕತೆಯ ಸಂಕೇತವಾಗಿ ಬಂದಿದ್ದಾಳೆ. ಅವಳಂತೆ ಅವಳಿರುವ ಜಾಗವೂ – ಹುಣಿಸೇಮೆಳೆ – ವಿಶಿಷ್ಟವಾಗಿದೆ; ಅನೂಹ್ಯವಾಗಿದೆ. ಇದನ್ನು ಪ್ರವೇಶಿಸುವುದು ಕಷ್ಟಸಾಧ್ಯ. ಒಮ್ಮೆ ಒಳಗೆ ಪ್ರವೇಶಿಸಿದರೆ, ನಮ್ಮನ್ನು ಮೈಮರೆಸುವ ಶಕ್ತಿ ಅಲ್ಲಿನ ಪ್ರಕೃತಿಗಿದೆ. ಸೂರ್ಯನ ಕಿರಣ ಒಂದೊಂದು ಕೊಂಬೆಯ ಎಲೆಗಳ ಮೇಲೆ ಬಿದ್ದು, ಆಡುವ ರಂಗವಲ್ಲಿಯ ವೈಭವ ನೋಡುತ್ತ ಮೈಮರೆತು ಸಾಗಿದರೆ ಕತ್ತಲಾದುದೇ ತಿಳಿಯುವುದಿಲ್ಲ. ನಕ್ಷತ್ರಗಳೂ ಮೋಡಿ ಮಾಡುತ್ತವೆ. ಮೈಮರೆತು ಕತ್ತಲಲ್ಲಿ ಸಿಲುಕಿದರೆ, ಹೊರಬರಲು ದಾರಿಕಾಣದೆ ಅಲೆದಾಡಬೇಕು. ಕತ್ತಲಲ್ಲಿ ಹಕ್ಕಿಗಳ ವಿಚಿತ್ರ ಸದ್ದು; ಭೀಕರಾಕಾರ ತಾಳುವ ಮರದ ನೆರಳುಗಳು ಎಂಥ ಗಂಡೆದೆಯವರನ್ನೂ ಅಲುಗಾಡಿಸುತ್ತವೆ. ಹೀಗೆ ಹುಣಿಸೇಮೆಳೆಯು ಆಕರ್ಷಣೆ ಮತ್ತು ಭಯಾನಕತೆ – ಈ ಎರಡು ವಿರುದ್ಧ ಭಾವಗಳ ಪ್ರತಿನಿಧಿ. ಕಾದಂಬರಿಯಲ್ಲಿ ಈ ಹುಣಿಸೇಮೆಳೆಯು ಲೈಂಗಿಕತೆಯ ಸಂಕೀರ್ಣತೆಗೆ ಸಾಕ್ಷಿಯಾಗಿ ನಿಂತಿದೆ.

ಇತ್ತ ಸಿಂಗಾರೆವ್ವ, ಸರಗಂ ದೇಸಾಯಿಯ ಹೆಂಡತಿಯಾಗಿ ಅರಮನೆಗೆ ಬಂದವಳು. ಅವಳ ತಂದೆ, ಗಂಡ ಮತ್ತು ಆಕೆ ಬದುಕಿದ ಪರಿಸರಗಳು ಸಿಂಗಾರೆವ್ವನನ್ನು ಒಂದೋ ಕಾಮರಹಿತ ಹೆಣ್ಣಾಗಿ ಬದುಕಲು ಒತ್ತಾಯಿಸುತ್ತವೆ; ಇಲ್ಲವೇ ಪುರುಷನ ಉಪಭೋಗಕ್ಕೆ ಪರಿಕರವಾಗಿ ಒದಗಿ ಬರುವ ಅನಿವಾರ್ಯತೆಯನ್ನು ಸೃಷ್ಟಿಸುತ್ತವೆ. ಇಲ್ಲಿ ಗಮನಿಸಬೇಕಾದದ್ದು ಏನೆಂದರೆ, ತಾಯ್ತನಕ್ಕಾಗಿ ತೀವ್ರವಾಗಿ ಹಂಬಲಿಸುವ ಸಿಂಗಾರೆವ್ವನ ಮೊದಲ ವಿವಾಹವು ಸತ್ತವರನೊಂದಿಗೆ ನಡೆದರೆ, ಎರಡನೆಯ ವಿವಾಹವು

ನಪುಂಸಕನಾದ ಸರಗಂ ದೇಸಾಯಿಯೊಂದಿಗೆ ಜರುಗುತ್ತದೆ. ಇಷ್ಟಾದರೂ ಸಿಂಗಾರೆವ್ವನನ್ನು ಎಲ್ಲೂ ಕಾಮನೆಗಳು ಕಾಡುವುದಿಲ್ಲ! ಹುಚ್ಚಯ್ಯನಂತಹ ಜಂಗಮನಿಗೆ ಮತ್ತು ದಲಿತರ ಮಾರೆಪ್ಪನಿಗೆ ಆಕೆಯು ಅವರವರ ದ್ವೇಷ ಸಾಧನೆಗೆ ಪೂರಕ ಮಾಧ್ಯಮವಾಗಿದ್ದಾಳೆ. ಹೀಗೆ ಅವಳ ಬದುಕಿನಲ್ಲಿ ಲೈಂಗಿಕ ಅನುಭವಗಳು ಅವಳ ಇಚ್ಛೆಗೆ ವಿರುದ್ಧವಾಗಿಯೋ, ಬಲವಂತವಾಗಿಯೋ ಒದಗಿಬರುತ್ತವೆ; ತನ್ನ ಇಚ್ಛೆಗೆ ವಿರುದ್ಧವಾಗಿ ತನ್ನ ದೇಹದ ಮೇಲಾದ ಆಕ್ರಮಣಗಳನ್ನು ಸಿಂಗಾರೆವ್ವ ಕ್ಷುಲ್ಲಕವಾಗಿ ಪರಿಗಣಿಸುತ್ತಾಳೆ. ಆ ಅನುಭವಗಳು ಆಕೆಯ ವ್ಯಕ್ತಿತ್ವದ ಮೇಲಾಗಲೀ, ಮನಸ್ಸಿನ ಮೇಲಾಗಲಿ ವಿಶೇಷ ಪರಿಣಾಮವನ್ನು ಬೀರುವುದಿಲ್ಲ. ಯಾವಾಗ ದಾಂಪತ್ಯದ ಒಂದು ಹತಾಶ ಸ್ಥಿತಿಯಲ್ಲಿ, ಗಂಡನ ಮೇಲಿನ ಸಿಟ್ಟಿನಿಂದ ಮಾರೆಪ್ಪನ ಸಂಬಂಧವನ್ನು ಆಕೆ ಹೃತ್ಪೂರ್ವಕವಾಗಿ ಒಪ್ಪಿಕೊಳ್ಳುತ್ತಾಳೋ, ಆಗ ಮಾತ್ರ ಸಿಂಗಾರೆವ್ವ ಮಾನಸಿಕ ವಿಪ್ಲವಕ್ಕೆ ಒಳಗಾಗುತ್ತಾಳೆ. ಈ ಅಪರಾಧೀ ಪ್ರಜ್ಞೆಯು ಆಕೆ ತನ್ನ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳುವಷ್ಟು ತೀವ್ರ ಸ್ವರೂಪವನ್ನು ಪಡೆದಿದೆ. ನಿರಪರಾಧಿಯಾಗಿದ್ದೂ ಗಂಡನ ಕೊಲೆಯ ಅಪರಾಧವನ್ನು ತಾನೇ ಹೊತ್ತುಕೊಳ್ಳುವುದು ಹಾಗೂ ಜೈಲು ಶಿಕ್ಷೆಯನ್ನು ಅನುಭವಿಸುವುದು – ಮುಂತಾದ ವರ್ತನೆಗಳು ತನ್ನ ತಪ್ಪಿಗೆ ಶಿಕ್ಷೆ ಎಂದು ಆಕೆಯೇ ಒಪ್ಪಿಕೊಂಡದ್ದರ ಸೂಚಕವಾಗಿದೆ.

ಸಿಂಗಾರೆವ್ವನ ಬದುಕಿನ ತಿರುವುಗಳಲ್ಲಿ ಹುಣಿಸೇಮೆಳೆಗೆ ಪ್ರಮುಖ ಸ್ಥಾನವಿದೆ. ಸಿಂಗಾರೆವ್ವ ತನ್ನ ಅರಮನೆಯ ಒಂಟಿತನವನ್ನು ಕೋಣೆಯ ಕಿಟಕಿಯಿಂದ ಕಾಣುವ ಊರ ಬಯಲು, ಅದರಾಚೆಗಿನ ಹುಣಿಸೇಮೆಳೆ ಕುಮುದವ್ವನ ಗುಡಿ ಇವುಗಳನ್ನು ನೋಡುತ್ತ ಅವುಗಳ ಕಡೆ ದಿನೇದಿನೇ ಆಕರ್ಷಿತಳಾಗುತ್ತಾಳೆ. ಅಷ್ಟೇ ಅಲ್ಲ, ಊರ ಯಾವ ಮಹಿಳೆಯರೂ ಪ್ರವೇಶಿಸದ, ಪ್ರವೇಶಿಸಲು ಬಯಸದ ಗೂಢ ಗಹನ ಹುಣಿಸೇ ಮೆಳೆಯನ್ನು ಸಿಂಗಾರೆವ್ವ ಪ್ರವೇಶಿಸುತ್ತಾಳೆ. ಹಿಂದೆ ಹೇಳಿದಂತೆ ಹುಣಿಸೇಮೆಳೆ ಮತ್ತು ಕುಮುದವ್ವ ಲೈಂಗಿಕತೆಯ ಸಂಕೀರ್ಣತೆಗೆ ಸಾಕ್ಷಿ. ಇಂತಹ ಕ್ಷೇತ್ರಕ್ಕೆ ಮಹಿಳೆಯರ ಪ್ರವೇಶವನ್ನು ನಿರಾಕರಿಸಿರುವುದು ಎಂದರೆ, ಮಹಿಳೆಯರಿಗೆ ಲೈಂಗಿಕ ಸ್ವಾತಂತ್ರ್ಯದ ಸಾಧ್ಯತೆಯನ್ನು ನಿರಾಕರಿಸಿದಂತೆ. ಇಂತಹ ನಿಷಿದ್ಧ ಪ್ರದೇಶದ ಕುರಿತಂತೆ ಸಿಂಗಾರೆವ್ವನು ಹೊಂದುವ ಆಸಕ್ತಿ, ಆಕರ್ಷಣೆಗಳು ಹಾಗೂ ಹುಣಿಸೇಮೆಳೆಗೆ ಆಕೆಯ ಪ್ರವೇಶಕ್ಕೂ, ಅವಳ ಬದುಕಲ್ಲಿ ಆಕೆಗೆ ಒದಗಿಬರುವ ಲೈಂಗಿಕ ಸಂಬಂಧಗಳ ಸ್ವರೂಪಗಳಿಗೂ ನಿಕಟ ಸಂಬಂಧವಿದೆ.

ಶ್ರೀನಿಂಗಿಯು ಸಿಂಗಾರೆವ್ವನ ಸಖಿ, ಒಂದರ್ಥದಲ್ಲಿ ಆಕೆಯ ನೆರಳು. ತಂತ್ರದ ದೃಷ್ಟಿಯಿಂದ ಕಾದಂಬರಿಯೊಳಗೆ ಒಂದು ಪಾತ್ರವೂ ಹೌದು; ನಾಯಕಿಯ ಬದುಕನ್ನು ಹತ್ತಿರದಿಂದ ಕಂಡು, ಮುಂದಿನ ತಲೆಮಾರಿಗೆ ರವಾನಿಸುವ ಸಾಕ್ಷಿಪ್ರಜ್ಞೆಯೂ ಹೌದು. ಇಂತಹ ಶ್ರೀನಿಂಗಿಯ ವೈಯಕ್ತಿಕ ವಿವರಗಳು ಕಾದಂಬರಿಯಲ್ಲಿ ಹೆಚ್ಚು ಅವಕಾಶವನ್ನು ಪಡೆದಿಲ್ಲ. ಆದರೆ ಜೀವನಪೂರ್ತಿ ಅವಿವಾಹಿತಳಾಗಿ ಬದುಕಿದ ಶ್ರೀನಿಂಗಿಯನ್ನೂ ಕಾಮನೆಗಳು ಎಲ್ಲೂ ಕಾಡುವುದಿಲ್ಲ.

ಇಷ್ಟು ಹಿನ್ನೆಲೆಗಳಿಂದ ಕಾದಂಬರಿಯು ಪಿತೃಸತ್ತೆಯ ಮೌಲ್ಯಗಳ ಸ್ಥಿರೀಕರಣವನ್ನು ಹೇಗೆ ಮಾಡಿದೆ ಎಂಬುದನ್ನು ಗುರುತಿಸಬಹುದು.

* ಪಿತೃಪ್ರಧಾನ ಸಂಸ್ಕೃತಿಗೆ ಹೆಣ್ಣು, ಗಂಡಿನ ಸಾಧನೆಗೆ ಅಡ್ಡಿಯಾಗಿ ಕಂಡಿದ್ದಾಳೆ. ಹೀಗಾಗಿ ಆಕೆಯನ್ನು ಮಾಯೆ, ಅವಳೊಂದು ಒಗಟು; ನಿಗೂಢತೆಗಳ ಆಗರವೆಂದು ವ್ಯಾಖ್ಯಾನಿಸಲಾಗಿದೆ. ''ಮೀನಿನ ಹೆಜ್ಜೆಯನ್ನಾದರೂ ಗುರುತಿಸ ಬಹುದು; ಹೆಣ್ಣಿನ ಮನಸ್ಸನ್ನು ಅರಿಯಲು ಸಾಧ್ಯವಿಲ್ಲ'' ಎಂಬ ನಾಣ್ನುಡಿ ಈ ಕಾರಣಕ್ಕೆ ಚಾಲ್ತಿಯಲ್ಲಿದೆ. ಕಾದಂಬರಿಯಲ್ಲಿ ಸಿಂಗಾರೆವ್ವ ಮತ್ತು ಶ್ರೀನಿಂಗಿಯರ ಪಾತ್ರಗಳನ್ನು ಈ ಅರ್ಥದಲ್ಲಿ ಒಮ್ಮೆ ಗಮನಿಸಿದರೆ ಈ ಚಿಂತನೆ ಎಷ್ಟು ಪ್ರಖರವಾಗಿ ಮೂಡಿಬಂದಿದೆ ಎಂಬುದು ಅರಿವಿಗೆ ಬರುತ್ತದೆ. ಅವರಿಬ್ಬರು ತಮ್ಮ ಒಡಲಲ್ಲಿ; ಮನದಲ್ಲಿ ಬಚ್ಚಿಟ್ಟ ರಹಸ್ಯಗಳೆಷ್ಟು! ಅವುಗಳ ಸ್ವರೂಪವೆಂಥದ್ದು! ಜಂಗಮನ ಕೊಲೆ, ಮಾರಪ್ಪನಿಂದಾದ ಅತ್ಯಾಚಾರ, ತಂದೆಯ ಕೊಲೆ, ಮಾರಪ್ಪನೊಂದಿಗಿನ ಅನೈತಿಕ ಸಂಬಂಧ... ಪಟ್ಟಿ ಹೀಗೇ ಬೆಳೆಯುತ್ತದೆ. ಆದರೆ ಇದಾವುದರ ಸುಳಿವೂ ಸರಗಂ ದೇಸಾಯಿಗಾಗಲೀ, ಇತರರಿಗಾಗಲೀ ದೊರೆಯುವುದೇ ಇಲ್ಲ(ಸ್ವತಃ ತಾಯಿಗೂ ತನ್ನ ತಂದೆಯ ಸಾವಿನ ಸತ್ಯವನ್ನು ಹೇಳದೆ ಸಿಂಗಾರೆವ್ವ ಮತ್ತು ಶ್ರೀನಿಂಗಿಯರು ಮುಚ್ಚಿಡುವಲ್ಲಿ ಸಫಲರಾಗುತ್ತಾರೆ !). ಈ ಮೂಲಕ ಮೇಲೆ ಹೇಳಿದ ಮೌಲ್ಯವನ್ನು ಈ ಪಾತ್ರಗಳು ದೃಢೀಕರಿಸುತ್ತವೆ.




* ಹೆಣ್ಣಿನ ಬದುಕಿನ ಪರಿಪೂರ್ಣತೆ ತಾಯ್ತನದಲ್ಲಿದೆ ಮತ್ತು ಎಲ್ಲ ಹೆಂಗಸರೂ ತಾಯ್ತನಕ್ಕಾಗಿ ಹಂಬಲಿಸುತ್ತಾರೆ ಎಂಬುದು ಇನ್ನೊಂದು ಸಿದ್ಧ ಮೌಲ್ಯ. ಸಿಂಗಾರೆವ್ವ ಮತ್ತು ಅವಳ ಅತ್ತೆಯ ಪಾತ್ರವನ್ನು ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದು. ತನ್ನನ್ನು ಉಪಚರಿಸಲು ಸೊಸೆ ಬಂದಾಗಲೆಲ್ಲ ಅವಳ ಬಸುರಿಗೆ ಕೈಹಾಕಿ ನೋಡುವ, ಬಂಗಾರದ ನಡುಪಟ್ಟಿಯನ್ನು ಕೊಡಲು ಕಾದುಕುಳಿತ ದೇಸಾಯಿಯ ತಾಯಿಯು ಹೊಂದಿರುವ ಸಂತಾನದ ಮುಂದುವರಿಕೆಯ ತುಡಿತವು ಒಂದು ತುದಿಯಾದರೆ, ಇನ್ನೊಂದೆಡೆ ತಾಯ್ತನದ ಈಡೇರಿಕೆಗಾಗಿ ಅತ್ತೆ ಮತ್ತು ಗಂಡನ ಇಚ್ಛೆಗೆ ವಿರುದ್ಧವಾಗಿ ಜಂಗಮನನ್ನು ಮನೆಗೆ ಕರೆಸುವ; ದಲಿತ ಮಾರೆಪ್ಪನೊಂದಿಗೆ ಅನೈತಿಕ ಸಂಬಂಧವನ್ನು ಒಪ್ಪಿಕೊಳ್ಳುವ ಸಿಂಗಾರೆವ್ವನ ನಿಲುವು ಇನ್ನೊಂದು ಅತಿರೇಕದ ತುದಿ ಎನ್ನಬಹುದು. ಸಿಂಗಾರೆವ್ವನ ಬದುಕಿನ ಆಸೆಯೇ ವಾಡೆಯ ಒಂದೊಂದು ಕಂಬವನ್ನೂ ತಬ್ಬಿಹಿಡಿದು ಆಟವಾಡುವಷ್ಟು ಮಕ್ಕಳನ್ನು ಹಡೆಯುವುದಾಗಿದೆ! ಇದು ಕೂಡ ಪಿತೃಪ್ರಧಾನ ಸಂಸ್ಕೃತಿಯ ಚಿಂತನೆಯ ವಿಧಾನವಾಗಿದೆ.

* ಹೆಣ್ಣಿನ ಪಾತಿವ್ರತ್ಯದ ಕುರಿತ ಸಮಾಜದ ನಿಲುವು ಇನ್ನೊಂದು ಮುಖ್ಯ ಅಂಶ. ಪ್ರತಿಯೊಂದು ಹೆಣ್ಣೂ ಗೃಹಸ್ಥಾಶ್ರಮಕ್ಕೆ ಕಾಲಿರಿಸುವಾಗ, ಅರುಂಧತಿಯ ದರ್ಶನ ಮಾಡಿಸುವ, ಪಂಚಪತಿವ್ರತೆಯರ ಆದರ್ಶ ಪಾಲಿಸಲು ಹೇಳುವ ಸಮಾಜವಿದು. ಇಲ್ಲಿ ಸಿಂಗಾರೆವ್ವನ ಪಾತ್ರ ಚಿತ್ರಣ ಈ ಅಚ್ಚಿನಲ್ಲೇ ಮೂಡಿಬಂದಿದೆ. ಗಂಡ ಎಂಥವನೇ ಆದರೂ – ಆತ ನಪುಂಸಕನೇ ಆದರೂ – ಪಾತಿವ್ರತ್ಯವನ್ನು ಉಳಿಸಿಕೊಳ್ಳಬೇಕು ಎಂಬ ನಿಲುವು ಸಿಂಗಾರೆವ್ವನಲ್ಲಿ ಗಾಢವಾಗಿದೆ. ಸಿಂಗಾರೆವ್ವ ಗಂಡನ ದೌರ್ಬಲ್ಯವನ್ನು ಒಪ್ಪಿಕೊಂಡು, ತಾನೂ ಕಾಮರಹಿತ ಸ್ಥಿತಿಯನ್ನು ಆವಾಹಿಸಿಕೊಳ್ಳುತ್ತಾಳೆ. ಅವಳಿಗೆ ಅನಿರೀಕ್ಷಿತವಾಗಿ ಒದಗಿಬರುವ ಲೈಂಗಿಕ ಸಂಬಂಧಗಳೂ ಅವಳ ಮನಸ್ಸನ್ನು ಚಂಚಲ ಗೊಳಿಸುವಲ್ಲಿ ಸೋಲುತ್ತವೆ. ಇಂತಹ ಧೀರನಿಷ್ಠೆ ಮಹಿಳೆಯರಿಂದ ಮಾತ್ರ ಸಾಧ್ಯ ಎಂಬ ನಿಲುವು ಕಾದಂಬರಿಯಲ್ಲಿದೆ. ಎಂದರೆ ಲೈಂಗಿಕತೆಯನ್ನು ನಿರಸನಗೊಳಿಸಿ ಕೊಳ್ಳುವ ಶಕ್ತಿ ಮಹಿಳೆಗಿದೆ ಮತ್ತು ಇರಬೇಕು ಎಂಬ ಆಶಯವನ್ನು ಏಕಕಾಲಕ್ಕೆ ಇದು ನೀಡುತ್ತದೆ. ಈ ವಿಚಾರವು ಸ್ಥಾಪಿತ ಮೌಲ್ಯಗಳ ಸ್ಥಿರೀಕರಣವನ್ನೇ ಮಾಡುತ್ತದೆ. ಇಂತಹ ಸಿಂಗಾರೆವ್ವ ಯಾಕೆ ಮತ್ತು ಯಾವ ಸಂದರ್ಭಗಳಲ್ಲಿ ಮಾರೆಪ್ಪನೊಂದಿಗಿನ ಸಂಬಂಧವನ್ನು ಒಪ್ಪಿಕೊಂಡಳು ಎಂಬುದಕ್ಕೆ ಕಾದಂಬರಿಯು ಬಲವಾದ ಕಾರಣಗಳ ಸರಮಾಲೆಯನ್ನೇ ಸ್ಥಾಪಿಸಿದೆ. ಎಂದರೆ ಇಂತಹ ಕಾರಣಗಳ ಸರಪಳಿಗಳಿಲ್ಲದೆ ಗೃಹಿಣಿ ಅನ್ಯ ಸಂಬಂಧವನ್ನು ಹೊಂದುವುದಿಲ್ಲ ಅಥವಾ ಹೊಂದಬಾರದು ಎಂಬ ನಿಲುವೂ ಇಲ್ಲಿ ಪ್ರತಿಪಾದಿತವಾಗಿದೆ. ಅನ್ಯ ಸಂಬಂಧದಿಂದ ತಾಯ್ತನದ ಫಲವನ್ನು ಪಡೆದರೂ, ಸಿಂಗಾರೆವ್ವ ತನ್ನ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳುವಂತಾಗುವುದು; ಗಂಡನ ಕೊಲೆಯ ಆಪಾದನೆಯನ್ನು ತಾನು ಹೊತ್ತು ಕೊಳ್ಳುವುದು; ತನ್ನದು ಅಪರಾಧ ಎಂಬ ನೆಲೆಯಲ್ಲಿ ಜೈಲುಶಿಕ್ಷೆ ಅನುಭವಿಸುವುದು; ಹಾಗೂ ಮಗುವನ್ನು ಹೆತ್ತು ಸಾವನ್ನು ಹೊಂದುವುದು – ಇಂತಹ ಕಡೆಗಳಲ್ಲಿ ಇನ್ನಿಷ್ಟು ಖಚಿತರೂಪ ಪಡೆಯುತ್ತದೆ. ಹೀಗೆ ಪಾತಿವ್ರತ್ಯಕ್ಕೆ ಕೃತಿಯು ಹೆಚ್ಚಿನ ಒತ್ತು ನೀಡಿರುವುದು ಸ್ಪಷ್ಟವಾಗುತ್ತದೆ. ಎಂದರೆ ಸಿಂಗಾರೆವ್ವನ ನಿರ್ಧಾರದ ಕುರಿತಂತೆ ಋಣಾತ್ಮಕ ನಿಲುವು ಪ್ರಕಟವಾಗಿದೆ.

* ಪಿತೃಪ್ರಧಾನ ಸಮಾಜದಲ್ಲಿ ಮಹಿಳೆಯ ಲೈಂಗಿಕತೆಯು ದಮನಕ್ಕೆ ಒಳಗಾಗುತ್ತಾ ಬಂದಿದೆ. ಲೈಂಗಿಕ ಸುಖ ಎಂಬುದು ಪುರುಷ ನೆಲೆಯಿಂದ ನಿರ್ವಚಿತಗೊಂಡಿದೆ. ಹೀಗಾಗಿ ಹೆಣ್ಣು ಗಂಡಿನ ಕಾಮ ಪೂರೈಕೆಗೆ ತನ್ನ ದೇಹ ಮೂಲದಿಂದ ಮುಖ್ಯಳಾಗಿದ್ದಾಳೆ. ಇಡೀ ಪ್ರಕ್ರಿಯೆಯಲ್ಲಿ ಹೆಣ್ಣಿನ ಅನುಭವ, ತೃಪ್ತಿ, ಅಪೇಕ್ಷೆ ಯಾವುದೂ ಗಣನೆಗೆ ಬರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಸ್ತ್ರೀಯನ್ನು ಕಾಮರಹಿತ ಸ್ಥಿತಿಗೆ ತರುವ ಪ್ರಕ್ರಿಯೆ ಜರುಗುತ್ತದೆ. ಎಂದರೆ ಪಿತೃಪ್ರಧಾನ ಸಂಸ್ಕೃತಿಯು ಹೆಣ್ಣನ್ನು ಎರಡು ಅತಿರೇಕಗಳಲ್ಲಿ ಗ್ರಹಿಸುತ್ತದೆ. ಒಂದು –

ಆಕೆಯನ್ನು ಮಾತೃತ್ವದ ನೆಲೆಯಲ್ಲಿ ವೈಭವೀಕರಿಸಿ, ಅವಳನ್ನು ಕಾಮರಹಿತ ಸ್ಥಿತಿಗೆ ತಂದು ನಿಲ್ಲಿಸುವುದು; ಅವಳನ್ನು ಅಮ್ಮನಾಗಿಸುವುದು. ಅಮ್ಮನಾಗುವುದು ಎಂದರೆ ಸಮಾಧಿಯಾಗುವುದು ಎಂದೇ ಅರ್ಥ. ಈ ನೆಲೆಯಲ್ಲಿ ಕುಮುದವ್ವ ದೇವಿ ಆಗಿದ್ದಾಳೆ. ಹೀಗಾಗಿ ಅವಳಿಗೆ ಕಾಮನೆಗಳ ಒತ್ತಡಗಳು ಇಲ್ಲ. ಸಿಂಗಾರೆವ್ವ, ಸರಗಂ ದೇಸಾಯಿಯ ಮನೆಗೆ ಬಂದಾಗ, ಅವಳನ್ನು ಕಂಡ ಜನತೆಗೆ ಆಕೆ ದೇವಿಯಂತೆಯೇ ಭಾಸವಾಗಿದ್ದಾಳೆ! (ಪುಟ ೫೫). ಅವಳಲ್ಲೂ ಕಾಮನೆಗಳೇ ಮೂಡುವುದಿಲ್ಲ! ಶ್ರೀನಿಂಗಿ ಅಂಥ ಇನ್ನೊಂದು ಉದಾಹರಣೆ. ಇನ್ನೊಂದು ನೆಲೆ – ಹೆಣ್ಣನ್ನು ವೇಶ್ಯೆಯಾಗಿ ಗ್ರಹಿಸುವುದು. ದೇಸಾಯಿಯ ಹಿಂದಿನ ತಲೆಮಾರಿನ ದೊರೆಸಾನಿ ಜಂಗಮನನ್ನು ಕಂಡದ್ದೇ, ''ಭಿಕ್ಷ ತಗೋ ಸ್ವಾಮಿ'' ಎನ್ನುತ್ತ, ಇಹವನ್ನೇ ಮರೆತು, ತನ್ನತನವನ್ನೇ ಮರೆತು ಅವನ ಹಿಂದೆ ಹೊರಟ ವೃತ್ತಾಂತ ಕಾದಂಬರಿಯಲ್ಲಿದೆ. ಇಬ್ಬರೂ ಕುಮುದವ್ವನ ಹುಣಿಸೇಮೆಳೆಯಲ್ಲಿ ಕಣ್ಮರೆಯಾದರಂತೆ. ಸಿಂಗಾರೆವ್ವನ ನಿಷ್ಠೆಯ ಮುಂದೆ ಈ ದೊರೆಸಾನಿಯ ವ್ಯಕ್ತಿತ್ವ ಲಘುತ್ವವನ್ನು ಪಡೆಯುತ್ತದೆ. ಇನ್ನೊಂದೆಡೆ ಸರಗಂ ದೇಸಾಯಿಯ ತೆವಲಿಗೆ ಒದಗಿಬರುವ ಹೆಣ್ಣುಗಳು ಈ ಗುಂಪಿನಲ್ಲಿ ಸೇರುತ್ತಾರೆ. ಇಲ್ಲಿ ಹೆಣ್ಣು ಅತಿಯಾದ ಕಾಮುಕಿಯಾಗಿ ಇಲ್ಲವೆ ಗಂಡಿನಿಂದ ಹಣ ಸುಲಿಯುವ ಮಾಯಾವಿಯಾಗಿ ಒಡಮೂಡುತ್ತಾಳೆ. ಇವೆರಡೂ ಅತಿರೇಕಗಳಿಂದ ಹೊರತಾದ ಸಹಜ ಹೆಣ್ಣು ಒಡಮೂಡುವುದೇ ವಿರಳ.

* ಲೈಂಗಿಕ ಬಯಕೆ ಮತ್ತು ತೃಪ್ತಿಗಳು ಪುರುಷ ನೆಲೆಯಿಂದ ನಿರ್ವಚಿತಗೊಳ್ಳುತ್ತವೆ ಮತ್ತು ಅದನ್ನು ಗಂಡು ಹಕ್ಕಿನಿಂದ ಪಡೆಯುತ್ತಾನೆ ಇಲ್ಲವೇ ತೋಳ್ಬಲದಿಂದ ದಕ್ಕಿಸಿಕೊಳ್ಳುತ್ತಾನೆ. ಸಿಂಗಾರೆವ್ವನಿಗೆ ಆಕೆಯ ಬದುಕಿನಲ್ಲಿ ಎದುರಾಗುವ ಲೈಂಗಿಕಾನುಭವಗಳು ಅತ್ಯಂತ ಬೀಭತ್ಸ ಮತ್ತು ಕರಾಳ ರೀತಿಯಲ್ಲಿ ಒದಗಿಬರುತ್ತವೆ. ಜಂಗಮ ಹುಚ್ಚಯ್ಯನ ಶವವನ್ನು ಎದುರಿಗಿರಿಸಿಕೊಂಡು ಮಾರೆಪ್ಪ ಸಿಂಗಾರೆವ್ವನ ಮೇಲೆ ಮಾಡುವ ಹಲ್ಲೆ ಮತ್ತು ಹುಣಿಸೇಮೆಳೆಯಲ್ಲಿ ಹುಚ್ಚಯ್ಯನ ಸಮಾಧಿಯಲ್ಲಿ ತಂದೆಯ ಕಳೇಬರದೆದುರು ಆತನೇ ನಡೆಸುವ ಹಲ್ಲೆಗಳು ಮೇಲಿನ ಮಾತಿಗೆ ಪೂರಕವಾಗಿವೆ. ಇಲ್ಲೆಲ್ಲ ಹೆಣ್ಣು ನಿಷ್ಕ್ರಿಯ ಪಾಲುದಾರಳು ಆಗುವುದು ಸಹಜವೆಂಬ ನೆಲೆ ಇದೆ.

* ಪ್ರೀತಿ ಮತ್ತು ಕಾಮ ಇವು ಗಂಡಸಿನ ವ್ಯಕ್ತಿತ್ವದ ವಿಕಸನಕ್ಕೆ ಕಾರಣವಾಗುವ ಬಗೆಗಳನ್ನು ನವ್ಯದ ಒಟ್ಟು ಕಥನಸಾಹಿತ್ಯ ಅನಾವರಣಗೊಳಿಸಿದೆ. ಪ್ರಸ್ತುತ 'ಸಿಂಗಾರೆವ್ವ ಮತ್ತು ಅರಮನೆ' ಕಾದಂಬರಿಯನ್ನೂ ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದು. ಸಿಂಗಾರೆವ್ವನ ಸಂಬಂಧದಿಂದಾಗಿ ದಲಿತ ಮಾರೆಪ್ಪ ತನ್ನ ಕಾಠಿಣ್ಯವನ್ನು ಕಳೆದುಕೊಂಡು ಮಾನವೀಯತೆಯ ಮೂರ್ತಿಯಾಗುತ್ತಾನೆ. ''ಹೊಳೆಯಲ್ಲಿಯ ಕಲ್ಲು ಸವೆದು ಸವೆದು ಲಿಂಗವಾಗುತ್ತಲ್ಲ ಹಾಗೆ'' (ಪುಟ ೧೭೯). ಆದರೆ ಈ ಸಂಬಂಧವನ್ನು ಒಪ್ಪಿಕೊಂಡ ಸಿಂಗಾರೆವ್ವ ಜಾಗೃತಾವಸ್ಥೆಯಲ್ಲಿ ತನ್ನ ತಾಯ್ತನವನ್ನು ಸಮರ್ಥಿಸಿಕೊಂಡರೂ ಅಜಾಗೃತ ಪ್ರಜ್ಞೆಯಲ್ಲಿ ಕೀಳರಿಮೆ, ಅಪರಾಧೀಪ್ರಜ್ಞೆ ಮತ್ತು ಪಶ್ಚಾತ್ತಾಪಗಳಿಂದ ನಲುಗುವುದು ಅವಳ ಪಾಲಿನ ವಿಧಿಯೆಂಬಂತೆ ಮೂಡಿಬಂದಿದೆ. ಇದು ಕೂಡಾ ಪಿತೃಸತ್ತೆಯ ಚಿಂತನಾಕ್ರಮದ ಮುಂದುವರಿಕೆ ಎಂಬುದರಲ್ಲಿ ಎರಡು ಮಾತಿಲ್ಲ.

ಹೀಗೆ ಕಾದಂಬರಿಯ ಒಳರಚನೆಯಲ್ಲಿ ಸ್ತ್ರೀಯ ಕುರಿತಂತೆ ಪಿತೃಪ್ರಧಾನ ಸಂಸ್ಕೃತಿಯೊಂದರ ನಿರ್ವಚನಗಳಾದ ಕ್ಷಮಾಗುಣ, ಪಾತಿವ್ರತ್ಯ, ತಾಯ್ತನದ ತುಡಿತ, ನಿಗೂಢತೆ, ಕಾಮರಹಿತ ಸ್ಥಿತಿ ಮುಂತಾದ ಗುಣಗಳ ಸ್ಥಿರೀಕರಣವೇ ನಡೆದಿದೆ. ಎಂತಹ ದುರ್ಭರ ಸ್ಥಿತಿಯಲ್ಲೂ ಹೆಣ್ಣು ಕೌಟುಂಬಿಕ ಚೌಕಟ್ಟನ್ನು ಮೀರುವುದನ್ನು ಒಪ್ಪದ ಮನಃಸ್ಥಿತಿಯೇ ಸಿಂಗಾರೆವ್ವನ ಮಾನಸಿಕ ಅಸಮತೋಲನದಲ್ಲಿ ಪ್ರಕಟವಾಗಿದೆ. ಇದು ಕಾದಂಬರಿಯ ಒಳರಚನೆಯು ನೀಡುವ ಅರ್ಥವೂ ಆಗಿದೆ. ಆದುದರಿಂದ 'ಸಿಂಗಾರೆವ್ವ ಮತ್ತು ಅರಮನೆ' ಕಾದಂಬರಿಯ ಓದು ಎಂದರೆ ಒಳರಚನೆ ಮತ್ತು ಹೊರರಚನೆಗಳನ್ನು ಗ್ರಹಿಸುವ ಮತ್ತು ಅರ್ಥೈಸುವ ನೆಲೆಯೇ ಆಗಿದೆ.

**ಡಾ|| ಸಬಿಹಾ ಭೂಮೀಗೌಡ**
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳ ಗಂಗೋತ್ರಿ - ೫೭೪ ೧೯೯, ಮಂಗಳೂರು

# ಯುಪಿಎ ಸರ್ಕಾರದ ರಾಜಕೀಯ ಅರ್ಥಶಾಸ್ತ್ರ

ಕೆ. ಎಸ್. ಪಾರ್ಥಸಾರಥಿ

ಡಿಸೆಂಬರ್ ೧೩, ೧೯೫೫ರಂದು ಅಂದಿನ ಕೇಂದ್ರ ಸರಕಾರದ ಹಣಕಾಸು ಸಚಿವರಾಗಿದ್ದ ಸುಪ್ರಸಿದ್ಧ ರಾಷ್ಟ್ರೀಯ ಬೂರ್ಷ್ವಾವಾದಿ ಟಿ. ಟಿ. ಕೃಷ್ಣಮಾಚಾರಿ ಅವರು ಕಲ್ಕತ್ತಾದಲ್ಲಿ ಜರುಗಿದ ಚೇಂಬರ್ ಆಫ್ ಕಾಮರ್ಸ್ ಒಕ್ಕೂಟದ ಸಭೆಯಲ್ಲಿ ಹಾಜರಿದ್ದ ವಿದೇಶಿ ಬಂಡವಳಿಗರನ್ನುದ್ದೇಶಿಸಿ ಮಾಡಿದ ಭಾಷಣದ ಒಂದು ಭಾಗ ಹೀಗಿದೆ :

"ಅಂತರರಾಷ್ಟ್ರೀಯ ಬಂಡವಳಿಗರಿಗೆ ಭಾರತದ ಪ್ರಗತಿಯಲ್ಲಿ ಪ್ರಾಮಾಣಿಕ ಆಸಕ್ತಿಯಿದೆ ಎಂದಾದರೆ ತಮ್ಮ ತಂತ್ರಜ್ಞಾನವನ್ನು ಈ ನೆಲದಲ್ಲೂ ಹಂಚಿಕೊಂಡು ನಮ್ಮ ಔದ್ಯೋಗೀಕರಣ ಪ್ರಕ್ರಿಯೆಗೆ ನೆರವಾಗಬೇಕೇ ಹೊರತು ಕೇವಲ ದೇಣಿಗೆ ಅಥವಾ ದಾನ/ಧರ್ಮ ನೀಡುವುದಲ್ಲ. ಯಾವ ಮೂಲದಿಂದಾದರೂ ಸರಿಯೇ, ನಾವು ನೆರವು ಪಡೆಯಲು ಸಿದ್ಧರಿದ್ದೇವೆ. ಆದರೆ ಹಾಗೆ ನೆರವು ನೀಡುವ ಸಂದರ್ಭಗಳಲ್ಲಿ ಯಾವುದೇ ರಾಜಕೀಯ ನಿರ್ಬಂಧಗಳಾಗಲಿ ದುರುದ್ದೇಶಗಳಾಗಲಿ ಇರಲು ಅವಕಾಶ ನೀಡೆವು. ನಿಮ್ಮೊಡನೆ ವ್ಯವಹಾರ ನಡೆಸುವ ಇಲ್ಲಿನ ಸ್ಥಳೀಯರಲ್ಲಿ ನೀವು ಆತ್ಮವಿಶ್ವಾಸ ಮೂಡಿಸದೇಹೋದಲ್ಲಿ ಜಾಗತಿಕ ಮಟ್ಟದಲ್ಲಿ ಇತರ ಮೂಲಗಳನ್ನು, ಮಾರ್ಗಗಳನ್ನು ಕಂಡುಕೊಳ್ಳುವುದು ನಮಗೆ ಅನಿವಾರ್ಯವಾಗುತ್ತದೆ. ಈ ನಿಟ್ಟಿನಲ್ಲಿ ಯಾರೇ ಆಗಲಿ ಎಷ್ಟೇ ಆಕರ್ಷಣೆ ಮತ್ತು ಆಮಿಷಗಳನ್ನು ಒಡ್ಡಿದರೂ ನಾವು ಈ ದೇಶದ ರಾಜಕೀಯ ಸಂರಚನೆಯನ್ನು ಬದಲಾಯಿಸುವುದಿಲ್ಲ; ನಮ್ಮ ಸ್ವಾತಂತ್ರ್ಯ, ಸಾರ್ವಭೌಮತ್ವವನ್ನು ಒತ್ತೆಗಿಡುವುದಿಲ್ಲ. ನನ್ನ ಮಟ್ಟಿಗೆ ಹೇಳುವುದಾದರೆ, ಎರಡನೇ ಪಂಚವಾರ್ಷಿಕ ಯೋಜನೆಯನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ವಿದೇಶಿ ನೆರವಿಗಾಗಿ ಕೈಚಾಚುವುದನ್ನು ನಾನು ತೀವ್ರವಾಗಿ ವಿರೋಧಿಸುತ್ತೇನೆ. ಈ ಸಂದರ್ಭದಲ್ಲಿ, ನನ್ನ ವೈಯಕ್ತಿಕ ಅಭಿಪ್ರಾಯವನ್ನು ಮಂಡಿಸುತ್ತಿದ್ದೇನೆ ಎಂಬ ಅರಿವೂ ನನಗಿದೆ. "ಸ್ವಾಮಿ, ಏನೇ ಆಗಲಿ, ನಮ್ಮ ಪಂಚವಾರ್ಷಿಕ ಯೋಜನೆಯನ್ನು ಪೂರ್ಣಗೊಳಿಸಬೇಕಿದೆ. ನಿಮ್ಮ ಸಹಾಯಹಸ್ತವನ್ನು ನೀಡಬಲ್ಲಿರಾ ?" ಎಂದು ನಾನಾಗಲಿ, ನನ್ನ ಸಹೋದ್ಯೋಗಿ ಗಳಾಗಲಿ ಹೊರದೇಶಗಳಿಗೆ ಹೋಗಿ ಅಂಗಲಾಚುವುದನ್ನು ವಿರೋಧಿಸುತ್ತೇನೆ. ನಾವು ವಿದೇಶಿ ನೆರವಿಗಾಗಿ ಹಂಬಲಿಸುವುದಿಲ್ಲವೆಂಬ ಅರಿವೂ ನನಗಿದೆ. ಏಕೆಂದರೆ, ನಮ್ಮ ಸಹಾಯಕ್ಕೆ ಬರುವ ಯಾರೇ ಆದರೂ ಸಹಜವಾಗಿ ತಮ್ಮದೇ ಆದ ಷರತ್ತುಗಳನ್ನು ವಿಧಿಸುತ್ತಾರೆ. ವಿದೇಶಿ ಬಂಡವಾಳ ಅಥವಾ ವಿದೇಶಿ ನೆರವಿಗೆ ಸಂಬಂಧಪಟ್ಟಂತೆ ಒಂದು ಮಾತು ಹೇಳಬಯಸುತ್ತೇನೆ. ನಮಗಿಂತಲೂ ಉತ್ತಮ ಸ್ಥಿತಿಯಲ್ಲಿರುವ ಹಾಗೂ ನೆರವು ನೀಡಲು ಸಾಮರ್ಥ್ಯವಿರುವ ರಾಷ್ಟ್ರಗಳು ಭಾರತದ ನೀತಿಗಳನ್ನಾಗಲಿ, ದೃಷ್ಟಿಕೋನವನ್ನಾಗಲಿ ವಸ್ತುನಿಷ್ಠವಾಗಿ ಗ್ರಹಿಸುತ್ತಾರೆಂಬ ಆತ್ಮವಿಶ್ವಾಸ ನನಗೆ ತೃಣಮಾತ್ರವೂ ಇಲ್ಲ."

ಮನಮೋಹನ ಸಿಂಗ್ ಸರ್ಕಾರದ ಸಂಪುಟವನ್ನು ಸೇರದೆ ತಪ್ಪು ಮಾಡಿದೆವೋ ಏನೋ ಎಂದು ಈ ಹೊತ್ತಿನಲ್ಲಿ ಎಡಪಕ್ಷಗಳು ಒಳಗೊಳಗೇ ಚಿಂತಿಸುತ್ತಿದ್ದರೆ ಆಶ್ಚರ್ಯವಿಲ್ಲ. ಈ ಸರ್ಕಾರವು ಎಡಪಕ್ಷಗಳ ಬೆಂಬಲದಿಂದ ನಡೆಯುತ್ತಿದೆಯೋ ಇಲ್ಲವೋ ಎನ್ನುವುದೂ ನೋಡುವವನ ದೃಷ್ಟಿಕೋನವನ್ನು ಅನುಸರಿಸಿ ವಿವಿಧ ಭ್ರಾಮಕ ಚಿತ್ರಕ್ಕೆ ಎಡೆಮಾಡಿಕೊಡಬಹುದು. ವಾಸ್ತವದಲ್ಲಿ ಸರ್ಕಾರ ತನ್ನ ಎಲ್ಲ ಆರ್ಥಿಕ ನೀತಿಗಳನ್ನೂ ೧೯೯೧ರಲ್ಲಿ ಪ್ರಾರಂಭಿಸಿದಂತೆಯೇ ಮುಂದುವರಿಸಿಕೊಂಡು ಹೋಗುತ್ತಿದೆ. ವಾಷಿಂಗ್‌ಟನ್ ಕಾನ್ಸೆನ್ಸಸ್ ಎಂಬ ಕುಖ್ಯಾತ ಆರ್ಥಿಕ ಸುಧಾರಣೆಯ ಮೊದಲನೆಯ ಹಂತವನ್ನು ಇದೇ ಪ್ರಧಾನಿಯೇ ಅಂದು ಅರ್ಥ ಸಚಿವರಾಗಿ ಪ್ರಾರಂಭಿಸಿದರು. ಕಾಂಗ್ರೆಸ್ ಪಕ್ಷವು ಇದರಿಂದ ಅಧಿಕಾರ ಕಳೆದುಕೊಂಡಿದ್ದರಿಂದ ಈ ಅರ್ಥನೀತಿಯಿಂದ ಲಾಭ ಪಡೆದ ವರ್ಗಕ್ಕೆ ಏನೂ ನಷ್ಟವಿಲ್ಲ. ಅದೇ ನೀತಿಯನ್ನು ಅವರಿಗಿಂತಲೂ ತೀವ್ರವಾಗಿ ಚಲಾಯಿಸಿದ್ದು ಎನ್‌ಡಿಎ ದುಷ್ಟಕೂಟ. ಅವರು ಅಧಿಕಾರ ಕಳೆದುಕೊಂಡರೂ ಈ ವರ್ಗಕ್ಕೆ ನಷ್ಟವಿಲ್ಲ. ಪುನಃ ಕಾಂಗ್ರೆಸ್ ಅಧಿಕಾರಕ್ಕೆ ಬಂದು ಈಗ ಈ ಕಾನ್ಸೆನ್ಸಸ್‌ನ ಎರಡನೇ ಹಂತದ ಆರ್ಥಿಕ ಸುಧಾರಣೆಗಳನ್ನು ಪ್ರಬಲವಾಗಿ ಚಲಾಯಿಸುತ್ತಿದ್ದಾರೆ. ಭಾಜಪ ಮತ್ತು ಕಾಂಗ್ರೆಸ್ ಪಕ್ಷಗಳದ್ದು ಈಗ ಚಾಲ್ತಿಗೆ ಬರುತ್ತಿರುವ ಒಂದು ರೀತಿಯ ಗ್ರ್ಯಾಂಡ್ ಕೊಯಲಿಷನ್ ಎಂಬ ಪ್ರಜಾಪ್ರಭುತ್ವದ ಮತವನ್ನು ತಿರುಗುಮುರುಗಾಗಿ ಸುವುದರೊಡನೆ ಸ್ಪಷ್ಟವಾಗುವ ರಕ್ತಸಂಬಂಧ. ಭಾಜಪದ ಕೋಮುವಾದ ಈಗ ಸವಕಲಾಗಿ ಈ ಎರಡೂ ಪಕ್ಷಗಳು ನೇರವಾಗಿ ತೆರೆಮರೆಯಲ್ಲಿ ಸಹಕರಿಸುತ್ತಾ, ಎಡಪಕ್ಷಗಳ ಬೆಂಬಲದಿಂದ ಕಾಂಗ್ರೆಸ್ ಸರ್ಕಾರ ಬದುಕಿದೆ ಎಂಬ ಭ್ರಮೆಯನ್ನು ಮಾತ್ರ ಸಾಧಾರಣ ಜನರ ಕಣ್ಣಿಗೆ ಬೂದಿ ಎರಚಲು ಸೃಷ್ಟಿ ಮಾಡುತ್ತಿವೆ.

ಮನಮೋಹನರು ನೆಹರೂ ಕಾಲದ ಅರ್ಥನೀತಿಯ ಆಂತರ್ಯದಲ್ಲಿ ಅವರ ನೀತಿಗಳಿಗೆ ವಿರೋಧವಾದ ಬಂಡವಾಳದ ನೀತಿಯತ್ತ ಗುಪ್ತಗಾಮಿನಿಯಾಗಿ ಕೆಲಸ ಮಾಡುತ್ತಿದ್ದ ಟ್ರೋಝನ್ ಹಾರ್ಸ್. ಅವರೇ ನೆಹರೂ ಮಾರ್ಗವನ್ನು ತಾವು ಬಿಟ್ಟಿಲ್ಲವೆಂದು, ಎರಡನೆಯ ಪಂಚವಾರ್ಷಿಕ ಯೋಜನೆಯ ಕಡತದಲ್ಲೇ, ಇಂದು ಅನುಸರಿಸುತ್ತಿರುವ ನೀತಿಗಳ ಬಗ್ಗೆಯೂ ತಾವೇ ಬರೆದಿರುವುದಾಗಿಯೂ ಹೇಳಿಕೊಂಡಿದ್ದಾರೆ. ಅಂತರ ರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಪೊಗದಸ್ತಾಗಿ ನಿವೃತ್ತಿವೇತನ ಪಡೆಯುವ ಈ ಅರ್ಥತಜ್ಞರಿಗೆ ಇಂದಿನ ಸರ್ಕಾರದಲ್ಲಿ ಒಂದು ರೂ. ಸಂಬಳ ಪಡೆಯುವುದು ಸರಳ ತೀರ್ಮಾನ. ಕಾರಣ ಅವರು ತಾವು ನಂಬಿರುವ ಖಾಸಗೀಕರಣದ ಬಂಡವಾಳಶಾಹಿ ಮಾರ್ಗದ ಅಭಿವೃದ್ಧಿಯನ್ನು ಈ ದೇಶದಲ್ಲಿ ಸ್ಥಾಪಿಸಲು ಕಂಕಣ ಬದ್ಧರು. ಅದು ಅವರ ಸೇವಾತತ್ಪರತೆಯ ವಿಷಯ. ಅವರು ಈ ವಿಷಯದಲ್ಲಿ ಪ್ರಾಮಾಣಿಕರು ಎಂಬುದರಲ್ಲಿ ಸಂದೇಹವಿಲ್ಲ. ಅವರೊಡನೆ ಕೈಗೂಡಿಸಿರುವ ಶಿಷ್ಯ ಮಾಂಟೆಕ್ ಸಿಂಗ್ ಅಹ್ಲೂವಾಲಿಯಾ ಅದೇ ಗರಡಿಯಲ್ಲಿ ನುರಿತವರು. ಎಲ್ಲ ಯೋಜನಾಬದ್ಧ ಆರ್ಥಿಕ ಮಾರ್ಗವನ್ನೂ ವಿರೋಧಿಸುವ ಕಟ್ಟರ್ ಪಂಥ ಅವರದು. ಅಂಥವರು ನಮ್ಮ ಯೋಜನಾ ಆಯೋಗದ

ಉಪಾಧ್ಯಕ್ಷರಾಗಿರುವುದು ಮತ್ತೊಂದು ವಿಡಂಬನೆ. ಇವರೊಡನೆ ಸೇರಿರುವ ಚಿದಂಬರಂ ವ್ಯಾಪಾರೀ ನಿಪುಣ; ಅದಕ್ಕೆ ಸಂಬಂಧಪಟ್ಟ ಕಾನೂನು ನಿಪುಣ. ಇವರ್ಯಾರಿಗೂ ತಾವಾಗೇ ಚುನಾವಣೆಯಲ್ಲಿ ಗೆಲ್ಲುವ ಸಾಮರ್ಥ್ಯವಿಲ್ಲ. ಆದರೂ ಇವರೇ ನಮ್ಮ ವಿಶ್ವದ ಅತಿ ದೊಡ್ಡ ಪ್ರಜಾಪ್ರಭುತ್ವದ ಮುಂದಾಳುಗಳು; ಇವರೇ ರಾಷ್ಟ್ರದ ಎಲ್ಲ ನೀತಿಗಳನ್ನು ನಿರೂಪಿಸುವವರು. ಮಿಕ್ಕೆಲ್ಲ ರಾಜಕೀಯ ಶಕ್ತಿಗಳೂ ಇವರೊಡನೆ ಸಹಕರಿಸುತ್ತಾ ತಮ್ಮ ಸ್ವಂತಿಕೆಯನ್ನೇ ಕಳೆದುಕೊಂಡಿರುವುದು ನಮ್ಮ ದುರಂತ.

ಯುಪಿಎ, ಎನ್‌ಡಿಎ, ಫಿಕಿ, ಸಿಐಐ (ಸಿಐಎ ಅಲ್ಲ!) ಮುಂತಾದವರು, ಹಾಗೂ ಅವರು ಸ್ಥಾಪಿಸಿ ನಿರ್ವಹಿಸುವ ಪ್ರಚಾರ ಮಾಧ್ಯಮಗಳೂ ದಿನಬೆಳಗಾದರೆ ಎಡಪಕ್ಷಗಳನ್ನು ಪ್ರಗತಿ ವಿರೋಧಿಗಳೆಂದು ಕಟುವಾಗಿ ಪ್ರಹಾರ ಮಾಡುತ್ತಿರುವ ಸಂದರ್ಭದಲ್ಲಿ ಎಡಪಂಥೀಯರ ಕೆಲವು ಅರ್ಥನೀತಿಗಳನ್ನು ಗಮನಿಸುವುದು ಪ್ರಸ್ತುತ. (ಅ) ಸಾರ್ವಜನಿಕ ಉದ್ಯಮಗಳನ್ನು ಖಾಸಗಿಯವರಿಗೆ ಒಪ್ಪಿಸಲು ವಿರೋಧ; (ಆ) ಕಾರ್ಮಿಕರನ್ನು ಖಾಸಗಿ ಕಂಪನಿಗಳು ನಿಯಮಿಸಿಕೊಳ್ಳುವ ಅಥವಾ ವಜಾ ಮಾಡುವ ಸ್ವಾತಂತ್ರ್ಯ ನೀಡುವಂಥ ಕಾನೂನು ಸುಧಾರಣೆಗೆ ವಿರೋಧ; (ಇ) ಭವಿಷ್ಯನಿಧಿ, ಪೆನ್ಷನ್ ಫಂಡ್ ಮುಂತಾದ ಸಾಮಾಜಿಕ ರಕ್ಷಣಾ ನೀತಿಗಳನ್ನು ಕೈಬಿಟ್ಟು ಇಲ್ಲಿ ಶೇಖರವಾಗುವ ಅಗಾಧ ಹಣವನ್ನು ಷೇರುಪೇಟೆಯಲ್ಲಿ ಹೂಡುವುದಕ್ಕೆ ವಿರೋಧ. ಈ ನೀತಿಗೆ ಒಪ್ಪಲಿ ಎಂದು ಒತ್ತಾಯಿಸುವ ತಂತ್ರವಾಗಿ ಈಗ ಭವಿಷ್ಯನಿಧಿಯ ಬಡ್ಡಿಯ ದರವನ್ನು ಕಡಿತ ಮಾಡಿರುವುದಕ್ಕೆ ವಿರೋಧ; (ಈ) ದೇಶದ ಚಿಲ್ಲರೆ ಮತ್ತು ಸಗಟು ಮಾರಾಟ ಕ್ಷೇತ್ರವನ್ನು ವಿದೇಶೀ ವ್ಯಾಪಾರಿಗಳಿಗೆ ಮುಕ್ತವಾಗಿಸುವ ಬಗ್ಗೆ ವಿರೋಧ. ಹೀಗೆಯೇ ಇನ್ನೂ ಹಲವಾರು ಇವೆ – ಟೆಲಿಕಾಂ, ಬ್ಯಾಂಕಿಂಗ್, ಏರ್‌ಲೈನ್ಸ್ ಮುಂತಾದ ಕ್ಷೇತ್ರಗಳಲ್ಲಿ ತ್ವರಿತ ವೇಗದಲ್ಲಿ ಪ್ರವೇಶಿಸುತ್ತಿರುವ ವಿದೇಶೀ ಬಂಡವಾಳ ಮತ್ತು ಸಡಲಿಕೆ ಇತ್ಯಾದಿ. ಮಾಧ್ಯಮಗಳು ಪ್ರಚಾರ ಮಾಡುವಂತೆ ಇವುಗಳನ್ನು ವಿರೋಧಿಸಿ ಎಡಪಕ್ಷಗಳು ಜನತೆಯ ಆಶೋತ್ತರಕ್ಕೆ ವಿರುದ್ಧವಾಗಿ, ದೇಶದ ಆರ್ಥಿಕ ಅಭಿವೃದ್ಧಿಗೆ ಕಂಟಕ ಪ್ರಾಯವಾಗಿ ವರ್ತಿಸುತ್ತಿವೆಯೇ? ಮೇಲೆ ಉಲ್ಲೇಖಿಸಿರುವ ನೀತಿಗಳ ಆಂತರ್ಯದಲ್ಲಿ ನಮ್ಮ ದೇಶ ತನ್ನ ಆರ್ಥಿಕ ಸ್ವಾವಲಂಬನೆಯನ್ನು ಉಳಿಸಿಕೊಳ್ಳಬೇಕೇ, ವಿದೇಶೀ ಬಂಡವಾಳದ ಕೈಗೊಂಬೆಗಳಾಗಬೇಕೇ ಎಂಬ ಪ್ರಶ್ನೆ ಇದೆ. ಈ ಮಾತನ್ನು ಹೇಳಿದಾಗಲೆಲ್ಲಾ ಎಡಪಂಥೀಯ ಚೀನಾ ದೇಶ ನೋಡಿ ಎಂದು ಮೂಗು ಮುರಿಯಲು ಯತ್ನಿಸುತ್ತಾರೆ. ವಾಸ್ತವದಲ್ಲಿ ಚೀನಾದ ಇಂದಿನ ಅರ್ಥನೀತಿ ಎಡಪಂಥೀಯವೇ ಎಂಬುದರ ಬಗ್ಗೆ ಸಾಕಷ್ಟು ವಿವಾದಗಳಿವೆ. ಆದರೆ ನಾವು ಅರ್ಥನೀತಿಯನ್ನು ಚರ್ಚಿಸುವಾಗ ಕೇವಲ ಸೈದ್ಧಾಂತಿಕ ನೆಲೆಯಿಂದಲೇ ನೋಡಬೇಕಾಗಿಲ್ಲ. ವಾಸ್ತವ ದೃಷ್ಟಿ ತುಂಬ ಅಗತ್ಯ. ಚೀನಾದ ಅನುಭವ, ಅದರ ಚಾರಿತ್ರಿಕ-ಸಾಮಾಜಿಕ ಹಿನ್ನೆಲೆ ಇವುಗಳೊಡನೆ ಭಾರತವನ್ನು ಹೋಲಿಸಲು ಸಾಧ್ಯವಿಲ್ಲ. ನಮ್ಮ ಸಾಮಾಜಿಕ ಹಿನ್ನೆಲೆಯಲ್ಲೇ ನಮ್ಮ ನೀತಿಗಳು ಹುಟ್ಟಿಬರಬೇಕು. ಚೀನದೊಳಕ್ಕೆ ಹರಿಯುತ್ತಿರುವ ಬಂಡವಾಳದ ಶೇ. ೭೫ರಷ್ಟು ಪ್ರತಿ ವರ್ಷವೂ ಲಾಭದ ರೂಪದಲ್ಲಿ ಹೊರಗೆ ಹರಿಯುತ್ತಿದೆ ಎಂಬುದನ್ನು ತಿಳಿಯಬೇಕು. ಹಾಗೂ ಅಲ್ಲಿ ಬಂಡವಾಳ ಹೂಡುತ್ತಿರುವವರು ಬಹುತೇಕ ಚೀನೀ ವಿದೇಶಿಗಳು ಎಂಬ ಅಂಶವನ್ನು ಮರೆಯಲಾಗದು. ಚೀನಾದಲ್ಲಿ ಒಂದು ಪಕ್ಷದ ಕಟ್ಟುನಿಟ್ಟಾದ ಆಳ್ವಿಕೆಯಿದ್ದು ಸ್ಥಳೀಯವಾಗಿ ಬಂಡವಾಳಿಗರ ಉದ್ಯಮ ರೂಪದ ಪರ್ಯಾಯ ಸರ್ಕಾರದ ರಚನೆಯೇ ತಲೆಯೆತ್ತದಂತೆ ಕಟ್ಟೆಚ್ಚರವಿಡುವುದು ಅವರಿಗೆ ಸಾಧ್ಯವಾಗಿರುವಂತಿದೆ. ಆರ್ಥಿಕ ಉದಾರೀಕರಣ ಅಲ್ಲಿಯ ಬಹುಭಾಗ ಬಡಜನರಿಗೆ ತಂದಿರುವ ಗೋಳು ಈಗಾಗಲೇ ಸಾಕಷ್ಟು ವರದಿಯಾಗಿದ್ದು, ಅಲ್ಲಿಯ ನಾಯಕರು ಇದನ್ನು ತಾತ್ಕಾಲಿಕ ಬೆಳವಣಿಗೆ ಎಂಬ ಹಾರಿಕೆಯ ಮಾತನಾಡಿರುವುದೂ ದಾಖಲಾಗಿದೆ. ಇಷ್ಟೆಲ್ಲಾ ಹೇಳಿಯೂ ನಾವು ಅವರ ಆರ್ಥಿಕ ಪ್ರಗತಿಯನ್ನು ಮೆಚ್ಚಲೇಬೇಕು. ಅದಕ್ಕಿಂತ ಹೆಚ್ಚಾಗಿ ಗಮನಿಸಬೇಕಾದದ್ದು, ಅವರು ಹೇಗೆ ತಮ್ಮದೇ ಷರತ್ತುಗಳನ್ನು ವಿಧಿಸಿ ವಿದೇಶಿ ಬಂಡವಾಳವನ್ನು ಪಡೆದಿದ್ದಾರೆ ಎಂಬುದು. ಪಾಶ್ಚಿಮಾತ್ಯ ಸರ್ಕಾರಗಳು ಈ ಆರ್ಥಿಕತೆಯ ಸಡಿಲೀಕರಣದ ಮೂಲಕ ಒಳಹೊಕ್ಕು ಅಲ್ಲಿಯ ಕಮ್ಯುನಿಸ್ಟ್ ವ್ಯವಸ್ಥೆಯನ್ನು ಬುಡ ಮೇಲುಮಾಡಲು ಹವಣಿಸಿ, 'ಅರಬನ ಒಂಟೆ'ಯಂತೆ ತಲೆತೂರಿಸಿದ್ದರೆ ಆಶ್ಚರ್ಯವಿಲ್ಲ. ನಮ್ಮಲ್ಲಿ ನಡೆಯುತ್ತಿರುವ ಆರ್ಥಿಕ ಉದಾರೀಕರಣ ಮತ್ತು ಜಾಗತೀಕರಣ ಪ್ರಕ್ರಿಯೆಯು ಚೀನಾದಲ್ಲಿರುವಂತೆ ಸ್ಥಳೀಯರ ನೇತೃತ್ವದಲ್ಲೇ ನಡೆಯುತ್ತಿದೆಯೋ ಇಲ್ಲವೇ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವಬ್ಯಾಂಕಿನ ನೇತೃತ್ವದಲ್ಲಿ ನಡೆಯುತ್ತಿದೆಯೋ? ನಮ್ಮ ನೇತೃತ್ವದಲ್ಲಿ ನಡೆಯುತ್ತಿದ್ದರೆ, ನಮ್ಮ ಚಿಲ್ಲರೆ ವ್ಯಾಪಾರವನ್ನು ವಿದೇಶೀ ಬಂಡವಾಳಕ್ಕೆ ಈಗಲೇ ತೆರೆಯುವ ಈ ಹುಂಬತನಕ್ಕೆ ಅರ್ಥವೇನು? ೪೫೦ ಲಕ್ಷಕ್ಕೂ ಮೀರಿ ನಿರುದ್ಯೋಗಸ್ಥರು ನಮ್ಮ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ದಾಖಲಾಗಿದ್ದಾರೆ. ಖಾಸಗೀಕ್ಷೇತ್ರದ ಸಂಘಟಿಕ ವಲಯದಲ್ಲಿ ಇದೇ ವಿನಿಮಯ ಕೇಂದ್ರದ ದಾಖಲೆಯಂತೆ ೧೯೯೨-೦೨ ಅವಧಿಯಲ್ಲಿ ಕೇವಲ ೩೦,೦೦೦ ಹೊಸ ಉದ್ಯೋಗಗಳು ನಿರ್ಮಾಣವಾದುವು. ಈ ದೇಶದ ಉತ್ಪಾದನೆಗಾಗಿ ಕೆಲಸ ಮಾಡುವ ಕಾರ್ಮಿಕರ ಸಂಖ್ಯೆ ಸುಮಾರು ೬೦ ಕೋಟಿಯಾದರೆ, ಸಂಘಟಿತ ಕ್ಷೇತ್ರವೆನಿಸಿರುವ ಕೈಗಾರಿಕಾ ಕ್ಷೇತ್ರದ ಭಾಗ ಕೇವಲ ೬೨ ಲಕ್ಷ! ಆದರೂ ಎಲ್ಲ ಅರ್ಥನೀತಿಯನ್ನೂ ಈ ಕ್ಷೇತ್ರದ ಹಿತಾಸಕ್ತಿಗಾಗಿಯೇ ನಿರೂಪಿಸಿದರೆ ಹೇಗೆ? ಈ ಕ್ಷೇತ್ರ ವಿಕಾಸವಾಗಿಯೂ, ಹೆಚ್ಚು ಉದ್ಯೋಗ ಸೃಷ್ಟಿಸದೆ ಹೋದರೆ, ನಿರುದ್ಯೋಗ ಕ್ರಮೇಣ ಕಡಿಮೆಯಾಗುವುದಾದರೂ ಹೇಗೆ? ಅಲ್ಲದೆ, ಈ ಕೈಗಾರಿಕೆಗಳು ಉದ್ಯೋಗ ಸೃಷ್ಟಿ ತಮ್ಮ ಹೊಣೆಗಾರಿಕೆಯಲ್ಲವೆಂಬಂತೆ ವರ್ತಿಸುತ್ತಿವೆ. ವಿದೇಶೀ ಪೈಪೋಟಿಯನ್ನು ಎದುರಿಸಲು ತಮ್ಮ ಘಟಕಗಳಲ್ಲಿ ಕಾರ್ಮಿಕರ ಸಂಖ್ಯೆಯನ್ನು ಕಡಿಮೆ ಮಾಡಿಕೊಳ್ಳುತ್ತಿವೆ. ಹಾಗೂ ತಮ್ಮ ಉದ್ದಿಮೆಯ ನಿರ್ವಹಣೆಯ ಹೊಣೆಯನ್ನು ವಿದೇಶಿ ಪಾರ್ಟ್ನರ್‌ಗಳಿಗೆ ವಹಿಸುತ್ತಿವೆ. ಇದು ವಿಶ್ವ ಹಣಕಾಸು ಸಂಸ್ಥೆ ಹೇಳುವ ರಾಚನಿಕ

> "ಬಂಡವಾಳ ಹೂಡಿಕೆಗಾಗಿ ಭಾರತವು ಪಶ್ಚಿಮ ರಾಷ್ಟ್ರಗಳತ್ತ ನೋಡಬೇಕಿಲ್ಲ; ಬದಲು, ಇಡೀ ಜಗತ್ತಿನಲ್ಲೇ ಅತಿ ಹೆಚ್ಚು ಉಳಿತಾಯದ ಹೆಚ್ಚುವರಿ ಹಣ ಹೊಂದಿರುವ ಪೂರ್ವ ಮತ್ತು ಆಗ್ನೇಯ ಏಷ್ಯಾ ರಾಷ್ಟ್ರಗಳೊಡನೆ ನಿಕಟ ಸಂಬಂಧಗಳನ್ನು ಹೊಂದಲು ಮುಂದಾಗಬೇಕು."
>
> *ಡಾ|| ಮನಮೋಹನ್ ಸಿಂಗ್*
>
> (ಕೌಲಾಲಂಪುರದಲ್ಲಿ ಇತ್ತೀಚೆಗೆ ಜರುಗಿದ ಆಸಿಯಾನ್ ರಾಷ್ಟ್ರಗಳ ಸಮ್ಮೇಳನದ ಸಂದರ್ಭದಲ್ಲಿ ನೀಡಿದ ಹೇಳಿಕೆಯ ಆಯ್ದ ಭಾಗ)

ಹೊಂದಾಣಿಕೆಯ ವೈಖರಿ. ಇಂತಹ ಪರಿಸ್ಥಿತಿಯಲ್ಲಿ ನಮ್ಮ ದೇಶದ ಚಿಲ್ಲರೆ ಮಾರಾಟ ಕ್ಷೇತ್ರಕ್ಕೆ ವಿದೇಶದ ವಾಲ್‌ಮಾರ್ಟ್ ತರಹದ ಬೃಹತ್ ಮಳಿಗೆಗಳು ಬಂದರೆ ಆಗಬಹುದಾದ ಪರಿಣಾಮವೆಂದರೆ, ನಾವು ಈಗ ಈ ಕ್ಷೇತ್ರದಲ್ಲಿ ಉದ್ಯೋಗ ನೀಡಿರುವ ಸುಮಾರು ೫ ಕೋಟಿ ಜನರಿಗೆ ಬದಲಾಗಿ, ಅದೇ ಪ್ರಮಾಣದ ಉದ್ಯಮವನ್ನು ಕೇವಲ ಹದಿನಾಲ್ಕು ಲಕ್ಷ ಜನರು ನಿರ್ವಹಿಸುವ ವ್ಯವಸ್ಥೆ. ಮಾನವಕೇಂದ್ರಿತ ಉತ್ಪಾದನಾ ವ್ಯವಸ್ಥೆಯನ್ನು ಮಂಡಿಸಿದ ಗಾಂಧಿ-ನೆಹರು ಇಬ್ಬರನ್ನೂ ದೇಶದ್ರೋಹಿಗಳಂತೆ ಚಿತ್ರಿಸುವ ಇಂದಿನ ಈ ನೀತಿಗೆ ಏನು ಹೇಳಬೇಕು? ರಾಷ್ಟ್ರೀಯ ಸ್ವಾವಲಂಬನೆಯನ್ನು ಕೈಬಿಡುವುದೇ ಜಾಗತೀಕರಣವೆಂದು ವ್ಯಾಖ್ಯಾನಿಸುವವರಿಗೆ ಸ್ವಾವಲಂಬನೆಯ ಅರ್ಥವೂ ತಿಳಿಯದು, ವಿಶ್ವಮಾನವ ಸಮುದಾಯದ ಕಲ್ಪನೆಯೂ ಇಲ್ಲ ಎಂದು ಹೇಳದೆ ವಿಧಿಯಿಲ್ಲ.

ಭವಿಷ್ಯನಿಧಿಗೆ ಹೆಚ್ಚು ಬಡ್ಡಿ ನೀಡುವುದು ಎಂದರೇನು? ಬೇರೆ ಯಾರಿಗೂ ದಕ್ಕದ ಹೆಚ್ಚು ದರವನ್ನು ಬೇಡುವ ಈ ಕಾರ್ಮಿಕರು ಸ್ವಾರ್ಥಿಗಳೇ? ಮೊದಲಿಗೆ ಭವಿಷ್ಯನಿಧಿ, ಸಣ್ಣ ಉಳಿತಾಯ ಮುಂತಾದುವು ವ್ಯಾಪಾರವಲ್ಲ. ಅವು ಮೂಲತಃ ಸಾಮಾಜಿಕ ರಕ್ಷಣಾ ಕವಚಗಳು. ಇಲ್ಲಿ ಸಂಗ್ರಹವಾಗುವ ಮೊತ್ತವು ದೇಶದ ಇನ್ನಾವ ಬ್ಯಾಂಕುಗಳಲ್ಲೂ ಆಗುವುದಿಲ್ಲ ಬಂಡವಾಳಶಾಹಿ ಅರ್ಥನೀತಿಯನ್ವಯ ಈ ಉಳಿತಾಯವು ರಾಷ್ಟ್ರದ ಅಭಿವೃದ್ಧಿಗೆ ಬಂಡವಾಳವಾಗಬೇಕು. ಈಗ ಆಗುತ್ತಿರುವುದು ಇಂದಿನ ಸರ್ಕಾರದ ಆಡಳಿತದಲ್ಲಿ ಈ ನಿಧಿ ಹೆಚ್ಚು ಲಾಭ ಸಂಪಾದಿಸದೆ, ದುಂದುವೆಚ್ಚಕ್ಕೆ ಒಳಗಾಗಿರುವುದು. ಅದನ್ನು ಸರಿಪಡಿಸಿದರೆ ಹೆಚ್ಚು ಬಡ್ಡಿ ನೀಡಬಹುದು. ನಮ್ಮ ಖಾಸಗೀಕ್ಷೇತ್ರಕ್ಕೆ ಈಗ ಸರ್ಕಾರದ ಉದ್ದೇಶಪೂರ್ವಕ ನೀತಿಯಂತೆ ಕಡಿಮೆ ಬಡ್ಡಿಯಲ್ಲಿ ಹಣ ದೊರೆಯುತ್ತಿದೆ. ಇದರ ಪರಿಣಾಮವೆಂದರೆ ಖಾಸಗೀಕ್ಷೇತ್ರ ಗಳಿಸುತ್ತಿರುವ ಅಪಾರ ಲಾಭ. ಇದು ಸಾಲದೆಂದು ಅವರಿಗೆ ತೆರಿಗೆಯಲ್ಲಿ ಅಪಾರ ಕಡಿತ ನೀಡಲಾಗಿದೆ. ನಮ್ಮ ದೇಶದಲ್ಲಿನ ತೆರಿಗೆ ದರವು ಪ್ರಪಂಚದಲ್ಲೇ ಅತ್ಯಂತ ಕಡಿಮೆಯಿರುವ ಕೆಲವು ರಾಷ್ಟ್ರಗಳಲ್ಲಿ ಒಂದು ಎಂದು ತಜ್ಞರು ಪದೇಪದೇ ಹೇಳಿದ್ದಾರೆ. ಇವನ್ನೆಲ್ಲಾ ಗಮನಿಸಿದರೆ, ಮಾರುಕಟ್ಟೆಯ ಉದಾರವಾದದ ಅರ್ಥನೀತಿಯಂತೆಯೇ ಭವಿಷ್ಯನಿಧಿಯ ಹಣ ಮತ್ತು ಬ್ಯಾಂಕಿನ ಹಣವನ್ನು ಇಷ್ಟು ಕಡಿಮೆ ದರದಲ್ಲಿ ನೀಡುತ್ತಿರುವುದು ಬಂಡವಾಳದ ಆರ್ಥಿಕ ನಿಯಮದಂತೆಯೇ ಒಂದು ಅಪರಾಧ. ಹೀಗಿರುವಾಗ ಉದ್ದೇಶಪೂರ್ವಕವಾಗಿಯೇ ಭವಿಷ್ಯನಿಧಿಗೆ ಒಂದಿಷ್ಟು ನ್ಯಾಯವಾದ ಬಡ್ಡಿ ನೀಡಿ ಅಂದರೆ ತಪ್ಪೇನು? ಸ್ಪಷ್ಟ. ತಜ್ಞರ ಒಂದು ಅಧ್ಯಯನದಂತೆ ಇಂದಿನ ಬಡ್ಡಿದರದಲ್ಲಿ, ಉದ್ಯಮಪತಿಗಳು ಎಲ್ಲ ವೆಚ್ಚ ನಿರ್ವಹಿಸಿದ ನಂತರ ಶೇ. ೧೫ರಷ್ಟು ವಾಸ್ತವ ಅನುಕೂಲವನ್ನು ಗಿಟ್ಟಿಸಿಕೊಂಡಿದ್ದಾರೆ. ಸಣ್ಣ ಉಳಿತಾಯಗಾರರು ಏಕೆ ಬಂಡವಳಿಗರಲ್ಲ? ಅವರದ್ದೇ ಬಂಡವಾಳ ತಾನೆ ಇಂತಹ ಉದ್ಯಮಗಳಲ್ಲೆಲ್ಲಾ ಹೂಡಿರುವುದು? ಅವರಿಗೇಕೆ ಅದೇ ೧೫% ನೀಡಲು ಈ ಚೌಕಾಸಿ? ದೇಶದ ಕಾರ್ಮಿಕರು ಮತ್ತು ಇನ್ನಿತರ ಉತ್ಪಾದಕರು, ಸಂಬಳದ ಮೇಲೆ ಜೀವಿಸುವವರು ತಮ್ಮ ಜೀವನ ನಿರ್ವಹಣೆಗಾಗಿ ಸರಕುಗಳನ್ನು ಅಪಾರವಾಗಿ ಬೇಡಿದಾಗ ಅಲ್ಲವೇ ಬಂಡವಳಿಗರ ಉದ್ಯಮ ವಿಕಾಸವಾಗುವುದು? ತಾವು ಕುಳಿತ ಕೊಂಬೆಯನ್ನೇ ಕಡಿಯುವ ಈ ಆತ್ಮಘಾತುಕ ಕಾರ್ಮಿಕ ವಿರೋಧಿ ನೀತಿ ಏಕೆ? ಪಶ್ಚಿಮದ ಎಲ್ಲ ಸರ್ಕಾರಗಳೂ ಅವರ ಕೃಷಿಕ್ಷೇತ್ರವನ್ನು ರಕ್ಷಿಸಿಕೊಳ್ಳುತ್ತಿರುವುದು ಬಂಡವಾಳಶಾಹಿ ನೀತಿಗೆ ವಿರುದ್ಧವಲ್ಲವೆಂದಾದರೆ ನಾವೇಕೆ ಅದನ್ನು ಅನುಕರಿಸುವುದಿಲ್ಲ? ಅವರು ನಮ್ಮ ಕೃಷಿಕ್ಷೇತ್ರದ ಸರಕುಗಳಿಗೆ ಮುಕ್ತ ಪ್ರವೇಶ ಕೊಟ್ಟಾಗಲೂ, ನಾವು ಮುಕ್ತ ಪೈಪೋಟಿಯಲ್ಲಿ ಉಳಿದು, ಬದುಕುವ ಸಾಮರ್ಥ್ಯವನ್ನು ಇಂದು ಪಡೆದಿದ್ದೇವೆಯೇ? ಶತಮಾನಗಳ ಕಾಲ ಆ ಸರ್ಕಾರಗಳು ತಮ್ಮ ಆಂತರಿಕ ಕ್ಷೇತ್ರವನ್ನು ಪೈಪೋಟಿಯಿಂದ ರಕ್ಷಿಸಿಕೊಂಡಿದ್ದರಿಂದಲೇ ಅವರು ಇಂದು ಬಲಾಢ್ಯರಾಗಿರುವುದು ಎನ್ನುವುದು ಸ್ಪಷ್ಟ. ನಾವಾದರೂ ಅದೇ ಮಾರ್ಗವನ್ನು ಹಿಡಿಯದೇ ಬೇರೆ ದಾರಿ ಇಲ್ಲ. ಸಾಂಪ್ರದಾಯಿಕ ಅರ್ಥಶಾಸ್ತ್ರದಂತೆ ಒಂದು ರಾಷ್ಟ್ರದ ಆರ್ಥಿಕತೆಯ ಉತ್ಪಾದನೆಯ ಬಹುಭಾಗವನ್ನು ಆಂತರಿಕವಾಗಿಯೇ ಬಳಸಬೇಕು. ಅದಕ್ಕೆ ತಕ್ಕ ಬೇಡಿಕೆ ಉಂಟಾಗುವಂತೆ ಜನತೆಯ ಮಟ್ಟದಲ್ಲಿ ಆದಾಯವನ್ನು ವಿಸ್ತರಿಸಿಕೊಳ್ಳಬೇಕು. ಅದು ನಡೆಸುವ ಅಂತರರಾಷ್ಟ್ರೀಯ ವ್ಯಾಪಾರ, ತಂತ್ರಜ್ಞಾನವನ್ನು ಹಾಗೂ ನಮ್ಮಲ್ಲಿಲ್ಲದ್ದನ್ನು ಹೊರಗಿನಿಂದ ತರಿಸಿಕೊಳ್ಳಲು, ಹಾಗೂ ಅವರಲ್ಲಿದ್ದದ್ದನ್ನು ನಾವು ಅವರಿಗೆ ಮಾರಲು. ಅಂತರರಾಷ್ಟ್ರೀಯ ವ್ಯಾಪಾರ ಒಂದು ದೇಶದ ವ್ಯಾಪಾರದ ಬಹುಭಾಗವಾಗಲಾರದು. ಇನ್ನೊಂದು ವಿಷಯ. ಒಂದು ದೇಶದ ಉತ್ಪಾದನೆಯ ಕ್ಷೇತ್ರಕ್ಕೆ ವಿವಿಧ ಕ್ಷೇತ್ರಗಳ ಕೊಡುಗೆ ಇದೆ. ಈ ಕೆಳಗಿನ ಕೋಷ್ಟಕವನ್ನು ಗಮನಿಸಿ:

**ಜಿಡಿಪಿಗೆ ಕೊಡುಗೆ (ಶೇಕಡಾವಾರು) ಹೋಲಿಕೆ**

| ಕ್ಷೇತ್ರ | ಭಾರತ | ಚೀನಾ |
|---|---|---|
| ಕೃಷಿ | ೨೨.೧ | ೯.೩ |
| ಕೈಗಾರಿಕೆ | ೨೧.೭ | ೬೨.೨ |
| ಸೇವಾಕ್ಷೇತ್ರ | ೫೬.೭ | ೨೮.೫ |



ಹೋಗಲಿ ಬಿಡು, ಇನ್ನು ಮೇಲೆ ಡಾನ್ಸ್ ಬಾರಿಗೆ ಹೋಗೋಣ. ಅಲ್ಲೂ ಅದೇ ಸಿಕ್ಕುತ್ತಂತೆ...

ನಮ್ಮ ದೇಶದ ಆರ್ಥಿಕತೆ ಕೃಷಿಯನ್ನೂ, ಸೇವಾಕ್ಷೇತ್ರವನ್ನೂ ಅವಲಂಬಿಸಿದ್ದು, ಆದರೂ ಸೇವಾಕ್ಷೇತ್ರದಲ್ಲಿ ಮಾತ್ರ ಬೆಳೆದು ಒಂದು ರೀತಿ ಅಸಮತೋಲತೆಯನ್ನು ಪಡೆದಿದ್ದರೆ, ಚೀನಾದ ಕೈಗಾರಿಕಾ ವಲಯದಲ್ಲಿ ಮಹತ್ತರ ಪ್ರಗತಿಯಾಗಿದ್ದು, ಅದು ಸಮತೋಲನವನ್ನು ಪಡೆದಿದೆ. ಈ ಸಾಧನೆ ಅಲ್ಲಿಯ ಕಮ್ಯುನಿಸ್ಟ್ ಸರ್ಕಾರದ ದಶಕಗಳ ಯೋಜನಾಬದ್ಧ ನೀತಿಯ ಸಾಧನೆ. ನಮ್ಮ ಖಾಸಗಿ ಉದ್ಯಮಪತಿಗಳು ಇಂಥ ಸಾಧನೆಯನ್ನು ಮಾಡಲು ಅಸಮರ್ಥವಾಗಿ, ಸರ್ಕಾರದ ಸಹಾಯ, ವಿದೇಶಿಗಳ ಬಂಡವಾಳದ ಹಾಗೂ ನಿರ್ವಹಣಾ ಚಾತುರ್ಯದ ಸಹಾಯ ಬೇಡುತ್ತಿರುವುದು ಒಂದು ವಿಪರ್ಯಾಸ. ಬಂಡವಾಳ ವ್ಯವಸ್ಥೆಯ ಬೆಳವಣಿಗೆಗಾದರೂ ಇಂದಿನ ಆರ್ಥಿಕ ನೀತಿ ಸಹಾಯಕವಾಗುತ್ತಿದೆಯೇ? ಅಥವಾ ಕೇವಲ ಸಂಪತ್ತಿನ ಅನಾರೋಗ್ಯಕರ ಕೇಂದ್ರೀಕರಣ ಮಾತ್ರ ಸಾಧಿಸಲ್ಪಟ್ಟಿದೆಯೇ? ಇದು ಯೋಜನಾಬದ್ಧ, ಖಾಸಗೀ-ಸಾರ್ವಜನಿಕ ಎರಡಕ್ಕೂ ಅವಕಾಶವಿದ್ದ ನೀತಿಯನ್ನು ಕೈಬಿಟ್ಟ, ನಮ್ಮ ಬಂಡವಾಳದ ರಾಜಕೀಯ ಅರ್ಥಶಾಸ್ತ್ರದ ಪರಿಸ್ಥಿತಿಯಾದರೆ ಎಡಪಂಥೀಯರ ಬಳಿ ಎಲ್ಲ ಸಮಸ್ಯೆಗಳಿಗೂ ಪರಿಹಾರ ಸ್ಪಷ್ಟವಿದೆಯೆ? ಎಡಪಂಥೀಯ ನಾಯಕರೊಬ್ಬರ ಇತ್ತೀಚಿನ ಭಾಷಣದ ಧಾಟಿ ಹೀಗಿದೆ: ''ದೇಶದ ಸಾರ್ವಜನಿಕ ಉದ್ದಿಮೆಗಳನ್ನು ಪ್ರಾರಂಭಿಸಿದ್ದು ರಾಷ್ಟ್ರದ ಖಾಸಗೀಕ್ಷೇತ್ರವನ್ನು ರಕ್ಷಿಸುವುದಕ್ಕಾಗಿ; ನಾವು ಸಾರ್ವಜನಿಕ ಕ್ಷೇತ್ರವನ್ನು ರಕ್ಷಿಸುವುದಕ್ಕೋಸ್ಕರ ಹೋರಾಟ ಮಾಡಿ, ನವರತ್ನಗಳನ್ನು ರಕ್ಷಿಸಿದ್ದೇವೆ!'' ''ವಿದೇಶಿ ಬಂಡವಾಳ ರಾಷ್ಟ್ರದ ಹಿತಾಸಕ್ತಿಗಾಗಿ, ಉದ್ಯೋಗ ನಿರ್ಮಾಣಕ್ಕಾಗಿ, ರಾಷ್ಟ್ರದ ಸಾರ್ವಭೌಮತ್ವವನ್ನು ರಾಜಿ ಮಾಡಿಕೊಳ್ಳದೆ, ಅಮೂಲ್ಯ ರಾಷ್ಟ್ರೀಯ ಸಂಪತ್ತುಗಳನ್ನು ಸೂರೆ ಮಾಡದೆ ಬಂದರೆ ಬರಲಿ!'' ''ನಾವು ಜಾಗತೀಕರಣವನ್ನು ತಡೆಹಿಡಿಯಬೇಕು. ನಮ್ಮಿಂದ ವಿದೇಶೀ ಬಂಡವಾಳದ ಮುನ್ನುಗ್ಗುವಿಕೆಯನ್ನು ತಡೆಯಲಾಗುವುದಿಲ್ಲ. ಯಾವುದೇ ಷರತ್ತುಗಳಿಲ್ಲದೆ ಬಂಡವಾಳ ಬಂದರೆ ಬರಲಿ!'' ಇಂಥ ಭಾಷಣ ಕೇಳಿದ ಯಾರಿಗೇ ಆಗಲಿ ಇವರ ನಿಲುವು ಏನು ಎಂದು ಸ್ಪಷ್ಟವಾಗುತ್ತದೆಯೇ? ಎಡಪಂಥೀಯ ಸಿದ್ಧಾಂತವೂ ಸದ್ಯದ ಆರ್ಥಿಕ ಬೆಳವಣಿಗೆಯೆಂದರೆ ರಾಷ್ಟ್ರೀಯ ಬೂರ್ಷ್ವಾ ಆರ್ಥಿಕ ವ್ಯವಸ್ಥೆ ತನ್ನ ಸಂಪೂರ್ಣ ಸಾಧ್ಯತೆಯನ್ನೆಲ್ಲಾ ಪೂರ್ಣಗೊಳಿಸಿಕೊಳ್ಳುವುದು ಎಂದು ವಿಶ್ಲೇಷಿಸುವುದಾದರೆ, ಮುಂದೆ ೨೦೫೧ನೇ ವರ್ಷದಲ್ಲಿ ಆಗಬಹುದಾದ ಕಮ್ಯುನಿಸ್ಟ್ ಕ್ರಾಂತಿಯ ಬಗ್ಗೆ ಅಧ್ಯಯನ ಮಾಡುತ್ತಲೇ, ಇಂದಿನ ಆರ್ಥಿಕ ವಿಕಾಸದಲ್ಲಿ ಗೊಂದಲವಿಲ್ಲದೆ ಭಾಗವಹಿಸುವುದಾದರೆ, ಬೂರ್ಷ್ವಾ ಪ್ರಜಾಪ್ರಭುತ್ವ ಪದ್ಧತಿಯನ್ನು ಬಳಸಿಕೊಂಡು ಅವರು ಅಧಿಕಾರ ಹಿಡಿಯುವುದು ಸಾಧ್ಯವಾಗಬಹುದು. ಗೊಂದಲವಿಲ್ಲದ ನೀತಿಗಳನ್ನು ನೂರಕ್ಕೆ ನೂರು ಕಾರ್ಯಗತಗೊಳಿಸುವುದರಲ್ಲಿ ಈ ಪಕ್ಷದ ಸದಸ್ಯರು ಬೇರೆಲ್ಲರಿಗಿಂತ ನಿಪುಣರು, ಸಮರ್ಥರು ಮತ್ತು ಪ್ರಾಮಾಣಿಕರು. ಈ ಬಗ್ಗೆ ಮುಕ್ತ ಚರ್ಚೆಯಾಗಬೇಕು.

**ಕೆ. ಎಸ್. ಪಾರ್ಥಸಾರಥಿ**
ಸಿ-೧, ನಾಗಾರ್ಜುನ ಎನ್‌ಕ್ಲೇವ್, ೭೬/ಎ, ೧೪ನೇ ಕ್ರಾಸ್ ಜೆ.ಪಿ.ನಗರ
೧ನೇ ಹಂತ, ಬೆಂಗಳೂರು - ೫೬೦ ೦೭೮

# ಅರಿವಿನಿಂದ ಬದಲಾವಣೆಯ ಕಡೆಗೆ



**ಹ**ತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಮಹಿಳೆಯರಿಗೆ ಶಿಕ್ಷಣದ ಬಾಗಿಲು ತೆರೆದದ್ದು ಸಮಾಜವನ್ನು ಸುಧಾರಿಸುವ ದೃಷ್ಟಿಯಿಂದ. ಸಾಮಾಜಿಕ ಮೌಢ್ಯಗಳಿಂದ ತುಂಬಿದ್ದ ಭಾರತೀಯ ಸಮಾಜದಲ್ಲಿ ಹೆಣ್ಣನ್ನು ಅಂಧಕಾರದ ಕೂಪದಿಂದ ಮೇಲೆತ್ತಿ ಅವರ ಸ್ಥಿತಿಗತಿಯ ಬಗ್ಗೆ ಅರಿವು ಮೂಡಿಸುವ ಪ್ರಯತ್ನವಾಗಿ ಮಹಿಳಾ ಶಿಕ್ಷಣಕ್ಕೆ ಒತ್ತುಕೊಡಲಾಯಿತು. ಮಹಿಳೆಯರು ತಮ್ಮ ಸಾಮಾಜಿಕ ಕೌಟುಂಬಿಕ ಪಾತ್ರಗಳನ್ನು ಇನ್ನೂ ಹೆಚ್ಚಿನ ದಕ್ಷತೆಯಿಂದ ನಿರ್ವಹಿಸುವಲ್ಲಿ ಶಿಕ್ಷಣವು ಸಹಕಾರಿಯಾಗಲೆಂದು ಭಾವಿಸಲಾಗಿತ್ತು. ಆದರೂ ಮಹಿಳಾ ಶಿಕ್ಷಣವನ್ನೇ ತಮ್ಮ ಬದುಕಿನ ಮುಖ್ಯ ಹೋರಾಟದ ಸೂತ್ರವನ್ನಾಗಿ ಮಾಡಿಕೊಂಡ ಜ್ಯೋತಿ ಬಾ ಫುಲೆ, ವಿದ್ಯಾಸಾಗರ, ಕರ್ವೆ, ಸಾವಿತ್ರಿಬಾಯಿ ಫುಲೆ, ಪಂಡಿತಾ ರಮಾಬಾಯಿ ಮುಂತಾದವರು ಮಹಿಳಾ ಶಿಕ್ಷಣವನ್ನು ನೀಡುವುದು ಸಾಮಾಜಿಕ ನ್ಯಾಯವೆಂದು ಬಗೆದರು. ಸಾಂಪ್ರದಾಯಿಕ ಸಮಾಜದ ಎಲ್ಲ ಪ್ರತಿರೋಧಗಳ ನಡುವೆಯೂ ಮಹಿಳಾ ಶಿಕ್ಷಣದ ಚಳುವಳಿಯನ್ನು ಎತ್ತಿಹಿಡಿದ ಸಾವಿತ್ರಿಬಾಯಿ ಫುಲೆ ''ಶಿಕ್ಷಣವೊಂದೇ ಮನುಷ್ಯನ ಅಜ್ಞಾನ ಮತ್ತು ಅಮಾನವೀಯ ವರ್ತನೆಯನ್ನು ಹೋಗಲಾಡಿಸಲು ಸಾಧ್ಯ'' ಎಂದು ಪ್ರತಿಪಾದಿಸಿದರು.

ಸಮಾಜ ಸುಧಾರಕರ ಇಂತಹ ಪ್ರಯತ್ನಗಳಾಚೆ ಮಹಿಳಾ ಶಿಕ್ಷಣವನ್ನು ಚಳುವಳಿಯಾಗಿ ಕೈಗೆತ್ತಿಕೊಂಡವರು ಮಹಿಳಾ ಹೋರಾಟಗಾರ್ತಿಯರು. ೧೯೨೭ರಲ್ಲಿ ಸ್ಥಾಪಿತವಾದ ಅಖಿಲ ಭಾರತ ಮಹಿಳಾ ಕಾಂಗ್ರೆಸ್ ಮಹಿಳಾ ಶಿಕ್ಷಣವನ್ನೇ ಮುಖ್ಯ ಬೇಡಿಕೆಯನ್ನಾಗಿ ಮಾಡಿಕೊಂಡಿತು. ಬಾಲಕಿಯರಿಗಾಗಿ ಪ್ರತ್ಯೇಕ ಶಾಲೆ ಹಾಗೂ ಪಠ್ಯಕ್ರಮಗಳನ್ನು ಒತ್ತಾಯಿಸಲಾಯಿತು. ಭಾರತ ಸ್ವತಂತ್ರವಾಗುವ ವೇಳೆಗೆ ಸಮಾಜದಲ್ಲಿ ಹೆಣ್ಣು-ಗಂಡುಗಳಿಗಿಬ್ಬರಿಗೂ ಶಿಕ್ಷಣ ಅಗತ್ಯವಾಗಿ ಬೇಕೆಂಬ ಅಭಿಪ್ರಾಯ ರೂಪಿಸಲು ಸಾಧ್ಯವಾಯಿತಾದರೂ ಅದಕ್ಕೆ ಬೇಕಾದ ಸಂಪನ್ಮೂಲಗಳ ಸಂರಚನೆ ಸಮಾಜದಲ್ಲಿ ಸಿದ್ಧವಾಗಲಿಲ್ಲ. ಹತ್ತೊಂಬತ್ತನೇ ಶತಮಾನದ ಸಮಾಜ ಸುಧಾರಕರು ಮತ್ತು ರಾಷ್ಟ್ರೀಯ ವಿಮೋಚನಾ ಚಳುವಳಿಯ ನಾಯಕರು ಕನ್ಯಾ ಶಿಕ್ಷಣಕ್ಕೆ ನೀಡಿದ ವಿಶೇಷ ಒತ್ತು ಮತ್ತು ಪ್ರೋತ್ಸಾಹದಿಂದಾಗಿ ಮಹಿಳೆಯರಿಗೆ ಅಕ್ಷರ ಕಲಿಕೆಯ ಬಾಗಿಲುಗಳೂ ವಿಶಾಲವಾಗಿ ತೆರೆದುಕೊಂಡವು. ಹೀಗೆ ಅಕ್ಷರ ಕಲಿತು ಉದ್ಯೋಗ ಅರಸಿಹೋದ ಮಹಿಳೆಯರು ಮತ್ತು ಅಕ್ಷರ ಕಲಿಯದಿದ್ದರೂ ದುಡಿಮೆಯ ರಂಗದಲ್ಲಿ ಆದಾಗಲೇ ಶ್ರಮವಹಿಸಿ ದುಡಿಯುತ್ತಿದ್ದ ಮಹಿಳೆಯರು ವಾಸ್ತವ ಸತ್ಯವಾಗಿದ್ದರೂ ಸಾಂಪ್ರದಾಯಿಕ ಹೆಂಡತಿ ಮತ್ತು ತಾಯಿಯ ಪಾತ್ರದ ನಿರೀಕ್ಷೆಗಳು ಮತ್ತು ಅವುಗಳನ್ನು ಸುತ್ತುವರಿದ ನೀತಿ ಮೀಮಾಂಸೆಯ ಪದರಗಳನ್ನೇನೂ ಮಹಿಳಾ ಶಿಕ್ಷಣ ಅಲುಗಾಡಿಸಲಿಲ್ಲ.

ಇಂದು ನಾವು ಮಹಿಳಾ ಶಿಕ್ಷಣದಿಂದ ಮಹಿಳಾ ಅಧ್ಯಯನ, ಮಹಿಳಾ ವಿದ್ಯಾಲಯದ ಪರಿಕಲ್ಪನೆಯತ್ತ ಕ್ರಮಿಸಿ ಬಂದಿದ್ದೇವೆ. ಕಳೆದೆರಡು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಮಹಿಳಾ ವಿದ್ಯಾಲಯವೊಂದು ಸ್ಥಾಪಿತವಾಗಲಿದೆಯೆಂಬ ಸುದ್ದಿ ಬಂದಾಗ ಅದರ ನಾಮಕರಣದ ಅವಾಂತರ ಸುದ್ದಿ ಮಾಡಿದ್ದು ನಮ್ಮ ನೆನಪಿನಿಂದ ಮರೆಯಾಗಿಲ್ಲ. ಅಕ್ಕಮಹಾದೇವಿಯ ಹೆಸರಿಡಬೇಕೆಂದು ಕೆಲವರು, ಸೋನಿಯಾ ಗಾಂಧಿಯ ಹೆಸರಿಡಬಹುದೆಂದು ಅದನ್ನು ವಿರೋಧಿಸುವ ಮತ್ತೆ ಕೆಲವರು – ಒಟ್ಟಿನಲ್ಲಿ ಮಹಿಳಾ ವಿಶ್ವವಿದ್ಯಾಲಯಕ್ಕೆ ನಾಮಕರಣ ಮಾಡುವುದೇ ತಮ್ಮ ಪಕ್ಷದ ಮುಖ್ಯ ಕಾರ್ಯಕ್ರಮವೆಂಬಂತೆ ದೊಂಬರಾಟ ನಡೆಸಿದ ರಾಜಕಾರಣಿಗಳು ಎಂದಿನಂತೆ 'ಹೆಣ್ಣು' ಎಂಬ ವಿಷಯವನ್ನು ತಮ್ಮ ಪ್ರಚಾರ ತಂತ್ರ ಮಾಡಿಕೊಂಡರು. ಒಟ್ಟಿನಲ್ಲಿ ಪ್ರಾದೇಶಿಕ ಅಸಮಾನತೆಯ ನಿವಾರಣೆಗೆ ಕಾಂಗ್ರೆಸ್ ಸರ್ಕಾರ ಕಂಡುಕೊಂಡ ಪರಿಹಾರ ಮಾರ್ಗ ಬಿಜಾಪುರ ಜಿಲ್ಲೆಗೆ ಮಹಿಳಾ ವಿಶ್ವವಿದ್ಯಾಲಯವನ್ನು ಕೊಡುಗೆಯಾಗಿ ನೀಡಿದ್ದು. ತಮ್ಮ ಅಧಿಕಾರಾವಧಿಯಲ್ಲೇ ಈ ಮಹಿಳಾ ವಿಶ್ವವಿದ್ಯಾಲಯ ಆರಂಭವಾಗಬೇಕೆಂದು ಮಹಿಳಾ ಮತದಾರರ ಮತಗಳತ್ತ ದೃಷ್ಟಿ ನೆಟ್ಟ ಒಂದು ರಾಜಕೀಯ ತಂತ್ರವಿದು. ಸರ್ಕಾರ ಈ ಯೋಜನೆಯ ಬಗ್ಗೆಯೇ ಗಂಭೀರವಾಗಿರಲಿಲ್ಲವೆಂದು ಈ ವಿಶ್ವವಿದ್ಯಾಲಯದ ಸ್ವರೂಪ, ಕಾರ್ಯವೈಖರಿ ನೋಡಿದರೆ ಗಮನಕ್ಕೆ ಬರುತ್ತದೆ. ಶಿಕ್ಷಣ ಕ್ಷೇತ್ರದ ಅನುಭವ ಸಂಪನ್ನರ ಸಲಹೆ, ಸಹಕಾರ ಪಡೆಯದೆ ತಮ್ಮ ಮೂಗಿನ ನೇರಕ್ಕೆ, ತಮ್ಮ ಅಗತ್ಯಕ್ಕೆ ಸರಿಹೊಂದುವಂತೆ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿ, ನಡೆಸುತ್ತಿರುವುದರ ರೀತಿಯನ್ನು ನೋಡಿದಾಗ ಮಹಿಳೆಯ ಬಗೆಗಿನ ತಿಳುವಳಿಕೆಯನ್ನು ವಿಸ್ತರಿಸಲು ಇಲ್ಲಿಯವರೆಗೂ ನಡೆದಿರುವ ಮಹಿಳಾ ಚಳುವಳಿಯ ಪ್ರಭಾವದ ಬಗ್ಗೆಯೇ ಅನುಮಾನ ಹುಟ್ಟುತ್ತದೆ. ಈ ವಿಶ್ವವಿದ್ಯಾಲಯದಲ್ಲಿ ಎಂತಹ ಕೋರ್ಸುಗಳಿರಬೇಕು ಎಂಬ ಚರ್ಚೆ ಬಂದಾಗಲೂ ಹೆಣ್ಣನ್ನು ಕುರಿತ ಸಾಂಪ್ರದಾಯಿಕ ಚಿಂತನಾಕ್ರಮದ ಪಠ್ಯಕ್ಕೆ ಒತ್ತು ಕೊಟ್ಟಿದ್ದರಿಂದ ಭಾರಿ ವಿರೋಧಕ್ಕೆ ಒಳಗಾಗಿ ನಂತರ ಪಠ್ಯಕ್ರಮ ಬದಲಿಸಬೇಕಾಗಿ ಬಂದದ್ದು ಎಲ್ಲರಿಗೂ ತಿಳಿದ ವಿಷಯ.

ಡಾ॥ ಎನ್. ಗಾಯತ್ರಿ

**ಮಹಿಳಾ ಅಧ್ಯಯನ ಎಂದರೆ ಇಡೀ ಜ್ಞಾನದ ವಿಶಾಲ ವಿಶ್ವವನ್ನು ಲಿಂಗದ ನೆಲೆಯಿಂದ ಅಭ್ಯಸಿಸುವ ಕ್ರಮ. ಇಂತಹ ಅಧ್ಯಯನದಿಂದ ದೊರೆಯುವ ಜ್ಞಾನಕ್ಕೆ ಒಂದು ನಿಶ್ಚಿತ ಸಾಮಾಜಿಕ ಉದ್ದೇಶವಿರಬೇಕು. ಅದು ಸಮಾಜ ಬದಲಾವಣೆಯ ಸಾಧನವಾಗಬೇಕು.**

ಮಹಿಳಾ ವಿಶ್ವವಿದ್ಯಾಲಯದ ಕಥೆ ಇದಾದರೆ, 'ಮಹಿಳಾ ಅಧ್ಯಯನ' ಇಂದು ಎದುರಿಸುತ್ತಿರುವ ಸಂದಿಗ್ಧತೆಗಳೂ ಬಹುವಾಗಿವೆ. ಕೇಂದ್ರದಲ್ಲಿ ಬಿಜೆಪಿ ಸರ್ಕಾರವಿದ್ದಾಗ ಕೇಂದ್ರದ ಮಾನವ ಸಂಪನ್ಮೂಲ ಇಲಾಖೆಯ ಆದೇಶದಂತೆ ವಿಶ್ವವಿದ್ಯಾಲಯದ ಧನ ಸಹಾಯ ಆಯೋಗವು ಮಹಿಳಾ ಅಧ್ಯಯನ ಕೇಂದ್ರಗಳಿಗೆ ಸುತ್ತೋಲೆಯೊಂದನ್ನು ಕಳುಹಿಸಿ ಹತ್ತನೆಯ ಯೋಜನೆಯ ಮಾರ್ಗದರ್ಶಿ ಸೂತ್ರದನ್ವಯ ಮಹಿಳಾ ಅಧ್ಯಯನ ಕೇಂದ್ರಗಳನ್ನು 'ಮಹಿಳೆ ಮತ್ತು ಕುಟುಂಬ ಅಧ್ಯಯನ ಕೇಂದ್ರ'ಗಳೆಂದು ನಾಮಕರಣ ಮಾಡಬೇಕೆಂದು ಆದೇಶಿಸಿತ್ತು. ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಟ್ಟಿರುವ ಈ ಸಂದರ್ಭದಲ್ಲೂ ಮಹಿಳೆಯರನ್ನು ಕುಟುಂಬಕ್ಕೆ ಸೀಮಿತಗೊಳಿಸಿದ ಘಟಕಗಳಾಗಿ ಚಿಂತಿಸುವ ಈ ಕ್ರಮ ಮಹಿಳಾ ಚಳುವಳಿಗಾರರಿಗೆ ಆತಂಕ ಹುಟ್ಟಿಸುತ್ತದೆ.

ಕರ್ನಾಟಕದ ಅನುಭವದಲ್ಲಿ ಮಹಿಳಾ ವಿದ್ಯಾಲಯ ಮತ್ತು ಮಹಿಳಾ ಅಧ್ಯಯನದ ಕೇಂದ್ರಗಳು ಚಳುವಳಿಯಾದದ್ದು ಮತ್ತು ಚಳುವಳಿಗೆ ಸ್ಫೂರ್ತಿಯಾದದ್ದು ಮತ್ತು ಮಹಿಳಾ ಚಳುವಳಿಯೊಂದಿಗೆ ಸಂಬಂಧ ಬೆಸೆದುಕೊಂಡದ್ದು ಸ್ವಲ್ಪ ಅಪರೂಪವೇ. ಈ ಹಿನ್ನೆಲೆಯಲ್ಲಿ ಒಟ್ಟು ದೇಶದ ಮಹಿಳಾ ಕಾಳಜಿಗಳ ಹಿನ್ನೆಲೆಯಲ್ಲಿ 'ಮಹಿಳಾ ಅಧ್ಯಯನ' ಒಂದು ಚಳುವಳಿಯಾಗಿ ಹುಟ್ಟಿಕೊಂಡ ಮತ್ತು ಚಳುವಳಿಯೊಂದಿಗೆ ಸಂಬಂಧ ಬೆಸೆದುಕೊಂಡ ಪ್ರಕ್ರಿಯೆಯನ್ನು ಕುರಿತ ಗ್ರಹಿಕೆಗಳ ಕಡೆಗೆ ಗಮನ ಹರಿಸಬೇಕು.

'ಮಹಿಳಾ ಅಧ್ಯಯನ' ಎಂಬ ಪದ ಭಾರತದ ಸಂದರ್ಭದಲ್ಲಿ ಮೊದಲು ಬಳಕೆಯಾದದ್ದು ಇಂಡಿಯನ್ ಕೌನ್ಸಿಲ್ ಫಾರ್ ಸೈಂಟಿಫಿಕ್ ರಿಸರ್ಚ್ ಸಂಸ್ಥೆಯು ೧೯೭೭ರಲ್ಲಿ 'ಮಹಿಳಾ ಅಧ್ಯಯನದ ಸಲಹಾ ಸಮಿತಿ'ಯನ್ನು ರಚಿಸಿದಾಗ. ಅವರ ಪ್ರಕಟಣೆಯಲ್ಲಿ 'ಮಹಿಳಾ ಅಧ್ಯಯನ'ದ ಧ್ಯೇಯೋದ್ದೇಶಗಳನ್ನು ಕುರಿತಂತೆ ಹೀಗೆ ಹೇಳಲಾಗಿದೆ: ''ದೀರ್ಘ ಕಾಲಾವಧಿಯಲ್ಲಿ ಮಹಿಳೆಯರ ಸ್ಥಾನಮಾನವನ್ನು ಪ್ರಭಾವಿಸುವ ಸಾಮಾಜಿಕ ಮತ್ತು ಆರ್ಥಿಕ ಸಂಸ್ಥೆಗಳ ಪ್ರಮುಖ ಮಾದರಿಗಳನ್ನು ಅನಾವರಣಗೊಳಿಸಲು ಅಗತ್ಯವಾದ ಮಾಹಿತಿಗಳನ್ನು ಶೋಧಿಸುವ ಮತ್ತು ವಿಶ್ಲೇಷಿಸುವ ಕೆಲಸವನ್ನು ಮಹಿಳಾ ಅಧ್ಯಯನ ಮಾಡಬೇಕಾಗಿದೆ.'' ಮೊದಲ ಬಾರಿಗೆ, ಜಗತ್ತಿನಾದ್ಯಂತ ಎಲ್ಲ ಸಮಾಜ ವಿಜ್ಞಾನಗಳು ಪುರುಷ ಕೇಂದ್ರಿತವೂ, ಪುರುಷ ಪೂರ್ವಗ್ರಹದಿಂದ ಕೂಡಿದವೂ ಆಗಿದ್ದುವು ಎಂಬುದನ್ನು ಈ ಸಂದರ್ಭದಲ್ಲಿ ಪ್ರಕಟಿಸಲಾಯಿತು. ಇಲ್ಲಿಂದ ಐ.ಸಿ.ಎಸ್.ಎಸ್.ಆರ್. ಸಂಸ್ಥೆಯು ಮಹಿಳಾ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಸಂಶೋಧನಾ ಕಾರ್ಯಕ್ರಮಗಳ ದಿಕ್ಕನ್ನು ಬದಲಾಯಿಸಿಕೊಂಡಿತು. ಅಲ್ಲಿಯವರೆಗೂ ಸಮಾಜ ವಿಜ್ಞಾನದ ಸಂಶೋಧನೆಯಲ್ಲಿ ಮಧ್ಯಮವರ್ಗದ ಮಹಿಳೆಯರ ಬಗ್ಗೆ ಇದ್ದ ಒತ್ತು ನಂತರ ಬಡ ಮತ್ತು ಅಲಕ್ಷಿತ ಮಹಿಳಾ ಸಮುದಾಯದ ಅಧ್ಯಯನವನ್ನೂ ಒಳಗೊಂಡಿತು. 'ಮಹಿಳಾ ಪ್ರಶ್ನೆ'ಗೆ ಸಂಬಂಧಪಟ್ಟ ಚರ್ಚೆಯನ್ನು ನವೀಕರಿಸುವ ಪ್ರಯತ್ನವಾಗಿ ಮಹಿಳಾ ಅಧ್ಯಯನವನ್ನು ನೋಡಲಾಯಿತು.

'ಮಹಿಳಾ ಅಧ್ಯಯನ'ವೆಂಬ ಪದವನ್ನು ಬಳಸದಿದ್ದರೂ ಇಂತಹ ದೃಷ್ಟಿಕೋನದ ಅಗತ್ಯತೆಯನ್ನು ಕುರಿತು ದೇವಕಿ ಜೈನ್ ಈ ಮೊದಲೇ ಅದರ ಪ್ರಸ್ತಾಪ ಮಾಡಿದ್ದರು. ೧೯೭೪ರಲ್ಲಿ ಭಾರತ ಸರ್ಕಾರದ ವಾರ್ತಾ ವಿಭಾಗವು ಅಂತರರಾಷ್ಟ್ರೀಯ ಮಹಿಳಾ ವರ್ಷದ ಆಚರಣೆಗೆ ಪೂರಕವಾಗಲೆಂದು ಪ್ರಕಟಿಸಿದ Indian Women ಪುಸ್ತಕದ ಮುನ್ನುಡಿಯಲ್ಲಿ ಅವರು ಹೀಗೆ ಬರೆದಿದ್ದಾರೆ: ''ಭಾರತದಲ್ಲಿ ಮಹಿಳೆಯರ ಪಾತ್ರಗಳನ್ನು ಕುರಿತಂತೆ ಚರ್ಚಿಸಲು ಸಿದ್ಧಾಂತವೊಂದರ ಅಗತ್ಯವಿದೆ. ಚಿಂತನಾ ಕ್ರಮದಲ್ಲಿ ಉದ್ದೇಶಪೂರ್ವಕವಾದ ಅಂತಹ ಪ್ರಯತ್ನವಿಲ್ಲದಿದ್ದರೆ, ಪರ್ಯಾಯ ಮಾರ್ಗಗಳನ್ನು ಎಚ್ಚರಿಕೆಯಿಂದ ಆಯ್ಕೆ ಮಾಡಿಕೊಳ್ಳದಿದ್ದರೆ, ಭವಿಷ್ಯದ ಬಗ್ಗೆ ಪರ್ಯಾಯ ದೃಷ್ಟಿಯನ್ನು ಬೆಳೆಸಿಕೊಳ್ಳದಿದ್ದರೆ ಅವರ ಗತಚರಿತ್ರೆಯು ಅಳಿಸಿಹೋಗುತ್ತದೆ; ಭವಿಷ್ಯವು ಅನಿಶ್ಚಯವಾಗುತ್ತದೆ.''

ಅಂತರರಾಷ್ಟ್ರೀಯ ಮಹಿಳಾ ದಶಕದ ಆಚರಣೆಗೆಂದು ರೂಪಿಸಲಾಗಿದ್ದ ಜಾಗತಿಕ ಯೋಜನೆಯಲ್ಲಿಯೂ ಮಹಿಳೆಯರನ್ನು ಕುರಿತ ಸಂಶೋಧನೆ, ವಿಶ್ಲೇಷಣೆ, ಮಾಹಿತಿ ಸಂಗ್ರಹಣೆ – ಮುಂತಾದ ವಿಷಯಗಳಿಗೆ ಹೆಚ್ಚು ಒತ್ತುಕೊಡಲಾಯಿತು. ಮಹಿಳೆಯರನ್ನು ಕುರಿತ ಯೋಜನಾ ನೀತಿಗಳನ್ನು ರೂಪಿಸುವಾಗ ಮತ್ತು ಹೆಣ್ಣಿನ ಬದುಕನ್ನು ಪ್ರಭಾವಿಸುವ ಸಾಮಾಜಿಕ, ಆರ್ಥಿಕ ಬದಲಾವಣೆಯ ಮೌಲ್ಯ ಮಾಪನ ಮಾಡಲು ಈ ಮಾಹಿತಿಗಳನ್ನು ಉಪಯೋಗಿಸುವ ಉದ್ದೇಶವು ಇದರಲ್ಲಿದೆ. ಇದೇ ಸಂದರ್ಭದಲ್ಲಿ ಭಾರತ ಸರ್ಕಾರವೂ ರಾಷ್ಟ್ರೀಯ ಕ್ರಿಯಾ ಯೋಜನೆಯ ಕರಡು ನೀತಿಯನ್ನು ಸಿದ್ಧಗೊಳಿಸಿತು. ಇದರಲ್ಲಿ ಮಹಿಳೆಯರ ಸಮಸ್ಯೆಗಳನ್ನು ಗುರುತಿಸುವ ಮತ್ತು ಅದಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಶೋಧಿಸುವಂತಹ ಸಂಶೋಧನೆಗೆ ವಿಶೇಷ ಒತ್ತು ನೀಡಲಾಯಿತು.

ಭಾರತದ ಮೊದಲ ಮಹಿಳಾ ವಿದ್ಯಾಲಯವೆಂಬ ಹೆಗ್ಗಳಿಕೆಗೆ ಪಾತ್ರವಾದ ಮುಂಬೈನ ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯವು 'ಮಹಿಳಾ ಅಧ್ಯಯನ'ವನ್ನು ಶೈಕ್ಷಣಿಕ ಶಿಸ್ತನ್ನಾಗಿ ಪ್ರಚಾರ ಮಾಡಿತು. ಮಹಿಳೆಯರಿಗೆ ಸಂಬಂಧಪಟ್ಟಂತೆ ಕ್ರಿಯಾಶೀಲವಾದ ಚಟುವಟಿಕೆಗಳನ್ನೊಳಗೊಂಡ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವ ಕಾರ್ಯದಲ್ಲಿ ಎಸ್.ಎನ್.ಡಿ.ಟಿ. ವಿಶ್ವವಿದ್ಯಾಲಯವು ತೊಡಗಿತು. ೧೯೭೩ರಲ್ಲಿ 'ಮಹಿಳೆಯರ ಉನ್ನತ ಶಿಕ್ಷಣದ ಭವಿಷ್ಯ ಮತ್ತು ಅದರಲ್ಲಿ ಎಸ್.ಎನ್.ಡಿ.ಟಿ. ಮಹಿಳಾ ವಿಶ್ವವಿದ್ಯಾಲಯದ ಪಾತ್ರ' ಎಂಬ ವಿಷಯವನ್ನು ಕುರಿತಂತೆ ದುಂಡುಮೇಜಿನ ಸಭೆಯೊಂದು ನಡೆಯಿತು. ಮಹಿಳಾ ವಿಶ್ವವಿದ್ಯಾಲಯದ ಅಗತ್ಯತೆಯನ್ನು ಕುರಿತಂತೆ ನಡೆದ ಈ ಚರ್ಚೆಯಲ್ಲಿ ಮಹಿಳೆಯರನ್ನು ಕುರಿತಂತೆ ಸಂಶೋಧನೆ ನಡೆಸಲು ಪ್ರತ್ಯೇಕವಾದ ಸಂಶೋಧನಾ ಕೇಂದ್ರವನ್ನು ಸ್ಥಾಪಿಸುವ ಶಿಫಾರಸ್ಸು ಮಾಡಲಾಯಿತು. ಮಹಿಳಾ ವಿಶ್ವವಿದ್ಯಾಲಯದಲ್ಲಿ ಇದೊಂದು ಪ್ರಮುಖವಾದ ಅಧ್ಯಾಯ. ೧೯೭೪ರಲ್ಲಿ ವಿಶ್ವವಿದ್ಯಾನಿಲಯದ ಭಾಗವಾದರೂ ಸ್ವಾಯತ್ತ ಸಂಸ್ಥೆಯಾಗಿ 'ಮಹಿಳಾ ಅಧ್ಯಯನದ ಸಂಶೋಧನಾ ವಿಭಾಗ' ಅಸ್ತಿತ್ವಕ್ಕೆ ಬಂದಿತು. ಡಾ॥ ನೀರಾ ದೇಸಾಯಿ ಇದರ ಮೊದಲ ನಿರ್ದೇಶಕಿಯಾದರು. ಅಂತೂ ಮಹಿಳೆಯರ ಬದುಕು ಮತ್ತು ಅನುಭವಗಳಿಗೆ ಒಂದು ನ್ಯಾಯಯುತವಾದ ಸ್ಥಾನಮಾನ ಮತ್ತು ಶೈಕ್ಷಣಿಕ ಕಳಕಳಿ ದೊರೆತು 'ಮಹಿಳಾ ಅಧ್ಯಯನ'ವು ಪ್ರಸ್ತುತತೆಯನ್ನು ಕಂಡುಕೊಂಡಿತು. ಹೀಗೆ ಮಹಿಳಾ ಅಧ್ಯಯನಕ್ಕೆ ಮೊದಲ ಹೆಜ್ಜೆಗಳನ್ನು ತೋರಿದ ಎಸ್.ಎನ್.ಡಿ.ಟಿ.ಯು ಭಾರತದ ಉಳಿದ ಮಹಿಳಾ ಅಧ್ಯಯನ ಕೇಂದ್ರಗಳೊಂದಿಗೆ ಸೇರಿಕೊಂಡು ಇಂಡಿಯನ್ ಅಸೋಸಿಯೇಷನ್ ಆಫ್ ವಿಮೆನ್ಸ್ ಸ್ಟಡೀಸ್ ಅನ್ನು ಸ್ಥಾಪಿಸಿ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿತು. ಮಹಿಳಾ ಅಧ್ಯಯನ ಮತ್ತು ಮಹಿಳಾ ಚಳುವಳಿಯ ನಡುವೆ ಸಂಪರ್ಕ ಸೇತುವೆಯಾಗಿ ಇದು ಕೆಲಸ ಮಾಡಿತು.

೧೯೮೧ರಲ್ಲಿ ಇಂಡಿಯನ್ ಅಸೋಸಿಯೇಷನ್ ಆಫ್ ವಿಮೆನ್ಸ್ ಸ್ಟಡೀಸ್ ಅಸ್ತಿತ್ವಕ್ಕೆ ಬಂದಿತು. ಆರಂಭದಲ್ಲಿ ಮಹಿಳಾ ಅಧ್ಯಯನದ ಕಾರ್ಯಕ್ರಮಗಳೂ ಕೆಲವೇ ಇದ್ದವು ಮತ್ತು ಈ ಕ್ಷೇತ್ರಗಳಲ್ಲಿ ಅನುಭವವಿರುವ ವಿದ್ವಾಂಸರು ಕೆಲವರೇ ಇದ್ದರು. ಈ ಸಂದರ್ಭದಲ್ಲಿ ಮಹಿಳಾ ಚಳುವಳಿಯ


ಮುಂಬೈನ
ಎಸ್.ಎನ್.ಡಿ.ಟಿ.
ವಿಶ್ವವಿದ್ಯಾಲಯ

ಕಾರ್ಯಕರ್ತರು ಮಹಿಳಾ ಸಮಸ್ಯೆಗಳನ್ನು ರಾಜಕೀಯ ಪ್ರಶ್ನೆಗಳಾಗಿ ಕಂಡರು. ಕ್ರೌರ್ಯವನ್ನು ವ್ಯಕ್ತಿಯ ವರ್ತನೆಯಾಗಿ ಮಾತ್ರ ನೋಡದೆ ಅಧಿಕಾರದ ಪರಿಭಾಷೆಯಲ್ಲಿ ಅದನ್ನು ವಿವರಿಸಿದರು. ಅಧಿಕಾರದ ಹೇರುವಿಕೆಯಿಂದ ಉದ್ಭವಿಸುವ ವರದಕ್ಷಿಣೆ ಸಾವುಗಳು, ಅತ್ಯಾಚಾರದ ಪ್ರಕರಣಗಳು, ಕಾನೂನಿನ ಶಿಕ್ಷೆಗೆ ಒಳಗಾಗಬೇಕಾದವು ಎಂದು ತೋರಿಸಿಕೊಟ್ಟರು. ಹಾಗೆಯೇ ಹೆಣ್ಣಿನ ಆರೋಗ್ಯದ ಸಮಸ್ಯೆಗಳೂ ಕೇವಲ ದೈಹಿಕ ನೋವುಗಳಾಗದೆ ಸಾಮಾಜಿಕ, ಆರ್ಥಿಕ ಆಯಾಮಗಳನ್ನು ಪಡೆದುಕೊಂಡವು. ಎಪ್ಪತ್ತರ ದಶಕದ ಕೊನೆಯ ಹಂತದ ವೇಳೆಗೆ ಮಹಿಳಾ ಚಳುವಳಿಗೂ ಮತ್ತು ಅಧ್ಯಯನಕ್ಕೂ ಸಂಬಂಧ ಹತ್ತಿರವಾಗುತ್ತಾ ಬಂತು. ಮಹಿಳಾ ವಿಷಯಗಳು ಸರ್ಕಾರದ ಕಾರ್ಯಕ್ರಮಗಳಲ್ಲಿ ಪ್ರಮುಖ ಸ್ಥಾನ ಪಡೆದವು. ೧೯೮೧ರಲ್ಲಿ ಮುಂಬೈನಲ್ಲಿ ನಡೆದ ರಾಷ್ಟ್ರೀಯ ಸಮಾವೇಶದಲ್ಲಿ ವಿಸ್ತೃತ ಚರ್ಚೆ ನಡೆದು ಮಹಿಳಾ ಅಧ್ಯಯನವು ಸಾಮಾಜಿಕ ಬದಲಾವಣೆಯನ್ನು ತರಬೇಕಾದ ಪ್ರಮುಖ ಅಸ್ತ್ರವಾಗಬೇಕು ಎಂಬ ನಿಲುವಿಗೆ ಬದ್ಧವಾಯಿತು. ಈ ಸಮಾವೇಶಕ್ಕೆ ಭಾರತ ಸರ್ಕಾರದ ಧನಸಹಾಯ ಮಾತ್ರವಲ್ಲದೆ, ಯೂನಿಸೆಫ್, ಐ.ಸಿ.ಎಸ್.ಎಸ್.ಆರ್., ಹಾಗೂ ವಿಶ್ವವಿದ್ಯಾಲಯ ಧನಸಹಾಯ ಆಯೋಗ ಎಲ್ಲವೂ ತಮ್ಮ ಸಹಾಯಹಸ್ತ ಚಾಚುವುದರೊಂದಿಗೆ ಮಹಿಳಾ ಅಧ್ಯಯನದ ವಿಷಯವನ್ನು ಗಂಭೀರವಾಗಿ ಪರಿಭಾವಿಸಿದವು.

೧೯೮೬ರಲ್ಲಿ ವಿಶ್ವವಿದ್ಯಾಲಯ ಧನಸಹಾಯ ಆಯೋಗವು ವಿಶ್ವವಿದ್ಯಾಲಯಗಳಿಗೆ ಮಾರ್ಗದರ್ಶಿ ಸೂತ್ರಗಳನ್ನು ನೀಡಿ ಮಹಿಳಾ ಅಧ್ಯಯನದ ರೂಪು ರೇಷೆಗಳನ್ನು ಸಿದ್ಧಪಡಿಸಿತು. ಅದರಲ್ಲಿ ಮಹಿಳಾ ಅಧ್ಯಯನದ ಲಕ್ಷಣ, ಉದ್ದೇಶ ಮತ್ತು ಕಾರ್ಯಕ್ರಮ ಸೂಚಿ ಮತ್ತು ಧನಸಹಾಯ ಎಲ್ಲ ಅಂಶಗಳೂ ಕೂಡಿಕೊಂಡಿದ್ದವು. ಈ ಮಾರ್ಗದರ್ಶಿ ಸೂತ್ರಗಳು ಬೋಧನೆಯ ಆಯಾಮಗಳನ್ನು, ತರಬೇತಿ, ಸಂಶೋಧನೆ ಮುಂತಾದವುಗಳನ್ನು ಯೋಜಿಸಿ ಕೊಟ್ಟಿತು. ಅದರಂತೆ ಮಹಿಳಾ ಅಧ್ಯಯನವನ್ನು ಎರಡು ಮಾದರಿಗಳಲ್ಲಿ ನಡೆಸುವಂತೆ ಆದೇಶಿಸಿತು: ಒಂದು, ಕಾಲೇಜಿನ ವಿಭಾಗಗಳೊಳಗೆ ಮಹಿಳಾ ಅಧ್ಯಯನ ಘಟಕಗಳನ್ನು ರಚಿಸುವುದು; ಮತ್ತೊಂದು, ಪ್ರತ್ಯೇಕವಾಗಿ ಸ್ವತಂತ್ರವಾದ ಮಹಿಳಾ ಅಧ್ಯಯನ ಕೇಂದ್ರಗಳನ್ನು ತೆರೆಯುವುದು. ಇದರಂತೆ ದೇಶದ ವಿವಿಧ ರಾಜ್ಯಗಳಲ್ಲಿ ಮಹಿಳಾ ಅಧ್ಯಯನ ಕೇಂದ್ರಗಳು, ಮಹಿಳಾ ಅಧ್ಯಯನ ವಿಭಾಗಗಳು ಹುಟ್ಟಿಕೊಂಡವು. ೧೯೯೮ರ ವೇಳೆಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗವು ಮಹಿಳಾ ಅಧ್ಯಯನಕ್ಕೆ ಸಂಬಂಧಪಟ್ಟ ಮಾರ್ಗದರ್ಶಿ ಸೂತ್ರಗಳನ್ನು ಮಾರ್ಪಾಡು ಮಾಡಿತು ಮತ್ತು ಹೊಸ ಹೊಸ ಮಹಿಳಾ ಅಧ್ಯಯನ ಕೇಂದ್ರಗಳನ್ನು ತೆರೆಯಲು ಪ್ರೋತ್ಸಾಹಿಸಿತು. ಅಂತೆಯೇ, ರಾಷ್ಟ್ರೀಯ ಮಹಿಳಾ ಆಯೋಗವು ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ, ಭಾರತ ಸರ್ಕಾರ, ರಾಷ್ಟ್ರೀಯ ಯೋಜನಾ ಆಯೋಗ ಮುಂತಾದ ಸರ್ಕಾರದ ವಿವಿಧ ಘಟಕಗಳೊಂದಿಗೆ ಸಂಯುಕ್ತವಾಗಿ ಸೇರಿಕೊಂಡು ಮಹಿಳಾ ಅಧ್ಯಯನದ ಸಂಶೋಧನಾ ಕಾರ್ಯಗಳನ್ನು ನಡೆಸಲು ಪ್ರೋತ್ಸಾಹಿಸಿತು.

ಈ ಎಲ್ಲಾ ಪ್ರಯತ್ನ, ಪರಿಶ್ರಮಗಳ ಫಲವಾಗಿ ಇಂದು ದೇಶದ ಬಹುತೇಕ ಎಲ್ಲಾ ರಾಜ್ಯಗಳಲ್ಲೂ ಮಹಿಳಾ ಅಧ್ಯಯನವು ಶಿಕ್ಷಣ ಕ್ಷೇತ್ರದ ಒಳಗೆ ಭದ್ರವಾಗಿ ಸ್ಥಾನ ಗಿಟ್ಟಿಸಿಕೊಂಡಿದೆ. ಸದ್ಯದ ಪರಿಸ್ಥಿತಿಯಲ್ಲಿ ಶಿಕ್ಷಣವು ಮಾರುಕಟ್ಟೆಯ ಶಕ್ತಿಗಳಿಂದ ಬಾಧಿತವಾಗಿರುವಾಗ 'ಮಹಿಳಾ ಅಧ್ಯಯನ'ದ ಭವಿಷ್ಯವೇನಾಗಬೇಕು ಎಂದು ಯೋಚಿಸಬೇಕಿದೆ. ಐ.ಟಿ. ಮತ್ತು ಬಿ.ಟಿ.ಗಳ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಮಹಿಳಾ ಅಧ್ಯಯನ ಉದ್ಯೋಗ ದೊರಕಿಸಬಲ್ಲ ವಿಷಯವಾಗುವುದಿಲ್ಲವೆಂಬುದು ನಿಜ ಮತ್ತು ಅದನ್ನು ಅಂತಹ ವೃತ್ತಿಪರ ಕೋರ್ಸುಗಳೊಂದಿಗೆ ಹೋಲಿಸುವುದೇ ತಪ್ಪಾಗುತ್ತದೆ. ಆದರೆ ಮಹಿಳಾ ಅಧ್ಯಯನಕ್ಕೆ ಸಮಾಜದಲ್ಲಿ ನ್ಯಾಯಯುತ ಸ್ಥಾನ ದೊರೆಯಲು ನಡೆದಂತಹ ಚಳುವಳಿಯ ಹಿಂದಿನ ಅಂತಸ್ಸತ್ವವನ್ನು ಅರ್ಥಮಾಡಿಕೊಳ್ಳದಿದ್ದರೆ, ಅದಕ್ಕೆ ಬೇಕಾದ ಸಾಮಾಜಿಕ ಬದ್ಧತೆಯನ್ನು ರೂಢಿಸಿಕೊಳ್ಳದಿದ್ದರೆ, ಮಹಿಳಾ ಅಧ್ಯಯನ ತನ್ನ ಉದ್ದೇಶವನ್ನು ಸಾಧಿಸುವಲ್ಲಿ ವಿಫಲವಾಗುತ್ತದೆ.

ಕರ್ನಾಟಕದಲ್ಲೂ ಮಹಿಳಾ ವಿಶ್ವವಿದ್ಯಾಲಯ ಮತ್ತು ಮಹಿಳಾ ಅಧ್ಯಯನ ಕೇಂದ್ರಗಳು, ಸ್ನಾತಕೋತ್ತರ ಪದವಿ ನೀಡುವ ಕಾಲೇಜುಗಳು – ಎಲ್ಲವೂ ಇವೆ. ಮಹಿಳಾ ಅಧ್ಯಯನ ಕ್ಷೇತ್ರದಲ್ಲಿ ಪರಿಶ್ರಮವಿರುವ ಮತ್ತು ಬದ್ಧತೆಯಿರುವ ಬೋಧಕ ವೃಂದವಿದ್ದಾಗ ಮಾತ್ರ ಮಹಿಳಾ ಅಧ್ಯಯನಕ್ಕೊಂದು ಗಾಂಭೀರ್ಯ, ಅರ್ಥಪೂರ್ಣತೆ ಬರಲು ಸಾಧ್ಯ. ಈ ಶೈಕ್ಷಣಿಕ ಕೇಂದ್ರಗಳೇ ಅಲ್ಲದೆ ಸ್ವಾಯತ್ತ ಮಹಿಳಾ ಸಂಘಟನೆಗಳು ಮತ್ತು ರಾಜಕೀಯ ಪಕ್ಷಗಳ ಮಹಿಳಾ ಘಟಕಗಳು ತಮ್ಮ ಚಟುವಟಿಕೆಯಲ್ಲಿ ಮಹಿಳಾ ಅಧ್ಯಯನಕ್ಕೆ ಪೂರಕವಾದ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಇತ್ತೀಚೆಗೆ ಹಂಪಿಯ ಕನ್ನಡ ವಿಶ್ವ ವಿದ್ಯಾಲಯದ ಮಹಿಳಾ ಅಧ್ಯಯನ ಕೇಂದ್ರವೂ ಮಹಿಳಾ ಸಂಘಟನೆಗಳನ್ನೂ ಅಧ್ಯಯನ ಕೇಂದ್ರಗಳನ್ನೂ ಒಟ್ಟುಗೂಡಿಸಿ ಸಂಯುಕ್ತ ವೇದಿಕೆಯನ್ನು ರಚಿಸುವ ಪ್ರಯತ್ನ ಮಾಡಿದ್ದನ್ನು ನೆನಪಿಸಿಕೊಳ್ಳಬಹುದು. ಇಂತಹ ಪ್ರಯತ್ನದ ಹಿಂದಿನ ಸದಾಶಯವು ಸ್ವಾಗತಾರ್ಹವೇ. ಆದರೂ ಇದು ಕೇವಲ ಔಪಚಾರಿಕ ಪ್ರಯತ್ನವಾಗದೆ ಕ್ರಿಯೆ ಮತ್ತು ಸಿದ್ಧಾಂತವನ್ನು ಸಂಯೋಜಿಸುವ ಪ್ರಯತ್ನವಾಗಬೇಕು ಮತ್ತು ಮಹಿಳಾ ಅಧ್ಯಯನವನ್ನು ವಿಶಾಲವಾದ ವ್ಯಾಪ್ತಿಯಲ್ಲಿ ಗ್ರಹಿಸುವ, ವಿಶ್ಲೇಷಿಸುವ ಅಧ್ಯಯನ ಮಾದರಿಗಳನ್ನು ರೂಢಿಸಿಕೊಳ್ಳಬೇಕು.

ಮಹಿಳಾ ಅಧ್ಯಯನವನ್ನು ಕೇವಲ ಮಹಿಳೆಯರಿಗೆ ಸಂಬಂಧಪಟ್ಟ ಅಧ್ಯಯನವೆಂಬಂತೆ ಪರಿಭಾವಿಸುವುದು ತಪ್ಪು. ಉದಾಹರಣೆಗೆ, ಅಮರ್ತ್ಯ ಸೇನ್ ಲಿಂಗಾಧಾರಿತ ಅಧ್ಯಯನ ನಡೆಸುವಾಗ ಅದನ್ನೊಂದು ವಿಶಾಲ ತಳಹದಿಯ ಮೇಲೆ ನಡೆಸುತ್ತಾರೆ. ಬಡತನ, ಪ್ರಜಾಪ್ರಭುತ್ವ, ಉದ್ಯೋಗ – ಎಲ್ಲವನ್ನೂ ಲಿಂಗದ ನೆಲೆಯಲ್ಲಿ ಅಧ್ಯಯನ ಮಾಡುತ್ತಾರೆ. ಇದನ್ನು ನಾವು ಸಾಹಿತ್ಯ, ವಿಜ್ಞಾನ, ಚರಿತ್ರೆ, ತತ್ವಶಾಸ್ತ್ರ ಎಲ್ಲ ವಿಷಯಗಳಿಗೂ ಅನ್ವಯಿಸಬೇಕಾಗುತ್ತದೆ. ಒಟ್ಟನಲ್ಲಿ ಮಹಿಳಾ ಅಧ್ಯಯನ ಇಡೀ ಜ್ಞಾನದ ವಿಶಾಲ ವಿಶ್ವವನ್ನು ಲಿಂಗದ ನೆಲೆಯಿಂದ ಅಭ್ಯಸಿಸುವ ಕ್ರಮ. ಇಂತಹ ಅಧ್ಯಯನದಿಂದ ದೊರೆಯುವ ಜ್ಞಾನಕ್ಕೆ ಒಂದು ನಿಶ್ಚಿತ ಸಾಮಾಜಿಕ ಉದ್ದೇಶವಿರಬೇಕು. ಅದು ಸಮಾಜ ಬದಲಾವಣೆಯ ಸಾಧನವಾಗಬೇಕು. ಹೀಗೆ ಮಹಿಳಾ ಶಿಕ್ಷಣವು ಅರಿವಿನ ಬಾಗಿಲು ತೆರೆದರೆ, ಮಹಿಳಾ ಅಧ್ಯಯನವು ಸಮಾಜ ಬದಲಾವಣೆಯ ವಾಹಕವಾಗಬೇಕು. ಮಹಿಳಾ ಅಧ್ಯಯನ ಮತ್ತು ಮಹಿಳಾ ಚಳುವಳಿಯ ಸಂಬಂಧವನ್ನು ಕುರಿತು ಸ್ತ್ರೀವಾದಿ ದೇವಕಿ ಜೈನ್‌ರವರು ಹೇಳಿರುವ ಮಾತುಗಳನ್ನು ಇಲ್ಲಿ ಮತ್ತೊಮ್ಮೆ ನೆನಪಿಸಿಕೊಳ್ಳಬಹುದು:

''ಜ್ಞಾನ ಒಂದು ಶಕ್ತಿ. ಆ ಶಕ್ತಿ ಒಂದು ಅಸ್ತ್ರವಷ್ಟೆ. ಅದನ್ನು ಬಳಸಿಕೊಂಡು ಹೋರಾಟ ಮಾಡಬೇಕು. ಮಹಿಳಾ ಅಧ್ಯಯನಗಳು, ಸಮ್ಮೇಳನಗಳು ಇಂತಹ ಶಕ್ತಿಯ ಉತ್ಪಾದಕ ತಾಣಗಳಾಗಬೇಕು. ಅಧ್ಯಯನ ಮತ್ತು ಕ್ರಿಯೆ, ಒಟ್ಟಾಗಿ ಸೇರಿದಾಗ ಮಾತ್ರ ಮಹಿಳಾ ಚಳುವಳಿಗೆ ಅರ್ಥ ಬರುತ್ತದೆ.''

ನಮ್ಮ ಮಹಿಳಾ ಅಧ್ಯಯನ ಕೇಂದ್ರಗಳು ಇದನ್ನು ಗಮನಿಸಿ ಅನುಷ್ಠಾನಕ್ಕೆ ತಂದರೆ ಮಾತ್ರ ಅವುಗಳ ಅಸ್ತಿತ್ವಕ್ಕೆ ಸಮರ್ಥನೆ ಇರುತ್ತದೆ. ಕೇವಲ ಸಂಪ್ರದಾಯವಾದಿ ಶಿಕ್ಷಣ ನೀಡಲು ಈ ಕೇಂದ್ರಗಳು ಬೇಕಾಗುವುದಿಲ್ಲ; ಅದಕ್ಕೆ ಈಗಾಗಲೆ ಬೇರೆ ವ್ಯವಸ್ಥೆ ಇದೆ.

ಡಾ|| ಎನ್. ಗಾಯತ್ರಿ
[illegible]

## ಅನುಸಂಧಾನ

ಎರಡೂ ಕೋಮುಗಳ
ಗಲಭೆಕೋರರು
ಚೌಕದಲ್ಲಿ ಅನಿರೀಕ್ಷಿತವಾಗಿ
ಎದುರುಬದರಾದರು.
ಒಂದು ಕ್ಷಣ ಮೌನ.
ಕಣ್ಣಿನಲ್ಲೇ ಅನುಸಂಧಾನ.
ಹಾಗೇ ಇಬ್ಬರೂ ತಮ್ಮ ತಮ್ಮ
ಬಲಗಡೆಯ ಗಲ್ಲಿಗಳಿಗೆ
ತಣ್ಣಗೆ ಹೊರಳಿಕೊಂಡರು.
ಅವರಿಗೆ ಅವರದೇ ಗುರಿಗಳಿದ್ದವು.
ಪ್ರತಿರೋಧ ಒಡ್ಡದ
ಬಡಪಾಯಿ ಎದುರಾಳಿಗಳಿದ್ದರು.

ರವಿಕುಮಾರ್ ಕೆ. ಎಸ್.
ಹಾಸನ

# ಸಾರ್ವಜನಿಕ ಸೇವಾಕ್ಷೇತ್ರವನ್ನು ಸುಧಾರಿಸುವ ಬಗೆ

ಖಾಸಗಿ ಎಲ್ಲ ರಮ್ಯ ಎಂಬ ಭ್ರಾಂತಿ ಈಗ ಕಳಚಿಹೋಗಿದೆ. ಶಿಕ್ಷಣ, ಆರೋಗ್ಯ, ಸಾರಿಗೆ, ಉದ್ಯಮ, ಇತ್ಯಾದಿಗಳಲ್ಲಿ ಖಾಸಗಿ ಕ್ಷೇತ್ರವು ದುಬಾರಿ ಮಾತ್ರವಲ್ಲ, ಕಳಪೆಯದೂ ಆಗಿದೆ. ಸಾಮಾನ್ಯರಿಗಂತೂ ಅದು ಎಟುಕುವಂತಿಲ್ಲ. ಸಾರ್ವಜನಿಕ ಸೇವಾಕ್ಷೇತ್ರವು ಭ್ರಷ್ಟವಾಗಿರುವುದರಿಂದಾಗಿ ಜನರಿಗೆ ದೊಡ್ಡ ಮೋಸವಾಗಿದೆ, ಅನಾನುಕೂಲವಾಗಿದೆ. ಇದು ಅಗಾಧವಾದ ವಂಚನೆ. ಜನಸಾಮಾನ್ಯರನ್ನು ಬೆಂಕಿಗೆ ಹಾಕುವಂತಹ ದೌರ್ಜನ್ಯ ಇದಾಗಿದೆ. ಇದನ್ನು ಸುಧಾರಿಸದ ಸರ್ಕಾರ ಜನವಿರೋಧಿ ಸರ್ಕಾರ. ಆದರೆ ಇದರಲ್ಲಿ ಸಾರ್ವಜನಿಕರ ಪಾಲು ಎಷ್ಟರ ಮಟ್ಟಿನದು ? ಜವಾಬ್ದಾರಿ ಎಷ್ಟು? ಲೋಕಾಯುಕ್ತರನ್ನೋ ಸರ್ಕಾರಿ ಅಧಿಕಾರಿಗಳನ್ನೋ ತೆಗಳುತ್ತಾ ಕೂತರೆ ಆದೀತೆ? ಹಾಗಿದ್ದರೆ ಸುಧಾರಿಸುವ ಬಗೆ ಯಾವುದು ? ನಾವು ಚಳುವಳಿ ನಡೆಸಬಹುದೆ ? ಮತ್ತು ಹೇಗೆ ?

– ಇದನ್ನು ಕುರಿತು ಪ್ರತಿಕ್ರಿಯಿಸಲು 'ಹೊಸತು' ಓದುಗರನ್ನು ಆಹ್ವಾನಿಸಲಾಗಿತ್ತು. ತಮ್ಮ ಅಭಿಪ್ರಾಯಗಳನ್ನು ಬರೆದು ತಿಳಿಸಿದವರಿಗೆಲ್ಲಾ ನಾವು ಕೃತಜ್ಞರಾಗಿದ್ದೇವೆ. ಆಯ್ದ ಮೂರನ್ನು ಇಲ್ಲಿ ಪ್ರಕಟಿಸಲಾಗಿದೆ.

ಸಾರ್ವಜನಿಕ ಸೇವಾಕ್ಷೇತ್ರವು ಹೇಗಿದೆಯೆಂದರೆ ಮೂಲಭೂತ ಸೌಕರ್ಯಗಳಿಂದ ವಂಚಿತವಾದ ಹಳ್ಳಿಗಳು ಎಷ್ಟು ಅಧ್ವಾನದ ಪರಿಸ್ಥಿತಿಯಲ್ಲಿವೆಯೋ ಅದಕ್ಕಿಂತಲೂ ಅಧ್ವಾನದ ಪರಿಸ್ಥಿತಿ ಇರುವುದು ಸಾರ್ವಜನಿಕ ಸೇವಾಕ್ಷೇತ್ರದಲ್ಲಿ. ಯಾವ ಕ್ಷೇತ್ರವೂ ಉತ್ತಮವಾಗಿಲ್ಲ. ಶಿಕ್ಷಣ ಕ್ಷೇತ್ರವಂತೂ ಬಡವರ ಪಾಲಿಗೆ ಆಕಾಶದಲ್ಲಿರುವ ನಕ್ಷತ್ರದಂತೆ ಕೈಗೆಟುಕದಂತಾಗಿದೆ. ಇಂತಹ ಒಂದು ಸಾರ್ವಜನಿಕ ಕ್ಷೇತ್ರವನ್ನು ಸುಧಾರಿಸ ಬೇಕೆಂದರೆ ಬಹಳಷ್ಟು ಶ್ರಮವಹಿಸಬೇಕಾಗಿದೆ. ಆರೋಗ್ಯ ಮತ್ತು ಸಾರಿಗೆ ವ್ಯವಸ್ಥೆ ಹದಗೆಟ್ಟು ಕೂತಿದೆ. ಇಂತಹ ಜಡತ್ವದಿಂದ, ದರ್ಪ-ದೌರ್ಜನ್ಯಗಳಿಂದ, ಅಶಿಸ್ತಿನಿಂದ, ಭ್ರಷ್ಟಾಚಾರದಿಂದ ಕೂಡಿರುವ ಸಾರ್ವಜನಿಕ ಸೇವಾಕ್ಷೇತ್ರವನ್ನು ಸುಧಾರಿಸಬೇಕೆಂದರೆ ಸಾರ್ವಜನಿಕರಾದ ನಾವು ಮುಖ್ಯವಾಗಿ ಜಾಗೃತರಾಗಬೇಕು.

ಇದನ್ನೆಲ್ಲಾ ಸುಧಾರಿಸಲಾಗದ ಸರ್ಕಾರವನ್ನು ಸ್ಥಾಪಿಸಿದವರು ನಾವು. ಅದರಿಂದಾಗಿ ಇದಕ್ಕೆಲ್ಲಾ ಕಾರಣರು ನಾವೇ ಆಗುತ್ತೇವೆ. ಜನಪ್ರತಿನಿಧಿಗಳನ್ನು ಆಯ್ಕೆಮಾಡುವಾಗ ತಮ್ಮ ಅಮೂಲ್ಯವಾದ ಮತವನ್ನು ಸರಿಯಾಗಿ ನೀಡದೆ ನಮ್ಮ ಸುಶಿಕ್ಷಿತರೇ ಪರೋಕ್ಷವಾಗಿ ಭ್ರಷ್ಟ ರಾಜಕಾರಣಿಯನ್ನು ಪೋಷಿಸುತ್ತಾರೆ.

ಇನ್ನು ಅವಿದ್ಯಾವಂತರಾದ ಮತ್ತು ಹಳ್ಳಿಗಳಲ್ಲಿನ ಜನರು ಪ್ರಾಮಾಣಿಕ ವ್ಯಕ್ತಿಯನ್ನು ಆಯ್ಕೆಮಾಡುವಲ್ಲಿ ವಿಫಲರಾಗುತ್ತಾರೆ. ಹೀಗೆ ಆಯ್ಕೆಯಾದ ಶಾಸಕರು ಇನ್ನೆಂತಹ ಸರ್ಕಾರವನ್ನು ರಚಿಸುವರು! ಅವರು ಸಾರ್ವಜನಿಕರ ಆಶೋತ್ತರಗಳನ್ನು ಪೂರೈಸುವರೆ ? ವಿದ್ಯಾರ್ಥಿಗಳ ಸಮಸ್ಯೆಗೆ ಬೆಲೆ ಕೊಡುವರೆ ? ಅಂದರೆ, ಕೇವಲ ಸರ್ಕಾರದ ಆಯ್ಕೆಯೇ ಮುಖ್ಯವಾಗಿರುವುದಿಲ್ಲ. ಪ್ರತಿಯೊಬ್ಬ ಪ್ರಜೆಯೂ ತನ್ನ ಜವಾಬ್ದಾರಿಯನ್ನು ಅರಿತುಕೊಂಡು ಕೆಲಸ ಮಾಡಬೇಕು. ಅಧಿಕಾರದಲ್ಲಿರುವವರು, ಸರ್ಕಾರಿ ನೌಕರರು, ಕಾರ್ಮಿಕರು, ಶಿಕ್ಷಕರು ತಮ್ಮ ವೃತ್ತಿಯೇನೆಂಬುದನ್ನು ಅರಿತು ಶಿಸ್ತು, ಸಮಯ ಪಾಲನೆ, ಪ್ರಾಮಾಣಿಕತೆ ಇವುಗಳನ್ನು ಬೆಳೆಸಿಕೊಂಡು ಕೆಲಸ ನಿರ್ವಹಿಸಿದರೆ ಕೆಲವು ಮಾರ್ಪಾಡುಗಳು ತಾವಾಗಿಯೇ ಉಂಟಾಗುತ್ತವೆ.

ನಾವೆಲ್ಲರೂ ಮಾಡುವ ಒಂದೇ ಘನಕಾರ್ಯವೆಂದರೆ, ನಮ್ಮ ದೇಶದ ಪ್ರಧಾನಮಂತ್ರಿ ಸರಿಯಿಲ್ಲ, ನಮ್ಮ ರಾಜ್ಯದ ಮುಖ್ಯಮಂತ್ರಿ ಸರಿಯಿಲ್ಲ, ಭಾರತದ ಕ್ರಿಕೆಟ್ ತಂಡದ ನಾಯಕ ಸರಿಯಿಲ್ಲ, ಲೋಕಾಯುಕ್ತರಿಗೆ ಅಧಿಕಾರ ನೀಡಲಿಲ್ಲ, ಪ್ರಜಾಪ್ರಭುತ್ವ ವ್ಯವಸ್ಥೆ ಸರಿಯಿಲ್ಲ, ಇತ್ಯಾದಿಯಾಗಿ ದೂರುತ್ತಲೇ ಇರುವುದು. ಅದರ ಬದಲಾಗಿ ನಮ್ಮ ಕರ್ತವ್ಯವೇನು, ನಾವೇನು ಮಾಡುತ್ತಿದ್ದೇವೆ, ನಮ್ಮ ನಾಡಿಗೆ ನಮ್ಮಿಂದ ಏನಾದರೂ ಉಪಯೋಗ ವಾಗಿದೆಯೇ, ಎಂದು ಯೋಚಿಸುವುದೇ ಇಲ್ಲ. ಒಬ್ಬ ಪ್ರಧಾನಿಯಿಂದ, ಒಬ್ಬ ಲೋಕಾಯುಕ್ತರಿಂದ, ಒಬ್ಬ ಅಧಿಕಾರಿಯಿಂದ ಸಾರ್ವಜನಿಕ ಸೇವಾಕ್ಷೇತ್ರವು ಅಭಿವೃದ್ಧಿ ಹೊಂದಲಿಲ್ಲ ಎಂದು ದೂರುವುದರಲ್ಲಿ ಅರ್ಥವಿಲ್ಲ. ನೂರು ಕೋಟಿ ಜನರ ಸಹಕಾರವಿಲ್ಲದೆ ಒಬ್ಬ ಪ್ರಧಾನಿಯಿಂದ ಏನನ್ನೂ ನಿರೀಕ್ಷಿಸುವುದು ಸರಿಯಲ್ಲ.

* ನಾವು ಈ ಕ್ಷೇತ್ರವನ್ನು ಸುಧಾರಿಸಬೇಕೆಂದರೆ ಪ್ರತಿಯೊಂದು ಇಲಾಖೆಯ ಎಲ್ಲಾ ವರ್ಗದ ನೌಕರರು ಪ್ರಾಮಾಣಿಕವಾಗಿ ಕೆಲಸ ನಿರ್ವಹಿಸಬೇಕು.
* ಸಾರ್ವಜನಿಕ ಉದ್ಯಮಗಳಲ್ಲಿ ಕಾರ್ಮಿಕರು, ಅಧಿಕಾರಿಗಳು ತಮ್ಮ ಸಮಯವನ್ನು ಸದುಪಯೋಗಪಡಿಸಿ ಕೊಳ್ಳಬೇಕು. ಇವರು ಸಂಪನ್ಮೂಲಗಳನ್ನು ಅಚ್ಚುಕಟ್ಟಾಗಿ ಬಳಸಿಕೊಳ್ಳಬೇಕು.
* ಭ್ರಷ್ಟ ಇಲಾಖೆಯನ್ನು ಗುರುತಿಸಿ ಅದರ ಮೇಲೆ ಸದಾ ಒಂದು ಕಣ್ಣು ಇಟ್ಟಿರಬೇಕು.
* ಆದಷ್ಟು ಯುವಕರನ್ನು ನೇಮಿಸಿಕೊಳ್ಳಬೇಕು. ಅರ್ಹತೆಗೆ ತಕ್ಕಂತೆ ಉದ್ಯೋಗ ನೀಡಬೇಕು.
* ಅಸಮರ್ಥ ಅಧಿಕಾರಿಗಳನ್ನು, ಭ್ರಷ್ಟ ಅಧಿಕಾರಿಗಳನ್ನು, ತಕ್ಷಣವೇ ಕೆಲಸದಿಂದ ವಜಾ ಮಾಡುವ ದಿಟ್ಟ ನಿರ್ಧಾರವನ್ನು ಸರ್ಕಾರ ತೆಗೆದುಕೊಳ್ಳಬೇಕು.






ಡೆಮ್ಮಿ ¼ ಆಕಾರದ 740 ಪುಟಗಳು
(ವಿಷಯ ಸೂಚಿ ಸೇರಿ)

ಕನ್ನಡದಲ್ಲೊಂದು ಅಪೂರ್ವ ಸಾಧನೆ

*ನವಕರ್ನಾಟಕ ಪ್ರಕಾಶನದ ಹೆಮ್ಮೆಯ ಕೊಡುಗೆ*

# ನವಕರ್ನಾಟಕ
# ಜ್ಞಾನ-ವಿಜ್ಞಾನ ಕೋಶ

## ಜ್ಞಾನ-ವಿಜ್ಞಾನ ತಂತ್ರಜ್ಞಾನದ ಸರಳ ಸಚಿತ್ರ ನಿರೂಪಣೆ

*ಪ್ರಧಾನ ಸಂಪಾದಕರು*
ಪ್ರೊ|| ಎಂ. ಎ. ಸೇತುರಾವ್
ಶ್ರೀ ಕೆ. ಎಲ್. ಗೋಪಾಲಕೃಷ್ಣರಾವ್

ಜನಪ್ರಿಯ ಮೂರನೇ ಮುದ್ರಣ

ಸಲಹಾ ಮಂಡಳಿ ಸದಸ್ಯರು : ಪ್ರೊ|| ಜಿ. ಆರ್. ಲಕ್ಷ್ಮಣರಾವ್, ಪ್ರೊ|| ಅಡ್ಯನಡ್ಕ ಕೃಷ್ಣಭಟ್ ಶ್ರೀ ಕೊಳ್ಳೇಗಾಲ ಶರ್ಮ, ಡಾ|| ಕೆ. ವಿ. ವೆಂಕಟರಾಮು, ಶ್ರೀ ಸಿ. ಆರ್. ಕೃಷ್ಣರಾವ್

*ನಾಲ್ಕು ಸಂಪುಟಗಳಲ್ಲಿ... 33 ಪರಿಣತ ವಿಜ್ಞಾನ ಲೇಖಕರ*

- 824 ಲೇಖನಗಳು
- 1,586 ವರ್ಣಚಿತ್ರಗಳು
- 150 ವಿಜ್ಞಾನಿಗಳ ಪರಿಚಯ
- 328 ಮಾಹಿತಿ ಅಂಕಣಗಳು
- 31 ನಿಮಗೆ ತಿಳಿದಿರಲಿ ಅಂಕಣಗಳು
- ನೊಬೆಲ್ ಪ್ರಶಸ್ತಿ ವಿಜೇತರು




**ಹೊಸತು**
ಮಾಸಪತ್ರಿಕೆಗೆ ಮೂರು ವರ್ಷದ ಚಂದಾ ಹಣ ರೂ. 300/- ನೀಡಿ ಜ್ಞಾನ-ವಿಜ್ಞಾನ ಕೋಶದ ಬೆಲೆಯ ಮೇಲೆ 20% ರಿಯಾಯಿತಿ ಪಡೆಯಿರಿ




**4 ಸಂಪುಟಗಳ**
**ಒಟ್ಟು ಬೆಲೆ : ರೂ. 1800**

*ಕೆಲವು ಅಭಿಪ್ರಾಯಗಳು*

ಅನೇಕ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಕೊಟ್ಟಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಈಗ ಭಾರತ ಸ್ವಾತಂತ್ರ್ಯದ ಸುವರ್ಣೋತ್ಸವದ ನೆನಪಿಗಾಗಿ ಇನ್ನೊಂದು ದೊಡ್ಡ ಯೋಜನೆಯನ್ನು ಕಾರ್ಯರೂಪಕ್ಕೆ ತಂದಿದೆ. ಅದೇ ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ. ಕರ್ನಾಟಕದ ಮಟ್ಟಿಗಂತೂ ಖಾಸಗಿ ನೆಲೆಯಲ್ಲಿ ಇದು ಪ್ರಥಮ ಪ್ರಯತ್ನ. - *ಕರ್ಮವೀರ*, 10-5-98

ವಿಜ್ಞಾನ ಮಾಹಿತಿಗಳ ವಾಹಿನಿಯ ನಡುವೆ ಅಲ್ಲಲ್ಲಿ ನೀಡಿರುವ 'ನಿಮಗೆ ತಿಳಿದಿರಲಿ' ವಿಭಾಗವು ಅನೇಕ ಸಾರ್ವತ್ರಿಕ ಆಸಕ್ತಿಯ ವಿಷಯಗಳ ಪರಿಚಯ ನೀಡುವುದರ ಜೊತೆಗೆ ಆ ವಿದ್ಯಮಾನಗಳ ಹಿಂದೆ ಅಡಗಿರುವ ಮೂಲ ವೈಜ್ಞಾನಿಕ ತತ್ವಗಳನ್ನು ತಿಳಿಸಿಕೊಡುತ್ತದೆ. ಇದು ವಿದ್ಯಾರ್ಥಿಗಳಿಗೂ, ಸಾಮಾನ್ಯ ಓದುಗರಿಗೂ ಆಸಕ್ತಿದಾಯಕ. - *ಕನ್ನಡಪ್ರಭ*, 26-4-98

ಇದೊಂದು ಮರಿ ವಿಶ್ವಕೋಶ. ಕನ್ನಡದಲ್ಲಿ ವಿಜ್ಞಾನ ವಾಙ್ಮಯ ಸಾಕಷ್ಟು ಪ್ರೌಢ ಸ್ಥಿತಿ ಐದಿರುವುದಕ್ಕೆ ಮಾನಕ.... ಕನ್ನಡದ ಹಿರಿಮೆ ಗರಿಮೆ ಬಗ್ಗೆ ಕೃತಾರ್ಥತೆ, ನವಕರ್ನಾಟಕದವರ ಬಗ್ಗೆ ಕೃತಜ್ಞತೆ. - ಜಿ. ಟಿ. ನಾರಾಯಣರಾವ್, ವೆಬ್‌ಸೈಟ್‌ನಲ್ಲಿ

ಈ ಶತಮಾನದ ಮಹತ್ವದ ಪ್ರಕಟಣೆಗಳಲ್ಲಿ ಮೈಲುಗಲ್ಲಾದ ನಿಮ್ಮ ಪ್ರಯತ್ನವನ್ನು ಕನ್ನಡ ವೈದ್ಯ ಸಾಹಿತ್ಯ ಪರಿಷತ್ತು ಅಭಿನಂದಿಸುತ್ತದೆ ಮತ್ತು ಶುಭ ಹಾರೈಸುತ್ತದೆ. - ಡಾ|| ಡಿ. ಕೆ. ಮಹಾಬಲರಾಜು, ಡಾ|| ಎ. ಟಿ. ಪಾಟೀಲ್




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂಚೆ ಪೆಟ್ಟಿಗೆ ಸಂಖ್ಯೆ : 5159
ಬೆಂಗಳೂರು - 560 001. ದೂರವಾಣಿ : 22203580, 30578022. ಫ್ಯಾಕ್ಸ್ : 30578023
e-mail : nkp@bgl.vsnl.net.in website : www.navakarnatakabooks.com
*ಶಾಖೆಗಳು :* ■ ಬೆಂಗಳೂರು - 9 ■ ಮಂಗಳೂರು - 1 ■ ಮೈಸೂರು - 24 ■ ಗುಲ್ಬರ್ಗಾ - 2

* ಅರ್ಹತೆಯನುಸಾರವಾಗಿ ತೃಪ್ತಿಕರ ಸಂಬಳವನ್ನು ನೌಕರರಿಗೆ ನೀಡಬೇಕು.
* ಉದ್ಯೋಗದಲ್ಲಿ ಭದ್ರತೆಯೊದಗಿಸಬೇಕು. ಪ್ರತಿಭೆಗೆ ಮನ್ನಣೆ ನೀಡಬೇಕು.
* ಮೇಲೆ ತಿಳಿಸಿದ ಅಂಶಗಳ ಜೊತೆಗೆ ಮಹಿಳೆಯರಿಗೆ ಹೆಚ್ಚಿನ ಉದ್ಯೋಗವನ್ನು ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ನೀಡಿದರೆ ಹಲವಾರು ಸಮಸ್ಯೆಗಳಿಗೆ ಉತ್ತರವಾಗಬಹುದು.

ಚಳುವಳಿಯ ಮುಖಾಂತರ ಸೇವಾಕ್ಷೇತ್ರವನ್ನು ಸುಧಾರಿಸುವುದು ಕಷ್ಟದ ಕೆಲಸವೇ. ಏಕೆಂದರೆ ಯಾವ ಚಳುವಳಿಯೂ ಇತ್ತೀಚಿನ ದಿನಗಳಲ್ಲಿ ಯಶಸ್ವಿಯಾಗುತ್ತಿಲ್ಲ. ಚಳುವಳಿಯು ಯಶಸ್ವಿಯಾಗಬೇಕಾದರೆ ಅದರ ಉದ್ದೇಶವು ಸ್ಪಷ್ಟವಾಗಿರಬೇಕು. ಅಂತಿಮ ಗುರಿ ತಲುಪುವವರೆಗೂ ಎಲ್ಲಿಯೂ ಯಾವ ಆಮಿಷಕ್ಕೂ ಒಳಗಾಗದೆ ಮುಂದುವರಿಯಬೇಕು.

ಹೀಗೆ ಸಾರ್ವಜನಿಕ ಸೇವಾಕ್ಷೇತ್ರವು ಉತ್ತಮವಾದ ರೀತಿಯಲ್ಲಿ ಕೆಲಸ ನಿರ್ವಹಿಸಬೇಕಾದರೆ ನಮ್ಮೆಲ್ಲರ ಸಹಕಾರ ಭಾಗವಹಿಸುವಿಕೆ ಅತ್ಯಗತ್ಯ.

ಶಿವರಾಮ ಎಂ. ಎನ್.
ಮಿಡಿಗೇಶಿ, ಮಧುಗಿರಿ ತಾಲೂಕು, ತುಮಕೂರು ಜಿಲ್ಲೆ - ೫೭೨ ೧೩೩

ನಿಮ್ಮ ಪ್ರಶ್ನೆಗೆ ಪ್ರತಿಯಾಗಿ ಇನ್ನೊಂದು ಪ್ರಶ್ನೆ ನಮ್ಮ ಮುಂದೆ ಬಂದು ನಿಲ್ಲುತ್ತದೆ. ಅದು ಯಾವುದೆಂದರೆ, ನಮ್ಮ ಭಾರತದ ಬಡತನ, ನಿರುದ್ಯೋಗ, ಅಜ್ಞಾನ ದೂಡುವ ದಾರಿ ಯಾವುದು ? ಇದಕ್ಕೆ ಎಲ್ಲರ ಐಕ್ಯತೆಯ ಹೊರತು ಇನ್ನಾವುದು, ಎಂಬ ಉತ್ತರ ಬಂದು ನಿಲ್ಲುವುದು. ಮೊದಲು ಸಾರ್ವಜನಿಕರಲ್ಲಿ ಹೋರಾಟ ಪ್ರಜ್ಞೆ, ಐಕ್ಯತೆ ಇಲ್ಲ, ಜನರಲ್ಲಿ ಸ್ವಾರ್ಥ ಭಾವನೆ ತುಂಬಿದೆ !

ಇಂದು ಸಮಾಜದಲ್ಲಿ ಭ್ರಷ್ಟಾಚಾರ ಹೆಚ್ಚುತ್ತ ನಡೆದಿದೆ. ಈ ಭ್ರಷ್ಟಾಚಾರಕ್ಕೆ ಜನರೇ ಕಾರಣರು. ಅದರ ವಿರುದ್ಧ ಹೋರಾಟ, ಪ್ರತಿಭಟನೆ, ಚಳುವಳಿ ಯಾವುದೂ ಇಲ್ಲ! ಇಂದು ಸಾರ್ವಜನಿಕ ಸರಕಾರಿ ಶಾಲೆಯಲ್ಲಿ ಮಕ್ಕಳಿಗೆ ಶಿಕ್ಷಣ ನೀಡುವುದಕ್ಕಾಗಿ ಸರಕಾರ ಶಿಕ್ಷಕರಿಗೆ ಸಂಬಳ ಕೊಡುತ್ತಿದೆ; ನಾವು ಶ್ರದ್ಧೆಯಿಂದ ದುಡಿದು ಈ ಮಕ್ಕಳನ್ನು ದೇಶದ ಸತ್‌ಪ್ರಜೆಗಳನ್ನಾಗಿ ಮಾಡಬೇಕೆಂಬ ಕಳಕಳಿ ಇಲ್ಲ. ಅವರು ಮಕ್ಕಳಿಗೆ ಚೆನ್ನಾಗಿ ಓದಿಸುವುದಿಲ್ಲವೆಂದು ಊರಿನ ಮುಖಂಡರು, ಬಾಲಕರ ಪಾಲ-ಪೋಷಕರು ಕೂಡ ಕೇಳುವುದಿಲ್ಲ. ಚೆನ್ನಾಗಿ ಮಕ್ಕಳಿಗೆ ಓದಿಸದಿದ್ದರೆ ಅವರನ್ನು ಕೆಲಸದಿಂದ ಕಿತ್ತುಹಾಕಲಾಗುವುದು ಎಂದು ಒಮ್ಮೆಯೂ ಹೋರಾಟ ಮಾಡಿಲ್ಲ. ಇದಕ್ಕೆ ಹೋರಾಟವೇ ಮುಖ್ಯ; ಆದರೆ ಜನ ಹೋರಾಟಮಾಡಲು ಸಿದ್ಧವಿಲ್ಲ.

ಅಣ್ಣ ಬಸವಣ್ಣನವರ ಅನುಭವ ಮಂಟಪದಲ್ಲಿ ಶರಣರು ಪಳಗಿದಂತೆ ಶರಣೆಯರೂ ಪಳಗಿದ್ದರು. ಆ ಅನುಭವ ಮಂಟಪಕ್ಕೆ ಬರುವ ಕೆಲವು ಶರಣರು ಕೇಳಿದರು ''ಕಾಯಕ ಎಂದರೇನು ?'' ಅದರಲ್ಲಿ ಕೆಲವು ಶರಣರು ಹೇಳಿದರು ''ಮಾನಸಿಕವಾಗಿ ಬೌದ್ಧಿಕವಾಗಿ ದೈಹಿಕವಾಗಿ ಅತ್ಯುತ್ತಮವಾಗಿದ್ದುಕೊಂಡು ಮಾಡಿದ ಕೆಲಸವೇ ಕಾಯಕ.'' ಅದರಲ್ಲಿ ಯಾವುದೇ ಒಂದು ಅತ್ಯುತ್ತಮವಾಗಿಲ್ಲದಿದ್ದರೆ ಅದು ಕಾಯಕವಲ್ಲ, ಇವು ಮೂರೂ ಅತ್ಯುತ್ತಮವಾಗಿರಬೇಕು. ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಕೆಲಸಮಾಡುವ ಜನರಲ್ಲಿ ಈ ಮೂರರಲ್ಲಿ ಒಂದಾದರೂ ಕಡಿಮೆ ಇದ್ದೇ ಇರುವುದು. ಇದರಿಂದ ಯಾರಿಗೂ ಅವರ ಕಾಯಕದಿಂದ ಕೈಲಾಸ ಸಿಗುವುದಿಲ್ಲ.

ಪ್ರತಿಯೊಂದು ರಂಗದಲ್ಲಿಯೂ ಭ್ರಷ್ಟಾಚಾರ ಇದೆ ಎಂದು ಹೇಳುತ್ತಾರೆ. ಅದರ ಬಗ್ಗೆ ಎಂದಾದರೂ ಒಂದು ದಿನ ಪ್ರತಿಭಟನೆ ಮಾಡಿದ್ದಾರೆಯೆ ? ತಮ್ಮ ಕೆಲಸ ಮುಗಿದರೆ ಸಾಕು, ಎನ್ನುವಂಥವರು ನಮ್ಮ ಜನ! ಜೀವವಿಲ್ಲದ, ಹಣ ಬೇಡದ, ಕರಿಯ ಕಲ್ಲಿನ ತಿರುಪತಿ ತಿಮ್ಮಪ್ಪನ ದರ್ಶನಕ್ಕೆ ಕ್ಯೂ ಹಚ್ಚದೆ ಐನೂರು ರೂಪಾಯಿ ಕೊಟ್ಟು ನೇರ ದರುಶನ ಪಡೆದುಕೊಂಡು ಹೋಗುವ ಜನರು ಎಷ್ಟೋ ಇದ್ದಾರೆ. ಇವರಿಗೆ ಹೋರಾಟ ಚಳುವಳಿ ಪ್ರತಿಭಟನೆ ಯಾವುದೂ ಬೇಕಿಲ್ಲ.

ಇಂದು ದೀನ ದಲಿತರು, ಹಿಂದುಳಿದವರು, ತಮ್ಮ ಬೇಕು ಬೇಡಿಕೆಗಾಗಿ ಹೋರಾಟ ಮಾಡಬೇಕು. ಇದರಲ್ಲಿ ನಾವು ಕಳೆದುಕೊಳ್ಳುವುದೇನಿದೆ ? ನಮ್ಮ ಬಡತನ ಅಜ್ಞಾನ ನಿರುದ್ಯೋಗ ಹೊರತು ಮತ್ತಾವುದೆಂದು ತಿಳಿದು ಹೋರಾಟಕ್ಕೆ ನಿಂತರೆ ಈ ದೇಶದ ಬಡತನ ದೂರಾಗುವ ದಿನಗಳು ದೂರವಿಲ್ಲ. ಯಾವುದೇ ಹೋರಾಟಕ್ಕೆ ಬರುವ ಜನರು ತಮ್ಮ ಕುಲದ ಕುಹಕವನ್ನು ಕಳೆದುಕೊಂಡು ಬರಬೇಕು. ಈ ಐಕ್ಯತೆಯಿಂದ ಈ ದೇಶದ ಭ್ರಷ್ಟಾಚಾರ, ಬಡತನ, ನಿರುದ್ಯೋಗ, ಅಜ್ಞಾನ, ಒಂದೇ ಒಂದಿಲ್ಲದಂತೆ ಓಡಿಸಬಹುದು.

ಸಾರ್ವಜನಿಕ ಸೇವಾಕ್ಷೇತ್ರದಲ್ಲಿ ಕೆಲಸ ಮಾಡುವವರ ತಪ್ಪುಗಳನ್ನು ಹೆಜ್ಜೆಹೆಜ್ಜೆಗೂ ಎತ್ತಿ ಓಡಿದು ಅವರ ಮೇಲೆ ತಕ್ಕ ಕ್ರಮವನ್ನು ಕೈಗೊಳ್ಳಬೇಕು. ಈ ಜಾಗೃತಿ ಒಂದು ಹಳ್ಳಿಯಲ್ಲಿ ಅಲ್ಲ, ಇಡೀ ರಾಷ್ಟ್ರದ ತುಂಬಾ ವ್ಯಾಪಿಸಬೇಕು. ಅಂದಾಗ, ನಮ್ಮ ಸಾರ್ವಜನಿಕ ಕ್ಷೇತ್ರಗಳಾದ ಶಿಕ್ಷಣ, ಆರೋಗ್ಯ, ಸಾರಿಗೆ ಉದ್ದಿಮೆಗಳು ಚೆನ್ನಾಗಿ ಬೆಳವಣಿಗೆಯಾಗುವುವು ಮತ್ತು ಸಾರ್ವಜನಿಕರಿಗೂ ಹಿತವಾಗುವುದು. ಇಲ್ಲದಿದ್ದರೆ ಮುಂದೆ ದೇಶವೇ ಹಾಳಾಗುವುದು.

ಇನ್ನೊಂದು ವಿಷಯ : ಜನರು ಹೋರಾಟ ಮಾಡಬೇಕು; ಆದರೆ ಯಾರಿಗೂ ಹಾನಿಯಾಗಬಾರದು. ಎಷ್ಟೋ ಹೋರಾಟಗಳಲ್ಲಿ ಸಾರ್ವಜನಿಕ ವಸ್ತುಗಳನ್ನು ಸುಟ್ಟು ಹಾಕುವುದು, ಬಸ್ಸು-ಅಂಗಡಿಗಳನ್ನು ಸುಡುವುದು ಇದೆ. ಇದು ಮೊದಲನೆಯ ತಪ್ಪು. ಇದ್ದ ವಸ್ತುಗಳನ್ನು ಕಳೆದುಕೊಂಡು ಇನ್ನೂ ಕಷ್ಟದಲ್ಲಿ ಇರಬೇಕಾಗುವುದು. ನಾವು ಮಾಡುವ ಹೋರಾಟ ನ್ಯಾಯಬದ್ಧವಾಗಿರಬೇಕು, ಹೋರಾಟದಲ್ಲಿ ಶಿಸ್ತು ಇರಬೇಕು.

ಸಂಗಣ್ಣ ಹೊಸಮನಿ, ವಾಡಿ
ಎ.ಸಿ.ಸಿ. ಕಾಲೋನಿ, ಎಸ್.ಟಿ.ಆರ್.ಟಿ. ೪೪/೩ ವಾಡಿ, ಅಂಚೆ : ವಾಡಿ, ಕಲಬುರ್ಗಿ ಜಿಲ್ಲೆ

ನಿಮ್ಮ ಮಾತುಗಳು ಮೇಲ್ನೋಟಕ್ಕೆ ಮಾತ್ರ ಅಂತಾ ನನಗೆ ಹೊಳೆಯುತ್ತಿದೆ. ಎಲ್ಲಿ ಕ್ರಾಂತಿ ಇದೆಯೋ ಅಲ್ಲಿ ಶಾಂತಿ ಇರುತದೆ. ಎಲ್ಲಿ ದ್ವೇಷ ಇದೆಯೊ ಅಲ್ಲಿ ಪ್ರೀತಿ ಇದೆ. ಎಲ್ಲಿ ಸರ್ಕಾರಿ ಸೇವೆಗಳಿವೆಯೊ ಅಲ್ಲಿ ಖಾಸಗಿ ಸೇವೆಗಳು ಇವೆ. ಎಲ್ಲಿ ಆಕರ್ಷಣೆ ಇದೆಯೊ ಅಲ್ಲಿ ವಂಚನೆ ಇದೆಯೆಂದು ನಾವು ನಂಬಿ ಕುಳಿತರೆ ಆಗದು.

ಒಂದರ ಪರ್ಯಾಯವಾಗಿ ಒಂದು ಹುಟ್ಟಿಕೊಂಡರೆ ಅದು ಅದಕ್ಕಿಂತಲೂ ವಿಭಿನ್ನವಾಗಿರುವುದಂತೂ ಸತ್ಯ. ಸರ್ಕಾರಿ ಕ್ಷೇತ್ರಗಳ ಪರ್ಯಾಯವಾಗಿ ಖಾಸಗಿ ಕ್ಷೇತ್ರಗಳು ಉದಯಿಸಿವೆಯೆಂದರೆ ಅವುಗಳು ಭಿನ್ನವೇ ಆಗಿರುತ್ತವೆ. ಪ್ರತಿಯೊಬ್ಬ ವಿದ್ಯಾರ್ಥಿಯ ಮೇಲೆಯೂ ಹೆಚ್ಚಿನ ಆಸಕ್ತಿ ವಹಿಸಿ ಕಲಿಸುವುದರಿಂದ ಖಾಸಗಿ ಶಾಲೆಗಳಲ್ಲಿ ಕಲಿತ ವಿದ್ಯಾರ್ಥಿಗಳು ಸರ್ಕಾರಿ ಶಾಲೆಯವರಿಗಿಂತ ಹತ್ತರಷ್ಟು ಜಾಣರಾಗಿರುತ್ತಾರೆ ಎಂಬುದರಲ್ಲಿ ಸಂಶಯವೇ ಇಲ್ಲ.

ಆರೋಗ್ಯ ಕ್ಷೇತ್ರವನ್ನು ನೋಡಿದಾಗ, ಅಲ್ಲಿಯೂ ಅನೇಕ ರೀತಿಯ ಸಮಸ್ಯೆಗಳಿವೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಉತ್ತಮವಾದ ಔಷಧಿ ದೊರೆಯುತ್ತಿದ್ದರೂ ಅಲ್ಲಿ ಸೇವೆಯಲ್ಲಿರುವವರ ವೈಫಲ್ಯದಿಂದ ಜನತೆಗೆ ಅನ್ಯಾಯವಾಗುತ್ತಿದೆ. ಖಾಸಗಿ ಆಸ್ಪತ್ರೆಗಳಲ್ಲಿ ಪ್ರತಿಯೊಂದೂ ದುಬಾರಿ ಇದೆ, ಅಲ್ಲಿ ಕೊಡಬೇಕಾದ ಬಿಲ್ಲು ಮೊದಲುಗೊಂಡು. ಆದರೆ ಅಲ್ಲಿ ವೈದ್ಯರು ರೋಗಿಗಳನ್ನು ಉಪಚರಿಸುವ ರೀತಿ ಉತ್ತಮವಾಗಿದೆ. ಇದರಿಂದ ಜನರು ಹೆಚ್ಚಿಗೆ ಹಣ ಕೊಡಬೇಕಾಗಿ ಬಂದರೂ ಸಹ ಖಾಸಗಿ ಆಸ್ಪತ್ರೆಗೆ ಹೋಗುತ್ತಾರೆ.

ಸಾರಿಗೆ ಕ್ಷೇತ್ರದಲ್ಲಿಯೂ ಇದೇ ಸಮಸ್ಯೆಯಾಗಿದೆ. ಸರ್ಕಾರಿ ವಾಹನಗಳಿಗಿಂತಲೂ ಖಾಸಗಿ ವಾಹನಗಳೂ ಸೂಪರ್ ಆಗಿವೆ. ಹಾಗಂತಾ ಸರ್ಕಾರಿ ವಾಹನಗಳು ಕಳಪೆಮಟ್ಟದಲ್ಲಿವೆ ಅಂತಾ ನಮ್ಮ ಅಭಿಪ್ರಾಯವಲ್ಲ. ಇವರಿಗಿಂತಲೂ ಖಾಸಗಿಯವರು ಒಳ್ಳೆಯ ರೀತಿಯಲ್ಲಿ ವಾಹನಗಳನ್ನು ಸಿದ್ಧಪಡಿಸಿದ್ದಾರೆ. ಈ ಕ್ಷೇತ್ರಗಳು ಸಾಮಾನ್ಯ ಜನರಿಗೆ ಎಟಕುವಂತಹುಗಳಲ್ಲ. ಇದರಿಂದ ಸಾಮಾನ್ಯ ಜನರಿಗೆ ಬಹಳ ಮೋಸವಾಗುತ್ತಿದೆ. ಸಾಮಾನ್ಯ ಜನತೆಗೆ ಬದುಕುವುದೇ ಬೇಸರ ಎನ್ನುವಷ್ಟರಮಟ್ಟಿಗೆ ಮೋಸವಾಗುತ್ತಿದೆ: ಅವರಿಗೂ ಆಸೆಗಳಿರುತ್ತವೆ. ಆದರೆ ಜನಸಾಮಾನ್ಯರ ಆಸೆಗಳನ್ನು ಈಡೇರಿಸದ ಸರಕಾರ ಯಾವ ಸುಖಕ್ಕೋಸ್ಕರ ನಮಗೆ ಬೇಕು! ಸರ್ಕಾರದವರು ಏನೇ ಒಂದು ಹೊಸ ಯೋಜನೆ ಜಾರಿಗೆ ತಂದರೂ ಅಲ್ಲಿ ಆಡಳಿತದಲ್ಲಿರುವ ಅಧಿಕಾರಿಗಳ ಕಾರ್ಯವೈಫಲ್ಯದಿಂದಾಗಿ ಜನತೆಯ ಗೋಳು ಕೇಳುವವರಾರು ? ಇಂತಹ ವಿಚಾರಗಳಲ್ಲಿ ಸರ್ಕಾರವು ಬಹಳಷ್ಟು ಎಚ್ಚೆತ್ತು ಜನತೆಗೆ ಮೋಸಮಾಡುವವರ ವಿರುದ್ಧ ಕಠಿಣ ಕ್ರಮಗಳನ್ನು ತೆಗೆದುಕೊಳ್ಳುವುದು ಯಾವಾಗ ?

ಅತ್ಯಾಚಾರಕ್ಕಂತೂ ಇಲ್ಲಿ ಸುಗಮವಾದ ದಾರಿಯಿದೆ. ಮೊನ್ನೆ ಮೊನ್ನೆ ನಡೆದ ಘಟನೆ ನೆನಪು ಮಾಡಿಕೊಂಡರೆ ಭಾರತೀಯ ಸಂಸ್ಕೃತಿಗೆ ಕಪ್ಪು ಚುಕ್ಕೆಯಾಗಿದೆ. ಸಾಮಾಜಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿರುವ ಯೋಧರು ಅಮಾಯಕ ಮಹಿಳೆಯರ ಮೇಲೆ ಮಾಡಿದ ಅತ್ಯಾಚಾರವದು. ಅವರು ಅರೆಬೆತ್ತಲೆಯಾಗಿ ಪ್ರತಿಭಟಿಸಿದ ರೀತಿ ಸಂಸ್ಕೃತಿಗೆ ಮಾರಕವಲ್ಲದೆ ಅವರ ಅಕ್ಕಪಕ್ಕದ ಮಹಿಳೆಯರೂ ಭಯದಲ್ಲಿ ಬದುಕಾಗಿದೆ. ಇಂತಹ ಅತ್ಯಾಚಾರಗಳು ದೇಶದಲ್ಲಿ ಪ್ರತಿದಿನ ಪ್ರತಿಯೊಂದು ಮೂಲೆ ಮೂಲೆಗಳಲ್ಲಿಯೂ ನಡೆಯುತ್ತಲೇ ಇವೆ. ಇವುಗಳ ವಿಷಯವಾಗಿ ಕುರುಡಾಗಿ ವರ್ತಿಸುತ್ತಿರುವ ಸರಕಾರ ನಮಗೆ ಯಾಕೆ ಬೇಕು ? ಇದನ್ನು ಸುಧಾರಿಸದ ಸರ್ಕಾರ ನಿಜಕ್ಕೂ ಜನವಿರೋಧಿ ಸರ್ಕಾರವೇ ಸರಿ. ಪ್ರತಿಯೊಂದು ವಿಷಯದಲ್ಲಿಯೂ ಸರಕಾರ ವೈಫಲ್ಯ ತೋರಿದರೆ ಜನ ನಂಬುವುದಾದರೂ ಯಾರನ್ನು ?

ವಿಷ್ಣು ಬಡಿಗೇರ
ಕೆಸರಗೊಪ್ಪ, ಮುಧೋಳ ತಾಲೂಕು, ಬಾಗಲಕೋಟೆ ಜಿಲ್ಲೆ

## ನವಕರ್ನಾಟಕ ಪ್ರಕಾಶನದ ಕೆಲವು ಪ್ರಶಸ್ತಿ ಪುರಸ್ಕೃತ ಕೃತಿಗಳು

ಕಂದಾ ಓದುವೆಯಾ – ಭಾಗ 1 (ಸಚಿತ್ರ. 3ನೇ ಮುದ್ರಣ) ಬಿ. ಕೆ. ತಿರುಮಲಮ್ಮ 18.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1995)**

ಯಶವಂತನ ಯಶೋಗೀತ (ಮಕ್ಕಳ ಕಾದಂಬರಿ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಸಿಸು ಸಂಗಮೇಶ' ಪ್ರಶಸ್ತಿ 2002. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002)** ಆರ್. ವಿ. ಭಂಡಾರಿ 50.00

ಬದುಕುವ ಬಯಕೆ **(ಎನ್.ಸಿ.ಇ.ಆರ್.ಟಿ. ರಾಷ್ಟ್ರೀಯ ಪ್ರಶಸ್ತಿ 1976)** ದು. ನಿಂ. ಬೆಳಗಲಿ 12.00

ಸುಖ ನೀಡದ ಸಂಪತ್ತು (2ನೇ ಮು.) **(ಕನ್ನಡ ಸಾಹಿತ್ಯ ಪರಿಷತ್ತಿನ 'ಮಕ್ಕಳ ಪುಸ್ತಕ ಪ್ರಶಸ್ತಿ' 1999)** ಪ. ರಾಮಕೃಷ್ಣ ಶಾಸ್ತ್ರಿ 15.00

ಕುಂಭಕರ್ಣನ ನಿದ್ದೆ ಎನ್. ಶ್ರೀನಿವಾಸ ಉಡುಪ 12.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1996-97, ಕರ್ನಾಟಕ ಸಾಹಿತ್ಯ ಅಕಾಡೆಮಿ ಶಿಶುಸಾಹಿತ್ಯ ಬಹುಮಾನ 1996)**

ಚಕ್ರ (ಜನಪ್ರಿಯ ವಿಜ್ಞಾನ ಲೇಖನಗಳು. 3ನೇ ಮು.) **(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1996)** ಜೆ. ಆರ್. ಲಕ್ಷ್ಮಣ ರಾವ್ 50.00

ಪ್ರತಿಬಿಂಬ (ಮಕ್ಕಳಿಗಾಗಿ ಮನೋರಂಜಕ ವೈಜ್ಞಾನಿಕ ಚಟುವಟಿಕೆಗಳು) ಪ್ರೊ|| ಡಿ. ಆರ್. ಬಳೂರಗಿ 35.00
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 2000)**

ಸೃಜನಶೀಲ ಸಂಶೋಧಕ ಚಿಂತಕ – ಲೂಯಿ ಪಾಶ್ಚರ್ (3ನೇ ಮುದ್ರಣ)
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)** ತುಮಕೂರು ನಾಗಭೂಷಣ 28.00

ವಿಶ್ವವಿಖ್ಯಾತ ಸಂಶೋಧಕರು – ಸಾಧನೆಗಳು (8ನೇ ಮುದ್ರಣ)
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1991-92)** ಸೂರ್ಯಕಾಂತ 40.00

ತೆಂಗು. ಸಸ್ಯ-ಸಂರಕ್ಷಣೆ (2ನೇ ಮು.) **(ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ ಪ್ರಶಸ್ತಿ)** ಬಿ. ಮಹಂತೇಶ್ 50.00

ಬಳ್ಳಿ ತರಕಾರಿಗಳು (5ನೇ ಮುದ್ರಣ) ಡಾ|| ಪಿ. ನಾರಾಯಣಸ್ವಾಮಿ, ಡಾ|| ಎಲ್. ವಸಂತ 25.00
**(ಧಾರವಾಡ ಕೃಷಿ ವಿ.ವಿ. ಕನ್ನಡ ಸಂಘದ ಪಂಚವಾರ್ಷಿಕ 'ಕೃಷಿ ಸಾಹಿತ್ಯ ಶ್ರೀ' ಪ್ರಶಸ್ತಿ 1994-99)**

ಕಾಯಿಲೆಯ ಕಾರಣಗಳು. ನಿಮ್ಮ ನಂಬಿಕೆ ಎಷ್ಟು ಸರಿ ? (2ನೇ ಮು.) ಡಾ|| ಸಿ. ಆರ್. ಚಂದ್ರಶೇಖರ್ 50.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯ ಸಾಹಿತ್ಯ ಪ್ರಶಸ್ತಿ' 1998-99)**

ಕ್ಯಾನ್ಸರ್ ಲೋಕ (2ನೇ ಮು.) **(ಕನ್ನಡ ವೈದ್ಯ ಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1997)** ಡಾ|| ಎಚ್. ಡಿ. ಚಂದ್ರಪ್ಪ ಗೌಡ 65.00

ಗಿಡಮೂಲಿಕೆಗಳಿಂದ ಸೌಂದರ್ಯ ಸಾಧನಗಳು (6ನೇ ಮುದ್ರಣ) ಡಾ|| ಎಲ್. ವಸಂತ 25.00
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸಕ್ಕಾಗಿ ಪ್ರಶಸ್ತಿ' 1994)**

ಶ್ರೀಸಾಮಾನ್ಯ ಮತ್ತು ವೈದ್ಯ ಡಾ|| ಸ. ಜ. ನಾಗಲೋಟಿಮಠ 18.00
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998; ಕನ್ನಡ ವೈದ್ಯಸಾಹಿತ್ಯ ಪರಿಷತ್ತಿನ 'ಕುವೆಂಪು ಪ್ರಶಸ್ತಿ' 1998)**

ಆಪ್ತ ಸಲಹೆ ಸಮಾಧಾನ (4ನೇ ಮುದ್ರಣ) ಡಾ|| ಸಿ. ಆರ್. ಚಂದ್ರಶೇಖರ್ 35.00
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996)**

ಮಡದಿ ಮತ್ತೊಬ್ಬ ಚೆಲುವಗೆ (ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ ? ಭಾಗ - 2) ಡಾ|| ಮೀನಗುಂಡಿ ಸುಬ್ರಮಣ್ಯ 50.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ವಿಶೇಷ ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ (5ನೇ ಮುದ್ರಣ) ಡಾ|| ಮೀನಗುಂಡಿ ಸುಬ್ರಮಣ್ಯ 160.00
**(ವರ್ಧಮಾನ ಪ್ರಶಸ್ತಿ 1993)**

ಲೈಂಗಿಕ ಆರೋಗ್ಯ (3ನೇ ಮುದ್ರಣ) ಡಾ|| ಪದ್ಮಿನಿ ಪ್ರಸಾದ್ 60.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2003-04)**

ನೀವು ಬಳಸುವ ಔಷಧಗಳು (ಪರಿಷ್ಕೃತ 4ನೇ ಮುದ್ರಣ)
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2000)** ಡಾ|| ಸಿ. ಆರ್. ಚಂದ್ರಶೇಖರ್ 80.00

ಹಿತ-ಅಹಿತ. ವೃತ್ತಿ ಜೀವನದ 25 ವರ್ಷಗಳು ಡಾ|| ಸಿ. ಆರ್. ಚಂದ್ರಶೇಖರ್ 125.00
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಹಾ.ಮಾ.ನಾ. ಪ್ರಶಸ್ತಿ' 2002)**

ನನಗೆ 'ಬೈ-ಪಾಸ್' ಆಯಿತು (ಸ್ವಾನುಭವದ ಕಥನ) ಡಾ|| ಎಚ್. ಡಿ. ಚಂದ್ರಪ್ಪ ಗೌಡ 65.00
**(ಡಾ|| ಪಿ. ಎಸ್. ಶಂಕರ ಪ್ರತಿಷ್ಠಾನದ 'ಶ್ರೇಷ್ಠ ವೈದ್ಯಸಾಹಿತ್ಯ ಪ್ರಶಸ್ತಿ' 2002)**

ವೈದ್ಯಲೋಕದ ಕೌತುಕಗಳು (3ನೇ ಮುದ್ರಣ)
**(ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ 1993)** ಡಾ|| ಎಚ್. ಡಿ. ಚಂದ್ರಪ್ಪ ಗೌಡ 50.00

ಮನೋರೋಗ ಗೆಲ್ಲಬಹುದೇ ? (2ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ ಪ್ರಶಸ್ತಿ 1996; ಕರ್ನಾಟಕ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1996)** ಸ್ನೇಹಾ 75.00

ನವಕರ್ನಾಟಕ ಜ್ಞಾನ-ವಿಜ್ಞಾನ ಕೋಶ (4 ಸಂಪುಟಗಳ ಸೆಟ್. 3ನೇ ಮುದ್ರಣ)
**(ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1998-99)** (ಪ್ರ. ಸಂ.: ಎಂ. ಎ. ಸೇತುರಾವ್,
**(ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998-99)** ಕೆ. ಎಲ್. ಗೋಪಾಲಕೃಷ್ಣ ರಾವ್) 1800.00

ಫಲಜ್ಯೋತಿಷ ನಂಬುವಿರಾ ? (2ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 2001)** ಡಾ|| ಎಸ್. ಬಾಲಚಂದ್ರರಾವ್ 40.00

ಸಂಪ್ರದಾಯ, ವಿಜ್ಞಾನ ಮತ್ತು ಸಮಾಜ (6ನೇ ಮುದ್ರಣ)
**(ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ|| ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1988-89)** ಡಾ|| ಎಸ್. ಬಾಲಚಂದ್ರರಾವ್ 28.00

| | | |
|---|---|---|
| ವೈಜ್ಞಾನಿಕ ಮನೋಧರ್ಮ (6ನೇ ಮುದ್ರಣ) | ಜಿ. ಟಿ. ನಾರಾಯಣ ರಾವ್ | 80.00 |
| (ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪುರಸ್ಕಾರ 1990, ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1992) | | |
| ಭಗವದ್ಗೀತೆ. ಒಂದು ವೈಚಾರಿಕ ಒಳನೋಟ (2ನೇ ಮುದ್ರಣ) | | |
| (ಕನ್ನಡ ಸಾಹಿತ್ಯ ಪರಿಷತ್ತಿನ 'ಡಾ॥ ಎಚ್. ಎನ್. ದತ್ತಿನಿಧಿ' ಪ್ರಶಸ್ತಿ 1997) | ಪ್ರೊ॥ ಬಿ. ವಿ. ವೀರಭದ್ರಪ್ಪ | 50.00 |
| ಮಹಿಳೆ – ಬಿಡುಗಡೆಯ ಹಾದಿಯಲ್ಲಿ (3ನೇ ಮುದ್ರಣ) | | |
| (ಬಿ.ಎಂ.ಶ್ರೀ. ಪ್ರತಿಷ್ಠಾನದ 'ಸಾವಿತ್ರಮ್ಮ ದತ್ತಿನಿಧಿ' ಪ್ರಶಸ್ತಿ 1992) | ಎನ್. ಗಾಯತ್ರಿ | 55.00 |
| ಇದು ಮುಗಿಯದ ಕಥೆ (3ನೇ ಮುದ್ರಣ) | | |
| (ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) | ದೇವಿಪ್ರಸಾದ್ ಚಟ್ಟೋಪಾಧ್ಯಾಯ | 60.00 |
| ಭಾರತೀಯ ದರ್ಶನಗಳು (2ನೇ ಮುದ್ರಣ) | ದೇವಿಪ್ರಸಾದ್ ಚಟ್ಟೋಪಾಧ್ಯಾಯ | 80.00 |
| (ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994) | | |
| ಜಾಗತೀಕರಣ. ದಕ್ಷಿಣದ ದೃಷ್ಟಿಯಲ್ಲಿ (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 2002) | ಮ. ಮಹೇಶನ್ | 95.00 |
| ಕರ್ನಾಟಕ ಏಕೀಕರಣ ಇತಿಹಾಸ (2ನೇ ಮುದ್ರಣ) | | |
| (ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1997) | ಡಾ॥ ಎಚ್. ಎಸ್. ಗೋಪಾಲ ರಾವ್ | 200.00 |
| ಸ್ವಾತಂತ್ರ್ಯಗಂಗೆಯ ಸಾವಿರ ತೊರೆಗಳು (ರಾಷ್ಟ್ರೀಯ ಚಳುವಳಿಯ ಸಮಗ್ರ ಪರಿಚಯ ; 3ನೇ ಮುದ್ರಣ) | | |
| (ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪುರಸ್ಕಾರ 1991) | ಎನ್. ಪಿ. ಶಂಕರನಾರಾಯಣ ರಾವ್ | 140.00 |
| ಪ್ರಾಚೀನ ಭಾರತ (3ನೇ ಮುದ್ರಣ) | ಪ್ರೊ॥ ಆರ್. ಎಸ್. ಶರ್ಮ | |
| (ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1998) | (ಅನು : ಎನ್. ಪಿ. ಶಂಕರನಾರಾಯಣ ರಾವ್) | 160.00 |
| (ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1998) | | |
| ಕಲಾವಿದ ಹೆಬ್ಬಾರರ ರೇಖಾಲಾವಣ್ಯ | | |
| (ಕನ್ನಡ ಪುಸ್ತಕ ಪ್ರಾಧಿಕಾರದ 'ಪುಸ್ತಕ ಸೊಗಸು' ಪ್ರಶಸ್ತಿ 1999) | ವ್ಯಾಸರಾಯ ಬಲ್ಲಾಳ | 80.00 |
| ಬೇಡಿ ಕಳಚಿತು ದೇಶ ಒಡೆಯಿತು (ಭಾರತ ಸ್ವಾತಂತ್ರ್ಯ ಸಂಗ್ರಾಮ ಕುರಿತ ರೋಮಾಂಚನಕಾರಿ ಬೃಹತ್ ಕಾದಂಬರಿ) | | |
| (ಉಗ್ರಾಣ ಪ್ರಶಸ್ತಿ 2003) | ಕೋ. ಚೆನ್ನಬಸಪ್ಪ | 600.00 |
| ಬೆಳ್ಳಕ್ಕಿ ಮತ್ತು ಬುಲ್‌ಬುಲ್ (2ನೇ ಮುದ್ರಣ) | | |
| (2003ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ) | ಗಣೇಶ ಪಿ. ನಾಡೋರ | 30.00 |
| ದಂಗೆ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997) | | |
| (ಕನ್ನಡ ಸಾಹಿತ್ಯ ಪರಿಷತ್ತಿನ 'ಕೆ. ಎಸ್. ಭಾರತಿ ರಾಜಾರಾಮ ಮಧ್ಯಸ್ಥ ದತ್ತಿನಿಧಿ' ಪ್ರಶಸ್ತಿ 1997) | ಗೀತಾ ನಾಗಭೂಷಣ | 65.00 |
| ಬದಿ (ಕನ್ನಡ ಲೇಖಕಿಯರ ಪರಿಷತ್ತಿನ ಪ್ರಶಸ್ತಿ 1997) | ಇಂದಿರಾ ಹೆಗ್ಗಡೆ | 50.00 |
| ಮಯ್ಯಾದಾಸನ ವಾಡೆ | ಹಿಂದಿ ಮೂಲ : ಭೀಷ್ಮ ಸಾಹನಿ | 160.00 |
| (ಕನ್ನಡ ಸಾಹಿತ್ಯ ಪರಿಷತ್ತಿನ 'ಶ್ರೀ ಆರ್. ಎನ್. ಹಬ್ಬು' ದತ್ತಿನಿಧಿ ಪ್ರಶಸ್ತಿ 2003) | (ಅನು: ದು. ನಿಂ ಬೆಳಗಲಿ) | |
| ತಮಸ್ (3ನೇ ಮುದ್ರಣ) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1975) | ಹಿಂದಿ ಮೂಲ : ಭೀಷ್ಮ ಸಾಹನಿ | 110.00 |
| ಅಲೀಮಾ ಅಕ್ಷರ ಕಲಿತದ್ದು | | |
| (ಮುಸ್ಲಿಂ ಲೇಖಕರ ಸಂಘ ಮತ್ತು ಬ್ಲಡ್ ಬಯೋಮ್ ಬ್ಯಾಂಕಿಂಗ್ ಟ್ರಸ್ಟ್ ಪ್ರಶಸ್ತಿ 2001) | ಫಕ್ರುದ್ದೀನ್ ಇರುವೈಲ್ | 55.00 |
| ಅಕ್ರಮ ಸಂತಾನ (2ನೇ ಮುದ್ರಣ) | ಮರಾಠಿ ಮೂಲ : ಶರಣಕುಮಾರ ಲಿಂಬಾಳೆ | 50.00 |
| (ಅನುವಾದಕ್ಕಾಗಿ ಉಮಾಪತಿ ಚುಕ್ಕಿ ಪ್ರತಿಷ್ಠಾನದ ಪ್ರಶಸ್ತಿ 1993) | (ಅನು: ದು. ನಿಂ ಬೆಳಗಲಿ) | |
| ಹೊಕ್ಕಳಲ್ಲಿ ಹೂವಿದೆ (2ನೇ ಮುದ್ರಣ) | ರಂಜಾನ್ ದರ್ಗಾ | 25.00 |
| (ಭಾರತೀಯ ಪ್ರಕಾಶಕರ ಒಕ್ಕೂಟದ 'ಅತ್ಯುತ್ತಮ ಮುದ್ರಣ ವಿನ್ಯಾಸ ಪ್ರಶಸ್ತಿ' 1996) | | |
| ಕುಣಿಯೇ ಘುಮಾ | ಮರಾಠಿ ಮೂಲ : ಮಾಧವಿ ದೇಸಾಯಿ | 55.00 |
| (ದಿ. ಶ್ರೀದೇವಿ ದಾಸಪ್ಪ ಶಾನಭಾಗ ಅನುವಾದ ದತ್ತಿ ಪ್ರಶಸ್ತಿ 1999) | (ಅನು: ಚಂದ್ರಕಾಂತ ಪೋಕಳೆ) | |
| ಉಚಲ್ಯಾ (2ನೇ ಮು.) (ಮೂಲ ಕೃತಿಗೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1980) | ಮರಾಠಿ : ಲಕ್ಷ್ಮಣ ಗಾಯಕವಾಡ | 45.00 |
| ಮುಂಬೈ ಡೈರಿ (ಕನ್ನಡ ಸಾಹಿತ್ಯ ಪರಿಷತ್ತಿನ ಅಂತರರಾಷ್ಟ್ರೀಯ ಮಹಿಳಾ ವರ್ಷ ಪ್ರಶಸ್ತಿ 2002) | ಉಮಾ ರಾವ್ | 60.00 |
| ಅಂಡಮಾನ್ ಕನಸು (2ನೇ ಮು.)(ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002) | ಡಾ॥ ರಹಮತ್ ತರೀಕೆರೆ | 60.00 |
| ಮಲಯಾಳದ 10 ಕತೆಗಾರ್ತಿಯರು (ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ 2002) | ಶ್ರೀದೇವಿ ನಾಯರ್ | 95.00 |
| ಭಾಷೆಯ ಬೆಳಕು (2003ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ) | ಡಾ॥ ಕೆ. ಎಲ್. ಗೋಪಾಲಕೃಷ್ಣರಾವ್ | 70.00 |





**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ 5159, ಬೆಂಗಳೂರು - 560 001

ದೂರವಾಣಿ : 22203580, 30578022 ಫ್ಯಾಕ್ಸ್ : 30578023

e-mail: nkp@bgl.vsnl.net.in website : www.navakarnatakabooks.com

—— ಶಾಖೆಗಳು ——

ಬೆಂಗಳೂರು ✆ 080-22251382 ○ ಮೈಸೂರು ✆ 0821-2424094

ಮಂಗಳೂರು ✆ 0824-2441016 ○ ಗುಲ್ಬರ್ಗಾ ✆ 08472-224302


‘ಹೊಸತು’ ಮೂರು ವರ್ಷದ ಚಂದಾದಾರರಿಗೆ ನವಕರ್ನಾಟಕ ಪ್ರಕಟಣೆಗಳ ಮೇಲೆ ಶೇ. ೨೦ರ ವಿಶೇಷ ರಿಯಾಯಿತಿ

# ವಿಶೇಷಾಂಕದ ಜಾಹಿರಾತುದಾರರು

